Checked 1965

# ವಿಷಯಾನುಕ್ರಮಣಿಕೆ

# ಭಾವಚಿತ್ರಗಳು

ಪುಟದೆದುರು

೪೧

# ದಸ್ತಗಿರಿಗಳು, ಆರ್ಡಿನೆನ್ಸುಗಳು, ಬಹಿಷ್ಕಾರಗಳು

ನಾವು ದಸ್ತಗಿರಿಯಾದ ಎರಡು ದಿನಗಳ ಮೇಲೆ ಗಾಂಧಿಜಿಯವರು ಬೊಂಬಾಯಿಗೆ ಬಂದಿಳಿದರು ತದನಂತರವೇ ಅವರು ಹೊಸ ಬೆಳವಣಿಗೆಗಳನ್ನು ತಿಳಿದುದು ಲಂಡನ್ನಿನಲ್ಲಿದ್ದಾಗಲೇ ಅವರು ಬಂಗಾಳಾ ಆರ್ಡಿನೆನ್ಸನ್ನು ಕುರಿತು ಕೇಳಿ, ಅದರಿಂದ ಹೆಚ್ಚಾಗಿ ಕಳವಳಪಟ್ಟಿದ್ದರು ಸ ಪ್ರಾ ಮತ್ತು ಗಡಿನಾಡಿನ ಆರ್ಡಿನೆನ್ಸುಗಳ ಸ್ವರೂಪದಲ್ಲಿ ಹೊಸ ಕ್ರಿಸ್ಮಸ್ ಸಂಭಾವನೆಗಳು ಅವರಿಗಾಗಿ ಕಾದಿದ್ದುವೆಂಬುದನ್ನೂ ಗಡಿನಾಡಿನ ಮತ್ತು ಸ ಪ್ರಾ ಗಳ ಅವರ ನಿಕಟ ಸಹೋದ್ಯೋಗಿಗಳು ಕೆಲವರು ಸೆರೆಹಿಡಿಯಲ್ಪಟ್ಟಿದ್ದರೆಂಬುದನ್ನೂ ಆಗ ತಿಳಿದರು ದಾಳವು ಉರುಳಿದ್ದು, ಶಾಂತಿಯನ್ನು ಕುರಿತ ಆಶಗಳೆಲ್ಲವೂ ಮಾಯವಾಗಿಬಿಟ್ಟಿದ್ದವು ಆದರೂ ಯಾವುದಾದರೂ ಒಂದು ಪರಿಹಾರ ಮಾರ್ಗವನ್ನು ಕಂಡುಹಿಡಿಯುವ ಉದ್ದೇಶಕ್ಕಾಗಿ, ಆಗಿನ ವೈಸ್ ರಾಯ್ ಲಾರ್ಡ್ ವಿಲ್ಲಿಂಗ್ಡನ್‌ರ ಸಂದರ್ಶನಾವಕಾಶವನ್ನು ಕೋರಿದರು ಸಂದರ್ಶನವು ಕೆಲವು ನಿಯಮಗಳನ್ನು ಅವಲಂಬಿಸಿಯೇ ತೀರಿ, ನಡೆಯಬಹುದೆಂದು, ಹೊಸ ದೆಹಲಿಯಿಂದ ಅವರು ತಿಳಿಸಲ್ಪಟ್ಟರು ನಿಯಮಗಳೆಂದರೆ—ಬಂಗಾಳ, ಸ ಪ್ರಾ ಮತ್ತು ಗಡಿನಾಡುಗಳ ಇತ್ತೀಚಿನ ಘಟನೆಗಳು, ಹೊಸ ಆರ್ಡಿನೆನ್ಸುಗಳು, ಮತ್ತು ಇವುಗಳ ಪ್ರಕಾರ ನಡೆದ ದಸ್ತಗಿರಿಗಳು, ಇವುಗಳನ್ನು ಅವರು ಚರ್ಚಿಸಕೂಡದು (ನಾನು ನೆನಪಿನಿಂದ ಬರೆಯುತ್ತಿದ್ದೇನೆ ವೈಸ್‌ರಾಯರ ಉತ್ತರದ ಪ್ರತೀಕವು ನನ್ನಲ್ಲಿಲ್ಲ) ದೇಶವನ್ನೆಲ್ಲಾ ಮಥನ ಮಾಡುತ್ತಿದ್ದ ಈ ನಿಷಿದ್ಧ ಸಂಗತಿಗಳ ಹೊರತಾಗಿ ಏನನ್ನು ತಾನೆ, ಗಾಂಧಿಜಿಯವರಾಗಲಿ, ಅಥವಾ ಬೇರೆ ಇನ್ನಾವ ಕಾಂಗ್ರೆಸ್ ನಾಯಕರಾಗಲಿ, ವೈಸ್ ರಾಯರೊಡನೆ ಸ್ಥಾನಿಕವಾಗಿ ಚರ್ಚಿಸಬಹುದು ಎಂಬುದು ಯಾರ ಗ್ರಹಣಶಕ್ತಿಗಾದರೂ ಮೀರಿದುದು ಇಂಡಿಯಾ ಸರಕಾರವು ಕಾಂಗ್ರೆಸ್ಸನ್ನು ಸಂಪೂರ್ಣವಾಗಿ ಮುರಿಯಬೇಕೆಂದು ನಿರ್ಧರಿಸಿಕೊಂಡಿತ್ತೆಂಬುದೂ ಅದರೊಡನೆ ಯಾವ ವಿಧವಾದ ವ್ಯವಹಾರಗಳೂ ಬೇಡವಾಗಿತ್ತೆಂಬುದೂ ಸಂಪೂರ್ಣವಾಗಿ ಸ್ಪಷ್ಟವಾಯಿತು ಶಾಸನ ಭಂಗಕ್ಕೆ ಹೊರಳುವ ಹೊರತು ಕಾರ್ಯನಿರ್ವಾಹಕ ಸಮಿತಿಗೆ ಮತ್ತಾವ ಆಯ್ಕೆಯೂ ಇರಲಿಲ್ಲ ದಸ್ತಗಿರಿಯನ್ನು ಯಾವ ಕ್ಷಣದಲ್ಲಾದರೂ ಅವರು ನಿರೀಕ್ಷಿಸಿದರು ತಮ್ಮ ಬಲಾತ್ಕಾರದ ನಿರ್ಗಮನಕ್ಕಿಂತ ಮುಂಚೆಯೇ, ನಾಡಿಗೆ ಮೇಲ್ಪಙ್ಕ್ತಿಯೊಂದನ್ನು ಹಾಕಬಯಸಿದರು ಇಷ್ಟಾಗಿ, ಶಾಸನ ಭಂಗ ನಿರ್ಣಯವು ಪರೀಕ್ಷಾರ್ಥಕವಾಗಿ ಅನುಮೋದಿತವಾಯಿತು, ಮತ್ತು ವೈಸ್‌ರಾಯ್‌ರನ್ನು ಸಂದರ್ಶಿಸಲು ಪ್ರಯತ್ನವಿನ್ನೊಂದು ಗಾಂಧಿಜಿಯವರಿಂದ ನಡೆಯಿತು ನಿಯಮರಹಿತ ಸಂದರ್ಶ

ನಾವಕಾಶವನ್ನು ಕೋರಿ ಅವರಿಗೆ ಎರಡನೆಯ ತಂತಿಯನ್ನು ಕಳುಹಿಸಿದರು. ಅದಕ್ಕೆ, ಗಾಂಧಿಜಿಯವರನ್ನೂ ಕಾಂಗ್ರೆಸ್ ಅಧ್ಯಕ್ಷರನ್ನೂ ಬಂಧಿಸುವುದು ಮತ್ತು ಇಡೀ ನಾಡಿನಲ್ಲೆಲ್ಲ ಕ್ರೂರವಾದ ದಬ್ಬಾಳಿಕೆಯನ್ನು ಹರಿಯಬಿಡುವ ಗುಂಡಿಯನ್ನೊತ್ತುವುದು, ಇವು ಸರಕಾರದ ಉತ್ತರವಾಯಿತು. ಯಾರಿಗೇ ಆದರೂ ಸಂಗ್ರಾಮವು ಬೇಕಾಗಿರಲಿ ಬೇಡದಿರಲಿ, ಸರಕಾರವಂತೂ ಉತ್ಸಾಹಶಾಲಿಯಾಗಿಯೂ ಮಿತಿಮೀರಿದ ಸಿದ್ಧತೆಯಿಂದಲೂ ಕೂಡಿತ್ತೆಂಬುದು ಸ್ಫುಟವಾಯಿತು.

ನಾವೇನೊ ಸೆರೆಮನೆಯಲ್ಲಿದ್ದೆವು, ಮತ್ತು ಈ ಎಲ್ಲ ವಾರ್ತೆಗಳು ಅಸ್ಪಷ್ಟವಾಗಿಯೂ, ಅಸಂಬದ್ಧವಾಗಿಯೂ ನಮಗೆ ಬರುತ್ತಿದ್ದುವು. ನಮ್ಮ ವಿಚಾರಣೆಯು ಹೊಸ ವರ್ಷಕ್ಕೆ ಮುಂದೆಹಾಕಲ್ಪಟ್ಟಿತ್ತು. ವಿಚಾರಣೆಯೂ ಇನ್ನೂ ಆಗಬೇಕಾಗಿದ್ದುದರಿಂದ, ಶಿಕ್ಷಿತನಾದವನಿಗಿಂತ ಹೆಚ್ಚು ಸಂದರ್ಶನಗಳನ್ನು ಪಡೆಯುತ್ತಿದ್ದೆವು. ಸಂದರ್ಶನಕ್ಕೆ ಒಪ್ಪಬೇಕಾಗಿತ್ತೋ, ಇಲ್ಲವೋ (ಒಪ್ಪಿದರೆ ಅಥವಾ ಒಪ್ಪದಿದ್ದರೆ ಏನೋ ಮಹಾ ಆಗಿಬಿಡುತ್ತಿದ್ದಂತೆ) ಎಂಬೀ ವಿಷಯವಾಗಿ ದೊಡ್ಡ ಚರ್ಚೆಯಾಗುತ್ತಿದ್ದುದನ್ನು ನಾವು ಕೇಳಿದೆವು. ಸಂದರ್ಶನದ ಪ್ರಶ್ನೆಯೇ, ಇತರ ಎಲ್ಲ ವಿಷಯಗಳನ್ನೂ ಮುಚ್ಚಿಬಿಟ್ಟಿತು. ಲಾರ್ಡ್ ಇರ್ವಿನ್‌ರಾಗಿದ್ದರೆ ಸಂದರ್ಶನಕ್ಕೆ ಒಪ್ಪುತ್ತಿದ್ದರೆಂದೂ ಮತ್ತು ಅವರೂ ಗಾಂಧಿಜಿಯವರೂ ಸಂಧಿಸಿದ್ದರೆ ಎಲ್ಲವೂ ಸರಿಹೋಗುತ್ತಿತ್ತೆಂದೂ ಹೇಳಲಾಯಿತು. ವಿದ್ಯಮಾನವನ್ನು ಕುರಿತು ಭಾರತೀಯ ವೃತ್ತಪತ್ರಿಕಾ ಪ್ರಪಂಚವು, ಎಷ್ಟು ಅಸಾಧಾರಣವಾದ ಹೊರಮೈ ನೋಟವನ್ನು ಹೊಂದಿತ್ತೆಂಬುದೂ, ಸತ್ಯಾಂಶಗಳನ್ನು ಅದು ಹೇಗೆ ಅಸಡ್ಡೆಮಾಡಿತೆಂಬುದೂ ನನ್ನನ್ನು ಆಶ್ಚರ್ಯಗೊಳಿಸಿತು. ಅಂತ್ಯ ವಿಭಜನೆಯಲ್ಲಿ ದುಸ್ಸಂಧೇಯಿಗಳಾದ, ಭಾರತೀಯ ರಾಷ್ಟ್ರೀಯತಾವಾದ ಮತ್ತು ಬ್ರಿಟಿಷ್ ಸಾಮ್ರಾಜ್ಯವಾದಗಳ ಪರಸ್ಪರ ಅನಿವಾರ್ಯ ಸಂಗ್ರಾಮವನ್ನು ವ್ಯಕ್ತಿಗಳ ಸ್ವಕೀಯ ಚಪಲಗಳಿಗೆ ಇಳಿಸಬೇಕೆ? ಮುಗಳ್ನಗೆ ಮತ್ತು ಪರಸ್ಪರ ವಿನಯಗಳಿಂದ ಐತಿಹಾಸಿಕ ಶಕ್ತಿಗಳೆರಡರ ಸಂಘರ್ಷಣೆಯು ನಿವಾರಿಸಲ್ಪಡಬಹುದಾಗಿತ್ತೆ? ಭಾರತೀಯ ರಾಷ್ಟ್ರೀಯತಾವಾದವು 'ಹಾರ-ಕರಿ' ಮಾಡಿಕೊಳ್ಳಲಾರದಾಗಿದ್ದುದರಿಂದಲೂ ಪ್ರಮುಖ ವಿಚಾರಗಳಲ್ಲಿ ಪರಕೀಯ ಸರ್ವಾಧಿಕಾರಕ್ಕೆ ಒಪ್ಪಲಾರದಿದ್ದುದರಿಂದಲೂ ಗಾಂಧಿಜಿಯವರು ಗತ್ಯಂತರವಿಲ್ಲದೆ ಒಂದು ಮಾರ್ಗದಲ್ಲಿ ದುಡಿಯುವಂತಾಯಿತು, ಈ ರಾಷ್ಟ್ರೀಯತಾವಾದದ ಆಕರಣೆಗೆ ಮುಖಕೊಡುವುದು ಮತ್ತು ಬ್ರಿಟಿಷ್ ಸ್ವಾರ್ಥಗಳನ್ನು ಸಂರಕ್ಷಿಸಲು ಪ್ರಯತ್ನಿಸುವುದು, ಇವುಗಳ ನಲುವ ೧ ಭಾರತದ ಬ್ರಿಟಿಷ್ ವೈಸ್‌ರಾಯ್‌ರು ಒಂದು ನಿರ್ದಿಷ್ಟ ಮಾರ್ಗವನ್ನು ಅವಲಂಬಿಸಬೇಕಾಗಿತ್ತು. ಆಗ ಯಾವ ವೈಸ್‌ರಾಯರಿದ್ದರೂ ಅದು ಸಾಸಿವೆಯಷ್ಟು ವ್ಯತ್ಯಾಸವನ್ನೂ ಮಾಡುತ್ತಿರಲಿಲ್ಲ. ಲಾರ್ಡ್ ವಿಲ್ಲಿಂಗ್ಡನ್‌ರು ಮಾಡಿದಂತೆಯೇ ಚಾಚೂ ತಪ್ಪದೆ ಲಾರ್ಡ್ ಇರ್ವಿನ್‌ರೂ ಮಾಡುತ್ತಿದ್ದರು. ಏಕೆಂದರೆ, ಇಬ್ಬರೂ, ಬ್ರಿಟಿಷರ ಸಾಮ್ರಾಜ್ಯವಾದಿ ನೀತಿಯ ಸಾಧನಪ್ರಾಯರು

ಮಾತ್ರವಾಗಿದ್ದರು ಹಾಕಿದ ಗೆರೆಯಿಂದ ಎಲ್ಲಿಯೋ ಸ್ವಲ್ಪ ಗೌಣವಾದ ವ್ಯತಿಕ್ರಮವನ್ನು ಮಾಡಬಲ್ಲರು ವಾಸ್ತವವಾಗಿಯೂ ಲಾರ್ಡ್ ಇರ್ವಿನ್‌ರು ಮುಂದೆ ಬ್ರಿಟಿಷ್ ಸರಕಾರದ ಒಬ್ಬ ಅಧಿಕಾರಿಗಳಾದರು, ಮತ್ತು ಭಾರತದಲ್ಲಿ ಕೈಗೊಂಡ ಪ್ರತಿಯೊಂದು ಅಧಿಕಾರ ಕಲಾಪಗಳೊಂದಿಗೂ ಸಂಪೂರ್ಣವಾಗಿ ಒಗ್ಗಿ ನಡೆದರು ಭಾರತದಲ್ಲಿನ ಬ್ರಿಟಿಷ್ ನೀತಿಗಾಗಿ ವ್ಯಕ್ತಿಗತರಾದ ವೈಸ್‌ರಾಯರನ್ನು ಹೊಗಳುವುದಾಗಲಿ ತೆಗಳುವುದಾಗಲಿ ತೀರ ಅಯೋಗ್ಯವಾದುದೆಂದು ನನಗೆ ತೋರುತ್ತದೆ ಮತ್ತು, ಸತ್ಯವಾದ ಸಮಸ್ಯೆಗಳ ಅಜ್ಞಾನವೋ ಅಥವಾ ಅವುಗಳಿಂದ ಉದ್ದಿಶ್ಯಪೂರ್ವಕವಾಗಿ ತಪ್ಪಿಸಿಕೊಳ್ಳುವುದೋ ಈ ವೇದಿಕೆಯಲ್ಲಿ ಕಾಲ ಕಳೆಯುವುದಕ್ಕೆ ಕಾರಣವಾಗಿರಬೇಕು

೧೯೩೨ ರ ಜನವರಿ ೪ ನೆಯ ತಾರೀಖು ಪ್ರಸಿದ್ಧವಾದ ದಿನ ವಾದಪ್ರತಿವಾದಗಳಿಗೂ ಚರ್ಚೆಗಳಿಗೂ ಅದು ತಡೆಹಾಕಿತು ಆ ಮುಂಬಗಲು ಗಾಂಧಿಜಿಯವರೂ ಕಾಂಗ್ರೆಸ್ ಅಧ್ಯಕ್ಷರಾದ ವಲ್ಲಭಭಾಯಿ ಪಟೇಲರೂ ದಸ್ತಗಿರಿಯಾಗಿ ವಿಚಾರಣೆ ಇಲ್ಲದೆ, ರಾಜಕೀಯ ಸೆರೆಯಾಳುಗಳಾಗಿ ನಿರ್ಬಂಧಿತರಾದರು ಮ್ಯಾಜಿಸ್ಟ್ರೇಟರಿಗೂ ಪೊಲೀಸ್ ಅಧಿಕಾರಿಗಳಿಗೂ ಬಹುಮುಖವಾದ ಅಧಿಕಾರಗಳನ್ನು ಕೊಡುವ ನಾಲ್ಕು ಹೊಸ ಆರ್ಡಿನೆನ್ಸುಗಳು ಉಗ್ಗಡಿಸಲ್ಪಟ್ಟುವು ಪೌರ ಸ್ವಾತಂತ್ರ್ಯವು ಸತ್ತು ಹೋಯಿತು, ಮತ್ತು ವ್ಯಕ್ತಿಗಳೂ ಆಸ್ತಿಗಳೂ ಅಧಿಕಾರಿಗಳಿಂದ ಜಪ್ತಿಮಾಡಲ್ಪಡಲು ಸಾಧ್ಯವಾಯಿತು ಇಡೀ ಭಾರತದ ಒಂದು ವಿಧವಾದ ಮುತ್ತಿಗೆಯ ಪರಿಸ್ಥಿತಿಯ ಉಗ್ಗಡನೆಯದು, ಸಂಪ್ರಯೋಗದ ವಿಶಾಲತ್ವ ಮತ್ತು ತೀವ್ರತ್ವಗಳು ಸ್ಥಳೀಯ ಅಧಿಕಾರಿಗಳ ಕೈಗೇ ಬಿಡಲ್ಪಟ್ಟಿತ್ತು *

ಸ ಪ್ರಾ ಎಮರ್ಜನ್ಸಿ ಪವರ್ಸ್ ಆರ್ಡಿನೆನ್ಸ್ ಎಂದು ಹೆಸರುಗೊಂಡಿದ್ದ ಶಾಸನದ ಪ್ರಕಾರ ನಮ್ಮ ವಿಚಾರಣೆಯು ನೈನಿ ಸೆರೆಮನೆಯಲ್ಲಿ ಅದೇ ಜನವರಿ ೪ ನೆಯ ತಾರೀಖು ನಡೆಯಿತು ಷರ್ವಾನಿಯವರು ಆರು ತಿಂಗಳು ಕಠಿಣ ಸಜಾ ಮತ್ತು ೧೫೦ ರೂ ಗಳ ಜುಲ್ಮಾನೆಯನ್ನು ವಿಧಿಸಲ್ಪಟ್ಟರು ನಾನು ಎರಡು ವರ್ಷ ಕಠಿಣ ಸಜಾ ಮತ್ತು ೫೦೦ ರೂ ಗಳ ಜುಲ್ಮಾನೆ (ತಪ್ಪಿದರೆ ಇನ್ನಾರು ತಿಂಗಳು ಸಜಾ) ವಿಧಿಸಲ್ಪಟ್ಟೆ ನಮ್ಮ ಅಪರಾಧಗಳೆರಡೂ ಸಾರೂಪ್ಯವಾಗಿದ್ದುವು, ಅಲಹಾಬಾದ್ ನಗರದಲ್ಲಿ ದಿಗ್ಬಂಧಿತರಾದೆವೆಂಬ ಅಭಿನ್ನರೂಪವಾದ ಆಜ್ಞಾಪತ್ರಗಳು ನಮ್ಮಿಬ್ಬರಿಗೂ ಜಾರಿಯಾಗಿದ್ದುವು ಒಟ್ಟಿಗೆ ಬೊಂಬಾಯಿಗೆ ಹೋಗುವ ಪ್ರಯತ್ನದಿಂದ ನಾವಿಬ್ಬರೂ ಆಜ್ಞೆ

* ಭಾರತದ ಸೆಕ್ರಿಟರಿ ಆಫ್ ಸ್ಟೇಟ್ ಸರ್ ಸ್ಯಾಮುಯಲ್ ಹೋರ್‌ರು ೧೯೩೨ ರ ಮಾರ್ಚಿ ೨೪ ರಲ್ಲಿ ಕಾಮನ್ಸ್ ಸಭೆಯಲ್ಲಿ ಹೀಗೆ ಹೇಳಿದರು "ನಾವು ಒಪ್ಪಿಗೆಯನ್ನಿತ್ತಿರುವ ಆರ್ಡಿನೆನ್ಸುಗಳು ಅತ್ಯಂತ ಪ್ರಬಲವೂ ಉಗ್ರವೂ ಆಗಿದೆ ಎಂಬುದನ್ನು ಒಪ್ಪಿಕೊಳ್ಳುತ್ತೇನೆ ಅವು ಪ್ರಾಯಿಕವಾಗಿ ಭಾರತೀಯ ಜೀವನದ ಪ್ರತಿಯೊಂದು ಚಲನವಲನವನ್ನೂ ಬಳಸಿಕೊಂಡಿವೆ"

ಯನ್ನು ಒಂದೇ ರೀತಿಯಲ್ಲಿ ಉಲ್ಲಂಘಿಸಿದ್ದೆವು ನಾವಿಬ್ಬರೂ ಒಂದೇ ಕಲಮಿನ ಪ್ರಕಾರ ಸೆರೆಹಿಡಿಯಲ್ಪಟ್ಟು ವಿಚಾರಿಸಲ್ಪಟ್ಟಿದ್ದೆವು ಹಾಗಿದ್ದರೂ ನಮ್ಮ ಶಿಕ್ಷೆಗಳು ಮಾತ್ರ ಬಹಳ ಭಿನ್ನವಾಗಿದ್ದುವು ಹೇಗಾದರೂ ಒಂದು ವ್ಯತ್ಯಾಸವೇನೋ ಇತ್ತು ನಾನಾದರೋ ಆಜ್ಞೆಯನ್ನತಿಕ್ರಮಿಸಿ ಬೊಂಬಾಯಿಗೆ ಹೋಗಬೇಕೆಂದಿದ್ದ ನನ್ನ ಉದ್ದೇಶವನ್ನು ಜಿಲ್ಲಾ ಮ್ಯಾಜಿಸ್ಟ್ರೇಟರಿಗೆ ಬರೆದು ತಿಳಿಸಿದ್ದೆ, ಷೆರ್ವಾನಿಯವರಾದರೋ ಅಂತಹ ಸಾಂಪ್ರದಾಯಿಕ ಬರಹವನ್ನು ಕಳುಹಿರಲಿಲ್ಲ ಆದರೆ, ಅವರ ಉದ್ದಿಷ್ಟ ನಿರ್ಗಮನವು ನನ್ನ ನಿರ್ಗಮನದಷ್ಟೇ ಪ್ರಸಿದ್ಧವಾಗಿದ್ದು ವೃತ್ತಪತ್ರಿಕೆಗಳಲ್ಲಿ ಸೂಚಿತವಾಗಿತ್ತು ವಿಚಾರಣೆ ಮಾಡುತ್ತಿದ್ದ ನ್ಯಾಯಾಧೀಶರು ಶಿಕ್ಷೆಯನ್ನು ಉಚ್ಚರಿಸಿದರೋ ಇಲ್ಲವೋ ಕೂಡಲೆ ಷೆರ್ವಾನಿಯವರು, ಅಲ್ಲಿದ್ದವರಿಗೆಲ್ಲ ಸೋಜಿಗವೂ ಮ್ಯಾಜಿಸ್ಟ್ರೇಟರಿಗೆ ಮಾರ್ಗಭ್ರಾಂತಿಯೂ ಆಗುವಂತೆ, ಕೋಮುವಾರು ದಾಕ್ಷಿಣ್ಯಗಳು ತಮ್ಮ ಕಡಿಮೆ ಶಿಕ್ಷೆಗೆ ಕಾರಣವೆ', ಎಂದು ಕೇಳಿದರು

ಜನವರಿ ೪ ನೆಯ ತಾರೀಖು ಆ ದುರಂತ ದಿನದಲ್ಲಿ ದೇಶದಲ್ಲೆಲ್ಲಾ ಪ್ರಸಕ್ತಿಗಳು ಎಷ್ಟೆಷ್ಟೋ ನಡೆದುಹೋದುವು ಅಲಹಾಬಾದ್ ನಗರದಲ್ಲಿ ನಾವಿದ್ದ ಸ್ಥಳಕ್ಕೆ ಅನತಿದೂರದಲ್ಲಿ ದೊಡ್ಡ ದೊಡ್ಡ ಗುಂಪುಗಳು ಪೊಲೀಸ್ ಮತ್ತು ಮಿಲಿಟರಿಯೊಡನೆ ಸಂಘರ್ಷಿಸಿದುವು ಹಾಗೂ ಸಾವುಗಳ ಮತ್ತು ಗಾಯಗಳ ಫಲಿತಾಂಶವನ್ನೊಳಗೊಂಡ ಎಂದಿನ ಲಾಠೀ ಪ್ರಹಾರಗಳು ನಡೆದುವು ಸೆರೆಮನೆಗಳು ಶಾಸನೋಲ್ಲಂಘನಕಾರ ಸೆರೆಯಾಳುಗಳಿಂದ ತುಂಬಿಕೊಳ್ಳಲು ಆರಂಭವಾದುವು ಮೊದಮೊದಲು ಈ ಸೆರೆಯಾಳುಗಳು ಜಿಲ್ಲಾ ಸೆರೆಮನೆಗಳಿಗೆ ಹೋದರು ನೈನಿ ಮತ್ತು ಇತರ ದೊಡ್ಡ ಕೇಂದ್ರ ಸೆರೆಮನೆಗಳು, ಸ್ಥಳವಿಲ್ಲದೆ ಉಳಿದವರನ್ನು ಮಾತ್ರ ಸೇರಿಸಿಕೊಳ್ಳುತ್ತಿದ್ದುವು ಅನಂತರ ಸೆರೆಮನೆಗಳೆಲ್ಲವೂ ತುಂಬಿಹೋಗಿ, ದೊಡ್ಡದೊಡ್ಡ ಹಂಗಾಮಿ ಶಿಬಿರ ಸೆರೆಮನೆಗಳು ಏರ್ಪಡಿಸಲ್ಪಟ್ಟುವು

ನೈನಿಯಲ್ಲಿನ ನಮ್ಮ ಪುಟ್ಟ ಆವರಣಕ್ಕೆ ಕೇವಲ ಕೆಲವು ಜನರು ಬಂದರು ನನ್ನ ಹಳೆಯ ಸ್ನೇಹಿತ ನರ್ಮದಾ ಪ್ರಸಾದರೂ, ರಣಜಿತ್ ಪಂಡಿತ್, ಮತ್ತು ನನ್ನ ದಾಯಾದಿ ಮೋಹನಲಾಲ ನೆಹರು ಇವರೂ ನಮ್ಮೊಡಗೂಡಿದರು ೬ ನೆಯ ಅಂಕಿಯ ಪಾಳೆಯದ ನಮ್ಮ ಭ್ರಾತೃಗೋಷ್ಠಿಗೆ ಸೋಜಿಗದ ಸೇರುವೆಯೆಂದರೆ, ಇಂಗ್ಲೆಂಡಿನಿಂದ ಬ್ಯಾರಿಸ್ಟರಾಗಿ ಹಿಂತಿರುಗಿದ ಸಿಂಹಳದ್ವೀಪದ ತರುಣಮಿತ್ರನಾದ ಬರ್ನಾರ್ಡ್ ಅಲೂವಿಹಾರೆ ನಮ್ಮ ಪ್ರದರ್ಶನಗಳಲ್ಲಿ ಬೆರೆತುಹೋಗಕೂಡದೆಂದು ಆತನಿಗೆ ನನ್ನ ತಂಗಿಯು ಹೇಳಿದ್ದಳು, ಆದರೆ, ಉತ್ಸಾಹ ಸಮಯದಲ್ಲಿ, ಆತನು ಕಾಂಗ್ರೆಸ್ ಮೆರವಣಿಗೆಯಲ್ಲಿ ಸೇರಿಕೊಂಡಿದ್ದನು ಮತ್ತು ಕಪ್ಪು ಗಾಡಿಯೊಂದು ಆತನನ್ನು ಸೆರೆಮನೆಗೆ ಕರೆದೊಯ್ದಿತ್ತು.

ಕಾಂಗ್ರೆಸ್ಸು ಅಕ್ರಮಕೂಟವೆಂದು ಉಗ್ಗಡಿಸಲ್ಪಟ್ಟಿತ್ತು—ಅಗ್ರಭಾಗದಲ್ಲಿ ಕಾರ್ಯನಿರ್ವಾಹಕ ಸಮಿತಿ, ಬಳಿಕ ಪ್ರಾಂತಿಕ ಮತ್ತು ಅಸಂಖ್ಯಾತ ಸ್ಥಳೀಯ ಸಮಿತಿಗಳು ಕಾಂಗ್ರೆಸ್ಸಿನೊಡನೆ, ಅದಕ್ಕೆ ಸಂಬಂಧಪಟ್ಟ, ಅಥವಾ ಸಹಾನು ಭೂತಿಯನ್ನು ತೋರಿಸುತ್ತಿದ್ದ ಅಥವಾ ಪ್ರಗತಿಪರ ಸಂಸ್ಥೆಗಳೆಲ್ಲಬಗೆಯವೂ ಅಕ್ರಮ ವೆಂದು ಉಗ್ಗಡಿಸಲ್ಪಟ್ಟಿದ್ದುವು—ಕಿಸನ್ ಸಭೆಗಳು ಮತ್ತು ಬೇಸಾಯಗಾರ ಸಂಘಗಳು, ಯುವಜನ ಸಂಸ್ಥೆಗಳು, ವಿದ್ಯಾರ್ಥಿಗಳ ಸಂಘಗಳು, ಪ್ರಗತಿಗಾಮಿ ರಾಜಕೀಯ ಸಂಘಟನೆಗಳು, ರಾಷ್ಟ್ರೀಯ ವಿಶ್ವವಿದ್ಯಾಲಯಗಳು ಮತ್ತು ಶಾಲೆಗಳು, ಆಸ್ಪತ್ರೆಗಳು, ಸ್ವದೇಶಿ ಸಂಸ್ಥೆಗಳು, ಪುಸ್ತಕ ಭಂಡಾರಗಳು ಪಟ್ಟಿಗಳು ಅತಿ ಘೋರವಾಗಿದ್ದುವು ಮತ್ತು ಪ್ರತಿಯೊಂದು ಪ್ರಮುಖ ಪ್ರಾಂತದ ನೂರಾರು ಹೆಸರು ಗಳನ್ನು ಒಳಗೊಂಡಿದ್ದುವು ಅಖಿಲ ಭಾರತದ ಮೊತ್ತವು ಕೆಲವು ಸಾವಿರಗಳಿಗೆ ಏರಿರಬೇಕು ಮತ್ತು ಈ ಬಹಿಷ್ಕೃತ ಸಂಘಟನೆಗಳ ಸಂಖ್ಯೆಯೇ ಕಾಂಗ್ರೆಸ್ಸಿಗೂ ರಾಷ್ಟ್ರೀಯ ಚಳವಳಿಗೂ ಪ್ರಶಂಸೆಯ ಒಂದು ಕಾಣಿಕೆಯಾಗಿತ್ತು

ಬೊಂಬಾಯಿಯಲ್ಲಿ ನನ್ನ ಹೆಂಡತಿಯು ವ್ಯಾಧಿಯಿಂದ ಹಾಸಿಗೆ ಹಿಡಿದಿದ್ದು ಶಾಸನ ಭಂಗ ಚಳವಳಿಯಲ್ಲಿ ಭಾಗವಹಿಸಲು ತನ್ನ ಬಲ್ತೆಯು ಉಡುಗಿದ್ದುದಕ್ಕಾಗಿ ಸೀವರಿಸುತ್ತಿದ್ದಳು ನನ್ನ ತಾಯಿ ಮತ್ತು ತಂಗಿಯರಿಬ್ಬರೂ ಕಸುವಿನಿಂದ ಚಳವಳಿ ಯಲ್ಲಿ ಮಗ್ನರಾದರು, ಮತ್ತು ಬೇಗಲೇ ತಂಗಿಯರಿಬ್ಬರೂ ತಲಾ ಒಂದೊಂದು ವರ್ಷ ಶಿಕ್ಷೆ ವಿಧಿಸಲ್ಪಟ್ಟು ಸೆರೆಮನೆಯಲ್ಲಿದ್ದರು ಸೆರೆಮನೆಗೆ ಹೊಸದಾಗಿ ಬರುತ್ತಿದ್ದವ ರಿಂದ ಅಥವಾ ನಮಗೆ ಓದಲು ಅನುಮತಿಯಿದ್ದ ಸ್ಥಳೀಯ ವಾರಪತ್ರಿಕೆಯೊಂದರಿಂದ ನಮಗೆ ಚಿಲ್ಲರೆ ತುಂಡು ಸುದ್ದಿಗಳು ಬರುತ್ತಿದ್ದುವು ವೃತ್ತಾಂತಗಳ ಪೃಥಗಾತ್ಮತೆಯು ಬಹಳ ಕಟುವಾಗಿದ್ದುದರಿಂದ ಮತ್ತು ವೃತ್ತಪತ್ರಿಕೆಗಳಿಗೂ ವರ್ತಮಾನ ಕಾರ್ಯಾ ಲಯಗಳಿಗೂ ಹೆಚ್ಚು ದಂಡದ ಪ್ರತ್ಯಾಶೆಯು ಯಾವಾಗಲೂ ಎದುರಿದ್ದುದರಿಂದ, ನಾವು, ನಡೆಯುತ್ತಿದ್ದ ವಿದ್ಯಮಾನಗಳ ಹೆಚ್ಚುಭಾಗವನ್ನು ಊಹಿಸಲು ಮಾತ್ರ ಸಾಧ್ಯ ವಿತ್ತು ಕೆಲವು ಪ್ರಾಂತಗಳಲ್ಲಿ ದಸ್ತಗಿರಿಯಾದವನ ಅಥವಾ ಶಿಕ್ಷಿತನಾದವನ ಹೆಸ ರನ್ನು ಹೇಳುವುದು ಕೂಡ ಒಂದು ಅಪರಾಧವಾಗಿತ್ತು

ಹೀಗಾಗಿ ಹೊರಗಣ ಸಂಗ್ರಾಮದಿಂದ ಬೇರ್ಪಡಿಸಲ್ಪಟ್ಟು, ಆದರೂ ಅದ ರಿಂದ ನೂರಾರು ವಿಧಾನಗಳಲ್ಲಿ ಹೂದಿಸಲ್ಪಟ್ಟವರಾಗಿ ನಾವು ನೈನಿ ಸೆರೆಯಲ್ಲಿ ಕುಳಿತು ಬಿಟ್ಟಿದ್ದೆವು ನೂಲುತ್ತಲೋ ಓದುತ್ತಲೋ ಅಥವಾ ಮತ್ತಿತರ ಚಟುವಟಿಕೆ ಗಳಲ್ಲೋ ಕಾಲಹಾಕುತ್ತಿದ್ದೆವು ಒಮ್ಮೊಮ್ಮೆ ಇತರ ವಿಚಾರಗಳನ್ನು ಕುರಿತು ಮಾತ ನಾಡುತ್ತಿದ್ದೆವಾದರೂ, ಸೆರೆಮನೆಯ ಹೆಗ್ಗೋಡೆಗಳ ಹೊರಗೆ ನಡೆಯುತ್ತಿದ್ದುದನ್ನೇ ಯಾವಾಗಲೂ ಯೋಚಿಸುತ್ತಿದ್ದೆವು ನಾವು ಅದರಿಂದ ಹೊರಗಿದ್ದರೂ ಒಳಗೇ ಇದ್ದೆವು ಕೆಲವು ವೇಳೆಗಳಲ್ಲಿ ನಿರೀಕ್ಷೆಯ ಮುಲುಕು ಬಹಳ ಹೆಚ್ಚಾಗಿತ್ತು, ಅಥವಾ

ಯಾವುದೋ ಒಂದು ತಪ್ಪಾಗಿ ಮಾಡಲ್ಪಟ್ಟಿದ್ದುದರಿಂದ ಕೋಪವೂ ದೌರ್ಬಲ್ಯ ಅಥವಾ ಅಸಭ್ಯತಗಳನ್ನು ಕಂಡು ಜಿಹಾಸೆಯೂ ಹುಟ್ಟುತ್ತಿದ್ದುವು ಇನ್ನು ಕೆಲವು ವೇಳೆಗಳಲ್ಲಿ ನಾವು ಅಲೌಕಿಕವಾಗಿ ನಿರ್ಲಿಪ್ತತೆಯಿಂದಿದ್ದು ದೃಶ್ಯವನ್ನು ಪ್ರಶಾಂತ ವಾಗಿಯೂ ನಿಷ್ಪಕ್ಷಪಾತವಾಗಿಯೂ ಈಕ್ಷಿಸಲು ಮತ್ತು ವಿಶಾಲ ಶಕ್ತಿಗಳು ಮೇಲಾಟ ಮಾಡುತ್ತಿದ್ದಾಗ ಮತ್ತು ಅಮರ್ದುಣಿಗಳ ಗುಣಗಳು ಅರೆಯುತ್ತಿದ್ದಾಗ ಕ್ಷುಲ್ಲಕ ವೈಯಕ್ತಿಕ ದೋಷಗಳು ಅಥವಾ ದೌರ್ಬಲ್ಯಗಳು ಲೆಕ್ಕಕ್ಕೇ ಬಾರವೆಂದು ಯೋಚಿಸಲು ಸಾಧ್ಯವಿತ್ತು ಹೋರಾಟ ಮತ್ತು ತುಮುಲು, ಅಪ್ರತಿಮ ಸಾಹಸೋತ್ಸಾಹ ಮತ್ತು ಕ್ರೂರನಿಗ್ರಹ ಮತ್ತು ಹೇಯವಾದ ಹೇಡಿತನ, ಈ ಎಲ್ಲವುಗಳಿಂದ ನಾಳೆಯು ಏನನ್ನು ತರುವುದೆಂಬುದನ್ನು ಮತ್ತು ಇವೆಲ್ಲ ಎಲ್ಲಿಗೆ ಎಳೆದೊಯ್ಯುತ್ತಿದ್ದುವು ಎಂಬು ದನ್ನು ಕುರಿತು ವಿಸ್ಮಯಪಡುತ್ತಿದ್ದೆವು ನಾವೆಲ್ಲಿಗೆ ಸಾಗುತ್ತಿದ್ದೆವು? ಭವಿಷ್ಯತ್ತು ನಮ್ಮಿಂದ ಮರಮಾಚಲ್ಪಟ್ಟಿತ್ತು, ಆದರೂ ಹೀಗೆ ಮರೆಯಾಗಿದ್ದುದು ಒಳಿತೇ ಆಗಿತ್ತು, ವರ್ತ ಮಾನವೂ ಸಹ, ನಮಗೆ ತಿಳಿದಿದ್ದುದಿಷ್ಟು ಇಂದು ಮತ್ತು ಮಾರನೆಯ ದಿನವೂ ಇರುವುದು ಸಂಗ್ರಾಮ, ಬಾಧಾನುಭವ ಮತ್ತು ಬಲಿದಾನ

" ಗಂಡಾಡಿಗಳು ಮತ್ತೆ ನಾಳೆಯೇ ಬಯಲಲ್ಲಿ ಕೊಳುಗುಳವ
ಹೂಡುವರು, ಗ್ಸಾಂಥಸ್ ನೆತ್ತರಿಂ ಕೆಂಪಾಗುವುದು,
ಹೆಕ್ಟರನು ಪೋಣ್ ಎಜಾಕ್ಸ್ ಬಂದಲ್ಲಿ ತಾಗುವರು,
ಬಂದಪಳು ಹೆಲನ್ ನೋಡೆ ತೆನೆಯ ಮೇಲೇರಿ

ಬಳಿಕ ನಾಮ್ ನೆಳಲಲ್ಲಿ ಕಿಲುಬುವೆವು, ಇಲ್ಲವೇ ಕಾಳಗದಿ ಪೊಳೆಯುವೆವು,
ಕುರುಡಾನೆ ಮೇಣ್ ಕುರುಡು ಅಳಿಯಾನೆಗಳ ನಡುವೆ ಏರುಪೇರಾಗುವೆವು,
ಎಮ್ಮ ಬದುಕನ್ನೆಲ್ಲ ತೇಯ್ದು ತೆತ್ತಾಯ್ತೆಂದು ಬಮಿಸುವೆವು,
ಆತ್ರದೊಡನದರ ವ್ಯಾಪಾರವೇನೆಂದು ತಿಳಿಯೆವಿನಿಸುಂ" *

* ಮ್ಯಾತ್ಯೂ ಆರ್ನಾಲ್ಡ್

೪೨

# ಹುಸಿಯುಗ್ಗಡಣೆ

೧೯೩೨ ರ ಮೊದಲ ತಿಂಗಳುಗಳು, ಇತರ ಸಂಗತಿಗಳೊಂದಿಗೆ ಬ್ರಿಟಿಷ್ ಅಧಿಕಾರಿಗಳ ಸುಳ್ಳುಕೂಗಿನ ಅದ್ಭುತ ಪ್ರದರ್ಶನಕ್ಕೆ ಹೆಸರುವಾಸಿಯಾದುವು ದೊಡ್ಡ ಮತ್ತು ಸಣ್ಣ ಅಧಿಕಾರಿಗಳೂ ಕೂಡ ತಾವು ಎಂಥ ಒಳ್ಳೆಯವರು ಸಾಧುಗಳು, ಮತ್ತು ಕಾಂಗ್ರೆಸ್ಸು ಎಂಥ ಪಾಪಿ ಜಗಳಗಂಟಿ, ಎಂದು ಎಲ್ಲೆಲ್ಲೂ ಕೂಗಿಕೊಳ್ಳುತ್ತಿದ್ದರು ಕಾಂಗ್ರೆಸ್ಸು ಸರ್ವಾಧಿಕಾರಕ್ಕೆ ಒಲಿದಿದ್ದಾಗ ತಾವು ಪ್ರಜಾಸತ್ತಾಸಾಧಕರಾಗಿದ್ದರು ಅದರ ಅಧ್ಯಕ್ಷರನ್ನು 'ಸರ್ವಾಧಿಕಾರಿ' ಯೆಂದು ಕರೆಯುತ್ತಿರಲಿಲ್ಲವೆ? ಕ್ಷುಲ್ಲಕ ಆರ್ಡಿನೆನ್ಸುಗಳು ಮತ್ತು ಎಲ್ಲ ವಿಧವಾದ ಸ್ವಾತಂತ್ರ್ಯಗಳ ದಮನ, ಮತ್ತು ವೃತ್ತಪತ್ರಿಕೆಗಳಿಗೂ ಮುದ್ರಣಾಲಯಗಳಿಗೂ ಬಾಯಿಬೀಗ, ವಿಚಾರಣೆಯಿಲ್ಲದೆ ಜನರ ಬಂಧನ, ಆಸ್ತಿಗಳ ಮತ್ತು ದ್ರವ್ಯಗಳ ಜಪ್ತಿ, ಮತ್ತು ದಿನದಿನವೂ ನಡೆಯುತ್ತಿದ್ದ ಇನ್ನಿತರ ಚಿಲ್ಲರ ಸಂಗತಿಗಳು, ಇವನ್ನೆಲ್ಲ, ತಮ್ಮ ಸತ್ಕಾರಣೋತ್ಸಾಹದಲ್ಲಿ ಅವರು ಮರೆತುಬಿಟ್ಟಿದ್ದರು ಭಾರತದಲ್ಲಿನ ಬ್ರಿಟಿಷ್ ಪ್ರಭುತ್ವದ ಮೂಲ ಲಕ್ಷಣವನ್ನೂ ಸಹ ಅವರು ಮರೆತುಬಿಟ್ಟಿದ್ದರು ಸರಕಾರದ ಸಚಿವರು, (ನಮ್ಮ ದೇಶಬಾಂಧವರೇ) ತಿಂಗಳಿಗೆ ಕೆಲವು ಸಾವಿರ ರೂಪಾಯಿಗಳ ಕ್ಷುಲ್ಲಕ ಮಾಸಾಶನಕ್ಕೆ ಸಾರ್ವಜನಿಕ ಯೋಗಕ್ಷೇಮಕ್ಕಾಗಿ ದುಡಿಯುತ್ತಿದ್ದಾಗ, ಕಾಂಗ್ರೆಸ್ಸಿನವರು ಹೇಗೆ ತಮ್ಮ ಸ್ವಾರ್ಥಗಳನ್ನು ಸಾಧಿಸಿಕೊಳ್ಳುತ್ತಿದ್ದರು—ನೆರೆಮನೆಯಲ್ಲಿ—ಎಂದು ವಾಗಡಂಬರದಿಂದ ನುಡಿದರು ಕೆಳದರ್ಜೆಯ ನ್ಯಾಯಾಧೀಶ ವರ್ಗವು ದೀರ್ಘಕಾಲದ ಶಿಕ್ಷೆಗಳನ್ನು ವಿಧಿಸುವುದಲ್ಲದೆ, ಆ ವ್ಯವಹೃತಿಯಲ್ಲಿ ನಮಗೆ ನೀತ್ಯುಪದೇಶ ಮಾಡುತ್ತಿದ್ದರು ಮತ್ತು ಕೆಲವು ವೇಳೆ ಕಾಂಗ್ರೆಸ್ಸನ್ನೂ ಅದಕ್ಕೆ ಸಂಬಂಧಪಟ್ಟ ವ್ಯಕ್ತಿಗಳನ್ನೂ ಬಯ್ಯುತ್ತಿದ್ದರು ಸರ್ ಸ್ಯಾಮ್ಯುಯಲ್ ಹೋರ್‌ರೂ ಸಹ ಭಾರತದ ಸೆಕ್ರೆಟರಿ ಆಫ್ ಸ್ಟೇಟ್, ಎಂಬ ತಮ್ಮ ಉತ್ತುಂಗ ಅಧಿಕಾರ ಪದವಿಯ ಪ್ರಶಾಂತ ಪ್ರತಿಷ್ಠೆಯಿಂದ, ನಾಯಿಗಳು ಬೊಗುಳಿದರೆ ದೇವಲೋಕವು ಹಾಳಾಗಲಿಲ್ಲವೆಂದು ಉಗ್ಗಡಿಸಿದರು ತತ್ಕಾಲಕ್ಕೆ ಆ ನಾಯಿಗಳೆಲ್ಲ ಸೆರೆಯಲ್ಲಿದ್ದುವೆಂಬುದನ್ನು, ಅವು ಅಲ್ಲಿ ಸುಲಭವಾಗಿ ಬೊಗುಳಲಾರದಾಗಿದ್ದುವೆಂಬುದನ್ನು ಮತ್ತು ಹೊರಗುಳಿದಿದ್ದ ನಾಯಿಗಳಿಗೆ ಬಲವಾದ ಬಾಯಿಬೀಗಗಳು ಹಾಕಲ್ಪಟ್ಟಿದ್ದುವೆಂಬುದನ್ನು, ಅವರು ಮರೆತುಬಿಟ್ಟಿದ್ದರು

ಎಲ್ಲಕ್ಕಿಂತ ಬೆಕ್ಕಸಬೆರಗುಮಾಡುವುದೆಂದರೆ, ಕಾನ್ಪುರದ ಕೋಮುವಾರು ದೊಂಬಿಗಳ ಹೊಣೆಯು ಕಾಂಗ್ರೆಸ್ಸಿನ ತಲೆಯ ಮೇಲೆ ಹೊರಿಸಲ್ಪಟ್ಟದು ನಿಜವಾಗಿ ಭಯಾನಕವಾಗಿದ್ದ ಈ ದೊಂಬಿಗಳ ಭಯಾನಕವನ್ನು ಬಿಚ್ಚಿತೋರಿಸಿ, ಕಾಂಗ್ರೆಸ್ಸೇ

ಅವುಗಳಿಗೆ ಹೊಣೆಯಾಗಿತ್ತೆಂದು ಪುನಃ ಪುನಃ ಹೇಳಲಾಯಿತು ನಡೆದಂತೆ, ಅವುಗಳಲ್ಲಿ ಸಭ್ಯಪಾತ್ರವನ್ನು ವಹಿಸಿದುದು ಕಾಂಗ್ರೆಸ್ ಒಂದೇ, ಮತ್ತು ಅದರ ಪುತ್ರಶ್ರೇಷ್ಠ ನೋರ್ವನು ಸತ್ತುಬಿದ್ದಿದ್ದನು ಆತನಿಗಾಗಿ ಕಾನ್ಪುರದ ಎಲ್ಲ ಪಂಗಡಗಳೂ ಜಾತಿಗಳೂ ಮರುಗುತ್ತಿದ್ದರು ಈ ದೊಂಬಿಗಳ ಸುದ್ದಿಯನ್ನು ಕೇಳಿದ ಕೂಡಲೇ ಕರಾಚಿಯಲ್ಲಿ ಕೂಡಿದ ಕಾಂಗ್ರೆಸ್ ಅಧಿವೇಶನವು ವಿಚಾರಣಾ ಸಮಿತಿಯೊಂದನ್ನು ನೇಮಿಸಿತು ಈ ಸಮಿತಿಯು ಅತ್ಯಂತ ಕೂಲಂಕಷವಾದ ವಿಚಾರಣೆಯನ್ನೂ ಮಾಡಿತು ಹಲವು ತಿಂಗಳು ಗಳ ದುಡಿಮೆಯಾದ ಮೇಲೆ ದೊಡ್ಡ ವರದಿಯೊಂದನ್ನು ಹೊರಡಿಸಿತು ಅದು ಕೂಡಲೆ ಸರಕಾರದಿಂದ ಬಹಿಷ್ಕೃತವಾಗಿ, ಮುದ್ರಿತ ಪ್ರತಿಗಳು ಜಫ್ತಿ ಮಾಡಲ್ಪಟ್ಟು, ಪ್ರಾಯಃ ನಾಶಮಾಡಲ್ಪಟ್ಟುವು ವಿಚಾರಣೆಯ ಶೋಧನಾಂಶಗಳನ್ನು ಅಡಗಿಸುವ ಈ ಪ್ರಯತ್ನವು, ನಮ್ಮ ಅಧಿಕಾರಿ ವಿಮರ್ಶಕರು ಮತ್ತು ಬ್ರಿಟಿಷ್ ಸ್ವಾಮ್ಯದ ಪತ್ರಿಕೆಗಳು, ದೊಂಬಿಗಳಿಗೆ ಕಾಂಗ್ರೆಸ್ ಕೆಲಸವು ಕಾರಣವೆಂದು ಮೇಲಿಂದ ಮೇಲೆ ಪುನರಾವರ್ತಿ ಸುವುದನ್ನು ತಡೆಗಟ್ಟಲಿಲ್ಲ ನಿಸ್ಸಂದೇಹವಾಗಿ ಈ ಮತ್ತು ಇತರ ವಿಚಾರಗಳಲ್ಲಿ ಕೊನೆಗೆ ಸತ್ಯವೇ ಜಯಿಸುವುದು, ಆದರ ಕಲವು ವೇಳೆ ಅಸತ್ಯಕ್ಕೆ ಬಹಳ ಆರಂಭ ಸೌಕರ್ಯವಿರುತ್ತದೆ

" ಗೆಯ್ಮೆಯೆಲ್ಲ ಮುಗಿಯೆ ಸಟೆಯು ಕೊಳೆತು ನಾರ್ವುದು,
ಪೆಂಪುವೆತ್ತ ದಿಟವು ತಾನು ಗೆಲಿದು ಗೆಲ್ವುದು,
ಎಣಿಸದಂದು ಲೋಗರದರ ಗೆಲುವು ಸೋಲ್ಗಳ "

ಈ ಸಮರ ಮನೋವೃತ್ತಿಯು ಸನ್ನಿಯ ಪ್ರದರ್ಶನವು ಬಹಳ ಸ್ವಾಭಾವಿಕವೇ ಆಗಿರಬಹುದು ಅಲ್ಲದೆ ಇಂತಹ ಪರಿಸ್ಥಿತಿಗಳಲ್ಲಿ ಸತ್ಯವನ್ನಾಗಲಿ ಸಂಯಮವನ್ನಾಗಲಿ ಯಾರೂ ನಿರೀಕ್ಷಿಸಲು ಸಾಧ್ಯವಿಲ್ಲ ಆದರೆ ಅದು ನಿರೀಕ್ಷೆಯನ್ನು ಮೀರಿತ್ತೆಂದು ಖಂಡಿತವಾಗಿಯೂ ತೋರಿತು ಅದರ ತೀವ್ರತ್ವವೂ ನಿರರ್ಗಳೋತ್ಸಾಹವೂ ವಿಸ್ಮಯಕರವಾಗಿದ್ದುವು ಭಾರತದಲ್ಲಿ ಆಳರಸರ ಗುಂಪಿನ ನರಗಳ ಪರಿಸ್ಥಿತಿಯನ್ನು ಮತ್ತು ಅವರು ಹೇಗೆ ಪೂರ್ವದಲ್ಲಿ ತಮ್ಮನ್ನು ತಾವು ಅಣಗಿಸಿಕೊಂಡಿದ್ದರೆಂಬುದನ್ನು ಸ್ವಲ್ಪಮಟ್ಟಿಗೆ ಸೂಚಿಸಿತು ನಾವು ಏನಮಾಡಿದುವೆಂಬುದಾಗಲಿ ಅಥವಾ ಏನು ಹೇಳಿದುದಾಗಲಿ ಪ್ರಾಯಃ ಅವರ ಕೋಪಕ್ಕೆ ಕಾರಣವಲ್ಲ ಆದರೆ ತಮ್ಮ ಸಾಮ್ರಾಜ್ಯ ವನ್ನು ಕಳೆದುಕೊಂಡು ಬಿಡುವರೆಂಬ ಹಿಂದಿನ ಭಯದ ಅರಿವೇ ಕಾರಣವಾಗಿರಬೇಕು ಸ್ವಶಕ್ತಿಯಲ್ಲಿ ವಿಶ್ವಾಸವುಳ್ಳ ಅರಸರು ಈ ಬಗೆಯಲ್ಲಿ ಹಿಮ್ಮೆಟ್ಟುವದಿಲ್ಲ ಈ ಚಿತ್ರ ವನ್ನೂ ಇನ್ನೊಂದನ್ನೂ ಎದುರೆದುರಿಡುವುದರಿಂದ ಅಂತರವು ಎದ್ದು ಕಾಣುತ್ತಿತ್ತು ಏಕೆಂದರ ಇನ್ನೊಂದು ಕಡೆ ಮೌನವಾಳುತ್ತಿತ್ತು, ಸ್ವಪ್ರೇರಿತ ಮತ್ತು ಘನ ಸಂಯಮ ಗಳದ್ದಲ್ಲ, ಸೆರೆಮನೆಯ ದಿಗಿಲಿನ ಮತ್ತು ಸರ್ವವ್ಯಾಪ್ತ ದೋಷಾರೋಪಣೆ, ಇವುಗಳ ಮೌನ, ಈ ಬಲಾತ್ಕಾರದ ಬಾಯಿಬೀಗವಿಲ್ಲದಿದ್ದರ ಇನ್ನೊಂದು ಕಡೆಯೂ ಸಹ

ಸನ್ನಿಯ ಉತ್ಸ್ಫೋಟನೆ, ಉತ್ಪ್ರೇಕ್ಷೆ, ಉಪಾಲಂಭಗಳಲ್ಲಿ, ಅತಿಶಯಿಸುತ್ತಿತ್ತು ಆದರೆ ಇದಕ್ಕೆ ಒಂದು ತೂಬು ಮಾತ್ರವಿದ್ದಿತು—ಆಗಿಂದಾಗ್ಗೆ ಬೇರೆಬೇರೆ ಪಟ್ಟಣಗಳಲ್ಲಿ ಪ್ರಕಟಿಸಲ್ಪಡುತ್ತಿದ್ದ ಅನಧಿಕೃತ ವೃತ್ತಪತ್ರಗಳು

ಭಾರತದಲ್ಲಿನ ಬ್ರಿಟಿಷ್ ಸ್ವಾಮ್ಯದ ಆಂಗ್ಲೋ ಇಂಡಿಯನ್ ವೃತ್ತಪತ್ರಿಕೆಗಳು, ಈ ಪ್ರೂಳ್ಳು ಕೂಗಿನ ಆಟಕ್ಕೆ ಅಧಿಕವಾದ ಉತ್ಸಾಹದಿಂದ ಸೇರಿದುವು, ಮತ್ತು ಪ್ರಾಯಃ ಬಹುಕಾಲದಿಂದ ಗೂಢವಾಗಿ ಸಂಗೋಪನ ಮತ್ತು ಸಂಯಮ ಮಾಡಿದ್ದ ಅನೇಕ ಆಲೋಚನೆಗಳಿಗೆ ಉಕ್ತಿಯನ್ನೂ ಪ್ರಕಟಣೆಯನ್ನೂ ಕೊಟ್ಟವು ಸಾಮಾನ್ಯ ಪರಿಸ್ಥಿತಿಯಲ್ಲಿ ಅವು ಹೇಳಬೇಕೆಂದಿರುವುದನ್ನು ಸ್ವಲ್ಪ ಎಚ್ಚರಿಕೆಯಿಂದ ಹೇಳಬೇಕಾಗುತ್ತದೆ, ಏಕೆಂದರೆ, ಅವುಗಳ ವಾಚಕರಲ್ಲಿ, ಬಹಳಮಂದಿ ಭಾರತೀಯರು, ಆದರೆ ಭಾರತದ ಸಂದುಕಟ್ಟು ಈ ಎಲ್ಲ ಸಂಯಮಗಳನ್ನು ತೊಡೆದುಹಾಕಿಬಿಟ್ಟು, ಆಂಗ್ಲರೆನ್ನದೆ ಭಾರತೀಯರೆನ್ನದೆ ಎಲ್ಲರ ಮನಸ್ಸುಗಳ ಸಿಮಿಷ ದರ್ಶನವನ್ನು ಕೊಟ್ಟಿತು ಭಾರತದಲ್ಲಿ ಒಂದೆರಡು ಆಂಗ್ಲೋ ಇಂಡಿಯನ್ ವೃತ್ತಪತ್ರಿಕೆಗಳು ಉಳಿದುಕೊಂಡಿವೆ, ಒಂದೊಂದಾಗಿ ಅವೂ ಹೋಗಿಬಿಟ್ಟವ ಉಳಿದುಕೊಂಡಿರುವ ಪತ್ರಿಕೆಗಳಲ್ಲಿ ಹಲವು, ಸುದ್ದಿಯನ್ನು ಒದಗಿಸುವುದರಲ್ಲೂ ಸಾಮಾನ್ಯ ರಚನೆಯ ರೀತಿಯಲ್ಲೂ ಅವು ಅತ್ಯುತ್ತಮ ಪತ್ರಿಕೆಗಳು ಪ್ರಪಂಚ ಪ್ರಸಂಗಗಳನ್ನು ಕುರಿತ ಅವುಗಳ ಪ್ರಧಾನ ಲೇಖನಗಳು, ಪ್ರಾಚೀನ ಸಂಪ್ರದಾಯದೃಷ್ಟಿಕೋನವನ್ನು ಯಾವಾಗಲೂ ಪ್ರತಿನಿಧಿಸಿದ್ದರೂ ದಕ್ಷತೆಯಿಂದ ಕೂಡಿ ತಿಳುವಳಿಕೆಯನ್ನೂ ಹಿಡಿತವನ್ನೂ ಪ್ರದರ್ಶಿಸುತ್ತವೆ ವೃತ್ತಪತ್ರಿಕಗಳ ದೃಷ್ಟಿಯಿಂದ ಬಹುಶಃ ಅವು ಭಾರತದಲ್ಲಿ ನಿಸ್ಸಂಶಯವಾಗಿ ಅತ್ಯುತ್ತಮವಾದವು ಆದರೆ ಭಾರತೀಯ ರಾಜಕೀಯ ಪ್ರಶ್ನೆಗಳ ಸಂಬಂಧವಾಗಿ ದೊಡ್ಡದೊಂದು ಬೀಳು ಇದೆ, ಮತ್ತು ಅವುಗಳನ್ನು ಕುರಿತ ವ್ಯಾಖ್ಯಾನ ವಿನ್ಯಾಸವು ಆಶ್ಚರ್ಯಕರವಾಗುವಷ್ಟು ಏಕಪಕ್ಷವಾಗಿರುತ್ತದೆ, ಸಂದುಕಟ್ಟಿನ ಸಮಯದಲ್ಲಿ ಈ ಪಕ್ಷಪಾತವು ಸನ್ನಿಯೂ ಅಸಭ್ಯವೂ ಆಗಿಬಿಡುತ್ತದೆ ಅವು ಇಂಡಿಯಾ ಸರಕಾರವನ್ನು ಚಾಚೂತಪ್ಪದೆ ಶ್ರದ್ಧೆಯಿಂದ ಪ್ರತಿನಿಧಿಸುತ್ತವೆ ಅದಕ್ಕಾಗಿ ಅವು ಮಾಡುವ ನಿರಂತರ ಪ್ರಚಾರಕಾರ್ಯದಲ್ಲಿ, ತಲೆಹಾಕದೆ ಇರುವ ಸುಗುಣವಿಲ್ಲ

ಈ ಚುನಾಯಿಸಲ್ಪಟ್ಟ ಒಂದೆರಡು ಆಂಗ್ಲೋ ಇಂಡಿಯನ್ ಪತ್ರಿಕೆಗಳೊಂದಿಗೆ ಹೋಲಿಸಿದರೆ, ಭಾರತೀಯ ವೃತ್ತಪತ್ರಿಕೆಗಳೂ ಸಾಮಾನ್ಯವಾಗಿ ಬಡ ಸರಕುಗಳು. ಅವುಗಳ ಭಾಂಡಾರಿಕ ಉತ್ಪತ್ತಿ ಸ್ಥಾನಗಳು ಮಿತಿಯುಳ್ಳವು ಮತ್ತು ಮೇಲ್ಪಾಟಿಗಾಗಿ ಅವುಗಳ ಮಾಲೀಕರು ಮಾಡುವ ಪ್ರಯತ್ನಗಳು ಅತ್ಯಲ್ಪವಾದವು ಅವು ತಮ್ಮ ದಿನ ದಿನದ ಜೀವನವನ್ನು ಕಷ್ಟದಿಂದ ದಬ್ಬಿಕೊಂಡು ಹೋಗುವುವು ಮತ್ತು ದುರ್ಭಾಗ್ಯ ಸಂಪಾದಕೀಯ ನೌಕರರಿಗೆ ನೆಮ್ಮದಿಯಿಲ್ಲ ಅವುಗಳ ರಚನಾ ರೀತಿಯು ಬಡಕಲಾಗಿರುತ್ತದೆ, ಅವುಗಳ ಜಾಹಿರಾತುಗಳು ಅನೇಕವೇಳೆ ಅತ್ಯಂತ ಆಕ್ಷೇಪಣೀಯವಾದವು,

ಮತ್ತು ಜೀವನವನ್ನೂ ರಾಜಕಾರಣವನ್ನೂ ಕುರಿತ ಅವುಗಳ ಸಾಮಾನ್ಯ ಮನೋಭಾವವು ಗಾಢರಾಗಗಳ ಮತ್ತು ಸನ್ನಿಯ ಸೆಳತಕ್ಕೆ ಸಿಕ್ಕಿರುತ್ತವೆ ಅಂಶತಃ, ನಾವು ಗಾಢರಾಗಿಗಳಾದ ಜನಾಂಗವಾಗಿರುವುದು ಒಂದು ಕಾರಣ, ಅಂಶತಃ ವ್ಯವಹಾರ ಸಾಧನವು (ಆಂಗ್ಲಭಾಷಾ ವೃತ್ತಪತ್ರಿಕೆಗಳಲ್ಲಿ) ನಮಗೆ ವಿದೇಶೀಯ ಭಾಷೆಯಾಗಿದ್ದು, ಅದನ್ನು ಸರಳವಾಗಿಯೂ ಬಿಗಿಯಾಗಿಯೂ ಬರಯುವುದಕ್ಕ ಸುಲಭವಾಗಿಲ್ಲದಿರುವುದು ಒಂದುಕಾರಣ, ಎಂದು ತೋರುತ್ತದೆ ಆದರೆ, ನಿಜವಾದ ಕಾರಣವೆಂದರೆ,—ಬಹುಕಾಲದ ದಮನ ಮತ್ತು ದಾಸ್ಯಗಳಿಂದುಂಟಾದ ಅನೇಕ ವಿಧವಾದ ಮನಸ್ಸಿನ ಅತಿರೇಕಗಳು ನಮ್ಮನ್ನು ಪೀಡಿಸುತಿವೆ, ಮತ್ತು ಪ್ರತಿಯೊಂದು ತೂಬಿನಲ್ಲೂ ರಾಗೋದ್ರೇಕದ ತುಂಬುಪ್ರವಾಹ ನುಗ್ಗುವ ಸಂಭವವಿದ

ಭಾರತೀಯ ಸ್ವಾಮ್ಯದ ಇಂಗ್ಲಿಷ್ ವೃತ ಸತ್ರಿಕಗಳಲ್ಲಿ ರಚನೆಯ ರೀತಿ ಮತ್ತು ಸುದ್ದಿಗಳನ್ನು ಒದಗಿಸುವುದು, ಈ ದೃಷ್ಟಿಗಳಿಂದ ಮದರಾಸಿನ 'ಹಿಂದೂ' ಪತ್ರಿಕೆಯು ಬಹುಶಃ ಉತ್ತಮೋತ್ತಮವಾದುದು ಆ ಪತ್ರಿಕೆಯು ಯಾವಾಗಲೂ ನನಗೆ, ಅತಿಸಂಯಮಿಯಾದ, ಸ್ತ್ರೀಪುರುಷರ ಸಂಬಂಧದ ವಿಷಯವನ್ನು ಕುರಿತ ಚರ್ಚೆಯನ್ನು ಹೇಸುವ, ಸಂಭಾವಿತಳಾದ, ಅಸಭ್ಯ ಪದವೊಂದರ ಪ್ರಯೋಗವೆಂದರೆ ದಿಗಿಲುಪಡುವ, ಇಳಿವಯಸ್ಸಿನ ಕನ್ಯೆಯ ನೆಪವನ್ನುಂಟುಮಾಡುತ್ತದ ಅತಿ ಮುಖ್ಯವಾಗಿ, ಬಾಳಿನಲ್ಲಿ ನೆಮ್ಮದಿಯ ನೆಲೆಯಲ್ಲಿ ನಿಂತಿರುವ ಮಧ್ಯಶ್ರೇಣಿಯವರಿಗೆ ಆ ಪತ್ರಿಕೆ ಸಚೂಟಿಯಲ್ಲದ ಕೀಳುಬಗೆಯ ಇರವು, ಬಾಳಿನ ಗೊಂದಲ ಮತ್ತು ತಿಕ್ಕಾಟಗಳು, ಇವಲ್ಲ ಅದಕ್ಕೆ ಬೇಡ ಮಿತದೃಷ್ಟಿಕ್ಷೇಪದ ಇತರ ಅನೇಕ ವೃತ್ತಪತ್ರಿಕೆಗಳೂ ಕೂಡ ಈ 'ಇಳಿವಯಸ್ಸಿನ ಕನ್ಯೆ'ಯ ಅಂತಸ್ಸನ್ನು ಹೊಂದಿವೆ ಅವು ಇದನ್ನು ಸಾಧಿಸಿದರೂ 'ಹಿಂದೂ'ವಿನ ವ್ಯಥಗಾತ್ರತೆಯನ್ನು ಪಡದಿರುವುದಿಲ್ಲ, ಮತ್ತು ತತ್ಪರಿಣಾಮವಾಗಿ ಪ್ರತಿಯೊಂದು ವಿಷಯದಲ್ಲೂ ವಿಸ್ಮಯವಾಗುವಂತೆ ಮೊದ್ದಾಗಿರುವುವು

ತಾನು ಕೊಡಬೇಕೆಂದಿದ್ದ ಏಟಿಗೆ ಸರಕಾರವು ಬಹುಕಾಲದಿಂದ ಸನ್ನದ್ಧವಾಗಿದ್ದಿತೆಂಬುದೂ ಮತ್ತು ಪ್ರಾರಂಭದಲ್ಲೇ ಅದು ಆದಷ್ಟು ಮಟ್ಟಿಗೆ ಆಮೂಲಾಗ್ರವಾಗಿಯೂ ಅಂಗಾಂಗಗಳನ್ನೆಲ್ಲ ಕುಲುಕಿಬಿಡುವ ಹಾಗೆಯೂ ಬೀಳಬೇಕೆಂದು ಸರಕಾರವು ಇಷ್ಟಪಟ್ಟಿದ್ದಿತು ಎಂಬುದೂ ಸ್ಪಷ್ಟವಾಗಿದ್ದಿತು ೧೯೩೦ ರಲ್ಲಿ ಅದು ಕ್ಷಣಕ್ಷಣವೂ ಹಾಳಾಗಿ ಹೋಗುತ್ತಿದ್ದ ಪರಿಸ್ಥಿತಿಯನ್ನು ಹೊಸ ಹೊಸ ಆರ್ಡಿನೆನ್ಸುಗಳಿಂದ ಹಿಡಿದು ನಿಲ್ಲಿಸಲೆತ್ನಿಸುತ್ತಿದ್ದಿತು ಆಗ್ಗೆ ಕಾರ್ಯಾರಂಭವು ಕಾಂಗ್ರೆಸ್ಸಿನ ಕೈಯ್ಯಲ್ಲಿತ್ತು ೧೯೩೨ ರ ಕಾರ್ಯವಿಧಾನಗಳು ವ್ಯತ್ಯಾಸ ಹೊಂದಿದ್ದುವು ಎದುರು ಪಕ್ಷದ ಸಾಲಿನ ಎಲ್ಲಾ ಭಾಗಗಳ ಮೇಲೂ ಸರಕಾರವು ಪ್ರಸ್ಥಾನವನ್ನು ನಡೆಸಲಾರಂಭಿಸಿತು ಅಖಿಲ ಭಾರತ ಮತ್ತು ಪ್ರಾಂತ ಆರ್ಡಿನೆನ್ಸುಗಳ ಪಡೆಯೊಂದರಿಂದ, ಕಲ್ಪನೆಗೆ ನಿಲುಕುವ ಪ್ರತಿಯೊಂದು ಅಧಿಕಾರಶಕ್ತಿಯನ್ನೂ ಕೈಗೊಳ್ಳಲಾಯಿತು ಸಂಘಟನೆಗಳು ಶಾಸನ

ಬಾಹಿರವಾದುವು ಮನೆಗಳು, ಆಸ್ತಿಗಳು, ವಾಹನಗಳು, ಬ್ಯಾಂಕಿನಲ್ಲಿನ ದ್ರವ್ಯಗಳು, ಇವೆಲ್ಲವುಗಳ ಆಕ್ರಮಣವಾಯಿತು, ಸಾರ್ವಜನಿಕ ಸಭೆಗಳೂ ಮೆರವಣಿಗೆಗಳೂ ನಿಷಿದ್ಧವಾದುವು, ವೃತ್ತಪತ್ರಿಕೆಗಳೂ ಮುದ್ರಣಾಲಯಗಳೂ ಸಂಪೂರ್ಣವಾಗಿ ಅಂಕೆಯಲ್ಲಿಡಲ್ಪಟ್ಟವು ಇನ್ನೊಂದು ಕಡೆ ೧೯೩೦ ರಂತಲ್ಲದೆ, ಗಾಂಧಿಜಿಯವರು ಆ ಸಮಯದಲ್ಲಿ ಶಾಸನ ಭಂಗ ಚಳವಳಿಯನ್ನು ತೊರೆದುಬಿಡಲು ನಿಷ್ಕೃಷ್ಟ ವಾಗಿ ಅಪೇಕ್ಷಿಸಿದ್ದರು, ಹಾಗೂ ಕಾರ್ಯನಿರ್ವಾಹಕ ಸಮಿತಿಯ ಹೆಚ್ಚು ಭಾಗ ವೆಲ್ಲವೂ ಹಾಗೆಯೇ ಯೋಚಿಸಿತು ನಮಗಿಷ್ಟವೇ ಬೇಡವಾಗಿದ್ದರೂ ಹೋರಾಟ ವೊಂದು ಅನಿವಾರ್ಯವೆಂದು ನಾವು ಯೋಚಿಸಿದ್ದುದರಿಂದ, ಅದಕ್ಕಾಗಿ ನಾವು ಸಿದ್ಧ ರಾಗಬೇಕೆಂದು, ಕೆಲವರು (ನಾನೂ ಸೇರಿ) ಅಭಿಪ್ರಾಯಪಟ್ಟೆವು ಸಂಯುಕ್ತ ಪ್ರಾಂತ ಮತ್ತು ಗಡಿನಾಡುಗಳಲ್ಲಿ ಬೆಳೆಯುತ್ತಿದ್ದ ಮುಲುಕು, ನಡೆಯಲಿದ್ದ ತಿಕ್ಕಾಟಕ್ಕೆ ಜನರ ಗಮನವನ್ನು ಸೆಳೆದಿತ್ತು ಆದರೆ ಒಟ್ಟಿನಲ್ಲಿ ಮಧ್ಯತರಗತಿಯವರೂ, ಕಲಿತವರೂ, ಸಂಗ್ರಾಮದ ಸಂಭವನನ್ನು ಸಂಪೂರ್ಣವಾಗಿ ಮರೆತುಬಿಡುವುದಕ್ಕೆ ಸಾಧ್ಯವಿಲ್ಲದಿದ್ದರೂ, ಅಗ್ಯೆ ಮಾತ್ರ ಆದರ ದೃಷ್ಟಿಯಿಂದ ಆಲೋಚಿಸುತ್ತಿರಲಿಲ್ಲ ಗಾಂಧಿಜಿಯವರ ಪುನರಾಗಮನವಾಯಿತೆಂದರೆ, ಹೇಗೋ, ಅಂತೂ ಹೋರಾಟದಿಂದ ತಪ್ಪಿಸಿಕೊಳ್ಳಬಹುದೆಂದು ಆಶಿಸಿದ್ದರು ಸ್ಪಷ್ಟವಾಗಿ, ಆಲೋಚನೆಯು ಆಶೆಯಿಂದ ಉದ್ಭವಿಸಿತ್ತು

ಹೀಗೆ ೧೯೩೨ ರ ಆದಿಯಲ್ಲಿ ಕಾರ್ಯಾರಂಭವು ಸರಕಾರದ ಕೈಯ್ಯಲ್ಲಿದ್ದು, ಕಾಂಗ್ರೆಸ್ಸು ಯಾವಾಗಲೂ ಸ್ವರಕ್ಷಣಾರ್ಥಿಯಾಗಿದ್ದಿತು ಆರ್ಡಿನೆನ್ಸುಗಳಿಗೂ ಮತ್ತು ಶಾಸನ ಭಂಗಕ್ಕೂ ಮಾರ್ಗವಿತ್ತ ಶೀಘ್ರವಾದ ಬೆಳವಣಿಗೆಗಳಿಂದ ಸ್ಥಳೀಯ ಕಾಂಗ್ರೆಸ್ ಮುಖಂಡರು ಅನೇಕ ಕಡೆಗಳಲ್ಲಿ ಆಶ್ಚರ್ಯಚಕಿತರಾದರು ಹೀಗಿದ್ದರೂ ಕಾಂಗ್ರೆಸ್ಸಿನ ಕರೆಗೆ ಗಮನಾರ್ಹವಾದ ಮಾರುತ್ತರ ದೊರೆಯಿತು, ಶಾಸನ ಭಂಗಕಾರರ ಕೊರತೆ ಯಾಗಲಿಲ್ಲ ಅಷ್ಟೇಕೆ, ೧೯೩೦ ರಲ್ಲಿ, ಅದರಲ್ಲೂ ದೊಡ್ಡ ಪಟ್ಟಣಗಳಲ್ಲಿ, ಪ್ರದರ್ಶನ ಮತ್ತು ಪ್ರಕಟಣೆ ಹೆಚ್ಚಾಗಿದ್ದರೂ, ೧೯೩೨ ರಲ್ಲಿ, ಬ್ರಿಟಿಷ್ ಸರಕಾರಕ್ಕೆ ಎದುರೊಡ್ಡಿದ ಚಳವಳಿಯು ಅದಕ್ಕಿಂತ ಬಹಳ ದೊಡ್ಡದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ ವೆಂದು ನನಗೆ ತೋರುತ್ತದೆ ೧೯೩೨ ರಲ್ಲಿ ಹೀಗೆ ಜನಗಳ ಹೆಚ್ಚು ಸಹಿಷ್ಣುತೆಯ ಪ್ರದರ್ಶನವಾದರೂ, ಎದುರಾಳಿಗಳನ್ನು ಕವಿದು ಕುಗ್ಗಿಸುವಷ್ಟು ಶಾಂತಿಯಿಂದ ಅವರು ಇದ್ದರೂ ೧೯೩೦ ರಲ್ಲಿದ್ದುದಕ್ಕಿಂತ ಬಹಳ ಕಡಮೆಯಾದ ಆರಂಭಾವೇಶವಿದ್ದಿತು, ಬೇಡದ ಕದನಕ್ಕೆ ನುಗ್ಗಿದಂತಾಯಿತು ೧೯೩೦ ರಲ್ಲಿ ಅದಕ್ಕಿದ್ದ ಒಂದು ತೆರನಾದ ಮಹಿಮೆಯು ಎರಡು ವರ್ಷಗಳಲ್ಲಿ ಸ್ವಲ್ಪಮಟ್ಟಿಗೆ ಮಾಸಿಹೋಗಿದ್ದಿತು ಸರಕಾರವು ತನ್ನಲ್ಲಿದ್ದ ಪ್ರತಿಯೊಂದು ಆಧಾರಶಕ್ತಿಯಿಂದಲೂ ಸರಕಾರವು ಕಾಂಗ್ರೆಸ್ಸನ್ನು ವಿರೋಧಿಸಿತು, ವಸ್ತುತಃ ಭಾರತವು ಸಮರ ಶಾಸನದ ಅಂಕೆಯಲ್ಲಿ ಜೀವಿಸುತ್ತಿತ್ತು ಮತ್ತು ನಿಜವಾಗಿ ಹೂಟವನ್ನು ಹೂಡುವ ಬಲ್ಮೆಯಾಗಲಿ ಕಾರ್ಯಸ್ವಾತಂತ್ರ್ಯವಾಗಲಿ

ತಿರುಗಿ ಕಾಂಗ್ರೆಸ್ಸಿನ ಕೈಗೆ ಬರಲೇ ಇಲ್ಲ ಪ್ರಥಮ ಪ್ರಘಾತಗಳು ಅದನ್ನು ಮತ್ತು ಹಿಂದೆ ಅದರ ಮುಖ್ಯ ಬೆಂಬಲವಾಗಿದ್ದ ಮಧ್ಯಶ್ರೇಣಿಯವರನೇಕರನ್ನು ಮರನಾಗಿಸಿ ಬಿಟ್ಟವು ಅವರ ರೊಕ್ಕದ ಬೊಕ್ಕಣಕ್ಕೆ ಕತ್ತರಿ ಬಿದ್ದಿತು, ಯಾರು ಯಾರು ಶಾಸನ ಭಂಗ ಚಳವಳಿಗೆ ಸೇರುತ್ತಿದ್ದರೋ ಅಥವಾ ಸಹಾಯ ಮಾಡುತ್ತಿದ್ದರೆಂದು ತಿಳಿಯಬರುತ್ತಿದ್ದಿತೋ ಅವರು ತಮ್ಮ ಸ್ವಾತಂತ್ರ್ಯವನ್ನು ಮಾತ್ರವಲ್ಲದೆ ಪ್ರಾಯಃ ತಮ್ಮ ಆಸ್ತಿಪಾಸ್ತಿಯನ್ನೆಲ್ಲ ಕಳೆದುಕೊಳ್ಳುವ ಪರಿಸ್ಥಿತಿಗೊಳಗಾಗುತ್ತಿದ್ದರು ಎಂಬುದು ವಿಶದವಾಯಿತು ಸ ಪ್ರಾ ಗಳಲ್ಲಿ ಕಾಂಗ್ರೆಸ್ಸು ಬಡವನ ಚಿಂತೆಯಾಗಿತ್ತು ಅಲ್ಲಿ ಇದು ನಮಗೆ ಅಷ್ಟೊಂದು ಮುಖ್ಯವಾಗಿರಲಿಲ್ಲ, ಆದರೆ ಬೊಂಬಾಯಿನಂತಹ ದೊಡ್ಡ ದೊಡ್ಡ ನಗರಗಳಲ್ಲಿ ಬಹಳ ವ್ಯತ್ಯಾಸವನ್ನುಂಟುಮಾಡಿತು ವಣಿಜಕ ಗುಂಪೇ ಸಂಪೂರ್ಣವಾಗಿ ಹಾಳುಬೀಳುತ್ತಿತ್ತು ಉದ್ಯೋಗಿಗಳ ಗುಂಪಿಗೆ ಬಹಳ ನಷ್ಟ ವಾಗುತ್ತಿತ್ತು ಈ ವಿಧವಾದ ಕೇವಲ ಬೆದರಿಕೆಯೇ (ಮತ್ತು ಕೆಲವು ವೇಳೆ ಇದನ್ನು ಕಾರ್ಯತಃ ನಡೆಸುತ್ತಿದ್ದರು) ಈ ಪಟ್ಟಣದ ಶ್ರೀಮಂತ ವರ್ಗದವರನ್ನು ಮರನಾಗಿಸು ತ್ತಿತ್ತು ಆಗಾಗ್ಯೆ ಮಾತ್ರ ದಾನ ಮಾಡುವುದು ಹೊರತಾಗಿ, ರಾಜಕಾರಣಕ್ಕೆ ಸ್ವಲ್ಪವೂ ಸಂಬಂಧಪಡದೇ ಇದ್ದ ಅಂಜುಕುಳಿ, ಆದರೆ ಏಳಿಗೆಯಾಗಿದ್ದ ವರ್ತಕ ನೊಬ್ಬನಿಗೆ, ದೀರ್ಘ ಶಿಕ್ಷೆಯೊಂದಿಗೆ ಐದು ಲಕ್ಷ ರೂಪಾಯಿಗಳ ಜುಲ್ಮಾನೆಯನ್ನು ಹಾಕಿಸುವುದಾಗಿ ಪೋಲೀಸ್‌ನವರು ಬೆದರಿಸಿದುದರ ಸಮಾಚಾರವೊಂದು ನನಗೆ ಆಮೇಲೆ ತಿಳಿಯಿತು ಇಂತಹ ಬೆದರಿಕೆಗಳು ಸಾಧಾರಣವಾಗಿ ನಡೆಯುತ್ತಲೇ ಇದ್ದವು ಈ ಬೆದರಿಕೆಗಳು ಗೊಡ್ಡು ಬೆದರಿಕೆಗಳಾಗಿರಲಿಲ್ಲ ಪೋಲೀಸ್‌ರು ಆಗ ಸರ್ವಶಕ್ತರಾಗಿದ್ದು, ಈ ಬೆದರಿಕೆಗಳು ಕಾರ್ಯಕಾರಿಯಾಗುತ್ತಿದ್ದುದರ ಉದಾಹರಣೆ ಗಳು ಪ್ರತಿದಿನವೂ ಇರುತ್ತಿದ್ದುವು

ಸರಕಾರದ ಕಾರ್ಯವನ್ನು ಯಾವೊಬ್ಬ ಕಾಂಗ್ರೆಸ್ಸಿನವನೂ ಆಕ್ಷೇಪಿಸಲು ಅಧಿಕಾರವಿಲ್ಲವೆಂದು ನಾನು ತಿಳಿಯುತ್ತೇನೆ ಹಾಗಿದ್ದರೂ ಯಾವ ನಾಗರಿಕತೆಯ ಅಳತೆಗೋಲಿನಿಂದ ಅಳೆದರೂ, ಮುಣುಗಿಸುವಷ್ಟು ಶಾಂತಿಯಿಂದ ಕೂಡಿದ ಚಳ ವಳಿಗೆದುರಾಗಿ ಸರಕಾರದವರು ಉಪಯೋಗಿಸಿದ ಹಿಂಸೆಯೂ ಬಲಾತ್ಕಾರವೂ ಖಂಡಿತವಾಗಿ ಅತ್ಯಾಕ್ಷೇಪಣೀಯವಾದುದು ಕ್ರಾಂತಿಕಾರಕ ಪ್ರತ್ಯಕ್ಷ ಕಾರ್ಯವಿಧಾನ ಗಳನ್ನುಪಯೋಗಿಸಲು ಆರಿಸಿದರೆ, ಅವು ಎಷ್ಟೇ ಅಹಿಂಸಾತ್ಮಕವಾಗಿದ್ದರೂ ಅವಕ್ಕೆ ಪ್ರತಿಯೊಂದು ವಿಧವಾದ ಪ್ರತಿಬಂಧಕಗಳನ್ನೂ ನಾವು ನಿರೀಕ್ಷಿಸಬೇಕು ಕ್ರಾಂತಿ ಕ್ರೀಡೆಯನ್ನು ಸ್ವಾಗತ ಮಂದಿರದಲ್ಲಿ ಆಡಲಾಗುವುದಿಲ್ಲ, ಆದರೂ ಎಷ್ಟೋ ಜನರು ಎರಡರ ಅನುಕೂಲ್ಯಗಳನ್ನೂ ಅಪೇಕ್ಷಿಸುತ್ತಾರೆ ಕ್ರಾಂತಿಕಾರಕ ಕಾರ್ಯಕ್ರಮದಲ್ಲಿ ಕೈಯ್ಯಾಡಲಿಚ್ಛಿಸುವವನು ತನ್ನ ಬಳಿ ಇರುವುದೆಲ್ಲವನ್ನೂ ಕಳೆದುಕೊಳ್ಳಲು ಸಿದ್ಧ ನಾಗಿರಬೇಕು. ಅದುದರಿಂದಲೇ, ವ್ಯಕ್ತಿಗಳು ಒಮ್ಮೆ ಲೌಕಿಕರ ದೃಷ್ಟಿಯಿಂದ ಅವ

ವೇಕಿಯ ಚೇಷ್ಟೆಗಳನ್ನು ಮಾಡಿ ಸ್ವಜನದ್ರೋಹಿ ಎಂದು ಹೆಸರು ಪಡೆಯಬಹುದಾದರೂ, ಐಶ್ವರ್ಯವಂತರೂ ನೆಮ್ಮದಿವಂತರೂ ಅತಿವಿರಳವಾಗಿ ಕ್ರಾಂತಿಕಾರರಾಗಿರುತ್ತಾರೆ

ಯಾರಲ್ಲಿ ಮೋಟಾರುಗಳಾಗಲಿ ದ್ರವ್ಯವಾಗಲಿ ಇರಲಿಲ್ಲವೋ ಮತ್ತು ಯಾರ ಮೇಲೆ ಹೋರಾಟದ ನಿಜವಾದ ಹೊರೆಯು ಬಿದ್ದಿತ್ತೋ ಆ ಜನಜಂಗುಳಿಯನ್ನು ಕುರಿತ ವ್ಯವಹಾರದಲ್ಲಿ ಬೇರೆ ಮಾರ್ಗಗಳನ್ನು ಅನುಸರಿಸಬೇಕಾಗಿತ್ತು ಸರಕಾರದ ಕಾರ್ಯಕ್ರಮದ ಸರ್ವತೋಮುಖ ಕಾರ್ಯದ ಆಶ್ಚರ್ಯಕರವಾದ ಪರಿಣಾಮವೊಂದೆಂದರೆ,—(ಇತ್ತೀಚಿನ ಗ್ರಂಥವೊಂದರಿಂದ ಪದವೊಂದನ್ನು ಎರವು ತೆಗೆದುಕೊಂಡರೆ) 'ಸರಕಾರಿ ಪ್ರಭೃತಿ'ಗಳ ಮಂದೆಯನ್ನು ಚಟುವಟಿಕೆಗೆ ಹೊಡೆದೆಬ್ಬಿಸಿದುದು ಅವರಲ್ಲಿ ಕೆಲವರು, ಭವಿಷ್ಯತ್ತು ಏನನ್ನು ತರುವುದೆಂಬುದನ್ನು ಅರಿಯದೆ ಇತ್ತೀಚಿಗೆ ಸರಸವಾಡಲಾರಂಭಿಸಿದ್ದರು ಆದರ ಸರಕಾರಕ್ಕೆ ಇದನ್ನು ಸಹಿಸಲಾಗಲಿಲ್ಲ, ಮತ್ತು ತಟಸ್ಥ ರಾಜಭಕ್ತಿಯು ಸಾಲದಾಯಿತು ದಂಗೆ ಹೆಸರುವಾಸಿಯ ಫ್ರೆಡರಿಕ್ ಕೂಪರ್‌ರ ಮಾತಿನಲ್ಲಿ, ಅಧಿಕಾರಿಗಳು ಸಮಗ್ರವಾದ, ಚೂಟಿಯಾದ, ಮತ್ತು ನಿಸ್ಪೃಷ್ಟವಾದ ರಾಜಭಕ್ತಿಗೆ ಸ್ವಲ್ಪ ವಾರಡಿ ಬಂದರೂ ಸೈರಿಸುತ್ತಿರಲಿಲ್ಲ ಸರಕಾರವು ತನ್ನ ಪ್ರಜೆಗಳ ನೈತಿಕ ಸಮ್ಮತಿಯೊಂದರ ಆಧಾರದ ಮೇಲೆ ಇರುವಷ್ಟು ನಿಗರ್ವಿಯಾಗಲಾರದಾಗಿತ್ತು ರಾಷ್ಟ್ರೀಯ ಸರಕಾರಕ್ಕೆ ಸೇರಿದ್ದ ತಮ್ಮ ಸಹೋದ್ಯೋಗಿಗಳಾದ ಬ್ರಿಟಿಷ್ ಲಿಬರಲ್ ಪಕ್ಷದ ಮುಂದಾಳುಗಳನ್ನು ಕುರಿತು ಮಿ॥ ಲಾಯ್ಡ್ ಜಾರ್ಜ್‌ರು, "ಆವರಣಗಳಿಗೆ ತಕ್ಕಂತೆ ತಮ್ಮ ಬಣ್ಣವನ್ನು ಹೊಂದಿಸಿಕೊಳ್ಳುತ್ತ ಮಾರ್ಪಡುವ ಉರಗ ಜಂತುಗಳ ಮಾದರಿಗಳು" ಎಂದು ಅನ್ವಯಮಾಡಿದ್ದಾರ ಭಾರತದಲ್ಲಿನ ನೂತನ ಆವರಣವು ಯಾವ ತಟಸ್ಥವರ್ಣಗಳನ್ನೂ ಸಹಿಸಲಿಲ್ಲ, ಮತ್ತು ಈ ಕಾರಣದಿಂದಲೇ ನಮ್ಮ ದೇಶಬಾಂಧವರಲ್ಲಿ ಕೆಲವರು ಮೆಚ್ಚಿನ ಬಣ್ಣಗಳಲ್ಲಿ ಅತಿಯಾಗಿ ಬೆಳಗುವ ಬಣ್ಣಗಳಿಂದಲೂ, ಹಾಡು ಹಬ್ಬಗಳಿಂದಲೂ ಕೂಡಿ ಮೈದೋರಿ ನಮ್ಮ ಆಳರಸರನ್ನು ಕುರಿತ ತಮ್ಮ ಪ್ರೀತಿಯನ್ನೂ ಮೆಚ್ಚಿಕೆಯನ್ನೂ ಸಾರಿದರು ಆರ್ಡಿನೆನ್ಸುಗಳು, ಅನೇಕಾನೇಕ ನಿಷೇಧಗಳು, ವಿಘ್ನಗಳು, 'ಕರ್ಫ್ಯೂ' ಆಜ್ಞೆಗಳು, ಸಂಧ್ಯಾಶಾಸನಗಳು, ಇವುಗಳಿಂದ ಅವರು ಯಾವ ಬಗೆಯಲ್ಲೂ ಭಯಪಡಬೇಕಾಗಿರಲಿಲ್ಲ, ಏಕೆಂದರೆ ಇವೆಲ್ಲವೂ ರಾಜನಿಷ್ಠಾಬಾಹಿರರಿಗೂ, ರಾಜದ್ರೋಹಿಗಳಿಗೂ ಮಾತ್ರ ಅನ್ವಯಿಸಲ್ಪಟ್ಟವೆಯೆಂದೂ ರಾಜಭಕ್ತರು ಇವುಗಳಿಂದ ಗಾಬರಿ ಪಡಬೇಕಾದ ಕಾರಣವಿಲ್ಲವೆಂದೂ ಅಧಿಕಾರ ಪ್ರಕಟಣೆಯು ಹೇಳಿರಲಿಲ್ಲವೇ? ಹೀಗಾಗಿ, ತಮ್ಮ ದೇಶಬಾಂಧವರಲ್ಲಿ ಅನೇಕರನ್ನು ಪಟ್ಟಾಗಿ ಹಿಡಿದಿದ್ದ ಭಯದಿಂದ ರಹಿತರಾಗಿ, ಅವರು ತಮ್ಮ ಸುತ್ತಣ ತಳಮಳವನ್ನೂ ತಿಕ್ಕಾಟವನ್ನೂ ಏರುಪೇರಿಲ್ಲದ ಬಗೆಯ ಅಳವಿನಿಂದ ನೋಡಲು ಬಹುದಾಗಿತ್ತು (ದಿ ಫೆಯ್ತ್‌ಫುಲ್ ಷೆಪ್ಪರ್ಡೆಸ್‌ನಲ್ಲಿ) ಷ್ಲೋ ಹೇಳಿದ ಈ ಮಾತುಗಳಿಗೆ ಅವರು ಬಹುಶಃ ಒಪ್ಪುತ್ತಿದ್ದರು

" ಅಳುಕಿನಿಂ ನಾನಾದಂ ಗೆಂಟಾಗಿಹೆನ್.
ಸುಲಿಯಲೆನ್ನ ನಾರ್ಗುಮರಿದು,
ಅನಿತೆನ್ನ ಸಗ್ಗುವೊಲಿವು "

ಸ್ತ್ರೀಯರಿಗೆ ಪುರುಷರಿಗಿಂತ ಉತ್ತಮವಾದ ಉಪಚಾರವು ನಡೆಯುವುದು ಇಲ್ಲವೆ ಲಘುಶಿಕ್ಷೆಗಳು ದೊರೆಯುವುವು ಎಂಬ ಆಶೆಯನ್ನಿಟ್ಟುಕೊಂಡು, ಸೆರೆಮನೆಗಳನ್ನು ಸ್ತ್ರೀಯರಿಂದ ತುಂಬಿಸಿಬಿಟ್ಟು, ಸಂಗ್ರಾಮದಲ್ಲಿ ಹೀಗೆ ಸ್ತ್ರೀಯರು ಭಾಗವಹಿಸುವ ಉಪಾಯವನ್ನು ಕಾಂಗ್ರೆಸ್ಸಿನವರು ಮಾಡಲಿದ್ದರೆಂಬ ಕಲ್ಪನೆಯು ಸರಕಾರದವರಿಗೆ ಹೇಗೋ ಹತ್ತಿಕೊಂಡುಬಿಟ್ಟಿತು ಅದೊಂದು ವಿಕಟವಿಚಿತ್ರ ಕಲ್ಪನೆಯಾಗಿತ್ತು,– ಯಾರಾದರೂ ಸರಿ, ತಮ್ಮ ಸ್ತ್ರೀಯರನ್ನು ಮುಂದಾಗಿ ಸೆರೆಮನೆಗೆ ನೂಕಲು ಇಷ್ಟಪಡವಂತೆ ಸಾಮಾನ್ಯವಾಗಿ ಹುಡುಗಿಯರಾಗಲಿ ಹೆಂಗಸರಾಗಲಿ ಈ ಜಯಪ್ರಸ್ಥಾನದಲ್ಲಿ ಭಾಗವಹಿಸಿದ್ದರೆಂದರೆ, ಅದು ಅವರ ತಂದೆ ಅಣ್ಣತಮ್ಮಂದಿರು ಗಂಡಂದಿರ ಮಾತನ್ನು ಮೀರಿಯೇ, ಹೇಗೆ ಆದರೂ ಅವರ ಪೂರ್ಣ ಸಹಕಾರವಂತೂ ಇಲ್ಲದೆಯೇ ದೀರ್ಘಶಿಕ್ಷೆಗಳಿಂದಲೂ ಸೆರೆಮನೆಯಲ್ಲಿನ ಅಪಚಾರದಿಂದಲೂ ಅವರನ್ನು ಧೈರ್ಯಗೆಡಿಸಲು ಸರಕಾರವು ನಿಶ್ಚಯಿಸಿತು ನನ್ನ ತಂಗಿಯರ ದಸ್ತಗಿರಿ ಮತ್ತು ಸಜದ ಹಿಂದೆಯೇ ೧೫ ಅಥವಾ ೧೬ ವರ್ಷದ ಹುಡುಗಿಯರು ಕೆಲವರು, ಏನು ಮಾಡಬೇಕೆಂಬುದನ್ನು ಯೋಚಿಸಲು ಅಲಹಾಬಾದಿನಲ್ಲಿ ಸಭೆಸೇರಿದರು ಅವರಿಗೆ ಅನುಭವವಿರಲಿಲ್ಲ ಆದರೂ ಉತ್ಸಾಹಪೂರ್ಣರಾಗಿದ್ದರು ಬುದ್ಧಿವಾದವು ಬೇಕಾಗಿದ್ದಿತು ಒಂದು ಸ್ವಂತ ಮನೆಯಲ್ಲಿ ಅವರು ಸಭೆಗೂಡುತ್ತಿದ್ದಂತೆಯೇ ದಸ್ತಗಿರಿಯಾಗಿ, ಪ್ರತಿಯೊಬ್ಬರಿಗೂ ಎರಡು ವರ್ಷ ಕಠಿಣ ಶಿಕ್ಷೆ ವಿಧಿಸಲ್ಪಟ್ಟಿತು ಭಾರತದಲ್ಲೆಲ್ಲಾ ದಿನದಿನವೂ ನಡೆಯುತ್ತಿದ್ದ ಪ್ರಸಂಗಗಳಲ್ಲಿ ಒಂದಾಗಿದ್ದ ಇದೊಂದು ಸಣ್ಣ ಸಂಗತಿಯಾಗಿತ್ತು ಶಿಕ್ಷಿಸಲ್ಪಟ್ಟ ಹುಡುಗಿಯರಿಗೆ ಮತ್ತು ಹೆಂಗಸರಿಗೆ ಸೆರೆಯ ವಾಸವು ಬಹಳ ಕಠಿಣವಾಗಿಯೇ ಇದ್ದು, ಗಂಡಸರಿಗಿಂತ ಹೆಚ್ಚಾಗಿ ಹಿಂಸೆಯನ್ನು ಅನುಭವಿಸಿದರು ನಾನು ಅನೇಕ ದುಃಖದಾಯಿ ನಿದರ್ಶನಗಳನ್ನು ಕುರಿತು ಕೇಳಿದೆ ಆದರೆ, ಶ್ರೀಮತಿ ಮೀರಾ ಬೆನ್ನರು (ಮ್ಯಾಡೆಲೀನ್ ಸ್ಲೇಡ್) ಇತರ ಶಾಸನಭಂಗ ಬಂದಿಗಳೊಂದಿಗೆ ಬೊಂಬಾಯಿನ ಸೆರೆಮನೆಯೊಂದರಲ್ಲಿ ನಡೆದ ಅನುಭವಗಳನ್ನು ಕುರಿತು ಸಿದ್ಧಗೊಳಿಸಿದ ವರದಿಯು ನಾನು ನೋಡಿದ ನಿದರ್ಶನಗಳೆಲ್ಲವುಗಳಿಗಿಂತ ಆಶ್ಚರ್ಯಕರವಾಗಿತ್ತು

ಸಂಯುಕ್ತ ಪ್ರಾಂತಗಳಲ್ಲಿ ನಮ್ಮ ಹೋರಾಟವು ಗ್ರಾಮಾಂತರ ಕ್ಷೇತ್ರಗಳಲ್ಲಿ ಕೇಂದ್ರೀಕೃತವಾಗಿತ್ತು ಬೇಸಾಯಗಾರಜಂಗುಳಿಯನ್ನು ಪ್ರತಿನಿಧಿಸುವ ಅವಸ್ಥಾನದಿಂದ ಕಾಂಗ್ರೆಸ್ಸು ಎಡೆಬಿಡದೆ ಮಾಡಿದ ಒತ್ತಾಯದ ಪರಿಣಾಮವಾಗಿ, ತಮಗೆ ತೃಪ್ತಿಯಾಗದಿದ್ದರೂ ಸಾಕಷ್ಟು ಉತ್ತಾರಗಳ ವಾಗ್ದಾನವಾಗಿತ್ತು ನಮ್ಮ ದಸ್ತಗಿರಿಯಾದ

ಕೂಡಲೇ ಇನ್ನೂ ಹೆಚ್ಚಿನ ಉತ್ತಾರಗಳ ಪ್ರಕಟಣೆಯಾಯಿತು ಈ ಪ್ರಕಟಣೆಯು ಮುಂಚೆಯೇ ಹೊರಬೀಳದಿದ್ದುದು ಕೌತುಕ ಏಕೆಂದರೆ ಅದು ಬಹಳ ಹೆಚ್ಚಿನ ವ್ಯತ್ಯಾಸ ವನ್ನುಂಟು ಮಾಡಬಹುದಾಗಿತ್ತು ಅದನ್ನು ನಾವು ಸದರವಾಗಿ ನಿರಾಕರಿಸುವುದು ಕಷ್ಟವಾಗುತ್ತಿತ್ತು ಆದರೆ ಈ ಉತ್ತಾರಗಳ ಸಲುವಾಗಿ ಕಾಂಗ್ರೆಸ್ಸಿಗೆ ಕೀರ್ತಿ ಬರ ಕೂಡದೆಂದು ಸರಕಾರವು ತವಕಗೊಂಡಿತ್ತು ಆದುದರಿಂದ ಒಂದು ಕಡೆ ಕಾಂಗ್ರೆಸ್ಸನ್ನು ಮುರಿಯುವುದು, ಇನ್ನೊಂದು ಕಡೆ ಬೇಸಾಯಗಾರರ ಬಾಯಿ ಮುಚ್ಚಿಸಲು ಸಾಧ್ಯ ವಾದಷ್ಟು ಉತ್ತಾರಗಳನ್ನು ಕೊಡುವುದು, ಅದರ ಆಶಯವಾಗಿತ್ತು ಎಲ್ಲೆಲ್ಲಿ ಕಾಂಗ್ರೆಸ್ಸಿನ ಒತ್ತಾಯವು ಅತ್ಯಂತ ಪ್ರಬಲವಾಗಿತ್ತೋ ಅಲ್ಲೆಲ್ಲ ಉತ್ತಾರಗಳು ಅತ್ಯಂತ ಹೆಚ್ಚಾಗಿದ್ದುವೆಂಬುದು ಗಮನಾರ್ಹವಾದುದು

ಈ ಉತ್ತಾರಗಳು ಗಣನೀಯವಾಗಿದ್ದರೂ ಅವು ಕ್ಷೇತ್ರಸಂಬಂಧವಾದ ಸಮಸ್ಯೆ ಯನ್ನು ಬಿಡಿಸಲಿಲ್ಲ, ಆದರೂ ಪರಿಸ್ಥಿತಿಯನ್ನು ಬಹಳ ಮಟ್ಟಿಗೆ ಸುಲಭಗೊಳಿಸಿದವು ಬೇಸಾಯಗಾರಜಂಗುಳಿಯ ವಿರೋಧದ ತೀಕ್ಷ್ಣತೆಯನ್ನು ನಿವಾರಿಸಿದುವು, ಮತ್ತು ನಮ್ಮ ವಿಸ್ತಾರತರ ಸಂಗ್ರಾಮದ ದೃಷ್ಟಿಯಿಂದ ಆ ಕ್ಷಣದಲ್ಲಿ ನಮ್ಮನ್ನು ದುರ್ಬಲ ಪಡಿಸಿದುವು ಆ ಸಂಗ್ರಾಮವು ಸಂಯುಕ್ತ ಪ್ರಾಂತಗಳ ಮುನ್ನತ್ತು ನಲವತ್ತು ಸಾವಿರ ಬೇಸಾಯ ಗಾರರಿಗೆ ಕಷ್ಟಾನುಭವವನ್ನು ತಂದಿತಲ್ಲದೆ ಅನೇಕರು ಅದರಿಂದ ಸಂಪೂರ್ಣವಾಗಿ ಹಾಳುಮಾಡಲ್ಪಟ್ಟರು ಆದರೆ ಆ ಸಂಗ್ರಾಮದ ಒತ್ತಾಯವು, ಆಗ ಇದ್ದ ವ್ಯವಸ್ಥೆ ಯಲ್ಲಿ ಎಷ್ಟು ಹೆಚ್ಚಿನ ಉತ್ತಾರಗಳು ಸಾಧ್ಯವಾಗಿದ್ದುವೋ ಅಷ್ಟನ್ನೂ ಲಕ್ಷಾಂತರ ಬೇಸಾಯಗಾರರಿಗೆ ದೊರಕಿಸಿತು, ಮತ್ತು (ಶಾಸನ ಭಂಗ ಚಳವಳಿಯ ಮತ್ತು ಅದರ ಶಾಖೆಗಳ ಪರಿಣಾಮಗಳನ್ನು ಬಿಟ್ಟು) ಅವರನ್ನು ಭಯಾನಕವಾದ ತಿಪ್ಪಲುವಾಟ ನಿಂದ ಉಳಿಸಿತು ಈ ತಾತ್ಕಾಲಿಕ ಕ್ಷುಲ್ಲಕ ಲಾಭಗಳು ಬೇಸಾಯಗಾರರಿಗೆ ಹೆಚ್ಚು ಫಲಿತಾರ್ಥವಾಗುವುದಿಲ್ಲ! ಆದರೆ ಅವು ದೊರತಿದ್ದ ಮಟ್ಟಿಗೆ ಹೇಳುವುದಾದರೆ, ಪ್ರಾಯಿಕವಾಗಿ ಸಂಯುಕ್ತ ಪ್ರಾಂತ ಕಾಂಗ್ರೆಸ್ ಸಮಿತಿಯು, ಬೇಸಾಯಗಾರಜಂಗುಳಿಯ ಪರವಾಗಿ ಮಾಡಿದ ಎಡೆಬಿಡದ ಪ್ರಯತ್ನಗಳ ಪರಿಣಾಮವೇ ಕಾರಣ ಎಂಬುದರಲ್ಲಿ ನನಗೆ ಯಾವ ಸಂದೇಹವೂ ಇಲ್ಲ ಬೇಸಾಯಗಾರಜಂಗುಳಿಸಾಮಾನ್ಯವು ತಾತ್ಕಾಲಿಕವಾಗಿ ಪ್ರಯೋಜನ ಹೊಂದಿತು ಆದರೆ ಅವರ ಪೈಕಿ ಧೀರಶ್ರೇಷ್ಠರು ಸಂಗ್ರಾಮದಲ್ಲಿ ಸತ್ತುಹೋಗಿದ್ದರು

೧೯೩೧ ರ ಡಿಸೆಂಬರಿನಲ್ಲಿ, ಸಂಯುಕ್ತ ಪ್ರಾಂತ ವಿಶೇಷ ಆರ್ಡಿನೆನ್ಸು ಪ್ರಕಟವಾದಾಗ ಅದರೊಂದಿಗೆ ಟಿಪ್ಪಣಿ ರೂಪದ ಹೇಳಿಕೆಯೊಂದು ಇದ್ದಿತು ಈ ಹೇಳಿಕೆಯೂ ಇತರ ಆರ್ಡಿನೆನ್ಸುಗಳೊಂದಿಗೆ ಕೂಡಿದ್ದ ಹೇಳಿಕೆಗಳೂ ಪ್ರಚಾರಕಾರ್ಯಕ್ಕನುವಾಗುವ ಅನೇಕ ಅರೆದಿಟಗಳನ್ನೂ ಸಟೆಗಳನ್ನೂ ಒಳಗೊಂಡಿದ್ದುವು ಅವೆಲ್ಲವೂ ಮೊದಮೊದಲ ಸುಳ್ಳುಕೂಗಿನ ಭಾಗವಾಗಿತ್ತು ಅವುಗಳಿಗೆ ಉತ್ತರವನ್ನು ಕೊಡುವುದಕ್ಕಾಗಲಿ

ಅವುಗಳ ಕಣ್ಣು ಕುಕ್ಕುವ ತಪ್ಪುಗಳಿಗೆ ಅಡ್ಡ ಸುಡಿಯುವುದಕ್ಕಾಗಲಿ ನಮಗೆ ಅವಕಾಶವೇ ಇರಲಿಲ್ಲ. ಸೆರ್ವಾನಿಯವರ ಮೇಲೆ ತಪ್ಪು ಹೊರಿಸುವ ಒಂದು ವಿಶೇಷವಾಗಿ ಎದ್ದುಕಾಣುವ ಪ್ರಯತ್ನವು, ದಸ್ತಗಿರಿಯಾಗುವ ಮುಂಚೆ ಅವರಿಂದ ನೇರ್ಪಡಿಸಲ್ಪಟ್ಟಿತು. ಸರಕಾರದ ಈ ಅನೇಕ ಹೇಳಿಕೆಗಳೂ ಕ್ಷಮಾಯಾಚನೆಗಳೂ ಓದಲು ಕೌತುಕವಾಗಿದ್ದುವು. ಸರಕಾರವು ಹೇಗೆ ಬೆಬ್ಬಳುಹೋಗಿತ್ತೆಂಬುದನ್ನೂ ಅದರ ಧೃತಿಯು ಹೇಗೆ ಕುಗ್ಗಿಹೋಗಿತ್ತೆಂಬುದನ್ನೂ ಅವು ತೋರಿಸಿದುವು. ಒಮ್ಮೆ ಸ್ಪೈಯ್ನಿನ ಬೂರ್ಬಾನ್ ವಂಶದ ಮೂರನೆಯ ಚಾರ್ಲ್ಸ್ ತನ್ನ ರಾಜ್ಯದಿಂದ ಜೆಸೂಟ್‌ರನ್ನು ದೇಶಭ್ರಷ್ಟರನ್ನಾಗಿ ಮಾಡಿದ ರಾಜನಿರೂಪವನ್ನು ನಾನು ಓದಿದಾಗ, ತಕ್ಷಣವೇ ಭಾರತದಲ್ಲಿ ಬ್ರಿಟಿಷ್ ಸರಕಾರದ ಈ ನಿರೂಪಗಳನ್ನೂ ಆರ್ಡಿನೆನ್ಸುಗಳನ್ನೂ ಅದು ಅವಕ್ಕೆ ಕೊಟ್ಟ ಕಾರಣಗಳನ್ನೂ, ಸಾಮ್ಯದ ಒತ್ತಾಯದಿಂದ ಜ್ಞಾಪಿಸಿಕೊಂಡೆ. ೧೭೬೭ ರ ಫೆಬ್ರವರಿಯಲ್ಲಿ ಪ್ರಸಿದ್ಧವಾದ ಈ ರಾಜನಿರೂಪದಲ್ಲಿ ಅರಸರು ತಮ್ಮ ಕಾರ್ಯವನ್ನು ಹೀಗೆ ಸಮರ್ಥಿಸಿಕೊಂಡರು: "ನನ್ನ ಪ್ರಜೆಗಳಲ್ಲಿ ವಶ್ಯತೆ, ಪ್ರಶಾಂತತೆ ಮತ್ತು ನ್ಯಾಯಗಳನ್ನು ನೆಲೆಗೊಳಿಸುವ ನನ್ನ ಕರ್ತವ್ಯಕ್ಕೆ ಸಂಬಂಧಿಸಿದ ಅತ್ಯಂತ ತೀವ್ರ ಕಾರಣಗಳಿಂದ, ಮತ್ತು ನನ್ನ ರಾಜನ್ಯ ಹೃದಯದಲ್ಲಿ ಇಟ್ಟುಕೊಂಡಿರುವ ಅಸವಸ, ನ್ಯಾಯಬದ್ಧವಾದ ಮತ್ತು ಅಗತ್ಯದ ಕಾರಣಗಳಿಂದ."

ಆದ್ದರಿಂದ, ಸ್ವತಸ್ಸಿದ್ಧವಾಗಿದ್ದರೂ, ಆರ್ಡಿನೆನ್ಸುಗಳ ನಿಜವಾದ ಕಾರಣವು ವೈಸ್‌ರಾಯರ ಹೃದಯದಲ್ಲಿಯೋ ಇಲ್ಲವೆ ಅವರ ಮಂತ್ರಾಲೋಚಕರ ಸಾಮ್ರಾಜ್ಯತತ್ವವಾದಿ ಹೃದಯಗಳಲ್ಲಿಯೋ ಬಂಧಿತವಾಗಿದ್ದುವು. ಅಧಿಕಾರಯುತವಾಗಿ ಕೊಡಲ್ಪಟ್ಟ ಕಾರಣಗಳು ಭಾರತದಲ್ಲಿ ಬ್ರಿಟಿಷ್ ಸರಕಾರವು ಸಂಪೂರ್ಣಗೊಳಿಸುತ್ತಿದ್ದ ಪ್ರಚಾರಕಾರ್ಯದ ನವೀನ ರೀತಿಯನ್ನು ಅರ್ಥಮಾಡಿಕೊಳ್ಳಲು ಸಹಾಯಮಾಡಿದುವು. ಅನೇಕ ಅಸತ್ಯ ಕಥನಗಳನ್ನೊಳಗೊಂಡಿದ್ದ ಅದರಲ್ಲಿಯೂ ವಿಶೇಷವಾಗಿ, ಬೇಸಾಯಗಾರಜಂಗುಳಿಗೆ ಅಷ್ಟೊಂದು ಪೆಟ್ಟು ಕೊಟ್ಟ ಧಾರಣೆವಾಸಿಗಳ ಇಳಿತಕ್ಕೆ ಕಾಂಗ್ರೆಸ್ಸೇ ಕಾರಣವೆಂದು ಧ್ವನಿಗೊಟ್ಟ ಅರ್ಧ ಅಧಿಕಾರಯುತ ಕೈಪಿಡಿಗಳೂ ಕೈಚೀಟಿಗಳೂ ಗ್ರಾಮಾಂತರ ಕ್ಷೇತ್ರಗಳಲ್ಲೆಲ್ಲಾ ವಿಸ್ತಾರವಾಗಿ ಹಂಚಲ್ಪಡುತ್ತಿದ್ದುವೆಂದು ಕಲವು ತಿಂಗಳುಗಳಾದಮೇಲೆ ನನಗೆ ತಿಳಿಯಿತು. ಇಡೀ ಜಗತ್ತಿನ ಧಾರಣೆವಾಸಿಯನ್ನು ಇಳಿಸಿಬಿಡಬಲ್ಲ ಕಾಂಗ್ರೆಸ್ಸಿನ ಶಕ್ತಿಗೆ ಇದು ದೊಡ್ಡ ಕಾಣಿಕೆ! ಆದರೆ ಕಾಂಗ್ರೆಸ್ಸಿನ ಪ್ರತಿಷ್ಠೆಯು ಕುಗ್ಗಲಿ ಎಂಬ ಆಕಾಂಕ್ಷೆಯಿಂದ, ಸಟೆಯು ಎಡೆಬಿಡದೆ ಅತಿಶ್ರದ್ಧೆಯಿಂದ ಹರಡಲ್ಪಟ್ಟಿತು.

ಇವೆಲ್ಲವೂ ಇದ್ದರೂ, ಸ. ಪ್ರಾ. ಮುಖ್ಯ ಜಿಲ್ಲೆಗಳಲ್ಲಿ, ಶಾಸನಭಂಗ ಚಳವಳಿಯ ಕರೆಗೆ—ಇದು ನ್ಯಾಯವಾದ ಗುತ್ತಿಗೆ ಮತ್ತು ಉತ್ತಾರಗಳ ಕಚ್ಚಾಟದೊಂದಿಗೆ ಅನಿವಾರ್ಯವಾಗಿ ಸೇರಿಹೋಗುತ್ತಿತ್ತು—ಬೇಸಾಯಗಾರರಿಂದ ಬಂದ ಮಾರ್ದನಿಯು

ಸೊಗಸಾಗಿತ್ತು. ೧೯೩೦ ರಲ್ಲಿದ್ದುದಕ್ಕಿಂತ ಈ ಸಾರ್ದನಿಯು ವಿಸ್ತಾರವಾಗಿಯೂ ಹೆಚ್ಚು ಶಿಸ್ತಿನಿಂದ ಕೂಡಿಯೂ ಇತ್ತು. ಮೊದಲಾಗುತ್ತಿದ್ದಂತೆಯೇ ಇದನ್ನು ಕುರಿತು ಸೌಶೀಲ್ಯವಿತ್ತು. ರಾಯ ಬರೇಲಿ ಜಿಲ್ಲೆಯ ಬಕುಲಿಯ ಎಂಬ ಹಳ್ಳಿಯೊಂದಕ್ಕೆ ಪೊಲೀಸ್ ಪಡೆಯೊಂದು ಕೊಟ್ಟ ಭೇಟಿಯ ಸೋಜಿಗದ ಕಥೆಯೊಂದು ನಮಗೆ ತಿಳಿಯಿತು. ಕಂದಾಯವನ್ನು ಕೊಡದೆ ಇದ್ದುದರಿಂದ ಆಸ್ತಿಪಾಸ್ತಿಗಳನ್ನು ಜಪ್ತಿ ಮಾಡಲು ಅವರು ಹೋಗಿದ್ದರು. ಹಳ್ಳಿಯು ತಕ್ಕ ಮಟ್ಟಿಗೆ ಊರ್ಜಿತ ವಾಗಿತ್ತು, ಮತ್ತು ಅದರ ನಿವಾಸಿಗಳು ಕೊಂಚಮಟ್ಟಿನ ಎದೆಗಾರರು. ಕಂದಾಯದ ವಸೂಲುಗಾರರನ್ನೂ ಪೊಲೀಸರನ್ನೂ ಅತ್ಯಂತ ವಿನಯದಿಂದ ಸ್ವಾಗತಿಸಿ, ಮನೆಗಳ ಎಲ್ಲ ಬಾಗಿಲುಗಳನ್ನೂ ತೆರೆದು ಹಾಕಿ, ಅವರು ಎಲ್ಲಿಗೆ ಬೇಕಾದರೆ ಅಲ್ಲಿಗೆ ಹೋಗಬಹುದೆಂದು ಬಿನ್ನವಿಸಿದರು. ಕೆಲವು ದನಕರುಗಳು, ಇತ್ಯಾದಿಗಳ ಜಪ್ತಿಗಳಾದುವು. ಅನಂತರ ಆಳುದ್ದವಿದ್ದವರು ಗೇಣುದ್ದವಾಗಿಬಿಟ್ಟು ಇಳಿಮೊಗದಿಂದ ಹೈದೆಗೆಯುತ್ತಿದ್ದ ಪೊಲೀಸರಿಗೂ ಕಂದಾಯದ ವಸೂಲಿಗಾರರಿಗೂ ಹಳ್ಳಿಯವರು ಪಾನ್ ಸುಪಾರಿಯನ್ನಿತ್ತು ಬೀಳ್ಕೊಟ್ಟರು! ಆದರ ಇದು ಅಪೂರ್ವವೂ ಅಸಮಾನ್ಯವೂ ಆದ ಘಟನೆ. ಶೀಘ್ರದಲ್ಲೇ ಹಾಸ್ಯಾಭಿರುಚಿಯಾಗಲಿ, ಔದಾರ್ಯವಾಗಲಿ, ಮಾನವೀಯ ಕಾರುಣ್ಯವಾಗಲಿ ಕಾಣಬರುತ್ತಿರಲಿಲ್ಲ. ಬಡಪಾಯಿ ಬಕುಲಿಯವು ತನ್ನ ಸ್ಥೈರ್ಯಕ್ಕಾಗಿ ತನ್ನ ಹಾಸ್ಯ ಪ್ರವೃತ್ತಿಯಿಂದ ದಂಡನೆಯನ್ನು ತಪ್ಪಿಸಿಕೊಳ್ಳಲಾಗಲಿಲ್ಲ.

ಈ ಜಿಲ್ಲೆಗಳಲ್ಲಿ ಬಹಳ ತಿಂಗಳುಗಳ ಕಾಲ ಕಂದಾಯವು ರೈತರಿಂದ ಹಿಡಿದಿಡಲ್ಪಟ್ಟಿತ್ತು, ಮತ್ತು ಪ್ರಾಯಃ ಬೇಸಿಗೆಯ ಆರಂಭದ ಹೊತ್ತಿಗೇ ವಸೂಲಿಗಳು ಸ್ವಲ್ಪವಾಗಿ ಜಿನುಗಲು ಮೊದಲಿಟ್ಟುವು. ಹೇಗೂ ಬಹಳ ಜನರ ದಸ್ತಗಿರಿಗಳೇನೋ ಆಯಿತು. ಆದರ ಸರಕಾರದ ನೀತಿ ಹಾಗಿರದಿದ್ದರೂ ಅದು ನಡೆಯಿತು. ವಿಶೇಷವಾಗಿ ದಸ್ತಗಿರಿಗಳು ವಿಶೇಷ ಕಾರ್ಯಕರ್ತರಿಗೂ ಹಳ್ಳಿಯ ಮುಂದಾಳುಗಳಿಗೂ ಮಾತ್ರ ಅನ್ವಯಿಸಿತ್ತು. ಉಳಿದವರೆಲ್ಲರಿಗೂ ಸುಮ್ಮನೆ ಏಟುಗಳು ಬೀಳುತ್ತಿದ್ದುವು. ಸೆರಮನೆ ಮತ್ತು ಗುಂಡಿನೇಟುಗಳಿಗಿಂತ ಏಟುಗಳು ಮೇಲೆಂದು ತಿಳಿಯಲಾಗಿತ್ತು. ಆವಶ್ಯಕವಾದಾಗಲೆಲ್ಲ ಪುನಃ ಪ್ರಯೋಗ ಮಾಡಬಹುದಾಗಿತ್ತು, ಮತ್ತು ಇದು ಎಲ್ಲೋ ದೂರದ ಗ್ರಾಮಾಂತರಗಳಲ್ಲಿ ನಡೆದರೆ ಹೊರಗಿನ ಗಮನವನ್ನು ಸೆಳೆಯುತ್ತಿರಲಿಲ್ಲ, ಅಲ್ಲದೆ ಏರುತ್ತಿದ್ದ ಸೆರೆಯಾಳುಗಳ ಸಂಖ್ಯೆಗೆ ಇನ್ನಷ್ಟು ಸೇರುತ್ತಿರಲಿಲ್ಲ. ಉಚ್ಚಾಟನೆಗಳೂ ಜಪ್ತಿಗಳೂ ಆಸ್ತಿಪಾಸ್ತಿ ಮತ್ತು ದನ ಕರುಗಳ ಮಾರಾಟಗಳೂ ಬಹಳವಾಗಿ ನಡೆದುಹೋದುವು. ಬೇನಾಯುಗಾರರು ತಾವು ಪಡೆದಿದ್ದ ಅಲ್ಪಸ್ವಲ್ಪವೂ ಕಿತ್ತುಕೊಳ್ಳಲ್ಪಟ್ಟು ಅತಿಕಡಿಮೆ ಬೆಲೆಗೆ ಮಾರಾಟವಾಗುತ್ತಿದ್ದುದನ್ನು ನೋಡುತ್ತಿದ್ದರು.

ದೇಶದ ಇತರ ಕಡೆಗಳಲ್ಲಿದ್ದ ಇನ್ನಿತರ ಅನೇಕ ಕಟ್ಟಡಗಳಂತೆಯೇ ಸ್ವರಾಜ್ಯ ಭವನವೂ, ಸರಕಾರದಿಂದ ಜಪ್ತಿ ಮಾಡಲ್ಪಟ್ಟಿತ್ತು. ಸ್ವರಾಜ್ಯ ಭವನದಲ್ಲಿ ಗೆಯ್ಮೆ

ನಡೆಸುತ್ತಿದ್ದ ಕಾಂಗ್ರೆಸ್ ಆಸ್ಪತ್ರೆಯ ಬೆಲೆಬಾಳುವ ಎಲ್ಲ ಉಪಕರಣಗಳು ಮತ್ತು ಇತರ ಸಾಮಾನುಗಳು ಸಹ ಜಪ್ತಿಯಾದುವು ಕೆಲವು ದಿನಗಳ ಮಟ್ಟಿಗೆ ಆಸ್ಪತ್ರೆಯು ಸಂಪೂರ್ಣವಾಗಿ ಕೆಲಸವನ್ನು ನಿಲ್ಲಿಸಿಬಿಟ್ಟಿತು ಆದರೆ ಬಳಿಯಿದ್ದ ಉಪವನವೊಂದರಲ್ಲಿ ಬಯಲು ಔಷಧಾಲಯವೊಂದು ಸ್ಥಾಪಿತವಾಯಿತು ಆಮೇಲೆ ಆಸ್ಪತ್ರೆಯು—ಎಂದರೆ, ಔಷಧಾಲಯವು—ಸ್ವರಾಜ್ಯ ಭವನಕ್ಕೆ ತಗುಲಿಕೊಂಡಿದ್ದ ಸಣ್ಣ ಮನೆಯೊಂದಕ್ಕೆ ಸಾಗಿಸಲ್ಪಟು, ಅಲ್ಲಿ ಹೆಚ್ಚುಕಡಿಮೆ ಎರಡೂವರೆ ವರ್ಷಗಳ ಕಾಲ ಕೆಲಸ ಮಾಡಿತು

ಆದಾಯ ತೆರಿಗೆಯ ದೊಡ್ಡದೊಂದು ಮೊತ್ತವನ್ನು ನಾನು ಕೊಡಲು ನಿರಾಕರಿಸಿದ್ದುದರಿಂದ ನಮ್ಮ ವಾಸಗೃಹವಾದ ಆನಂದ ಭವನವೂ ಸರಕಾರದಿಂದ ವಶಪಡಿಸಿಕೊಳ್ಳಲ್ಪಟ್ಟಿತೆಂಬುದಾಗಿ ಮಾತುಕತೆಗಳಾಗುತ್ತಿದ್ದುವು ೧೯೩೦ ರಲ್ಲಿ ತಂದೆಯವರ ಆದಾಯದ ಮೇಲೆ ಈ ತೆರಿಗೆಯು ಗೊತ್ತು ಮಾಡಲ್ಪಟ್ಟಿದ್ದಿತು ಮತ್ತು ಶಾಸನಭಂಗ ಚಳವಳಿಯ ಪ್ರಯುಕ್ತ ಆ ವರ್ಷ ಅವರು ಅದನ್ನು ಕೊಟ್ಟಿರಲಿಲ್ಲ ೧೯೩೧ ರಲ್ಲಿ ದೆಹಲಿ ಒಪ್ಪಂದವಾದ ಮೇಲೆ, ಆದಾಯ ತೆರಿಗೆಯ ಅಧಿಕಾರಿಗಳೊಡನೆ ತತ್ಸಂಬಂಧವಾಗಿ ಚರ್ಚಿಸಿದ್ದೆ ಆದರ ಕೊನೆಗೆ ಕೊಡಲು ಒಪ್ಪಿದೆ, ಹಾಗೂ ಒಂದು ಕಂತನ್ನೂ ಕಟ್ಟಿದೆ ಆಗತಾನೇ ಆರ್ಡಿನೆನ್ಸುಗಳು ಬಂದುವು ಮತ್ತು ಇನ್ನು ಕೊಡಲೇಕೂಡದೆಂದು ನಿಶ್ಚಯಿಸಿದೆ ಗುತ್ತಿಗೆ ಕಂದಾಯಗಳನ್ನು ಹಿಡಿದಿಡಿ ಎಂದು ಬೇಸಾಯಗಾರರಿಗೆ ಹೇಳಿ, ನಾನು ಮಾತ್ರ ಆದಾಯ ತೆರಿಗೆಯನ್ನು ಕೊಡುವುದು ಸಂಪೂರ್ಣವಾಗಿ ತಪ್ಪೆಂದೂ ಅಸ್ವಾಭಾವಿಕ ವ್ಯವಹಾರಣೆಯೆಂದೂ ನನಗೆ ತೋರಿತು ಆದುದರಿಂದ ಸರಕಾರದವರಿಂದ ನಮ್ಮ ಮನೆಯು ಜಪ್ತಿ ಮಾಡಲ್ಪಡುವುದೆಂದು ನಿರೀಕ್ಷಿಸಿದೆ ಈ ಭಾವನೆಯೆಂದರೆ—ನಮ್ಮ ತಾಯಿಯು ಹೊರದೂಡಲ್ಪಡುವ ಪ್ರಸಂಗವು ಒದಗುವುದು, ನಮ್ಮ ಗ್ರಂಥಗಳು, ಕಾಗದಪತ್ರಗಳು, ಸರಕುಗಳು, ಚರಸ್ವತ್ತುಗಳು ಮತ್ತು ಆತ್ಮೀಯವಾದ ಭಾವಬೋಧಕವಾದ ಕಾರಣಗಳಿಗಾಗಿ ನಾವು ಬೆಲೆ ಕಟ್ಟಿದ್ದ ಅನೇಕ ವಸ್ತುಗಳು ಅಪರಿಚಿತ ಕೈಗಳಿಗೆ ಹೋಗುವುದು ಮತ್ತು ಪ್ರಾಯಶಃ ಕಳೆದುಹೋಗುವುದು ಮತ್ತು ನಮ್ಮ ನಾಡಗುಡಿಯು ಕಿತ್ತೆಸೆಯಲ್ಪಟ್ಟು, ಅದರ ಸ್ಥಳದಲ್ಲಿ 'ಯೂನಿಯನ್ ಜ್ಯಾಕ್' ನ್ನು ಏರಿಸುವುದು—ಇವಕ್ಕಾಗಿ ಆ ಭಾವನೆಯು ನನಗೆ ತೀರ ಅನಿಷ್ಟವಾಯಿತು ಅದೇ ಸಮಯದಲ್ಲಿಯೇ ಮನೆಯನ್ನು ಕಳೆದುಕೊಳ್ಳುವ ಭಾವನೆಯು ನನ್ನ ಮನಸ್ಸಿಗೆ ರಂಜಿಸಿತು ಅಬಾಧ್ಯಪಡಿಸಲ್ಪಟ್ಟ ಬೇಸಾಯಗಾರಜಂಗುಳಿಯ ಬಳಿಗೆ ನನ್ನನ್ನು ಇದು ತರುವುದೆಂದೂ ಅವರನ್ನು ಎದೆಗೊಳಿಸುವುದೆಂದೂ ಭಾವಿಸಿದೆ ನಮ್ಮ ಚಳವಳಿಯ ದೃಷ್ಟಿಯಿಂದ ಅದು ನಿಜವಾಗಿಯೂ ಅಪೇಕ್ಷಣೀಯವಾದ ವಿಷಯವಾಗಿತ್ತು ಆದರೆ ಸರಕಾರವು ಅನ್ಯಥಾ ನಿರ್ಣಯಿಸಿತು. ಪ್ರಾಯಶಃ ನಮ್ಮ ತಾಯಿಗೆ ದಾಕ್ಷಿಣ್ಯ ತೋರಿಸುವ ಕಾರಣದಿಂದಲೋ, ನಮ್ಮ ಶಾಸನ ಭಂಗ ಚಳವಳಿಗೆ ಗತಿಶಕ್ತಿಯೊಂದನ್ನು ಅದು

ನೀಡುವುದೆಂದು ಅವರು ಸರಿಯಾಗಿಯೇ ಎಣಿಸಿದ ಕಾರಣದಿಂದಲೋ, ಮನೆಯು ಸುದ್ದಿಗೆ ಬರಲಿಲ್ಲ ಹಲವು ತಿಂಗಳುಗಳಾದ ಮೇಲೆ ಆದಾಯ ತೆರಿಗೆಯನ್ನು ಕೊಡದೇ ಇದ್ದುದಕ್ಕಾಗಿ, ನನ್ನ ಕೆಲವು ಚಿಲ್ಲರೆ ರೈಲ್ವೆ ಷೇರುಗಳು ಗೊತ್ತುಹಚ್ಚಲ್ಪಟ್ಟು ಜಪ್ತಿ ಮಾಡಲ್ಪಟ್ಟವು ನನ್ನ ಮತ್ತು ನನ್ನ ಭಾವಂದಿರ ಮೋಟಾರು ಕಾರುಗಳು ಹಿಂದೆಯೇ ಜಪ್ತಿಯಾಗಿ ವಿಕ್ರೀತವಾಗಿದ್ದುವು

ಈ ಆದಿಮಾಸಗಳ ಒಂದು ಪ್ರಸಕ್ತಿಯು ನನ್ನನ್ನು ಬಹುವಾಗಿ ನೋಯಿಸಿತು ಅನೇಕ ಪೌರಸಭೆಗಳು, ಸಾರ್ವಜನಿಕ ಸಂಸ್ಥೆಗಳು ಮತ್ತು ಅವರಲ್ಲಿಯೂ ಬಹು ಸಂಖ್ಯಾತ ಕಾಂಗ್ರೆಸ್ ಸದಸ್ಯರನ್ನು ಒಳಗೊಂಡಿತ್ತೆಂಬುದಾಗಿ ಹೇಳಲಾಗಿದ್ದ ಕಲ್ಕತ್ತಾ ಪೌರಸಭೆಯು ನಮ್ಮ ನಾಡಗುಡಿಯನ್ನು ಎಳೆದು ಹಾಕಿದುದು ಆಜ್ಞೋಲ್ಲಂಘನೆ ಮಾಡಿದರೆ ತೀವ್ರ ಕಾರ್ಯಕ್ರಮವನ್ನು ಕೈಗೊಳ್ಳಲಾಗುವುದೆಂದು ಹೆದರಿಸಿದ ಸರಕಾರದ ಮತ್ತು ಪೊಲೀಸ್‌ರ ಒತ್ತಾಯದಿಂದ ಗುಡಿಯನ್ನು ಕೆಳಕ್ಕಿಳಿಸಲಾಯಿತು ಪ್ರಾಯಶಃ ಈ ಕಾರ್ಯಕ್ರಮವು ಪೌರಸಭೆಯ ಕೈಯನ್ನು ಕಟ್ಟಿಹಾಕಿಬಿಡುವುದು ಅಥವಾ ಅದರ ಸದಸ್ಯರನ್ನು ದಂಡಿಸುವುದು ಸ್ವಾರ್ಥಪೂರಿತ ಸಂಸ್ಥೆಗಳು ಅಂಜುಕುಳಿಗಳಾಗುವುದು ಸಹಜವೇ, ಅವರು ಮಾಡಿದಂತೆಯೇ ಮಾಡಬೇಕಾಗಿ ಬಂದುದು ಅನಿವಾರ್ಯವಾಗಿತ್ತು ಆದರೂ ಅದು ನೋಯಿಸಿತು ನಾವು ಪವಿತ್ರವೆಂದು ಭಾವಿಸಿದ್ದ ಅನೇಕಕ್ಕೆ ಆ ಧ್ವಜವು ಸಂಕೇತವಾಗಿತ್ತು ಮತ್ತು ಅದರ ನೆರಳಲ್ಲಿ ನಿಂತು ಅದರ ಗೌರವವನ್ನು ರಕ್ಷಿಸುವುದಾಗಿ ಅನೇಕ ಪ್ರತಿಜ್ಞೆಗಳನ್ನು ಮಾಡಿದ್ದೆವು ನಮ್ಮ ಕೈಗಳಿಂದಲೇ ಅದನ್ನು ಕಿತ್ತಿಳಿಸುವುದು ಅಥವಾ ನಮ್ಮ ಆಣತಿಯಿಂದ ಕಿತ್ತಿಳಿಸುವಂತೆ ಮಾಡುವುದು ಆ ಪ್ರತಿಜ್ಞೆಗೆ ಭಂಗವಾದಂತಲ್ಲದೆ, ಬಹುತರ ದೈವದ್ರೋಹದಂತೆಯೂ ಇತ್ತು ಏಕಕಾಲದಲ್ಲಿಯೇ ಅದು ಆತ್ಮಶಕ್ತಿಯ ಅಡಿಯಾಳುತನ, ಸತ್ಯದ ಅಪಲಾಪ, ಮೇಲ್ಮೆಯಾದ ಭೌತ ಶಕ್ತಿಯ ಕಣ್ಣೆದುರು ಅಸತ್ಯದ ಸ್ಥಿರೀಕರಣ, ಮತ್ತು ಈ ರೀತಿಯಲ್ಲಿ ಮಣಿದವರು ರಾಷ್ಟ್ರ ಮನೋಧರ್ಮದ ಶಿಸ್ತು ನೀತಿಗಳನ್ನು ಕುಗ್ಗಿಸಿದರು, ಮತ್ತು ಅದರ ಆತ್ಮಗೌರವನ್ನು ನೋಯಿಸಿದರು

ಅವರು ವೀರರಂತೆ ವರ್ತಿಸಿ ಬೆಂಕಿಯೊಳಕ್ಕೆ ನುಗ್ಗಬೇಕೆಂದು ನಿರೀಕ್ಷಿತವಾಗಿರಲಿಲ್ಲ ಚೂಣಿಯಲ್ಲಿದ್ದು ಕಾರಾಗೃಹವಾಸವನ್ನು ಅಥವಾ ಇತರ ಕಷ್ಟನಷ್ಟಗಳನ್ನು ಆಹ್ವಾನಿಸಲಿಲ್ಲವೆಂದು ಯಾರನ್ನಾದರೂ ತೆಗಳುವುದು ತಪ್ಪು ಮತ್ತು ಅವಿವೇಕ ಪ್ರತಿಯೊಬ್ಬನೂ ಹಲವು ಕರ್ತವ್ಯಗಳನ್ನೂ ಉತ್ತರವಾದಿತ್ವಗಳನ್ನೂ ವಹಿಸಿಕೊಳ್ಳಬೇಕಾಗಿದ್ದಿತು ಮತ್ತು ಅವನ ವಿಚಾರದಲ್ಲಿ ತೀರ್ಪು ಕೊಡಲು ಯಾರಿಗೂ ಅಧಿಕಾರವಿರಲಿಲ್ಲ ಹಿನ್ನೆಲೆಯಲ್ಲಿರುವುದು ಅಥವಾ ಕೆಲಸಮಾಡುವುದು ಒಂದು ಪ್ರಮೇಯ ಸತ್ಯವನ್ನು ಅಥವಾ ಯಾವುದನ್ನೊಬ್ಬನು ಸತ್ಯವೆಂದು ಮನಗಾಣುವನೋ ಅದನ್ನು

ಅಪಲಪಿಸುವುದು ಗಹನತರ ಪ್ರಮೇಯ ರಾಷ್ಟ್ರೀಯ ಯೋಗಕ್ಷೇಮಕ್ಕೆ ಪ್ರತಿಯಾಗಿ ಯಾವುದನ್ನಾದರೂ ಮಾಡಬೇಕಾದ ಪ್ರಮೇಯ ಒದಗಿದಾಗ, ಪೌರಸಭಾ ಸದಸ್ಯರು ತಮ್ಮ ಸ್ಥಾನಗಳಿಗೆ ರಾಜೀನಾಮೆ ಕೊಡುವುದು ಅವರ ಕೈಯಲ್ಲಿತ್ತು ಆದರೆ ಸರ್ವಸಾಮಾನ್ಯವಾಗಿ ಆಯಾ ಸ್ಥಳಗಳಲ್ಲಿರುವುದೇ ಲೇಸೆಂದುಕೊಂಡರು

‘ಆದರಲರ್ಗಳಿಕ್ರಯೊಳಾರಡಿಗಳ್ ಮೊರೆಯುದಿಹುವೆಂತಿರಗಿ
ಪ್ಪಿರ್ಗರೆಲ್ಲರ್ ನೆಮ್ಮದಿಯ ನೆಲೆಗೇರಿ ಮಾಗುವಡುವರ್ !”*

ತನ್ನನ್ನು ನುಂಗಿಬಿಡುವುದಾಗಿ ಹೆದರಿಸುತ್ತ ಹೌವ್ವನೊದಗುವ ಸಂದುಕಟ್ಟೊಂದರಲ್ಲಿ ಒಬ್ಬನ ನಡತೆಯನ್ನು ಟೀಕಿಸುವುದು ಸರಿಯಲ್ಲದಿರಬಹುದು ಮಹಾಯುದ್ಧವು ಪುನಃ ಪುನಃ ನಿದರ್ಶಿಸಿದಂತೆ ಗಂಡಾಡಿಗಳ ಎದೆಯು ಕೂಡ ಕೆಲವು ಸಮಯಗಳಲ್ಲಿ ಕುಂದುವುದು ಇನ್ನೂ ಹಿಂದೆಯೇ ೧೯೧೨ ರಲ್ಲಿ ‘ಟೈಟ್ಯಾನಿಕ್’ ನೌಕೆಯ ಭೀಕರ ದುರ್ಘಟನೆಯಲ್ಲಿ ಭೀರುತನವೊಂದಿಗೆ ಜೊತೆಗೂಡಿಸಲಾಗದ ಪ್ರಖ್ಯಾತ ವ್ಯಕ್ತಿಗಳು ಕೂಡ ನಾವಿಕರಿಗೆ ಲಂಚಕೊಟ್ಟು ಇತರರನ್ನು ಮುಳುಗಬಿಟ್ಟು ತಪ್ಪಿಸಿಕೊಂಡರು ಮೊನ್ನೆಮೊನ್ನೆ ‘ಮಾರೋ ಕ್ಯಾಸಲ್’ ಎಂಬ ನೌಕೆಗೆ ಬಿದ್ದ ಬೆಂಕಿಯು ಅಪಕೀರ್ತಿಕರ ಪರಿಸ್ಥಿತಿಗಳನ್ನು ರಟ್ಟುಮಾಡಿತು ಆದ್ಯಕಾಲಿಕೋಪಜ್ಞೆಗಳು ವಿವೇಚನೆಯನ್ನೂ ಸಂಯಮವನ್ನೂ ಮೇಲ್ಗೊಂಡಾಗ ಒಬ್ಬನು ಹೇಗೆ ನಡೆದುಕೊಳ್ಳುವನೆಂಬುದನ್ನು ಹೇಳಲರಿದು ಆದುದರಿಂದ ನಾವು ದೂಷಿಸಲಾಗದು ಆದರೂ ಸಚೂಟಿ ನಡೆಯಿಂದ ಹೊರಳುವುದನ್ನು ತಪ್ಪಿಸುವುದಕ್ಕೆ ಮತ್ತು ರಾಷ್ಟ್ರ ನೌಕೆಯ ಚುಕ್ಕಾಣಿಯನ್ನು ವಿಷಮ ಸಂದರ್ಭಗಳೊದಗಿದಾಗ ಅದುರುವ ಮತ್ತು ಉಡುಗುವ ಕೈಗಳಿಗೆ ಬಿಡದಂತೆ ನೋಡಿಕೊಳ್ಳುವುದಕ್ಕೆ ನಮಗೆ ಅದು ಅಡ್ಡಿಯಾಗಬಾರದು ಈ ಕಾರ್ಯವಿಪತ್ತಿಯನ್ನು ಸಮರ್ಥಿಸುವ ಪ್ರಯತ್ನವೂ, ಅದನ್ನು ಸಚೂಟಿ ನಡೆಯೆಂದು ಕರೆಯುವುದೂ ಇನ್ನೂ ಅವಿವೇಕ ಈ ಕಾರ್ಯವಿಪತ್ತಿಗಿಂತ ಅದು ಖಂಡಿತವಾಗಿಯೂ ಮಹಾಪರಾಧ

ವಿರುದ್ಧ ಶಕ್ತಿಗಳ ಪರಸ್ಪರ ಸಂಗ್ರಾಮಗಳೆಲ್ಲ ಬಹುತರ ಮಾನಸಿಕ ಶಿಸ್ತು ನೀತಿಗಳನ್ನೂ ಧೃತಿಯನ್ನೂ ಅವಲಂಬಿಸುವುವು ಅತಿ ರಕ್ತಪಾತವಾಗುವ ಯುದ್ಧವು ಕೂಡ ಅವುಗಳನ್ನೇ ಅವಲಂಬಿಸುವುವು, “ಜಯಾಪಜಯ ನಿರ್ಧಾರಸಮಯದಲ್ಲಿ ಯುದ್ಧಗಳನ್ನು ಕೈಗೂಡಿಸಿಕೊಳ್ಳುವುದು ಧೃತಿಯಿಂದ,” ಎಂದು ಮಾರ್ಷಲ್ ಫಾಷ್ ರವರು ಹೇಳಿದರು ಅಹಿಂಸಾತ್ಮಕ ಸಂಗ್ರಾಮದಲ್ಲಿ ಧೃತಿ ಮತ್ತು ಮಾನಸಿಕ ಶಿಸ್ತು ನೀತಿಗಳು ಇನ್ನೂ ಹೆಚ್ಚು ಆವಶ್ಯಕ ಮತ್ತು ಯಾವನಾದರೂ ಸರಿ ತನ್ನ ನಡೆ

* ಥಾಮಸ್ ಮೂರ್.

ಯಿಂದ ಆ ನೀತಿಗೆ ಕೆಡಕುಮಾಡುವುದರಿಂದ, ರಾಷ್ಟ್ರದ ಧೃತಿಯನ್ನು ಕುಗ್ಗಿಸುವುದರಿಂದ ಅವನು ಉದ್ದೇಶಕ್ಕೇ ತೀವ್ರಾಪಕಾರಮಾಡುತ್ತಾನೆ

ತಿಂಗಳುಗಳು ತಮ್ಮ ಒಳ್ಳೆಯ ಮತ್ತು ಕೆಟ್ಟ ಸುದ್ದಿಗಳ ಸುಂಕವನ್ನು ತರುತ್ತಾ ಕಳೆದವು ಮತ್ತು ನಾವೂ ನಮ್ಮ ನಮ್ಮ ಸೆರೆಮನೆಗಳಲ್ಲಿ ನಮ್ಮ ಜಡವಾದ ಮತ್ತು ಏಕತಾನದ ದೈನಂದಿನ ಜೀವನಕ್ಕೆ ಒಗ್ಗಿಕೊಂಡೆವು ರಾಷ್ಟ್ರೀಯ ಸಪ್ತಾಹವು ಬಂದಿತು—ಏಪ್ರಿಲ್ ೫ ರಿಂದ ೧೩ ರವರೆಗೆ—ಮತ್ತು ಅದು ಹಲವು ಅಸಾಮಾನ್ಯವಾದ ಘಟನೆಗಳನ್ನು ಕಾಣುವುದೆಂದು ನಾವು ಅರಿತಿದ್ದೆವು ನಿಜವಾಗಿಯೂ ಆಗ ಬಹಳ ನಡೆದುಹೋಯಿತು ಆದರೆ ನನಗಂತು ಪ್ರತಿಯೊಂದೂ ಒಂದು ಪ್ರಸಕ್ತಿಯ ಹಿಂದೆ ಒಂದರಂತೆ ಅಳಿಸಿಹೋಯಿತು ಅಲಹಾಬಾದಿನಲ್ಲಿ ನನ್ನ ತಾಯಿಯು ಭಾಗವಹಿಸಿದ ಒಂದು ಮೆರವಣಿಗೆಯು ಪೋಲೀಸ್‌ರಿಂದ ತಡೆಯಲ್ಪಟು, ಆಮೇಲೆ ಲಾಠಿಗಳಿಂದ ಪ್ರಹರಿಸಲ್ಪಟ್ಟಿತು ಮೆರವಣಿಗೆಯು ನಿಲ್ಲಿಸಲ್ಪಟಾಗ ಆಕೆಗಾಗಿ ಯಾರೊ ಒಬ್ಬರು ಕುರ್ಚಿಯೊಂದನ್ನು ತಂದು ಹಾಕಿದರು ಆಕೆಯು ದಾರಿಯಲ್ಲಿ ಮೆರವಣಿಗೆಯ ಚೂಣಿಯಲ್ಲಿ ಕುಳಿತುಕೊಂಡಿದ್ದಳು ಆಕೆಯನ್ನು ವಿಶೇಷ ರೀತಿಯಲ್ಲಿ ರಕ್ಷಿಸುತ್ತಿದ್ದವರು ಕೆಲವರು ನನ್ನ ಕಾರ್‍ಯದರ್ಶಿಯೊಡನೆ ದಸ್ತಗಿರಿ ಮಾಡಲ್ಪಟ್ಟು ಸಾಗಿಸಲ್ಪಟ್ಟರು ಅನಂತರ ಪೊಲೀಸರ ದಾಳಿ ನಡೆಯಿತು ನನ್ನ ತಾಯಿಯು ಕುರ್ಚಿಯಿಂದ ಕೆಳಕ್ಕೆ ತಳ್ಳಲ್ಪಟ್ಟು ಮೇಲಿಂದಮೇಲೆ ಕೋಲುಗಳಿಂದ ತಲೆಯ ಮೇಲೆ ಹೊಡೆಯಲ್ಪಟ್ಟಳು. ತಲೆಯಲ್ಲಿ ಒಡೆದ ಗಾಯವೊಂದರಿಂದ ನೆತ್ತರು ಹೊರ ಚೆಲ್ಲುತ್ತಿತ್ತು ಜ್ಞಾನತಪ್ಪಿ ಆಕೆಯು ಅಷ್ಟು ಹೊತ್ತಿಗೆ ಮೆರವಣಿಗಾರರನ್ನೂ ಸಾರ್ವಜನಿಕರನ್ನೂ ಓಡಿಸಿಬಿಟ್ಟಿದ್ದ ರಸ್ತೆಯ ಪಕ್ಕದಲ್ಲಿ ಬಿದ್ದಿದ್ದಳು ಸ್ವಲ್ಪ ಹೊತ್ತಿನ ಮೇಲೆ ಆಕೆಯನ್ನು ಪೊಲೀಸ್ ಅಧಿಕಾರಿಯೊಬ್ಬನು ತನ್ನ ಮೋಟಾರಿನಲ್ಲಿ ಆನಂದ ಭವನಕ್ಕೆ ಕರೆತಂದನು

ನನ್ನ ತಾಯಿಯು ಮರಣವಾದಳೆಂಬ ಸುಳ್ಳು ಸುದ್ದಿಯೊಂದು ಆ ರಾತ್ರಿ ಅಲಹಾಬಾದಿನಲ್ಲೆಲ್ಲಾ ಹರಡಿತು ಕೆರಳಿದ ಜನ ಸಂದಣಿಯು ಸೇರಿತು, ಶಾಂತಿ ಅಹಿಂಸೆಗಳನ್ನು ಮರೆತು ಪೊಲೀಸರ ಮೇಲೆ ಬಿದ್ದರು ಪೊಲೀಸರು ಗುಂಡುಗಳನ್ನು ಹಾರಿಸಿದರು, ತತ್ಪರಿಣಾಮವಾಗಿ ಕೆಲವರು ಮರಣಹೊಂದಿದರು

ಈ ಸುದ್ದಿಗಳೆಲ್ಲ, ಪ್ರಸಕ್ತಿ ನಡೆದ ಕೆಲವು ದಿನಗಳ ಮೇಲೆ ನನಗೆ ಬಂದಾಗ [ಏಕೆಂದರೆ ನಮಗೆ ವಾರಪತ್ರಿಕೆಯೊಂದು ಬರುತ್ತಿತ್ತು) ಕೃಶಳಾದ ನನ್ನ ವೃದ್ಧ ಮಾತೆಯು ನೆತ್ತರನ್ನು ಸುರಿಸುತ್ತ ಧೂಳಿಡಿದ ರಸ್ತೆಯಲ್ಲಿ ಬಿದ್ದಿರುವ ಭಾವನಾಚಿತ್ರವು ನನ್ನಲ್ಲಿ ಅಲೆಯಿತು ಮತ್ತು ನಾನಲ್ಲಿದ್ದಿದ್ದರೆ ಹೇಗೆ ವರ್ತಿಸುತ್ತಿದ್ದೆನೆಂದು ಶಂಕಿಸುತ್ತೇನೆ ನನ್ನ ಅಹಿಂಸಾತತ್ವವು ಎಲ್ಲಿಯವರೆಗೆ ನನಗೆ ಸಹಾಯಮಾಡುತ್ತಿತ್ತು?

ಬಹಳ ದೂರವಲ್ಲವೆಂದು ಅಳುಕುತ್ತೇನೆ ಏಕೆಂದರೆ ಹನ್ನೆರಡು ವರ್ಷಗಳಿಗಿಂತ ಹೆಚ್ಚಾಗಿ ಕಲಿಯಲು ಪ್ರಯತ್ನಪಡುತ್ತಿದ್ದ ದೀರ್ಘಪಾಠವನ್ನು ಆ ದೃಶ್ಯವು ಮರೆಯಿಸಿಬಿಡುತ್ತಿತ್ತು, ಮತ್ತು ವೈಯಕ್ತಿಕವಾಗಿಯಾಗಲಿ, ರಾಷ್ಟ್ರೀಯವಾಗಿಯಾಗಲಿ ಆಗಬಹುದಾದ ಯಾವ ಪರಿಣಾಮಗಳನ್ನೂ ನಾನು ಲೆಕ್ಕಿಸುತ್ತಿರಲಿಲ್ಲ

ಮೆಲ್ಲಮೆಲ್ಲನೆ ಆಕೆಗೆ ವಾಸಿಯಾಯಿತು, ಮತ್ತು ಮರುತಿಂಗಳು ನನ್ನನ್ನು ಬರೇಲಿ ಸೆರೆಮನೆಯಲ್ಲಿ ನೋಡಬಂದಾಗ ಆಕೆಯು ಇನ್ನೂ ಬಟ್ಟೆಯ ಪಟ್ಟಿಯನ್ನು ಕಟ್ಟಿಕೊಂಡಿದ್ದಳು ಆದರೂ ನಮ್ಮ ಸ್ವಯಂಸೇವಕ ಹುಡುಗ ಹುಡುಗಿಯರೊಂದಿಗೆ ಭಾಗವಹಿಸಿ ಬೆತ್ತ, ಲಾಠಿ ಪ್ರಹಾರಗಳನ್ನು ತಿನ್ನುವ ಸುಸಂದರ್ಭವು ಒದಗಿದುದಕ್ಕಾಗಿ ಸಂತೋಷ ಹೆಮ್ಮೆಗಳಿಂದ ತುಂಬಿದ್ದಳು ಆಕೆಯು ಗುಣಹೊಂದಿದುದು ತೋರಿಕೆಯದಾಗಿತ್ತೇ ಹೊರತು ಸತ್ಯವಾದುದಾಗಿರಲಿಲ್ಲ ಆ ವಯಸ್ಸಿನಲ್ಲಿ ಪಡೆದ ಮಹತ್ತರವಾದ ಕಲುಕಾಟವು ಆಕೆಯ ಶಾರೀರಿಕ ಪರಿಸ್ಥಿತಿಯನ್ನು ಸಂಪೂರ್ಣವಾಗಿ ತಲಕೆಳಗು ಮಾಡಿತು, ಮತ್ತು ಒಂದು ವರ್ಷದ ಮೇಲೆ ಅಪಾಯಕರವಾದ ಪರಿಮಾಣವನ್ನು ಧರಿಸಿ ಆಳವಾಗಿ ನೆಲೆಸಿದ ದೈಹಿಕ ಜಂಜಡಗಳನ್ನು ಪ್ರಾಮುಖ್ಯತೆಗೆ ತಂದಿತು

೪೩

# ಬರೇಲಿ ಮತ್ತು ಡೆಹ್ರಾಡುನ್ ಸೆರೆಮನೆಗಳಲ್ಲಿ

ನೈನಿ ಸೆರೆಮನೆಯಲ್ಲಿ ಆರು ವಾರಗಳಾದ ಮೇಲೆ ನಾನು ಬರೇಲಿ ಜಿಲ್ಲಾ ಸೆರೆಮನೆಗೆ ವರ್ಗಾಯಿಸಲ್ಪಟ್ಟೆ. ನನ್ನ ಆರೋಗ್ಯವು ಪುನಃ ಅಸಮರ್ಪಕವಾಗಿದ್ದಿತು. ದಿನವೂ ಜ್ವರ ಬರುತ್ತಿದ್ದುದರಿಂದ ನನ್ನ ಮನಸ್ಸಿಗೆ ಬಹಳ ಕಿರುಕುಳವಾಯಿತು. ನಾಲ್ಕು ತಿಂಗಳು ಬರೇಲಿಯಲ್ಲಿ ಕಳೆದ ಮೇಲೆ, ಬೇಸಿಗೆಯಲ್ಲಿ ಸೆಕೆಯು ಅತ್ಯಧಿಕವಾಗಿದ್ದಾಗ, ಹಿಮಾಲಯದ ಅಡಿಯಲ್ಲಿರುವ, ಹೆಚ್ಚು ತಂಪಾದ ಡೆಹ್ರಾಡುನ್ ಸೆರೆಮನೆಗೆ ನಾನು ಮತ್ತೆ ವರ್ಗಾಯಿಸಲ್ಪಟ್ಟೆ. ಅಖಂಡವಾಗಿ ಹದಿನಾಲ್ಕೂವರೆ ತಿಂಗಳು, ನನ್ನ ಎರಡು ವರುಷದ ಸೆರೆಯ ಅವಧಿ ಇನ್ನೇನು ಮುಗಿಯಿತು ಎನ್ನುವವರೆಗೆ, ನಾನು ಅಲ್ಲಿಯೇ ಇದ್ದೆ. ಭೇಟಿಗಳಿಂದಲೂ ಪತ್ರವ್ಯವಹಾರಗಳಿಂದಲೂ ಆಯ್ದುಯಾದ ವೃತ್ತಪತ್ರಿಕೆಗಳಿಂದಲೂ ನನಗೆ ವರ್ತಮಾನಗಳೇನೊ ಬರುತ್ತಿದ್ದುವು. ಆದರೆ ನಡೆಯುತ್ತಿದ್ದ ಸಂಗತಿಗಳ ಬಹು ಭಾಗಕ್ಕೂ ನನಗೂ ಸಂಬಂಧವು ಸಂಪೂರ್ಣವಾಗಿ ತೊರದು ಹೋಗಿತ್ತು, ಮತ್ತು ಪ್ರಮುಖ ಪ್ರಸಕ್ತಿಗಳನ್ನು ಕುರಿತು ಮಂಪರಮಂಪರವಾದ ಭಾವನೆ ಮಾತ್ರವಿದ್ದಿತು.

ನಾನು ಬಿಡುಗಡೆ ಹೊಂದಿದ ಮೇಲೆ ಸ್ವಕೀಯ ವಿಷಯಗಳು ಮತ್ತು ಆಗ ನನಗೆ ಗೋಚರಿಸಿದ ರಾಜಕೀಯ ಪರಿಸ್ಥಿತಿಗಳು, ಇವುಗಳನ್ನು ಕುರಿತು ಬಿಡುವಿಲ್ಲದೆ ಇದ್ದ ಐದು ತಿಂಗಳಿಗಿಂತ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯ ಮುಗಿದ ಮೇಲೆ ನಾನು ಪುನಃ ಸೆರಮನೆಗೆ ಕರೆತರಲ್ಪಟ್ಟೆ, ಮತ್ತು ನಾನು ಇನ್ನೂ ಇಲ್ಲೇ ಇದ್ದೇನೆ. ಹೀಗೆ ಕಳೆದ ಮೂರು ವರುಷಗಳಲ್ಲಿ ಘಟನೆಗಳ ಸಂಪರ್ಕವಿಲ್ಲದೆ ನಾನು ಹೆಚ್ಚು ಕಾಲ ಸೆರೆವನೆಯಲ್ಲೇ ಇದ್ದೇನೆ. ಈ ಅವಧಿಯಲ್ಲಿ ನಡೆದುದೆಲ್ಲವನ್ನೂ ಸ್ವಲ್ಪ ವಿವರವಾಗಿಯಾದರೂ ಪರಿಚಯ ಮಾಡಿಕೊಳ್ಳುವುದಕ್ಕೆ ನನಗೆ ಅವಕಾಶವೇ ದೊರೆತಿಲ್ಲ. ಗಾಂಧಿಜಿಯವರು ಹೋಗಿದ್ದ ದ್ವಿತೀಯ ಚಕ್ರ ಗೋಷ್ಠಿಯ ತೆರೆಯ ಮರೆಯಲ್ಲಿ ಏನು ನಡೆಯಿತೆಂಬುದನ್ನು ಕುರಿತು ನನಗೆ ಇನ್ನೂ ಅಸ್ಪಷ್ಟತಮವಾದ ಅರಿವಿದೆ. ಈ ವಿಚಾರವನ್ನು ಕುರಿತು ಅವರೊಡನೆ ಮಾತನಾಡುವುದಕ್ಕಾಗಲಿ, ಅಥವಾ ಅಲ್ಲಿಂದ ಈಚೆಗೆ ನಡೆದ ವಿಷಯಗಳಲ್ಲನೇಕವನ್ನು ಅವರೊಡನಾಗಲಿ ಇತರರೊಡನಾಗಲಿ ಚರ್ಚಿಸುವುದಕ್ಕೆ ನನಗೆ ಇದುವರೆಗೆ ಯಾವ ಅವಕಾಶವೂ ದೊರೆತಿಲ್ಲ.

ನಮ್ಮ ರಾಷ್ಟ್ರೀಯ ಸಂಗ್ರಾಮದ ಬೆಳವಣಿಗೆಯ ಜಾಡನ್ನು ಹಿಡಿಯಲು ೧೯೩೨ ಮತ್ತು ೩೩ ರ ವರ್ಷಗಳನ್ನು ಕುರಿತು ಸಾಕಷ್ಟು ನನಗೆ ಗೊತ್ತಿಲ್ಲ. ಆದರೆ ನಾನು

ರಂಗಸ್ಥಳ ಮತ್ತು ಹಿನ್ನೆಲೆಗಳನ್ನು ಚೆನ್ನಾಗಿ ಅರಿತಿದ್ದೆ ಹಾಗೆಯೇ ನಟರನ್ನೂ ತಿಳಿದಿದ್ದೆ ಮತ್ತು ನಡೆದ ಅನೇಕ ಸಣ್ಣಸಣ್ಣ ವಿಚಾರಗಳು ಸ್ವಾಭಾವಿಕವಾಗಿ ನನ್ನ ಮನಸ್ಸನ್ನು ರಂಜಿಸಿದ್ದುವು ಹೀಗೆ ಸಂಗ್ರಾಮದ ಸಾಮಾನ್ಯ ಗತಿಯ ತಕ್ಕಮಟ್ಟಿನ ಭಾವನೆಯನ್ನು ನಾನು ಮಾಡಿಕೊಳ್ಳಬಹುದಾಗಿತ್ತು ಮೊದಲ ನಾಲ್ಕು ತಿಂಗಳು ಗಳೋ ಏನೋ ಶಾಸನ ಭಂಗವು ಕಸುವಿನಿಂದಲೂ ಮೇಲೆ ಬೀಳುತ್ತಲೂ ನಡೆಯಿತು ಅನಂತರ ವಿರಳವಾದ ಸ್ಫೋಟನಗಳೊಡನೆ ಆನುಕ್ರಮಿಕ ಅಪಚಯಹೊಂದಿತು ಪ್ರತ್ಯಕ್ಷ ಕಾರ್ಯಾತ್ಮಕ ಸಂಗ್ರಾಮವು ಕ್ರಾಂತಿಯ ಮಟ್ಟದಲ್ಲಿ ಅತಿ ಸ್ವಲ್ಪ ಕಾಲ ಮಾತ್ರ ನಿಲ್ಲಬಲ್ಲದು ಅದು ಚೇತನಯುಕ್ತ ಸ್ಥಾವರಾವಸ್ಥೆಯಲ್ಲಿ ನಿಲ್ಲಲಾರದು ಅದು ಮೇಲಕ್ಕೋ ಇಲ್ಲವೇ ಕೆಳಕ್ಕೋ ಓಡಾಡಬೇಕು ಶಾಸನ ಭಂಗವು, ಪ್ರಥಮ ಪ್ರವಾಹವಾದ ಮೇಲೆ ನಿಧಾನವಾಗಿ ತಗ್ಗಿತು ಆದರೆ ಅದು ಕೆಳಗಿನ ಮಟ್ಟ ವೊಂದರಲ್ಲಿ ದೀರ್ಘ ಅವಧಿಗಳವರೆಗೆ ಸಾಗಬಹುದಾಗಿತ್ತು ರಾಜಶಾಸನಬಾಹಿ ರತೆಯ ಆಜ್ಞೆಯಾಗಿದ್ದರೂ ಅಖಿಲ ಭಾರತ ಕಾಂಗ್ರೆಸ್ ಸಂಸ್ಥೆಯು ತಕ್ಕಮಟ್ಟಿಗೆ ಜಯಶಾಲಿಯಾಗಿಯೇ ದುಡಿಯುತ್ತ ನಡೆಯಿತು ಅದು ಪ್ರಾಂತ ಕೆಲಸಗಾರ ರೊಂದಿಗೆ ಸಂಬಂಧವನ್ನು ಇಟ್ಟುಕೊಂಡಿತು ಅವರಿಗೆ ಆಜ್ಞಾಪೂರ್ವಕ ಸೂಚನೆ ಗಳನ್ನು ಕೊಡುತ್ತಿದ್ದಿತು, ವರದಿಗಳನ್ನು ತರಿಸಿಕೊಳ್ಳುತ್ತಿತ್ತು, ಪ್ರಾಸಂಗಿಕವಾಗಿ ದ್ರವ್ಯ ಸಹಾಯವನ್ನು ನೀಡುತ್ತಿತ್ತು

ಪ್ರಾಂತ ಸಮಿತಿಗಳೂ ಕೂಡ ಹೆಚ್ಚು ಕಡಿಮೆ ಯಶಸ್ವಿಗಳಾಗಿಯೇ ಕೆಲಸ ಮಾಡುತ್ತ ಹೋದುವು ನಾನು ಸೆರೆಮನೆಯಲ್ಲಿದ್ದ ಆ ವರುಷಗಳಲ್ಲಿ ಇತರ ಪ್ರಾಂತಗಳ ವಿಚಾರ ನನಗೆ ಹೆಚ್ಚಾಗಿ ತಿಳಿಯಲಿಲ್ಲ ಆದರೆ ನನ್ನ ಬಿಡುಗಡೆಯಾದ ಮೇಲೆ ನಾನು ಸ ಪ್ರಾ ಕಾರ್ಯಕಲಾಪಗಳನ್ನು ಕುರಿತು ವಿಷಯ ಸಂಗ್ರಹಣ ಮಾಡಿದೆ ಸ ಪ್ರಾ ಕಾಂಗ್ರೆಸ್ ಕಛೇರಿಯು ೧೯೩೦ರ ಆದ್ಯಂತವಾಗಿಯೂ ೧೯೩೩ರ ಅರ್ಧ ದವರೆಗೂ ಆಗಿನ ಹಂಗಾಮಿ ಕಾಂಗ್ರೆಸ್ ಅಧ್ಯಕ್ಷರು ಗಾಂಧಿಜಿಯವರ ಸಲಹೆಯಂತೆ ಶಾಸನ ಭಂಗ ಚಳವಳಿಯನ್ನು ತಾತ್ಕಾಲಿಕವಾಗಿ ನಿಲ್ಲಿಸುವವರೆಗೆ ಕ್ರಮವಾಗಿ ಕೆಲಸ ಮಾಡಿತು ಈ ಕಾಲದಲ್ಲಿ ಜಿಲ್ಲೆಗಳಿಗೆ ಪದೇಪದೇ ನಿರ್ದೇಶಗಳು ಕಳುಹಿಸಲ್ಪ ಟ್ಟಿದ್ದುವು, ಅಚ್ಚು ಮಾಡಿದ ಅಥವಾ 'ಸೈಕ್ಲೋಸ್ಟೈಲ್' ಮಾಡಿದ ರಾಯಸಗಳು ಕ್ರಮವಾಗಿ ಹಂಚಲ್ಪಡುತ್ತಿದ್ದುವು ಜಿಲ್ಲೆಯ ಕಾರ್ಯಕ್ರಮಗಳ ಮೇಲ್ವಿಚಾರಣೆಯು ಕಾಲಕಾಲಕ್ಕೆ ನಡೆದು ನಮ್ಮ ರಾಷ್ಟ್ರೀಯ ಸೇವಾನಿರತ ಸಿಬ್ಬಂದಿಗೆ ಭತ್ಯಗಳು ಕೊಡ ಲ್ಪಟ್ಟವು ಈ ಕಾರ್ಯದ ಹೆಚ್ಚು ಭಾಗವು ಅಗತ್ಯವಾಗಿ ಗುಟ್ಟಾದ ಕೆಲಸವಾಗಿದ್ದಿತು ಆದರೆ ಕಛೇರಿ ಮುಂತಾದುವುಗಳ ನಿಯೋಗದಲ್ಲಿದ್ದ ಪ್ರಾಂತ ಸಮಿತಿಯ ಕಾರ್ಯ ದರ್ಶಿಯು ಯಾವಾಗಲೂ ತಾನು ದಸ್ತಗಿರಿಯಾಗಿ ಸೆರೆಹೋಗುವವರೆಗೆ ಬಹಿರಂಗ ವಾಗಿಯೂ ಕೆಲಸ ಮಾಡುತ್ತಿದ್ದನು ಅನಂತರ ಮತ್ತೊಬ್ಬನು ಆತನ ಸ್ಥಾನಕ್ಕೆ ಬರುತ್ತಿದ್ದನು

೧೯೩೦ ಮತ್ತು ೧೯೩೨ ರ ನಮ್ಮ ಅನುಭವವು, ಇಂದಿನ ಹಿಂದೂ ದೇಶದಲ್ಲಿ ಗುಪ್ತ ಸಮಾಚಾರಗಳ ಬಲೆಯನ್ನು ಸಂಘಟಿಸುವುದು ಸುಲಭ ಸಾಧ್ಯವೆಂಬುದನ್ನು ತೋರಿಸಿತು. ಹೆಚ್ಚು ಶ್ರಮವಿಲ್ಲದೆ ಸ್ವಲ್ಪ ಪ್ರತಿಭಟನೆ ಇದ್ದರೂ ಸತ್ಫಲಗಳೇ ಲಭಿಸಿದುವು. ಆದರೆ ಶಾಸನ ಭಂಗದ ಧ್ಯೇಯಕ್ಕೆ ಗುಟ್ಟು ಹೊಂದುವುದಿಲ್ಲವೆಂದೂ ಜನಜಂಗುಳಿಯ ಜಾಗೃತಿಯನ್ನು ಕುಂದಿಸುವುದೆಂದೂ ನಮ್ಮಲ್ಲಿ ಅನೇಕರು ಭಾವಿಸಿದ್ದರು. ದೊಡ್ಡದಾದ ಆಗೂಹನ ಜಂಗುಳಿಚಳವಳಿಯು ಒಂದು ಸಣ್ಣ ಭಾಗವಾಗಿ ಅದು ಪ್ರಯೋಜನಕಾರಿಯಾಗಿತ್ತು. ಆದರೆ ಯಾವಾಗಲೂ, ಅದರಲ್ಲಿಯೂ ಚಳವಳಿಯು ಇಳಿಮೊಗವಾಗುತ್ತಿದ್ದಾಗ, ಕೆಲವು ಹೆಚ್ಚುಕಡಿಮೆ ವ್ಯರ್ಥ ಗುಪ್ತ ಕಾರ್ಯಕಲಾಪಗಳು ಜಂಗುಳಿ ಚಳವಳಿಯ ಜಾಗವನ್ನು ಆಕ್ರಮಿಸಿಕೊಳ್ಳುವ ಅಪಾಯವಿದ್ದೇ ಇತ್ತು. ೧೯೩೩ ರ ಜುಲೈನಲ್ಲಿ ಗಾಂಧಿಜಿಯವರು ಎಲ್ಲಾ ರಹಸ್ಯ ಕಾರ್ಯಕ್ರಮಗಳನ್ನೂ ಖಂಡಿಸಿದರು.

ಕ್ಷೇತ್ರ ಸಂಬಂಧವಾದ ಕರನಿರಾಕರಣ ಚಳವಳಿಗಳು, ಸ ಪ್ರಾಂತ ಗಳನ್ನು ಬಿಟ್ಟರೆ, ಸ್ವಲ್ಪಕಾಲದವರೆಗೆ ಗುಜರಾತ ಮತ್ತು ಕರ್ನಾಟಕಗಳಲ್ಲಿ ಏಳಿಗೆಯಲ್ಲಿತ್ತು. ಗುಜರಾತಿನಲ್ಲೂ ಕರ್ನಾಟಕದಲ್ಲೂ ಬೇಸಾಯಗಾರ ಹಿಡುವಳಿದಾರರು ಸರಕಾರಕ್ಕೆ ಭೂಕಂದಾಯವನ್ನು ಕೊಡಲು ಒಪ್ಪದೆ, ತತ್ಫಲವಾಗಿ ಅನೇಕ ಕಷ್ಟಗಳನ್ನು ಅನುಭವಿಸಿದರು. ಆಸ್ತಿಪಾಸ್ತಿಗಳ ಜಫ್ತಿ ಮತ್ತು ಉಚ್ಚಾಟನೆಗಳ ಪರಿಣಾಮವಾಗಿ, ನರಳುತ್ತಿದ್ದವರ ರೋತೆಯನ್ನು ಪರಿಹರಿಸಿ ಸಹಾಯ ಮಾಡಲು ಕಾಂಗ್ರೆಸ್ಸಿನ ಪರವಾಗಿ ಅನಿವಾರ್ಯವಾಗಿ ಅಪರ್ಯಾಪ್ತ ಪ್ರಯತ್ನವೊಂದಷ್ಟು ನಡೆಯಿತು. ಸ ಪ್ರಾಂತ ಗಳಲ್ಲಿ ಕ್ಷೇತ್ರಭ್ರಷ್ಟರಾದ ಒಕ್ಕಲುಜಂಗುಳಿಗೆ ಸಹಾಯ ಮಾಡಲು ಪ್ರಾಂತ ಕಾಂಗ್ರೆಸ್ಸು ಈ ರೀತಿಯಾದ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಇಲ್ಲಿನ ಪ್ರಶ್ನೆಯು ಬಹಳ ವಿಸ್ತಾರತರವಾದುದು. ಒಕ್ಕಲಿನವರ (ಬೇಸಾಯಗಾರ ಹಿಡುವಳಿದಾರರಿಗಿಂತ ಬಹಳ ಹೆಚ್ಚಿನ ಸಂಖ್ಯೆಯವರು), ಹರವು ಇನ್ನೂ ಹೆಚ್ಚು ಅಗಲವಾಗಿತ್ತು, ಮತ್ತು ಪ್ರಾಂತ ಉತ್ಪತ್ತಿಸ್ಥಾನಗಳು ಬಹಳ ಮಿತವಾಗಿದ್ದುವು. ಚಳವಳಿಯ ಸಲುವಾಗಿ ನೊಂದ ಸಾವಿರಾರು ಜನಗಳಿಗೆ ನಾವು ಸಹಾಯಮಾಡುವುದು ತೀರ ಅರಿದಾಗಿತ್ತು ಮತ್ತು ಅವರಿಗೂ ಉಪವಾಸದ ಅಂಚಿನಲ್ಲಿಯೇ ಸದಾ ಇದ್ದ ಅಸಂಖ್ಯಾತ ಜನರಿಗೂ ನಡುವೆ ವಿಂಗಡಣೆಯ ಗೆರೆಯೊಂದನ್ನೆಳೆಯುವುದು ಇನ್ನೂ ಕಷ್ಟವಾಗಿತ್ತು. ಕೆಲವು ಸಾವಿರ ಜನರಿಗೆ ಮಾತ್ರ ಸಹಾಯ ಮಾಡುವುದು ಜಂಜಡಕ್ಕೂ ಮನಸ್ತಾಪಕ್ಕೂ ದಾರಿಯಾಗುತ್ತಿತ್ತು. ಆದುದರಿಂದ ಧನ ಸಹಾಯ ಮಾಡಕೂಡದೆಂದು ನಾವು ನಿಶ್ಚಯಿಸಿದೆವು. ಈ ವಾಸ್ತವಾಂಶವನ್ನು ಪ್ರಾರಂಭದಲ್ಲೇ ವಿಸ್ತಾರವಾಗಿ ಪ್ರಕಟಿಸಿದೆವು, ಮತ್ತು ನಮ್ಮ ಅವಸ್ಥಾನಕ್ಕೆ ಬೇಸಾಯಗಾರಜಂಗುಳಿಯು ಸಂಪೂರ್ಣವಾಗಿ ಬೆಲೆಗಟ್ಟಿತು. ಆಕ್ಷೇಪಣೆ ಅಥವಾ ಗೊಣಗಾಟವಿಲ್ಲದೆ ಅವರು ಹೇಗೆ ಕಷ್ಟಗಳನ್ನು ಸಹಿಸಿದರೆಂಬುದು ಆಶ್ಚರ್ಯಕರವಾಗಿತ್ತು. ನಾವೇನೋ ಸಾಧ್ಯವಾದಾಗಲೆಲ್ಲ ವ್ಯಕ್ತಿಗಳಿಗೆ ಅದ

ರಲ್ಲಿಯೂ ವಿಶೇಷವಾಗಿ ಸೆರೆಮನೆಗೆ ಹೋದವರ ಹೆಂಡರು ಮಕ್ಕಳಿಗೆ ಸಹಾಯವನ್ನು ಮಾಡಲು ಪ್ರಯತ್ನಿಸಿದೆವು. ತಿಂಗಳೊಂದಕ್ಕೆ ಒಂದು ರೂಪಾಯಿ ದೊರೆತರೆ ಅದೇ ಈಶ್ವರ ಪ್ರಸಾದ, ಇದೀಗ ದುಃಖಭಾಜನ ದೇಶದ ದಾರಿದ್ರ್ಯ.

ಆ ಅವಧಿಯಲ್ಲಿ ಆದ್ಯಂತವಾಗಿ ಸ. ಪ್ರಾ. ಪ್ರಾಂತ ಸಮಿತಿಯು (ಇದು ದಿಟವಾಗಿ ಬಹಿಷ್ಕೃತಕೂಟವಾಗಿಯೇನೋ ಇತ್ತು) ತನ್ನ ಸಂಬಳದ ಕೆಲಸಗಾರರಿಗೆ, ಎಂದಿನ ಬಡಭತ್ಯಗಳನ್ನು ಕೊಡುತ್ತಲೇ ಇದ್ದಿತು, ಮತ್ತು ಅವರು ಸೆರೆಮನೆಗೆ ಹೋದರೆ (ಅವರೆಲ್ಲರೂ ಹೋಗಿಯೇ ಹೋದರು) ಅವರ ಸಂಸಾರಗಳಿಗೆ ಒತ್ತಾಸೆಯಾಗಿತ್ತು. ಆದರ ಆಯವ್ಯಯದ ಪಟ್ಟಿಯಲ್ಲಿ ಇದು ಪ್ರಮುಖಾಂಶವಾಗಿದ್ದಿತು. ಬಳಿಕ ಮುದ್ರಣ, ಕೈಚೀಟಿಗಳನ್ನು ಇಮ್ಮಡಿಸುವುದು ಮತ್ತು ರಾಯಸಗಳು—ಇವುಗಳ ವೆಚ್ಚ, ಇದೂ ಹೆಚ್ಚಿನ ಹೊರೆಯೇ ಆಗಿತ್ತು. ಪ್ರಯಾಣದ ವೆಚ್ಚವು ಇನ್ನೊಂದು ಪ್ರಮುಖಾಂಶವಾಗಿತ್ತು. ಹೆಚ್ಚು ಏಳಿಗೆಯಲ್ಲಿರದ ಕೆಲವು ಜಿಲ್ಲೆಗಳಿಗೆ ಕೊಂಚ ಕೊಡುವಳಿಗಳನ್ನು ಕೊಡಬೇಕಾಗಿದ್ದಿತು. ಶಕ್ತಿಯುತವಾದ ಮತ್ತು ಸುರಕ್ಷಿತವಾದ ಸರಕಾರಕ್ಕೆ ಎದುರಾಗಿ ಹೂಡಿದ ತೀವ್ರವಾದ ಜಂಗುಳಿ ಹೋರಾಟದ ಅವಧಿಯಲ್ಲಿ, ಈ ಮತ್ತು ಇತರ ವೆಚ್ಚಗಳಿದ್ದರೂ ೧೯೩೨ ರ ಜನವರಿಯಿಂದ ೧೯೩೩ರ ಆಗಸ್ಟ್ ಕೊನೆಯವರೆಗೆ, ಇಪ್ಪತ್ತು ತಿಂಗಳಲ್ಲಿ ಸ. ಪ್ರಾ. ಪ್ರಾಂತ ಸಮಿತಿಯ ವೆಚ್ಚದ ಮೊತ್ತವು ೬೩,೦೦೦ ರೂಪಾಯಿಗಳಾದುವು. ಎಂದರೆ, ತಲಾ ತಿಂಗಳಿಗೆ ೩,೧೫೦ ರೂ ಆಯಿತು. (ಈ ಸಂಖ್ಯೆಯಲ್ಲಿ ಅಲಹಾಬಾದ್, ಆಗ್ರ, ಲಕ್ನೊ, ಕಾನ್ಪುರ, ಮುಂತಾದ ಪ್ರಬಲವಾದ ಮತ್ತು ಹೆಚ್ಚು ಏಳಿಗೆಯಲ್ಲಿದ್ದ ಜಿಲ್ಲಾ ಸಮಿತಿಗಳ ವೆಚ್ಚವು ಸೇರಿಲ್ಲ.) ಪ್ರಾಂತ ದೃಷ್ಟಿಯಿಂದ ಸ. ಪ್ರಾ. ಗಳು ೧೯೩೨ ಮತ್ತು ೧೯೩೩ ರ ಆದ್ಯಂತವಾಗಿ ಕಾಳಗದ ಚೂಣಿಯಲ್ಲಿತ್ತು. ಮತ್ತು ದೊರೆತ ಫಲವನ್ನು ಎಣಿಸಿದರೆ ಅದು ಅಷ್ಟು ಕಡಿಮೆ ವೆಚ್ಚ ಮಾಡಿತೆಂಬುದು ಆಶ್ಚರ್ಯವನ್ನುಂಟುಮಾಡುವುದು. ಶಾಸನ ಭಂಗದ ಚಳವಳಿಯನ್ನು ಮುರಿಯಲು ಪ್ರಾಂತ ಸರಕಾರದ ವಿಶೇಷ ವೆಚ್ಚಕ್ಕೆ ಈ ಸ್ವಲ್ಪ ವೆಚ್ಚವನ್ನು ಹೋಲಿಸುವುದು ಸ್ವಾರಸ್ಯವಾಗಿರುತ್ತದೆ. ಇತರ ಕೆಲವು ಪ್ರಮುಖ ಕಾಂಗ್ರೆಸ್ ಪ್ರಾಂತಗಳು ಇನ್ನೂ ಹೆಚ್ಚಾಗಿ ವೆಚ್ಚಮಾಡಿರಬೇಕೆಂದು (ನನಗೆ ಸರಿಯಾಗಿ ಗೊತ್ತಿಲ್ಲ) ನಾನು ಊಹಿಸುತ್ತೇನೆ. ಆದರೆ, ಕಾಂಗ್ರೆಸ್ ದೃಷ್ಟಿಯಿಂದ ಬಿಹಾರು ತನ್ನ ನೆರೆ ನಾಡಾದ ಸ. ಪ್ರಾ. ಗಳಿಗಿಂತ ಬಡಪ್ರಾಂತವಾಗಿತ್ತು. ಆದರೂ ಸಮರದಲ್ಲಿ ಅದರ ಪಾತ್ರವು ಬಹಳ ಶ್ಲಾಘ್ಯವಾಗಿದ್ದಿತು.

ಹೀಗೆ ಕ್ರಮವಾಗಿ ಶಾಸನ ಭಂಗದ ಚಳವಳಿಯು ಅಪಚಯವನ್ನು ಹೊಂದಿತು, ಆದರೆ ಅಪ್ರಸಿದ್ಧವಾಗಿರದೆ ಅದು ಹಾಗೆಯೇ ದಬ್ಬಿಕೊಂಡುಹೋಯಿತು. ವೃದ್ಧಿಂಗತವಾಗಿ ಅದು ಜಂಗುಳಿಚಳವಳಿಯಾಗಿರುವುದು ನಿಂತುಹೋಯಿತು. ಸರಕಾರದ ದಬ್ಬಾಳಿಕೆಯ ತೀಕ್ಷ್ಣತೆಯನ್ನು ಒತ್ತಟ್ಟಿಗೆ ಬಿಟ್ಟರೆ, ಅದಕ್ಕೆ ಸೆಪ್ಟೆಂಬರ್ ೧೯೩೨ ರಲ್ಲಿ

ಬಿದ್ದ ಬಲವತ್ತರವಾದ ಪ್ರಥಮ ಪ್ರಘಾತವೆಂದರೆ, ಗಾಂಧಿಜಿಯವರು ಮೊದಲನೆ ಬಾರಿ ಹರಿಜನ ಸಮಸ್ಯೆಯನ್ನು ಕುರಿತ ಉಪವಾಸ ವ್ರತವನ್ನು ಕೈಕೊಂಡಾಗ ಬಿದ್ದುದು ಆ ಉಪವಾಸ ವ್ರತವು ಜನಜಂಗುಳಿಯ ಜಾಗೃತಿಯನ್ನು ಹೊಡೆದೆಬ್ಬಿಸಿತು ಆದರೆ ಅದನ್ನು ಬೇರೆ ದಿಕ್ಕಿಗೆ ತಿರುಗಿಸಿತು ೧೯೩೩ ರ ಮೇನಲ್ಲಿ ಅದಕ್ಕಾದ ತಾತ್ಕಾಲಿಕ ನಿರೋಧವು ಶಾಸನ ಭಂಗವನ್ನು ಕಾರ್ಯದೃಷ್ಟಿಯಿಂದ ಕೊನೆಯಲ್ಲಿ ಕೊಂದುಹಾಕಿತು ತದನಂತರ ಅದು ಕಾರ್ಯಕ್ಕಿಂತ ಹೆಚ್ಚಾಗಿ ತಾತ್ವಿಕವಾಗಿ ಮುಂದುವರಿಯುತ್ತಿತ್ತು ಒಂದು ವೇಳೆ ಆ ತಾತ್ಕಾಲಿಕ ನಿರೋಧವಾಗದಿದ್ದರೂ ಅದು ಕ್ರಮಕ್ರಮವಾಗಿ ಕೊನೆಗಾಣುತ್ತಿತ್ತು, ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ ದಬ್ಬಾಳಿಕೆಯ ಕ್ರೌರ್ಯದಿಂದಲೂ ಕಾಠಿಣ್ಯದಿಂದಲೂ ಹಿಂದೂದೇಶಕ್ಕೆ ಜೋಮು ಹಿಡಿಯಿತು ಒಟ್ಟಿನಲ್ಲಿ ರಾಷ್ಟ್ರದ ಕಂಪಿತ ಸತ್ವವು ಸದ್ಯಕ್ಕೆ ಮುಗಿದುಹೋಗಿದ್ದಿತು, ಮತ್ತು ಅದು ಆದರಲ್ಲಿ ಮತ್ತೆ ತುಂಬಿಕೊಳ್ಳುತ್ತಿರಲಿಲ್ಲ ವೈಯಕ್ತಿಕವಾಗಿ ಶಾಸನ ವಿರೋಧವನ್ನು ನಡೆಸಲು ಶಕ್ತಿಯಿದ್ದವರು ಅನೇಕರಿದ್ದರು ಆದರೆ ಅವರು ಸ್ವಲ್ಪಮಟ್ಟಿನ ಕೃತಕ ವಾತಾವರಣದಲ್ಲಿ ಕೆಲಸ ಮಾಡುತ್ತಿದ್ದರು

ಮಹಾ ಚಳವಳಿಯ ತಾಮಸವಾದ ಅಸಚಯವನ್ನು ಕುರಿತು ಸೆರೆಮನೆಯಲ್ಲಿ ತಿಳಿಯುವುದು ನಮಗೆ ಸಂತೋಷಕರವಾಗಿರಲಿಲ್ಲ ಆದರೂ ನಮ್ಮಲ್ಲಿ ಬಹಳ ಕೊಂಚ ಮಂದಿ ಮಿಂಚುವ ಜಯವನ್ನು ನಿರೀಕ್ಷಿಸಿದ್ದೆವು ಜನಜಂಗುಳಿಯ ಅನಿಗ್ರಾಹ್ಯವಾದ ಮೇಲುಬ್ಬರವಿದ್ದಾಗ ಮಿಂಚುವ ಯಾವುದೋ ಒಂದರ ಸಂಭವದ ಅಪೂರ್ವ ಯದೃಚ್ಛೆಯು ಯಾವಾಗಲೂ ಇತ್ತು ಆದರೆ ಇದನ್ನು ನಂಬಿಕೊಂಡಿರುವಂತೆ ಇರಲಿಲ್ಲ ಆದುದರಿಂದ ನಾವು, ಏರಿಳಿತಗಳು ಮತ್ತು ಮಧ್ಯೇಮಧ್ಯೇ ಅನೇಕ ಅಷ್ಟದಿಗ್ಬಂಧಿತಾವಸ್ಥೆಗಳನ್ನೊಳಗೊಂಡ ದೀರ್ಘ ಸಂಗ್ರಾಮವನ್ನೂ ಜನಜಂಗುಳಿಯ ಶಿಸ್ತು, ಏಕಮುಖ ಕಾರ್ಯಕ್ರಮ ಮತ್ತು ಕಲ್ಪನ ವಿಜ್ಞಾನಗಳ ಆನುಕ್ರಮಿಕ ಶಕ್ತಿ, ಸಂಚಯನಗಳನ್ನೂ ನಿರೀಕ್ಷಿಸಿದೆವು ೧೯೩೦ ರ ಆರಂಭ ದಿನಗಳಲ್ಲಿ ಕೆಲವು ವೇಳೆ ನಾನು, ಎಲ್ಲಿ ಶೀಘ್ರವಾದ ಮತ್ತು ಜನರಂಜಕವಾದ ಜಯವು ದೊರೆತು ಬಿಡುವುದೋ ಎಂದು ಹೆದರಿದ್ದೆ ಏಕೆಂದರೆ ಅದು ಅನಿವಾರ್ಯವಾಗಿ ಒಡಂಬಡಿಕೆಗೆ ದಾರಿಗೊಟ್ಟು ಸರಕಾರದ ಪ್ರಭೃತಿಗಳನ್ನೂ ಅಮಗವಾದಿಗಳನ್ನೂ ಮೇಲೆ ಬಿಟ್ಟು ಬಿಡುತ್ತಿತ್ತು ೧೯೩೧ ರ ವರ್ಷದ ಅನುಭವವು ಜ್ಞಾನಪ್ರದವಾಗಿದ್ದಿತು ಸಾಮಾನ್ಯವಾಗಿ ಜನರು ಸಾಕಷ್ಟು ಶಕ್ತರಾಗಿದ್ದಾಗ ಮತ್ತು ವಿಜಯವನ್ನು ಸರಿಯಾಗಿ ಉಪಯೋಗಿಸಿಕೊಳ್ಳಲು ತಮ್ಮ ಕಲ್ಪನೆಗಳು ಸ್ಫುಟವಾಗಿಟ್ಟುಕೊಂಡಿದ್ದಾಗ ಪ್ರಯಾಸಲಬ್ಧ ವಿಜಯವು ದೊರೆ ತರೇನೇ ಅದು ಸಫಲವಾಗುವುದು, ಇಲ್ಲದಿದ್ದರೆ ಜನತೆಯು ಹೋರಾಡಿ ತ್ಯಾಗ ಮಾಡುವುದು ಸುಸಮಯದಲ್ಲಿ ಇತರರು ಒನಪು ಒಯ್ಯಾರದಿಂದಲ್ಲಿಗೆ ನುಸುಳಿ ಕೊಳ್ಳೆ ಯನ್ನು ಬಾಚಿಕೊಳ್ಳುವರು ಈ ಬಹಳ ದೊಡ್ಡ ಅಪಾಯವು ಇತ್ತು, ಏಕೆಂದರೆ ಕಾಂಗ್ರೆಸ್ಸಿನಲ್ಲೇ, ನಾವು ಯಾವ ಪದ್ಧತಿಯ ಸರಕಾರ ಅಥವಾ ಸಮಾಜವನ್ನು ಕುರಿತು

ಸಾಧಿಸುತ್ತಿದ್ದೇವೆ ಎಂಬ ವಿಚಾರದಲ್ಲಿ, ಮಹತ್ತರವಾದ ಆಲೋಚನಾಶಕ್ತಿಯ ಕೊರತೆಯೂ ಭಾವನಾಸ್ಪಷ್ಟತೆಯೂ ಇದ್ದುವು. ನಿಜವಾಗಿಯೂ ಕಾಂಗ್ರೆಸ್ಸಿನ ಕೆಲವರು ಸರಕಾರದ ಪ್ರಚಲಿತ ವ್ಯವಸ್ಥೆಯನ್ನು ಹೆಚ್ಚಾಗಿ ವ್ಯತ್ಯಾಸಗೊಳಿಸುವ ಯೋಚನೆಯನ್ನು ಮಾಡಲಿಲ್ಲ, ಆದರೆ ಅದರಲ್ಲಿರುವ ಬ್ರಿಟಿಷ್ ಅಥವಾ ಪರಕೀಯ ಅಂಶಕ್ಕೆ ಪ್ರತಿಯಾಗಿ 'ಸ್ವದೇಶಿ' ಮುದ್ರಾಂಕಿತವಾದುದನ್ನು ತರಲು ಮಾತ್ರ ಯೋಚಿಸಿದರು.

ಶುದ್ಧ ವರ್ಗದ ಸರಕಾರ ಪ್ರಭೃತಿಗಳ ವಿಷಯ ದೊಡ್ಡ ವಿಚಾರವಾಗಿರಲಿಲ್ಲ. ಏಕೆಂದರೆ ಆಳುತ್ತಿರುವ ಸರಕಾರವು ಯಾವುದಾದರೂ ಸರಿಯೆ, ಅದಕ್ಕೆ ಪರಾಯತ್ತವಾಗಿರುವುದೇ ಅವರ ಧರ್ಮದ ಮೊದಲನೆಯ ಸೂತ್ರವಾಗಿತ್ತು. ಆದರೆ ಉದಾರವಾದಿಗಳು ಮತ್ತು ರೆಸ್ಪಾನ್ಸಿವಿಸ್ಟರು ಕೂಡ ಬ್ರಿಟಿಷ್ ಸರಕಾರದ ಕಲ್ಪನ ವಿಜ್ಞಾನವನ್ನು ಬಹುತರ ಸಂಪೂರ್ಣವಾಗಿ ಅಂಗೀಕರಿಸಿದರು, ಅವರ ಪ್ರಾಸಂಗಿಕ ವಿಮರ್ಶೆಗಳು ಹೀಗೆ ಸಂಪೂರ್ಣವಾಗಿ ವ್ಯರ್ಥವೂ ಹುರುಳಿಲ್ಲದವೂ ಆಗಿದ್ದುವು. ಏನೇ ಆಗಲಿ ಅವರು ಶಾಸನವಾದಿಗಳೆಂಬುದು ಪ್ರಸಿದ್ಧವಾಗಿತ್ತು. ಆದುದರಿಂದ ಅವರು ಶಾಸನ ವಿರೋಧವನ್ನು ಸ್ವಾಗತಿಸಲಾರದವರಾಗಿದ್ದರು. ಆದರೆ ಅವರು ಇನ್ನೂ ಮುಂದಕ್ಕೆ ಹೋದರು. ಸ್ವಲ್ಪ ಹೆಚ್ಚು ಕಡಿಮೆ ತಾವೂ ಸರಕಾರದ ಪಕ್ಷವನ್ನೇ ಹಿಡಿದು ನಿಂತರು. ಪ್ರಾಯಿಕವಾಗಿ ಅವರು ಎಲ್ಲ ಬಗೆಯ ಪೌರಸ್ವಾತಂತ್ರ್ಯಗಳ ಸಂಪೂರ್ಣ ನಿಗ್ರಹದ ಮೌನ ಮತ್ತು ಭಯಗ್ರಸ್ತರೇ ಆದ ಪ್ರೇಕ್ಷಕರಾಗಿದ್ದರು. ಕೇವಲ, ಶಾಸನ ಭಂಗವನ್ನು ಸರಕಾರವು ಪ್ರತಿಕೂಲಿಸಿ ನಿಗ್ರಹ ಮಾಡುವುದೇ ಪ್ರಶ್ನೆಯಾಗಿರಲಿಲ್ಲ, ಆದರೆ ಎಲ್ಲ ರಾಜಕೀಯ ಜೀವನ ಮತ್ತು ಸಾರ್ವಜನಿಕ ಕಾರ್ಯಕಲಾಪಗಳೆಲ್ಲವನ್ನೂ ನಿಲ್ಲಿಸಿಬಿಡುವ ಪ್ರಶ್ನೆಯಾಗಿತ್ತು, ಮತ್ತು ಇದಕ್ಕೆ ವ್ಯತಿರಿಕ್ತವಾಗಿ ಒಂದು ಮಾತು ಸಹ ಹೊರಡಲಿಲ್ಲ. ಯಥಾಪ್ರಕಾರ ಈ ಸ್ವಾತಂತ್ರ್ಯಗಳ ಧ್ಯೇಯಕ್ಕಾಗಿ ನಿಂತವರು ಸಂಗ್ರಾಮದಲ್ಲೇ ತೊಡರುಬಿದ್ದಿದ್ದರು, ಸರಕಾರದ ಜೋರಾವರಿಗೆ ಮಣಿಯಲು ನಿರಾಕರಿಸಿದುದರಿಂದ ಶಿಕ್ಷೆಯನ್ನು ಹೊತ್ತರು, ಇತರರು ತುಚ್ಛ ಪರಾಭವದ ಅವಸ್ಥೆಗೆ ಬೆದರಿಕೆಯಿಂದ ದೂಡಲ್ಪಟ್ಟು, ಟೀಕೆಯ ಸೊಲ್ಲನ್ನೆತ್ತಲೇ ಇಲ್ಲ. ಎಷ್ಟೋ ವೇಳೆ ಟೀಕೆ ಮತ್ತು ವಿಮರ್ಶೆಯು ಪ್ರಯೋಗವಾದಾಗ ಅದರಲ್ಲಿ ಸಮರ್ಥಿಸುವ ಧ್ವನಿಯಿತ್ತು, ಮತ್ತು ಅದು ಕಾಂಗ್ರೆಸ್ಸಿನ ಮತ್ತು ಸಂಗ್ರಾಮವನ್ನು ನಡೆಯಿಸುತ್ತಿದ್ದವರ ವಿಷಯದಲ್ಲಿ ತೀವ್ರ ಖಂಡನೆಯಿಂದ ಕೂಡಿತ್ತು.

ಪಾಶ್ಚಾತ್ಯ ದೇಶಗಳಲ್ಲಿ ಪೌರ ಸ್ವಾತಂತ್ರ್ಯಗಳ ಪಕ್ಷವಾಗಿ ಪ್ರಬಲವಾದ ಸಾರ್ವಜನಿಕ ಅಭಿಪ್ರಾಯವು ಬೆಳೆದುಬಂದಿದೆ, ಆ ಮತ್ತು ಅವುಗಳ ಯಾವ ವಿಧವಾದ ಸಂಕೋಚವಾದರೂ ರೋಷಕ್ಕೂ ಪ್ರತಿರೋಧಕ್ಕೂ ಈಡಾಗುತ್ತಿತ್ತು. (ಬಹುಶಃ ಈಗ ಇದು ಹಿಂದಲ ಚರಿತ್ರೆಯಾಗಿ ಹೋಗಿರಬಹುದು.) ಪ್ರಬಲ ಮತ್ತು ಪ್ರತ್ಯಕ್ಷ ಕಾರ್ಯಕ್ರಮದಲ್ಲಿ ತಾವಾಗಿಯೇ ಭಾಗವಹಿಸಲು ಸಿದ್ಧರಾಗಿರದಿದ್ದರೂ, ಮಾತು ಮತ್ತು

ಬರವಣಿಗೆ, ಸಭೆ ಮತ್ತು ಸಂಸ್ಥೆ, ವ್ಯಕ್ತಿ ಮತ್ತು ವೃತ್ತಪತ್ರಿಕೆಗಳ ಸ್ವಾತಂತ್ರ್ಯಕ್ಕಾಗಿ ಸಾಕಷ್ಟು ಹಂಬಲಿಸುತ್ತ, ಅವುಗಳಿಗಾಗಿ ಎಡೆಬಿಡದೆ ಚಳವಳಿ ನಡೆಸುತ್ತ, ಅವುಗಳನ್ನು ಅಪಹರಿಸುವ ಸರಕಾರದ ಪ್ರವೃತ್ತಿಯನ್ನು ತಡೆಯಲು ಹೀಗೆ ಸಹಾಯ ಮಾಡುತ್ತಿರುವ ಬಹು ಸಂಖ್ಯೆಯ ಜನಗಳು ಇದ್ದಾರೆ. ಭಾರತೀಯ ಲಿಬರಲ್‌ರು (ಉದಾರನಾದಿಗಳು) ಸ್ವಲ್ಪಮಟ್ಟಿಗೆ ಬ್ರಿಟಿಷ್ ಲಿಬರಲಿಸಮ್‌ನ ಪರಂಪರೆಯನ್ನು ಅನುಸರಿಸುವುದಾಗಿ (ಅವರಿಗೂ ಇವರಿಗೂ ಹೆಸರೊಂದರ ಹೊರತು ಮತ್ತಾವುದರಲ್ಲೂ ಸಮಾನತೆಯಿಲ್ಲ ದಿದ್ದರೂ) ಹಕ್ಕು ಹೇಳಿಕೊಳ್ಳುತ್ತಾರೆ ಈ ಸ್ವಾತಂತ್ರ್ಯಗಳ ನಿಗ್ರಹಕ್ಕೆ, ತಾವೇ ಇದರಿಂದ ನರಳುತ್ತಿದ್ದುದರಿಂದ, ಒಂದು ವಿಧವಾದ ಔಪ್ಚಾರಿಕ ಪ್ರತಿರೋಧವನ್ನು ಎದುರೊಡ್ಡುವರೆಂದು ನಿರೀಕ್ಷಿಸಬಹುದಾಗಿತ್ತು ಆದರೆ ಅವರು ಅಂತಹ ಪಾತ್ರವಾವು ದನ್ನೂ ವಹಿಸಲಿಲ್ಲ ವಾಲ್ಟೇರ್‌ನೊಡನೆ ಹೀಗೆ ಹೇಳುವುದು ಅವರ ಪಾಲಿಗೆ ಒಂದಿರ ಲಿಲ್ಲ "ನೀನು ಹೇಳುವುದನ್ನು ನಾನು ಒಪ್ಪುವುದೇ ಇಲ್ಲ ಆದರೆ ನಿನಗೆ ಅದನ್ನು ಹೇಳುವ ಬಾಧ್ಯತೆಯಿರುವುದನ್ನು ನಾನು ಪ್ರಾಣ ಹೋಗುವವರೆಗೆ ರಕ್ಷಿಸುತ್ತೇನೆ'

ಇದಕ್ಕಾಗಿ ಅವರನ್ನು ದೂಷಿಸುವುದು ಬಹುಶಃ ನ್ಯಾಯವಲ್ಲ, ಏಕೆಂದರೆ, ಅವರು ಪ್ರಜಾಸತ್ತೆ ಅಥವಾ ಸ್ವಾತಂತ್ರ್ಯಗಳ ಜಗಜಟ್ಟಿಗಳಾಗಿ ಎಂದಿಗೂ ಮೆರೆಯುತ್ತ ನಿಂತಿಲ್ಲ ಅಜಾಗರೂಕತೆಯ ಹಗುರ ನುಡಿಯೊಂದು ತಮ್ಮನ್ನು ಕಷ್ಟಕ್ಕೆ ಸಿಕ್ಕಿಸಿಕೊಳ್ಳು ವಂತಹ ಪರಿಸ್ಥಿತಿಯನ್ನು ಅವರು ಎದುರಿಸಬೇಕಾಗಿದ್ದಿತು ಹಿಂದೂದೇಶದಲ್ಲಿನ ದಬ್ಬಾಳಿಕೆಯನ್ನು ಕಂಡು, ಪ್ರಾಚೀನಕಾಲದಿಂದಲೂ ಸ್ವಾತಂತ್ರ್ಯದ ಪ್ರೇಮಿ ಗಳೆನ್ನಿಸಿಕೊಂಡಿರುವ ಬ್ರಿಟಿಷ್ ಲಿಬರಲ್‌ಗಳಲ್ಲೂ ಬ್ರಿಟಿಷ್ ಲೇಬರ್ ಪಕ್ಷದ ನೂತನ ಸಮತಾವಾದಿಗಳಲ್ಲೂ ಎಂತಹ ಪ್ರತಿಕ್ರಿಯೆಯುಂಟಾಯಿತೆಂಬುದನ್ನು ನೋಡು ವುದು ಹೆಚ್ಚು ಸಂಗತವಾಗಿದೆ ಭಾರತೀಯ ದೃಶ್ಯಗಳನ್ನು ಅವರು ಒಂದು ಪರಿಮಾಣದ ಸಮಾಧಾನ ಚಿತ್ತತೆಯಿಂದ—ನೋವಿನಿಂದ ತುಂಬಿಯೇ ಇರಬಹುದು—ನೋಡು ವುದನ್ನು ನಿಭಾಯಿಸಿಕೊಂಡರು ಮ್ಯಾಂಚೆಸ್ಟರ್ ಗಾರ್ಡಿಯನ್ ಪತ್ರಿಕೆಯ ಒಬ್ಬ ಸುದ್ದಿಗಾರನು ಹೇಳಿದಂತೆ "ನಿಗ್ರಹದ ಶಾಸ್ತ್ರೀಯ ಸಂಪ್ರಯೋಗ"ದ ವಿಜಯವನ್ನು ಕಂಡು ಅವರಿಗೆ ಕೆಲವುವೇಳೆ ಉಂಟಾಗುತ್ತಿದ್ದ ತೃಪ್ತಿಯು ಸ್ಪಷ್ಟವಾಗಿದ್ದಿತು ನಿನ್ನೆ ಮೊನ್ನೆ ಗ್ರೇಟ್‌ಬ್ರಿಟನ್ನಿನ ರಾಷ್ಟ್ರೀಯ ಸರಕಾರವು ರಾಜದ್ರೋಹದ ಮಸೂದೆಯನ್ನು ಶಾಸನವಾಗಿ ಅನುಮೋದಿಸಬೇಕೆಂದು ಹವಣಿಸಿದೆ ಇತರ ವಿಷಯಗಳ ಮಧ್ಯೇ ಅದು ವಾಕ್‌ಸ್ವಾತಂತ್ರ್ಯವನ್ನು ನಿರೋಧಿಸುವುದೆಂದೂ, ಝುಡ್ತಿಗಳ ಸಲುವಾಗಿ ಆಜ್ಞೆ ಮಾಡಲು ಮ್ಯಾಜಿಸ್ಟ್ರೇಟರುಗಳಿಗೆ ಅಧಿಕಾರವನ್ನು ಕೊಡುವುದೆಂದೂ, ಅದು ವಿಶೇಷ ವಾಗಿ ಲಿಬರಲ್‌ರಿಂದಲೂ ಲೇಬರ್‌ಪಕ್ಷದವರಿಂದಲೂ ಬಹಳ ಹೆಚ್ಚಾಗಿ ಟೀಕೆಮಾಡ ಲ್ಪಟ್ಟಿದೆ ಈ ವಿಮರ್ಶೆಯನ್ನು ಓದಿದಾಗಲೆಲ್ಲಾ ನನಗೆ ಅದರಲ್ಲಿ ಸಹಾನುಭೂತಿ ಯುಂಟಾಯಿತು. ಮತ್ತು ಅದೇಕಾಲದಲ್ಲಿ, ಬ್ರಿಟಿಷ್ ರಾಜದ್ರೋಹದ ಮಸೂದೆಯು ಮಾಡಬೇಕೆಂದಿರುವ ಶಾಸನದ ಸರಿಸುಮಾರು ನೂರರಷ್ಟು ಹೆಚ್ಚು ಕೆಟ್ಟದಾಗಿರುವ

ಶಾಸನಗಳು ಇಂದು ಸಾಕ್ಷಾತ್ತಾಗಿ ಮೆರೆಯುತ್ತಿರುವ ಭಾರತದ ಚಿತ್ರವು ನನ್ನ ಕಣ್ಮುಂದೆ ಸುಳಿಯಿತು ಇಂಗ್ಲೆಂಡಿನಲ್ಲಿ ಅಟ್ಟಕ್ಕೆ ಹಾರಲು ಮುಕ್ಕಿರಿವ ಗಂಡು ಭಾರತದಲ್ಲಿ ಬೆಟ್ಟಕ್ಕೆ ಅಳುಕದೆ ಹಾರಿಬಿಡಬಲ್ಲನಲ್ಲ, ಅದು ಹೇಗೆ ಎಂದು ಸೋಜಿಗ ಗೊಂಡೆ ನಿಜವಾಗಿಯೂ, ತಮ್ಮ ನೈತಿಕ ಪ್ರಮಾಣಗಳನ್ನು ತಮ್ಮ ಪಾಂಚಭೌತಿಕ ಲಕ್ಷ್ಯಗಳಿಗೆ ಸಂವಾದಿಗಳನ್ನಾಗಿ ಮಾಡುವ ಮತ್ತು ತಮ್ಮ ಸಾಮ್ರಾಜಿಕ ಉದ್ದೇಶ ಗಳನ್ನು ಮುಂಬರಿಸುವ ಪ್ರತಿಯೊಂದರಲ್ಲೂ ಸೈಪನ್ನು ಕಾಣುವ ಬ್ರಿಟಿಷ್ ಜನಾಂಗದ ವಿಸ್ಮಯಗೊಳಿಸುವ ಜಾಣ್ಮೆಗೆ ಯಾವಾಗಲೂ ನಾನು ಅಚ್ಚರಿಗೊಂಡು ಮೆಚ್ಚಿದ್ದೇನೆ. ಅವರಿಂದ, ಸ್ವಾತಂತ್ರ್ಯ ಮತ್ತು ಪ್ರಜಾಸತ್ತೆಗಳ ಮೇಲೆ ಮುಸ್ಸೋಲಿನಿ ಮತ್ತು ಹಿಟ್ಲರರ ದಾಳಿಗಳು ಸಂಪೂರ್ಣ ವಿಶ್ವಾಸ ಮತ್ತು ಧಾರ್ಮಿಕ ರೋಷಗಳಿಂದ ಖಂಡಿಸ ಲ್ಪಟ್ಟವೆ, ಮತ್ತು ಅದೇ ರೀತಿ ತತ್ಸಮವಾದ ವಿಶ್ವಾಸದಿಂದ, ಸ್ವಾತಂತ್ರ್ಯವನ್ನು ಕುರಿತ ತತ್ಸದೃಶ ದಾಳಿಗಳು ಮತ್ತು ಅಪಹರಣಗಳು ಅವರಿಗೆ ಅಗತ್ಯವೆಂದು ತೋರುವುದು, ಮತ್ತು ತಾವು ಮೆರೆಯುತ್ತಿರುವ ನೈಜ ತಟಸ್ಥ ಚರ್ಯೆಯು ಅತ್ಯಾವಶ್ಯಕವೆಂದು ಸಮರ್ಥಿಸಲು ಉತ್ತುಂಗ ನೈತಿಕ ಕಾರಣಗಳು ಮುಂದಿಡಲ್ಪಡುವುವು

ಇಡೀ ಭಾರತದಲ್ಲಿ ಅಗ್ನಿಪ್ರಳಯವಾಗುತ್ತಿದ್ದಾಗ, ಸ್ತ್ರೀಪುರುಷರ ಆತ್ಮಗಳ ಸತ್ವಪರೀಕ್ಷೆಯಾಗುತ್ತಿದ್ದಾಗ, ದೂರದಲ್ಲಿ ಲಂಡನ್ನಿನಲ್ಲಿ, ಅಗ್ರತಾಂಬೂಲ ಪಡೆದ ವರು ಕೆಲವರು ಭಾರತಕ್ಕ ರಾಜ್ಯಾಂಗ ರಚನೆಯನ್ನು ರಚಿಸಲು ನೆರೆದರು ೧೯೩೧ ರಲ್ಲಿ ತೃತೀಯ ಚಕ್ರ ಗೋಷ್ಠಿಯು ಸಮಾವೇಶವಾಯಿತು ಅನೇಕ ಉಪಸಮಿತಿಗಳು ರಚಿತವಾದುವು ಕೇಂದ್ರ ಶಾಸನ ಸಭೆಯ ಬಹುಸಂಖ್ಯಾತರು ಸ್ವಂತಸುಖದೊಡನೆ ಸಾರ್ವಜನಿಕ ಕರ್ತವ್ಯವನ್ನು ಹೀಗೆ ಜಂಟಿಸಬಹುದೆಂಬ ಆಶೆಯಿಂದ ಆ ಸಮಿತಿಗಳ ಸದಸ್ಯತ್ವಕ್ಕೆ ಗಾಳಹಾಕಿದರು ಪ್ರಜೆಗಳ ವೆಚ್ಚದಿಂದ ದೊಡ್ಡದೊಂದು ಗುಂಪೇ ತೆರಳಿತು ಆ ಮೇಲೆ, ೧೯೩೩ ರಲ್ಲಿ ಭಾರತೀಯ ಪಂಚಾಯತರನ್ನೊಳಗೊಂಡ ಜಂಟಿ ಸಮಿತಿಯು ಸೇರಿತು ಮತ್ತೆ ಧರ್ಮಶೀಲ ಸರಕಾರವು ಸಾಕ್ಷಿಗಳಾಗಿ ಹೋದ ವರಿಗೆ ಉಚಿತ ಪ್ರಯಾಣ ಸೌಕರ್ಯಗಳನ್ನು ಒದಗಿಸಿತು ಪುನಃ ಅನೇಕ ಜನರು ಸಾರ್ವಜನಿಕರ ವೆಚ್ಚದಿಂದ ಭಾರತಮಾತೆಯ ಸೇವೆಯ ಶ್ರದ್ಧಾಕಾಂಕ್ಷೆಯಿಂದ ಮತ್ತೆ ಕಡಲುಗಳನ್ನು ದಾಂಟಿದರು ಮತ್ತೆ ಕೆಲವರು ಹೆಚ್ಚು ಪ್ರಯಾಣ ಭತ್ಯಕ್ಕಾಗಿ ಕೊಸರಾಡಿದರೆಂದು ಹೇಳಲಾಗಿತ್ತು

ಕರ್ಮದಲ್ಲಿ ನಿರತವಾಗಿದ್ದ ಭಾರತೀಯ ಜನಜಂಗುಳಿ ಚಳವಳಿಗಳಿಂದ ಭೀತ ರಾದ ಸ್ವಾರ್ಥಗಳ ಪ್ರತಿನಿಧಿಗಳು ಲಂಡನ್ನಿನಲ್ಲಿ ಬ್ರಿಟಿಷ್ ಸಾಮ್ರಾಜ್ಯತತ್ವದ ಆಶ್ರಯಕ್ಕೆ ಮರೆಹೋದುದು ಆಶ್ಚರ್ಯವಲ್ಲ ತಾಯಿನಾಡು ಉಳಿವು ಅಳಿವುಗಳ ಕಾಳಗ ದಲ್ಲಿ ತೊಡರಿಕೊಂಡಿದ್ದಾಗ ಯಾವ ಭಾರತೀಯನಾದರೂ ಈ ರೀತಿ ವರ್ತಿಸುವುದನ್ನು ನೋಡುವುದು ನಮ್ಮ ರಾಷ್ಟ್ರೀಯತಾವಾದವನ್ನು ನೋಯಿಸಿತು ಇಷ್ಟಾದರೂ ಒಂದು

ದೃಷ್ಟಿಯಿಂದ ಅದು ಒಳ್ಳೆಯದೇ ಎಂದು ನಮ್ಮಲ್ಲನೇಕರಿಗೆ ತೋರಿತು ಏಕೆಂದರೆ ನಾವು ಎಣಿಸಿದಂತೆ (ಹಾಗೆ ಮಾಡಿದುದು ತಪ್ಪೆಂದು ತೋರುತ್ತದೆ) ಅದು ಒಂದೇ ಏಟಿಗೆ ಕೊನೆಯದಾಗಿ ಭಾರತದಲ್ಲಿನ ಪ್ರಗತಿಗಾಮಿ ಅಂಶಗಳಿಂದ ಪ್ರತೀಕಾರಕ ಅಂಶ ಗಳನ್ನು ಪೃಥಕ್ಕರಿಸಿತು ಈ ಪೃಥಕ್ಕರಣವು ಜನಜಂಗುಳಿಯ ರಾಜಕೀಯ ವಿದ್ಯಾ ಭ್ಯಾಸದಲ್ಲಿ ನೆರವಾಗುವುದು ಮತ್ತು ನಾವು ಸ್ವಾತಂತ್ರ್ಯ ಸಾಧನದಿಂದ ಮಾತ್ರವೇ ಸಾಮಾಜಿಕ ಪ್ರಶ್ನೆಗಳನ್ನು ಬಲ್ಲೆವೆಂದೂ ಜನಜಂಗುಳಿಯ ಹೊರೆಯನ್ನು ಇಳಿಸಬಲ್ಲೆ ವೆಂದೂ ಆಶಿಸಬಹುದು, ಎಂಬುದನ್ನು ಆಸ್ಥೆಯುಳ್ಳವರಿಗೆಲ್ಲಾ ಇನ್ನೂ ಹೆಚ್ಚು ಸ್ಪಷ್ಟ ಪಡಿಸುವುದು

ಆದರೆ ಈ ಜನರು ತಮ್ಮ ನಿತ್ಯ ಜೀವನದಲ್ಲಿ ಮಾತ್ರವಲ್ಲದೆ, ನೈತಿಕವಾಗಿಯೂ ಮಾನಸಿಕವಾಗಿಯೂ ಭಾರತೀಯ ಜನಜಂಗುಳಿಯಿಂದ ಎಷ್ಟುಮಟ್ಟಿಗೆ ಪರಕೀಯ ರಾಗಿಬಿಟ್ಟಿದ್ದರೆಂಬುದನ್ನು ಕಂಡುಕೊಳ್ಳುವುದು ಆಶ್ಚರ್ಯಕರವಾಗಿತ್ತು ಅವರೊಂದಿಗೆ ಯಾವ ಸಂಬಂಧವಾಗಲಿ, ಅವರನ್ನು ಕುರಿತ ಅಥವಾ ಅವರನ್ನು ತ್ಯಾಗಕ್ಕೂ ವೇದ ನಾನುಭವಕ್ಕೂ ದೂಡುತ್ತಿದ್ದ ಅವರ ಅಂತಃಪ್ರೇರಣೆಯ ಅರಿವಾಗಲಿ ಇರಲಿಲ್ಲ ಈ ಪ್ರಖ್ಯಾತ ರಾಜಕಾರಣ ಪಟುಗಳಿಗೆ ಇದ್ದ ಸತ್ಯತೆಯು ಅಂಶವೊಂದನ್ನು ಒಳಗೊಂಡಿತ್ತು ಯಾವುದನ್ನು ಯಶಸ್ವಿಯಾಗಿ ಆಕರಿಸಲಸಾಧ್ಯವಾಗಿತ್ತೋ ಮತ್ತು ಆದ್ದರಿಂದ ಮನ ಸ್ಸಿಗೆ ಬೇಕಿರಲಿ ಬೇಡದಿರಲಿ ಅಂಗೀಕರಿಸಬೇಕಾಗಿತ್ತೋ ಆ ಬ್ರಿಟಿಷ್ ಸಾಮ್ರಾಜಿಕ ಶಕ್ತಿ ಭಾರತದ ಒಗಟನ್ನು ಬಿಡಿಸುವುದಾಗಲಿ, ನೈಜವಾದ ಜೀವಂತ ರಾಜ್ಯಾಂಗ ರಚನೆಯನ್ನು ರಚಿಸುವುದಾಗಲಿ, ಜನಜಂಗುಳಿಯ ಸಂಪ್ರಸಾದದ ಹೊರತು ತೀರ ಅಸಾಧ್ಯವಾಗಿತ್ತೆಂಬುದು ಅವರಿಗೆ ಹೊಳೆದಂತೆ ತೋರಲಿಲ್ಲ ಮಿ॥ ಜೆ ಎ ಸ್ಪೆಂಡರ್ ರವರು 'ಷಾರ್ಟ್ ಹಿಸ್ಟ್ರಿ ಆಫ್ ಅವರ್ ಟೈಮ್ಸ್' ಎಂಬ ಈಚಿನ ಗ್ರಂಥದಲ್ಲಿ, ೧೯೧೦ ರಲ್ಲಿ ಐರಿಷ್ ಜಂಟಿ ಸಮ್ಮೇಳನವು ರಾಜ್ಯಾಂಗ ವಿಷಯಿಕ ವಿಷಮಾವಸ್ಥೆಯನ್ನು ನಿವಾರಿ ಸಲು ಪಟ್ಟ ಪ್ರಯತ್ನವು ವಿಫಲವಾಯಿತು, ಎಂದು ಉಲ್ಲೇಖಿಸಿದ್ದಾರೆ ಸಂದು ಕಟ್ಟಿನಲ್ಲಿ ಸಿಲುಕಿರುವಾಗ ರಾಜ್ಯಾಂಗ ರಚನೆಯನ್ನು ಹುಡುಕಲೆತ್ನಿಸುತ್ತಿದ್ದ ರಾಜ ಕೀಯ ನಾಯಕರು, ಬೆಂಕಿಬಿದ್ದುರಿಯುತ್ತಿದ್ದ ಮನೆಯನ್ನು ವಿಮೆಮಾಡಲು ಪ್ರಯತ್ನಿ ಸುತ್ತಿದ್ದ ವ್ಯಕ್ತಿಗಳಂತಿದ್ದರು, ಎಂದು ಅವರು ಬರೆಯುತ್ತಾರೆ ೧೯೩೨–೩೩ ರಲ್ಲಿ ಭಾರತಕ್ಕೆ ಬಿದ್ದಿದ್ದ ಬೆಂಕಿಯು ೧೯೧೦ ರಲ್ಲಿ ಐರ್ಲ್ಯಂಡಿಗೆ ಬಿದ್ದಿದ್ದುದಕ್ಕಿಂತ ಬಹಳ ತೀಕ್ಷ್ಣವಾದುದು, ಮತ್ತು ಜ್ವಾಲೆಗಳು ಆರಿದರೂ ಬೂದಿಯಲ್ಲಿ ಕಳಕಳಿಸುತ್ತಿರುವ ಕೆಂಡಗಳು, ಸ್ವಾತಂತ್ರ್ಯಕ್ಕಾಗಿ ಭಾರತವು ಕೈಗೊಂಡಿರುವ ಸಂಕಲ್ಪದಂತೆ ಬಹುಕಾಲ ಬಿಸಿಯಾಗಿಯೂ ಆರಿಸಲಸಾಧ್ಯವಾಗಿಯೂ ನಿಲ್ಲುವುವು

ಭಾರತದಲ್ಲಿ ಅಧಿಕಾರಿ ಮಂಡಲಗಳಲ್ಲಿ ಹಿಂಸಾಪ್ರವೃತ್ತಿಯ ಆಶ್ಚರ್ಯಕರವಾದ ಬೆಳ ವಣಿಗೆ ಇತ್ತು ಪ್ರಾಚೀನ ಪರಂಪರೆಯೊಂದದು. ಮತ್ತು ನಾಡು ಬ್ರಿಟಿಷರಿಂದ

ಮುಖ್ಯವಾಗಿ ಪೋಲೀಸ್ ರಾಜ್ಯದೋಪಾದಿಯಲ್ಲಿ ಆಳಲ್ಪಡುತ್ತಿದ್ದಿತು. ಪೌರ ಆಡಳಿತಗಾರನ ಅಧಿಕಾರಯುತ ದೃಷ್ಟಿಕ್ಷೇಪವು ಕೂಡ ಸೈನ್ಯಾಧಿಕಾರದ್ದಾಗಿದ್ದಿತು, ಪರಕೀಯ ಮತ್ತು ವಿಜಿತ ಕ್ಷೇತ್ರವನ್ನು ಆಕ್ರಮಿಸಿರುವ ಶತ್ರುಸೇನೆಯ ಸೊಗಡು ಸದಾ ಇದ್ದಿತು ಪ್ರಚಲಿತ ವಿದ್ಯಮಾನಕ್ಕೆ ವಿರುದ್ಧವಾಗಿ ಎದ್ದ ತೀಕ್ಷ್ಣವಾದ ತಕರಣೆಯ ಕಾರಣದಿಂದ ಈ ಮನೋಭಾವವು ಬೆಳೆಯಿತು ಬಂಗಾಳ ಅಥವಾ ಇತರ ಕಡೆಗಳ ಪ್ರಾಸಂಗಿಕ ಭಯೋತ್ಪಾದಕ ಕಾರ್ಯಗಳು ಈ ಅಧಿಕಾರೀ ಹಿಂಸೆಯನ್ನು ಪೋಷಿಸಿ ಅದರ ಕಾರ್ಯಗಳನ್ನೇ ಸ್ವಲ್ಪಮಟ್ಟಿಗೆ ಸಮರ್ಥಿಸಿದುವು ವಿವಿಧ ಆರ್ಡಿನೆನ್ಸುಗಳೂ ಸರಕಾರಿ ನೀತಿಯೂ, ಅಧಿಕಾರಿಗಳಿಗೂ ಪೋಲೀಸರಿಗೂ ಪರಿಣಾಮದಲ್ಲಿ ಭಾರತವು ಪೋಲೀಸ್ ರಾಜಪ್ರಭುತ್ವಕ್ಕೊಳಗಾದಷ್ಟು ಅತ್ಯಧಿಕ ಅಧಿಕಾರವನ್ನು ಕೊಟ್ಟುವು, ಮತ್ತು ಅವಕ್ಕೆ ಯಾವ ಅಂಕೆಗಳೂ ಇರಲಿಲ್ಲ

ಎಲ್ಲಾ ಪ್ರಾಂತಗಳೂ ಕಡಿಮೆಯಾಗಿಯೋ ಹೆಚ್ಚಾಗಿಯೋ ಭೀಕರ ನಿಗ್ರಹದ ಈ ಒಡಬಾಗ್ನಿಪರೀಕ್ಷೆಗೆ ಒಳಗಾದುವು ಆದರ ಗಡಿನಾಡೂ ಬಂಗಾಳವೂ ಅತ್ಯಂತ ಯಾತನೆಗೊಳಗಾದುವು ಗಡಿನಾಡು ಯಾವಾಗಲೂ ಅರೆಸೈನಿಕ ಶಾಸನಗಳ ಆಡಳಿತಕ್ಕೊಳಗಾಗಿ ಪ್ರಬಲವಾದ ಸೈನಿಕ ಕ್ಷೇತ್ರವಾಗಿತ್ತು ಅದರ ಸೇನಾವಿನ್ಯಾಸಾವಸ್ಥಾನವು ಮುಖ್ಯವಾಗಿತ್ತು, ಮತ್ತು 'ಕೆಂಪು ಜುಬ್ಬ' ಚಳವಳಿಯು ಸರಕಾರವನ್ನು ಸಂಪೂರ್ಣವಾಗಿ ಕುಲುಕಿಬಿಟ್ಟಿತ್ತು ಪ್ರಾಂತದ 'ಶಾಂತಿಸಂಧಾನ'ದಲ್ಲಿ ಮತ್ತು 'ಮೂಂಡು ಹಳ್ಳಿ'ಗಳನ್ನು ಕುರಿತ ವ್ಯವಹಾರದಲ್ಲಿ ಸೈನ್ಯಶ್ರೇಣಿಗಳು ಚೆನ್ನಾಗಿ ಕಣ್ಣಾರಿಕೆಯಾಗಿದ್ದುವು ಇಡೀ ಭಾರತದಲ್ಲಿ ಹಳ್ಳಿಗಳ ಮೇಲೆ, ಮತ್ತು ಪ್ರಾಸಂಗಿಕವಾಗಿ (ವಿಶೇಷವಾಗಿ ಬಂಗಾಳದಲ್ಲಿ) ನಗರಗಳ ಮೇಲೆ ಭಾರವಾದ ಸಾಮೂಹಿಕ ಜುಲ್ಮಾನೆಯ ಹೊರೆಯನ್ನು ಹೊರಿಸುವುದು ಸಾಮಾನ್ಯ ವಾಡಿಕೆಯಾಗಿದ್ದಿತು ಅನೇಕವೇಳೆ ದಂಡವಿಧಾಯಕ ಪೋಲೀಸ್ ದಳಗಳು ಇಲ್ಲಲ್ಲಿಡಲ್ಪಟ್ಟುವು, ಮತ್ತು ಯಾವಾಗ ಅವರಿಗೆ ಅಮಿತವಾದ ಅಧಿಕಾರಗಳಿದ್ದುವೋ, ಅಂಕೆಗಳು ಇರಲಿಲ್ಲವೋ ಆಗ ಪೋಲೀಸರ ಅತ್ಯಾಚಾರಗಳು ಅನಿವಾರ್ಯವಾಗಿದ್ದುವು ನ್ಯಾಯದ ಅನ್ಯಾಯ, ಕ್ರಮದ ಅಕ್ರಮ, ಇವುಗಳ ಮಾದರಿ ನಿದರ್ಶನಗಳು ನಮಗೆ ದೊರೆತುವು

ಬಂಗಾಳದ ಭಾಗಗಳು ಅತ್ಯಂತ ಅಸಾಧಾರಣವಾದ ಚಮತ್ಕಾರಗಳನ್ನು ಪ್ರದರ್ಶಿಸಿದವು ಸರಕಾರವು ಇಡೀ ಜನಸಂಖ್ಯೆಗಳನ್ನು (ಸಮಾಚೀನವಾಗಿ ಹೇಳಬೇಕಾದರೆ ಹಿಂದೂ ಜನಸಂಖ್ಯೆಯನ್ನು) ಶತ್ರುಗಳಂತೆ ಭಾವಿಸಿತು ಪ್ರತಿಯೊಬ್ಬರೂ— ಗಂಡಸು, ಹೆಂಗಸು, ೧೨ ರಿಂದ ೨೫ ವಯಸ್ಸಿನ ಅಂತರದ ಹುಡುಗ ಅಥವಾ ಹುಡುಗಿಯರು—ಗುರುತಿನ ಚೀಟಿಗಳನ್ನು ಇಟ್ಟುಕೊಂಡಿರಬೇಕಾಗಿದ್ದಿತು ಗುಂಪು ಗುಂಪುಗಳ ಬಹಿಷ್ಕಾರಗಳೂ ದಿಗ್ಬಂಧನಗಳೂ ನಡೆದುವು ಉಡುಪು ಅಂಕೆಗೊಳಗಾಯಿತು, ಪಾಠಶಾಲೆಗಳು ಅಂಕೆಗೊಳಗಾದುವು ಇಲ್ಲವೆ ಮುಚ್ಚಲ್ಪಟ್ಟುವು, 'ಬೈಸಿಕಲ್ಲು'ಗಳ

ಉಪಯೋಗಕ್ಕೆ ಅಡ್ಡಿಯಾಯಿತು, ಚಲನವಲನಗಳನ್ನು ಪೋಲೀಸರಿಗೆ ವರದಿಮಾಡ ಬೇಕಾಗಿತ್ತು 'ಕರ್ಫ್ಯೂ', ಸಂಧ್ಯಾಶಾಸನ, ಸೈನ್ಯ ಪ್ರಸ್ಥಾನಗಳು, ದಂಡವಿಧಾಯಕ ಪೊಲೀಸ್, ಸಾಮೂಹಿಕ ಜುಲ್ಮಾನೆಗಳು ಮತ್ತು ತದಿತರ ನಿಯಮಗಳ ಮತ್ತು ಶಾಸನಗಳ ತಿಂಥಿಣಿ ವಿಶಾಲ ಕ್ಷೇತ್ರಗಳು ಎಡೆಬಿಡದೆ ಮುತ್ತಿಗೆಯ ಅವಸ್ಥೆಯಲ್ಲಿದ್ದಂತಿದ್ದುವು, ಮತ್ತು ಅತ್ಯಂತ ಕಟ್ಟುನಿಟ್ಟಾದ ಕಣ್ಗಾವಲಿಗೊಳಗಾದ, ತಾತ್ಕಾಲಿಕವಾಗಿ ನಿವೃತ್ತರಾದ, ಹೆಣ್ಣುಗಂಡು ಬಂದಿಗಳಿಗಿಂತ ನಿವಾಸಿಗಳ ಸ್ಥಿತಿಯು ಸ್ವಲ್ಪವೂ ಮೇಲಾಗಿರಲಿಲ್ಲ ಆಶ್ಚರ್ಯಕರವಾದ ಈ ಎಲ್ಲ ಪೂರ್ವೋಪಾಯಗಳು, ಶಾಸನಗಳು, ಬ್ರಿಟಿಷ್ ಸರಕಾರದ ದೃಷ್ಟಿಯಿಂದ ಆವಶ್ಯಕವಾಗಿದ್ದುವೋ ಇಲ್ಲವೋ, ತೀರ್ಮಾನಿಸುವುದಕ್ಕೆ ನಾನಲ್ಲ ಅವು ಆವಶ್ಯಕವಾಗಿರದಿದ್ದರೆ, ಇಡೀ ಕ್ಷೇತ್ರಗಳ ಜನಸ್ತೋಮಗಳನ್ನು ಹೀರಿ ಹಿಂಡಿ, ತೇಜೋವಧೆಮಾಡಿ, ಮಹಾ ನಷ್ಟಕ್ಕೆ ಗುರಿಪಡಿಸಿದ ಘೋರ ಅಪರಾಧವನ್ನು ಸರಕಾರದ ತಲೆಯಮೇಲ ಹೂರಿಸಬೇಕು ಅವು ಆವಶ್ಯಕವಾಗಿದ್ದರ, ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯನ್ನು ಕುರಿತು ಅದೇ ಕೊನೆಯ ತೀರ್ಮಾನ

ಹಿಂಸಾಪ್ರವೃತ್ತಿಯು ಸೆರೆಮನೆಯ ಒಳಗೂ ಕೂಡ, ನಮ್ಮ ಜನರನ್ನು ಬೆನ್ನಟ್ಟಿ ಬಂದಿತು ಸೆರೆಯಾಳುಗಳ ವರ್ಗೀಕರಣವು ಪ್ರಹಸನವೊಂದಾಗಿತ್ತು, ಮತ್ತು ಅನೇಕ ವೇಳೆ ಮೇಲಿನ ತರಗತಿಯಲ್ಲಿಡಲ್ಪಟ್ಟವರಿಗೆ ಅದು ಚಿತ್ರಹಿಂಸೆಯಾಗುತ್ತಿದ್ದಿತು. ಎಲ್ಲೋ ಕೆಲವರು ಈ ಮೇಲಿನ ತರಗತಿಗಳಿಗೆ ಹೋದರು, ಮತ್ತು ಶೀಘ್ರವೇದಿಗಳಾದ ಅನೇಕ ಸ್ತ್ರೀ ಪುರುಷರು ನಿರಂತರವಾದ ನೋವಿನ ಪರಿಸ್ಥಿತಿಗಳಿಗೆ ಸಗ್ಗಬೇಕಾಗಿದ್ದಿತು ಸಾಧಾರಣ ಖೈದಿಗಳಿಗಿಂತ, ರಾಜಕೀಯ ನೆರೆಯಾಳುಗಳ ಪಾಡನ್ನು ಕಷ್ಟತರವಾಗಿ ಮಾಡುವುದೇ ಸರಕಾರದ ಬುದ್ಧಿಪೂರ್ವಕ ನೀತಿಯಾಗಿತ್ತೆಂದು ಕಾಣುತ್ತದೆ ನೆರೆಮನೆಗಳ ಇನ್ಸ್ಪೆಕ್ಟರ್ ಜನರಲ್ ಸಾಹೇಬರೊಬ್ಬರು, ಶಾಸನ ಭಂಗದ ಸೆರೆಯಾಳುಗಳೊಡನೆ "ನಿಷ್ಕರುಣೆಯಿಂದಲೇ ವ್ಯವಹರಿಸಬೇಕು" ಎಂದು ಎಲ್ಲ ಸೆರೆಮನೆಗಳಿಗೂ ಗುಪ್ತ ರಾಯಸವೊಂದನ್ನು ಕಳುಹಿಸಿಯೂ ಬಿಟ್ಟರು * ಚಾಟಿ ಏಟು ಸೆರೆಯ ವಾಡಿಕೆಯ ದಂಡನೆಯಾಯಿತು. ೧೯೩೩ ರ ಏಪ್ರಿಲ್ ೨೭ ರಲ್ಲಿ, ಹೌಸ್ ಆಫ್ ಕಾಮನ್ಸ್ ಸಭೆಯಲ್ಲಿ ಭಾರತದ ಅಂಡರ್ ಸೆಕ್ರೆಟರಿಗಳು ಹೀಗೆ ಹೇಳಿದರು "ಹಿಂದೂದೇಶದಲ್ಲಿ ೫೦೦ ಜನಗಳಿಗಿಂತ ಹೆಚ್ಚಾಗಿ, ೧೯೩೨ ರಲ್ಲಿ ಶಾಸನ ಭಂಗ ಚಳವಳಿಯ ಸಂಬಂಧವಾದ ಅಪರಾಧಗಳಿಗಾಗಿ ಚಾಟಿ ಏಟಿಗೆ ಗುರಿಯಾದರು ಎಂಬಂಶವನ್ನು ಸರ್ ಸ್ಯಾಮುಯಲ್ ಹೋರ್‌ರು ಅರಿತಿದ್ದಾರ" ಸೆರೆಯ ಶಿಸ್ತಿನ

---

* ಈ ರಾಯಸವು ೧೯೩೨ ನೆಯ ಇಸವಿ ಜೂನ್ ೩೦ ನೆಯ ತಾರೀಖಿನದು ಈ ಮುಂದೆ ಬರುವುದನ್ನು ಒಳಗೊಂಡಿತ್ತು "ಕೇವಲ ಶಾಸನ ಭಂಗ ಚಳವಳಿಯ ಸೆರೆಯಾಳುಗಳಿಗನುಕೂಲವಾದ ಉತ್ತಮೋಪಚಾರವು ಸಮರ್ಥನೀಯವಲ್ಲ, ಎಂಬ ಅಂಶವನ್ನು ಇನ್ಸ್ಪೆಕ್ಟರ್ ಜನರಲ್‌ರು ಸೂಪರಿಂಟೆನ್‌ಡೆಂಟ್‌ರ ಮತ್ತು ಸೆರೆಮನೆಯ ನೌಕರರಿಗೆ ಒತ್ತಿಹೇಳುತ್ತಾರೆ ಈ ವರ್ಗಕ್ಕೆ ಅಗತ್ಯವಾಗಿಯೂ ಸದರ ಕೊಡಕೂಡದು, ಮತ್ತು ಅವರೊಂದಿಗೆ ನಿಷ್ಕರುಣೆಯಿಂದ ವ್ಯವಹರಿಸಬೇಕು."

ಉಲ್ಲಂಘನೆಗಾಗಿ ಸೆರಮನೆಗಳಲ್ಲಿ ವಿಧಿಸಿದ ಹಲವು ಚಾಟಿ ಏಟಿನ ದಂಡನೆಗಳು ಈ ಸಂಖ್ಯೆಯಲ್ಲಿ ಸೇರಿದೆಯೋ ಇಲ್ಲವೋ ಸ್ಪಷ್ಟವಾಗಿಲ್ಲ ೧೯೩೨ ರಲ್ಲಿ ಪದೇಪದೇ ಬಿದ್ದ ಚಾಟಿ ಏಟಿನ ಸಮಾಚಾರಗಳು ನಮಗೆ ಸೆರೆಮನೆಯಲ್ಲಿ ತಿಳಿದಾಗ, ೧೯೩೦ ರ ಡಿಸೆಂಬರ್‌ನಲ್ಲಿ ಬಿದ್ದ ಚಾಟಿ ಏಟಿನ ಒಂದೆರಡು ಚಿಲ್ಲರೆ ನಿದರ್ಶನಗಳನ್ನು ಖಂಡಿಸಲು ಕೈಗೊಂಡ ನಮ್ಮ ಮೂರು ದಿನಗಳ ಉಪವಾಸವನ್ನೂ ನಮ್ಮ ನಿಷೇಧ ವಚನವನ್ನೂ ಜ್ಞಾಪಿಸಿಕೊಂಡೆ ಆಗ ಆ ಪಾಶವೀಕ್ರೌರ್ಯದಿಂದ ಧಕ್ಕೆ ಬಡಿದಿತ್ತು ಈಗ ಇನ್ನೂ ಹೆಚ್ಚು ತೀಕ್ಷ್ಣವಾದ ಧಕ್ಕೆ ಬಡಿಯಿತು ಅಂತರಂಗದಲ್ಲಿ ಮೂಕ ಸಂಕಟವೆದ್ದಿತು ಆದರೆ ನಾನು ಪುನಃ ವಿರೋಧಿಸಬೇಕೆಂದೂ ಉಪವಾಸ ಮಾಡಬೇಕೆಂದೂ ನನಗೆ ಹೊಳೆಯಲಿಲ್ಲ ಆ ವಿಷಯದಲ್ಲಿ ನಾನು ಇನ್ನೂ ಹೆಚ್ಚು ನಿಸ್ಸಹಾಯನಾಗಿದ್ದೆನೆಂದು ತೋರಿತು ಸ್ವಲ್ಪ ಕಾಲವಾದ ಮೇಲೆ ಪಾಶವೀಕ್ರೌರ್ಯದಿಂದ ಬಗೆಯು ಜಡ್ಡಾಗುತ್ತದೆ ಇಳೆಯು ಒಗ್ಗಿಕೊಳ್ಳಬೇಕಾದರ, ಕಟ್ಟದ್ದು ನಿಡುಗಾಲ ನಡೆಯಬೇಕು

ಸೆರಮನೆಯಲ್ಲಿ ನಮ್ಮ ಜನರಿಗೆ ಕಷ್ಟತಮವಾದ ಕೆಲಸಗಳನ್ನು—ಗಾಣಗಳು, ಎಣ್ಣೆಗಾಣಗಳು, ಇತ್ಯಾದಿ—ಕೊಡುತ್ತಿದ್ದರು ಕ್ಷಮಾಯಾಚನ ಮಾಡಿ, ಸರಕಾರಕ್ಕೆ ಮುಚ್ಚಳಿಕೆ ಬರೆದುಕೊಟ್ಟು ಬಿಡುಗಡೆ ಹೊಂದಲು ಅವರನ್ನು ಪ್ರೇರೇಪಿಸುವುದಕ್ಕಾಗಿ, ಅವರ ಪಾಡು ಆದಷ್ಟು ಮಟ್ಟಿಗೂ ಅಸಹನೀಯವಾಗುವಂತೆ ಮಾಡಲ್ಪಟ್ಟಿತು ಸೆರೆಯ ಅಧಿಕಾರಿಗಳು ಇದನ್ನು ಮಹಾ ವಿಜಯವೊಂದೆಂದು ಪರಿಗಣಿಸಿದರು

ಜೋರಾವರಿಗೂ ತೇಜೋವಧೆಗೂ ಪ್ರತಿಭಟಿಸಿದ ಹುಡುಗರು ಮತ್ತು ಯುವಕರ ಪಾಲಿಗೆ, ಸರೆಯ ಈ ಶಿಕ್ಷೆಗಳ ಬಹು ಭಾಗವು ಬಿತ್ತು ಆಂಗ್ಲೇಯ ಪಬ್ಲಿಕ್ ಸ್ಕೂಲ್ ಅಥವಾ ವಿಶ್ವವಿದ್ಯಾನಿಲಯದಲ್ಲ ಬಹುಮುಖವಾದ ಉತ್ತೇಜನವನ್ನೂ ಶ್ಲಾಘನೆಯನ್ನೂ ಪಡೆಯುತ್ತಿದ್ದ ಮಾದರಿಯ, ಆತ್ಮಗೌರವ, ಚುರುಕು ಮತ್ತು ಸಾಹಸ ಕಾರ್ಯೋತ್ಸಾಹಗಳಿಂದ ತುಂಬಿದ ಚೆಲುವಾದ ಮತ್ತು ಕಸುವಿನಿಂದ ಕೂಡಿದ ಹುಡುಗರ ಪಡೆಯದು ಆದರೆ ಇಲ್ಲಿ, ಭಾರತದಲ್ಲಿ, ಅವರ ತುಂಬು ಜೌವನದ ಆದರ್ಶವಾದ ಮತ್ತು ಹೆಮ್ಮೆಗಳು, ಅವರನ್ನು ಶೃಂಖಲೆಗಳು, ಏಕಾಂತ ಬಂಧನ, ಮತ್ತು ಚರ್ಮಪಟ್ಟಿಕಾ ಪ್ರಹಾರಗಳು, ಇವುಗಳಿಗೆ ಕರೆದೊಯ್ದಿತು

ಸೆರಮನೆಯಲ್ಲಿ, ನಮ್ಮ ಸ್ತ್ರೀಯರ ಪಾಡು ವಿಶೇಷವಾಗಿ ಕಷ್ಟವೂ ಯೋಚಿಸುವುದಕ್ಕೆ ಕೂಡ ದುಃಖದಾಯಿಯೂ ಆಗಿದ್ದಿತು ಪ್ರಾಯಿಕವಾಗಿ, ತನ್ನ ಅನುಕೂಲ್ಯಕ್ಕಾಗಿ ಪುರುಷನು ಅಧಿಕರಿಸಿದ್ದ ಸಮಾಜದಿಂದ ಉದ್ಭವಿಸಿದ ಅನೇಕ ದಬ್ಬಾಳಿಕೆಗಳು ಮತ್ತು ಸಂಪ್ರದಾಯಗಳಿಂದ ಮುಖ್ಯವಾಗಿ ನರಳುತ್ತಿದ್ದ, ಆಸರೆಯ ಬಾಳಿಗೆ ಒಗ್ಗಿಹೋಗಿದ್ದ ಮಧ್ಯಮ ತರಗತಿಯ ಸ್ತ್ರೀಯರವರು ಸ್ವಾತಂತ್ರ್ಯದ ಕರೆಯು ಅವರಿಗೆ ಯಾವಾಗಲೂ ಎರಡು ಅರ್ಥಗಳನ್ನು ಒಳಗೊಂಡಿತ್ತು ಅವರು ಚಳವಳಿಯೊಳಕ್ಕೆ

ಎದೆಯೊಳಗೆ ಮುನ್ನುಗ್ಗಿದಾಗ ಮರೆದ ಉತ್ಸಾಹ ಮತ್ತು ಚೈತನ್ಯಗಳಿಗೆ, ಗೃಹ್ಯಕ ದಾಸ್ಯದಿಂದ ಮುಕ್ತರಾಗಿಬಿಡಬೇಕೆಂಬ ಅಸ್ಪಷ್ಟವಾದ, ಅರಿವಾಗಿರದ ಆದರೂ ತೀವ್ರ ವಾದ ಆಕಾಂಕ್ಷೆಯಲ್ಲೇ ಕೀಲುಗಳಿದ್ದುವೆಂಬುದಕ್ಕೆ ಯಾವ ಸಂದೇಹವೂ ಇಲ್ಲ ಎಲ್ಲೋ ಕೆಲವರು ಹೊರತಾಗಿ, ಅವರೆಲ್ಲರೂ ಸಾಮಾನ್ಯ ಸೆರೆಯಾಳುಗಳಂತೆ ವರ್ಗೀ ಕರಿಸಲ್ಪಟ್ಟು, ತೀರ ಕೀಳ್ಪಟ್ಟ ಒಡನಾಡಿಗಳೊಂದಿಗೆ ಮತ್ತು ಅನೇಕ ಭಯಂಕರವಾದ ಸನ್ನಿವೇಶಗಳಲ್ಲಿ ಇಡಲ್ಪಟ್ಟಿದ್ದರು ಒಮ್ಮೆ ನಾನು ಸ್ತ್ರೀಯರ ಆವರಣದ ಮಗ್ಗುಲಿನ ಪಾಳಿಯುದಲ್ಲಿಡಲ್ಪಟ್ಟಿದ್ದೆ ನಮ್ಮನ್ನು ಗೋಡೆಯೊಂದು ಬೇರ್ಪಡಿಸಿತ್ತು ಆ ಆವರಣ ದಲ್ಲಿ ಇತರ ಸೆರೆಯಾಳುಗಳೊಂದಿಗೆ ಕೆಲವು ರಾಜಕೀಯ ಸ್ತ್ರೀ ಸೆರೆಯಾಳುಗಳೂ ಇದ್ದರು ಒಮ್ಮೆ ನನಗೆ ತಮ್ಮ ಮನೆಯಲ್ಲಿ ಆತಿಥ್ಯವನ್ನು ಸಲ್ಲಿಸಿದ್ದ ಒಬ್ಬಾಕೆಯೂ ಅಲ್ಲಿದ್ದರು ನಮ್ಮ ಮಧ್ಯೆ ಎತ್ತರವಾದೊಂದು ಗೋಡೆಯಿತ್ತು ಆದರೆ ಅದರಿಂದ, ನಮ್ಮ ಸ್ನೇಹಿತರು ಸೈರಿಸಬೇಕಾಗಿದ್ದ, ಹೆಣ್ಣು ಸೆರೆಯಾಳು ವಾರ್ಡರ್‌ಗಳ ಅಸಭ್ಯ ಭಾಷೆ ಮತ್ತು ಶಾಪಗಳನ್ನು ನಾನು ಸ್ಪಷ್ಟವಾಗಿ ಕೇಳುವುದಕ್ಕೆ ಅಡ್ಡಿಯಾಗಲಿಲ್ಲ

ಎರಡು ವರುಷಗಳಿಗೆ ಮುಂಚೆ, ಎಂದರೆ ೧೯೩೦ ರಲ್ಲಿ ಇದ್ದುದಕ್ಕಿಂತ ೧೯೩೨–೩೩ ರಲ್ಲಿ ರಾಜಕೀಯ ಸೆರೆಯಾಳುಗಳ ಉಪಚಾರವು ಬಹಳ ಕೆಟ್ಟಿತ್ತೆಂಬುದು ಸ್ಪಷ್ಟವಾಗಿ ಕಾಣುತ್ತಿದ್ದಿತು ಅಧಿಕಾರಿಗಳ ವೈಯಕ್ತಿಕ ಕ್ಷಣಚಿತ್ತ–ಕ್ಷಣಪಿತ್ತ ಪ್ರವೃತ್ತಿಯು ಇದಕ್ಕೆ ಕಾರಣವಾಗಿರಲಾರದು ಸರಕಾರದ ಉದ್ದಿಶ್ಯಪೂರ್ವಕ ನೀತಿಯೇ ಇದು ಎಂಬುದು ಮಾತ್ರ ಸವಿವೇಕವಾದ ಅನುಮಾನ ರಾಜಕೀಯ ಸೆರೆಯಾಳುಗಳನ್ನು ಒಂದೆಡೆಗೆ ಬಿಟ್ಟರೂ, ಆ ವರ್ಷಗಳಲ್ಲಿ ಸಂಯುಕ್ತ ಪ್ರಾಂತಗಳ ಸೆರೆಯ ಇಲಾಖೆಗೆ, ಕಾರುಣ್ಯದ ಸೊಗಡನ್ನು ಬೀರುವ ಯಾವುದಕ್ಕಾದರೂ ವಿರುದ್ಧವಾಗಿತ್ತೆಂಬ ಕೀರ್ತಿಯಿದ್ದಿತು ಅನಾಪಾದ್ಯವಾದ ಸ್ಥಳದಿಂದ ಇದರ ಸ್ವಾರಸ್ಯವಾದೊಂದು ನಿದರ್ಶನವು ನಮಗೆ ತಿಳ ಯಿತು ಪ್ರಸಿದ್ಧರಾದ ಸೆರೆಯ ಭೇಟಿಕಾರರು, ಗಂಡಾಡಿ 'ನೈಟ್' ರು, ನಮ್ಮಂತೆ ದಂಗೆ ಕಾರರೂ ರಾಜದ್ರೋಹ ವ್ಯಾಪಾರಿಗಳೂ ಆಗಿರದ ಯಾರನ್ನು ಗೌರವಿಸಲು ಸರಕಾರವು ಹರ್ಷಿಸಿತ್ತೋ ಅವರು, ನಮಗೆ ಒಮ್ಮೆ ಸೆರೆಮನೆಯಲ್ಲಿ ಭೇಟಿಯನ್ನಿತ್ತರು ಕೆಲವು ತಿಂಗಳುಗಳ ಹಿಂದೆ, ತಾವು ಮತ್ತೊಂದು ಸೆರೆಮನೆಗೆ ಹೋಗಿದ್ದುದಾಗಿಯೂ ತಮ್ಮ ಇನ್‌ಸ್ಪೆಕ್ಷನ್ ವರದಿಯಲ್ಲಿ ಸೆರೆಮನೆಯ ನೌಕರನನ್ನು "ಕರುಣಾಳು ಶಿಕ್ಷೆಗಾರ" ಎಂದು ವರ್ಣಿಸಿದ್ದುದಾಗಿಯೂ ಹೇಳಿದರು ಸದರಿ ಸೆರೆಮನೆಯ ನೌಕರನು, ಅಧಿಕಾರಿ ಮಂಡಲದಲ್ಲಿ ಅದು ತನ್ನ ಯೋಗ್ಯತೆಯನ್ನು ಕಡಿಮೆ ಮಾಡುವುದರಿಂದ ತನ್ನ ಕಾರುಣ್ಯದ ವಿಚಾರದಲ್ಲಿ ಏನನ್ನೂ ಹೇಳಬಾರದೆಂದು ಪ್ರಾರ್ಥಿಸಿದನಂತೆ ಆದರೆ 'ನೈಟ್'ರು ತಮ್ಮ ವರ್ಣನೆಯಿಂದ ಆತನಿಗೆ ಯಾವ ವಿಧವಾದ ಹಾನಿಯೂ ತಟ್ಟುವು ದಿಲ್ಲವೆಂದು ಪಟ್ಟು ಹಿಡಿದು ಹೇಳಿದರು ಫಲಿತಾಂಶ ಸ್ವಲ್ಪ ದಿನಗಳೊಳಗಾಗಿ ಸೆರೆ ಮನೆಯ ನೌಕರನು, ತನಗೆ ದಂಡಪ್ರಾಯವಾದ, ದೂರದ ಮತ್ತು ಮೂಲೆಯ ಕೊಂಪೆ ಯೊಂದಕ್ಕೆ ವರ್ಗಾಯಿಸಲ್ಪಟ್ಟನು

ವಿಶೇಷವಾಗಿ ಕ್ರೂರಿಗಳೂ ಧರ್ಮಭೀರುಗಳಲ್ಲದವರೂ ಎಂದು ಪರಿಗಣಿತವಾಗಿದ್ದ ಸೆರೆಮನೆಯ ಕೆಲವು ನೌಕರರಿಗೆ ಬಡ್ತಿಗಳೂ ಬಿರುದುಗಳೂ ಕೊಡಲ್ಪಟ್ಟುವು. ಸೆರೆಮನೆಗಳಲ್ಲಿ ಲಂಚರುಷವತ್ತುಗಳು ಸರ್ವಸಾಮಾನ್ಯ ಪ್ರಸಂಗ, ಯಾರೂ ಕೈಬೆಚ್ಚಗೆ ಮಾಡಿಕೊಳ್ಳದೆ ಇರುವುದೇ ಇಲ್ಲ ಆದರೆ, ನೆರೆಮನೆಯ ಅಧಿಕಾರಿವರ್ಗದಲ್ಲಿ ಯಾರು ಕಟ್ಟುನಿಟ್ಟಾದ ಶಿಸ್ತಿಗಾರರು ವೇಷ ಹಾಕುವರೋ, ಸಾಧಾರಣವಾಗಿ ಅವರೇ ಮಹಾಪರಾಧಿಗಳೆಂದು ನನ್ನ ಮತ್ತು ನನ್ನ ಮಿತ್ರರನೇಕರ ಅನುಭವಕ್ಕೆ ಬಂದಿದೆ

ನಾನು ನರೆಮನೆಯಲ್ಲೂ ಹೊರಗೂ ಅದೃಷ್ಟಶಾಲಿಯಾಗಿದ್ದೇನೆ ನಾನು ಸಂಧಿಸಿದವರಲ್ಲಿ ಬಹುತರವಾಗಿ ಪ್ರತಿಯೊಬ್ಬರೂ, ಪ್ರಾಯಃ ನಾನು ಅರ್ಹನಾಗಿರದಿದ್ದಾಗ ಕೂಡ ನನಗೆ ಗೌರವೋಪಚಾರಗಳನ್ನು ನೀಡಿದ್ದಾರೆ ಅಂತೂ, ಸೆರೆಮನೆಯಲ್ಲಿ ನಡೆದ ಒಂದು ಪ್ರಸಕ್ತಿಯು ನನ್ನನ್ನೂ ಸ್ವಜನರನ್ನೂ ಬಹಳವಾಗಿ ನೋಯಿಸಿತು ತಾಯಿ, ಕಮಲಾ, ಮತ್ತು ನನ್ನ ಮಗಳು ಇಂದಿರಾ ಮೂವರೂ, ಅಲಹಾಬಾದು ಜಿಲ್ಲಾ ಸೆರೆಮನೆಯಲ್ಲಿದ್ದ ನನ್ನ ಭಾವಂದಿರು, ರಣಜಿತ್ ಪಂಡಿತರನ್ನು ಸಂದರ್ಶಿಸಲು ಹೋಗಿದ್ದರು ಅವರದೇನೂ ತಪ್ಪಿಲ್ಲದಿದ್ದರೂ, ಸೆರೆಮನೆಯ ನೌಕರನು ಅವರಿಗೆ ಅವಮಾನಮಾಡಿ ಹೊರದೂಡಿದನು ಇದು ನನಗೆ ತಿಳಿದಾಗ ವ್ಯಥೆಯಾಯಿತು; ಅದನ್ನು ಕುರಿತ ಪ್ರಾಂತ ಸರಕಾರದ ಪ್ರತಿಕ್ರಿಯೆಯು ನನಗೆ ಧಕ್ಕೆಯನ್ನು ಬಡಿಯಿತು ಸೆರೆಮನೆ ಅಧಿಕಾರಿಗಳಿಂದ ನಮ್ಮ ತಾಯಿಯು ಅವಮಾನಿತಳಾಗುವ ಸಂಭವವನ್ನು ದೂರವಿಡಲು ನಾನು ಎಲ್ಲ ಬಗೆಯ ಭೇಟಿಗಳನ್ನೂ ನಿರೋಧಿಸಲು ನಿಶ್ಚಯಿಸಿದೆ ನಾನು ಡೆಹ್ರಾ ಡೂನ್ ಸೆರೆಮನೆಯಲ್ಲಿದ್ದಾಗ ಸುಮಾರು ಏಳು ತಿಂಗಳುಗಳವರೆಗೆ ಭೇಟಿಗೊಳ್ಳಲೇ ಇಲ್ಲ

೪೪

# ಕಾರಾಗೃಹ ಭಂಗಿಗಳು

ಗೋವಿಂದ ವಲ್ಲಭ ಪಂತ್ ಮತ್ತು ನಾನು, ಇಬ್ಬರೂ ಬರೇಲಿ ಜಿಲ್ಲಾ ಸೆರೆಮನೆಯಿಂದ ಡೆಹ್ರಾ ಡುನ್ ಸೆರೆಮನೆಗೆ ವರ್ಗಾಯಿಸಲ್ಪಟ್ಟೆವು ಜನಸಂದಣಿಯು ಸೇರುವ ಸಂಭವವನ್ನು ನಿವಾರಿಸಲು ಬರೇಲಿಯಲ್ಲಿ ನಮ್ಮನ್ನು ರೈಲಿನಲ್ಲಿ ಕೂಡಿಸದೆ ೫೦ ಮೈಲಿ ದೂರದಲ್ಲಿದ್ದ ದಾರಿಬದಿಯ ಒಂದು ನಿಲ್ದಾಣದಲ್ಲಿ ರೈಲನ್ನು ಹತ್ತಿಸಿದರು ನಮ್ಮನ್ನು ಗುಟ್ಟಾಗಿ ಮೋಟಾರು ಕಾರಿನಲ್ಲಿ ಸಾಗಿಸಿದರು ಅನೇಕ ತಿಂಗಳುಗಳ ಏಕಾಂತವಾಸವಾದ ಮೇಲೆ ರಾತ್ರಿಯ ತಂಗಾಳಿಯಲ್ಲಿ ಆ ಮೋಟಾರು ಪ್ರಯಾಣವು ನಮಗೆ ಅಪೂರ್ವವಾದ ಆನಂದವನ್ನು ತಂದಿತು

ನಾವು ಬರೇಲಿ ಸೆರೆಮನೆಯನ್ನು ಬಿಡುವುದಕ್ಕೆ ಮುಂಚೆ, ಒಂದು ಚಿಕ್ಕ ಪ್ರಸಂಗ ನಡೆಯಿತು ಅದರಿಂದ ನನ್ನ ಹೃದಯವು ಆಗ ಕದಲಿತು , ಮತ್ತು ಈಗಲೂ ಅದು ನನಗೆ ಚೆನ್ನಾಗಿ ಜ್ಞಾಪಕವಿದೆ ಬರೇಲಿಯ ಪೊಲೀಸ್ ಸೂಪರಿಂಟೆಂಡೆಂಟರಾದ ಇಂಗ್ಲಿಷಿನವರೊಬ್ಬರು, ನಾನು ಮೋಟಾರು ಹತ್ತಿದಾಗ ಅಲ್ಲಿದ್ದು ಸ್ವಲ್ಪ ಸಂಕೋಚದಿಂದ ಒಂದು ಕಟ್ಟನ್ನು ನನಗೆ ಕೊಟ್ಟರು ಅದರಲ್ಲಿ ಕೆಲವು ಹಳೆಯ ಸಚಿತ್ರ ಜರ್ಮನ್ ಮಾಸಪತ್ರಿಕೆಗಳಿವೆಯೆಂದು ಹೇಳಿ, ನಾನು ಜರ್ಮನ್ ಭಾಷೆಯನ್ನು ಕಲಿಯುತ್ತಿರುವೆನೆಂಬುದನ್ನು ತಾವು ಕೇಳಿದ್ದುದಾಗಿ ನುಡಿದು ಆ ಮಾಸ ಪತ್ರಿಕೆಗಳನು ನನಗೆಂದು ತಂದುಕೊಟ್ಟುದಾಗಿ ಅವರು ಹೇಳಿದರು ಅದಕ್ಕೆ ಹಿಂದೆ ಅವರನ್ನು ನಾನು ನೋಡಿಯೇ ಇರಲಿಲ್ಲ ಅಲ್ಲಿಂದೀಚೆಗೂ ನೋಡಿಲ್ಲ ಅವರ ಹೆಸರೂ ನನಗೆ ತಿಳಿಯದು ಅವರ ಅನುನಯದ ಸ್ವಚ್ಛಂದ ಕಾರ್ಯವೂ ಅದನ್ನು ಪ್ರೇರಿಸಿದ ಸುಮನೋಭಾವವೂ ನನ್ನ ಹೃದಯವನ್ನು ಮುಟ್ಟಿದುವು , ಮತ್ತು ಅವರಲ್ಲಿ ನನಗೆ ಬಹಳ ಕೃತಜ್ಞತೆಯುಂಟಾಯಿತು.

ಆ ಮಧ್ಯರಾತ್ರಿಯ ದೀರ್ಘ ಪ್ರಯಾಣದ ಅವಧಿಯಲ್ಲಿ ನಾನು, ಆಂಗ್ಲರು ಮತ್ತು ಭಾರತೀಯರು, ರಾಜ ಮತ್ತು ಪ್ರಜಾಕೋಟಿ, ಅಧಿಕಾರ ಮತ್ತು ಅಧಿಕಾರಿಯಲ್ಲದವರು, ಅಪ್ಪಣೆ ಮಾಡುವವರು ಮತ್ತು ಅಪ್ಪಣೆ ನಡೆಸುವವರು, ಇವರೆಲ್ಲರ ಪರಸ್ಪರ ಸಂಬಂಧವನ್ನು ಕುರಿತು ಯೋಚಿಸತೊಡಗಿದೆ ಎರಡು ಜನಾಂಗಗಳಿಗೂ ನಡುವೆ ಎಷ್ಟು ಮಹಾಂತರವಿದೆ, ಪರಸ್ಪರ ಹೇಗೆ ಅವಿಶ್ವಾಸದಿಂದಲೂ ಅನಿಷ್ಟದಿಂದಲೂ ನಡೆದುಕೊಳ್ಳುವುದು ಅನಿಷ್ಟಗಳಿಗಿಂತ ಹೆಚ್ಚಾಗಿ ಇದ್ದುದು ಪರಸ್ಪರವಾದ ಅಜ್ಞಾನ ಮತ್ತು ಇದರಿಂದ ಎರಡು ಪಕ್ಷಗಳಿಗೂ ಪರಸ್ಪರ ಸ್ವಲ್ಪ ಭಯವಿದ್ದಿತು. ಆದುದರಿಂದ

ಒಂದರ ಸಾನ್ನಿಧ್ಯದಲ್ಲಿ ಇನ್ನೊಂದು ಸದಾ ಆತ್ಮರಕ್ಷಣೆಯಲ್ಲಿ ತೊಡಗಿತ್ತು ಒಬ್ಬರಿಗೆ ಮತ್ತೊಬ್ಬರು ಸಿಡುಕರಾಗಿಯೂ ಸ್ನೇಹಕ್ಕೆ ಅಯೋಗ್ಯರಾಗಿಯೂ ತೋರಿದರು ಈ ತೆರೆಯ ಹಿಂದೆ ಸಭ್ಯತೆಯೂ ಸೌಜನ್ಯವೂ ಇವೆಯೆಂದು ಯಾರೂ ಅರಿಯಲಿಲ್ಲ ದೇಶದ ಅರಸರೆಂದು ಪರಿಗಣಿಸಿದರೆ ಮಹೋದಾರಾಶ್ರಯದ ಶಕ್ತಿಯಿಂದ ಆಂಗ್ಲೇಯರು ತಮ್ಮೆಡೆಗೆ ದಮ್ಮಯ್ಯ ಎನ್ನುವ ಸ್ಥಾನಪದವಿಗಳ ಬೇಟೆಗಾರರ ಮತ್ತು ಅಮುಗವಾದಿಗಳ (ಅಪರ್ಚುನಿಸ್ಟ್ಸ್) ಗುಂಪುಗುಂಪುಗಳನ್ನು ಆಕರ್ಷಿಸಿದ್ದರು, ಮತ್ತು ಅಸ್ವಾದು ಕರವಾದ ಮಾದರಿಗಳಿಂದಲೇ ಅವರು ಭಾರತವನ್ನು ಆಳೆಯುತ್ತಿದ್ದರು ಭಾರತೀಯ ನಿಗೆ ಇಂಗ್ಲಿಷಿನವನು, ಯಂತ್ರದ ಎಲ್ಲ ನಿಷ್ಕರುಣೆ ಮತ್ತು ಆತ್ಮರಕ್ಷಣೋ ದ್ಯುಕ್ತವಾದ ಸ್ವಾರ್ಥದ ಎಲ್ಲ ರಾಗದ್ವೇಷಗಳಿಂದ ಕೂಡಿ ದುಡಿವ ಅಧಿಕಾರಿ ಯಂತೆ ಕಾಣುತ್ತಿದ್ದನು ಅಧಿಕಾರಿ ಅಥವಾ ಸೈನ್ಯದ ಸಿಪಾಯಿಯಂತೆ ಇದ್ದಾ ಗಿನ ಒಬ್ಬ ಮನುಷ್ಯನ ನಡೆನುಡಿಯಿಂದ, ಅವನು ಒಬ್ಬ ವ್ಯಕ್ತಿಯಂತೆ ಸ್ವಪ್ರೇರಣೆ ಯಿಂದ ನಡೆವಾಗಿನ ನಡೆನುಡಿಯು ಎಷ್ಟು ಭಿನ್ನವಾಗಿತ್ತು ಶಿಸ್ತಿನಿಂದ ನಿಂತಿರುವ ಸಿಪಾಯಿಯು ಕರುಣೆಯನ್ನು ತೊರೆದು ಯಂತ್ರದ ಗೊಂಬೆಯಂತೆ, ತನಗೆ ಯಾವ ಕೇಡನ್ನೂ ಮಾಡದಿರುವ ನಿರಪರಾಧಿಗಳಾದ ಸಾಧು ಪ್ರಜೆಗಳನ್ನು ಗುಂಡಿನಿಂದ ಹೊಡೆದು ಕೊಲ್ಲುತ್ತಾನೆ ಅದೇ ರೀತಿಯಾಗಿ ಒಬ್ಬ ವ್ಯಕ್ತಿಗೆ ನಿರ್ದಯ ತೋರಲು ಹಿಂಜರಿಯುವ ಪೊಲೀಸ್ ಅಧಿಕಾರಿಯು ಮಾರನೆಯ ದಿನ ನಿಷ್ಕಪಟಿಗಳಾದ ಪ್ರಜೆ ಗಳನ್ನು ಲಾಠಿಗಳಿಂದ ಹೊಡೆಯಲು ಬೆರಳ್ದೋರಬಹುದು ಆಗ ಅವನು ತನ್ನನ್ನು ಒಬ್ಬ ವ್ಯಕ್ತಿ, ಎಂಬುದಾಗಿ ಎಣಿಸಿಕೊಳ್ಳುವುದಿಲ್ಲ, ಮತ್ತು ತಾನು ಹೊಡೆಯುವ ಇಲ್ಲವೇ ಗುಂಡಿನಿಂದ ಸುಡುವ ಜನರನ್ನು ಕೂಡ ವ್ಯಕ್ತಿಗಳೆಂದು ಎಣಿಸು ವುದಿಲ್ಲ

ಯಾವಾಗ ಒಬ್ಬನು ತನ್ನ ಎದುರು ಪಕ್ಷವು ಜಂಗುಳಿ ಅಥವಾ ಕೂಟ ಎಂದು ಯೋಚಿಸಲು ಮೊದಲು ಮಾಡುವನೋ, ಕೂಡಲೆ ಮಾನವ ಸಂಬಂಧವು ತಪ್ಪಿ ಹೋಗುವಂತೆ ತೋರುತ್ತದೆ ಗುಂಪಿನಲ್ಲಿಯೂ ವ್ಯಕ್ತಿಗಳು—ಇತರರಂತೆ ಪ್ರೀತಿಸುವ ದ್ವೇಷಿಸುವ ಮತ್ತು ಬಾಧಾನುಭವ ಪಡೆವ ಸ್ತ್ರೀ ಪುರುಷರೂ ಮಕ್ಕಳೂ ಇದ್ದಾರೆಂಬು ದನ್ನು ನಾವು ಮರೆಯುತ್ತೇವೆ ಸಾಮಾನ್ಯನಾದ ಒಬ್ಬ ಇಂಗ್ಲಿಷಿನವನು, ಪ್ರಾಮಾ ಣಿಕನಾಗಿದ್ದರೆ, ತನಗೆ ತಿಳಿದಂತೆ ಕೆಲವು ಸಭ್ಯರಾದ ಭಾರತೀಯರು ಇರುವರು, ಆದರೆ ಅಂಥವರು ವಿರಳ, ಉಳಿದವರೆಲ್ಲಾ ತಿರಸ್ಕಾರಕ್ಕೆ ಯೋಗ್ಯವಾದ ಗುಂಪು, ಎಂದು ಪ್ರಾಯಶಃ ಒಪ್ಪಿಕೊಳ್ಳುವನು ಹಾಗೆಯೇ ಸಾಮಾನ್ಯನಾದ ಒಬ್ಬ ಭಾರ ತೀಯನು ತನಗೆ ತಿಳಿದ ಇಂಗ್ಲಿಷಿನವರಲ್ಲಿ ಕೆಲವರು ಬಹಳ ಯೋಗ್ಯರಿರುವರು, ಆದರೆ ಈ ಕೆಲವರ ಹೊರತು ಇಂಗ್ಲಿಷಿನವರು ಉದ್ಧತರು, ಪಶುವೃತ್ತಿಯವರು ಮತ್ತು ದುಷ್ಟರು ಎಂದು ಒಪ್ಪಿಕೊಳ್ಳಬಹುದು ಒಬ್ಬೊಬ್ಬ ಮನುಷ್ಯನೂ ಇನ್ನೊಂದು ಜನಾಂಗವನ್ನು ತನಗೆ ಪರಿಚಿತನಾದ ವ್ಯಕ್ತಿಯ ಜ್ಞಾನವನ್ನು ಬಿಟ್ಟು ತನಗೆ ಸ್ವಲ್ಪವೇ

ತಿಳಿದ ಇಲ್ಲವೇ ಏನೂ ತಿಳಿಯದ ಇತರರಿಂದ ಹೇಗೆ ಅಳಿಯುವನೆಂಬುದು ಆಶ್ಚರ್ಯಕರ ವಾದುದು

ಸ್ವಕೀಯವಾಗಿ ನಾನೇನೊ ಬಹಳ ಅದೃಷ್ಟಶಾಲಿ, ಮತ್ತು ವ್ಯಾಯಿಕವಾಗಿ ಯಾವಾಗಲೂ ನಮ್ಮ ನಾಡಿಗರಿಂದಲೂ ಇಂಗ್ಲಿಷಿನವರಿಂದಲೂ ನಾನು ಅನುನಯ ವನ್ನೇ ಹೊಂದಿದ್ದೇನೆ ನನ್ನನ್ನು ದಸ್ತಗಿರಿಮಾಡಿ ಇಲ್ಲವೇ ಸ್ಥಳದಿಂದ ಸ್ಥಳಕ್ಕೆ ಸೆರೆ ಯಾಳಿನಂತೆ ಸಾಗಿಸಿಕೊಂಡು ಹೋದ ಪೊಲೀಸಿನವರೂ ಸೆರೆಮನೆಯ ಸಿಬ್ಬಂದಿಗಳೂ ನನ್ನಲ್ಲಿ ದಯೆಯುಳ್ಳವರಾಗಿದ್ದಾರೆ. ಈ ಮಾನವ ಕರುಣಾ ಸಂಪರ್ಕದಿಂದ ಸೆರೆ ಮನೆಯ ಬಾಳಿನ ತಿಕ್ಕಾಟ ಮತ್ತು ಕುಟುಕುಗಳ ಕಹಿಕರಿಣತ್ವಗಳು ಬಹಳಮಟ್ಟಿಗೆ ಕಡಿಮೆಯಾಗಿವೆ ನಮ್ಮ ನಾಡಿಗರು ನನಗೆ ಆ ರೀತಿಯಾದ ಗೌರವವನ್ನು ತೋರಿಸು ತ್ತಿದ್ದುದು ಆಶ್ಚರ್ಯವಲ್ಲ, ಏಕೆಂದರ ನಾನೊಂದು ಪ್ರಮಾಣದ ಕೆಟ್ಟ ಪ್ರಸಿದ್ಧಿಯನ್ನೂ ಜನಪ್ರಿಯತೆಯನ್ನೂ ಗಳಿಸಿದ್ದೆ ಇಂಗ್ಲಿಷಿನವರಿಗೂ ಕೂಡ ನಾನು ಜನಜಂಗುಳಿಯ ಲ್ಲೊಬ್ಬನು ಮಾತ್ರವಾಗಿದ್ದುದಲ್ಲದ, ವ್ಯಕ್ತಿಯೂ ಆಗಿದ್ದೆ ನನ್ನ ವಿದ್ಯಾಭ್ಯಾಸವು ಇಂಗ್ಲೆಂಡಿನಲ್ಲಿ, ಅದರಲ್ಲಿಯೂ ಮುಖ್ಯವಾಗಿ ಇಂಗ್ಲಿಷ್ ಪಬ್ಲಿಕ್ ಸ್ಕೂಲಿನಲ್ಲಿ ನಡೆ ದುದೇ ನನ್ನನ್ನು ಅವರ ಹತ್ತಿರಕ್ಕೆ ಒಯ್ದಿತೆಂದು ಭಾವಿಸುತ್ತೇನೆ ಈ ಕಾರಣದಿಂದ, ನನ್ನ ಸಾರ್ವಜನಿಕ ಚಟುವಟಿಕೆಗಳು ಎಷ್ಟೇ ವಿಪರೀತವಾಗಿ ಅವರಿಗೆ ತೋರಿರಲಿ, ನಾನು ಸ್ವಲ್ಪ ಹೆಚ್ಚು ಕಡಿಮೆ ಅವರಂತಯೇ ನಾಗರಿಕನಾಗಿದ್ದೆನೆಂಬುದನ್ನು ಅವರು ಒಪ್ಪದಿರಲಾರದೆ ಹೋದರು ಅನೇಕ ವೇಳೆ ನನ್ನ ಅನೇಕ ಸಹೋದ್ಯೋಗಿಗಳ ಸ್ಥಿತಿ ಯೊಂದಿಗೆ ನನ್ನ ಸ್ಥಿತಿಯನ್ನು ಹೋಲಿಸಿಕೊಂಡಾಗ, ನನ್ನನ್ನು ಕುರಿತ ಈ ವಿಶೇಷೋಪ ಚಾರದಿಂದ ನನಗೆ ಬಹಳ ಪೇಚಾಟವೂ ಅವಮಾನವೂ ಉಂಟಾಗುತ್ತಿತ್ತು

ಈ ಸೌಕರ್ಯಗಳೆಲ್ಲ ನನಗೆ ಇದ್ದರೂ ಸೆರೆಮನೆಯು ಸೆರೆಮನೆಯೇ ಆಗಿದ್ದಿತು, ಮತ್ತು ಆ ಸ್ಥಳದ ವಾತಾವರಣವು ಕೆಲವು ಸಮಯಗಳಲ್ಲಿ ತೀರ ಸಹಿಸಲಸಾಧ್ಯ ವಾಗಿತ್ತು ಅದರ ಹವವೂ ಕೂಡ ಹಿಂಸ, ಹೀನತನ, ಲಂಚರುಷವತ್ತುಗಳು ಮತ್ತು ಸುಳ್ಳುಗಳಿಂದ ತುಂಬಿತ್ತು ಅಲ್ಲಿ ಯಾವಾಗಲೂ ದಮ್ಮಯ್ಯ ಎನ್ನುವುದು, ಇಲ್ಲವೇ ಶಾಪಹಾಕುವುದು. ಒಬ್ಬ ಮನುಷ್ಯನು ಶೀಘ್ರವೇದಿಯಾಗಿಯೇನಾದರೂ ಇದ್ದರೆ, ಅವನು ಎಡೆಬಿಡದೆ ಮುಲುಕಿನ ಪರಿಸ್ಥಿತಿಯಲ್ಲಿರುತ್ತಿದ್ದನು ಕ್ಷುಲ್ಲಕ ಪ್ರಸಕ್ತಿಗಳು ಕೂಡ ಒಬ್ಬನ ಬಗೆಯನ್ನು ಏರುಪೇರು ಮಾಡುತ್ತಿದ್ದುವು ಪತ್ರವೊಂದರಲ್ಲಿ ಕೆಟ್ಟ ಸುದ್ದಿ, ಅಥವಾ ವರ್ತಮಾನ ಪತ್ರಿಕೆಗಳ ಕೆಲವು ಅಂಶಗಳು ಅನನನ್ನು ಕ್ಷಣಕಾಲ ಕಳವಳದಿಂದ ಅಥವಾ ಸಿಟ್ಟಿನಿಂದ ರೋಗಿಯನ್ನಾಗಿ ಮಾಡುವುವು ಸೆರೆಮನೆಯ ಹೊರಗೆ ಯಾವಾ ಗಲೂ ಕಾರ್ಯೋದ್ಯುಕ್ತರಾಗಿಯೇ ಇರುವುದರಿಂದ ಉಪಶಾಂತಿಯಿರುತ್ತಿತ್ತು ಬಗೆಬಗೆಯ ಹವ್ಯಾಸಗಳೂ, ಕಾರ್ಯಕಲಾಪಗಳೂ ಮನಸ್ಸಿನಲ್ಲೂ ದೇಹದಲ್ಲೂ ಸಾಮ್ಯಾವಸ್ಥೆಯನ್ನು ಉಂಟುಮಾಡುತ್ತಿದ್ದುವು ಸೆರೆಮನೆಯಲ್ಲಿ ಯಾವ ತೂಬೂ ಇರಲಿಲ್ಲ ಒಬ್ಬನು

ತನ್ನನ್ನು ಅಮುಕಿಡಲಾಗಿದೆಯೆಂದೂ ನಿಗ್ರಹಕ್ಕೊಳಗಾಗಿಸಲಾಗಿದೆಯೆಂದೂ ಭಾವಿಸಿಕೊಳ್ಳುವನು, ಮತ್ತು ಅನಿವಾರ್ಯವಾಗಿ, ಒಬ್ಬನು ಘಟನೆಗಳನ್ನು ಪಕ್ಷಪಾತದಿಂದಲೂ ಏಕಾಂಗದೃಷ್ಟಿಯಿಂದಲೂ ನೋಡುವನು ಸೆರೆಮನೆಯಲ್ಲಿ ರೋಗವೆಂದರಂತೂ ವಿಶೇಷವಾದ ಮನದಂಡಲೆಯಾಗುತ್ತಿದ್ದಿತು

ಆದರೂ ನಾನು ಸೆರೆಮನೆಯ ಏಕತಾನದ ನಿತ್ಯ ಜೀವನಕ್ಕೆ ಹೊಂದಿಕೊಳ್ಳಲು ನಿಭಾಯಿಸಿಕೊಂಡೆ, ಮತ್ತು ಅಂಗಸಾಧನೆ ಮತ್ತು ಸಾಕಷ್ಟು ಮಾನಸಿಕ ಪ್ರಯಾಸ ಕಾರ್ಯದಲ್ಲಿ ತೊಡಗಿ ಆರೋಗ್ಯದಿಂದಿದ್ದೆ ಹೊರಗೆ ಕಾರ್ಯ ಮತ್ತು ಅಂಗಸಾಧನೆಗಳ ಬೆಲೆಯು ಏನೇ ಆಗಿರಲಿ ಅವು ಸೆರಮನೆಯಲ್ಲಂತು ಪ್ರಾಮುಖ್ಯವಾದುವು, ಏಕೆಂದರೆ ಅವುಗಳ ಇಲ್ಲಮೆಯಲ್ಲಿ ಒಬ್ಬನು ಛಿದ್ರಛಿದ್ರವಾಗಿ ಹೋಗುವ ಸಂಭವವುಂಟು ನಾನು ಕಟ್ಟುನಿಟ್ಟಾದ ಕಾರ್ಯಕ್ರಮಕ್ಕೆ ಅಂಟಿಕೊಂಡೆ ಒಂದು ಮಟ್ಟದಲ್ಲಿರಲು ನನಗೆ ಸಾಧ್ಯವಾಗುವ ದೈನಂದಿನ ಕ್ಷೌರ (ಒಂದು ಸೇಫ್ಟಿ ರೇಜರನ್ನು ಉಪಯೋಗಿಸಲು ಅನುಮತಿ ಹೊಂದಿದ್ದ) ಮುಂತಾದ ಅನೇಕ ಯಥಾವಸ್ಥಿತ ಅಭ್ಯಾಸಗಳನ್ನು ನಡೆಸಿಕೊಂಡು ಹೋದೆ ನಾನು ಈ ಅಮುಖ್ಯವಾದ ವಿಷಯವನ್ನು ಸೂಚಿಸುತ್ತಿರುವುದೇಕೆಂದರೆ, ಸಾಮಾನ್ಯವಾಗಿ ಜನರು ಅದನ್ನು ಬಿಟ್ಟುಬಿಡುವುದಲ್ಲದೆ ಇತರ ವಿಷಯಗಳಲ್ಲಿಯೂ ಅಜಾಗರೂಕರಾಗುತ್ತಾರ ದಿನದ ಕಷ್ಟಕಾರ್ಯವು ಮುಗಿದ ಮೇಲೆ ನಾನು ಸಂಜೆಯಲ್ಲಿ ಬಹಳ ಗೆಲವಾದ ಆಯಾಸದಿಂದ ಕೂಡಿರುತ್ತಿದ್ದು, ನಿದ್ರೆಯನ್ನು ಸ್ವಾಗತಿಸುತ್ತಿದ್ದೆ

ಹೀಗೆ ದಿನಗಳು, ವಾರಗಳು ಮತ್ತು ತಿಂಗಳುಗಳು ಕಳೆದವು ಆದರೆ ಕೆಲವು ವೇಳೆ ಒಂದೊಂದು ತಿಂಗಳು, ನಿಂತಲ್ಲಿಯೇ ಭಯಂಕರವಾಗಿ ಅಂಟಿಕೊಂಡು ನಿಂತು, ಮುಗಿಯುತ್ತಲೇ ಇರಲಿಲ್ಲ, ಅಥವಾ ಹಾಗೆ ತೋರುತ್ತಿತ್ತು ಕೆಲವು ವೇಳೆಗಳಂತೂ ನನಗೆ ಬೇಜಾರಾಗಿ, ಸಾಕಷ್ಟು ಎನ್ನಿಸಿ, ವ್ಯಾಯಿಕವಾಗಿ ಎಲ್ಲ ವಿಚಾರಗಳೊಂದಿಗೆ ಮತ್ತು ಎಲ್ಲರೊಂದಿಗೆ—ಸರೆಮನೆಯ ನನ್ನ ಜೊತೆಗಾರರೊಂದಿಗೆ, ಅಧಿಕಾರಿಗಳೊಂದಿಗೆ, ಯಾವುದೋ ಒಂದು ಕೆಲಸವನ್ನು ಮಾಡಿದ ಅಥವಾ ಮಾಡದೆ ಇದ್ದ ಹೊರಗಿನ ಜನರೊಂದಿಗೆ ಬ್ರಿಟಿಷ್ ಸಾಮ್ರಾಜ್ಯದೊಂದಿಗೆ (ಆದರೆ ಇದು ಸ್ಥಿರವಾದ ಭಾವನೆಯಾಗಿದ್ದಿತು), ಎಲ್ಲಕ್ಕಿಂತ ಹೆಚ್ಚಾಗಿ ನನ್ನೊಂದಿಗೇ ನನಗೆ ಸಿಟ್ಟಾಯಿತು ಕಂಪಿತ ನರಗಳ ಒಂದು ಮೂಟೆಯಾಗಿಯೂ ಸೆರಮನೆಯ ಬಗೆಬಗೆಯ ಭಾವಗಳಿಂದ ನಾನಂತೂ ಮುಟ್ಟಿದರೆ ಮುನಿಯುವಂತೆಯೂ ಆಗಿಬಿಡುತ್ತಿದ್ದೆ ಅದೃಷ್ಟವಶದಿಂದ ಬೇಗ ಈ ಭಾವನೆಗಳಿಂದ ಬಿಡುಗಡೆಹೊಂದಿದೆ

ಸೆರೆಮನೆಯಲ್ಲಿ ಭೇಟಿಯ ದಿನಗಳು ಶುಭ ದಿನಗಳಾಗಿದ್ದುವು ಅವುಗಳಿಗಾಗಿ ಒಬ್ಬನು ದಿನಗಳನ್ನು ಎಣಿಸುತ್ತ ಬಯಸುತ್ತ ಹೇಗೆ ಕಾದಿರುವನು ! ಭೇಟಿಯ ಭಾವೋ

ದ್ರೇಕವು ಮುಗಿದ ಮೇಲೆ ಅನಿವಾರ್ಯ ಪ್ರತಿಕ್ರಿಯೆಯೂ, ಶೂನ್ಯತೆಯ ಮತ್ತು ಏಕಾಂತತೆಯ ಭಾವವೂ ಉಂಟಾಗುತ್ತಿದ್ದುವು ಕೆಲವು ಸಮಯಗಳಲ್ಲಿ ನಡೆದಂತೆ, ಯಾವುದಾದರೊಂದು ಬಗೆಯ ಕೆಟ್ಟ ಸುದ್ದಿಯು ನನ್ನನ್ನು ದುಃಖ ಭ್ರಾಂತನನ್ನಾಗಿ ಮಾಡಿದುದರಿಂದ, ಭೇಟಿಯು ಯಶಸ್ವಿಯಾಗದಿದ್ದರೆ, ಆಮೇಲೆ ನಾನು ಬಹಳ ಅಸಂತುಷ್ಟನಾಗಿರುತ್ತಿದ್ದೆ ಭೇಟಿಗಳ ಕಾಲದಲ್ಲಿ ಸೆರೆಮನೆಯ ಅಧಿಕಾರಿಗಳೇನೊ ವಾಸ್ತವವಾಗಿ ಇರುತ್ತಲೇ ಇದ್ದರು ಆದರ ಬರೇಲಿಯಲ್ಲಿ ಎರಡು ಇಲ್ಲವೇ ಮೂರು ವೇಳೆ ಈ ಅಧಿಕಾರಿಗಳ ಜೊತೆಗೆ ಕೈಯಲ್ಲಿ ಕಾಗದ, ಸೀಸದಕಡ್ಡಿ ಹಿಡಿದುಕೊಂಡು ನಮ್ಮ ಮಾತುಕತೆಯ ಪ್ರತಿಯೊಂದು ಮಾತನ್ನೂ ಚೂರೂ ಬಿಡದೆ ಆತುರನಾಗಿ ಬರೆದುಕೊಳ್ಳುತ್ತಿದ್ದ ಒಬ್ಬ ಗುಪ್ತ ಪೊಲೀಸಿನವನೂ (ಸಿ ಐ ಡಿ) ಇರತೊಡಗಿದನು ನನಗೆ ಇದರಿಂದ ಬಹಳ ಕಿರುಕುಳವಾಯಿತು ಆ ಭೇಟಿಗಳು ಸಂಪೂರ್ಣವಾಗಿ ನಿಷ್ಫಲವಾದುವು

ಅನಂತರ, ಮೊದಲು ಅಲಹಾಬಾದ್ ಸೆರೆಮನೆಯಲ್ಲೂ ಆಮೇಲೆ ಸರಕಾರದಿಂದಲೂ ನನ್ನ ತಾಯಿಗೂ ಹೆಂಡತಿಗೂ ಒಂದು ಸಂದರ್ಶನ ಕಾಲದಲ್ಲಿ ಉಂಟಾದ ಅವಮಾನದಿಂದ ನಾನು ಈ ಅಮೂಲ್ಯವಾದ ಭೇಟಿಗಳನ್ನೇ ಬಿಟ್ಟುಬಿಟ್ಟೆ ಸುಮಾರು ಏಳು ತಿಂಗಳವರೆಗೆ ನನಗ ಭೇಟಿಗಳೇ ಇರಲಿಲ್ಲ ಅದು ನನಗೆ ಬಹಳ ಬೇಸರಿಕೆಯ ಕಾಲವಾಗಿತ್ತು ಆ ಕಾಲವು ಮುಗಿದ ಮೇಲೆ ನಾನು ಮತ್ತೆ ಭೇಟಿಗಳನ್ನು ಮೊದಲು ಮಾಡಲು ನಿರ್ಧರಿಸಿದೆ ಮತ್ತು ನನ್ನನ್ನು ನೋಡಲು ನಮ್ಮ ಮನೆಯವರು ಬಂದಾಗ, ನಾನು ಇನ್ನೇನು ಆನಂದೋನ್ಮತ್ತನಾಗುತ್ತಿದ್ದೆ ನನ್ನ ತಂಗಿಯ ಎಳೆಯ ಮಕ್ಕಳೂ ನನ್ನನ್ನು ನೋಡಲು ಬಂದರು ಒಂದು ಪುಟ್ಟ ಕಂದನು ತನ್ನ ವಾಡಿಕೆಯಂತೆ ನನ್ನ ಹೆಗಲಮೇಲೆ ಏರಬೇಕೆಂದು ಬಯಸಿದಾಗ, ಆ ಸನ್ನಿವೇಶವು ನನ್ನ ಭಾವರಸಾನುಭವ ಶಕ್ತಿಗೆ ಎಟುಕಲಾರದುದಾಗಿತ್ತು ಮಾನವ ಸಂಪರ್ಕಗಳಿಗಾಗಿ ನಿಡುಗಾಲ ಹಾತೊರೆದ ಮೇಲೆ ಸಂಸಾರಜೀವನದ ಸೋಂಕು ನನ್ನನ್ನು ಕದಲಿಸಿತು

ಭೇಟಿಗಳು ನಿಂತ ಮೇಲೆ, ಮನೆಯಿಂದಲೂ, ಬೇರೊಂದು ಸರಮನೆಯಿಂದಲೂ (ಏಕೆಂದರೆ ನನ್ನ ಸೋದರಿಯರಿಬ್ಬರೂ ಸೆರಮನೆಯಲ್ಲಿದ್ದರು) ಬರುತ್ತಿದ್ದ ಕಾಗದಗಳು ಇನ್ನೂ ಹೆಚ್ಚು ಅಮೂಲ್ಯವಾದುವು ಮತ್ತು ಅವನ್ನು ತವಕದಿಂದ ನಿರೀಕ್ಷಿಸಿದೆ ಗೊತ್ತಾದ ದಿನ ಕಾಗದವು ಬಾರದಿದ್ದರೆ ನಾನು ಬಹಳ ಅಗಚಾಟಲುಪಡುತ್ತಿದ್ದೆ ಆದರೂ ಅದು ಬಂದಾಗ ಅದನ್ನು ತೆರೆಯಲು ನಾನು ಬಹಳ ಹಿಂಜರಿಯುತ್ತಿದ್ದೆ ಭರವಸೆಯನ್ನು ಹೊತ್ತಿದ್ದ ಆನಂದದೊಡನೆ ಒಬ್ಬನು ನಡೆಯುವಂತೆ, ನಾನು ಕಾಗದದೊಂದಿಗೆ ಸರಸವಾಡುತ್ತಿದ್ದೆ ಆದರೆ ನನ್ನ ಮನಸ್ಸಿನ ಹಿಂದೆ, ಕಾಗದದಲ್ಲಿ ನನ್ನನ್ನು ಕಾಡಬಹುದಾದ ವಾರ್ತೆಗಳಾಗಲಿ ಉಲ್ಲೇಖಗಳಾಗಲಿ ಇರಬಹುದೆಂಬ ಭಯಾಂಶವೂ ಇದ್ದಿತು ಸೆರೆಮನೆಯಲ್ಲಿ ಕಾಗದಗಳನ್ನು ಬರೆಯುವುದೂ ಕಾಗದಗಳನ್ನು ಸ್ವೀಕರಿಸು

ವುದೂ, ಅಲ್ಲಿಯ ಶಾಂತಿಯುತವೂ ಚಲನವಲನರಹಿತವೂ ಆದ ಅಸ್ತಿತ್ವಕ್ಕೆ ಯಾವಾಗಲೂ ಬಹಳ ಅವಾಂತರವನ್ನುಂಟು ಮಾಡುತ್ತಿದ್ದಿತು ಅವು ಮನಸ್ಸನ್ನು ಚಲಿಸತಕ್ಕ ರಾಗಾವನ್ನೆಗಳನ್ನು ಉಂಟುಮಾಡುತ್ತಿದ್ದುವು ಅನಂತರ ಒಂದೆರಡು ದಿನಗಳವರೆಗೆ ಒಬ್ಬನ ಮನಸ್ಸು ಅಲೆಯುತ್ತಿದ್ದಿತು, ಮತ್ತು ಆಯಾ ದಿನದ ಕೆಲಸದ ಮೇಲೆ ಏಕಾಗ್ರ ಚಿತ್ತವನ್ನಿಡಲು ಕಷ್ಟವಾಗುತ್ತಿದ್ದಿತು

ನೈನಿ ಮತ್ತು ಬರೇಲಿ ಸೆರೆಮನೆಗಳಲ್ಲಿ ನನಗೆ ಅನೇಕ ಸ್ನೇಹಿತರಿದ್ದರು ಡೆಹ್ರಾಡುನ್‌ನಲ್ಲಿ ಮೊದಮೊದಲು ನಾವು ಮೂವರಿದ್ದೆವು, ಗೋವಿಂದ ವಲ್ಲಭ ಪಂತ್, ಕಾಶಿಪುರದ ಕುನ್ವರ್ ಆನಂದ ಸಿಂಗ್ ಮತ್ತು ನಾನು ಆದರೆ ಎರಡು ತಿಂಗಳುಗಳಾದ ಮೇಲೆ, ತಮ್ಮ ಆರು ತಿಂಗಳ ಶಿಕ್ಷೆಯು ಮುಗಿದಾಗ, ಪಂಡಿತಜಿಯವರು ಬಿಡುಗಡೆ ಹೊಂದಿದರು ಆಮೇಲೆ ಇನ್ನಿಬ್ಬರು ನಮ್ಮ ಜೊತೆ ಸೇರಿದರು ಜನವರಿ ೧೯೩೩ ರ ಪ್ರಾರಂಭದ ವೇಳೆಗೆ ನನ್ನ ಸ್ನೇಹಿತರೆಲ್ಲಾ ನನ್ನನ್ನು ಬಿಟ್ಟಿದ್ದರು, ನಾನು ಒಬ್ಬನೇ ಆದೆ ಆಗಸ್ಟ್ ಕೊನೆಯಲ್ಲಿ ನನಗೆ ಬಿಡುಗಡೆಯಾಗುನವರೆಗೆ, ಸುಮಾರು ಎಂಟು ತಿಂಗಳವರೆಗೆ ಡೆಹ್ರಾಡೂನಿನಲ್ಲಿ ನಾನು ಏಕಾಂಗಿಯಾಗಿದ್ದೆ—ಸೆರೆಮನೆಯ ಅಧಿಕಾರಿಗಳೊಂದಿಗೆ ನಾನು ದಿನವಹಿ ಆಡುತ್ತಿದ್ದ ಕೆಲವು ನಿಮಿಷಗಳ ಮಾತುಗಳ ಹೊರತು, ಮಾತನಾಡುವುದಕ್ಕೆ ಮತ್ತೆ ಯಾರೂ ಇರಲಿಲ್ಲ ಲಾಕ್ಷಣಿಕವಾಗಿ ಇದು ಏಕಾಂತ ವಾಸದ ಶಿಕ್ಷೆಯಾಗಿರಲಿಲ್ಲ ಆದರೆ ಇದು ಅದಕ್ಕೆ ಹೆಚ್ಚು ಕಡಿಮೆ ಹೋಲಿಕೆಯಾಗಿದ್ದು ನನಗೆ ಆ ಅವಧಿಯಲ್ಲಿ ಬಹಳ ಬೇಸರಿಕೆಯನ್ನು ಉಂಟು ಮಾಡಿತು ಅದೃಷ್ಟವಶದಿಂದ ನಾನು ಭೇಟಿಗಳನ್ನು ಪುನಃ ಪ್ರಾರಂಭಿಸಿದ್ದುದರಿಂದ ಸ್ವಲ್ಪ ಸಮಾಧಾನವುಂಟಾಯಿತು ಪ್ರಾಯಃ ವಿಶೇಷ ಕಟಾಕ್ಷದಿಂದಲೋ ಏನೋ, ನಾನು ಹೊರಗಿನಿಂದ ಹೊಸ ಹೂವುಗಳನ್ನು ತರೆಸಿಕೊಳ್ಳಬಹುದೆಂದೂ ಕೆಲವು ಭಾವಚಿತ್ರಗಳನ್ನು ಇಟ್ಟುಕೊಳ್ಳಬಹುದೆಂದೂ ಅವಕಾಶ ಕೊಟ್ಟಿದ್ದರು, ಮತ್ತು ಅವುಗಳ ಸಾನ್ನಿಧ್ಯದಿಂದ ನನಗೆ ಬಹಳ ಆನಂದವುಂಟಾಗುತ್ತಿದ್ದಿತು ಸಾಧಾರಣವಾಗಿ ಸೆರೆಯಲ್ಲಿ ಹೂವುಗಳು ಮತ್ತು ಭಾವಚಿತ್ರಗಳಿಗೆ ಅನುಮತಿಯಿಲ್ಲ, ಮತ್ತು ಅನೇಕ ಸಂದರ್ಭಗಳಲ್ಲಿ ನನಗೆ ಕಳುಹಿಸಲ್ಪಟ್ಟಿದ್ದ ಹೂವುಗಳನ್ನೂ ಭಾವಚಿತ್ರಗಳನ್ನೂ ಸ್ವೀಕರಿಸಲು ನನಗೆ ಅವಕಾಶ ಸಿಕ್ಕಲಿಲ್ಲ ಓವರಿಗಳನ್ನು ಸಿಂಗರಿಸಿ ಬೆಳಗುವ ಪ್ರಯತ್ನಗಳಿಗೆ ಪ್ರೋತ್ಸಾಹವಿರಲಿಲ್ಲ ನನ್ನ ಓವರಿಗೆ ಮಗ್ಗುಲಲ್ಲಿದ್ದ ಓವರಿಯಲ್ಲಿ ನನ್ನ ಸ್ನೇಹಿತನು, ಶೃಂಗಾರ ಸಾಮಗ್ರಿಗಳನ್ನು ಜೋಡಿಸಿಟ್ಟುಕೊಂಡಿದ್ದುದನ್ನು ನೋಡಿ, ಸೆರೆಮನೆಯ ಸೂಪರಿನ್‌ಟೆಂಡೆಂಟರು ಆಕ್ಷೇಪಿಸುತ್ತ ಓವರಿಯನ್ನು ಆಕರ್ಷಕವಾಗಿಯೂ "ಸುಖಪೂರ್ಣವಾಗಿ"ಯೂ ಇಡಕೂಡದೆಂದು ಅವನಿಗೆ ತಿಳಿಸಿದರು ಸುಖದ ವಸ್ತುಗಳಿವು ಟೂತ್ ಬ್ರಷ್, ಟೂತ್ ಪೇಸ್ಟ್, ಫೌಂಟನ್‌ಪೆನ್, ಮಶಿ, ಒಂದು ಸೀಸೆ ಕೂದಲೆಣ್ಣೆ ಒಂದು ಬ್ರಷ್ ಮತ್ತು ಬಾಚಣಿಗೆ, ಮತ್ತು ಪ್ರಾಯಶಃ ಒಂದೆರಡು ಇತರ ಸಣ್ಣ ಸರಕುಗಳು

ಜೀವನದ ಸಣ್ಣಸಣ್ಣ ವಿಷಯಗಳ ಬೆಲೆಯನ್ನೊಬ್ಬನು ಸೆರೆಮನೆಯಲ್ಲಿ ಗ್ರಹಿಸಲು ಮೊದಲು ಮಾಡುತ್ತಾನೆ ಅವನ ಸರಕುಗಳು ಅತ್ಯಲ್ಪವಾಗಿರುತ್ತವೆ ಅವುಗಳಿಗೆ ಹೆಚ್ಚಿಗೆ ಸೇರಿಸುವುದೂ ಇಲ್ಲವೇ ಅವುಗಳಿಗೆ ಪ್ರತಿಯಾಗಿ ಬೇರೆಯದನ್ನು ಇಟ್ಟುಕೊಳ್ಳುವುದೂ ಸುಲಭ ಸಾಧ್ಯವಲ್ಲ ಅವನು ಅವಕ್ಕೇ ಅಂಟಿಕೊಂಡಿದ್ದು, ಹೊರಗಿನ ಇಳೆಯಲ್ಲಿ ಕಸದ ಬುಟ್ಟಿಗೆ ಬೀಳುವಂಥ ಸರಕುಗಳ ಚಿಲ್ಲರ ಬಿಡಿಗಳನ್ನು ಕೂಡಿ ಹಾಕಿಕೊಳ್ಳುವನು ತನ್ನದಾಗಿ ಮಾಡಿಕೊಂಡು ಇಟ್ಟುಕೊಳ್ಳಲು ಬೆಲೆಯುಳ್ಳ ಪದಾರ್ಥವಾವುದೂ ಇಲ್ಲದಿದ್ದರೂ, ಆಸ್ತಿಪಾಸ್ತಿಗಳ ಭಾವನೆಯು ಅವನನ್ನು ಬಿಟ್ಟು ಹೋಗುವುದಿಲ್ಲ

ಒಂದೊಂದು ಸಲ ಜೀವನದ ಮೃದು ವಿಷಯಗಳನ್ನು ಕುರಿತ ಸುಖಾಪೇಕ್ಷೆಯೊಂದು ಮೂಡುತ್ತಿತ್ತು ದೇಹದ ಸುಖ, ಆನಂದಕರವಾದ ಸನ್ನಿವೇಶಗಳು, ಸ್ನೇಹಿತರ ಸಹವಾಸ, ಸ್ವಾರಸ್ಯವಾದ ಸಂಭಾಷಣೆ, ಮಕ್ಕಳೊಂದಿಗೆ ಆಟ ವರ್ತಮಾನ ಪತ್ರಿಕೆಯೊಂದರ ಒಂದು ಚಿತ್ರವಾಗಲಿ ಇಲ್ಲವೇ ಒಂದು ಪ್ರಕರಣವಾಗಲಿ ಅವನ ಮುಂದೆ ಯೌವನದ ಹಂಬಲಿಲ್ಲದ ದಿನಗಳನ್ನು ಸ್ಪಷ್ಟವಾಗಿ ಕಟ್ಟುತ್ತಿದ್ದಿತು. ಮನೆಯ ಹಂಬಲೊಂದು ಅವನನ್ನು ಆವರಿಸಿ, ದಿನವನ್ನೆಲ್ಲ ಉದ್ವೇಗದಿಂದ ಕಳೆಯುವನು

ದೇಹಶ್ರಮವು ಬೌದ್ಧಿಕ ಕಾರ್ಯದ ಹೆಚ್ಚಿನ ಆಯಾಸವನ್ನು ತಗ್ಗಿಸಿ ಉಪಶಮನವನ್ನೂ ನೆಮ್ಮದಿಯನ್ನೂ ನೀಡುತ್ತಿದ್ದುದರಿಂದ ನಾನು ಪ್ರತಿದಿನವೂ ಸ್ವಲ್ಪ ನೂಲುತ್ತಿದ್ದೆ, ಆದರೂ ಓದುವುದು ಮತ್ತು ಬರೆಯುವುದು ನನ್ನ ಮುಖ್ಯ ವೃತ್ತಿಯಾಗಿತ್ತು ನನಗ ಬೇಕಾಗಿದ್ದ ಪುಸ್ತಕಗಳೆಲ್ಲವೂ ದೊರೆಯುತ್ತಿರಲಿಲ್ಲ ಏಕೆಂದರೆ, ಕಟ್ಟು ನಿಯಮಗಳೂ ಆಕ್ಷೇಪಣೆಗಳೂ ಇದ್ದುವು, ಮತ್ತು ಆಕ್ಷೇಪಕರು ತಮ್ಮ ಕೆಲಸಕ್ಕೆ ಯಾವಾಗಲೂ ಸಮರ್ಥರಾಗಿರಲಿಲ್ಲ ಸ್ಪೆಂಗ್ಲರ್‌ರವರು ಬರೆದಿರುವ 'ಡಿಕ್ಲೈನ್ ಆಫ್ ದಿ ವೆಸ್ಟ್' (ಪಶ್ಚಿಮದ ಕ್ಷೀಣದಶೆ) ಎಂಬ ಪುಸ್ತಕಕ್ಕೆ ಅವಕಾಶ ಸಿಕ್ಕಲಿಲ್ಲ ಏಕೆಂದರೆ ಅದರ ಹೆಸರು ಅಪಾಯಕರವಾಗಿಯೂ ರಾಜದ್ರೋಹಕರವಾಗಿಯೂ ತೋರಿತು ಆದರೆ ನಾನು ದೂರುವಂತಿಲ್ಲ ಏಕೆಂದರೆ, ಒಟ್ಟಿನಲ್ಲಿ ನನಗೆ ಬಗೆಬಗೆಯ ಸುಂದರ ಗ್ರಂಥಗಳೇ ದೊರೆತಿದ್ದುವು ಪುನಃ ನಾನು ಕಟಾಕ್ಷಕ್ಕೆ ಪಾತ್ರನಾಗಿದ್ದಂತೆ ತೋರಿತು ಮತ್ತು ನನ್ನ ಸಹೋದ್ಯೋಗಿಗಳಿಗೆ (ಎ ತರಗತಿಯ ಸೆರೆಯಾಳುಗಳು) ಪ್ರಚಲಿತ ಪ್ರಸಕ್ತಿಗಳನ್ನು ಕುರಿತ ಪುಸ್ತಕಗಳು ದೊರೆಯುವುದು ಬಹಳ ಕಷ್ಟವಾಗಿದ್ದಿತು ಬ್ರಿಟಿಷ್ ಸರಕಾರದ ರಾಜ್ಯಾಂಗ ರಚನಾ ಸೂಚನೆಗಳನ್ನೊಳಗೊಂಡು ಪ್ರಕಟವಾಗಿದ್ದ ಸರ್ಕಾರದ ಶ್ವೇತಪತ್ರವನ್ನು (ವೈಟ್ ಪೇಪರ್) ಕೂಡ, ರಾಜಕಾರಣ ವಿಷಯಗಳನ್ನು ಅದು ವಿವೇಚಿಸಿದೆಯೆಂಬ ಕಾರಣದಿಂದ ಕಾಶಿ ಸೆರೆಮನೆಯಲ್ಲಿ ಓದಲಾಗದೆಂಬ ಆಜ್ಞೆಯಾಗಿತ್ತೆಂದು ನನಗೆ ತಿಳಿಯಿತು ಬ್ರಿಟಿಷ್ ಅಧಿಕಾರಿಗಳು ಎದೆಯಾರ ಪ್ರೋತ್ಸಾಹಿಸಿದ ಪುಸ್ತಕಗಳೆಂದರೆ ಧಾರ್ಮಿಕ ಗ್ರಂಥಗಳು ಅಥವಾ ಕಾದಂಬರಿಗಳು. ಬ್ರಿಟಿಷ್

ಸರಕಾರದ ಹೃದಯಕ್ಕೆ ಧರ್ಮವು ಎಷ್ಟು ಪವಿತ್ರವಾಗಿದೆಯೆಂಬುದೂ, ಅದು ಧರ್ಮದ ಎಲ್ಲಾ ಮಾದರಿಗಳನ್ನೂ ನಿಷ್ಪಕ್ಷಪಾತವಾಗಿ ಹೇಗೆ ಪ್ರೋತ್ಸಾಹಿಸುತ್ತಿದೆಯೆಂಬುದೂ ಅದ್ಭುತಕರವಾದುದು

ಭಾರತದಲ್ಲಿ ಅತ್ಯಂತ ಸಾಮಾನ್ಯವಾದ ಪೌರಸ್ವಾತಂತ್ರ್ಯಗಳೆಲ್ಲಾ ಉಪಸಂಹರಿಸಲ್ಪಟ್ಟಿರುವ ಕಾಲದಲ್ಲಿ, ಸೆರೆಯಾಳಿನ ಬಾಧ್ಯತೆಯನ್ನು ಕುರಿತು ಮಾತನಾಡುವುದು ಕೇವಲ ಅಸಂಗತ ಪ್ರಲಾಪ ಆದರೂ ವಿಷಯವು ಪರ್ಯಾಲೋಚನೆಗೆ ಅರ್ಹವಾದುದು ಒಂದು ನ್ಯಾಯಾಸ್ಥಾನವು ಅಪರಾಧಿಗೆ ಕಾರಾಗೃಹ ಶಿಕ್ಷೆಯನ್ನು ವಿಧಿಸಿದರೆ, ಅವನ ದೇಹವನ್ನು ಮಾತ್ರವಲ್ಲದೆ ಅವನ ಬುದ್ಧಿಯನ್ನೂ ಬಂಧಿಸಬೇಕೆಂಬುದು ಅರ್ಥವೆ? ಅಪರಾಧಿಗಳ ದೇಹವು ಸ್ವತಂತ್ರವಾಗಿರದಿದ್ದರೂ ಅವರ ಮನಸ್ಸು ಏಕೆ ಸ್ವತಂತ್ರವಾಗಿರಬಾರದು? ಹಿಂದೂದೇಶದ ಸೆರೆಮನೆಯ ಆಡಳಿತಗಾರರನ್ನು ಇಂಥ ಪ್ರಶ್ನೆ ಕೇಳಿದರೆ ಅವರು ಭಯಗ್ರಸ್ತರಾಗುವರೆಂಬುದರಲ್ಲಿ ಸಂದೇಹವಿಲ್ಲ ಏಕೆಂದರೆ ಹೊಸ ಭಾವನೆಗಳಿಗೂ ಸ್ಫೈರಣೆಯಿಂದ ಕೂಡಿದ ಆಲೋಚನೆಗಳಿಗೂ ಅವರ ಗ್ರಹಣಶಕ್ತಿಯು ಸಾಧಾರಣವಾಗಿ ಮಿತಿಯುಳ್ಳದ್ದು ಯಾವ ಕಾಲದಲ್ಲಿಯೇ ಆಗಲಿ ಆಕ್ಷೇಪಣೆಯು ಕೆಟ್ಟದ್ದು, ಪಾರ್ಶ್ವವರ್ತಿಯಾದುದು ಮತ್ತು ಅಪ್ರಬುದ್ಧವಾದುದು ಹಿಂದೂದೇಶದಲ್ಲಿ ಇದರಿಂದ ನಮಗೆ ಅನೇಕ ಆಧುನಿಕ ಪುಸ್ತಕಗಳೂ ಪ್ರಗತಿಗಾಮಿ ವೃತ್ತಪತ್ರಿಕೆಗಳೂ, ಸಿಗದಂತಾಗಿವೆ ನಿಷೇಧಿಸಲ್ಪಟ್ಟ ಪುಸ್ತಕಗಳ ಸಂಖ್ಯೆಯು ವಿಸ್ತಾರವಾಗಿದೆ ಮತ್ತು ಪದೇಪದೇ ಬೆಳೆಸಲ್ಪಡುತಿದೆ ಇವೆಲ್ಲವುಗಳ ಜೊತೆಗೆ, ಸೆರೆಯಾಳು ದ್ವಿತೀಯ ಮತ್ತು ಪ್ರತ್ಯೇಕ ಆಕ್ಷೇಪಣೆಯ ಬಾಧಾನುಭವವನ್ನು ಪಡೆಯಬೇಕಾಗಿದೆ ಹೀಗೆ ಸೆರೆಮನೆಯ ಹೊರಗೆ ನ್ಯಾಯಬದ್ಧವಾಗಿ ಕೊಂಡುಕೊಂಡು ಓದಬಹುದಾದ ಅನೇಕ ಪುಸ್ತಕಗಳೂ ವೃತ್ತಪತ್ರಿಕೆಗಳೂ ಅವನಿಗೆ ದೊರೆಯುವುದಿಲ್ಲ

ಕೊಂಚ ಕಾಲದ ಹಿಂದೆ, ಅಮೆರಿಕಾ ಸಂಯುಕ್ತ ಸಂಸ್ಥಾನಗಳಲ್ಲಿ ನ್ಯೂಯಾರ್ಕಿನ ಪ್ರಸಿದ್ಧವಾದ ಸಿಂಗ್ ಸಿಂಗ್ ಸೆರೆಮನೆಯಲ್ಲಿ ಈ ಪ್ರಶ್ನೆ ಎದ್ದಿತು ಅಲ್ಲಿ ಕೆಲವು ಕಮ್ಯೂನಿಸ್ಟ್ ವೃತ್ತಪತ್ರಿಕೆಗಳು ಬಹಿಷ್ಕೃತವಾಗಿದ್ದುವು ಅಮೆರಿಕದ ಅಧಿಕಾರಿವರ್ಗಗಳಲ್ಲಿ, ಕಮ್ಯೂನಿಸ್ಟರನ್ನು ಕುರಿತ ವಿರೋಧ ಭಾವನೆಯು ಬಹಳ ಪ್ರಬಲವಾಗಿದೆ. ಆದರೂ ಸೆರೆಮನೆಯ ಅಧಿಕಾರಿಗಳು ಸೆರೆಯಾಳುಗಳು ಕೋರುವ ಯಾವ ಪ್ರಕಟಣೆಯನ್ನಾದರೂ ಕಮ್ಯೂನಿಸ್ಟ್ ವೃತ್ತಪತ್ರಿಕೆಗಳು ಮತ್ತು ಮಾಸಪತ್ರಿಕೆಗಳನ್ನು ಕೂಡ ಒದಗಿಸಬಹುದೆಂದು ಒಪ್ಪಿದರು ಆದರೆ ಕೆಲವು ಹಾಸ್ಯಭರಿತ ವ್ಯಂಗ್ಯ ಚಿತ್ರಗಳು ಮಾತ್ರ ಕೆಂಳಿಸುವುವು ಎಂಬುದೇ ಸೆರೆಮನೆಯ ವಾರ್ಡನ್‌ರವರು ಒಪ್ಪಿಗೆಗೆ ತಂದ ಏಕಮಾತ್ರ ವಿನಾಯಿತಿ

ಹಿಂದೂದೇಶದ ಸೆರೆಮನೆಯಲ್ಲಿ ಸೆರೆಯಾಳುಗಳ ಬೌದ್ಧಿಕ ಸ್ವಾತಂತ್ರ್ಯದ ಈ ಸಮಸ್ಯೆಯನ್ನು ಕುರಿತು ಮಾತನಾಡುವುದು ಸ್ವಲ್ಪ ಅವಿವೇಕ. ಸಾಮಾನ್ಯವಾಗಿ

ಇರುವಂತೆ, ಸೆರೆಯಾಳುಗಳಲ್ಲಿ ಬಹುಸಂಖ್ಯಾತರಿಗೆ ವೃತ್ತಪತ್ರಿಕೆಗಳನ್ನೂ ಬರವಣಿಗೆಯ ಸಲಕರಣೆಗಳನ್ನೂ ಕೊಡಲು ಅನುಮತಿಯಿಲ್ಲ ಇದು ಪ್ರಕಟಣಾ ಬಹಿಷ್ಕಾರದ ಪ್ರಶ್ನೆಯಲ್ಲ, ಆದರೆ ಸಂಪೂರ್ಣ ನಿರಾಕರಣೆಯದು ಎ ತರಗತಿಯ ಸೆರೆಯಾಳುಗಳಿಗೆ ಮಾತ್ರ (ಅಥವಾ ಬಂಗಾಳದಲ್ಲಿ, ೧ನೆಯ ಡಿವಿಜನ್) ಬರವಣಿಗೆಯ ಸಾಮಗ್ರಿಗಳು ಸಾಧಾರಣವಾಗಿ ಕೊಡಲ್ಪಡುತ್ತವೆ ಆದರೆ ಸಾಮಾನ್ಯವಾಗಿ ಅವರಲ್ಲೂ ಅನೇಕರಿಗೆ ವೃತ್ತಪತ್ರಿಕೆಗಳು ದೊರೆಯುವುದಿಲ್ಲ ಅವರಿಗೆ ಒದಗಿಸುವ ದೈನಂದಿನ ಪತ್ರಿಕೆಯು ಸರಕಾರದ ಆಯ್ಕೆಯಾಗಿದೆ ರಾಜಕೀಯ ಮತ್ತು ರಾಜಕೀಯೇತರ ಬಿ ಮತ್ತು ಸಿ ತರಗತಿಯ ಸೆರೆಯಾಳುಗಳಿಗೆ ಬರವಣಿಗೆಯ ಸಾಮಗ್ರಿಗಳು ಬೇಕಿಲ್ಲವೆಂದು ಭಾವಿಸಲಾಗಿದೆ ಬಿ ತರಗತಿಯವರಿಗೆ, ವಿಶೇಷ ರೀತಿಯ ಪಕ್ಷದಲ್ಲಿ ಕೆಲವು ಸಮಯಗಳಲ್ಲಿ ಅವುಗಳು ದೊರೆಯಬಹುದು ಆದರೆ ಅವುಗಳು ಪದೇಪದೇ ಹಿಂದಕ್ಕೆ ತೆಗೆದುಕೊಳ್ಳಲ್ಪಡಬಹುದಾಗಿದ್ದುವು ಹಿಂದೂದೇಶದಲ್ಲಿ ಇತರ ತರಗತಿಗಳ ಸಾವಿರ ಸೆರೆಯಾಳುಗಳಿಗೆ ಒಬ್ಬರಂತೆ ಎ ತರಗತಿಯ ಸೆರೆಯಾಳುಗಳು ಇದ್ದಾರ ಆದುದರಿಂದ, ಸೆರೆಯಾಳುಗಳ ಪಾಡನ್ನು ನಿಶ್ಚಯಿಸುವಾಗ ಅವರನ್ನು ಬಿಟ್ಟೇಬಿಡಬಹುದು ಆದರೆ ವಿಶೇಷೋಪಚಾರವನ್ನು ಹೊಂದಿದ ಈ ಎ ತರಗತಿಯ ಖೈದಿಗಳು ಕೂಡ, ಪುಸ್ತಕ, ವರ್ತಮಾನಪತ್ರಿಕೆ ಮುಂತಾದವುಗಳ ದೃಷ್ಟಿಯಿಂದ ಇತರ ಅನೇಕ ನಾಗರಿಕ ದೇಶಗಳಲ್ಲಿ ಸಾಮಾನ್ಯ ಖೈದಿಗಳಿಗಿರುವುದಕ್ಕಿಂತ ತೀರ ಕಡಿಮೆಯಾದ ಹಕ್ಕುಗಳನ್ನು ಹೊಂದಿದ್ದಾರೆಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳುವುದು ಒಳ್ಳೆಯದು

ಇನ್ನುಳಿದವರ ವಿಚಾರವನ್ನು ಪರಿಶೀಲಿಸಿದರೆ, ಪ್ರತಿಯೊಂದು ಸಾವಿರದಲ್ಲಿ ೯೯೯ ಜನರಿಗೆ ಒಂದೊಂದು ಬಾರಿಗೂ ಎರಡು ಅಥವಾ ಮೂರು ಪುಸ್ತಕಗಳನ್ನು ಪಡೆಯಲು ಅವಕಾಶವುಂಟು ಆದರೆ ಈ ಹಕ್ಕಿನ ಫಲವನ್ನು ಅನುಭವಿಸಲು ಸೆರೆಯಾಳುಗಳಿಗೆ ಯಾವಾಗಲೂ ಸಾಧ್ಯವಾಗದಂಥ ಪರಿಸ್ಥಿತಿಗಳಿವೆ ಬರೆಯುವುದಾಗಲಿ, ಅಥವಾ ಓದಿದ ಪುಸ್ತಕಗಳನ್ನು ಕುರಿತು ಟಿಪ್ಪಣಿಯನ್ನು ಬರೆದುಕೊಳ್ಳುವುದಾಗಲಿ ಅವರು ತೊಡಗಕೂಡದ ಉಪದ್ರಕಾರಕ ಕಾಲಕ್ಷೇಪಗಳೆಂದು ಸರಕಾರದ ಅಭಿಪ್ರಾಯ ಬುದ್ಧಿವಿಕಾಸಕ್ಕೆ ಹೀಗೆ ಉದ್ದೇಶಪೂರ್ವಕವಾಗಿ ಪ್ರೋತ್ಸಾಹ ಕೊಡದಿರುವುದು ವಿಚಿತ್ರವೂ, ಬಯಲು ಮಾಡುವಂಥದೂ ಆಗಿದೆ ಸೆರೆಯಾಳನ್ನು ಸನ್ಮಾರ್ಗಕ್ಕೆ ತರುವ ಮತ್ತು ಅವನನ್ನು ಯೋಗ್ಯ ನಾಗರಿಕನನ್ನಾಗಿ ಮಾಡುವ ದೃಷ್ಟಿಯಿಂದ ಅವನ ಮನಸ್ಸಿಗೆ ಪುಸ್ತಕ ನೂಡಿ, ಸರಿಯಾದ ಮಾರ್ಗಕ್ಕೆ ಅವನ್ನು ತಿರುಗಿಸಿ, ಅವನನ್ನು ಅಕ್ಷರಸ್ಥನನ್ನಾಗಿ ಮಾಡಿ, ಯಾವುದಾದರೊಂದು ಬಗೆಯ ಕೈಕಸುಬನ್ನು ಅವನಿಗೆ ಕಲಿಸುವುದು ಆವಶ್ಯಕವಾದುದು ಆದರ ಈ ಬಗೆಯ ದೃಷ್ಟಿಯು ಹಿಂದೂದೇಶದ ಸೆರೆಮನೆಯ ಅಧಿಕಾರಿಗಳಿಗೆ ಪ್ರಾಯಶಃ ಹೊಳೆದಿಲ್ಲ ಅವರಲ್ಲಿಯೂ ವಾಸ್ತವವಾಗಿ, ಸ ಪ್ರಾ ಗಳಲ್ಲಿ ಅದು ತನ್ನ ಇಲ್ಲಮೆಯಿಂದ ಎದ್ದುಕಾಣುವುದು ಈಚೀಚೆಗೆ ಸೆರೆಮನೆಯಲ್ಲಿರುವ ಹುಡುಗರಿಗೂ ಯುವಕರಿಗೂ ಓದು ಬರೆಹವನ್ನು ಕಲಿಸಬೇಕೆಂಬ ಪ್ರಯತ್ನಗಳು

ನಡೆದಿವೆ ಆದರ ಅವು ಎಷ್ಟು ಮಾತ್ರವೂ ಪರಿಣಾಮಕಾರಿಯಾಗಿಲ್ಲ, ಮತ್ತು ಅವುಗಳ ಮೇಲ್ವಿಚಾರಕರಲ್ಲಿ ತಕ್ಕ ಸಾಮರ್ಥ್ಯವಿಲ್ಲ ಕೆಲವು ವೇಳೆ, ಖೈದಿಗಳು ವಿದ್ಯೆಗೆ ವಿಮುಖರಾಗುವರೆಂದು ಹೇಳಲಾಗಿದೆ ನನ್ನ ಸ್ವಾನುಭವವು ಇದಕ್ಕೆ ನಿಶ್ಚಿತ ವಿರೋಧವಾಗಿದೆ ಕಲಿಯುವ ಉದ್ದೇಶದಿಂದ ನನ್ನಲ್ಲಿಗೆ ಬಂದ ಅನೇಕ ಖೈದಿಗಳಲ್ಲಿ ಓದುಬರೆಹವನ್ನು ಕಲಿಯಲು ಸಂಪೂರ್ಣವಾದ ಆಕಾಂಕ್ಷೆಯಿದ್ದಿತು ನಮ್ಮ ಬಳಿಗೆ ಬಂದ ಅಂತಹ ಖೈದಿಗಳಿಗೆ ನಾವು ವಿದ್ಯೆ ಕಲಿಸುತ್ತಿದ್ದೆವು ಅವರು ಕಷ್ಟಪಟ್ಟು ಕೆಲಸ ಮಾಡುತ್ತಿದ್ದರು ಒಂದೊಂದು ಸಲ ಮಧ್ಯರಾತ್ರಿಯಲ್ಲಿ ನನಗೆ ಎಚ್ಚರವಾದಾಗ, ಒಬ್ಬನೋ ಅಥವಾ ಇಬ್ಬರೋ ತಮ್ಮ ಪಾಳೆಯದಲ್ಲಿ ಮಂಕಾದ ಲಾಂದ್ರದ ಮುಂದೆ ಕುಳಿತುಕೊಂಡು ಮಾರನೆಯ ದಿನ ಒಪ್ಪಿಸುವುದಕ್ಕಾಗಿ ಪಾಠಗಳನ್ನು ಕಲಿಯುತ್ತಿದ್ದುದನ್ನು ನೋಡಿ ನನಗೆ ಆಶ್ಚರ್ಯವಾಗುತ್ತಿದ್ದಿತು

ಅಂತು ನಾನು, ಒಂದು ಬಗೆಯ ಪುಸ್ತಕವಾದ ಮೇಲೆ ಮತ್ತೊಂದು ಬಗೆಯ ಪುಸ್ತಕವನ್ನು ಓದುತ್ತಾ ಗ್ರಂಥಾವಲೋಕನ ವೃತ್ತಿಯಲ್ಲಿ ತೊಡಗಿದ್ದೆ ಆದರೆ 'ತೂಕ' ವಾದ ಪುಸ್ತಕಗಳಿಗೇ ಸಾಮಾನ್ಯವಾಗಿ ಅಂಟಿಕೊಂಡಿರುತ್ತಿದ್ದೆ ಕಾದಂಬರಿಗಳು ಒಬ್ಬನ ಮನಸ್ಸನ್ನು ಸಡಿಲಿಸುತ್ತಿದ್ದುವು ನಾನು ಅವುಗಳನ್ನು ಹೆಚ್ಚಾಗಿ ಓದಲಿಲ್ಲ ಕೆಲವು ವೇಳೆ ಅತಿ ಹೆಚ್ಚಾಗಿ ಓದಿ ಆಯಾಸವಾಗುತ್ತಿದ್ದಿತು ಆಗ ನಾನು ಬರೆಯುವುದಕ್ಕೆ ಪ್ರಾರಂಭಿಸುತ್ತಿದ್ದೆ ನನ್ನ ಮಗಳಿಗೆ ನಾನು ಬರೆದ ಐತಿಹಾಸಿಕ ಪತ್ರ ಮಾಲೆಯು ಎರಡು ವರುಷಗಳ ಕಾಲ ಸಂಪೂರ್ಣವಾಗಿ ನನ್ನನ್ನು ಕೆಲಸದಲ್ಲಿ ತೊಡಗಿಸಿತು ಇದು ನನ್ನ ಮನಸ್ಸನ್ನು ನೆಮ್ಮದಿಯಾಗಿಡುವುದರಲ್ಲಿ ಬಹಳಮಟ್ಟಿಗೆ ನೆರವಾಯಿತು ನಾನು ಬರೆಯುತ್ತಿದ್ದ ಪ್ರಾಚೀನ ಕಾಲದಲ್ಲೇ ಸ್ವಲ್ಪಮಟ್ಟಿಗೆ ಮಗ್ನನಾಗಿದ್ದೆ, ಮತ್ತು ಸೆರೆಮನೆಯ ಆವರಣ ಸನ್ನಿವೇಶಗಳನ್ನು ಬಹಳಮಟ್ಟಿಗೆ ಮರೆತುಬಿಟ್ಟೆ

ಪ್ರವಾಸ ಗ್ರಂಥಗಳು ಸದಾ ನನ್ನ ಮನಸ್ಸಿಗೆ ಪ್ರಿಯವಾಗಿದ್ದುವು—ಪ್ರಾಚೀನ ಪ್ರವಾಸಿಗಳಾದ ಹ್ಯೂನ್ ತ್ಸಾಂಗ್, ಮಾರ್ಕೊ ಪೋಲೊ, ಇಬ್ನೆ ಬಟ್ಟೂಟ ಮುಂತಾದವರ ವರದಿಗಳು ಮತ್ತು ಆಧುನಿಕ ಪ್ರವಾಸಿಗಳಲ್ಲಿ ಸ್ವೆನ್ ಹೆಡಿನ್ ಎಂಬಾತನು ಮಧ್ಯ ಏಷ್ಯ ಮರುಭೂಮಿಗಳನ್ನು ದಾಟುತ್ತ ಮಾಡಿದ ಪ್ರಯಾಣಗಳು, ಟಿಬೆಟ್‌ನಲ್ಲಿ ರೋರಿಚ್ ಎಂಬಾತನು ಕಂಡ ಅಪೂರ್ವ ಸಾಹಸಗಳು, ಚಿತ್ರಗಳು. ಅದರಲ್ಲಿಯೂ ವಿಶೇಷವಾಗಿ ಪರ್ವತಗಳು, ಹಿಮನದಿಗಳು, ಮತ್ತು ಮರುಭೂಮಿಗಳು ಇವನ್ನೊಳಗೊಂಡ ಸಚಿತ್ರ ಪುಸ್ತಕಗಳೂ ಪ್ರಿಯವಾಗಿದ್ದುವು ಏಕೆಂದರೆ ಒಬ್ಬನು ಸೆರೆಮನೆಯಲ್ಲಿ ದಿಗಂತವ್ಯಾಪ್ತಿಯ ಪ್ರದೇಶಗಳು, ಪರ್ವತಗಳು, ಮತ್ತು ಸಮುದ್ರಗಳಿಗಾಗಿ ಹಾತೊರೆಯುತ್ತಾನೆ ಮಾಂಟ್ ಬ್ಲ್ಯಾಂಕ್, ಆಲ್ಪ್ಸ್ ಮತ್ತು ಹಿಮಾಲಯ ಪರ್ವತಗಳ ಕೆಲವು ಸುಂದರ ಸಚಿತ್ರ ಪುಸ್ತಕಗಳು ನನ್ನಲ್ಲಿದ್ದುವು. ನನ್ನ ಓವರಿಯ ಅಥವಾ

ಪಾಳೆಯದ ಶಾಖವು ೧೧೫ ಡಿಗ್ರಿ ಫ್ಯಾರೆನ್ ಹೀಟ್ ಗಳಿಗಾಗಲಿ ಇಲ್ಲವೇ ಇನ್ನೂ ಹೆಚ್ಚಿಗೆಯಾಗಲಿ, ಏರಿಹೋಗಿದ್ದಾಗ ಕೂಡ ನಾನು ಅನೇಕ ವೇಳೆ ಆ ಚಿತ್ರಗಳ ಕಡೆಗೆ ತಿರುಗಿ, ಹಿಮನದಿಗಳನ್ನು ದಿಟ್ಟಿಸಿ ನೋಡುತ್ತಿದ್ದೆ ಭೂಪಟವು ಅತ್ಯಂತ ಉದ್ದೀಪನ ವನ್ನುಂಟುಮಾಡುವಂತಹ ಸಂಗತಿಯಾಗಿತ್ತು ನಾವು ಹಿಂದೆ ಸಂದರ್ಶಿಸಿದ್ದ ಮತ್ತು ಸಂದರ್ಶಿಸಬೇಕೆಂದಿದ್ದ ಎಲ್ಲ ಸ್ಥಳಗಳ ಎಲ್ಲ ಬಗೆಯ ಹಳೆಯ ನೆನವನ್ನೂ ಕನಸನ್ನೂ ಅದು ತಂದಿತು ಹಿಂದಿನ ದಿನಗಳಲ್ಲಿ ನಮ್ಮ ಹೃದಯದಲ್ಲಿ ಅಲೆಯುತ್ತಿದ್ದ ಆ ಸ್ಥಳ ಗಳಿಗೆ ಪುನಃ ಹೋಗಬೇಕೆಂಬ ಹೆಬ್ಬಯಕೆ, ಭೂಪಟದಲ್ಲಿ ಮಹಾ ನಗರಗಳೆಂದು ಸೂಚಿತವಾಗಿರುವ ಎಲ್ಲ ಗುರುತುಗಳನ್ನೂ ಚುಕ್ಕೆಗಳನ್ನೂ ಸಂದರ್ಶಿಸುವುದು, ಪರ್ವತ ಗಳೆಂದು ಗೆರೆಗಳಿಂದ ಛಾಯೆಗೂಣಿಸಿರುವ ಪ್ರದೇಶಗಳನ್ನು, ಮತ್ತು ಸಾಗರಗಳಾಗಿದ್ದ ನೀಲಿ ಪಟ್ಟಿಗಳನ್ನು ದಾಟುವುದು, ಜಗತ್ತಿನ ಸೌಂದರ್ಯವನ್ನು ಆಸ್ವಾದಿಸುವುದು ಮತ್ತು ವ್ಯತ್ಯಸ್ತವಾಗುತ್ತಿರುವ ಮಾನವತೆಯ ಸಂಗ್ರಾಮ, ಸಂಘರ್ಷಣೆಗಳನ್ನು ಅವ ಲೋಕಿಸುವುದು—ಇವನ್ನೆಸಗಬೇಕೆಂಬ ಹೇರಾಸೆಯು ನಮ್ಮನ್ನು ಹಿಡಿದುಬಿಟ್ಟು ಗಂಟ ಲಿಗೆ ಅಂಟಿಕೊಳ್ಳುತ್ತಿತ್ತು , ಮತ್ತು ನಾವು ಬೇಗನೆ ದುಃಖದಿಂದ ಭೂಪಟವನ್ನು ಬದಿಗೆಸದು ನಮ್ಮನ್ನು ಬಳಸಿ ನೆಗಳೆದ್ದ ಗೋಡೆಗಳಿಗೂ ನಮ್ಮ ನಿತ್ಯದ ವಾಡಾಗಿದ್ದ ಮಂಕಾದ ಏಕತಾನದ ಬಾಳಿಗೂ ಹಿಂದಿರುಗುತ್ತಿದ್ದೆವು

೪೫

# ಸೆರೆಮನೆಯಲ್ಲಿ ಜೀವರಾಶಿಗಳು

ಡೆಹ್ರಾ ಡೂನ್ ಸೆರೆಮನೆಯಲ್ಲಿ ನನ್ನ ಸಣ್ಣ ಓವರಿ ಅಥವಾ ಕೊಠಡಿಯಲ್ಲಿ ಹದಿನಾಲ್ಕೂವರೆ ತಿಂಗಳುಗಳ ಕಾಲವಿದ್ದೆ. ಬರಬರುತ್ತ, ನಾನೂ ಅದರ ಭಾಗವೊಂದಾಗಿಬಿಟ್ಟಿರುವಂತೆಯೇ ಭಾಸವಾಯಿತು. ಅದರ ಪ್ರತಿಯೊಂದು, ಪುಟ್ಟ ಭಾಗದ ಸಂಪೂರ್ಣ ಪರಿಚಯವೂ ನನಗಿತ್ತು. ಉಬ್ಬುತಗ್ಗಾದ ಆ ನೆಲ, ಹುಳು ಹೊಡೆದಿದ್ದ ಜಂತಿಗಳ ಛಾವಣಿ ಮತ್ತು ಸುಣ್ಣ ಬಳಿದಿದ್ದ ಗೋಡೆಗಳು, ಇವುಗಳ ಮೇಲಿದ್ದ ಪ್ರತಿಯೊಂದು ಗುರುತೂ ಕಚ್ಚೂ ನನಗೆ ತಿಳಿದಿದ್ದಿತು. ಹೊರಗಿನ ಪುಟ್ಟ ಅಂಗಳದಲ್ಲಿನ ಪಿಳ್ಳೆ ಹುಲ್ಲಿನ ಗುತ್ತಿಗಳನ್ನೂ ಅಲ್ಲೊಂದು ಇಲ್ಲೊಂದು ಬಿದ್ದಿದ್ದ ಕಲ್ಲುಗಳನ್ನೂ ಹಳೆಯ ಗೆಳೆಯರಂತೆ ಅಭಿವಂದಿಸುತ್ತಿದ್ದೆ. ನಾನು ನನ್ನ ಓವರಿಯಲ್ಲಿ ಒಂಟಿಯಾಗಿರಲಿಲ್ಲ. ಏಕೆಂದರೆ, ಹಲವು ಕಡಜಗಳ ಮತ್ತು ಜೀರಂಗಿಗಳ ವಸಾಹತಗಳು ಅಲ್ಲಿ ವಾಸವಿದ್ದುವು, ಅನೇಕ ಹಲ್ಲಿಗಳು ಜಂತಿಗಳ ಹಿಂದೆ ಗೃಹಾಶ್ರಯವನ್ನು ಪಡೆದಿದ್ದು, ಸಾಯಂಕಾಲದಲ್ಲಿ ಆಹಾರವನ್ನು ಅರಸಲು ಹೊರಬೀಳುತ್ತಿದ್ದುವು. ಭಾವನೆಗಳು ಮತ್ತು ರಾಗಗಳು ಸ್ಥೂಲ ಸನ್ನಿವೇಶಗಳಲ್ಲಿ ತಮ್ಮ ಸುಳಿವನ್ನು ಬಿಟ್ಟು ಹೋಗುವುದಾದರೆ, ಆ ಓವರಿಯ ಗಾಳಿಯೂ ಸಹ ಅವುಗಳಿಂದ ತುಂಬಿತುಂಬಿ ಹೋಗಿಬಿಟ್ಟಿರಬೇಕು, ಅವು ಆ ಸಣ್ಣ ಸ್ಥಳದಲ್ಲಿನ ಪ್ರತಿಯೊಂದು ವಸ್ತುವನ್ನೂ ಅಪ್ಪಿ ಹಿಡಿದಿರಲೇ ಬೇಕು.

ಇತರ ಸೆರೆಮನೆಗಳಲ್ಲಿ ಉತ್ತಮತರವಾದ ಓವರಿಗಳನ್ನು ಪಡೆದಿದ್ದೆ. ಆದರೆ ಡೆಹ್ರಾ ಡೂನ್ ಸೆರೆಮನೆಯಲ್ಲಿ ನನಗೆ ಅತ್ಯಮೂಲ್ಯವಾದೊಂದು ಅನುಕೂಲ ಬಾಧ್ಯತೆಯನ್ನು ಪಡೆದಿದ್ದೆ. ಸೆರೆಮನೆಯ ಮುಖ್ಯಭಾಗವು ಬಹು ಸಣ್ಣದಾಗಿತ್ತು. ಆದರ ಹೆಗ್ಗೋಡೆಗಳ ಆಚೆಯಿದ್ದ, ಆದರೆ ಸೆರೆಮನೆಯ ಆವರಣದೊಳಗಿದ್ದ ಹಳೆಯ ಲಾಕಪ್ಪೊಂದರಲ್ಲಿ ನಾವು ಇಡಲ್ಪಟ್ಟಿದ್ದೆವು. ಒಳಗೆ ಓಡಾಡಲು ಸ್ಥಳವಿಲ್ಲದಷ್ಟು ಅದು ಸಣ್ಣದಾಗಿತ್ತು. ಆದುದರಿಂದ ಬೆಳಿಗ್ಗೆ ಮತ್ತು ಸಾಯಂಕಾಲಗಳಲ್ಲಿ, ನಾವು ಹೊರಗಡೆಗೆ ಹೋಗಿ ಬಾಗಿಲಿನ ಎದುರಿನಲ್ಲಿ ಆಕಡೆಯಿಂದ ಈಕಡೆಗೆ, ಸುಮಾರು ನೂರು ಗಜಗಳಷ್ಟು ದೂರ ಓಡಾಡಲು ಅವಕಾಶಕೊಡಲ್ಪಟ್ಟಿತ್ತು. ನಾವು ಸೆರೆಯ ಆವರಣದಲ್ಲಿಯೇ ಇದ್ದರೂ, ಹೀಗೆ ಹಗ್ಗೋಡೆಗಳ ಹೊರಕ್ಕೆ ಬರುವುದರಿಂದ, ಪರ್ವತಗಳ, ಪ್ರದೇಶಗಳ ಮತ್ತು ಸಲ್ಪ ದೂರದಲ್ಲಿದ್ದ ಒಂದು ಹೆದ್ದಾರಿ, ಇವುಗಳ ನೋಟವು ದೊರೆಯುತ್ತಿತ್ತು. ಇದು ನನಗೊಬ್ಬನಿಗೆ ಮಾತ್ರವಿದ್ದ ವಿಶೇಷ ಅನುಕೂಲ ಬಾಧ್ಯತೆಯಲ್ಲ. ಡೆಹ್ರಾ ಡೂನ್ ನಲ್ಲಿ ಇಡಲ್ಪಟ್ಟಿದ್ದ ಎ ಮತ್ತು ಬಿ ತರಗತಿಗಳ ಬಂದಿಗಳಿಗೆಲ್ಲ ಇದು

ಸಮಾನವಾಗಿತ್ತು ಸೆರೆಮನೆಯ ಆವರಣದ ಒಳಗೆ, ಆದರೆ ಹೆಗ್ಗೋಡೆಗಳ ಹೊರಗೆ ಯೂರೋಪಿಯನ್ ಲಾಕಪ್ ಎಂದು ಉಸರುಗೊಂಡಿದ್ದ ಮತ್ತೊಂದು ಸಣ್ಣ ಕಟ್ಟಡವಿದ್ದಿತು ಇದನ್ನು ಆವರಿಸುವ ಹೆಗ್ಗೋಡೆ ಇರಲಿಲ್ಲ, ಮತ್ತು ಓವರಿಯ ಒಳಗಿದ್ದ ಒಬ್ಬನಿಗೆ ಪರ್ವತಗಳ ಮತ್ತು ಹೊರಗಿನ ಜೀವನದ ಸುಂದರ ನೋಟವು ದೊರೆಯುತ್ತಿತ್ತು ಯೂರೋಪಿಯನ್ ಬಂದಿಗಳಿಗೂ ಅಲ್ಲಿ ಇಡಲ್ಪಟ್ಟಿದ್ದ ಇತರರಿಗೂ ಸೆರೆಮನೆಯ ಹೊರಬಾಗಿಲಿನ ಮುಂದೆ ಓಡಾಡಲು ಅವಕಾಶ ಕೊಡಲಾಗಿದ್ದಿತು

ಈ ಹೊರಗಿನ ವಿಹಾರಗಳ ಮತ್ತು ವಿಶಾಲ ದೃಶ್ಯಗಳ ಅದ್ಭುತ ಮನೋಲ್ಲಾಸಕರ ಪ್ರಭಾವದ ಬೆಲೆಯನ್ನು ಎತ್ತರವಾದ ಗೋಡೆಗಳ ಹಿಂದ ಬಹಳ ಕಾಲ ಬಂಧಿತನಾಗಿದ್ದ ಒಬ್ಬ ಸೆರೆಯಾಳು ಮಾತ್ರ ಮೆಚ್ಚಬಲ್ಲವನಾಗಿದ್ದನು ಈ ಕಾಲಾಟಗಳು ನನಗೆ ಪ್ರಿಯವಾಗಿದ್ದುವು, ಮತ್ತು ಹಿಂಗಾರು ಮುಂಗಾರುಗಳಲ್ಲಿ, ಮಳೆಯು ದಿನಗಳಗಟ್ಟಲೆ ಪ್ರವಾಹರೂಪವಾಗಿ ಬರುತ್ತಿದ್ದು ಕಣಕಾಲುದ್ದದ ನೀರಿನಲ್ಲಿ ಓಡಾಡಬೇಕಾಗಿ ಬಂದಾಗಲೂ ಸಹ, ಕಾಲಾಡುವುದನ್ನು ಬಿಡಲಿಲ್ಲ ಯಾವ ಸ್ಥಳದಲ್ಲಿಯೇ ಆಗಲಿ, ಕಾಲಾಟವನ್ನು ಸ್ವಾಗತಿಸುತ್ತಿದ್ದೆ ಆದರ ಹತ್ತಿರದಲ್ಲಿಯೇ ಇದ್ದ ಉತ್ತುಂಗ ಹಿಮಾಲಯದ ನೋಟವು, ಸೆರೆಮನೆಯ ಆಸರಿಕೆಯನ್ನು ಬಹಳಮಟ್ಟಿಗೆ ಹೋಗಲಾಡಿಸುವುದರಲ್ಲಿ ಸಹಾಯ ಮಾಡಿತು ಒಂದು ಭೇಟಿಯೂ ಇಲ್ಲದಿದ್ದ ನೀಳವಾದ ಅವಧಿಯಲ್ಲಿ ನಾನು ಒಂಟಿಯಾಗಿ ಕಳೆದ ಆ ಅನೇಕ ತಿಂಗಳುಗಳಲ್ಲಿ, ನನಗೆ ಪ್ರಿಯವಾದ ಪರ್ವತ ಪಂಕ್ತಿಗಳನ್ನು ನಿಟ್ಟಿಸಿ ನೋಡುತ್ತಲೇ ಇದ್ದುಬಿಡುವ ಅವಕಾಶ ದೊರೆತುದು ನನ್ನ ಅದೃಷ್ಟ ನನ್ನ ಓವರಿಯಿಂದ ನಾನು ಆ ಪರ್ವತ ಪಂಕ್ತಿಗಳನ್ನು ನೋಡಲಾರದವನಾಗಿದ್ದ ಆದರೆ ನನ್ನ ಮನಸ್ಸು ಅವುಗಳಿಂದ ತುಂಬಿಹೋಗಿತ್ತು, ಅವುಗಳ ಸಾಮೀಪ್ಯಕ್ಕೆ ಸದಾ ಜಾಗೃತನಾಗಿದ್ದೆ, ಮತ್ತು ನಮ ನಮಗೆ ಒಂದು ವಿಧವ ವ ಗೂಢ ಅನ್ಯೋನ್ಯತೆಯು ಬೆಳೆಯುತ್ತಿದ್ದಂತೆ ಭಾಸವಾಯಿತು

> " ಹಕ್ಕಿಗಳ ಹಿಂಡುಗಳು ಮೇಲೇರಿ ಹಾರಾಡಿ ಹೋಗಿಹುವು,
> ಜಾರಿ ಬಂದಿಹ ಒಂಟಿ ಮೋಡವೂ ಅಲೆವಲೆದು ಹೋಗಿಹುದು,
> ಮೇಣಾಚೆ ಗೋಪುರದೊಲೆದ್ದಿರುವ ಚಿಂಗ್-ಟಿಂಗ ಕೋಡೊಡನೆ
> ಕುಳಿತಿರುವೆನೊರ್ವನೇ.
> ನಮನಮಗೆ ಎಂದಿಗೂ ಬೇಸರವೆ ಇಲ್ಲ, ಮಲೆಗುಮೆನಗುಂ"

ಕವಿ ಲಿ ಟ'ಯ್ ಪೋ ಹೇಳುವಂತೆಯೇ ಪರ್ವತದಿಂದ ನನಗೂ ಬೇಸರವಾಗುವುದೇ ಇಲ್ಲ, ಎಂದು ಹೇಳಲಾರ ಆದರೆ ಅದು ಅಪೂರ್ವ ಅನುಭವವಾಗಿದ್ದು ಸ್ವಾಭಾವಿಕವಾಗಿ ಅವರ ಸಾಮೀಪ್ಯದಲ್ಲಿ ಹೆಚ್ಚು ಆಶ್ವಾಸನವನ್ನು ಪಡೆದೆ, ಆದರ

ಘನತೆಯೂ ಪ್ರಶಾಂತತೆಯೂ ಹತ್ತಾರು ಲಕ್ಷ ವರ್ಷಗಳ ಜ್ಞಾನದಿಂದೊಡಗೂಡಿ ನನ್ನನ್ನು ಧಿಕ್ಕಾರದಿಂದ ನೋಡಿತು, ವ್ಯತ್ಯಸ್ತವಾಗುತ್ತಿದ್ದ ನನ್ನ ಮನೋಭಾವ ಗಳನ್ನು ಅಣಕಿಸುತ್ತ, ನನ್ನ ಉದ್ವೇಗಗೊಂಡ ಮನಸ್ಸನ್ನು ಆಶ್ವಾಸನಗೊಳಿಸಿತು

ವಸಂತವು ಡೆಹ್ರಾದಲ್ಲಿ ಬಹಳ ಸುಖಕರವಾಗಿತ್ತು, ಮತ್ತು ಕೆಳಗಿನ ಬಯಲು ಗಳಲ್ಲಿರುವ ಕಾಲಕ್ಕಿಂತ ಅಲ್ಲಿ ಹೆಚ್ಚಾದ ಕಾಲವಿರುತ್ತಿತ್ತು ಹೇಮಂತ ಋತುವು ಎಲೆ ಗಳೆನ್ನೆಲ್ಲಾ ಉದುರಿಸಿಬಿಟ್ಟು, ಗಿಡಮರಗಳನ್ನು ನಗ್ನೀಕರಿಸಿತ್ತು ಅವು ಮುಚ್ಚು ಮರೆಯಿಲ್ಲದೆ ಬತ್ತಲೆಯಾಗಿ ನಿಂತಿದ್ದುವು ನೆರೆಯ ಹೊರಬಾಗಿಲಿನೆದುರು ವೈಭವ ದಿಂದ ನಿಂತಿದ್ದ ನಾಲ್ಕು ಅಶ್ವತ್ಥ ವೃಕ್ಷಗಳು ಸಹ ತಮ್ಮ ಎಲೆಗಳೆಲ್ಲವನ್ನೂ ಉದುರಿ ಸಿಯೇ ಬಿಟ್ಟದ್ದುದನ್ನು ಕಂಡು ಆಶ್ಚರ್ಯಪಟ್ಟೆ ವಸಂತಮಾರುತವು ಅವಕ್ಕೆ ಪುನಃ ಕಾವುಗೊಟ್ಟು, ಅವುಗಳ ಅತಿಗೂಢ ಜೀವಾಣುಗಳಿಗೂ ಜೀವಕಳೆಯ ಸಂದೇಶವನ್ನು ಕಳುಹಿಸುವವರೆಗೆ, ಅಲ್ಲಿ ಅವು ಕಳೆಯಿಲ್ಲದ ಸೊರಗಿ ನಿಂತಿದ್ದುವು ಇದ್ದಕ್ಕಿದ್ದಂತೆಯೇ ಅಶ್ವತ್ಥ ಮತ್ತು ಇತರ ವೃಕ್ಷಗಳಲ್ಲಿ ಒಂದು ಕಂಪನವಾಯಿತು, ರಹಸ್ಯ ವಾತಾವರಣ ವೊಂದು ಮುಸುಕಿದ್ದು, ತೆರೆಯ ಹಿಂದ ಗೂಢ ಪ್ರಯೋಗಗಳೇನೋ ನಡೆಯುತ್ತಿದ್ದಂತೆ ತೋರಿತು, ಸಣ್ಣ ಪುಟ್ಟ ಹಸುರ ಬಿಡಿಕುಡಿಗಳು ಅವುಗಳ ಮೈಮೇಲೆಲ್ಲ ಇಣಿಕಿ ನೋಡುತ್ತಿದ್ದುದನ್ನು ಕಂಡು ಚಕಿತನಾದೆ ಅದೊಂದು ಗೆಲುವಿನ ಮತ್ತು ಉಲ್ಲಾಸ ಕರ ನೋಟ ಆಮೇಲೆ ಬಹಳ ವೇಗವಾಗಿ ಲಕ್ಷಾಂತರ ಎಲೆಗಳು ಹೊರಬಿದ್ದು ಬಿಸಿಲಿನಲ್ಲಿ ಮಿನುಗುತ್ತ ಗಾಳಿಯಲ್ಲಿ ಆಟವಾಡುತ್ತಲಿದ್ದುಬಿಡುತ್ತಿದ್ದುವು ಮೊಳಕೆಯು ಎಲೆಯಾಗುವ ತಟ್ಟನೆಯ ಮಾರ್ಪಾಡು ಎಷ್ಟು ವಿಚಿತ್ರವಾದುದು!

ಕಾಶ್ಮೀರದ ಮಲೆಗಳ ಮಾಗಿಯ ಬಣ್ಣಗಳಂತೆ, ಹೊಸ ಮಾವಿನ ಎಲೆಗಳು ಕೆಂಪು-ಕಂದಾಗಿಯೂ ಕಾವಿಯಾಗಿಯೂ ಇರುತ್ತವೆ ಎಂಬುದನ್ನು ಹಿಂದೆ ಗಮನಿಸಿರ ಲಿಲ್ಲ ಆದರೆ ಶೀಘ್ರದಲ್ಲಿ ಅವು ಬಣ್ಣವನ್ನು ಮಾರ್ಪಡಿಸಿಕೊಂಡು ಹಸುರಾಗಿ ಬಿಡುತ್ತವೆ

ಮುಂಗಾರು ಮಳೆಗಳಿಗೆ ಯಾವಾಗಲೂ ಸ್ವಾಗತವಿತ್ತು ಏಕೆಂದರೆ ಅವು ಬೇಸಿಗೆಯ ಬಿಸಿಯನ್ನು ಕೊನೆಗಾಣಿಸುತ್ತಿದ್ದುವು ಆದರೆ ಒಳ್ಳೆಯದೊಂದನ್ನು ಅತಿ ಯಾಗಿ ಪಡೆಯಲು ಸಾಧ್ಯವಿರುತ್ತದೆ, ಮತ್ತು ಡೆಹ್ರಾ ಡೂನ್ ಕ್ಷೇತ್ರವು ಮಳೆರಾಯನ ಇಷ್ಟಕ್ಕೆ ಪಾತ್ರವಾಗಿ ಅವನು ಅಲೆವ ನೆಲೆಗಳಲ್ಲೊಂದು ಮುಂಗಾರು ಆರಂಭವಾದ ಮೊದಲ ಐದು ಆರು ವಾರಗಳಲ್ಲಿ ಸುಮಾರು ಐವತ್ತು ಅರವತ್ತು ಅಂಗುಲಗಳಷ್ಟು ಮಳೆ ಬೀಳುತ್ತಿದ್ದಿತು, ಮೇಲ್ಛಾವಣಿಯಿಂದ ತೊಟ್ಟಿಕ್ಕುತ್ತಿದ್ದ ನೀರಿನಿಂದಲೋ ಅಥವಾ ಕಿಟಕಿಗಳಿಂದ ನುಗ್ಗುತ್ತಿದ್ದ ನೀರಿನಿಂದಲೋ ತಪ್ಪಿಸಿಕೊಳ್ಳಲು ಪ್ರಯತ್ನಿ ಸುತ್ತ ಪುಟ್ಟ ಇಕ್ಕಟ್ಟಿನ ಸ್ಥಳದಲ್ಲಿ ಗೂಡೆ ಮುಚ್ಚಿಕೊಂಡಂತೆ ಕುಳಿತಿರುವುದು ಹಿತವಾಗಿರಲಿಲ್ಲ

ಮಾಗಿಯು ಪುನಃ ಹಿತಕರವಾಗಿತ್ತು ಮಳೆ ಬೀಳುತ್ತಿದ್ದಾಗ ಹೊರಕಾಗಿ ಚಳಿಗಾಲವೂ ಹಾಗೆಯೇ ಇದ್ದಿತು ಗುಡುಗು ಮಳೆ ಮತ್ತು ಕೊರೆಯುವ ಚಳಿಗಳ ನಡುವೆ ಯೋಗ್ಯವಾದ ವಾಸಸ್ಥಳಕ್ಕಾಗಿಯೂ ಸ್ವಲ್ಪ ಕಾವಿಗೂ ನೆಮ್ಮದಿಗೂ ಮನಸ್ಸು ಹಾತೊರೆಯುತ್ತಿದ್ದಿತು ಆಗಾಗ ಆಲಿಕಲ್ಲ ಬಿರುಮಳೆಯು ಬಿದ್ದು, ಗೋಲಿಗಳಿಗಿಂತ ದೊಡ್ಡ ಆಲಿಕಲ್ಲುಗಳು, ಅಲೆಯಲೆಯಾಗಿ ಬಗ್ಗಿದ ಕಬ್ಬಿಣದ ಮೇಲ್ಚಾವಣಿಯ ಮೇಲೆ ಸಿಡಿದು, ಫಿರಂಗಿ ಗುಂಡಿನ ಮಳೆಯಂತೆ ಘೋರವಾದ ಗದ್ದಲವನ್ನು ಮಾಡುತ್ತಿದ್ದುವು

ನನಗೆ ದಿನವೊಂದು ವಿಶೇಷವಾಗಿ ನೆನಪಿದೆ, ಅದು ೧೯೩೨ ರ ೨೪ನೇ ಡಿಸೆಂಬರು ದಿನವೆಲ್ಲ ಗುಡುಗು ಬಿರುಮಳೆ ಗಾಳಿಗಳು ಚಳಿಯು ಕೊರೆಕೊರೆ ಯುತ್ತಿತ್ತು ಕೇವಲ ದೈಹಿಕ ದೃಷ್ಟಿಯಿಂದ, ನಾನು ಸೆರೆಮನೆಯಲ್ಲಿ ಕಳೆದ ದಿನ ಗಳಲ್ಲೆಲ್ಲಾ ಅಂದು ಒಟ್ಟಿನಲ್ಲಿ, ಅತ್ಯಂತ ರೋತೆಯ ದಿನವಾಗಿತ್ತು ಸಂಜೆಯಲ್ಲಿ ಅದೆಲ್ಲವೂ ಹಾವ್ವನೆ ತಿಳಿಯಾಯಿತು ನೆರೆಹೊರೆಯಲ್ಲಿದ್ದ ಬೆಟ್ಟಗುಡ್ಡಗಳೆಲ್ಲ ದಪ್ಪ ವಾದ ಮಂಜಿನ ಬೊಂತೆಯೊಂದರಿಂದ ಮುಚ್ಚಲ್ಪಟ್ಟದ್ದುದನ್ನು ನೋಡಿದಾಗ ನನ್ನ ರೋತೆಯೆಲ್ಲವೂ ಓಡಿಹೋಯಿತು ಮಾರನೆಯ ದಿನ–ಕ್ರಿಸ್‌ಮಸ್ ದಿನ–ಚೆಲು ವಾಗಿಯೂ ತಿಳಿಯಾಗಿಯೂ ಇದ್ದು, ಹಿಮಾಚ್ಛಾದಿತ ಪರ್ವತಗಳ ಸುಂದರ ದೃಶ್ಯವು ದೊರಕಿತು

ಯಥಾವಸ್ಥಿತ ಕಾರ್ಯಕ್ರಮಗಳಲ್ಲಿ ತೊಡಗಲು ತಡೆಯಾಗಿಬಿಟ್ಟಿದ್ದುದರಿಂದ ನಾವು ಪ್ರಕೃತಿಯ ವಿಧಗಳನ್ನು ಹೆಚ್ಚಾಗಿ ಗಮನಿಸಲಾರಂಭಿಸಿದೆವು ನಮ್ಮ ಕಡೆಗೆ ಬಂದ ವಿವಿಧ ಪ್ರಾಣಿಕ್ರಿಮಿಕೀಟಗಳನ್ನು ಎಚ್ಚರಿಕೆಯಿಂದ ನೋಡುತ್ತಿದ್ದೆವು ನಾನು ಹೆಚ್ಚಾಗಿ ಲಕ್ಷ್ಯಗೊಡುತ್ತ ಬಂದಂತೆಲ್ಲಾ, ನನ್ನ ಓವರಿಯಲ್ಲೂ ಪುಟ್ಟ ಹೊರ ಅಂಗಳ ದಲ್ಲೂ ವಿವಿಧ ಕ್ರಿಮಿಕೀಟಗಳು ಜೀವಿಸುತ್ತಿರುವುದನ್ನು ಕಂಡೆ ನಾನು ಒಂಟಿಗತನ ವನ್ನು ಕುರಿತು ಕೊರಗುತ್ತ ಗೊಣಗುಟ್ಟುತ್ತಿರುವಾಗ, ಬರಿದಾಗಿಯೂ ನಿರ್ಜನವಾಗಿಯೂ ಇದ್ದಂತೆ ಕಾಣಬರುತ್ತಿದ್ದ ಆ ಹೊರ ಅಂಗಳವು ಜೀವರಾಶಿಗಳಿಂದ ತುಂಬಿತುಳುಕು ತ್ತಿದ್ದಿತು, ಎಂಬುದನ್ನು ಅರಿತುಕೊಂಡೆ ಹರಿಯುತ್ತಿದ್ದ ಅಥವಾ ನುಸುಳುತ್ತಿದ್ದ ಅಥವಾ ಹಾರುತ್ತಿದ್ದ ಈ ಎಲ್ಲ ಕ್ರಿಮಿಕೀಟಗಳು ಯಾವ ರೀತಿಯಲ್ಲೂ ನನ್ನ ತಂಟೆಗೆ ಬರದೆ ಬಾಳುತ್ತಿದ್ದವು, ಅಲ್ಲದೆ ನಾನು ಅವುಗಳ ಗೊಡವೆಗೆ ಹೋಗಲು ಯಾವ ಕಾರಣವೂ ಕಾಣಲಿಲ್ಲ ಆದರೂ ತಿಗಣೆಗಳು, ಸೊಳ್ಳೆಗಳು, ಸ್ವಲ್ಪಮಟ್ಟಿಗೆ ನೊಣ ಗಳು, ಇವುಗಳಿಗೂ ನನಗೂ ಅನವರತ ಸಂಗ್ರಾಮವು ನಡೆಯುತ್ತಲೇ ಇದ್ದಿತು ಕಡಜ ಮತ್ತು ಜೀರಂಗಿಗಳನ್ನು ಸೈರಿಸಿದ್ದೆ, ನನ್ನ ಓವರಿಯಲ್ಲಿ ಅವು ನೂರುಗಟ್ಟಲೆ ಇದ್ದುವು. ಒಮ್ಮೆ ಕಡಜವೊಂದು, ಮೋಲುಮರಡಿಯಿಂದ ಎಂದು ತೋರುತ್ತದೆ, ನನ್ನನ್ನು ಕಚ್ಚಿದಾಗ ಸಣ್ಣದೊಂದು ಲಟಾಪಟಿಯು ನಡೆಯಿತು ನನ್ನ ಕ್ರೋಧಾವೇಶ

ವಲ್ಲಿ, ಅವುಗಳ ಗುಂಪನ್ನೆಲ್ಲ ಒಡನೆ ಅಟ್ಟಿ ಓಡಿಸಿಬಿಡಬೇಕೆಂದು ಪ್ರಯತ್ನಮಾಡಿದೆ ಆದರ ಅವು ಅವುಗಳ ಹಂಗಾಮಿ ವಸತಿಯ ರಕ್ಷಣೆಗಾಗಿ (ಅಲ್ಲಿ ಪ್ರಾಯಶಃ ಅವುಗಳ ಮೊಟ್ಟೆಗಳಿದ್ದಿರಬೇಕು) ಗಂಡು ಕಾಳಗವನ್ನು ನಡೆಯಿಸಿದವು ನಾನು ಕಾಳಗವನ್ನು ಮಾಣ್ವು, ಇನ್ನು ಮುಂದೆ ನನ್ನ ಸುದ್ದಿಗೆ ಅವು ಬಾರದಿದ್ದರೆ, ನಾನು ಅವುಗಳನ್ನು ಅವುಗಳಷ್ಟಕ್ಕೇ ಬಿಟ್ಟುಬಿಡುವುದಾಗಿ ನಿಶ್ಚಯಿಸಿದೆ ಇದಾದ ಮೇಲೆ ಆ ಓವರಿಯಲ್ಲಿ ಈ ಕಡಜ ಜೇರಂಗಿಗಳಿಂದಲೇ ಆವರಿಸಲ್ಪಟ್ಟು ಒಂದು ವರ್ಷಕ್ಕಿಂತ ಹೆಚ್ಚಾಗಿಯೇ ನಾನು ಜೀವಿಸಿದೆ, ಅವು ನನ್ನ ಮೇಲೆ ಬೀಳಲೇ ಇಲ್ಲ ಮತ್ತು ನಾವು ನಾವು ಒಬ್ಬ ರನ್ನೊಬ್ಬರು ಗೌರವದಿಂದ ಕಾಣುತ್ತಿದ್ದೆವು

ಬಾವಲಿಗಳು ನನಗೆ ಅನಿಷ್ಟವಾಗಿದ್ದುವು ಆದರೆ ಅವುಗಳನ್ನು ಸೈರಿಸಬೇಕಾ ಯಿತು ಸದ್ದಿಲ್ಲದೆ ಸಂಜೆಯ ಮಬ್ಬಿನಲ್ಲಿ ಅವು ಹಾರಾಡುತ್ತಿದ್ದುವು ಮಬ್ಬೇರು ತ್ತಿದ್ದ ಬಾನಿಗೆದುರಾಗಿ ಅವುಗಳನ್ನು ಮಂಪರಮಂಪರವಾಗಿ ಕಾಣಬಹುದಾಗಿತ್ತು ಅಲೌಕಿಕವಾದ ಪ್ರಾಣಿಗಳವು ಅವುಗಳೆಂದರೆ ಮೈನಡುಗುತ್ತಿದ್ದಿತು ಮುಖಕ್ಕೆ ಒಂದಂಗುಲ ಮಾತ್ರ ಬಿಟ್ಟು ಹಾರಿಹೋಗುವಂತೆ ತೋರುತ್ತಿತ್ತು, ನನಗೆಲ್ಲಿ ಬಂದು ಬಡಿದುಕೊಳ್ಳುವುವೊ ಎಂದು ಯಾವಾಗಲೂ ಹೆದರಿದ್ದೆ ಆಕಾಶದಲ್ಲಿ, ಇನ್ನೂ ಎತ್ತರದಲ್ಲಿ, ದೊಡ್ಡದೊಡ್ಡ ಕಬಟಗಳು-ಕೀಚಬಾಲ-ಹಕ್ಕಿಗಳು ಹಾರಿಹೋಗು ತ್ತಿದ್ದುವು

ಇರುವೆಗಳು, ಗೆದ್ದಲ ಹುಳುಗಳು ಮತ್ತು ಇತರ ಕ್ರಿಮಿ ಕೀಟಗಳನ್ನು ಗಂಟೆಗಳ ಕಾಲ ನೋಡನೋಡುತ್ತಲಿದ್ದೆ ಸಾಯಂಕಾಲಗಳಲ್ಲಿ ಹಲ್ಲಿಗಳು ತಮ್ಮ ಬಾಲಗಳನ್ನು ಸಬ್ಬವಕಾರರಂತೆ ಅಲ್ಲಾಡಿಸುತ್ತ, ತಮ್ಮ ಬೇಟೆಗಾಗಿ ಹೊಂಚುಹಾಕುತ್ತ ಒಂದನ್ನು ಇನ್ನೊಂದು ಓಡಿಸಿಕೊಂಡು ಹೋಗುತ್ತಲಿದ್ದುವು ಸಾಧಾರಣವಾಗಿ ಅವು ವರಟಗಳಿಂದ ದೂರವಿರುತ್ತಿದ್ದುವು, ಆದರ ಎರಡು ಸಂದರ್ಭಗಳಲ್ಲಿ ಅವು ಅವನ್ನು ಅತಿ ಎಚ್ಚರಿಕೆ ಯಿಂದ ಹೊಂಚುಹಾಕಿ ಮುಂದುಗಡೆಯಿಂದ ಪಟ್ಟುಹಿಡಿದುದನ್ನು ನೋಡಿದೆ ವರಟದ ಮುಳ್ಳನ್ನು ಹೇಗೆ ತಪ್ಪಿಸಿಕೊಂಡುದು ಬೇಕೆಂದೆಯೋ ಇಲ್ಲವೇ ಅನಿರೀಕ್ಷಿತವಾಗಿಯೋ ನಾನು ಹೇಳಲಾರೆ

ಆಮೇಲೆ ಅಳಿಲುಗಳು ಮರಗಳಿದ್ದೆಡೆಯಲ್ಲೆಲ್ಲಾ ಅನೇಕಾನೇಕವಿರುತ್ತಿದ್ದುವು ಒಮ್ಮೆ ಗುಂಡಿಗೆಯನ್ನು ಗಟ್ಟಿಮಾಡಿಕೊಂಡು ನೇರವಾಗಿ ನಮ್ಮ ಬಳಿಗೇ ಬಂದು ಬಿಡುತ್ತಿದ್ದವು ಲಕ್ನೋ ಸೆರೆಯಲ್ಲಿ ನಾನು ಬಹಳ ಹೊತ್ತು ಬಹುತರ ನಿಶ್ಚಲನಾಗಿ ಓದುತ್ತ ಕುಳಿತುಬಿಡುತ್ತಿದ್ದೆ ಅಳಿಲೊಂದು ನನ್ನ ಕಾಲಿನ ಮೇಲೆ ಹತ್ತಿ ಬಂದು ಮಂಡಿಯ ಮೇಲೆ ಕುಳಿತು ಒಮ್ಮೆ ಸುತ್ತಲೂ ಹಾಗೆಯೇ ನೋಡುತ್ತಿತ್ತು ಆಮೇಲೆ ಅದು ನನ್ನ ಕಣ್ಣುಗಳಲ್ಲಿ ದಿಟ್ಟಿಸಿ ನೋಡಿ, ನಾನು ಒಂದು ಮರ ಅಥವಾ ನಾನು

ಏನೆಂದು ಅದು ಭ್ರಮಿಸಿದ್ದಿತೋ ಅವಲ್ಲವೆಂಬುದನ್ನು ಕಂಡುಕೊಳ್ಳುತ್ತಿತ್ತು ಕ್ಷಣ ಮಾತ್ರ ಭಯವು ಅದನ್ನು ಸ್ತಬ್ಧಗೊಳಿಸುತ್ತಿತ್ತು, ಆಮೇಲೆ ಅದು ಓಡಿಹೋಗಿ ಬಿಡುತ್ತಿತ್ತು ಪುಟ್ಟ ಮರಿ ಅಳಿಲುಗಳು ಕೆಲವು ವೇಳೆ ಮರಗಳಿಂದ ಕೆಳಗೆ ಬಿದ್ದು ಹೋಗುತ್ತಿದ್ದುವು ತಾಯಿಯು ಹಿಂದೆಯೇ ಬಂದು, ಅವುಗಳನ್ನು ಪುಟ್ಟ ಚೆಂಡುಗಳಂತೆ ಸುತ್ತಿಬಿಟ್ಟು, ಕ್ಷೇಮವಾಗಿ ಎತ್ತಿಕೊಂಡುಹೋಗಿಬಿಡುತ್ತಿದ್ದುವು. ಒಮ್ಮೊಮ್ಮೆ ಮರಿ ಅಳಿಲು ತಪ್ಪಿಸಿಕೊಂಡುಬಿಡುತ್ತಿತ್ತು ನನ್ನ ಜೊತೆಗಾರನೊಬ್ಬನು ಇಂತಹ ಮೂರು ಮರಿ ಅಳಿಲುಗಳನ್ನು ತಂದು ಅವುಗಳಿಗೆ ಆರೈಕೆ ಮಾಡುತ್ತಿದ್ದನು ಅವುಗಳಿಗೆ ಹೇಗೆ ಆಹಾರ ಕೊಡಬೇಕೆಂಬುದೇ ಸಮಸ್ಯೆಯಾಗುವಷ್ಟು ಅವು ಪುಟ್ಟ ವಾಗಿದ್ದುವು. ಅಂತು ಸಮಸ್ಯೆಯು ಜಾಣ್ಮೆಯಿಂದ ಪರಿಹಾರವಾಯಿತು ಸ್ವಲ್ಪ ಹತ್ತಿಯು ತಗುಲಿಸಲ್ಪಟ್ಟ ಒಂದು ಫೌಂಟನ್ ಪೆನ್ ಫಿಲ್ಲರು ತಕ್ಕ ಫೀಡಿಂಗ್ ಬಾಟ್ಲ್ ಆಯಿತು

ಬೆಟ್ಟಗಳಲ್ಲಿದ್ದ ಆಲ್ಮೋರ ಸೆರೆಮನೆಯ ಹೊರತಾಗಿ ನಾನು ಹೋದ ಇನ್ನಿತರ ನೆರೆಮನೆಗಳಲ್ಲೆಲ್ಲ ವಾರಿವಾಳಗಳು ಯಥೇಚ್ಛವಾಗಿದ್ದುವು ಅವು ಸಾವಿರ ಗಟ್ಲೆ ಇದ್ದು ಸಾಯಂಕಾಲಗಳಲ್ಲಿ ಆಕಾಶವು ಅವುಗಳಿಂದ ತುಂಬಿಹೋಗುತ್ತಿತ್ತು. ಕೆಲವುವೇಳೆ ಸೆರೆಮನೆಯ ಅಧಿಕಾರಿಗಳು ಅವನ್ನು ಗುಂಡಿನಿಂದ ಹೊಡೆದು ಕೆಡವಿ ತಿನ್ನುತ್ತಿದ್ದರು ಸರಿ, ಗೊರವಂಕಗಳೂ ಇದ್ದುವು, ಅವು ಎಲ್ಲೆಲ್ಲಿಯೂ ಇರುತ್ತವೆ ಡೆಹ್ರಾ ಡುನ್ ನೆರೆಮನೆಯ ನನ್ನ ಓವರಿಯ ಬಾಗಿಲ ಮೇಲೆ ಅವುಗಳ ಜೊತೆ ಯೊಂದು ಗೂಡ ಕಟ್ಟಿತ್ತು ನಾನು ಅವುಗಳಿಗೆ ತಿಂಡಿ ಕೊಡುತ್ತಿದ್ದೆ ಅವು ಪಳಗಿ ಹೋದುವು ಮತ್ತು ಅವುಗಳ ಬೆಳಗಿನ ಅಥವಾ ಬೈಗಿನ ಊಟಕ್ಕೆ ಏನಾದರೂ ತಡವಾದರೆ ಅವು ನನ್ನ ಹತ್ತಿರಕ್ಕೇ ಬಂದು ಕುಳಿತು, ಗಟ್ಟಿಯಾಗಿ ತಮ್ಮ ಆಹಾರ ವನ್ನು ಕೇಳುತ್ತಿದ್ದುವು ಅವುಗಳ ಸನ್ನೆಗಳನ್ನು ನೋಡುವುದು ಮತ್ತು ಅವುಗಳ ಆತುರದ ಕೂಗುಗಳನ್ನು ಕೇಳುವುದು ಒಂದು ಸೋಜಿಗವಾಗಿತ್ತು

ನೈನಿಯಲ್ಲಿ ಸಾವಿರಾರು ಕನ್ನಡವಕ್ಕಿಗಳಿದ್ದು, ಅವುಗಳಲ್ಲನೇಕವು ನನ್ನ ಪಾಳೆ ಯದ ಗೋಡೆಗಳ ಬಿರುಕುಗಳಲ್ಲಿ ವಾಸಿಸುತ್ತಿದ್ದುವು ಅವುಗಳ ಪ್ರಣಯ ಲೀಲೆಗಳು ಮತ್ತು ಶೃಂಗಾರ ಚೇಷ್ಟೆಗಳು ಮನೋಹರವಾದ ದೃಶ್ಯವಾಗಿತ್ತು ಮೇಲಾಡಿಗಳ ದ್ವಂದ್ವ ಯುದ್ಧದ ಪರಿಣಾಮವನ್ನು ನಿಧಾನವಾಗಿ ನಿರೀಕ್ಷಿಸುತ್ತ ವಿಜಯಿಗೆ ತನ್ನ ಪ್ರೇಮಾನುಗ್ರಹವನ್ನು ನೀಡಲು ಶಾಂತವಾಗಿ ಕುಳಿತಿದ್ದ ಹೆಣ್ಣು ಗಿಳಿಯ ಎದುರಿನಲ್ಲಿ ಕೆಲವು ವೇಳೆ ಎರಡು ಗಂಡು ಗಿಳಿಗಳಿಗೆ ಭಯಂಕರ ಕದನಗಳು ನಡೆಯುತ್ತಿದ್ದುವು

ಡೆಹ್ರಾ ಡುನ್‌ನಲ್ಲಿ ಬಗೆಬಗೆಯ ಹಕ್ಕಿಗಳಿದ್ದುವು ಹಾಡಿನ ಮತ್ತು ಚಟು ವಟಿಕೆಯ ಚಿಲಿಪಿಲಿಗಳ ಗಲಿಬಿಲಿಯು ಸದಾ ನಡೆಯುತ್ತಲೇ ಇತ್ತು ಈ ಸ್ವರ

ಸಮ್ಮೇಳನದ ತಾರಸ್ಥಾಯಿಯಲ್ಲಿ ಕೋಗಿಲೆಯ ಶೋಕಸಂಗೀತವು ಕೇಳಿಸುತ್ತಿತ್ತು ಮುಂಗಾರಿನಲ್ಲಿ ಅದಕ್ಕಿಂತ ಕೊಂಚ ಮುಂಚೆ 'ಮಿದುಳು ಜ್ವರದ ಹಕ್ಕಿ' ಯು ನಮಗೆ ಭೇಟಿಯನ್ನಿತ್ತಿತು ಅದಕ್ಕೆ ಆ ಹೆಸರೇಕೆ ಬಂದಿತೆಂಬುದನ್ನು ಶೀಘ್ರದಲ್ಲಿಯೇ ಅರಿತೆ ಹಗಲೆನ್ನದೆ ಇರುಳೆನ್ನದೆ, ಉರಿಯುವ ಬಿಸಿಲೆನ್ನದೆ ಸುರಿಯುವ ಮಳೆಯೆನ್ನದೆ, ಅದು ಒಂದೇ ಸ್ವರವನ್ನು ಪುನಃ ಪುನಃ ಉಲಿಉಲಿಯುವ ಆಶ್ಚರ್ಯಕರವಾದ ಛಲ ವನ್ನು ಮೆರೆಯುತ್ತಿತ್ತು ನಮ್ಮ ಕಿರಿಯ ಅಂಗಳದಲ್ಲಿ ಗಿಡಮರಗಳಿಲ್ಲದಿದ್ದುದರಿಂದ ಈ ಹಕ್ಕಿಗಳನೇಕವನ್ನು ನೋಡಲಾಗಲಿಲ್ಲ ಆದರೆ ಯಾವಾಗಲೂ ಅವುಗಳ ಉಲಿ ಯನ್ನು ಮಾತ್ರ ಕೇಳುತ್ತಿದ್ದೆವು ಆಕಾಶದ ಅತ್ಯಂತ ಎತ್ತರದಲ್ಲಿ ಸುಂದರವಾಗಿ ಜಾರುತ್ತ ಕೆಲವು ವೇಳೆ ಹಾವನೆ ಕೆಳಮೊಗವಾಗಿ ಎರಗುತ್ತ, ಆ ಮೇಲೆ ಗಾಳಿಯ ಸೆಳೆ ವೊಂದರಲ್ಲಿ ತಾವಾಗಿಯೇ ತೇಲಿಹೋಗುತ್ತ ಇದ್ದ ಹದ್ದುಗಳನ್ನೂ ಗಿಡಗಗಳನ್ನೂ ನಾನು ನೋಡುತ್ತಿದ್ದೆ ಅನೇಕ ವೇಳೆ ಕಾಡು ಬಾತುಗಳ ಹಿಂಡೊಂದು ನಮ್ಮ ತಲೆಗಳ ಮೇಲೆ ಹಾರಿಹೋಗುತ್ತಿತ್ತು

ಬರೇಲಿ ಸೆರೆಮನೆಯಲ್ಲಿ ಮಂಗಗಳ ದೊಡ್ಡದೊಂದು ವಸಾಹತವಿದ್ದಿತು, ಮತ್ತು ಅವುಗಳ ವಿಕಟ ಚೇಷ್ಟೆಗಳನ್ನು ನೋಡುವುದು ಯಾವಾಗಲೂ ಸತ್ಕಾಲಕ್ಷೇಪ ವಾಗಿತ್ತು ಒಂದು ಪ್ರಸಕ್ತಿಯು ನನ್ನ ಮೇಲೆ ಪ್ರಭಾವಮುದ್ರೆಯೊತ್ತಿತು ಮರಿ ಮಂಗನೊಂದು ನಮ್ಮ ಪಾಳೆಯದ ಆವರಣದೊಳಕ್ಕೆ ಹೇಗೋ ಇಳಿದು ಬಂದುಬಿಟ್ಟಿತು ಪುನಃ ಗೋಡೆಯನ್ನು ಹತ್ತಲಾಗಲಿಲ್ಲ ವಾರ್ಡರ್, ಕೆಲವು ಬಂದಿ–ಮೇಲ್ವಿಚಾರಕರು ಮತ್ತು ಇತರ ಸೆರೆಯಾಳುಗಳು ಅದನ್ನು ಹಿಡಿದು ಅದರ ಕೊರಳಿಗೊಂದು ದಾರವನ್ನು ಕಟ್ಟಿದರು ಆ ಪುಟ್ಟ ಮಂಗನ ತಾಯಿತಂದೆಗಳು (ಅವೇ ಇರಬೇಕು), ಆ ಎತ್ತರದ ಗೋಡೆಯ ಮೇಲಿನಿಂದ ಇದೆಲ್ಲವನ್ನೂ ನೋಡಿದುವು, ಅವುಗಳ ಕೋಪವು ಬೆಳೆಯಿತು ಇದ್ದಕ್ಕಿದ್ದಂತೆಯೇ ಅವುಗಳಲ್ಲೊಂದು ದೊಡ್ಡ ಕಪಿಯು ಕೆಳಕ್ಕೆ ಧುಮ್ಮಿಕ್ಕಿ, ಮರಿ ಮಂಗನನ್ನು ಸುತ್ತುಗಟ್ಟಿದ್ದ ಜನಗಳ ವ್ಯೂಹವನ್ನು ತಾಗಿತು ವಾರ್ಡರ್ ಮತ್ತು ಬಂದಿ- ಮೇಲ್ವಿಚಾರಕರು ಕೋಲು ಲಾಠಿಗಳನ್ನು ಹಿಡಿದು ತಿರುಗಿಸುತ್ತಿದ್ದಾಗ ಮತ್ತು ದೊಡ್ಡ ಗುಂಪೊಂದು ಸೇರಿದ್ದಾಗ ಮಂಗನು ಹಾಗೆ ಮಾಡಿದುದು ಅಸಾಮಾನ್ಯವಾದ ಗುಂಡಿ ಗೆಯ ಕೆಲಸ ನಿರ್ಲಕ್ಷ್ಯ ಸ್ಥೈರ್ಯವು ವಿಜಯಿಯಾಯಿತು, ಮತ್ತು ಆ ಮಾನವರ ಗುಂಪು ಬೆದರಿ ತನ್ನ ಕೋಲುಗಳನ್ನು ಕೆಡವಿಕೊಂಡು ಪಲಾಯನ ಮಾಡಿತು! ಮರಿ ಮಂಗನು ಪಾರಾಯಿತು

ನಾವು ಸ್ವಾಗತಿಸಲಾಗದಿದ್ದ ಪ್ರಾಣಿ–ಭೇಟಿಕಾರರು ನಮಗೆ ಅನೇಕ ವೇಳೆ ಭೇಟಿ ಕೊಡುತ್ತಿದ್ದರು ನಮ್ಮ ಓವರಿಗಳಲ್ಲಿ ಕೊಂಡಿಚೇಳುಗಳು ಅನೇಕವೇಳೆ, ಅದರಲ್ಲಿಯೂ ಬಿರುಸಾಗಿ ಮಳೆ ಬಿದ್ದಮೇಲೆ ವಿಶೇಷವಾಗಿ, ಕಾಣಿಸಿಕೊಳ್ಳುತ್ತಿದ್ದುವು ನಾನು ಅವುಗಳಿಂದ ಒಂದು ಸಲವಾದರೂ ಕಚ್ಚಿಸಿಕೊಳ್ಳಲಿಲ್ಲವೆಂಬುದು ಒಂದು ಆಶ್ಚರ್ಯಕರ

ವಾದ ವಿಷಯ  ಏಕೆಂದರೆ, ಅತ್ಯಂತ ಅನಿರೀಕ್ಷಿತ ಸ್ಥಳಗಳಲ್ಲೆಲ್ಲ—ನನ್ನ ಹಾಸಿಗೆಯ ಮೇಲೆ ಅಥವಾ ಆಗತಾನೆ ಮೇಲಕ್ಕೆತ್ತಿದ ಪುಸ್ತಕವೊಂದರ ಮೇಲೆ ಕುಳಿತಿರುತ್ತಿದ್ದುವು—ಅವುಗಳನ್ನು ಸಂದರ್ಶಿಸುತ್ತಿದ್ದೆ  ಬಹಳ ಕಪ್ಪಾಗಿದ್ದ ಮತ್ತು ವಿಷದಿಂದ ತುಂಬಿದ್ದಂತೆ ತೋರುತ್ತಿದ್ದ ವೊಂಡರಗಪ್ಪೆಯೊಂದನ್ನು ಸೀಸೆಯೊಂದರಲ್ಲಿ ಹಾಕಿದ್ದು, ಅದಕ್ಕೆ ನೊಣಗಳು, ಇತ್ಯಾದಿಗಳನ್ನು ತಿನ್ನಲು ಕೊಡುತ್ತಿದ್ದೆ  ಆಮೇಲೆ ದಾರವೊಂದನ್ನು ಕಟ್ಟಿ ಅದನ್ನು ಗೋಡೆಯಮೇಲೆ ಬಿಟ್ಟಿದ್ದೆ  ಅದು ಹೇಗೋ ತಪ್ಪಿಸಿಕೊಂಡು ಬಿಟ್ಟಿತು  ಬಿಡುವಾಗಿ ಅದನ್ನು ಪುನಃ ಸಂದರ್ಶಿಸುವ ಅಪೇಕ್ಷೆ ನನಗೆ ಇರಲಿಲ್ಲ  ಆದುದರಿಂದ ನಾನು ನನ್ನ ಓವರಿಯನ್ನೆಲ್ಲ ತಲಕಳಗು ಮಾಡಿ ಅದಕ್ಕಾಗಿ ಎಲ್ಲೆಲ್ಲಿಯೂ ಬೇಟೆಯಾಡಿದೆ  ಆದರೆ ಅದು ಮಂಗಮಾಯವಾಗಿ ಬಿಟ್ಟಿತ್ತು

ನನ್ನ ಓವರಿಯಲ್ಲೋ ಅಥವಾ ಅದರ ಬಳಿಯೋ ಮೂರು ನಾಲ್ಕು ಹಾವುಗಳು ಕಾಣಿಸಿಕೊಂಡುವು  ಸಮಾಚಾರವು ಹೊರಬಿದ್ದು ವೃತ್ತಪತ್ರಿಕೆಗಳಲ್ಲಿ ದಪ್ಪಕ್ಷರಗಳ ಮೇಲ್ಪಙ್ಕ್ತಿಗಳು ಬಿದ್ದುವು  ವಸ್ತುತಃ ನಾನು ಈ ವೇಡಿಕೆಯನ್ನು ಸ್ವಾಗತಿಸಿದೆ  ಸೆರೆಯ ಬಾಳು ಸಾಕಷ್ಟು ಮೊದ್ದಾಗಿರುತ್ತದೆ  ಮತ್ತು ಆ ಏಕತಾನವನ್ನು ಮುರಿಯುವ ಪ್ರತಿಯೊಂದೂ ಮೆಚ್ಚಿಕೆಗೆ ಈಡಾಗುತ್ತದೆ  ಎಂದರೆ, ನಾನು ಹಾವುಗಳನ್ನು ಮೆಚ್ಚುವೆನೆಂದಾಗಲಿ, ಸ್ವಾಗತಿಸುವೆನೆಂದಾಗಲಿ ಅಲ್ಲ  ಆದರೆ ಕಲವರಿಗೆ ಅವು ಮಾಡುವಂತೆ ನನ್ನಲ್ಲಿ ಭಯೋತ್ಪಾದನೆ ಮಾಡುವುದಿಲ್ಲ  ಅವುಗಳ ಕಡಿತಕ್ಕೆ ನಾನು ಹೆದುರುವುದೇನೋ ಸರಿ, ಮತ್ತು ಹಾವೊಂದನ್ನು ನೋಡಿದರೆ ನನ್ನನ್ನು ನಾನು ರಕ್ಷಿಸಿಕೊಳ್ಳುತ್ತೇನೆ  ಆದರೆ ಮುಣುಗಿಸಿಬಿಡುವ ಭಯದ ಅಥವಾ ಅಸಹ್ಯದ ಭಾವನೆಗಳು ಮೂಡುವುದಿಲ್ಲ  ಬಿಟ್ಟಿಬೆನಕಗಳು * ನನ್ನನ್ನು ಇನ್ನೂ ಹೆಚ್ಚಾಗಿ ಬೆದರಿಸುತ್ತವೆ, ಅದು ಉಪಜ್ಞೆಯಿಂದ ಉಂಟಾದ ಅಸಹ್ಯವೇ ವಿನಾ ಅಷ್ಟು ಭಯವಲ್ಲ  ಕಲ್ಕತ್ತೆಯ ಆಲಿಪುರ ಸೆರೆಮನೆಯಲ್ಲಿ ಮಧ್ಯ ರಾತ್ರಿಯಲ್ಲೊಮ್ಮೆ ಎಚ್ಚರಗೊಂಡಾಗ ನನ್ನ ಕಾಲಿನ ಮೇಲೆ ಏನೋ ಹರಿದುಹೋಗುತ್ತಿರುವಂತೆ ಭಾಸವಾಯಿತು  ಬಳಿಯಲ್ಲಿದ್ದ ವಿದ್ಯುತ್ ಕೈದೀಪವನ್ನು ಹಚ್ಚಿದೆ  ಹಾಸಿಗೆಯ ಮೇಲೆ ಬಿಟ್ಟಿಬೆನಕವೊಂದಿತ್ತು  ಉಪಜ್ಞೆಯಿಂದ ಮತ್ತು ಆಶ್ಚರ್ಯಗೊಳಿಸುವ ವೇಗದಿಂದ ಹಾಸಿಗೆಯನ್ನು ಬಿಟ್ಟು ದೂರ ಹಾರಿ, ಸ್ವಲ್ಪವಿದ್ದಿದ್ದರೆ ಸೆರೆಯ ಗೋಡೆಗೆ ಢಿಕ್ಕಿ ಹೊಡೆಯುತ್ತಿದ್ದೆ  ಪೆವ್‌ಲೊವ್‌ನ ರಿಫ್ಲೆಕ್ಸ್‌ಗಳು—ನರಪ್ರಚೋದಿತ ಸ್ವಯಂಸ್ಫೂರ್ತಕ್ರಿಯೆಗಳು—ಏನೆಂಬುದನ್ನು ಆಗ ಮನಗಂಡೆ

ಡೆಹ್ರಾಡೂನ್‌ನಲ್ಲಿ ನಾನು ಒಂದು ಹೊಸ ಪ್ರಾಣಿಯನ್ನು, ಅಥವಾ ನನಗೆ ಹೊಸದಾಗಿದ್ದ ಪ್ರಾಣಿಯೊಂದನ್ನು ನೋಡಿದೆ  ಸೆರೆಯ ನೌಕರನೊಂದಿಗೆ ಹೊರಬಾಗಿಲ ಬಳಿ ಮಾತನಾಡುತ್ತ ನಿಂತಿರಲು ಹೊರಗಡೆ ಮನುಷ್ಯನೊಬ್ಬನು ಆಸಾ

---

* ಕಪ್ಪರ ಚುಂಟ ಹುಳು

ಧಾರಣ ಪ್ರಾಣಿಯನ್ನು ಹೊತ್ತುಕೊಂಡು ಹೋಗುತ್ತಿದ್ದನು ಸೆರೆಯ ನೌಕರನು ಅವನನ್ನು ಕರೆಯಿಸಿದನು ನಾನು ಕಂಡುದು ಹಲ್ಲಿಗೂ ಮೊಸಳೆಗೂ ಮಧ್ಯವರ್ತಿಯಾಗಿದ್ದ, ಸುಮಾರು ಎರಡು ಅಡಿಗಳ ಉದ್ದವಿದ್ದು ಉಗುರುಗಳನ್ನೂ ಹೊರಿಕೆ ಹೊರಿಕೆಯಾಗಿದ್ದ ತೊಗಲನ್ನೂ ಹೊಂದಿತ್ತು ಒದ್ದಾಡುತ್ತಿದ್ದ ಈ ವಿಲಕ್ಷಣ ಪ್ರಾಣಿಯನ್ನು ಒಂದು ವಿಚಿತ್ರ ರೀತಿಯಲ್ಲಿ ತಿರುಗಿಸಿ ಒಂದು ವಿಧವಾಗಿ ಗಂಟು ಹಾಕಲಾಗಿತ್ತು ಮಾಲೀಕನು ಈ ಗಂಟಿನೊಳಕ್ಕೆ ಕೋಲೊಂದನ್ನು ತೂರಿಸಿ ಈ ಪ್ರಾಣಿಯನ್ನು ಸಂತೋಷದಿಂದ ಹೊತ್ತುಕೊಂಡು ಹೋಗುತ್ತಿದ್ದನು ಅವನು ಅದಕ್ಕೆ ಕೊಟ್ಟಿದ್ದ ಹೆಸರು "ಬೋ" ಎಂದು ಅದನ್ನು ಏನು ಮಾಡುತ್ತೀ, ಎಂದು ಸೆರೆಯ ನೌಕರನು ಅವನನ್ನು ಕೇಳಿದಾಗ, ಅವನು ಹಿಗ್ಗಿ ಅದರಲ್ಲಿ 'ಬಜ್ಜಿ"– ಒಂದು ವಿಧವಾದ ಪಾಕ–ಯನ್ನು ಮಾಡುವುದಾಗಿ ಹೇಳಿದನು! ಅವನೊಬ್ಬ ಅರಣ್ಯ ನಿವಾಸಿ. ಇದಾದ ಮೇಲೆ ಎಫ್ ಡಬ್ಲ್ಯು ಛಾಂಪಿಯನ್‌ರವರ 'ದಿ ಜಂಗಲ್ ಇನ್ ಸನ್ ಲೈಟ್ ಅಂಡ್ ಷ್ಯಾಡೊ' (ನೆಳಲು ಬೆಳಕುಗಳಲ್ಲಿ ಕಾಡು) ಎಂಬ ಪುಸ್ತಕವನ್ನು ಓದಿದಾಗ ಇದು 'ಪ್ಯಾಂಗೊಲಿನ್' (ಇರುವೆಗಳನ್ನು ತಿನ್ನುವ ಮೃಗ ಜಾತಿ), ಎಂದು ತಿಳಿದುಕೊಂಡೆ

ಸೆರೆಯಾಳುಗಳು, ವಿಶೇಷವಾಗಿ ದೀರ್ಘ ಅವಧಿಯ ಬಂದಿಗಳು, ರಾಗಗಳ ಉಪವಾಸದಿಂದ ನರಳಬೇಕಾಗುವುದು ರಾಗತೃಪ್ತಿಯನ್ನು ಹೊಂದುವುದಕ್ಕಾಗಿ ಅನೇಕ ವೇಳೆ ಮುದ್ದು ಪ್ರಾಣಿಗಳನ್ನು ಸಾಕುತ್ತಾರೆ ಸಾಮಾನ್ಯ ಸೆರೆಯಾಳು ಅವುಗಳನ್ನಿಟ್ಟುಕೊಳ್ಳಲಾಗುವುದಿಲ್ಲ ಬಂದಿ–ಮೇಲ್ವಿಚಾರಕರು ಇನ್ನೂ ಸ್ವಲ್ಪ ಹೆಚ್ಚು ಸ್ವಾತಂತ್ರ್ಯವನ್ನು ಪಡೆದಿರುತ್ತಾರೆ ಮತ್ತು ಸೆರೆಯ ನೌಕರರು ಸಾಮಾನ್ಯವಾಗಿ ಆಕ್ಷೇಪಿಸುವುದಿಲ್ಲ ಅತಿ ಸಾಮಾನ್ಯ ಮುದ್ದು ಪ್ರಾಣಿಗಳೆಂದರ ಅಳಿಲುಗಳು, ಮತ್ತು ವಿಚಿತ್ರವಾಗಿ ಮುಂಗಸಿಗಳು ನಾಯಿಗಳಿಗೆ ಸೆರೆಮನೆಗಳಲ್ಲಿ ಪ್ರವೇಶವಿಲ್ಲ ಆದರೆ ಬೆಕ್ಕುಗಳಿಗೆ ಉತ್ತೇಜನವಿರುವಂತೆ ತೋರುತ್ತದೆ ಬೆಕ್ಕಿನ ಮರಿಯೊಂದು ಒಮ್ಮೆ ನನ್ನೊಡನೆ ಸ್ನೇಹ ಬೆಳೆಸಿತು ಅದು ಒಬ್ಬ ಸೆರೆಯ ನೌಕರನಿಗೆ ಸೇರಿದ್ದು ಆತನು ಹೊರಟುಹೋದಾಗ ಅದನ್ನು ತೆಗೆದುಕೊಂಡು ಹೋಗಿಬಿಟ್ಟನು ಅದರ ಇಲ್ಲವೆಯು ನನ್ನನ್ನು ನೋಯಿಸಿತು ನಾಯಿಗಳಿಗೆ ಪ್ರವೇಶವಿಲ್ಲದಿದ್ದರೂ ಆಕಸ್ಮಾತ್ತಾಗಿ ನಾನು ನಾಯಿಗಳ ಜೊತೆಗೆ ಬಿದ್ದೆ ಸರೆಮನೆಯ ನೌಕರನೊಬ್ಬನು ಹೆಣ್ಣು ನಾಯೊಂದನ್ನು ತಂದಿದ್ದನು ಆತನಿಗೆ ವರ್ಗವಾದಾಗ ಅದನ್ನು ಅಲ್ಲಿಯೇ ತ್ಯಜಿಸಿ ಹೊರಟುಹೋದನು ಆ ಬಡ ಜಂತುವು ನೆಲೆಯಿಲ್ಲದೆ ಅಲೆಯುತ್ತ, ರಸ್ತೆ ಬದಿಯ ಚರಂಡಿಯಲ್ಲಿ ವಾಸಿಸುತ್ತ, ವಾರ್ಡರ್‌ಗಳಿಂದ ಸಣ್ಣ ಪುಟ್ಟ ತಿಂಡಿ ಚೂರುಗಳನ್ನು ಬೇಡುತ್ತ, ಸಾಮಾನ್ಯವಾಗಿ ಹೊಟ್ಟೆಗಿಲ್ಲದೆ ಪಾಡುಪಡುತ್ತಿತ್ತು ಮುಖ್ಯ ಸೆರೆಮನೆಯ ಹೊರಗಡೆಯಿದ್ದ ಬಂದಿಖಾನೆಯಲ್ಲಿ ನಾನು ಇಡಲ್ಪಟ್ಟಿದ್ದುದರಿಂದ ಅದು

ಆಹಾರಕ್ಕಾಗಿ ನನ್ನ ಬಳಿಗೆ ಬಂದು ಗೋಗರೆಯುತ್ತಿತ್ತು ನಾನು ಅದಕ್ಕೆ ಕ್ರಮವಾಗಿ ಆಹಾರ ಹಾಕಲಾರಂಭಿಸಿದೆ ಬಳಿಯಿದ್ದ ಮೋರಿಯೊಂದರಲ್ಲಿ ಮರಿಗಳನ್ನು ಹಾಕಿತು ಇವುಗಳಲ್ಲಿ ಅನೇಕವನ್ನು ಯಾರುಯಾರೋ ತೆಗೆದುಕೊಂಡು ಹೋಗಿ ಬಿಟ್ಟರು ಆದರೆ ಮೂರು ಮರಿಗಳು ಮಾತ್ರ ಉಳಿದುಕೊಂಡವು, ಮತ್ತು ನಾನು ಅವುಗಳಿಗೆ ತಿಂಡಿ ಕೊಡುತ್ತಿದ್ದೆ ಒಂದು ಕುನ್ನಿಯು ಬಲವಾದ ಜಾಡ್ಯಕ್ಕೀಡಾಗಿ ನನಗೆ ಬಹಳ ತೊಂದರೆಯನ್ನು ಕೊಟ್ಟಿತು ಅದಕ್ಕೆ ನಾನು ಬಹಳ ಎಚ್ಚರಿಕೆಯಿಂದ ಶುಶ್ರೂಷೆ ನಡೆಸುತ್ತ, ಕೆಲವುವೇಳೆ ಅದನ್ನು ನೋಡಿಕೊಳ್ಳುವುದಕ್ಕೆ ರಾತ್ರಿಯಲ್ಲಿ ಹತ್ತಾರು ಸಲ ಏಳುತ್ತಿದ್ದ ಅದು ಬದುಕಿಕೊಂಡಿತು ನನ್ನ ಶುಶ್ರೂಷೆಯು ಅದನ್ನು ಉಳಿಸಿತೆಂದು ನಾನು ಹಿಗ್ಗಿದೆ

ಹೊರಗಡೆಗಿಂತ ಬಹಳ ಹೆಚ್ಚಾಗಿ ಸೆರೆಮನೆಯ ಒಳಗಡೆ ನಾನು ಜೀವರಾಶಿಗಳೊಂದಿಗೆ ಸಂಪರ್ಕವನ್ನು ಪಡೆದೆ ನಾನು ನಾಯಿಗಳನ್ನು ಯಾವಾಗಲೂ ಪ್ರೀತಿಸುತ್ತಿದ್ದೆ, ಮತ್ತು ಕೆಲವನ್ನು ನಾನು ಸಾಕುತ್ತಿದ್ದೆ ಆದರೆ ಇತರ ವಿಚಾರಗಳು ನನ್ನ ಅವಧಾನವನ್ನು ಸೆಳೆದಿದುದರಿಂದ ನಾನು ಅವನ್ನು ಸರಿಯಾಗಿ ನೋಡಿಕೊಳ್ಳಲು ಸಾಧ್ಯವೇ ಆಗಲಿಲ್ಲ ಸೆರೆಮನೆಯಲ್ಲಿ ಅವುಗಳ ಸಹವಾಸಕ್ಕಾಗಿ ಬಹಳ ಕೃತಜ್ಞನಾಗಿದ್ದ ಸಾಮಾನ್ಯವಾಗಿ ಭಾರತೀಯರು ಪ್ರಾಣಿಗಳನ್ನು ಮನೆಯ ಮುದ್ದಿನವುಗಳನ್ನಾಗಿ ಎಣಿಸಲು ಒಪ್ಪುವುದಿಲ್ಲ ಅವರಿಗೆ ಪ್ರಾಣಿಗಳನ್ನು ಕುರಿತ ಸಾಧಾರಣ ಅಹಿಂಸಾ ವೇದಾಂತ ದೃಷ್ಟಿಯಿದ್ದರೂ ಸಹ ಅವರು ಅನೇಕವೇಳೆ ಉಪೇಕ್ಷೆಯಿಂದಲೂ ನಿಷ್ಕರುಣೆಯಿಂದಲೂ ಇರುವರೆಂಬುದು ಆಶ್ಚರ್ಯಕರವಾದುದು. ಅನುಗ್ರಹಿತವಾದ, ಅನೇಕ ಹಿಂದೂಗಳಿಗೆ ಪೂಜ್ಯವಾದ, ಮತ್ತು ಅನೇಕವೇಳೆ ದೊಂಬಿಗಳಿಗೆ ಕಾರಣವಾದ, ಆ ಆಕಳಿಗೆ ಸಹ, ಕರುಣೆಯಿಂದ ಕೂಡಿದ ಉಪಚಾರವಿಲ್ಲ ಪೂಜೆಯೂ ಕರುಣೆಯೂ ಯಾವಾಗಲೂ ಒಟ್ಟಿಗಿರುವುದಿಲ್ಲ

ವಿವಿಧ ದೇಶಗಳು ವಿವಿಧ ಪ್ರಾಣಿಗಳನ್ನು ತಮ್ಮ ಮಹಾಕಾಂಕ್ಷೆಯ ಅಥವಾ ಲಕ್ಷಣದ ಸಂಕೇತಗಳನ್ನಾಗಿ ಇಟ್ಟುಕೊಂಡಿದ್ದಾರೆ—ಅಮೆರಿಕಾ ಸಂಯುಕ್ತ ಸ್ಥಾನಗಳ ಮತ್ತು ಜರ್ಮನಿಯ ಗಿಡುಗ, ಇಂಗ್ಲೆಂಡಿನ ಸಿಂಹ ಮತ್ತು ಬುಲ್ ಡಾಗ್, ಫ್ರಾನ್ಸಿನ ಕಾಳಗದ ಹುಂಜ ಮತ್ತು ಪ್ರಾಚೀನ ರಷ್ಯದ ಕರಡಿ ಈ ಅಧಿದೇವತಾ ಪ್ರಾಯವಾದ ಪ್ರಾಣಿಯು ರಾಷ್ಟ್ರೀಯ ಲಕ್ಷಣವನ್ನು ಎಷ್ಟರ ಮಟ್ಟಿಗೆ ಎರಕಹೊಯ್ಯುತ್ತದೆ? ಅವುಗಳಲ್ಲಿ ಹೆಚ್ಚು ಭಾಗವೆಲ್ಲ ಮೇಲೆ ಬೀಳುವ, ಕಾಳಗಕೊಡುವ, ಹಿಂಸ್ರ ಜಂತುಗಳು ಎದುರಿಗೆ ಈ ವಿಧವಾದ ಉದಾಹರಣೆಗಳನ್ನಿಟ್ಟುಕೊಂಡು ಬೆಳೆಯುವ ಜನಗಳು, ತಿಳಿದೇ ತಮ್ಮನ್ನು ತಾವು ಇವುಗಳಂತೆ ಎರಕಹೊಯ್ದುಕೊಂಡು, ಮೇಲೆ ಬೀಳುವ ಭಂಗಿಗಳನ್ನು ಬೀರಿ, ಅಬ್ಬರಿಸುತ್ತ ಇತರರನ್ನು ಆಹುತಿಗೊಳ್ಳುವರು, ಎಂಬುದರಲ್ಲಿ ಆಶ್ಚರ್ಯವಿಲ್ಲ. ಅಂತೆಯೇ ಹಿಂದುವು ಸಾಧುವಾಗಿಯೂ ಅಹಿಂಸಾಯುಕ್ತನಾಗಿಯೂ ಇರುವನೆಂದರೆ ಆಶ್ಚರ್ಯವಿಲ್ಲ ಏಕೆಂದರೆ ಆತನ ಅಧಿದೇವತಾಪ್ರಾಯವಾದ ಪ್ರಾಣಿಯು ಗೋವು

೪೬

# ಹೋರಾಟ

ಹೊರಗೆ ಹೋರಾಟವು ನಡೆಯುತ್ತಲೇ ಇತ್ತು, ಮತ್ತು ಸದ್ಯದಲ್ಲಾಗಲಿ, ಅನತಿದೂರ ಭವಿಷ್ಯತ್ತಿನಲ್ಲಾಗಲಿ ಸಿದ್ಧಿಯು ತಮಗಲ್ಲವೆಂದು ತಿಳಿದಿದ್ದರೂ ವೀರ ಸ್ತ್ರೀಪುರುಷರು ಮಹಾ ಶಕ್ತಿಯುತವೂ ಸೇನಾವ್ಯೂಹಾವೃತವೂ ಆದ ಸರಕಾರವನ್ನು ತುಂಬುಶಾಂತಿಯಿಂದ ಪ್ರತಿಭಟಿಸುತ್ತಲೇ ಹೋದರು  ನಿತ್ಯವೂ ವರ್ಧಿಸುತ್ತಿದ್ದ ತೀವ್ರತೆಯೊಂದಿಗೆ ತಡೆಯಿಲ್ಲದ ನಿಗ್ರಹವು ಭಾರತದಲ್ಲಿನ ಬ್ರಿಟಿಷ್ ಪ್ರಭುತ್ವದ ತಳಹದಿಯನ್ನು ಪ್ರದರ್ಶಿಸಿತು  ಅದನ್ನು ಕುರಿತು ಈಗ ಯಾವ ಸುಳಿವು ಗೊತ್ತಾಗದ ಉಪಾಯವೂ ಇರಲಿಲ್ಲ ಮತ್ತು ಇದು ನಮಗೆ ಸ್ವಲ್ಪಮಟ್ಟಿಗೆ ತೃಪ್ತಿಕರವಾಗಿತ್ತು  ಸಂಗೀನುಗಳು ವಿಜಯಿಗಳಾದುವು  ಆದರೆ "ಸಂಗೀನುಗಳಿಂದಲೇ, ಎಲ್ಲವೂ ಸಾಧ್ಯವಾಗುವುದು, ಆದರೆ ಅದರ ಮೇಲೆ ಮಾತ್ರ ಕುಳಿತುಕೊಳ್ಳಲಾಗದು," ಎಂದು ಮಹಾ ಯೋಧರೊಬ್ಬರು ಒಮ್ಮೆ ಹೇಳಿಯೇ ಇದ್ದರು  ನಮ್ಮ ಆತ್ಮಗಳನ್ನು ಮಾರಿ, ಆಧ್ಯಾತ್ಮಿಕ ವ್ಯಭಿಚಾರಕ್ಕೆ ಮಣಿಯುವುದಕ್ಕಿಂತ ಹೀಗೆ ನಾವು ಅಳಿಸಿಕೊಳ್ಳಲ್ಪಡುವುದೇ ಲೇಸೆಂದುಕೊಂಡೆವು  ಸೆರೆಮನೆಯಲ್ಲಿ ನಾವು ದೈಹಿಕವಾಗಿ ನಿಸ್ಸಹಾಯರಾಗಿದ್ದೆವು, ಆದರೆ ಅಲ್ಲಿಯೂ ನಾವು ನಮ್ಮ ಉದ್ದೇಶವನ್ನು ಸಾಧಿಸಿಕೊಂಡೆವೆಂದೂ ಅದಕ್ಕಾಗಿ ಹೊರಗಿದ್ದಾಗಿಗಿಂತ ಹೆಚ್ಚು ಶ್ರೇಷ್ಠ ಸೇವೆಯನ್ನು ಮಾಡಿದೆವೆಂದೂ ಭಾವಿಸಿದೆವು  ನಮ್ಮ ದೌರ್ಬಲ್ಯದ ಕಾರಣದಿಂದ, ನಮ್ಮನ್ನು ನಾವು ಕಾಪಾಡಿಕೊಳ್ಳುವ ಸಲುವಾಗಿ ಭಾರತದ ಭವಿಷ್ಯತ್ತನ್ನು ಬಲಿಕೊಡಬೇಕೆ? ಮಾನವನ ಸತ್ವಕ್ಕೂ ಶಕ್ತಿಗೂ ಮಿತಿಯುಂಟೆಂಬುದು ನಿಜ, ಮತ್ತು ವ್ಯಕ್ತಿಗಳನೇಕರು ದೈಹಿಕವಾಗಿ ಊನಗೊಂಡರು, ಇಲ್ಲವೇ ಸತ್ತರು, ಇಲ್ಲವೇ ತುಕಡಿಯಿಂದ ಹೊರಗಾದರು, ಅಥವಾ ಧ್ಯೇಯವನ್ನು ಬಿಟ್ಟುಕೊಟ್ಟರು  ಆದರೆ ಅಡಿತಡೆಗಳಿದ್ದರೂ ಧ್ಯೇಯಸಾಧನೆಯು ಮುಂಬರಿಯಿತು, ಆದರ್ಶಗಳು ಮಬ್ಬಾಗದಿದ್ದರೆ, ಸ್ಥೈರ್ಯೋತ್ಸಾಹಗಳು ಎದೆಗೆಡದಿದ್ದರೆ, ಅಪಜಯವೇ ಇರದು  ಧ್ಯೇಯದ ಪರಾಙ್ಮುಖತೆ, ಸ್ವಂತ ಬಾಧ್ಯತೆಯ ನಿರಾಕರಣೆ, ಅಧರ್ಮಕ್ಕೆ ಅವಮಾನಕರವಾಗಿ ವಶವಾಗುವಿಕೆ,— ಇದೇ ನಿಜವಾದ ಅಪಜಯ  ತಾನು ಮಾಡಿಕೊಂಡ ಗಾಯವು ವಾಸಿಯಾಗಬೇಕಾದರೆ ಎದುರಾಳು ಮಾಡಿದ ಗಾಯಕ್ಕಿಂತ ಹೆಚ್ಚು ಕಾಲ ಹಿಡಿಯುವುದು

ನಮ್ಮ ದೌರ್ಬಲ್ಯವನ್ನು ಮತ್ತು ಪ್ರಪಂಚವು ತಪ್ಪಿ ಹೋಗಿರುವುದನ್ನು ಕುರಿತು ಅನೇಕ ವೇಳೆ ನಾವು ಬೇಸರಪಡುತ್ತಿದ್ದೆವು  ಆದರೂ ನಮ್ಮ ಸಾಧನೆಯ ವಿಷಯ



ಕರಾಚಿ ಕಾಂಗ್ರೆಸ್

ಪಂಡಿತ ಜವಹರಲಾಲರು ಧ್ವಜಾರೋಹಣವನ್ನು ನೋಡುತ್ತಿರುವರು

ದಲ್ಲಿ ಒಂದು ಪರಿಮಾಣದ ಹೆಮ್ಮೆಯೂ ಇದ್ದಿತು. ಏಕೆಂದರೆ, ನಮ್ಮ ಜನರು ಶ್ರೇಷ್ಠ ರೀತಿಯಲ್ಲಿ ನಡೆದುಕೊಂಡಿದ್ದರು, ಮತ್ತು ಗಂಡಾಡಿಗಳ ಪಡೆಯಲ್ಲೊಬ್ಬನು ಎಂದು ತನ್ನನ್ನೊಬ್ಬನು ಭಾವಿಸಿಕೊಳ್ಳುವುದು ಹಿತವಾಗಿತ್ತು.

ಶಾಸನ ಭಂಗವು ನಡೆಯುತ್ತಿದ್ದ ಆ ವರ್ಷಗಳಲ್ಲಿ ದೆಹಲಿ ಮತ್ತು ಕಲ್ಕತ್ತೆಗಳಲ್ಲಿ ಬಹಿರಂಗ ಕಾಂಗ್ರೆಸ್ ಅಧಿವೇಶನಗಳನ್ನು ಸಮಾವೇಶಗೊಳಿಸಬೇಕೆಂದು ಎರಡು ಪ್ರಯತ್ನಗಳು ನಡೆದುವು. ಅಕ್ರಮಕೂಟವೊಂದು ಯಥಾವಸ್ಥಿತ ಕ್ರಮದಲ್ಲೂ ಶಾಂತವಾಗಿಯೂ ಸಮಾವೇಶವಾಗುವುದು ಅಸಾಧ್ಯವೆಂಬುದು ಸ್ವತಸ್ಸಿದ್ಧವಾಗಿತ್ತು, ಮತ್ತು ಬಹಿರಂಗಾಧಿವೇಶನದ ಯಾವ ಪ್ರಯತ್ನವೆಂದರೂ ಪೋಲೀಸರೊಂದಿಗೆ ಸಂಘರ್ಷಣೆ. ವಾಸ್ತವವಾಗಿ ಸಭೆಗಳು ಪೋಲೀಸರಿಂದ ಲಾಠಿಗಳ ಸಹಾಯದೊಡನೆ ಚೆದುರಿಸಲ್ಪಟ್ಟುವು ಮತ್ತು ಅನೇಕ ಜನಗಳು ದಸ್ತಗಿರಿ ಮಾಡಲ್ಪಟ್ಟರು. ಈ ಅಕ್ರಮ ಸಭೆಗಳಿಗೆ ಭಾರತದ ಅನೇಕ ಭಾಗಗಳಿಂದ ಸಾವಿರಾರು ಮಂದಿ ಪ್ರತಿನಿಧಿಗಳಾಗಿ ಬಂದರೆಂಬ ಅಂಶವು ಅತ್ಯಾಶ್ಚರ್ಯಕರವಾದುದು. ಸಂಯುಕ್ತ ಪ್ರಾಂತಗಳ ಜನರು ಈ ಎರಡು ಸಭೆಗಳಲ್ಲೂ ಪ್ರಮುಖ ಪಾತ್ರವನ್ನು ವಹಿಸಿದುದನ್ನು ಕೇಳಿ ನಾನು ಸಂತೋಷಪಟ್ಟೆ. ೧೯೩೩ ರ ಮಾರ್ಚಿಯ ಕೊನೆಯಲ್ಲಿ ಕಲ್ಕತ್ತ ಅಧಿವೇಶನಕ್ಕೆ ಹೋಗಿಯೇ ತೀರಬೇಕೆಂದು ನನ್ನ ತಾಯಿ ಪಟ್ಟುಹಿಡಿದಳು. ಆದರೆ ಪಂಡಿತ ಮಾಳವೀಯ ಮತ್ತು ಇತರರೊಡನೆ ಆಕೆಯು ದಸ್ತಗಿರಿ ಮಾಡಲ್ಪಟ್ಟು, ಕಲ್ಕತ್ತೆಗೆ ಹೋಗುವ ದಾರಿಯಲ್ಲಿದ್ದ ಅಸನ್ಸಾಲ್‌ನಲ್ಲಿ ಕೆಲವು ದಿನಗಳವರೆಗೆ ಸೆರೆಮನೆಯಲ್ಲಿ ತಡೆದಿಡಲ್ಪಟ್ಟಿದ್ದಳು. ದುರ್ಬಲಳಾಗಿ ಬಾಧೆಪಡುತ್ತಿದ್ದಾಗಲೂ ಆಕೆ ತೋರಿಸಿದ ಚೈತನ್ಯವನ್ನೂ ಸತ್ವವನ್ನೂ ಕಂಡು ಆಶ್ಚರ್ಯಪಟ್ಟೆ. ವಾಸ್ತವವಾಗಿ ಸೆರೆಮನೆಯು ಆಕೆಯ ಗಣನೆಗೆ ಬಾರಲೇ ಇಲ್ಲ, ಆಕೆಯು ಕಠಿಣತರ ಪರೀಕ್ಷೆಯನ್ನು ಅನುಭವಿಸಿದ್ದಳು, ಆಕೆಯ ಮಗ, ಹೆಣ್ಣುಮಕ್ಕಳಿಬ್ಬರು ಮತ್ತು ತಾನು ಪ್ರೀತಿಸುತ್ತಿದ್ದ ಇತರರು ನಿಡುಗಾಲ ಸೆರೆಯಲ್ಲಿ ಕಾಲಕಳೆಯುತ್ತಿದ್ದರು. ತಾನು ವಾಸವಿದ್ದ ಶೂನ್ಯಗೃಹವು ಆಕೆಗೆ ರೌದ್ರ ಸ್ವಪ್ನವಾಗಿಬಿಟ್ಟಿತ್ತು.

ನಮ್ಮ ಹೋರಾಟದ ಹುರುಪು ಕಡಿಮೆಯಾಗುತ್ತ ಬಂದು ಕೆಳಮಟ್ಟದಲ್ಲಿ ಸ್ಥಿರವಾಗಿ ನಿಂತಾಗ, ದೀರ್ಘಾವಧಿಗಳು ಕಳೆದಾಗ ಹೊರತು, ಅದರಲ್ಲಿ ಉದ್ದೀಪನವೇನೂ ಇರಲಿಲ್ಲ. ನನ್ನ ಆಲೋಚನೆಗಳು ಹೆಚ್ಚಾಗಿ ಇತರ ದೇಶಗಳ ಕಡೆಗೆ ಹೊರಳಿಹೋಯಿತು. ಸೆರೆಮನೆಯಲ್ಲಿ ಸಾಧ್ಯವಾದ ಮಟ್ಟಿಗೆ, ದೊಡ್ಡ ಧಾರಣೆವಾಸಿಗಳ ಇಳಿತದ ಹಿಡಿಯಲ್ಲಿ ಸಿಕ್ಕಿಬಿದ್ದಿದ್ದ ಜಗತ್ತಿನ ಪರಿಸ್ಥಿತಿಯನ್ನು ಕಾದು ನೋಡುತ್ತ ಅಧ್ಯಯನ ಮಾಡಿದೆ. ಈ ವಿಷಯವನ್ನು ಕುರಿತು ಎಷ್ಟು ಪುಸ್ತಕಗಳು ಸಿಕ್ಕಿದವೋ ಅಷ್ಟನ್ನೂ ಓದಿದೆ. ಓದಿಓದಿದಂತೆಲ್ಲ ನಾನು ಅದಕ್ಕೆ ಮಾರುಹೋದೆ. ಈ ಮಹತ್ತರವಾದ ಜಗನ್ನಾಟಕದಲ್ಲಿ, ರಾಷ್ಟ್ರೀಯವಾಗಿಯೂ ಅಂತರರಾಷ್ಟ್ರೀಯವಾಗಿಯೂ

ನಡೆಯುತ್ತಿದ್ದ ರಾಜಕೀಯ ಮತ್ತು ಆರ್ಥಿಕ ಶಕ್ತಿಗಳ ಹೋರಾಟದಲ್ಲಿ, ಹೋರಾಟಗಳು, ಸಮಸ್ಯೆಗಳು ಇವುಗಳನ್ನೊಳಗೊಂಡ ಭಾರತವು ಒಂದು ಭಾಗವಾಗಿಬಿಟ್ಟಿತು. ಆ ಹೋರಾಟದಲ್ಲಿ ನನ್ನ ಸಹಾನುಭೂತಿಯು ಹೆಚ್ಚು ಹೆಚ್ಚಾಗಿ ಕಮ್ಯೂನಿಸ್ಟ್ ಪಕ್ಷಕ್ಕೆ ಜಾರಿತು

ಸಮತಾವಾದ ಮತ್ತು ಕಮ್ಯೂನಿಸಮ್‌ಗಳ ಕಡೆಗೆ ನಾನು ಬಹಳ ಕಾಲದಿಂದ ಸೆಳೆಯಲ್ಪಟ್ಟಿದ್ದೆ, ಮತ್ತು ರಷ್ಯವು ನನ್ನ ಬಗೆಗೆ ರಂಜಿಸಿತ್ತು ಸೋವಿಯಟ್ ರಷ್ಯದಲ್ಲಿನ ಹೆಚ್ಚು ಭಾಗವು ನನಗೆ ಅನಿಷ್ಟವಾಗಿದೆ,– ವಿರುದ್ಧ ಅಭಿಪ್ರಾಯಗಳ ನಿಷ್ಕರುಣ ಮರ್ದನ, ಸರ್ವಸಾಮಾನ್ಯವಾದ ಬಲವಂತದ ಸೈನಿಕಕರಣ, ವಿವಿಧ ನೀತಿಗಳನ್ನು ಕಾರ್ಯರಂಗದಲ್ಲಿ ಸಂಪ್ರಯೋಗಿಸಲು ಉಪಯೋಗಿಸುವ ಅನವಶ್ಯಕ (ನನಗೆ ತೋರಿದಂತೆ) ಹಿಂಸೆ ಆದರೆ ಬಂಡವಾಳಗಾರರ ಪ್ರಪಂಚದಲ್ಲಿ ಹಿಂಸೆಗೂ ದಬ್ಬಾಳಿಕೆಗೂ ಕಡಿಮೆಯೇನೂ ಇರಲಿಲ್ಲ, ಮತ್ತು ನಮ್ಮ ಸಂಗ್ರಹಣ ಸ್ವಭಾವವುಳ್ಳ ಸಮಾಜದ ಮತ್ತು ಆಸ್ತಿಪಾಸ್ತಿಗಳ ಬುನಾದಿಗಳು ಹೇಗೆ ಹಿಂಸೆಯೆಂಬುದನ್ನು ಮನಗಂಡುಗೊಂಡೆ ಹಿಂಸೆಯ ನೆರವಿಲ್ಲದಿದ್ದರೆ ಅದು ಬಹಳ ದಿನಗಳು ನಡೆಯಲಾರದು. ಅನ್ನಾಭಾವದ ಭಯವು ಎಲ್ಲೆಲ್ಲಿಯೂ ಬಹುಸಂಖ್ಯಾತರನ್ನು, ಅಲ್ಪಸಂಖ್ಯಾತರ ಮೇಲ್ಮೆ ಮತ್ತು ಅನುಕೂಲಕ್ಕಾಗಿ, ಅವರ ಇಷ್ಟಕ್ಕೆ ಬಗ್ಗಿಸುತ್ತಿರುವ ಗ ಯಾವುದೋ ಒಂದು ಪರಿಮಾಣದ ರಾಜಕೀಯ ಸ್ವಾತಂತ್ರ್ಯದಿಂದಾಗುವುದು ಅಷ್ಟರಲ್ಲಿಯೇ ಇದೆ

ಇರ್ಕಡೆಗಳಲ್ಲಿಯೂ ಹಿಂಸೆಯು ಸಾಮಾನ್ಯವಾಗಿಯೇ ಇತ್ತು, ಆದರೆ ಬಂಡವಾಳಗಾರರ ವ್ಯವಸ್ಥೆಯಲ್ಲಿ ಹಿಂಸೆಯು ಅನುಷಂಗಿಕವಾಗಿ ನೆಲೆಸಿದ್ದಂತೆ ತೋರಿತು, ರಷ್ಯದ ಹಿಂಸೆಯಾದರೋ, ಕೆಟ್ಟದ್ದಾದರೂ ಸಹ, ಜನಜಂಗುಳಿಯ ಶಾಂತಿ, ಸಹಕಾರ ಮತ್ತು ನಿಜವಾದ ಸ್ವಾತಂತ್ರ್ಯಗಳ ಆಧಾರದ ಮೇಲಿರುವ ಹೊಸದೊಂದು ವ್ಯವಸ್ಥೆಯನ್ನು ಗುರಿಯಾಗಿಟ್ಟುಕೊಂಡಿತ್ತು ಎಷ್ಟೇ ತಪ್ಪುಮಾಡಿದ್ದರೂ, ಸೋವಿಯಟ್ ರಷ್ಯವು ಅದ್ಭುತ ಕಂಟಕಗಳನ್ನು ಮೀರಿ ಹೊಸ ವ್ಯವಸ್ಥೆಯ ಕಡೆಗೆ ದೊಡ ದಾಪು ಹೆಜ್ಜೆಗಳಿಂದ ಮುನ್ನಡೆದಿತ್ತು ಪ್ರಪಂಚದ ಮಿಕ್ಕಭಾಗವು ದೊಡ್ಡದೊಂದು ಧಾರಣೆವಾಸಿಯ ಇಳಿತದ ಹಿಡಿತದಲ್ಲಿ ಸಿಕ್ಕಿಹಾಕಿಕೊಂಡು, ಕೆಲವು ರೀತಿಗಳಲ್ಲಿ ಹಿಂದು ಹಿಂದಕ್ಕೆ ಹೋಗುತ್ತಿದ್ದಾಗ, ಸೋವಿಯಟ್ ರಾಜ್ಯದಲ್ಲಿ ನಮ್ಮ ಕಣ್ಣೆದುರಿಗೇ ಹೊಸದೊಂದು ಪ್ರಪಂಚದ ಸೃಷ್ಟಿ ಸ್ಥಿತಿಯಾಗಲಾರಂಭಿಸಿತು. ಇತರ ರಾಜ್ಯಗಳು, ಭೂತದ ಸತ್ತ ಕೈಯಕೆಳಗೆ ಸಿಲುಕಿ, ಕಳೆದುಹೋದ ಯುಗದ ಅಪ್ರಯೋಜಕ ಅವಶೇಷಗಳನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ತಮ್ಮ ಶಕ್ತಿಯನ್ನೆಲ್ಲಾ ಕಳೆದುಕೊಂಡುಬಿಟ್ಟು ಜೋಮು ಹಿಡಿದು ಬಿದ್ದಿದ್ದಾಗ, ರಷ್ಯವು ಮಹಾತ್ಮ ಲೆನಿನ್‌ನನ್ನು ಅನುಸರಿಸುತ್ತ ಭವಿಷ್ಯತ್ತಿನ ಕಡೆಗೆ ನೋಡುತ್ತ, ಬರಲಿರುವುದನ್ನು ಕುರಿತು ಮಾತ್ರ ಯೋಚಿಸಿತು ಮಧ್ಯ ಏಷ್ಯದ ಹಿಂದೆ ಬಿದ್ದಿದ್ದ ಪ್ರದೇಶಗಳು, ಸೋವಿಯಟ್ ಆಡಳಿತದಲ್ಲಿ ಪಡೆದುಕೊಂಡ ಅದ್ಭುತ ಪ್ರಗತಿಯ ವರದಿ

ಗಳು ನನ್ನ ಮೇಲೆ ವಿಶೇಷವಾಗಿ ಪ್ರಭಾವ ಮುಪ್ರಯುಸ್ತೋತ್ರಿದುವು ಆರಂದರಿಂದ ತೂಕವಮಾಡಿದಮೇಲೆ, ನಾನು ರಷ್ಯದ ಪಕ್ಷವನ್ನೇ ಹಿಡಿದೆ, ಕತ್ತಲೆ ದುಃಖಗಳಿಂದ ಕೂಡಿದ ಪ್ರಪಂಚದಲ್ಲಿ ಸೋವಿಯಟ್‌ಗಳ ಉದಾಹರಣೆಯು ಬೆಳಕನ್ನೀಯುವ ಎದೆ ಗೊಳಿಸುವ ದೃಶ್ಯಮಾನವಾಗಿತ್ತು

ಕಮ್ಯೂನಿಸ್ಟ್ ರಾಜ್ಯವನ್ನು ಸ್ಥಾಪಿಸುವ ಪ್ರಯೋಗ ಪರೀಕ್ಷೆಯಾಗಿದ್ದುದರಿಂದ ಸೋವಿಯಟ್ ರಷ್ಯದ ಗೆಲುವಾಗಲಿ ಸೋಲಾಗಲಿ ಅತಿ ಮುಖ್ಯವಾದುದಾಗಿದ್ದರೂ ಕಮ್ಯೂನಿಸಮ್ಮಿನ ತತ್ವದ ನ್ಯಾಯಪರತೆಯನ್ನು ಅವು ಬಾಧಿಸಲಿಲ್ಲ ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಕಾರಣಗಳಿಂದ ಬೋಲ್ಷೆವಿಕರು ತಪ್ಪೇ ಮಾಡಬಹುದು ಇಲ್ಲವೇ ಸೋಲಲೂ ಬಹುದು ಆದರೂ ಕಮ್ಯೂನಿಸ್ಟ್ ತತ್ವವು ಸರಿಯಾಗಿರುವುದು ಕೇವಲ ಆ ತತ್ವದ ಆಧಾರದ ಮೇಲೆ ರಷ್ಯದಲ್ಲಿ ನಡೆಸುದನ್ನು ಕಣ್ಣು ಮುಚ್ಚಿಕೊಂಡು ಅನುಸರಿಸುವುದು ಅವಿವೇಕ ಏಕೆಂದರೆ, ಅವರ ಸಂಪ್ರಯೋಗವು ಪ್ರಯೋಗಿಸ ಬೇಕಾದ ದೇಶದಲ್ಲಿರುವ ವಿಶೇಷ ಪರಿಸ್ಥಿತಿಗಳನ್ನೂ ಅದರ ಚಾರಿತ್ರಿಕ ಬೆಳವಣಿಗೆಯ ಮಜಲನ್ನೂ ಅವಲಂಬಿಸುತ್ತದೆ ಅಲ್ಲದೆ ಭಾರತವಾಗಲಿ, ಬೇರೆ ಇತರ ಯಾವ ದೇಶವಾಗಲಿ ಬೋಲ್ಷೆವಿಕರ ವಿಜಯಗಳಿಂದಲೂ ಅಂತೆಯೇ ಅನಿವಾರ್ಯವಾದ ತಪ್ಪು ಗಳಿಂದಲೂ ಲಾಭ ಪಡೆಯಬಹುದು ಪ್ರಬಲ ಶತ್ರುಗಳ ಪ್ರಸಂಗದಿಂದ ಸುತ್ತುಗಟ್ಟಲ್ಪಟ್ಟು, ಹೊರಗಣ ಮುತ್ತಿಗೆಗೆ ಹೆದರಿ, ಬೋಲ್ಷೆವಿಕರು ಬಹಳ ವೇಗವಾಗಿ ನಡೆಯಲು ಪ್ರಯತ್ನಿಸಿದರು. ಗ್ರಾಮಾಂತರಗಳಲ್ಲುಂಟಾದ ಕ್ಲೇಶದ ಹೆಚ್ಚು ಭಾಗವನ್ನು ಸ್ವಲ್ಪ ಕಡಿಮೆ ವೇಗದ ಕಾರ್ಯವು ದೂರಮಾಡಬಹುದಾಗಿತ್ತು. ಹಾಗಿದ್ದರೂ ವ್ಯತ್ಯಾಸದ ವೇಗವನ್ನು ಕಡಿಮೆಮಾಡುವುದರಿಂದ ನಿಜವಾದ ಆಮೂಲಾಗ್ರ ಪರಿಣಾಮಗಳನ್ನು ಪಡೆಯಲು ಸಾಧ್ಯವೇ ಎಂಬ ಪ್ರಶ್ನೆಯು ಹುಟ್ಟಿತು ಮೂಲವ್ಯವಸ್ಥೆಯನ್ನು ವ್ಯತ್ಯಸ್ತಗೊಳಿಸಬೇಕಾಗಿರುವ ವಿಷಮ ಪ್ರಸಂಗದಲ್ಲಿ ಸುಧಾರಣಾವಾದವು ಯಾವುದೊಂದು ಸತ್ವಯುತವಾದ ಸಮಸ್ಯೆಗೂ ಅಸಾಧ್ಯವಾದ ಪರಿಹಾರವಾಗಿತ್ತು, ಮುಂದೆ ಮುಂದೆ ಪ್ರಗತಿಯು ಎಷ್ಟೇ ನಿಧಾನವದರೂ, ತನ್ನ ಕೆಲಸವನ್ನು ತಾನು ಮುಗಿಸಿಕೊಂಡ ಬಿಟ್ಟು ಮುಂದಿನ ಬೆಳವಣಿಗೆಗೆ ಕೇವಲ ತೊಡರು ಕೊರಡು ಮಾತ್ರವಾಗಿರುವ ಪ್ರಚಲಿತ ವ್ಯವಸ್ಥೆಯಿಂದ, ಮೊದಲನೆಯ ಹೆಜ್ಜೆಯು ಸಂಪೂರ್ಣ ಭಿನ್ನವಾಗಿರಬೇಕು

ದೇಶದ ಮುಂದಿರುವ ಪರಸ್ಪರ ಸಂಬಂಧವುಳ್ಳ ಕ್ಷೇತ್ರ ಮತ್ತು ಕೈಗಾರಿಕೆಗಳ ಎರಡು ಪ್ರಶ್ನೆಗಳನ್ನೂ ಮತ್ತು ಬಹುತರವಾಗಿ ಇನ್ನಿತರ ಎಲ್ಲ ಪ್ರಮುಖ ಸಮಸ್ಯೆಗಳನ್ನೂ ಭಾರತದಲ್ಲಿ ಕ್ರಾಂತಿಕಾರಕ ಹಂಚಿಕೆಯೊಂದು ಮಾತ್ರ ಪರಿಹರಿಸಲು ಸಾಧ್ಯ " ಕಮರಿಯನ್ನು ಎರಡೇ ಹಾರುಗಳಲ್ಲಿ ಹಾರುವುದಕ್ಕಿಂತ ಹೆಚ್ಚು ದೊಡ್ಡದಾದ ತಪ್ಪು

ಇಲ್ಲ" ಎಂದು ಮಿ॥ ಲಾಯ್ಡ್ ಜಾರ್ಜ್‌ರವರು ಅವರ 'ವಾರ್ ಮೆಮಾಯಿರ್ಸ್' (ಮಹಾಯುದ್ಧದ ನೆನಪುಗಳು) ಎಂಬ ಗ್ರಂಥದಲ್ಲಿ ಹೇಳಿದ್ದಾರೆ

ರಷ್ಯವನ್ನು ಬಿಟ್ಟರೆ ಮಾರ್ಕ್ಸ್‌ವಾದದ ತತ್ವವೂ ವೇದಾಂತವೂ ನನ್ನ ಬಗೆಯ ಕತ್ತಲಮೂಲೆಗಳನೇಕವನ್ನು ಬೆಳಗಿದುವು ಇತಿಹಾಸಕ್ಕೆ ನೂತನವಾದ ಅರ್ಥವೊಂದು ಬಂದಿದೆಯೆಂದು ಬಗೆಗೊಂಡೆ ಮಾರ್ಕ್ಸಿಸ್ಟ್ ವ್ಯಾಖ್ಯಾನವು ಅದರ ಮೇಲೆ ತುಂಬುಜ್ಯೋತಿಯನ್ನು ಬೀರಿತು, ಮತ್ತು ಎಷ್ಟೇ ಜಾಗೃತವಲ್ಲದಿದ್ದರೂ ಒಂದು ಬಗೆಯ ಕ್ರಮ ಮತ್ತು ಉದ್ದೇಶಗಳನ್ನು ಹಿನ್ನೆಲೆಯಾಗುಳ್ಳ ನಾಟಕವೊಂದನ್ನು ಬಿಚ್ಚಿ ತೋರಿಸಿದಂತಾಯಿತು ಭೂತ ಮತ್ತು ವರ್ತಮಾನ ಕಾಲಗಳ ಎದೆಗುಂದಿಸುವ ಅಪವ್ಯಯ ಮತ್ತು ರೋತೆಗಳಿದ್ದರೂ ಅನೇಕ ಕಂಟಕಗಳು ತಡೆಗಟ್ಟಿದ್ದರೂ ಭವಿಷ್ಯತ್ತು ಆಶೆಯಿಂದ ಬೆಳಗುತ್ತಿತ್ತು ಮಾರ್ಕ್ಸ್‌ವಾದದ ಸಾರಭೂತವಾದ ಸಾಂಪ್ರದಾಯಿಕ ಸಿದ್ಧಾಂತ ರಾಹಿತ್ಯ ಮತ್ತು ವೈಜ್ಞಾನಿಕ ದೃಷ್ಟಿಕ್ಷೇಪಗಳೇ ನನ್ನ ಮನಸ್ಸಿಗೆ ರಂಜಿಸಿದವು ರಷ್ಯ ಮತ್ತು ಇತರ ಕಡೆಗಳ ಅಧಿಕಾರಿ ಕಮ್ಯೂನಿಸಮ್ಮಿನಲ್ಲಿ ಬೇಕಾದಷ್ಟು ಸಾಂಪ್ರದಾಯಿಕ ಸಿದ್ಧಾಂತವಿದ್ದಿತೆಂಬುದು ಸಂಪೂರ್ಣವಾಗಿ ನಿಜ. ಅಲ್ಲದೆ ಪಾಷಂಡಿಗಳ ಬೇಟೆಗಳೂ ಮೇಲಿಂದ ಮೇಲೆ ನಡೆಯುತ್ತಲೇ ಇದ್ದುವು ಸೋವಿಯಟ್ ರಾಜ್ಯಗಳಲ್ಲಿ ಶೀಘ್ರವಾಗಿ ನಡೆಯುತ್ತಿದ್ದ ಅದ್ಭುತ ವ್ಯತ್ಯಾಸಗಳ ಕಾಲದಲ್ಲಿ, ಪರಿಣಾಮಕಾರಿಯಾದ ವಿರುದ್ಧ ಕಾರ್ಯಕ್ರಮವು ಆ ವ್ಯವಸ್ಥೆಯನ್ನು ವಿನಾಶಕ ಅಪಜಯದಲ್ಲಿ ಕೊನೆಗಾಣಿಸಬಹುದಾಗಿತ್ತು, ಎಂಬ ದೃಷ್ಟಿಯಿಂದ ಇದನ್ನು ಅರ್ಥಮಾಡಿಕೊಳ್ಳಲು ಕಷ್ಟವಲ್ಲದಿದ್ದರೂ ಅದು ವಿಷಾದಕರವಾದ ವಿಷಯದಂತೆ ತೋರಿತು.

ಜಗತ್ತಿನ ಅಸ್ತವ್ಯಸ್ತವಾದ ಸಂದುಕಟ್ಟು ಮತ್ತು ಧಾರಣೆವಾಸಿಗಳ ಹರಾತ್ಪತನಗಳು ಮಾರ್ಕ್ಸಿಸ್ಟ್ ವಿಭಜನೆಯನ್ನು ಸಮರ್ಥಿಸುವಂತೆ ತೋರಿತು. ಇತರ ಪದ್ಧತಿಗಳೂ ತತ್ವಗಳೂ ಕತ್ತಲೆಯಲ್ಲಿ ತಡಕಾಡುತ್ತಿದ್ದಾಗ ಮಾರ್ಕ್ಸ್‌ವಾದ ಒಂದು ಮಾತ್ರ ಅದನ್ನು ಹೆಚ್ಚು ಕಡಿಮೆ ತೃಪ್ತಿಕರವಾಗಿ ವಿವರಿಸಿ ನಿಜವಾದ ಪರಿಹಾರವನ್ನು ನೀಡಿತು.

ಈ ಮನವರಿಕೆಯು ನನ್ನಲ್ಲಿ ಬೆಳೆದಂತೆಲ್ಲ ಹೊಸದೊಂದು ಉದ್ದೀಪನದಿಂದ ತುಂಬಿಹೋದೆ, ಮತ್ತು ಶಾಸನ ಭಂಗ ಚಳವಳಿಯ ಅಪಜಯದ ಬಗ್ಗೆ ನನ್ನಲ್ಲಿದ್ದ ವಿಷಾದವು ಬಹಳಮಟ್ಟಿಗೆ ಕಡಿಮೆಯಾಯಿತು ಅಪೇಕ್ಷಿತವಾದ ಉತ್ಕರ್ಷಕ್ಕೆ ಜಗತ್ತು ವೇಗವಾಗಿ ನಡೆದುಹೋಗುತ್ತಿರಲಿಲ್ಲವೆ? ಯುದ್ಧಗಳ ಮತ್ತು ವಿನಾಶಗಳ ಅತ್ಯಪಾಯಕರವಾದ ಗಂಡಾಂತರಗಳಿದ್ದುವು ಆದರೂ ನಾವೇನೋ ಮುನ್ನಡೆಯುತ್ತಲೇ ಇದ್ದೆವು ನಿಂತ ಕಡೆಯೇ ನಿಂತುಬಿಟ್ಟಿರಲಿಲ್ಲ ಇನ್ನೂ ದೀರ್ಘವಾದ ಪ್ರಯಾಣದಲ್ಲಿ ನಮ್ಮ ರಾಷ್ಟ್ರೀಯ ಸಂಗ್ರಾಮವು ಒಂದು ಮಜಲಾಯಿತು, ಮತ್ತು

ದಬ್ಬಾಳಿಕೆ ಮತ್ತು ವೇದನಾನುಭವಗಳು ನಮ್ಮ ಜನಗಳನ್ನು, ಬರಲಿರುವ ಹೋರಾಟಕ್ಕೆ ಹದಮಾಡುತ್ತಿದ್ದುದೂ ಪ್ರಪಂಚವನ್ನು ಪ್ರಚೋದಿಸುತ್ತಿದ್ದ ಹೊಸ ಕಲ್ಪನೆಗಳನ್ನು ಪರಿಗಣಿಸುವಂತೆ ಬಲಾತ್ಕರಿಸುತ್ತಿದ್ದುದೂ ನಲ್ಲದೇ ಆಗಿತ್ತು. ನಾವು ಇನ್ನೂ ಶಕ್ತರಾಗಿದ್ದು ಇನ್ನೂ ಶಿಸ್ತಿನಿಂದ ಕೂಡಿದ್ದು ದುರ್ಬಲಾಂಶಗಳ ದೂರೀಕರಣದಿಂದ ಇನ್ನಷ್ಟು ಗಟ್ಟಿಯಾಗುತ್ತಿದ್ದೆವು. ಕಾಲವು ನಮಗೆ ಅನುಕೂಲವಾಗಿತ್ತು.

ಆದುದರಿಂದ ನಾನು ರಷ್ಯ, ಜರ್ಮನಿ, ಇಂಗ್ಲೆಂಡ್, ಅಮೆರಿಕಾ, ಜಪಾನ್, ಚೀಣ, ಫ್ರಾನ್ಸ್, ಸ್ಪೇಯ್ನ್, ಇಟಲಿ ಮತ್ತು ಮಧ್ಯ ಯೂರೋಪ್‌ಗಳಲ್ಲಿ ನಡೆಯುತ್ತಿದ್ದುದನ್ನು ಎಚ್ಚರಿಕೆಯಿಂದ ಅಧ್ಯಯನಮಾಡಿ ಪ್ರಚಲಿತ ವಿದ್ಯಮಾನಗಳ ತೊಡಕುತೊಡಕಾದ ಬಲೆಯನ್ನು ಬಗೆಗೊಳ್ಳಲು ಪ್ರಯತ್ನಿಸಿದೆ. ಬಿರುಗಾಳಿ ಸುರಿಮಳೆಗಳನ್ನೆದುರಿಸಲು ಪ್ರತಿಯೊಂದು ರಾಷ್ಟ್ರವೂ ಬೇರೆಬೇರೆಯಾಗಿ ಮತ್ತು ಒಟ್ಟಾಗಿ ಮಾಡುತ್ತಿದ್ದ ಪ್ರಯತ್ನಗಳನ್ನು ಶ್ರದ್ಧೆಯಿಂದ ನೋಡುತ್ತಿದ್ದೆ. ರಾಜಕೀಯ ಮತ್ತು ಆರ್ಥಿಕ ಅರಿಷ್ಟಗಳ ಪರಿಹಾರಕ್ಕಾಗಿ ನಡೆಯುತ್ತಿದ್ದ ಅಂತರರಾಷ್ಟ್ರೀಯ ಸಮ್ಮೇಳನಗಳ ಮೇಲಿಂದ ಮೇಲಿನ ವಿಫಲಗಳೂ ಶಸ್ತ್ರಸನ್ಯಾಸದ ಸಮಸ್ಯೆಯೂ ನನಗೆ ಬಲವಂತದಿಂದ, ಸ್ವಲ್ಪಮಟ್ಟಿನ ಆದರೆ ಸಾಕಷ್ಟು ಕೋಟಲೆಗೊಡುವ, ನಮ್ಮದೊಂದು ಸಮಸ್ಯೆ—ಕೋಮುವಾರು ಸಮಸ್ಯೆ—ಯನ್ನು ನೆನಪಿಗೆ ತಂದಿತು. ಬೇಕಾದಷ್ಟು ಸೌಜನ್ಯವಿದ್ದರೂ ಇದುವರೆಗೆ ನಾವು ಸಮಸ್ಯೆಯನ್ನು ಪರಿಹರಿಸಲಿಲ್ಲ, ಮತ್ತು ವಿಫಲತೆಯು ಇಡೀ ಪ್ರಪಂಚದ ವಿನಾಶಕ್ಕೆ ಎಳೆದೊಯ್ಯುವುದೆಂಬ ವಿಸ್ತಾರವಾದ ನಂಬಿಕೆಯಿದ್ದರೂ ಯೂರೋಪಿನ ಮತ್ತು ಅಮೆರಿಕದ ದೊಡ್ಡ ದೊಡ್ಡ ರಾಜಕಾರಣಪಟುಗಳು ಜೊತೆಯಾಗಿ ಕೆಲಸ ಮಾಡಲಾಗದೆ ಹೋಗಿದ್ದಾರೆ. ಎರಡು ಸಂದರ್ಭಗಳಲ್ಲಿಯೂ ವಿಷಯ ಪ್ರಸ್ತಾನವು ತಪ್ಪಾಗಿತ್ತು. ಸಂಬಂಧಪಟ್ಟ ಜನಗಳು ಸರಿಯಾದ ಮಾರ್ಗದಲ್ಲಿ ಹೋಗಲು ಎದೆಗೊಳ್ಳಲಿಲ್ಲ.

ಜಗತ್ತಿನ ಜಂಜಡಗಳು ಮತ್ತು ತಿಕ್ಕಾಟಗಳನ್ನು ಕುರಿತು ಯೋಚಿಸುವುದರಿಂದ ಸ್ವಲ್ಪಮಟ್ಟಿಗೆ ನನ್ನ ಮತ್ತು ನಾಡಿನ ತೊಂದರೆಗಳನ್ನು ಮರೆತೆ. ಜಗಚ್ಚರಿತ್ರೆಯ ಈ ಮಹಾ ಕ್ರಾಂತಿಯುತ ಅವಧಿಯಲ್ಲಿ ನಾನು ಬದುಕಿದ್ದೇನಲ್ಲ ಎಂದು ಆಗಾಗ ಹಿಗ್ಗಿಯೂ ಹಿಗ್ಗುತ್ತಿದ್ದೆ. ಬರಲಿದ್ದ ಮಹಾ ವ್ಯತ್ಯಾಸಗಳಲ್ಲಿ, ಜಗತ್ತಿನ ನನ್ನ ಮೂಲೆಯಲ್ಲಿ ನಾನೂ ಸಣ್ಣ ಭಾಗ ವಹಿಸಬೇಕಾಗಿ ಬಂದೀತು, ಎಂದುಕೊಂಡೆ. ಇತರ ಸಮಯಗಳಲ್ಲಿ ಪ್ರಪಂಚವನ್ನಾವರಿಸಿದ್ದ ಹಿಂಸೆಯ ಮತ್ತು ಸಂಘರ್ಷಣೆಯ ವಾತಾವರಣವು ನನ್ನನ್ನು ಕುಗ್ಗಿಸುತ್ತಿತ್ತು. ಸಂಕಟ, ದಾರಿದ್ರ್ಯ ಮತ್ತು ನಿಷ್ಕರುಣೆಗಳನ್ನು ಹೇಸಲಾರದಷ್ಟು, ಮಾನವೀಯ ಅಧಃಪತನ ಮತ್ತು ದಾಸ್ಯಗಳಿಗೆ ಮನಸ್ಸು ಅಭ್ಯಾಸವಾಗಿ ಒರಟಾಗಿ ಬಿಟ್ಟಿದ್ದ, ಬುದ್ಧಿವಂತ ಸ್ತ್ರೀಪುರುಷರ ನೋಟವು ಇನ್ನೂ ಕಟ್ಟದ್ದಾಗಿತ್ತು. ಗದ್ದಲದಿಂದ ಕೂಡಿದ ಅಸಭ್ಯತೆ, ಸಂಘಟಿತವಾದ ಮೋಸಗಾರಿಕೆ

ಗಳು ಮಿಸುಕುವ ಈ ನೈತಿಕ ವಾತಾವರಣದಲ್ಲಿ ಏಳಿಗೆಯಲ್ಲಿದ್ದುವು ಸತ್ಪುರುಷರು ಮೌನವಾಗಿದ್ದರು ಅದು ತಾತ್ಕಾಲಿಕವಾದುದೆಂದು ನನ್ನನ್ನು ನಾನು ಸಂತೈಸಿಕೊಂಡರೂ ಹಿಟ್ಲರರ ವಿಜಯ ಮತ್ತು ಹಿಂದೆಯೇ ಬಂದ 'ಬ್ರೌನ್ ಟೆರರ್', ಇವುಗಳು ನನಗೆ ದೊಡ್ಡ ಆಘಾತವಾಗಿ ಪರಿಣಮಿಸಿದುವು ಪುರುಷ ಪ್ರಯತ್ನದ ವಿಫಲತೆಯ ಭಾವನೆಯು ಬಹುತರವಾಗಿ ಮೂಡುತ್ತಿತ್ತು ಯಂತ್ರವು ಕುರುಡಾಗಿ ನಡೆಯುತ್ತಿತ್ತು ಅದರಲ್ಲಿನ ಸಣ್ಣದೊಂದು ಚಕ್ರವು ಏನು ತಾನೆ ಮಾಡಬಲ್ಲುದು?

ಆದರೂ ಕಮ್ಯೂನಿಸ್ಟ್ ಜೀವನ ವೇದಾಂತವು ನನಗೆ ಆಶ್ವಾಸನವನ್ನೂ ಆಶೆಯನ್ನೂ ನೀಡಿತು ಅದನ್ನು ಭಾರತಕ್ಕೆ ಸಂಪ್ರಯೋಗಿಸುವುದು ಹೇಗೆ? ನಾವು ಇನ್ನೂ ರಾಜಕೀಯ ಸ್ವಾತಂತ್ರ್ಯದ ಸಮಸ್ಯೆಯನ್ನು ಬಗೆಹರಿಸಿರಲಿಲ್ಲ ಮತ್ತು ರಾಷ್ಟ್ರೀಯ ದೃಷ್ಟಿಕ್ಷೇಪವು ನಮ್ಮ ಮನಸ್ಸುಗಳಲ್ಲಿ ತುಂಬಿತ್ತು ನಾವು ಅದೇ ಕಾಲದಲ್ಲಿಯೇ ಆರ್ಥಿಕ ಸ್ವಾತಂತ್ರ್ಯಕ್ಕೆ ಹಾರಬೇಕೆ? ಅಥವಾ ಕಾಲಾವಧಿಯು ಎಷ್ಟು ಪುಟ್ಟದಾದರೂ ಒಂದಾದಮೇಲೆ ಇನ್ನೊಂದನ್ನು ತೆಗೆದುಕೊಳ್ಳಬೇಕೆ? ಜಗತ್ತಿನ ಘಟನೆಗಳೂ ಅಂತೆಯೇ ಭಾರತದಲ್ಲಿನ ವಿದ್ಯಮಾನಗಳೂ ಸಾಮಾಜಿಕ ಪ್ರಶ್ನೆಯನ್ನು ಪ್ರಾಮುಖ್ಯತೆಗೆ ತರುತ್ತಿದ್ದುವು, ಅಲ್ಲದ ಇನ್ನು ಮೇಲೆ ರಾಜಕೀಯ ಸ್ವಾತಂತ್ರ್ಯವನ್ನು ಅದರಿಂದ ಬೇರೆ ಮಾಡುವುದು ಅಸಾಧ್ಯವೆಂದು ತೋರಿತು

ಭಾರತದಲ್ಲಿ ಬ್ರಿಟಿಷ್ ಸರಕಾರದ ನೀತಿಯು ಪರಿಣಾಮವೆಂದರೆ, ಸಾಮಾಜಿಕ ಪ್ರತೀಕಾರಕ ವರ್ಗಗಳು ರಾಜಕೀಯ ಸ್ವಾತಂತ್ರ್ಯಕ್ಕೆ ಎದುರಾಗಿ ಸಾಲುಗಟ್ಟಿ ನಿಂತುದು ಅದು ಅನಿವಾರ್ಯವಾಗಿತ್ತು ಮತ್ತು ಭಾರತದಲ್ಲಿನ ವಿವಿಧ ವರ್ಗಗಳ ಮತ್ತು ಗುಂಪುಗಳ ಸ್ಪಷ್ಟತರವಾದ ವಿಂಗಡಣೆಯನ್ನು ನಾನು ಸ್ವಾಗತಿಸಿದೆ ಆದರೆ ಈ ವಿಷಯದ ಸ್ವಾರಸ್ಯವನ್ನು ಇತರರು ಅರಿತಿದ್ದರೆ? ತೋರಿದಂತೆ ಅನೇಕರು ಅರಿತಿರಲಿಲ್ಲ ಕೆಲವು ದೊಡ್ಡ ಪಟ್ಟಣಗಳಲ್ಲಿ ಒಕ್ಕೈಯಷ್ಟು ಮಂದಿ ವೈದಿಕ ಕಮ್ಯೂನಿಸ್ಟರು ಇದ್ದರೆಂಬುದೂ, ಅವರು ರಾಷ್ಟ್ರೀಯ ಚಳವಳಿಗೆ ವಿರುದ್ಧವಾಗಿರುವುದಲ್ಲದೆ, ಅದರ ವಿಷಕಾರುತ್ತಿದ್ದ ವಿಮರ್ಶಕರಾಗಿದ್ದರೆಂಬುದೂ ನಿಜ ವಿಶೇಷವಾಗಿ ಬೊಂಬಾಯಿನಲ್ಲಿ, ಸ್ವಲ್ಪಮಟ್ಟಿಗೆ ಕಡಿಮೆಯಾಗಿ ಕಲ್ಕತ್ತೆಯಲ್ಲಿ, ಸಂಘಟಿತ ಕೂಲಿಕಾರ ಚಳವಳಿಯು, ಒಂದು ವಿಧವಾದ ಅಳ್ಳಕವಾದ ಅರ್ಥದಲ್ಲಿ ಸಮತಾವಾದಿಯಾಗಿತ್ತು, ಆದರೆ ಅದು ಚೂರು ಚೂರಾಗಿ ಬಿಟ್ಟಿದ್ದು, ಕುಗ್ಗಿನಿಂದ ಸಂಕಟಪಡುತ್ತಿತ್ತು ಮಂಪರಮಂಪರವಾದ ಕಮ್ಯೂನಿಸ್ಟ್ ಮತ್ತು ಸಮತಾವಾದಿ ಕಲ್ಪನೆಗಳು, ಕಲಿತವರಲ್ಲಿ ಮತ್ತು ಬುದ್ಧಿವಂತ ಸರಕಾರಿ ಅಧಿಕಾರಿಗಳಲ್ಲಿಯೂ ಸಹ ಹರಡಿದ್ದವು ಒಮ್ಮೆ ಬ್ರೈಸ್‌ರವರ 'ಡೆಮಾಕ್ರೆಸೀಸ್' (ಪ್ರಜಾಸತ್ತೆಗಳು), ಮಾರ್ಲೆ, ಕೀತ್ ಮತ್ತು ಮ್ಯಾಜಿನಿಗಳನ್ನು ಓದುತ್ತಿದ್ದ ಕಾಂಗ್ರೆಸ್ಸಿನ ಯುವಕ ಯುವತಿಯರು ಈಗ, ದೊರೆತಾಗಲೆಲ್ಲಾ ಸಮತಾವಾದ, ಕಮ್ಯೂನಿಸಮ್, ಮತ್ತು ರಷ್ಯಗಳನ್ನು ಕುರಿತ ಪುಸ್ತಕಗಳನ್ನು ಓದಲಾರಂಭಿಸಿದರು ಈ ಹೊಸ ಭಾವನೆಗಳು

ಕಡೆಗೆ ಜನಗಳ ಮನಸ್ಸನ್ನು ತಿರುಗಿಸಲು ಮೀರತ್ ಪಿತೂರಿ ಮೊಕದ್ದಮೆಯು ಬಹಳ ಮಟ್ಟಿಗೆ ಸಹಾಯ ಮಾಡಿತು ಜಗತ್ತಿನ ಸಂದುಕಟ್ಟು ಗಮನವನ್ನು ಬಲಾತ್ಕಾರದಿಂದ ಸೆಳೆಯಿತು ಒಂದು ಹೊಸ ವಿಚಾರಣಾಬುದ್ಧಿ, ಒಂದು ಪ್ರಶ್ನಿಸುವ ಪ್ರವೃತ್ತಿ ಮತ್ತು ಪ್ರಚಲಿತ ಸಂಸ್ಥೆಗಳಿಗೆ ಒಂದು ಅಭಿಯೋಗ ಇವೆಲ್ಲವೂ ಎಲ್ಲೆಲ್ಲಿಯೂ ತಲೆದೋರಿದ್ದುವು. ಮಾನಸಿಕವಾಯುವಿನ ಸಾಧಾರಣ ದಿಕ್ಕು ಸ್ವತಸ್ಸಿದ್ಧವಾಗಿತ್ತು ಆದರೂ ಅದು ಇನ್ನೂ ತನ್ನಲ್ಲಿ ತಾನು ನಂಬಿಕೆಯಿಡದ ಮಂದವಮಾರುತವಾಗಿತ್ತು ಕೆಲವರು ಫ್ಯಾಸಿಸ್ಟ್ ಕಲ್ಪನೆಗಳೊಂದಿಗೆ ಸರಸವಾಡುತ್ತಿದ್ದರು ತಿಳಿಯಾದ ಮತ್ತು ಸ್ಪಷ್ಟವಾದ ಕಲ್ಪನವಿಜ್ಞಾನಕ್ಕೆ ವಾರಡಿ ಬಂದಿತ್ತು ಇನ್ನೂ ರಾಷ್ಟ್ರೀಯತವಾದವು ಅಧಿಕರಿಸುವ ಆಲೋಚನೆಯಾಗಿತ್ತು

ಒಂದು ಪರಿಮಾಣದ ರಾಜಕೀಯ ಸ್ವಾತಂತ್ರ್ಯವನ್ನು ಪಡೆದುಕೊಳ್ಳುವವರೆಗೆ ರಾಷ್ಟ್ರೀಯತಾವಾದವು ಪ್ರಮುಖವಾದ ಪ್ರೇರಣೆಯಾಗಿರುವುದೆಂದು ನನಗೆ ಚೆನ್ನಾಗಿ ತೋರಿತು ಆದುದರಿಂದಲೇ ಕಾಂಗ್ರೆಸ್ಸು ಭಾರತದಲ್ಲಿ (ಕೆಲವು ಕೂಲಿಕಾರ ಮಂಡಲಿಗಳ ಹೊರತಾಗಿ) ಅತ್ಯಂತ ಪ್ರಬಲವಾಗಿದ್ದಷ್ಟೇ ಪ್ರಗತಿಗಾಮಿಯೂ ಆಗಿತ್ತು ಮತ್ತು ಆಗಿದೆ ಕಳೆದ ಹದಿಮೂರು ವರ್ಷಗಳಲ್ಲಿ ಗಾಂಧಿಜಿಯವರ ನಾಯಕತ್ವದಲ್ಲಿ ಅದು ಒಂದು ವಿಸ್ಮಯಕರವಾದ ಜಾಗೃತಿಯನ್ನು ಜನಜಂಗುಳಿಯಲ್ಲಿ ಪ್ರಚೋದಿಸಿತ್ತು, ಮತ್ತು ಅದರಲ್ಲಿ ಅಸ್ಪಷ್ಟವಾದ ಮಧ್ಯಶ್ರೇಣಿಯ ಕಲ್ಪನವಿಜ್ಞಾನವಿದ್ದರೂ ಅದು ಕ್ರಾಂತಿಕಾರಕ ಉದ್ದೇಶವನ್ನು ಸಾಧಿಸಿತ್ತು ಅದರ ಪ್ರಯೋಜಕತೆಯನ್ನು ಅದು ಇನ್ನೂ ಸಂಪೂರ್ಣವಾಗಿ ವ್ಯಯಮಾಡಿಬಿಟ್ಟಿರಲಿಲ್ಲ ಅಲ್ಲದೆ ರಾಷ್ಟ್ರೀಯತಾ ಪ್ರೇರಣೆಯು ಸಾಮಾಜಿಕ ಪ್ರೇರಣೆಗೆ ಎಡೆಗೊಡುವವರೆಗೂ ಅದು ಹಾಗೆ ಮಾಡಿಕೊಳ್ಳುವ ಸಂಭವವಿರಲಿಲ್ಲ ಆದ್ದರಿಂದ ಇತರ ಮಾರ್ಗಗಳನ್ನು ಉಪಯೋಗಿಸಬಹುದಾದರೂ ಕಲ್ಪನವಿಜ್ಞಾನ ಮತ್ತು ಕಾರ್ಯಗಳ ದೃಷ್ಟಿಯಿಂದ ಮುಂದಿನ ಪ್ರಗತಿಯು ಕಾಂಗ್ರೆಸ್ಸಿನೊಂದಿಗೆ ಹೆಚ್ಚಾಗಿ ಸಂಪರ್ಕವನ್ನು ಹೊಂದಿರಬೇಕು

ಕಾಂಗ್ರೆಸ್ಸನ್ನು ಬಿಟ್ಟು ಓಡಿಹೋಗುವುದೆಂದರೆ ರಾಷ್ಟ್ರದ ಸತ್ವಯುಕ್ತ ಪ್ರೇರಣೆಯಿಂದ ಜಾರಿಹೋದಂತೆ, ನಮ್ಮಲ್ಲಿದ್ದ ಅತಿಶಕ್ತಿಯುತ ಆಯುಧವನ್ನು ಮೊಂಡಾಗಿಸಿದಂತೆ, ಪ್ರಾಯಃ ಪರಿಣಾಮಕಾರಿಯಲ್ಲದ ಅತಿಲಾಭಾಕಾಂಕ್ಷೆಯ ಸಾಹಸವಾದದಲ್ಲಿ ಶಕ್ತಿಯನ್ನು ವ್ಯಯಮಾಡಿದಂತೆ, ಎಂದು ನನಗೆ ತೋರಿತು. ಇಷ್ಟಾದರೂ ರಚನೆಯಾಗಿದ್ದಂತೆ ಕಾಂಗ್ರೆಸ್ಸು ನಿಜವಾದ ಆಮೂಲಾಗ್ರ ವ್ಯತ್ಯಾಸವನ್ನೊಳಗೊಂಡ ಸಾಮಾಜಿಕ ಪರಿಹಾರವನ್ನು ಸ್ವೀಕರಿಸುವ ಸಂಭವವಿದ್ದಿತೆ? ಇಂಥದೊಂದು ಸಮಸ್ಯೆಯನ್ನು ಅದರ ಮುಂದಿಡುವುದರ ಪರಿಣಾಮವೆಂದರೆ ಅದು ಎರಡು ಅಥವಾ ಹೆಚ್ಚಾದ ಚೂರುಗಳಾಗಿ ಒಡೆದು ಹೋಗುವುದು, ಅಥವಾ ಕೊನೆಯ ಪಕ್ಷ ದೊಡ್ಡದೊಡ್ಡ ಗುಂಪುಗಳನ್ನು ಅದರಿಂದ ಹೊರಕ್ಕೆ ಓಡಿಸಿಬಿಡುವುದು, ಎಂಬುದು ಖಂಡಿತವಾದ

ದ್ದಾಗಿತ್ತು. ಕೇವಲ ಈ ಪರಿಸ್ಥಿತಿಯು ಅನಪೇಕ್ಷಣೀಯವಾಗಿತ್ತು ಅಥವಾ ಸಮಸ್ಯೆಗಳು ಸ್ಪಷ್ಟವಾಗಿ ಕಾಂಗ್ರೆಸ್ಸಿನ ಅಲ್ಪಸಂಖ್ಯಾತರೋ ಇಲ್ಲವೇ ಬಹುಸಂಖ್ಯಾತರೋ ಆದ ಬಲವಾಗಿ ಬೆಸೆದ ಗುಂಪೊಂದು ರೂಢಮೂಲ ವ್ಯತ್ಯಾಸವನ್ನೊಳಗೊಂಡ ಸಾಮಾಜಿಕ ಕಾರ್ಯಕ್ರಮಕ್ಕಾಗಿ ನಿಂತರೆ, ಅದು ಅನಪೇಕ್ಷಣೀಯವಾಗಿರಲಿಲ್ಲ ಇಲ್ಲವೇ ಸ್ವಾಗತಯೋಗ್ಯವಾಗದೆ ಇರುತ್ತಿರಲಿಲ್ಲ

ಆದರೆ ಸದ್ಯದಲ್ಲಿ ಕಾಂಗ್ರೆಸ್ಸೆಂದರೆ ಗಾಂಧಿಜಿ ಅವರೇನು ಮಾಡಲಿದ್ದರು? ಕಲ್ಪನವಿಜ್ಞಾನದಲ್ಲಿ ಅವರು ಅನೇಕ ವೇಳೆ ಆಶ್ಚರ್ಯಕರವಾಗುವಷ್ಟು ಹಿಂದೆ ಬಿದ್ದಿದ್ದರು ಆದರೂ ಕಾರ್ಯರಂಗದಲ್ಲಿ ಭಾರತದ ಇತ್ತೀಚಿನ ದಿನಗಳಲ್ಲಿ ಅವರು ಮಹಾ ಕ್ರಾಂತಿಪುರುಷರಾಗಿ ಮೆರೆದಿದ್ದಾರೆ ಅವರದೊಂದು ಅನ್ಯಾದೃಶವ್ಯಕ್ತಿ ಮಹತ್ವವಾಗಿತ್ತು ಅವರನ್ನು ಸಾಮಾನ್ಯ ಮಾನದಂಡಗಳಿಂದ ಅಳೆಯುವುದು ಅಥವಾ ಅವರನ್ನು ಕುರಿತು ತರ್ಕಶಾಸ್ತ್ರದ ಸಾಮಾನ್ಯ ಅನುಶಾಸನವನ್ನು ಸಂಪ್ರಯೋಗಿಸುವುದು ಸಹ ಅಸಾಧ್ಯವಾಗಿತ್ತು ಆದರೆ ಅವರು ಮೂಲತಃ ಕ್ರಾಂತಿಪುರುಷರಾಗಿದ್ದು, ಭಾರತದ ರಾಜಕೀಯ ಸ್ವಾತಂತ್ರ್ಯಕ್ಕೆ ಕಂಕಣ ತೊಟ್ಟಿದ್ದುದರಿಂದ, ಆ ಸ್ವಾತಂತ್ರ್ಯವು ದೊರೆಯುವತನಕ ಅವರು ಸಗ್ಗದ ಪಾತ್ರವಹಿಸುವುದರಲ್ಲಿ ಯಾವ ಸಂಶಯವೂ ಇರಲಿಲ್ಲ ಈ ಕಾರ್ಯವಿಧಾನದಲ್ಲಿಯೇ ಅವರು ಜಂಗುಳಿಯ ಅಮಿತಶಕ್ತಿಗಳನ್ನು ಹರಿಯಬಿಟ್ಟು ತಾವೂ ಸಹ ನಾನು ಆರೆಮರೆಯಿಂದ ಆಶಿಸಿದಂತೆ ಸಾಮಾಜಿಕ ಗುರಿಯ ಕಡೆಗೆ ಹಜ್ಜೆಹೆಜ್ಜೆಯಾಗಿ ನಡೆಯುತ್ತಿದ್ದರು

ಭಾರತದ ಒಳಗಿನ ಮತ್ತು ಹೊರಗಿನ ವೈದಿಕ ಕಮ್ಯೂನಿಸ್ಟರು ಕಳೆದ ಅನೇಕ ವರ್ಷಗಳಿಂದ ಗಾಂಧಿಜಿಯವರ ಮೇಲೂ ಕಾಂಗ್ರೆಸ್ಸಿನ ಮೇಲೂ ವಿಷಕಾರುತ್ತ ಬೀಳುತ್ತಲಿದ್ದಾರೆ. ಕಾಂಗ್ರೆಸ್ ಮುಂದಾಳುಗಳ ಮೇಲೆ ಅನೇಕ ವಿಧವಾದ ಕೀಳು ಉದ್ದೇಶ್ಯಗಳ ಆಪಾದನೆಯನ್ನು ಹೊರಿಸುತ್ತಲಿದ್ದಾರೆ ಕಾಂಗ್ರೆಸ್ಸಿನ ಕಲ್ಪನವಿಜ್ಞಾನವನ್ನು ಕುರಿತ ಅವರ ತಾತ್ವಿಕ ವಿಮರ್ಶೆಗಳಲ್ಲನೇಕವು ಸಮರ್ಥವಾಗಿಯೂ ಮೊನೆಚಾಗಿಯೂ ಇದ್ದು, ಆಮೇಲೆ ನಡೆದ ಘಟನೆಗಳು ಅವನ್ನು ಅಂಶತಃ ಸಮರ್ಥಿಸಿದುವು ಭಾರತದ ಸಾಮಾನ್ಯ ರಾಜಕೀಯ ಪರಿಸ್ಥಿತಿಯನ್ನು ಕುರಿತ ಹಿಂದಿನ ಕೆಲವು ಕಮ್ಯೂನಿಸ್ಟ್ ವಿಭಜನೆಗಳು ವಿಸ್ಮಯವಾಗುವಷ್ಟು ಸರಿಯಾಗಿರುವಂತೆ ಆಮೇಲೆ ಮನವರಿಕೆಯಾಯಿತು ಆದರೆ ಅವರು ತಮ್ಮ ಸಾಮಾನ್ಯ ಧ್ಯೇಯಸೂತ್ರಗಳನ್ನು ಬಿಟ್ಟು ವಿವರಣೆಗಳಿಗೆ ಬಂದಾಗ, ಅದರಲ್ಲೂ ವಿಶೇಷವಾಗಿ ಕಾಂಗ್ರೆಸ್ಸಿನ ಪಾತ್ರವನ್ನು ಅವರು ಪರಿಗಣಿಸುವಾಗ, ತೀರ ದಾರಿತಪ್ಪಿಹೋಗುತ್ತಾರೆ ಕಮ್ಯೂನಿಸಮ್ಮಿನ ವೈಜ್ಞಾನಿಕ ಜ್ಞಾನವನ್ನು ಪ್ರಚಾರಮಾಡಿ ಜನಗಳ ಮನಸ್ಸನ್ನು ಅದಕ್ಕೆ ಒಲಿಸಿಕೊಳ್ಳುವ ಪ್ರಯತ್ನ ಮಾಡುವುದಕ್ಕೆ ಪ್ರತಿಯಾಗಿ ಇತರರನ್ನು ಬಯ್ಯುವುದರಲ್ಲಿ ಹೆಚ್ಚು ಏಕಾಗ್ರಚಿತ್ತತೆಯನ್ನು ಉಪಯೋಗಿಸಿರುವುದು ಭಾರತದಲ್ಲಿನ ಕಮ್ಯೂನಿಸ್ಟರ ಸಂಖ್ಯಾ ಮತ್ತು

ಪ್ರಭಾವಗಳ ದೌರ್ಬಲ್ಯಕ್ಕೆ ಮುಖ್ಯವಾದ ಕಾರಣವೊಂದಾಗಿದೆ. ಇದು ಅವರ ಮೇಲೆ ಪ್ರತಿಕ್ರಿಯೆಯನ್ನೆಬ್ಬಿಸಿ ಅವರಿಗೆ ದೊಡ್ಡ ಹಾನಿಯನ್ನುಂಟುಮಾಡಿದೆ. ಕೆಲಸಗಾರರನ್ನು ಒಲಿಸಿಕೊಳ್ಳಲು ವೀರಘೋಷಗಳೊಂದೆರಡು ಸಾಕಾಗಿರುವ ಕೂಲಿಕಾರ ಕ್ಷೇತ್ರಗಳಲ್ಲಿ ಕೆಲಸಮಾಡುವ ಅಭ್ಯಾಸವು ಅವರಲ್ಲನೇಕರಿಗಿದೆ. ಆದರೆ ಬುದ್ಧಿವಂತರಿಗೆ ಕೇವಲ ವೀರಘೋಷಗಳು ಸಾಲವು. ಇಂದು ಭಾರತದಲ್ಲಿ ಮಧ್ಯಮ ತರಗತಿಯ ಬುದ್ಧಿವಂತನು ಅತಿಪ್ರಬಲವಾದ ಕ್ರಾಂತಿಕಾರಕ ಶಕ್ತಿಯೆಂಬುವನ್ನು ಅವರು ಬಗೆಗೊಂಡಿಲ್ಲ. ವೈದಿಕ ಕಮ್ಯೂನಿಸ್ಟರಿದ್ದರೂ ಬಹುತರವಾಗಿ ಅನೇಕ ಬುದ್ಧಿವಂತರು ಕಮ್ಯೂನಿಸಮ್ಮಿನ ಕಡೆಗೆ ಸೆಳೆಯಲ್ಪಟ್ಟಿದ್ದಾರೆ. ಇಷ್ಟಾದರೂ ಅವರವರ ನಡುವೆ ಕೊಲ್ಲಿಯೊಂದಿದೆ.

ಕಮ್ಯೂನಿಸ್ಟರು ಹೇಳುವಂತೆ, ಭಾರತೀಯ ಬಂಡವಾಳಗಾರರು ಮತ್ತು ಜಮೀನ್‌ದಾರರ ಹಿತಕ್ಕಾಗಿ ಸರಕಾರದ ಮೇಲೆ ಜನಜಂಗುಳಿಯ ಒತ್ತಡವನ್ನು ತಂದು ಕೈಗಾರಿಕೆ ಮತ್ತು ವಾಣಿಜ್ಯಗಳ ಬಾಧ್ಯತೆಗಳನ್ನು ದೊರಕಿಸಿಕೊಳ್ಳುವುದೇ ಕಾಂಗ್ರೆಸ್ಸಿನ ಗೊತ್ತುಗುರಿಯಾಗಿದೆ. "ಬೇಸಾಯಗಾರ ಜಂಗುಳಿ, ಕೆಳಮಧ್ಯಮ ತರಗತಿ ಮತ್ತು ಕೈಗಾರಿಕ ಕೂಲಿಕಾರ ವರ್ಗಗಳ ಆರ್ಥಿಕ ಮತ್ತು ರಾಜಕೀಯ ಆತ್ರಪ್ತಿಯನ್ನು ಬೊಂಬಾಯಿ, ಅಹಮದಾಬಾದ್ ಮತ್ತು ಕಲ್ಕತ್ತೆಗಳ ಕಾರ್ಖಾನೆಗಳ ಒಡೆಯರ ಮತ್ತು ಭಂಡಾರಿಗಳ ರಥಕ್ಕೆ ಹೂಡುವುದೇ" ಕಾಂಗ್ರೆಸ್ಸಿನ ಕಟ್ಟಾಳಿಗವಾಗಿದೆ. ಭಾರತೀಯ ಬಂಡವಾಳಗಾರರು ತೆರೆಯ ಹಿಂದೆ ಕುಳಿತು, ಜಂಗುಳಿಚಳವಳಿಯೊಂದನ್ನು ಸಂಘಟಿಸಬೇಕೆಂದೂ ಅದು ಬಹಳ ವಿಸ್ತಾರವೂ ಅಪಾಯಕರವೂ ಆದಾಗ, ತಾತ್ಕಾಲಿಕವಾಗಿ ಅದನ್ನು ನಿಲ್ಲಿಸಿಬಿಡಬೇಕು, ಇಲ್ಲವೇ ಮುಂದರಿಸಿ ಇಡಬೇಕೆಂದೂ ಕಾಂಗ್ರೆಸ್ ಕಾರ್ಯನಿರ್ವಾಹಕ ಸಮಿತಿಗೆ ಅಪ್ಪಣೆ ಮಾಡುವರಂತೆ ಮೇಲಾಗಿ, ಅನಾಭಾವಕ್ಕೆ ತುತ್ತಾದ ಜನತೆಯನ್ನು ಅಂಕೆಯಲ್ಲಿಡಲು ಮತ್ತು ದುರುಪಯೋಗಪಡಿಸಿಕೊಳ್ಳಲು ಬ್ರಿಟಿಷರು ಆವಶ್ಯಕವಾಗಿರುವುದರಿಂದಲೂ ಇಂಥ ಕಾರ್ಯಕ್ಕೆ ಭಾರತೀಯ ಮಧ್ಯಮ ತರಗತಿಯವರು ಅಸಮರ್ಥರಾಗಿರುವುದಾಗಿ ಭಾವಿಸಿಕೊಂಡಿರುವುದರಿಂದಲೂ ಕಾಂಗ್ರೆಸ್ ಮುಂದಾಳುಗಳು ಬ್ರಿಟಿಷರು ಹೊರಟುಹೋಗಲು ಇಷ್ಟಪಡುವುದಿಲ್ಲವಂತೆ.

ಬುದ್ಧಿವಂತರಾದ ಕಮ್ಯೂನಿಸ್ಟರು ಈ ಭ್ರಾಂತಿಯುತವಾದ ವಿಭಜನೆಯನ್ನು ನಂಬುವುದು ಆಶ್ಚರ್ಯಕರವಾಗಿದೆ. ಆದರೆ ಅವರ ತೋರಮಟ್ಟಿಗೆ ನಂಬುವುದಲ್ಲದೆ, ಭಾರತವಲ್ಲವರು ವಿಸ್ಮಯವಾಗುವದು, ವಿಫಲರಾಗುವುದು ಆಶ್ಚರ್ಯವಲ್ಲ. ಭಾರತೀಯ ರಾಷ್ಟ್ರೀಯ ಚಳವಳಿಯನ್ನು ಐರೋಪ್ಯ ಕೂಲಿಕಾರ ಮಾನದಂಡಗಳಿಂದ ಅವರು ಅಳೆಯಲೆತ್ನಿಸುವುದೇ ಅವರ ಮೂಲ ದೋಷವೆಂದು ತೋರುವುದು, ಮತ್ತು ಕೂಲಿಕಾರ ಮುಂದಾಳುಗಳು ಕೂಲಿಕಾರ ಚಳವಳಿಗಳನ್ನು ಪುನಃಪುನಃ ಬಿಟ್ಟುಕೊಡುವುದು ಅವರಿಗೆ ಬಳಕೆಯಾಗಿರುವುದರಿಂದ, ಆ ಹೋಲಿಕೆಯನ್ನು ಭಾರತಕ್ಕೆ ಸಂಪ್ರಯೋಗಿ

ಸುತ್ತಾರೆ ಭಾರತೀಯ ರಾಷ್ಟ್ರೀಯ ಚಳವಳಿಯು, ತಾನಾಗಿಯೇ ಸ್ಪಷ್ಟವಾಗಿರುವಂತ, ಕೂಲಿಕಾರರ ಅಥವಾ ಬೇಸಾಯಗಾರ ಕೂಲಿಗಾರರ ಚಳವಳಿಯಲ್ಲ ಅದರ ಹೆಸರೇ ಸೂಚಿಸುವಂತೆ ಅದೊಂದು ಮಧ್ಯಶ್ರೇಣಿಯ ಚಳವಳಿ, ಮತ್ತು ಅದರ ಗೊತ್ತುಗುರಿಯಾದರೋ ರಾಜಕೀಯ ಸ್ವಾತಂತ್ರ್ಯವೇ ವಿನಾ ಸಾಮಾಜಿಕ ವ್ಯವಸ್ಥೆಯ ವ್ಯತ್ಯಾಸವಲ್ಲ ಈ ಗೊತ್ತುಗುರಿಯು ಬಹುಮುಖ ಪರಿಣಾಮಕಾರಿಯಲ್ಲವೆಂದು ಟೀಕಿಸಲ್ಪಡಬಹುದು, ಮತ್ತು ರಾಷ್ಟ್ರೀಯತಾವಾದವೂ ಕಾಲೋಚಿತವಲ್ಲದುದೆಂದು ಖಂಡಿಸಲ್ಪಡಬಹುದು ಆದರೆ ಚಳವಳಿಯ ಮೂಲ ಬುನಾದಿಯನ್ನು ಸ್ವೀಕರಿಸಿದರೆ, ಕ್ಷೇತ್ರಪದ್ಧತಿಯನ್ನೋ ಇಲ್ಲವೇ ಬಂಡವಾಳ ಪದ್ಧತಿಯನ್ನೋ ತಲಕೆಳಗು ಮಾಡಲು ಪ್ರಯತ್ನಿಸಲಿಲ್ಲವೆಂಬ ಕಾರಣದಿಂದ ಮುಂದಾಳುಗಳು ಜನ ಜಂಗುಳಿಯನ್ನು ಬಿಟ್ಟುಕೊಟ್ಟರೆಂದು ಹೇಳುವುದು ಅವಿವೇಕ ಹಾಗೆ ಮಾಡುವುದಾಗಿ ಅವರು ಹಕ್ಕು ಹೇಳಿಕೊಂಡಿರಲಿಲ್ಲ ಕಾಂಗ್ರೆಸ್ಸಿನಲ್ಲಿ ಕೆಲವು ಮಂದಿ–ಮತ್ತು ಅವರದು ಬೆಳೆಯುತ್ತಿರುವ ಸಂಖ್ಯೆ–ಕ್ಷೇತ್ರಪದ್ಧತಿಯನ್ನೂ ಬಂಡವಾಳ ಪದ್ಧತಿಯನ್ನೂ ವ್ಯತ್ಯಾಸಗೊಳಿಸಬೇಕೆಂದು ಬಯಸುವರು, ಆದರೆ ಅವರು ಕಾಂಗ್ರೆಸ್ಸಿನ ಹೆಸರಿನಲ್ಲಿ ಮಾತನಾಡಲಾರರು

ಬ್ರಿಟಿಷ್ ಮತ್ತು ಇತರ ವಿದೇಶಿ ವಸ್ತುಬಹಿಷ್ಕಾರ, ಸ್ವದೇಶಿಗೆ ಕೊಟ್ಟ ಪ್ರೋತ್ಸಾಹ ಇವುಗಳ ಕಾರಣದಿಂದ ಭಾರತೀಯ ಬಂಡವಾಳಗಾರ ವರ್ಗದವರು (ದೊಡ್ಡ ಜಮೀನ್‌ದಾರರೂ ತಾಲ್ಲೂಕುದಾರರೂ ಅಲ್ಲ) ರಾಷ್ಟ್ರೀಯ ಚಳವಳಿಯಿಂದ ಬಹಳ ಮಟ್ಟಿಗೆ ಲಾಭಹೊಂದಿದ್ದಾರೆ ಪ್ರತಿಯೊಂದು ರಾಷ್ಟ್ರೀಯ ಚಳವಳಿಯೂ ಗೃಹ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವುದರಿಂದ ಮತ್ತು ಬಹಿಷ್ಕಾರಗಳನ್ನು ಬೋಧಿಸುವುದರಿಂದ ಇದು ಅನಿವಾರ್ಯವಾಗಿತ್ತು. ವಾಸ್ತವವಾಗಿ ಬೊಂಬಾಯಿ ಕಾರ್ಖಾನೆಯ ಕೈಗಾರಿಕೆಯು ಒಟ್ಟಿಗೆ, ಶಾಸನಭಂಗವು ಮುಂದುವರಿಯುತ್ತಿದ್ದ ಕಾಲದಲ್ಲಿ, ಮತ್ತು ನಾವು ಬ್ರಿಟಿಷ್ ವಸ್ತುಗಳ ಬಹಿಷ್ಕಾರವನ್ನು ಬೋಧಿಸುತ್ತಿದ್ದಾಗ, ಲ್ಯಾಂಕಷೈರಿನೊಂದಿಗೆ ಒಪ್ಪಂದವನ್ನು ಕೈಗೂಡಿಸಿಕೊಳ್ಳುವ ಗಂಡೆದೆಯನ್ನು ಪಡೆದಿತ್ತು ಕಾಂಗ್ರೆಸ್ಸಿನ ದೃಷ್ಟಿಯಿಂದ ಇದು ರಾಷ್ಟ್ರೀಯ ಧ್ಯೇಯವನ್ನು ಅಸಹ್ಯರೀತಿಯಲ್ಲಿ ಬಿಟ್ಟುಕೊಟ್ಟ ಪ್ರಸಂಗವಾಗಿತ್ತು, ಮತ್ತು ಅದರ ಲಕ್ಷಣವದೇ ಎಂದು ಹೇಳಲಾಯಿತು ಕೇಂದ್ರಶಾಸನ ಸಭೆಯ ಬೊಂಬಾಯಿ ಕಾರ್ಖಾನೆಯ ಮಾಲೀಕರ ಪ್ರತಿನಿಧಿಯು ಕೂಡ ನಮ್ಮಲ್ಲನೇಕರು ಸೆರೆಮನೆಯಲ್ಲಿದ್ದಾಗ ಕಾಂಗ್ರೆಸ್ಸನ್ನೂ 'ತೀವ್ರಗಾಮಿಗಳ'ನ್ನೂ ತೆಗಳಿದರು

ಕಾಂಗ್ರೆಸ್ ಮತ್ತು ರಾಷ್ಟ್ರೀಯತಾದೃಷ್ಟಿಗಳಿಂದಲೂ ಸಹ, ಭಾರತದಲ್ಲಿ ಕಳೆದ ಕೆಲವು ವರ್ಷಗಳಿಂದ ಅನೇಕ ಬಂಡವಾಳಗಾರ ಅಂಶಗಳು ವಹಿಸಿರುವ ಪಾತ್ರವು ಅಪಕೀರ್ತಿಕರವಾದುದು ಒಟ್ಟಾವ ಒಪ್ಪಂದವು ತತ್ಕಾಲಕ್ಕೆ ಕೆಲವು ಸಣ್ಣ ಗುಂಪು

ಗಳಿಗೆ ಉಪಕಾರ ಮಾಡಿರಬಹುದು ಆದರೆ ಒಟ್ಟಿನಲ್ಲಿ ಭಾರತೀಯ ಕೈಗಾರಿಕೆಗಳ ಯೋಗಕ್ಷೇಮದ ದೃಷ್ಟಿಯಿಂದ ಅದು ಕೆಟ್ಟದ್ದಾಗಿದ್ದು, ಅದನ್ನು ಬ್ರಿಟಿಷ್ ಬಂಡವಾಳ ಮತ್ತು ಕೈಗಾರಿಕೆಗಳಿಗೆ ಇನ್ನೂ ಹೆಚ್ಚಾಗಿ ಅಧೀನವನ್ನಾಗಿಯೂ ಸಹ ಮಾಡಿತು. ಅದು ಜನಜಂಗುಳಿಗೆ ಹಾನಿಕರವಾಗಿತ್ತು ನಮ್ಮ ಹೋರಾಟವು ನಡೆಯುತ್ತಿದ್ದಾಗ ಸಾವಿರಾರು ಮಂದಿ ಸೆರೆಮನೆಯಲ್ಲಿದ್ದಾಗ ಆ ಸಂಧಾನವು ನಡೆದುದು ಪ್ರತಿಯೊಂದು ಡೊಮಿನಿಯನ್ನೂ ಅತಿ ಕಠಿಣವಾದ ಕರಾರುಗಳನ್ನು ಇಂಗ್ಲೆಂಡಿನಿಂದ ಕಸಿದು ಕೊಂಡಾಗ, ಭಾರತಕ್ಕೆ ಮಾತ್ರ ಇಂಗ್ಲೆಂಡಿಗೆ ಬಹುತರವಾಗಿ ದಾನವೊಂದನ್ನು ಕೊಡುವ ಸುಸಮಯವು ಲಭಿಸಿತು ಕಳೆದ ಕೆಲವು ವರ್ಷಗಳಲ್ಲಿ ಸಹ ಆರ್ಥಿಕ ಅತಿ ಲಾಭಾಕಾಂಕ್ಷ ಸಾಹಸಿಗಳು, ಚಿನ್ನ ಬೆಳ್ಳಿಗಳಲ್ಲಿ ವ್ಯಾಪಾರ ನಡೆಯಿಸಿ ಭಾರತಕ್ಕೆ ನಷ್ಟ ಮಾಡಿದ್ದಾರೆ

ದೊಡ್ಡದೊಡ್ಡ ಜಮೀನ್‌ದಾರರೂ ತಾಲ್ಲೂಕುದಾರರೂ ಅಂತೂ ಚಕ್ರ ಗೋಷ್ಠಿಯಲ್ಲಿ ಕಾಂಗ್ರೆಸ್ಸಿಗೆ ಸಂಪೂರ್ಣ ವಿರುದ್ಧವಾಗಿ ನಾಲುಗಟ್ಟಿ ನಿಂತರು. ಶಾಸನಭಂಗ ಚಳವಳಿಯ ಕಾಲದಲ್ಲೆಲ್ಲಾ ಆದ್ಯಂತವಾಗಿ ಅವರು ಬಹಿರಂಗವಾಗಿಯೂ ಕೆಣಕುತ್ತಲೂ ತಾವು ಸರಕಾರದ ಕಡೆ, ಎಂದು ಉಗ್ಗಡಿಸಿದರು. ವಿವಿಧ ಪ್ರಾಂತಗಳಲ್ಲಿ ಆರ್ಡಿನೆನ್ಸುಗಳನ್ನೊಳಗೊಂಡ ದಬ್ಬಾಳಿಕೆಯ ಶಾಸನಗಳನ್ನು ಸರಕಾರದವರು ಜಾರಿಗೆ ತಂದುದು ಅವರ ಸಹಾಯದಿಂದಲೇ ಸಂಯುಕ್ತ ಪ್ರಾಂತಗಳ ಶಾಸನ ಸಭೆಯಲ್ಲಿ ಜಮೀನ್‌ದಾರ ಸದಸ್ಯರ ಬಹುಭಾಗವು ಶಾಸನ ಭಂಗ ಚಳವಳಿಯ ಸೆರೆಯಾಳುಗಳ ಬಂಧವಿಮೋಚನೆಗೆ ವಿರುದ್ಧವಾಗಿ ಅಭಿಪ್ರಾಯನ್ನಿತ್ತಿತು.

೧೯೨೧ ಮತ್ತು ೧೯೩೦ ರಲ್ಲಿ, ಜನಜಂಗುಳಿಯ ಒತ್ತಡದಿಂದ ಮೇಲೆ ಬೀಳುವಂತೆ ತೋರಿಕೊಂಡ ಚಳವಳಿಗಳನ್ನು ಗಾಂಧಿಜಿಯವರು ಹೂಡಲೇಬೇಕಾಗಿ ಬಂದಿತೆಂಬ ಕಲ್ಪನೆಯು ಶುದ್ಧ ತಪ್ಪು ಜಂಗುಳಿ ಕಂಪನಗಳಿದ್ದುದೇನೋ ನಿಜ ಆದರೆ ಎರಡು ಸಂದರ್ಭಗಳಲ್ಲೂ, ಬೆಳವಣಿಗೆಯ ಗತಿಯನ್ನು ಹೆಚ್ಚಿಸಿದವರು ಗಾಂಧಿಜಿ ೧೯೨೧ ರಲ್ಲಿ ಅವರು ಬಹುತರವಾಗಿ ಒಬ್ಬರೇ ಕಾಂಗ್ರೆಸ್ಸನ್ನು ನಡೆಯಿಸಿ, ಅಸಹಕಾರಕ್ಕೆ ಅದನ್ನು ತಳ್ಳಿದರು ೧೯೩೦ ರಲ್ಲಿ, ಅವರು ಅದನ್ನು ಯಾವರೀತಿಯಲ್ಲಾದರೂ ವಿರೋಧಿಸಿದ್ದರೆ, ಮೇಲೆಬೀಳುವ ಮತ್ತು ಪರಿಣಾಮಕಾರಿಯಾದ ಪ್ರತ್ಯಕ್ಷ ಕಾರ್ಯ ಚಳವಳಿಯನ್ನು ಕೈಗೊಳ್ಳಲು ಸ್ವಲ್ಪವೂ ಸಾಧ್ಯವಾಗುತ್ತಿರಲೇ ಇಲ್ಲ

ವೈಯಕ್ತಿಕ ಸ್ವಭಾವದ ಅವಿವೇಕವಾದ ಮತ್ತು ಅರೆತಿಳವಳಿಕೆಯ ವಿಮರ್ಶೆಗಳು ನಡೆಯುತ್ತಿರುವುದು ದೌರ್ಭಾಗ್ಯವೇ ಸರಿ ಏಕೆಂದರೆ ಅವು ನಿಜವಾದ ಸಮಸ್ಯೆಗಳಿಂದ ಗಮನವನ್ನು ಹೊರಳಿಸುತ್ತವೆ ಗಾಂಧಿಜಿಯವರ ನಿಸ್ಪೃಹತೆ ಆಶಯಗಳ ಮೇಲೆ ಬೀಳುವುದೆಂದರೆ ತನಗೆ ತಾನು, ತನ್ನ ಪಕ್ಷಕ್ಕೆ ತಾನು ಹಾನಿ

ತಂದುಕೊಂಡಂತೆ. ಏಕೆಂದರೆ ಭಾರತದ ಲಕ್ಷಾಂತರ ಜನಗಳಿಗೆ ಅವರು ಸತ್ಯದ ಸಾಕಾರಮೂರ್ತಿ ಮತ್ತು ಅವರನ್ನು ಅತಿ ಸ್ವಲ್ಪಮಟ್ಟಿಗಾದರೂ ತಿಳಿದುಕೊಂಡಿರುವವರು, ಸರಿಯಾದ ಕಾರ್ಯವನ್ನು ಮಾಡಲು ಅವರಲ್ಲಿರುವ ಉಜ್ವಲ ಶ್ರದ್ಧೆಯನ್ನು ಮನಗಾಣುತ್ತಾರೆ.

ಭಾರತದಲ್ಲಿ ಕಮ್ಯೂನಿಸ್ಟರು, ದೊಡ್ಡದೊಡ್ಡ ಊರುಗಳ ಕೈಗಾರಿಕೆಯ ಕೂಲಿಗಳೊಂದಿಗೆ ಸಂಪರ್ಕವನ್ನು ಹೊಂದಿದ್ದಾರೆ. ಅವರಿಗೆ ಗ್ರಾಮಾಂತರಗಳನ್ನು ಕುರಿತ ತಿಳಿವಳಿಕೆಯಾಗಲಿ ಅಥವಾ ಅವುಗಳ ಸಂಪರ್ಕವಾಗಲಿ ಇಲ್ಲ. ಕೈಗಾರಿಕೆಯ ಕೆಲಸಗಾರರು ಮುಖ್ಯರು (ಮತ್ತು ಮುಂದೆ ಇನ್ನೂ ಹೆಚ್ಚಾಗಿ ಮುಖ್ಯರಾಗುವ ಸಂಭವವಿದೆ) ಎಂಬುದು ನಿಜ. ಆದರೆ ಬೇಸಾಯಗಾರರ ಮುಂದೆ ಅವರು ಎರಡನೆಯ ಸ್ಥಾನವನ್ನು ತೆಗೆದುಕೊಳ್ಳಬೇಕು. ಏಕೆಂದರೆ ಇಂದು ಭಾರತದಲ್ಲಿರುವ ಸಮಸ್ಯೆಯು ಬೇಸಾಯಗಾರ ಜಂಗುಳಿಯದು. ಕಾಂಗ್ರೆಸ್ ಕೆಲಸಗಾರರಾದರೊ ಗ್ರಾಮಾಂತರ ಕ್ಷೇತ್ರಗಳಲ್ಲೆಲ್ಲಾ ಹರಡಿಕೊಂಡುಬಿಟ್ಟಿದ್ದಾರೆ, ಸಾಮಾನ್ಯ ಗತಿಯಲ್ಲಿ ಕಾಂಗ್ರೆಸ್ಸು ಒಂದು ಅತಿದೊಡ್ಡ ಬೇಸಾಯಗಾರ ಸಂಘಟನೆಯಾಗಿ ಬೆಳೆಯಬೇಕು. ತಾತ್ಕಾಲಿಕ ಧ್ಯೇಯವನ್ನು ದೊರಕಿಸಿಕೊಂಡಮೇಲೆ ಬೇಸಾಯಗಾರರು ಅತ್ಯಪೂರ್ವವಾಗಿ ಕ್ರಾಂತಿ ಪ್ರವೃತ್ತಿಯವರಾಗಿರುತ್ತಾರೆ. ಭವಿಷ್ಯತ್ತಿನಲ್ಲಿ ಯಾವಾಗಲೋ ಒಮ್ಮೆ ಎಂದಿನ ವಾದಿ ಪಟ್ಟಣ, ಪ್ರತಿವಾದಿ ಹಳ್ಳಿ, ವಾದಿ ಕೈಗಾರಿಕೆ ಕೂಲಿಕಾರ, ಪ್ರತಿವಾದಿ ಬೇಸಾಯಗಾರ, ಸಮಸ್ಯೆಯು ಭಾರತದಲ್ಲಿಯೂ ಸಹ ಮೇಲೇಳುವುದರ ಸಂಭವವಿದೆ.

ಅನೇಕ ಜನ ಕಾಂಗ್ರೆಸ್ ಮುಖಂಡರು ಮತ್ತು ಕೆಲಸಗಾರರೊಂದಿಗೆ ಅನ್ಯೋನ್ಯವಾಗಿ ಜೊತೆಗೂಡಿ ಕೆಲಸಮಾಡುವ ಸುಯೋಗವು ನನಗೆ ದೊರೆತಿದೆ. ಅವರಿಗಿಂತ ಉತ್ಕೃಷ್ಟರಾದ ಸ್ತ್ರೀಪುರುಷರು ನನಗೆ ಬೇಡವೆಂದು ಭಾವಿಸುತ್ತೇನೆ. ಆದರೂ ಸತ್ವಯುಕ್ತ ಸಮಸ್ಯೆಗಳಲ್ಲಿ ನಾನು ಅವರ ಅಭಿಪ್ರಾಯದಿಂದ ಭಿನ್ನವಾದ ಅಭಿಪ್ರಾಯವನ್ನು ಮೆರದಿದ್ದೇನೆ. ಮತ್ತು ಅನೇಕವೇಳೆ, ನನಗೆ ಸ್ವತಸ್ಸಿದ್ಧವಾಗಿದ್ದಂತೆ ಕಾಣಿಸಿದ ವಿಷಯವೊಂದನ್ನು ಅವರು ತಿಳಿದುಕೊಳ್ಳದೆ ಅಥವಾ ಅದರ ಸ್ವಾರಸ್ಯವನ್ನು ಗ್ರಹಿಸದೆ ಹೋದಾಗ, ನನಗೆ ಸ್ವಲ್ಪಮಟ್ಟಿಗೆ ಬೇಸರಿಕೆಯಾಗಿದೆ. ಅದಕ್ಕೆ ಕಾರಣವು ಬುದ್ಧಿಶಕ್ತಿಯ ವಾರಡಿಯಲ್ಲ. ಹೇಗೋ ಅಂತೂ ನಾವು ನಾವು ಬೇರೆ ಬೇರೆ ಕಲ್ಪನವಿಜ್ಞಾನಗಳ ಮಾರ್ಗಗಳಲ್ಲಿ ನಡೆಯುತ್ತಿದ್ದೆವು. ಈ ಎಲ್ಲೆಕಟ್ಟುಗಳನ್ನು ಹಠಾತ್ತಾಗಿ ಹಾಯುವುದು ಎಷ್ಟು ಕಷ್ಟವೆಂಬುದನ್ನು ಅರಿತುಕೊಂಡೆ. ಅವು ಜೀವನದ ವಿವಿಧ ವೇದಾಂತಗಳನ್ನು ವ್ಯವಸ್ಥಾಪಿಸುತ್ತವೆ, ಮತ್ತು ಕ್ರಮಕ್ರಮವಾಗಿ ತಿಳಿಯದೆಯೇ ನಾವು ಅವುಗಳೊಳಕ್ಕೆ ಸೇರಿ ಬೆಳೆದು ಹೋಗುತ್ತೇವೆ. ಇನ್ನೊಂದು ಪಕ್ಷವನ್ನು ದೂಷಿಸುವುದು ಅಪ್ರಯೋಜಕ. ಸಮತಾವಾದವು, ಜೀವನ ಮತ್ತು ಅದರ ಸಮಸ್ಯೆಗಳನ್ನು ಕುರಿತ ಒಂದು ವಿಧವಾದ ಮಾನಸಿಕ ದೃಷ್ಟಿಕ್ಷೇಪವನ್ನೊಳಗೊಳ್ಳುತ್ತದೆ. ಅದು ಕೇವಲ

ತರ್ಕಶಾಸ್ತ್ರವನ್ನು ಮೀರಿದುದು ವಂಶಪಾರಂಪರ್ಯ, ಲಾಲನೆಪಾಲನೆ ಮತ್ತು ಹಿಂದಿನ ಮತ್ತು ಇಂದಿನ ಆವರಣಗಳ ಅವ್ಯಕ್ತ ಪ್ರಭಾವಗಳು, ಇವುಗಳನ್ನವಲಂಬಿಸಿದ ದೃಷ್ಟಿಕ್ಷೇಪಗಳೂ ಹಾಗೆಯೇ ಆದರೆ ಕಟುವಾಗಿ ಹೇಳಿ ಬರೆಯಿಸುವ ಜೀವನವು ಮಾತ್ರ ಹೊಸಹಾದಿಗಳಿಗೆ ಬಲಾತ್ಕಾರದಿಂದ ತಳ್ಳುತ್ತದೆ. ಮತ್ತು ಪರ್ಯವಸಾನದಲ್ಲಿ (ಇನ್ನೂ ಕಷ್ಟವಾದ ವಿಷಯ) ನಮ್ಮನ್ನು ಭಿನ್ನವಾಗಿ ಯೋಚಿಸುವಂತೆ ಮಾಡುತ್ತದೆ ಈ ಮಾರ್ಪಾಡಿನ ಗೆಯ್ಮೆಗೆ ಪ್ರಾಯಃ ನಾವೂ ಸ್ವಲ್ಪ ಸಹಾಯ ಮಾಡುತ್ತೇವೆ. ಪ್ರಾಯಃ

" ಆವ ಬಿದಿಯಿನ್ ಪಾರಾಗೆ ಸಾಗುವೆವೊ
ಅದೆಬಟ್ಟೆಯೊಳದೆಬಿದಿಯನೆದುರ್ಗೊಳ್ವೆವಡಿಗಡಿಗೆ ನಾವು "

## ೪೨

# ಧರ್ಮವೆಂದರೇನು ?

ಶಾಂತಮಯವಾಗಿಯೂ ಏಕತಾನದಿಂದ ಕೂಡಿಯೂ ಇದ್ದ ನಮ್ಮ ಸೆರೆ ಮನೆಯ ನಿತ್ಯಜೀವನವು ೧೯೩೨ ರ ಸೆಪ್ಟಂಬರನಲ್ಲಿ ಸಿಡಿಮದ್ದೊಂದರಿಂದ ಹಠಾತ್ತಾಗಿ ತಲೆಕೆಳಗಾಯಿತು ಹಿಂದುಳಿದ ವರ್ಗದವರಿಗೆ ಮಿ॥ ರಾಮ್ಸೆ ಮ್ಯಾಕ್ಡೊನಾಲ್ಡರ ಕೋಮುವಾರು ಒಪ್ಪಂದವು ಪ್ರತ್ಯೇಕ ಚುನಾವಣೆಯನ್ನು ಕೊಟ್ಟುದಕ್ಕಾಗಿ ಅಸಮ್ಮತಿ ಯನ್ನು ಸೂಚಿಸಲು ಗಾಂಧಿಜಿಯವರು 'ಆಮರಣಾಂತ ಉಪವಾಸ ವ್ರತ' ವನ್ನು ಕೈಗೊಳ್ಳಲು ನಿರ್ಧರಿಸಿದ್ದರೆಂಬ ಸುದ್ದಿ ಬಂದಿತು ಪ್ರಜಾಕೋಟಿಗೆ ಧಕ್ಕೆಗಳ ಮೇಲೆ ಧಕ್ಕೆಗಳನ್ನು ಬಡಿವ ಅವರ ಅಳವೆಷ್ಟು ? ಕೂಡಲೆ ನನ್ನ ತಲೆಗೆ ಬಗೆ ಬಗೆಯ ಭಾವನೆಗಳು ನುಗ್ಗಿದುವು ನನ್ನ ಮುಂದೆ ಪರಿಪರಿಯ ಸಂಭವಗಳು ಮತ್ತು ಯದೃಚ್ಛೆಗಳು ಎದ್ದು ನಿಂತು ನನ್ನ ಸಮಚಿತ್ತತೆಯನ್ನು ಸಂಪೂರ್ಣವಾಗಿ ಮಗುಚಿ ಹಾಕಿದುವು, ಮುಂದಿನ ಮಾರ್ಗಕ್ಕೆ ಯಾವ ಬೆಳಕೂ ಇಲ್ಲದೆ ಎರಡು ದಿನಗಳವರೆಗೆ ನಾನು ಅಂಧಕಾರದಲ್ಲಿದ್ದೆ ಗಾಂಧಿಜಿಯವರ ಕಾರ್ಯದ ಕೆಲವು ಪರಿಣಾಮಗಳನ್ನು ನೆನೆದಾಗ ಎದೆ ಕುಗ್ಗಿಹೋಯಿತು ಆತ್ಮೀಯ ಸಂಬಂಧವು ಸಾಕಷ್ಟು ಪ್ರಬಲ ವಾಗಿದ್ದು, ಅವರನ್ನು ಪುನಃ ನೋಡದಿರಬಹುದೆಂಬ ಬೇಗುದಿಯಿಂದ ಮರುಗಿದೆ ಇಂಗ್ಲೆಂಡಿಗೆ ಅವರು ಯಾನ ಮಾಡಹೊರಡುತ್ತಿದ್ದಾಗ ಹಡಗಿನ ಮೇಲೆ ಅವರನ್ನು ನೋಡಿ ಒಂದು ವರ್ಷದ ಮೇಲಾಗಿತ್ತು ಅದೇ ನನಗೆ ಅವರ ಕಡೆಯ ದರ್ಶನ ವಾಗಲಿತ್ತೆ ?

ಕೇವಲ ಚುನಾವಣೆಯ ಪ್ರಶ್ನೆಯೊಂದಾದ ಪಾರ್ಶ್ವಿಕ ಸಮಸ್ಯೆಯೊಂದನ್ನು ತಮ್ಮ ಅಂತಿಮತ್ಯಾಗಕ್ಕೆಂದು ಆರಿಸಿಕೊಂಡುದರಿಂದ ಅವರ ಬಗ್ಗೆ ನಾನು ಜುಗುಪ್ಸೆ ಪಟ್ಟೆ ನಮ್ಮ ಬಿಡುಗಡೆಯ ಚಳುವಳಿಯ ಫಲಿತಾಂಶವೇನಾಗುವುದು ? ವಿಸ್ತಾರ ಸಮಸ್ಯೆಗಳು, ತಾತ್ಕಾಲಿಕವಾಗಿಯಾದರೂ, ಹಿನ್ನೆಲೆಗೆ ತಳ್ಳಲ್ಪಟ್ಟು ಮಾಸವೆ ? ತಮ್ಮ ಸದ್ಯಃ ಪಕ್ಷದ ಗುರಿಯನ್ನವರು ಸಾಧಿಸಿ, ಹಿಂದುಳಿದ ಜನಾಂಗಕ್ಕೆ ಜಂಟಿ ಚುನಾವಣೆ ಯನ್ನು ದೊರಕಿಸಿಕೊಂಡರೆ, ಅದರಿಂದ ಒಂದು ಪ್ರತೀಕಾರವೂ ತುಸ ಸಾಧಿಸಿ ಕೊಂಡಂತಾಯಿತು ಮತ್ತು ಸ್ವಲ್ಪಕಾಲದವರೆಗೆ ಹೆಚ್ಚಾಗಿ ಇನ್ನೇನನ್ನೂ ಮಾಡಕೆಲಸ ವಿಲ್ಲವೆಂಬ ಭಾವನೆಯೂ ಫಲಿತವಾಗುವುದಿಲ್ಲವೆ ? ಸರಕಾರವು ರಚಿಸಿದ ಕೋಮು ವಾರು ಒಪ್ಪಂದವನ್ನೂ ಅದರ ಸಾಮಾನ್ಯ ವಿಷಯ ವಿನ್ಯಾಸವನ್ನೂ ಅವರು ಮಾನ್ಯ ಮಾಡಿದಂತೆಯೂ, ಅಂಶತಃ ಸ್ವೀಕರಿಸಿದಂತೆಯೂ ಆಗಲಿಲ್ಲವೆ ? ಇದು ಅಸಹಕಾರ

ಮತ್ತು ಶಾಸನ ಭಂಗಗಳಿಗೆ ಅನುಸಾರವಾಗಿತ್ತೆ? ಅಷ್ಟೊಂದು ತ್ಯಾಗ ಮತ್ತು ವೀರವ್ಯವಸಾಯಗಳಾದಮೇಲೆ ನಮ್ಮ ಸಂಗ್ರಾಮವು ಒಂದು ಬಗೆಯ ಕ್ಷುಲ್ಲಕತನದಲ್ಲಿ ಕರಗಿ ಹೋಗಬೇಕೆ?

ರಾಜಕೀಯ ಸಮಸ್ಯೆಯೊಂದನ್ನು ಕುರಿತ ಅವರ ಧಾರ್ಮಿಕ ಮತ್ತು ಮೃದು ರಾಗ ಪ್ರಧಾನ ಪ್ರಸ್ತಾನವನ್ನೂ ಪದೇಪದೇ ತತ್ಸಂಬಂಧದಲ್ಲಿ ದೇವರನ್ನು ಕುರಿತು ಅನ್ವಯ ಮಾಡುವುದನ್ನೂ ಕಂಡು ನಾನು ಕೋಪಗೊಂಡೆ. ಉಪವಾಸ ವ್ರತದ ದಿನವನ್ನು ಕೂಡ ದೇವರೇ ಗೊತ್ತುಮಾಡಿದನೆಂಬುವದನ್ನು ಅವರು ಸೂಚಿಸುವಂತೆ ಕೂಡ ತೋರಿತು ಎಷ್ಟು ಭಯಂಕರವಾದ ಆದರ್ಶ!

ಬಾಪುವೊಂದು ವೇಳೆ ಸತ್ತರೆ! ಆಗ ಭಾರತವು ಹೇಗಿರುವುದು? ಅದರ ರಾಜಕಾರಣದ ಗತಿಯೇನು? ಭವಿಷ್ಯತ್ತು ಜಡವಾಗಿಯೂ ಅಂಧಕಾರಮಯವಾಗಿಯೂ ಇರುವಂತಿದ್ದು ಅದನ್ನು ನೆನದಾಗ ನಿರಾಶೆಯು ನನ್ನ ಹೃದಯವನ್ನು ಸೂರೆಗೊಳ್ಳುತ್ತಿತ್ತು

ಹೀಗೆ ಯೋಚನೆಯಲ್ಲೇ ಮುಳುಮುಳುಗಿ ಹೋದಂತೆಲ್ಲ ಗೊಂದಲ, ಕೋಪ, ನಿರಾಶೆ ಮತ್ತು ಈ ಮೇಲುಬ್ಬರಕ್ಕೆ ಕಾರಣರಾದ ಅವರನ್ನು ಕುರಿತ ಪ್ರೇಮ, ಇವು ನನ್ನ ತಲೆಯಲ್ಲಿ ಆಳಿದುವು ಏನುಮಾಡಬೇಕೆಂಬುದೇ ನನಗೆ ತೋರಲಿಲ್ಲ ಯಾರನ್ನು ಕಂಡರೂ ಎಲ್ಲಕ್ಕಿಂತ ಹೆಚ್ಚಾಗಿ ನನ್ನನ್ನು ಕಂಡರೂ ಸಿಡುಕುತ್ತ ಮುಂಗೋಪಿಯಾಗಿದ್ದೆ

ಬಳಿಕ ನನ್ನಲ್ಲಿ ಅಲೌಕಿಕವಾದ ಒಂದು ವಿಶೇಷ ನಡೆಯಿತು ವಿಕ್ಷೋಭೆಯ ಸಂದುಕಟ್ಟೊಂದನ್ನು ಅನುಭವಿಸಿದೆ ಅದು ಮುಗಿದಮೇಲೆ ಸ್ವಲ್ಪ ಹೆಚ್ಚು ಸಮಾಧಾನವಾಯಿತು ಭವಿಷ್ಯತ್ತು ಅಷ್ಟು ಕತ್ತಲಾಗಿದ್ದಂತೆ ತೋರಲಿಲ್ಲ ಕೊನೆಯ ಕ್ಷಣದಲ್ಲಿ ಬಾಪು ನ್ಯಾಯವಾದುದನ್ನೇ ಮಾಡುವ ವಿಚಿತ್ರ ಜಾಣ್ಮೆಯನ್ನು ಪಡೆದಿದ್ದರು ಅವರ ಕಾರ್ಯವು—ನನ್ನ ದೃಷ್ಟಿಯಿಂದಂತೂ ಅದನ್ನು ಸಮರ್ಥಿಸಲು ಕಷ್ಟ—ಅದು ನಿಯಮಿತವಾಗಿದ್ದ ಸಂಕುಚಿತ ಕ್ಷೇತ್ರದಲ್ಲಿ ಮಾತ್ರವಲ್ಲದೆ, ನಮ್ಮ ರಾಷ್ಟ್ರೀಯ ಸಂಗ್ರಾಮದ ವಿಸ್ತಾರ ಮುಖಗಳಲ್ಲಿಯೂ ಮಹಾ ಫಲಗಳಿಗೆ ಕಾರಣವಾಗಬಹುದು. ಒಂದುವೇಳೆ ಬಾಪು ಮರಣಹೊಂದಿದರೂ ಸ್ವಾತಂತ್ರ್ಯ ಸಂಗ್ರಾಮವು ನಡೆಯುತ್ತಲೇ ಹೋಗುವುದು ಆದುದರಿಂದ ಏನು ಸಂಭವಿಸಿದರೂ ಒಬ್ಬನು ಅದಕ್ಕೆ ಸಿದ್ಧನಾಗಿದ್ದು ಹೊಂದಿಕೊಳ್ಳಬೇಕು ಗಾಂಧಿಜಿಯವರ ಮರಣಕ್ಕೂ ಅಕ್ಕುಳಿಸದೆ ಮುಖಕೊಡಲು ಮನಸ್ಸನ್ನು ಗಟ್ಟಿಮಾಡಿ ಪ್ರಪಂಚವನ್ನೂ ಅದು ನೀಡಬಹುದಾದ ಎಲ್ಲವನ್ನೂ ಎದುರಿಸಲು ಸಮಾಧಾನ, ಸ್ವಾಸ್ಥ್ಯ, ಧೃತಿಗಳನ್ನು ಪಡೆದವನಾದೆ

ಆಮೇಲೆ ಇಡೀ ನಾಡಿನಲ್ಲೆಲ್ಲ ಉಂಟಾದ ದೊಡ್ಡ ಮೇಲುಬ್ಬರದ ಸುದ್ದಿ ಬಂದಿತು ಹಿಂದೂ ಸಮಾಜದ ಒಳಗೆ ಉತ್ಸಾಹದ ಐಂದ್ರಜಾಲಿಕ ಅಲೆಯು ಹರಿದು, ಅಸ್ಪೃಶ್ಯತೆಯು ಪ್ರಳಯಾಹುತಿಯಾದಂತೆ ಕಂಡುಬಂದಿತು ಯರವ್ಡಾ ಸೆರೆಮನೆಯಲ್ಲಿ ಕುಳಿತುಕೊಂಡಿರುವ ಈ ಪುಟ್ಟಾಳು ಎಂಥ ಮಾಯಾವಿ, ಜನರ ಎದೆಗಳನ್ನು ಕದಲಿಸುವ ಸಲುವಾಗಿ ಸೂತ್ರಗಳನ್ನು ಹೇಗೆಳೆಯಬೇಕೆಂಬುದನ್ನು ಎಷ್ಟು ಚೆನ್ನಾಗಿ ಅರಿತಿದ್ದರು ಎನ್ನಿಸಿತು !

ಅವರಿಂದ ನನಗೊಂದು ತಂತಿ ಬಂದಿತು ನನಗೆ ಕಾರಾಗೃಹ ಶಿಕ್ಷೆಯಾದಂದಿನಿಂದ ಅದೇ ಅವರ ಮೊದಲ ಸಂದೇಶ ದೀರ್ಘವಾದ ಅಂತರವಾದಮೇಲೆ ಅವರ ಸಂದೇಶವನ್ನು ತಿಳಿಯುವುದು ನನಗೆ ಒಳ್ಳೆಯದೇ ಆಯಿತು ತಮ್ಮ ತಂತಿಯಲ್ಲವರು ಹೀಗೆ ಹೇಳಿದರು

> ಯಾತನೆಯ ಈ ದಿನಗಳಲ್ಲೆಲ್ಲ ನೀವು ಬಗೆಗಣ್ಣಿನೆದುರಿದ್ದಿರಿ ನಿಮ್ಮ ಅಭಿಪ್ರಾಯವನ್ನು ತಿಳಿಯಲು ನಾನು ತುಂಬಾ ತವಕಗೊಂಡಿದ್ದೇನೆ ನಿಮ್ಮ ಅಭಿಪ್ರಾಯಕ್ಕೆ ನಾನೆಷ್ಟು ಬೆಲೆಗೊಡುತ್ತೇನೆಂಬುದನ್ನು ನೀವು ಬಲ್ಲಿರಿ ಇಂದುವನ್ನೂ [ಮತ್ತು] ಸರೂಪ್‌ಳ ಮಕ್ಕಳನ್ನೂ ನೋಡಿದೆ ಇಂದುವು ಗೆಲುಮೊಗದಿಂದಿದ್ದಳು ಮೈ ತುಂಬಿಕೊಂಡಿದ್ದಳು ನಾ ಸೌಖ್ಯವಾಗಿದ್ದೇನೆ ಉತ್ತರವನ್ನು ತಂತಿಕೊಡಿ ಪ್ರೇಮ

ಉಪವಾಸದ ಸಂಕಟದಲ್ಲಿ ಮತ್ತು ಬಹುಮುಖ ಕಾರ್ಯಗಳಲ್ಲಿ ಬಿಡುವಿಲ್ಲದೆ ಮಗ್ನರಾಗಿದ್ದಾಗ ಅವರು ನನ್ನ ಮಗಳ ಮತ್ತು ನನ್ನ ತಂಗಿಯ ಮಕ್ಕಳ ಭೇಟಿಯನ್ನು ನೆನೆದುದು, ಸಾಲದೆ ಇಂದಿರೆಯು ಮೈತುಂಬಿಕೊಂಡಿದ್ದಳೆಂಬುದನ್ನು ಸಹ ಸೂಚಿಸಿದುದು ಅಸಾಮಾನ್ಯವಾಗಿತ್ತು, ಆದರೂ ಅವರ ಸ್ವಭಾವೋಚಿತವಾಗಿತ್ತು ! [ನನ್ನ ತಂಗಿಯೂ ಕೂಡ ಆಗ ಸೆರೆಮನೆಯಲ್ಲಿದ್ದಳು ಮತ್ತು ಈ ಮಕ್ಕಳೆಲ್ಲ ಪುಣೆಯಲ್ಲಿ ಓದುತ್ತಿದ್ದರು) ಅವರು ಬಾಳಿನಲ್ಲಿ ಬಹಳ ಸಣ್ಣವೆಂದು ತೋರುವ, ಆದರೂ ಅದಕ್ಕೆ ರಸವೂಡಿಸುವ ಯಾವುದನ್ನೂ ಮರೆಯುವುದೇ ಇಲ್ಲ

ಚುನಾವಣೆಯ ಅಂಶವನ್ನು ಕುರಿತು ಒಂದು ಬಗೆಯ ಒಪ್ಪಂದಕ್ಕೆ ಬರಲಾಗಿದ್ದಿತೆಂದು ಆಗತಾನೆ ಸುದ್ದಿ ಬಂದಿತು. ಗಾಂಧಿಜಿಯವರಿಗೆ ಉತ್ತರವನ್ನು ಕಳುಹಿಸಲು ಸೆರೆಮನೆಯ ಸೂಪರಿಂಟೆನ್‌ಡೆಂಟರು ಸೌಜನ್ಯದಿಂದ ನನಗೆ ಅನುಮತಿಯನ್ನು ಕೊಟ್ಟರು ಮತ್ತು ನಾನು ಈ ಕೆಳಗೆ ಕಂಡ ತಂತಿಯನ್ನು ಅವರಿಗೆ ಕಳುಹಿಸಿದೆ

> ಒಂದು ವಿಧವಾದ ಒಪ್ಪಂದವಾಯಿತೆಂಬ ನಿಮ್ಮ ತಂತಿ ಮತ್ತು ಸಂಕ್ಷಿಪ್ತ ವರ್ತಮಾನವು ನನ್ನಲ್ಲಿ ಉಪಶಾಂತಿಯನ್ನೂ ಆನಂದವನ್ನೂ ತುಂಬಿದುವು ಉಪವಾಸವನ್ನು ಕೈಗೊಳ್ಳುವ ನಿಮ್ಮ ನಿರ್ಧಾರದ ಮೊದಲ ಸುದ್ದಿಯಿಂದ ಮಾನಸಿಕಯಾತನೆಯೂ ಗೊಂದಲವೂ ಆಯಿತು ಆದರೆ ಕೊನೆಗೆ ಆಶಾವಾದವೇ ದಿಗ್ವಿಜಯಿಯಾಗಿ ನನಗೆ ಮನಶ್ಶಾಂತಿ ಲಭಿಸಿತು ಅಣಗಿಸ

ಲ್ಪಟ್ಟು ಹೀನಾವಸ್ಥೆಯಲ್ಲಿರುವ ವರ್ಗದವರಿಗೆ ಯಾವ ತ್ಯಾಗವೂ ಹೆಚ್ಚಲ್ಲ ಅತ್ಯಂತ ದೀನರ ಸ್ವಾತಂತ್ರ್ಯದಿಂದಲೇ ಸ್ವಾತಂತ್ರ್ಯವನ್ನು ನಿರ್ಣಯಿಸಬೇಕು, ಆದರೆ ಇತರ ಸಮಸ್ಯೆಗಳು ಒಂದೇ ಒಂದಾದ ಗುರಿಯನ್ನು ಮರೆಮಾಡುವ ಅಪಾಯವಿದೆಯೆಂದು ಭಾವಿಸುತ್ತೇನೆ. ಧಾರ್ಮಿಕ ದೃಷ್ಟಿಯಿಂದ ತೀರ್ಮಾನಿಸಲಾರೆ ಇತರರು ನಿಮ್ಮ ಕಾರ್ಯನೀತಿಗಳನ್ನು ದುರುಪಯೋಗ ಪಡಿಸಿಕೊಳ್ಳುವ ಅಪಾಯಸಂಭವವಿದೆ, ಆದರೆ ಮಾಯಾವಿಗೆ ಉಪದೇಶ ಮಾಡಬಲ್ಲೆನೆಂದು ನಾನು ಹೇಗೆ ಭಾವಿಸಲಿ ಪ್ರೇಮ

'ಒಪ್ಪಂದ' ವೊಂದು ಪುಣೆಯಲ್ಲಿ ನೆರೆದಿದ್ದ ಹಲವರಿಂದ ಸಹಿ ಮಾಡಲ್ಪಟ್ಟಿತು ಮತ್ತು ಅಸಾಧಾರಣ ವೇಗದಿಂದ ಬ್ರಿಟಿಷ್ ಪ್ರಧಾನ ಮಂತ್ರಿಗಳು ಅದನ್ನು ಅಂಗೀಕರಿಸಿ ತಮ್ಮ ಹಿಂದಿನ ಒಪ್ಪಂದವನ್ನು ಅದಕ್ಕನುಸಾರವಾಗಿ ವ್ಯತ್ಯಾಸಗೊಳಿಸಿದರು ಉಪವಾಸ ಮುಗಿಯಿತು ಅಂಥ ಒಪ್ಪಂದ ಕರಾರುಗಳನ್ನು ನಾನು ಬಹಳವಾಗಿ ಹೇಸುತ್ತಿದ್ದೆ ಆದರೆ ಪುಣೆಯ ಒಪ್ಪಂದವನ್ನು, ತದಂತರ್ಗತ ಅಂಶಗಳನ್ನು ಬಿಟ್ಟು ಸ್ವಾಗತಿಸಿದೆ

ಉದ್ದೀಪನವು ತಣ್ಣಗಾಗಿ ನಾವು ಸೆರೆಯ ದೈನಂದಿನ ಏಕತಾನಕ್ಕೆ ಮರಳಿದೆವು. ಹರಿಜನ ಚಳವಳಿಯೂ ಗಾಂಧಿಜಿಯವರ ಸೆರೆಮನೆಯಲ್ಲಿನ ಕಾರ್ಯಕಲಾಪಗಳ ವರ್ತಮಾನವೂ ನಮಗೆ ತಿಳಿದುವು ಮತ್ತು ನಾನು ಅವುಗಳಿಂದ ಹೆಚ್ಚು ಸಂತೋಷಪಡಲಿಲ್ಲ. ಅಸ್ಪೃಶ್ಯತೆಯನ್ನು ಕೊನೆಗಾಣಿಸಲು ಮತ್ತು ಹಿಂದುಳಿದ ದೌರ್ಭಾಗ್ಯ ವರ್ಗಗಳನ್ನು ಮೇಲಕ್ಕೆತ್ತಲು ಒಪ್ಪಂದಕ್ಕಿಂತ ಹೆಚ್ಚಾಗಿ, ಇಡೀ ದೇಶದಲ್ಲಿ ಸೃಷ್ಟಿತವಾಗಿದ್ದ ಧಾರ್ಮಿಕ ಸಂಗ್ರಾಮರೂಪದ ಉತ್ಸಾಹದಿಂದ ಮಹಾ ಪರಿಣಾಮವುಳ್ಳ ಪ್ರೋತ್ಸಾಹವು ಲಭಿಸಿತ್ತೆಂಬುದರಲ್ಲಿ ಸಂದೇಹವಿಲ್ಲ ಅದು ಸ್ವಾಗತಯೋಗ್ಯವಾದುದೇ ಆದರೆ ಶಾಸನ ಭಂಗಕ್ಕೆ ಹಾನಿತಟ್ಟಿತೆಂಬುದೂ ಅಷ್ಟೇ ಸ್ಪಷ್ಟವಾಗಿತ್ತು. ನಾಡಿನ ಗಮನವು ಇತರ ಸಮಸ್ಯೆಗಳಿಗೆ ತಿರುಗಿಸಲ್ಪಟ್ಟಿತು, ಮತ್ತು ಅನೇಕ ಕಾಂಗ್ರೆಸ್ ಕಾರ್ಯಕರ್ತರು ಹರಿಜನ ಸೇವೆಗೆ ತಿರುಗಿದ್ದರು ಪ್ರಾಯಶಃ ಇವರಲ್ಲನೇಕರು, ಸೆರೆಮನೆಗೆ ಹೋಗಬೇಕಾಗುವ ಅಪಾಯ ಸಂಭವ, ಅಥವಾ ಇದಕ್ಕಿಂತ ಕೆಡುಕಾದ ಲಾಠೀ ಏಟುಗಳು ಮತ್ತು ಆಸ್ತಿಗಳ ಜಫ್ತಿಗಳನ್ನೊಳಗೊಳ್ಳದ ಇನ್ನೂ ಕ್ಷೇಮಕರವಾದ ಕಾರ್ಯಕಲಾಪಗಳಿಗೆ ಮರಳಲು ನೆಪವನ್ನು ಹುಡುಕುತ್ತಿದ್ದರು. ಅದೂ ಸಹಜವೇ ಮತ್ತು ನಮ್ಮ ಸಹಸ್ರಾರು ಕಾರ್ಯಕರ್ತರು ಸದಾ ತೀವ್ರಬಾಧಾನುಭವ, ಗೃಹಚ್ಛಿದ್ರ ಮತ್ತು ಗೃಹನಾಶಗಳಿಗೆ ಸಿದ್ಧರಾಗಿರಬೇಕೆಂದು ನಿರೀಕ್ಷಿಸುವುದು ನ್ಯಾಯವಲ್ಲ ಆದರೂ ನಮ್ಮ ಮಹಾ ಚಳವಳಿಯು ಕ್ರಮಾಗತವಾಗಿ ನಾಶವಾಗುತ್ತಿದ್ದುದನ್ನು ನೋಡುವುದು ದುಃಖದಾಯಿಯಾಗಿತ್ತು ಹೇಗೂ ಶಾಸನ ಭಂಗವು ಇನ್ನೂ ನಡೆಯುತ್ತ ಸಾಗುತ್ತಿತ್ತು, ಮತ್ತು ಪ್ರಾಸಂಗಿಕವಾಗಿ ೧೯೩೩ ರ ಮಾರ್ಚಿ–ಏಪ್ರಿಲ್‌ಗಳ ಕಲ್ಕತ್ತಾ ಕಾಂಗ್ರೆಸ್‌ನಂತೆ ಜಂಗುಳಿಪ್ರದರ್ಶನಗಳು ನಡೆಯುತ್ತಿದ್ದುವು ಗಾಂಧಿಜಿಯವರು ಯರವ್‌ಡಾ ಸೆರೆಮನೆಯಲ್ಲಿದ್ದರು ಆದರೆ ಜನರನ್ನು ಭೇಟಿ ಮಾಡಲೂ ಹರಿಜನ ಚಳವಳಿ

ಗಳಿಗೆ ಆದೇಶಗಳನ್ನು ಕೊಡಲೂ ಕೆಲವು ಸೌಕರ್ಯಗಳನ್ನು ಹೊಂದಿದ್ದರು. ಹೇಗೋ, ಅಂತೂ ಇದು, ಅವರು ಸೆರೆಮನೆಯಲ್ಲಿದ್ದರಲ್ಲ ಎಂಬ ಭಾವನೆಯ ತೀಕ್ಷ್ಣತೆಯನ್ನು ತೆಗೆದುಹಾಕಿತು ಇವೆಲ್ಲವೂ ನನ್ನನ್ನು ಕುಗ್ಗಿಸಿದುವು

ಅನೇಕ ತಿಂಗಳುಗಳಾದ ಮೇಲೆ, ೧೯೩೩ ರ ಮೇ ತಿಂಗಳ ಮೊದಲಲ್ಲಿ ಗಾಂಧಿಜಿಯವರು ತಮ್ಮ ಇಪ್ಪತ್ತೊಂದು ದಿನಗಳ ಉಪವಾಸವ್ರತವನ್ನಾರಂಭಿಸಿದರು ಇದರ ಮೊದಲ ಸುದ್ದಿಯು ಪುನಃ ನನಗೆ ಧಕ್ಕೆ ಬಡಿದಿತ್ತು ಆದರೆ ಅದು ಅನಿವಾರ್ಯ ಪ್ರಸಕ್ತಿಯೆಂದು ಅದನ್ನು ಸ್ವೀಕರಿಸಿ, ಅದಕ್ಕೆ ನನ್ನನ್ನು ನಾನೇ ಶಿಕ್ಷಿಸಿಕೊಂಡೆ ಅವರು ಒಮ್ಮೆ ಪ್ರತಿಜ್ಞೆಮಾಡಿ ಸಾರ್ವಜನಿಕರಿಗೆ ಸಾರಿಬಿಟ್ಟಿದ್ದ ಮೇಲೆ, ಜನರು ಉಪವಾಸವನ್ನು ಬಿಟ್ಟುಬಿಡಿರೆಂದು ಅವರನ್ನು ಒತ್ತಾಯ ಮಾಡುತ್ತಿದ್ದುದಕ್ಕಾಗಿ ನಿಜವಾಗಿಯೂ ನಾನು ಸಿಡುಕಿದೆ ನನಗಂತೂ ಉಪವಾಸವು ದುರವಗ್ರಾಹವಾದ ವಿಷಯವಾಗಿತ್ತು ಮತ್ತು ಅವರು ಪ್ರತಿಜ್ಞೆ ಮಾಡುವ ಮೊದಲು ನನ್ನನ್ನು ಕೇಳಿದ್ದರೆ ಖಂಡಿತವಾಗಿಯೂ ನಾನು ತದ್ವಿರುದ್ಧವಾಗಿ ಮಾತನಾಡುತ್ತಿದ್ದೆ ಆದರೆ ನಾನು ಗಾಂಧಿಜಿಯವರ ಮಾತಿಗೆ ಬಹಳ ಬೆಲೆ ಕೊಟ್ಟಿದ್ದೆ ಅವರಿಗೆ ಅತ್ಯಂತ ಮುಖ್ಯವಾಗಿದ್ದ ಆ ಆತ್ಮೀಯ ವಿಷಯದ ಉಪವಾಸವನ್ನು ನಿಲ್ಲಿಸಬೇಕೆಂದು ಯಾರಾದರೂ ತಡೆಯಲೆತ್ನಿಸುವುದು ತಪ್ಪೆಂದು ನನಗೆ ತೋರಿತು ಆದ್ದರಿಂದ ದುಃಖಭಾಜನನಾಗಿದ್ದರೂ ನಾನು ಸಹಿಸಿದೆ

ಉಪವಾಸವನ್ನಾರಂಭಿಸುವುದಕ್ಕೆ ಸ್ವಲ್ಪ ದಿನಗಳ ಹಿಂದೆ ಅವರು ತಮ್ಮ ಸ್ವಭಾವಕ್ಕೆ ಉಚಿತವಾದ ಒಂದು ಪತ್ರನನ್ನು ಬರೆದರು ಅದು ನನ್ನನ್ನು ಬಹಳವಾಗಿ ಕದಲಿಸಿತು ಉತ್ತರ ಬರೆಯಬೇಕೆಂದವರು ಕೇಳಿದ್ದುದರಿಂದ ನಾನು ಕೆಳಗಿನ ತಂತಿಯನ್ನು ಕಳುಹಿಸಿದೆ

> ನಿಮ್ಮ ಪತ್ರ ನನಗೆ ಅರ್ಥವಾಗದ ವಿಷಯಗಳನ್ನು ಕುರಿತು ನಾನು ಏನುತಾನೆ ಹೇಳಲಿ ನೀವೊಬ್ಬರು ಮಾತ್ರ ಧ್ರುವತಾರೆಯಾಗಿರುವ ವಿಚಿತ್ರವಾದ ದೇಶದಲ್ಲಿ ನಾನು ಕಂಗೆಟ್ಟಿದ್ದೇನೆ, ಮತ್ತು ಕತ್ತಲಲ್ಲಿ ತಡವರಿಸುತ್ತ ನಡೆಯಲು ಪ್ರಯತ್ನಿಸುವೆನಾದರೂ ಮುಗ್ಗರಿಸಿ ಬೀಳುವೆನು ಏನು ಸಂಭವಿಸಿದರೂ ನನ್ನ ಪ್ರೇಮ ಆಲೋಚನೆಗಳು ನಿಮ್ಮ ಕಡೆಗೇ ಇವೆ

ಅವರ ಕಾರ್ಯವನ್ನು ಕುರಿತ ನನ್ನ ಸಂಪೂರ್ಣ ಅಸಮ್ಮತಿ ಮತ್ತು ಅವರನ್ನು ನೋಯಿಸಬಾರದೆಂಬ ನನ್ನ ಇಷ್ಟ, ಇವುಗಳಿಗೆ ವಿರುದ್ಧವಾಗಿ ನಾನು ಹೋರಾಡಿದ್ದೆ ಹೇಗಾದರೂ ನಾನು ಅವರಿಗೆ ಹರ್ಷಭರಿತ ಸಂದೇಶವನ್ನು ಕಳುಹಿಸಿರಲಿಲ್ಲವೆಂದು ನಾನು ಭಾವಿಸಿದೆ, ಮತ್ತು ಈಗವರು ತಮ್ಮನ್ನು ಮರಣದಲ್ಲಿಯೂ ಸಹ ಕೊನೆಗಾಣಿಸಬಹುದಾದ ಭಯಂಕರ ವಿಷಮ ಪರೀಕ್ಷೆಯನ್ನನುಭವಿಸಿಯೇತೀರಬೇಕೆಂದು ಬಗೆಯನ್ನು ಗಟ್ಟಿಮಾಡಿಕೊಂಡಿದ್ದುದರಿಂದ ಸಾಧ್ಯವಾದಮಟ್ಟಿಗೂ ನಾನು ಅವರನ್ನು

ಗೆಲವುಗೊಳಿಸಬೇಕೆಂದುಕೊಂಡೆ. ಮನಶ್ಶಾಸ್ತ್ರೀಯವಾಗಿ ಸಣ್ಣ ವಿಷಯಗಳೂ ವ್ಯತ್ಯಾಸಮಾಡುವುವು ಬದುಕಬೇಕಾದರೆ ಅವರು ಬಹುಮುಖವಾದ ಪ್ರಯತ್ನವನ್ನು ಮಾಡಬೇಕು ಏನೇ ಸಂಭವಿಸಲಿ, ಅದನ್ನೂ ದುರದೃಷ್ಟವಶಾತ್ ಅವರು ಮರಣ ಹೊಂದುವುದಾದರೆ ಅದನ್ನೂ ಸಹ, ಗಂಡೆದೆಯಿಂದ ಸ್ವೀಕರಿಸಬೇಕೆಂದು ಭಾವಿಸಿದೆ ಆದುದರಿಂದ ನಾನು ಇನ್ನೊಂದು ತಂತಿಯನ್ನು ಅವರಿಗೆ ಕಳುಹಿಸಿದೆ

ಈಗ ನೀವು ನಿಮ್ಮ ಮಹಾ ಸಾಹಸಪ್ರಸ್ಥಾನವನ್ನು ಹೂಡಿಬಿಟ್ಟಿರುವುದರಿಂದ ನಾನು ನಿಮಗೆ ಪುನಃ ನನ್ನ ಪ್ರೇಮ ಮತ್ತು ವಂದನೆಗಳನ್ನು ಅರ್ಪಿಸಲಿ ಏನು ಸಂಭವಿಸಿದರೂ ಅದು ಒಳ್ಳೆಯದಕ್ಕೇ ಮತ್ತು ಏನು ಸಂಭವಿಸಿದರೂ ನೀವು ಗೆಲ್ಲುವಿರಿ ಎಂದು ಈಗ ನಾನು ಹೆಚ್ಚು ಸ್ಪಷ್ಟವಾಗಿ ಬಗೆಗೊಂಡಿರುವೆನೆಂಬುದನ್ನು ನಿಮಗ ನೆಚ್ಚಿಗೆ ಕೊಡಲಿ.

ಅವರು ಉಪವಾಸ ಮುಗಿಸಿ ಬದುಕಿಕೊಂಡರು ಅದರ ಮೊದಲನೆಯ ದಿನ ಅವರು ಸೆರೆಮನೆಯಿಂದ ಬಿಡುಗಡೆಮಾಡಲ್ಪಟ್ಟರು ಮತ್ತು ಅವರ ಸಲಹೆಯಂತೆ ಶಾಸನ ಭಂಗವು ಆರು ವಾರಗಳವರೆಗೆ ತಾತ್ಕಾಲಿಕವಾಗಿ ನಿಲ್ಲಿಸಲ್ಪಟ್ಟಿತು

ಉಪವಾಸಕಾಲದಲ್ಲಿ ಪುನಃ ನಾನು ದೇಶದ ರಾಗಾತ್ಮಕವಾದ ಮೇಲುಬ್ಬರವನ್ನು ಕಂಡು, ರಾಜಕಾರಣದಲ್ಲಿ ಇದು ಸಚಟಾಟಿಯಾದ ಪರಿಯೇ ಎಂದು ಹೆಚ್ಚುಹೆಚ್ಚಾಗಿ ಶಂಕೆಪಟ್ಟೆ ಅದು ಕೇವಲ ಧರ್ಮಜಾಗೃತಿವಾದವೆನ್ನಿಸಿತು ಮತ್ತು ಸ್ಪಷ್ಟವಿವೇಚನೆಗೆ ಅದರ ಮುಂದೆ ಅವಕಾಶದ ನೆರಳೇ ಇರಲಿಲ್ಲ ಅಖಿಲಭಾರತವು ಅಥವಾ ಭಾರತದ ಅನೇಕ ಭಾಗಗಳು ಮಹಾತ್ಮರನ್ನು ಪರಮಭಕ್ತಿಯಿಂದ ಈಕ್ಷಿಸುತ್ತ ಪವಾಡಗಳ ಮೇಲೆ ಪವಾಡಗಳನ್ನು ಮಾಡುವರು, ಅಸ್ಪೃಶ್ಯತೆಯನ್ನು ಕೊನೆಗಾಣಿಸಿಬಿಡುವರು, ಸ್ವರಾಜ್ಯವನ್ನು ತಂದೇಬಿಡುವರು, ಎಂದು ಮುಂತಾಗಿ ನಿರೀಕ್ಷಿಸಿತು—ಆದರೆ ತಾನು ಮಾತ್ರ ಹಂಚಿಕಡ್ಡಿಯನ್ನೂ ಎತ್ತಿಡಲಿಲ್ಲ, ಮತ್ತು ಇತರರು ಆಲೋಚನೆಮಾಡುವುದನ್ನು ಗಾಂಧಿಜಿಯವರು ಪ್ರೋತ್ಸಾಹಿಸಲಿಲ್ಲ ಪರಿಶುದ್ಧತೆ ಮತ್ತು ತ್ಯಾಗ ಇವುಗಳನ್ನು ಮಾತ್ರ ಒತ್ತಿ ನುಡಿಯುತ್ತಿದ್ದರು ನಾನಾದರೋ, ಅವರಿಗೂ ನನಗೂ ಗಾಢವಾದ ರಾಗಾತ್ಮಕ ಬಾಂಧವ್ಯವಿದ್ದರೂ ಅವರಿಂದ ಮಾನಸಿಕವಾಗಿ ದೂರ ದೂರ ಸರಿಯುತ್ತಿದ್ದಂತೆ ಭಾವಿಸಿದೆ ದೋಷದೂರವಾದ ಉಪಜ್ಞೆಯೊಂದು ತಮ್ಮ ರಾಜಕೀಯ ಕಾರ್ಯಕಲಾಪಗಳಲ್ಲಿ ಅನೇಕ ಸಮಯಗಳಲ್ಲಿ ಅವರಿಗೆ ದಾರಿ ತೋರುತ್ತಿತ್ತು ಅವರಲ್ಲಿ ಕಾರ್ಯಸ್ಫೂರ್ತಿಯ ಜ್ಯೋತಿಯಿತ್ತು, ಆದರೆ ರಾಷ್ಟ್ರಕ್ಕೆ ಶಿಕ್ಷಣ ಶಿಸ್ತಿ ದಾನಮಾಡಲು ನಂಬಿಕೆಯ ದಾರಿಯೇ ಸರಿಯಾದ ದಾರಿಯೆ ? ಕೊಂಚಕಾಲದವರೆಗೆ ಮಾತ್ರ ಅದರಿಂದ ಫಲಪ್ರಾಪ್ತಿಯಾಗಬಹುದು, ಆದರೆ ಆಮೇಲೆ ?

ಹಿಂಸೆ ಮತ್ತು ಸಂಘರ್ಷಣೆಗಳ ಬುನಾದಿಯಮೇಲೆ ನಿಂತಿದ್ದ ವರ್ತಮಾನ ಸಾಮಾಜಿಕ ರಚನೆಯನ್ನು ತೋರುತ್ತಿದ್ದಂತೆ ಅವರು ಹೇಗೆ ಒಪ್ಪಿಕೊಂಡರೆಂಬುದನ್ನು

ನಾನು ಬಗೆಗೊಳ್ಳಲಾರದೆ ಹೋದೆ ನನ್ನ ಒಳಗೆ ಕೂಡ ಸಂಘರ್ಷಣೆಯು ರೇಗಿತು, ಮತ್ತು ಎರಡು ಮೇಲಾಡಿ ನಿಷ್ಠೆಗಳ ಮಧ್ಯೆ ಸಿಕ್ಕಿಹೋದೆ ಮುಂದೆ ಬಲಾತ್ಕಾರದ ಕಾರಾಗೃಹ ರಕ್ಷಣೆಯು ತೀರಿದಮೇಲೆ ನನಗೆ ಕಷ್ಟವು ಕಾದಿದೆಯೆಂದು ತಿಳಿದೆ ಒಂಟಿಯಾದಂತೆಯೂ ಮನೆಯಿಲ್ಲದವನಂತೆಯೂ ತೋರಿತು ಯಾವುದಕ್ಕೆ ನಲ್ಮೆಯನ್ನು ನೀಡಿದ್ದೆನೋ ಯಾವುದಕ್ಕಾಗಿ ನಾನು ದುಡಿಯುತ್ತಿದ್ದೆನೋ ಆ ಭಾರತವು ನನಗೆ ವಿಚಿತ್ರವಾದ ಮತ್ತು ತಬ್ಬಿಬ್ಬುಮಾಡುವ ನಾಡಿನಂತೆ ತೋರಿತು ನನ್ನ ನಾಡಾಳುಗಳ ಶಕ್ತ್ಯುತ್ಸಾಹ ಮತ್ತು ವಿಚಾರಮಾರ್ಗಗಳನ್ನು ನಾನು ಬಗೆಗೊಳ್ಳಲಾಗದೆ ಇದ್ದುದು ತಪ್ಪಾಯಿತೆ? ನನ್ನ ತೀರ ಹತ್ತಿರದ ಸಹೋದ್ಯೋಗಿಗಳ ಬಳಿಯೂ ಕಣ್ಣಿಗೆ ಕಾಣಿಸದ ತಡೆಯೊಂದು ನಮ್ಮ ನಮ್ಮ ನಡುವೆ ಇದ್ದಂತಿತ್ತು ಆ ತಡೆಯನ್ನು ಮೀರಲು ಶಕ್ತನಾಗದೆ ನಾನು ನನ್ನ ಚಿಪ್ಪಿಗೆ ಮರಳಿ ಸೇರಿಕೊಂಡೆ ಪ್ರಾಚೀನ ಪ್ರಪಂಚವು, ಗತಕಲ್ಪನವಿಜ್ಞಾನಗಳು, ಆಶೆಗಳು ಮತ್ತು ಆಕಾಂಕ್ಷೆಗಳ ಪ್ರಾಚೀನ ಪ್ರಪಂಚವು ಅವರನ್ನು ಅವರಿಸಿಕೊಂಡಿರುವಂತೆ ತೋರಿತು ನೂತನ ಜಗತ್ತು ಇನ್ನೂ ಬಹಳ ದೂರದಲ್ಲಿತ್ತು

"ಅಲೆಯುತಿಳೆಗಳೆಡರ ನಡುವೆ, ಒಂದಳಿದಿಹುದು,
ಮೇಣಿನ್ನೊಂದಕೆ ಪುಟ್ಟೆ ಹುರುಳಿಲ್ಲ,
ಬಗೆಗೆ ಆಸರೆಯದೆಲ್ಲಿಯುಮಿನ್ನುಮಿಲ್ಲದೆಯೆ"

ಎಲ್ಲಕ್ಕಿಂತ ಮೇಲಾಗಿ ಭಾರತವು ಧಾರ್ಮಿಕ ದೇಶವೆಂದು ಭಾವಿಸಲ್ಪಟ್ಟಿದೆ, ಮತ್ತು ಹಿಂದೂ, ಮುಸಲ್ಮಾನ, ಸಿಕ್, ಮತ್ತು ಇತರರು ತಂತಮ್ಮ ಧರ್ಮಗಳನ್ನು ಕುರಿತು ಹೆಮ್ಮೆಪಡುತ್ತ ತಲೆಗಳನ್ನು ಒಡೆದು ಸತ್ಯಸಿದ್ಧಾಂತ ಮಾಡುವರು ಧರ್ಮವೆಂಬ ಹೆಸರಿನ ದೃಶ್ಯವು ಅಥವಾ ಹೇಗಾದರೂ ವ್ಯವಸ್ಥಾತ್ಮಕ ಧರ್ಮವು, ಭಾರತದಲ್ಲಾಗಲಿ, ಇನ್ನೆಲ್ಲಾದರೂ ಆಗಲಿ ನನ್ನಲ್ಲಿ ಅಸಹ್ಯವನ್ನೂ ಭಯವನ್ನೂ ತುಂಬಿವೆ, ಮತ್ತು ನಾನು ಪದೇಪದೇ ಅದನ್ನು ಖಂಡಿಸಿ, ಅದನ್ನು ಸಂಪೂರ್ಣವಾಗಿ ಗುಡಿಸಿಹಾಕಿಬಿಡಬೇಕೆಂದು ಬಯಸಿದ್ದೇನೆ ಬಹುಮಟ್ಟಿಗೆ ಅದು ಯಾವಾಗಲೂ, ಅಂಧಃಶ್ರದ್ಧೆ ಮತ್ತು ಪ್ರತೀಕಾರ, ಮತಶ್ರದ್ಧೆ ಮತ್ತು ಮತಾಂಧತೆ, ಮೂಢಭಕ್ತಿ ಮತ್ತು ಸುಲಿಗೆ ಮತ್ತು ಸ್ವಾರ್ಥರಕ್ಷಣೆ, ಇವುಗಳೆಂದು ತೋರುತ್ತದೆ ಆದರೂ, ಮಾನವರ ಆಳವಾದ ಒಳಗಿನ ಬಯಕೆಯನ್ನು ಪೂರಯಿಸುವ ಯಾವುದೊ ಒಂದು ವಿಶೇಷವು ಅದರಲ್ಲಿತ್ತೆಂಬುದನ್ನು ನಾನು ತಿಳಿದಿದ್ದೆ ಅಸಂಖ್ಯಾತ ಪೀಡಿತ ಆತ್ಮಗಳಿಗೆ ಆಶ್ವಾಸನವನ್ನೂ ಶಾಂತಿಯನ್ನೂ ಕರುಣಿಸುತ್ತ ಮಹಾ ಪರಿಮಾಣದ ಶಕ್ತಿಯಾಗಿರುವ ಅದು ಹೀಗಲ್ಲದೆ ಇನ್ನು ಹೇಗೆತಾನೆ ಇದ್ದೀತು ಆ ಶಾಂತಿಯು ಕೇವಲ ಅಂಧಃಶ್ರದ್ಧೆಯ ಆಶ್ರಯ ಮತ್ತು ಪ್ರಶ್ನೆಯು ಇಲ್ಲವೆಂಬಗಳ ಶಾಂತಿಯೆ, ವಿಶಾಲ ಸಾಗರದ ಬಿರುಗಾಳಿಯಿಂದ ಪಾರಾಗಿ ರೇವಿನಲ್ಲಿ ಕ್ಷೇಮದಿಂದಿರುವುದರಿಂದ ಲಭಿಸುವ ಪ್ರಶಾಂತತೆಯೆ, ಅಥವಾ ಅದಕ್ಕಿಂತ

ಹೆಚ್ಚಾದುದೆ ? ಕೆಲವು ಸಂದರ್ಭಗಳಲ್ಲಿ ಅದು ವಾಸ್ತವವಾಗಿಯೂ ಇನ್ನೂ ಹೆಚ್ಚಾದುದು

ಆದರೆ ವ್ಯವಸ್ಥಾತ್ಮಕ ಧರ್ಮವು, ಅದರ ಭೂತವು ಏನೇ ಆಗಿರಲಿ, ಇಂದು ಪ್ರಾಯಿಕವಾಗಿ ನಿಜಾಂಶರಹಿತವಾದ ಶೂನ್ಯ ಸ್ವರೂಪವಾಗಿದೆ ಮಿ|| ಜಿ ಕೆ ಚೆಸ್ಟರ್ಟನ್‌ರು ಅದನ್ನು, (ತಮ್ಮ ವಿಶಿಷ್ಟಮಾದರಿಯ ಮತವನ್ನಲ್ಲ, ಆದರೆ ಇತರರ ಮತವನ್ನು !) ಯಾವ ವಸ್ತುವಿನಲ್ಲಿ ಅದರ ಸ್ವಂತ ಜೀವಸಾಮಗ್ರಿಯು ಸಂಪೂರ್ಣ ಮಾಯವಾಗಿ, ಅದರೊಳಗೆ ಯಾವುದೋ ಸಂಪೂರ್ಣ ಭಿನ್ನಸಾಮಗ್ರಿಯೊಂದು ತುಂಬಿಕೊಂಡಿರುವುದರಿಂದ ಅದು ತನ್ನ ಆಕಾರವನ್ನು ಉಳಿಸಿಕೊಂಡಿದೆಯೋ ಆ ಪ್ರಾಣಿಯ ಅಥವಾ ಸೇಂದ್ರಿಯ ವಸ್ತುವಿನ ' ರೂಪ 'ದಲ್ಲಿರುವ ' ಜೀವಿತವಸ್ತುವಿನ ಅವಯವಾವಶೇಷ ' (ಫಾಸಿಲ್)ಕ್ಕೆ ಹೋಲಿಸಿದ್ದಾರೆ ಮತ್ತು ಎಷ್ಟುಮಾತ್ರದ ಬೆಲೆಯ ಶೇಷವಾಗಲಿ ಉಳಿದಿದ್ದರೂ ಅಲ್ಲಿಯೂ ಸಹ ಅದನ್ನು ಇತರ ಮತ್ತು ಹಾನಿಕರ ಸಾಮಗ್ರಿಗಳು ಬಳಸಿಕೊಂಡಿವೆ

ಅದು ನಮ್ಮ ಪೌರಾತ್ಯ ಧರ್ಮಗಳಲ್ಲಿಯೂ ಪಾಶ್ಚಾತ್ಯ ಧರ್ಮಗಳಲ್ಲಿಯೂ ಸಂಭವಿಸಿದೆಯೆಂದು ತೋರುವುದು ಯಾವ ಧರ್ಮವು, ಆ ಪದದ ಯಾವ ನೈಜಾರ್ಥವನ್ನು ಪರಿಗಣಿಸಿದರೂ ಧರ್ಮವಲ್ಲವೋ ಅಂಥ ಧರ್ಮದ ಸ್ವತಸ್ಸಿದ್ಧ ನಿದರ್ಶನವೇ ಪ್ರಾಯಶಃ ಚರ್ಚ್ ಆಫ್ ಇಂಗ್ಲೆಂಡ್ ಅಂಶತಃ ಅದು ಎಲ್ಲ ಸಂಘಟಿತ ಪ್ರಾಟೆಸ್ಟ್ಯಾಂಟಸಂಗೂ ಅನ್ವಯಿಸುವುದು, ಆದರೆ ಚರ್ಚ್ ಆಫ್ ಇಂಗ್ಲೆಂಡು ಬಹಳ ಕಾಲದಿಂದ ಸರಕಾರದ ರಾಜಕೀಯ ಇಲಾಖೆಯಾಗಿರುವುದರಿಂದ ಪ್ರಾಯಶಃ ಇನ್ನೂ ಮುಂದೆ ಹೋಗಿದೆ.*

* ಭಾರತದಲ್ಲಿ ಸರಕಾರದಿಂದ ಚರ್ಚ್ ಆಫ್ ಇಂಗ್ಲೆಂಡನ್ನು ಬಹಳಮಟ್ಟಿಗೆ ವ್ಯಕ್ತೀಕರಿಸುವುದಿಲ್ಲ ಭಾರತೀಯ ರಾಜಾದಾಯದಿಂದ ಅಧಿಕಾರಯುತವಾಗಿ ಸಂಬಳ ತಿನ್ನುವ ಪ್ರೀಸ್ಟ್‌ಗಳು ಮತ್ತು ಚಾಪ್ಲೆಯಿನ್‌ಗಳು ಶ್ರೇಷ್ಠ ನೌಕರವರ್ಗದಂತೆಯೇ ಸಾಮ್ರಾಜಿಕ ಶಕ್ತಿಯ ಸಂಕೇತಗಳಾಗಿದ್ದಾರೆ ಒಟ್ಟಿನಲ್ಲಿ ಚರ್ಚು ಭಾರತೀಯ ರಾಜಕಾರಣದಲ್ಲಿ ಪೂರ್ವಸಂಪ್ರದಾಯಪ್ರಿಯತೆಯಿಂದ ಕೂಡಿದ್ದು ಪ್ರತೀಕಾರಕವಾದ ಶಕ್ತಿಯಾಗಿದೆ, ಮತ್ತು ಸಾಮಾನ್ಯವಾಗಿ ಸುಧಾರಣೆ, ಪ್ರಗತಿಗಳಿಗೆ ವಿರೋಧವಾಗಿದೆ ಸಾಮಾನ್ಯ ಮಿಷನರಿಯು ಸಾಧಾರಣವಾಗಿ, ಭಾರತದ ಪ್ರಾಚೀನ ಇತಿಹಾಸ ಮತ್ತು ಸಂಸ್ಕೃತಿಗಳನ್ನು ಕುರಿತು ಸಂಪೂರ್ಣ ಅಜ್ಞನಾಗಿದ್ದಾನೆ, ಅಲ್ಲದೆ ಅವು ಹಿಂದೆ ಹೇಗಿದ್ದುವು, ಅಥವಾ ಈಗ ಹೇಗಿವೆ, ಎಂಬಿವನ್ನು ಅರಿಯಲು ಸಾಕಿವೆಯಷ್ಟು ಪ್ರಯತ್ನವನ್ನೂ ಪಡುವುದಿಲ್ಲ ಕ್ರೈಸ್ತರಲ್ಲದವರ ಪಾಪಗಳನ್ನೂ ದೌರ್ಬಲ್ಯಗಳನ್ನೂ ಎತ್ತಿತೋರಿಸುವ ಹವ್ಯಾಸವು ಅವರ ಮನಸ್ಸಿಗೆ ಹೆಚ್ಚು ಸ್ವಾರಸ್ಯವಾಗಿರುತ್ತದೆ ವಾಸ್ತವವಾಗಿಯೂ ಇದಕ್ಕೆ ಶ್ರೇಷ್ಠ ವಿನಾಯಿತಿಗಳುಂಟು ಚಾರ್ಲ್ಸ ಆಂಡ್ರೂಸ್‌ರವರಿಗಿಂತ ಹೆಚ್ಚು ಶ್ರದ್ಧಾಳು ಮಿತ್ರರು ಭಾರತಕ್ಕೆ ಬೇರೊಬ್ಬರಿಲ್ಲ ಅವರ ಕಟ್ಟಾಸುರದ ನಲ್ಮೆ ಮತ್ತು ಸೇವಾಭಕ್ತಿಗಳನ್ನೂ ತುಂಬಿಹರಿವ ಸ್ನೇಹವನ್ನೂ ಪಡೆದಿರುವುದೊಂದು ಆನಂದ ಪುಣೆಯ ಕ್ರೈಸ್ತ ಸೇವಾಸಂಘದಲ್ಲಿ ಕೆಲವು ಶ್ರೇಷ್ಠ ಇಂಗ್ಲಿಷರಿದ್ದಾರೆ ಅವರ ಧರ್ಮವು

ಅದರ ಭಕ್ತರಲ್ಲನೇಕರು ಉತ್ತುಂಗ ಸುಗುಣಶಾಲಿಗಳೆಂಬುದರಲ್ಲಿ ಸಂದೇಹವಿಲ್ಲ, ಆದರೆ ಬ್ರಿಟಿಷ್ ಸಾಮ್ರಾಜ್ಯತತ್ವದ ಧ್ಯೇಯಕ್ಕಾಗಿ ಚರ್ಚು ಹೇಗೆ ದುಡಿಯುತ್ತಿರುವುದೆಂಬುದೂ ಬಂಡವಾಳಗಾರಿಕೆಗೂ ಸಾಮ್ರಾಜ್ಯತತ್ವಕ್ಕೂ ನೈತಿಕ ಮತ್ತು ಕ್ರೈಸ್ತ ಜವನಿಕೆಯನ್ನು ಹಾಕಿದೆಯೆಂಬುದೂ ಆಶ್ಚರ್ಯಕರವಾದುದು ಏಷ್ಯ ಮತ್ತು ಆಫ್ರಿಕಗಳಲ್ಲಿ ಬ್ರಿಟಿಷರ ಕೊಳ್ಳೆಹೊಡೆಯುವ ನೀತಿಯನ್ನು ಉತ್ತುಂಗ ನೈತಿಕ ಪ್ರಮಾಣಗಳಿಂದ ಸಮರ್ಥಿಸಲು ಅದು ಪ್ರಯತ್ನಿಸಿದೆ, ಅಲ್ಲದೆ ಇಂಗ್ಲಿಷರಿಗೆ ತಾವು ಯಾವಾಗಲೂ ಸಚ್ಚೂಟಿ ಮಾರ್ಗದಲ್ಲಿಯೇ ಇರುವರೆಂಬ ಅಸಾಮಾನ್ಯ ಮತ್ತು ಕಾಮ್ಯವಾದ ಭಾವನೆಯನ್ನು ಅದು ಕೊಟ್ಟಿದೆ ಈ ತೃಪ್ತಿ ಹೊಂದಿದ ಆರ್ಜವದ ಭಂಗಿಯನ್ನು ಹುಟ್ಟಿಸಲು ಚರ್ಚು ಸಹಾಯಮಾಡಿದೆಯೋ ಅಥವಾ ತಾನೇ ಅದರಿಂದ ಹುಟ್ಟಿದೆಯೋ ನನಗೆ ತಿಳಿಯದು ಯೂರೋಪ್ ಮತ್ತು ಅಮೆರಿಕಾಖಂಡಗಳಲ್ಲಿನ ಕಡಿಮೆ ಅದೃಷ್ಟದ ರಾಷ್ಟ್ರಗಳು ಇಂಗ್ಲಿಷರನ್ನು ಕಪಟಿಗಳೆಂದು ಅನೇಕ ವೇಳೆ ಆಪಾದನೆ ಹೊರಿಸುತ್ತವೆ– "ಪೆರ್ಫಿಡಿ ಆಲ್ಬಿಯನ್" (ಅವಿಶ್ವಾಸಭೂತಿ ಆಂಗ್ಲೇಯ) ಎಂಬುದು ಹಳೆಯ ಮೂದಲೆ–ಆದರ ಬ್ರಿಟಿಷರ ವಿಜಯದಿಂದುಂಟಾಗಿರುವ ಹೊಟ್ಟೆಕಿಚ್ಚಿನಿಂದ ಪ್ರಾಯಃ ಈ ಆಪಾದನೆಯು ಹುಟ್ಟಿದೆ, ಅಲ್ಲದೆ ಬೇರೆ ಇನ್ನಾವ ಸಾಮ್ರಾಜ್ಯತಾತ್ವಿಕ ಪ್ರಭುತ್ವವೂ ಇಂಗ್ಲೆಂಡನ್ನು ದೂಷಿಸಲಾರದು ಏಕೆಂದರೆ ಅದರ ಚರಿತ್ರೆಗೂ ಸಹ ಅದರಷ್ಟೇ ಕೆಸರು ಅಂಟಿಕೊಂಡಿದೆ ಬ್ರಿಟಿಷರು ಪುನಃಪುನಃ ಪ್ರದರ್ಶಿಸಿರುವ

ಆಶ್ರಯದಾನದ ಸೋಗನ್ನು ಹಾಕದೆ ಅವರನ್ನು ಅರಿವಿಗೂ ಸೇವೆಗೂ ಕರೆದೊಯ್ದಿದೆ, ಮತ್ತು ಅವರು ಭಾರತೀಯರ ಅಸ್ವಾರ್ಥ ಸೇವೆಯಲ್ಲಿ ತಮ್ಮ ಮಹಾ ಪ್ರತಿಭೆಗಳನ್ನು ಶ್ರದ್ಧೆಯಿಂದ ವಿನಿಯೋಗಿಸಿದ್ದಾರೆ ಯಾರ ಸ್ಮಾರಕವು ಅಮೂಲ್ಯವೆಂದು ಪರಿಗಣಿತವಾಗಿದೆಯೋ ಆ ಇತರ ಇಂಗ್ಲಿಷ್ ಚರ್ಚಿನವರು ಭಾರತದಲ್ಲಿ ಹಲವರಿದ್ದಾರೆ

ಲಾರ್ಡ್ಸ್ ಸಭೆಯಲ್ಲಿ ಡಿಸೆಂಬರ್ ೧೨, ೧೯೩೪ ರಲ್ಲಿ ಆರ್ಚ್‌ಬಿಷಪ್ ಆಫ್ ಕ್ಯಾಂಟರ್‌ಬರಿಯವರು ಭಾಷಣಮಾಡುತ್ತ, ೧೯೧೯ ರ ಮಾಂಟಿಗು–ಛೆಲ್ಮ್ಸ್‌ಫರ್ಡ್ ರಾಜ್ಯಾಂಗ ಸುಧಾರಣೆಗಳನ್ನು ಕುರಿತು ಲಕ್ಷ್ಯತೋರಿಸಿದರು, ಮತ್ತು 'ಆ ಮಹಾ ಪ್ರಕಟಣೆಯು ಸ್ವಲ್ಪಮಟ್ಟಿಗೆ ಆತುರದಿಂದ ಮಾಡಲ್ಪಟ್ಟಿದ್ದಿತೆಂದೂ ಮಹಾ ಯುದ್ಧಾನಂತರ ನಡೆದ ಆತುರದ ಮತ್ತು ಉದಾರಭಾವ ಭಂಗಿಗಳಲ್ಲಿ ಅದೂ ಒಂದೆಂದೂ ಆದರೆ ಸಿದ್ಧಯಿಸಿದ ಗುರಿಯು ಉಪಸಂಹರಿಸಲಾಗದುದೆಂದೂ" ಹೇಳಿದರು ಇಂಗ್ಲಿಷ್ ಚರ್ಚಿನ ಮುಖ್ಯಾಚಾರ್ಯರು ಭಾರತೀಯ ರಾಜಕಾರಣವನ್ನು ಕುರಿತು ಅತ್ಯಂತ ಸಂಕುಚಿತ ದೃಷ್ಟಿಯನ್ನು ಮೆರೆದುದು ಗಮನಾರ್ಹವಾದುದು ಭಾರತೀಯ ಅಭಿಪ್ರಾಯವು ಯಾವುದನ್ನು ತೀರ ಅತೃಪ್ತಿಕರವೆಂದು ಪರಿಗಣಿಸಿತೋ ಮತ್ತು ಈ ಯಾವ ಕಾರಣದಿಂದ ಅಸಹಕಾರ ಮತ್ತು ಅದರ ಎಲ್ಲ ಪರಿಣಾಮಗಳಿಗೂ ಮೂಲವಾಯಿತೋ ಆ ಹೆಜ್ಜೆಯನ್ನು ಆರ್ಚ್‌ಬಿಷಪ್‌ರು "ಆತುರ ಮತ್ತು ಉದಾರ"ವೆಂದು ಪರಿಗಣಿಸಿದರು ಆಂಗ್ಲೇಯ ಪ್ರಭುತ್ವ ವರ್ಗದವರ ದೃಷ್ಟಿಕೋನದಿಂದ ಅದು ಆಶ್ವಾಸನ ಪೂರ್ಣವಾದ ಸಿದ್ಧಾಂತವಾಗಿದೆ ಮತ್ತು ದುಷ್ಟುಂ ಪ್ರವೇಶದ ಅಂಚಿನವರೆಗೂ ಇದ್ದ ಅವರ ಸ್ವಂತ ಔದಾರ್ಯದ ಈ ದೃಢ ನಂಬಿಕೆಯು ನಿಸ್ಸಂದೇಹವಾಗಿಯೂ, ತೃಪ್ತಿಯ ಧಾರ್ಮಿಕ ತೇಜಸ್ಸನ್ನು ಹೊಮ್ಮಲೇಬೇಕು

ಆಪಚ್ಛಕ್ತಿಯನ್ನು ತಿಳಿದೂ ತಿಳಿದೂ ಕಪಟವಾಗಿರುವ ಬೇರೆ ಯಾವ ಜನಾಂಗವೂ ಸಹ ಪ್ರದರ್ಶಿಸುವುದು ಸಾಧ್ಯವಲ್ಲ, ಮತ್ತು ಅವರು ಸ್ವೀಕರಿಸಿರುವ ‘ಧರ್ಮ’ದ ಮಾದರಿಯು ಅವರ ಸ್ವಾರ್ಥಗಳಿಗೆ ಸಂಬಂಧಪಟ್ಟ ಕಡೆಗಳಲ್ಲೆಲ್ಲ ಅವರ ನೈತಿಕ ಮನಃಪ್ರವೃತ್ತಿಗಳನ್ನು ಜಡ್ಡುಮಾಡಿ, ಇದರಲ್ಲಿ ಅವರಿಗೆ ಸಹಾಯಮಾಡಿರುವಂತೆ ತೋರುತ್ತದೆ ಬ್ರಿಟಿಷರಿಗಿಂತ ಇತರ ಜನಾಂಗಗಳು ಅನೇಕ ವೇಳೆ ಎಷ್ಟೋ ಕೀಳಾಗಿ ವರ್ತಿಸಿವೆ ಆದರೂ ಲಾಭಕರವಾದುದೊಂದನ್ನು ಸುಗುಣವೊಂದನ್ನಾಗಿ ಮಾಡಿಕೊಳ್ಳುವುದರಲ್ಲಿ ಅವರಷ್ಟುಮಟ್ಟಿಗೆ ಇವರು ಯಶಸ್ವಿಯಾಗಿಯೇ ಇಲ್ಲ ಇತರರ ಎಲೆಯಲ್ಲಿ ನೊಣ ಬಿದ್ದಿರುವುದನ್ನು ಕಂಡು ಹಿಡಿದು ನಮ್ಮ ಎಲೆಯಲ್ಲಿ ಬಿದ್ದಿರುವ ಕತ್ತೆಯನ್ನು ಮರೆತುಬಿಡುವುದು ನಮಗೆಲ್ಲರಿಗೂ ಬಹಳ ಸುಲಭವಾದ ಕೆಲಸ ಪ್ರಾಯಃ ಈ ನಾಟಕದಲ್ಲಿ ಬ್ರಿಟಿಷರು ಎಲ್ಲರನ್ನೂ ಮೀರಿಸುತ್ತಾರೆ *

ಹೊಸ ಪರಿಸ್ಥಿತಿಗಳಿಗೆ ಪ್ರಾಟೆಸ್ಟಾಂಟಿಸಮ್ಮು ಹೊಂದಿಕೊಳ್ಳಲು ಪ್ರಯತ್ನಿಸಿ, ಎರಡೂ ಪ್ರಪಂಚಗಳ ಅತ್ಯುತ್ತಮವಾದವುಗಳನ್ನು ಅಪೇಕ್ಷಿಸಿತು ಈ ಪ್ರಪಂಚವನ್ನು ಕುರಿತಮಟ್ಟಿಗೆ ಅದು ಯಶಸ್ವಿಯಾಯಿತು ಆದರೆ ಧಾರ್ಮಿಕ ದೃಷ್ಟಿಯಿಂದ, ಸಂಘಟಿತ ಧರ್ಮದಂತೆ ಅದು ಎರಡು ನೆಲೆಗಳ ಅಂತರದಲ್ಲಿ ಬಿದ್ದುಹೋಯಿತು ಧರ್ಮವು ಗಾಢ ರಾಗೋದ್ರೇಕಕ್ಕೂ ದೊಡ್ಡ ವ್ಯಾಪಾರಕ್ಕೂ ಕ್ರಮಕ್ರಮವಾಗಿ ಎಡೆಗೊಟ್ಟಿತು ರೋಮನ್ ಕೆಥಾಲಿಸಿಸಮ್ಮು ಈ ಗತಿಯನ್ನು ತಪ್ಪಿಸಿಕೊಂಡಿತು ಏಕೆಂದರೆ ಅದು ಹಳೆಯ ನೆಲೆಯನ್ನು ಪಟ್ಟಾಗಿ ಹಿಡಿಯಿತು, ಮತ್ತು ಎಂದಿನವರೆಗೆ ಆ ನೆಲೆಯು ಕುಸಿಯದಿರುವುದೋ ಅಂದಿನವರೆಗೆ ಇದು ಬೆಳೆಯುತ್ತಲೇ ಹೋಗುವುದು ಆ ಪದದ ಒಂದು ವಿಧವಾದ ಸಂಕುಚಿತಾರ್ಥದಲ್ಲಿ ಇಂದು ಪಶ್ಚಿಮದಲ್ಲಿ ಸಜೀವ ‘ಧರ್ಮ’ವೆಂದರೆ ಅದೊಂದೇ ಎಂದು ಕಾಣುತ್ತದೆ ನೆರೆಯಲ್ಲಿದ್ದ ನನಗೆ ರೋಮನ್ ಕೆಥಾಲಿಕ್ ಮಿತ್ರನೊಬ್ಬರು ಕೆಥಾಲಿಸಿಸಮ್ಮನ್ನು ಕುರಿತ ಅನೇಕ ಗ್ರಂಥಗಳನ್ನೂ ಪೋಪರ ಹಲವು ಸರ್ವ

* ಭಾರತದಲ್ಲಿನ ರಾಜಕಾರಣವನ್ನು ಕುರಿತು ಚರ್ಚ್ ಆಫ್ ಇಂಗ್ಲೆಂಡು ಪರೋಕ್ಷವಾಗಿ ಹೇಗೆ ಪ್ರಭಾವವನ್ನು ಬೀರುತ್ತದೆ, ಎಂಬುದರ ಇತ್ತೀಚಿನ ಉದಾಹರಣೆಯೊಂದು ನನ್ನ ಗಮನಕ್ಕೆ ಬಂದಿದೆ ನ ಪ್ರಾ ಇಂಡಿಯನ್ ಕ್ರಿಶ್ಚಿಯನ್ನರ ಪ್ರಾಂತ ಸಮ್ಮೇಳನವೊಂದು ಕಾನ್ಪುರದಲ್ಲಿ ನವೆಂಬರ್ ೩, ೧೯೩೪ ರಲ್ಲಿ ನಡೆದಾಗ, ಸ್ವಾಗತಸಮಿತಿಯ ಅಧ್ಯಕ್ಷರಾದ ಮಿ|| ಇ ವಿ ಡೇವಿಡ್‌ರವರು ಹೀಗೆ ಹೇಳಿದರು “ನಾವು ಕ್ರಿಶ್ಚಿಯನ್ನರಾಗಿರುವುದರಿಂದ ನಮ್ಮ ಧರ್ಮದಿಂದಲೇ ನಾವು ನಮ್ಮ ಧರ್ಮದ ಪ್ರಥಮ ರಕ್ಷಕನಾಗಿರುವ ಪ್ರಭುವಿಗೆ, ರಾಜಭಕ್ತಿಯಿಂದ ಬಂಧಿತರಾಗಿದ್ದೇವೆ” ಹೀಗೆಂದರೆ, ಅನಿವಾರ್ಯವಾಗಿ, ಭಾರತದಲ್ಲಿನ ಬ್ರಿಟಿಷ್ ಸಾಮ್ರಾಜ್ಯತತ್ವವಾದಕ್ಕೆ ಸಹಾಯಮಾಡಬೇಕೆಂದಾಯಿತು ಅವರ ದೃಷ್ಟಿಯಿಂದ ಭಾರತದಲ್ಲಿನ ಕ್ರೈಸ್ತ ಧರ್ಮಪೀಠಗಳಿಗೆ ಅಪಾಯವನ್ನುಂಟುಮಾಡಬಹುದಾದ ಐ ಸಿ ಎಸ್, ಪೋಲೀಸ್, ಮತ್ತು ಭಾವಿ ರಾಜ್ಯಾಂಗರಚನೆ, ಇವುಗಳನ್ನು ಕುರಿತು ಮಿ|| ಡೇವಿಡ್ಡರು ಇಂಗ್ಲೆಂಡಿನ ಅಗ್ನಿಭಕ್ಷಕ ಕನ್ಸರ್ವೆಟಿವ್ (ಸಂಪ್ರದಾಯ ಶರಣರ) ಅಂಶಗಳ ಒಂದಿಗೆ ತಮ್ಮ ಸಹಾನುಭೂತಿಯನ್ನು ಇನ್ನಷ್ಟು ತೋರಿದರು

ಸಾಮಾನ್ಯ ಪ್ರಕಟಣೆಗಳನ್ನೂ ಕಳುಹಿಸಿದರು ಅವನ್ನು ನಾನು ಶ್ರದ್ಧೆಯಿಂದ ಓದಿದೆ ಅದನ್ನು ಅಧ್ಯಯನ ಮಾಡಿದಂತೆ, ಬಹುಸಂಖ್ಯಾತ ಜನಗಳ ಮೇಲೆ ಅದಕ್ಕಿರುವ ಹಿಡಿತವನ್ನು ಅರಿತುಕೊಂಡೆ ಇಸ್ಲಾಮಿನಂತೆಯೂ ಜನಪ್ರಿಯವಾದ ಹಿಂದೂ ಮತದಂತೆಯೂ ಅದು ಸಂದೇಹ ಮತ್ತು ಒಳತೋಟಗಳಿಲ್ಲದ ನೆಲೆಯೊಂದನ್ನೂ ಈ ಜನ್ಮದ ಅರಕೆಗಳನ್ನು ಪೂರ್ತಿಮಾಡುವ ಇನ್ನೊಂದು ಜನ್ಮದ ಭರವಸೆಯನ್ನೂ ನೀಡುತ್ತದೆ

ಈ ವಿಧವಾಗಿ ರೀವನ್ನು ನಾನು ಹುಡುಕಲಾರೆ ಬಿರುಗಾಳಿ, ಸುರಿಮಳೆ, ಉಬ್ಬರವಿಳಿತಗಳಿಂದೊಡಗೂಡಿದ ಅಗೂಹನ ಸಮುದ್ರವೇ ಲೇಸು ಅದೂ ಅಲ್ಲದೆ ಮರು ಜನ್ಮದಲ್ಲಿಯೂ ಸತ್ತಮೇಲೇನಾಗುವುದೆಂಬುದರಲ್ಲಿಯೂ ನನಗೆ ಅಷ್ಟೇನೂ ಹಚ್ಚಾದ ಶ್ರದ್ಧೆಯಿಲ್ಲ ಈ ಜನ್ಮದ ಸಮಸ್ಯೆಗಳು ನನ್ನ ಮನಸ್ಸನ್ನು ತುಂಬಲು ಸಾಕಷ್ಟು ನನ್ನ ಗಮನವನ್ನು ಹೀರಿಕೊಂಡಿವೆ ಮೂಲತಃ ನೈತಿಕವಾಗಿದ್ದು ಆದರೂ ಅಧಾರ್ಮಿಕವಾಗಿರುವ ಅಥವಾ ಧಾರ್ಮಿಕ ಚಾರ್ವಾಕತೆಯ ಸೊಗಡನ್ನುಳ್ಳ ಚೀಣರ ಸಾಂಪ್ರದಾಯಿಕ ದೃಷ್ಟಿಕ್ಷೇಪವು, ಜೀವನಕ್ಕೆ ಅದನ್ನು ಸಂಪ್ರಯೋಗಿಸಲು ಒಪ್ಪದೆ ಇರಬಹುದಾದರೂ, ನನ್ನ ಮನಸ್ಸಿಗೆ ರಂಜಿಸಿದೆ ಆ 'ತಾಓ,'* ಆ ಹಿಡಿಯಬೇಕಾದ ಮಾರ್ಗ ಮತ್ತು ಜೀವನವಿಧಾನಗಳು ನನ್ನಲ್ಲಿ ಶ್ರದ್ಧೆಯನ್ನು ಹುಟ್ಟಿಸುತ್ತವೆ ಬಾಳನ್ನು ಹೇಗೆ ಬಗೆಗೊಳ್ಳಬೇಕು, ಅದನ್ನು ಕಡೆಗಣಿಸದೆ ಒಪ್ಪಿಕೊಂಡು, ಒಗ್ಗಿಕೊಂಡು, ಅದನ್ನು ಹೇಗೆ ನೇರ್ಪಡಿಸಬೇಕು ಆದರೆ ಸಾಮಾನ್ಯವಾಗಿ ಧಾರ್ಮಿಕ ದೃಷ್ಟಿಕ್ಷೇಪವು ಈ ಪ್ರಪಂಚವನ್ನು ಕುರಿತು ಯೋಚಿಸುವುದಿಲ್ಲ ಶುದ್ಧವಾದ ಆಲೋಚನೆಗಳಿಗೆ ಅದು ಶತ್ರುವೆಂದು ನನಗೆ ತೋರುತ್ತದೆ ಏಕೆಂದರೆ ಅದು ಕೆಲವು ಮಾರ್ಪಡಿಸಲಸಾಧ್ಯವಾದ ತತ್ತ್ವಗಳ ಮತ್ತು ಸಿದ್ಧಾಂತಗಳ ಉಸಿರತ್ತದ ಅಂಗೀಕಾರದ ಮೇಲೆ ಮಾತ್ರವಲ್ಲದೆ, ಭಾವ ಬೋಧನೆ ಮತ್ತು ರಾಗಾವೇಶಗಳ ಮೇಲೆಯೂ ನಿಂತಿದೆ ನಾನು ಆಧ್ಯಾತ್ಮಿಕವೆಂದು ಪರಿಗಣಿಸುವ ಮತ್ತು ಅಧ್ಯಾತ್ಮಕ್ಕೆ ಸಂಬಂಧಪಟ್ಟ ತತ್ತ್ವಗಳಿಗೂ ಇದಕ್ಕೂ ಬಹಳ ದೂರ, ಅಲ್ಲದೆ ಬುದ್ಧಿಪೂರ್ವಕವಾಗಿಯೋ ಅಥವಾ

---

* "ತಾಓಗೆ ಮೊದಲಿಲ್ಲ, ಕೊನೆಯಿಲ್ಲ ಅಡಿಲ್ಲದ ತಾವಿಲ್ಲ ತಾಓವನ್ನು ಕೇಳಲಾಗುವುದಿಲ್ಲ ಕೇಳಿಸಿದುದು ತಾಓ ಅಲ್ಲ ತಾನು ರೂಪಗಳನ್ನು ಕೊಡುತ್ತದೆ, ಆದರೆ ತನಗೆ ರೂಪವಿಲ್ಲ ಆದುದರಿಂದ ತಾಓಗೆ ಹೆಸರಿಲ್ಲ ಯೋಚನೆಯಿಲ್ಲದ ತಾಓವನ್ನು ತಿಳಿಯಬಹುದು ಯಾವುದರಲ್ಲಿಯೂ ಇಲ್ಲದೆ, ಯಾವುದನ್ನೂ ಸ್ವೀಕರಿಸದೆ ತಾಓವಿನ ಬಳಿ ಸಾರಬಹುದು ಯಾವುದನ್ನೂ ಅನುಸರಿಸದೆ, ಯಾವುದನ್ನೂ ಪಟ್ಟಾಗಿ ಹಿಡಿಯದೆ ತಾಓವನ್ನು ಪಡೆಯಬಹುದು"

—ಷು ಅಂಗ್ ಟ್ಸು,
(ಕ್ರಿ ಪೂ ೪ನೆಯ ಶತಮಾನ)

ತಿಳಿಯುದೆಯೋ ಅದು, ವಾಸ್ತವಿಕತೆಯು ಪೂರ್ವಕಲ್ಪಿತ ಭಾವನೆಗಳಿಗೆ ಎಲ್ಲಿ ಹಾಳತ ಗೂಡುವುದಿಲ್ಲವೋ ಎಂದು ವಾಸ್ತವಿಕತೆಯ ಕಡೆಗೆ ಕಣ್ಣುಮುಚ್ಚಿಕೊಳ್ಳುತ್ತದೆ ಸಂಕುಚಿತವಾಗಿದ್ದು ಇತರ ಅಭಿಪ್ರಾಯಗಳನ್ನೂ ಕಲ್ಪನೆಗಳನ್ನೂ ಸೈರಿಸುವುದಿಲ್ಲ ಅಹಂಕಾರಿ ಮಮಕಾರಿಯಾಗಿದ್ದು ಅನೇಕ ವೇಳೆ ಸ್ವಾರ್ಥಿಗಳೂ ಅಮಗವಾದಿಗಳೂ ಅದನ್ನು ದುರುಪಯೋಗಪಡಿಸಿಕೊಳ್ಳಲು ಅವಕಾಶ ಕೊಡುತ್ತದೆ

ಎಂದರೆ, ಧಾರ್ಮಿಕ ವ್ಯಕ್ತಿಗಳು ಹಿಂದಾಗಲಿ, ಇಂದಾಗಲಿ, ಬಹುತರವಾಗಿ ಉತ್ತುಂಗ ನೈತಿಕ ಮತ್ತು ಆಧ್ಯಾತ್ಮಿಕ ಮಾದರಿಗಳಲ್ಲವೆಂದಲ್ಲ ಪರದ ಮಾನದಂಡ ಗಳನ್ನು ಬಿಟ್ಟು ಇಹದ ಮಾನದಂಡಗಳಿಂದ ನೀತಿ ಮತ್ತು ಆಧ್ಯಾತ್ಮಿಕಕತೆಗಳ ಯೋಗ್ಯತಾಪರೀಕ್ಷೆಯಾಗಬೇಕಾದರ, ಒಂದು ಜನಾಂಗದ ನೈತಿಕ ಮತ್ತು ಆಧ್ಯಾತ್ಮಿಕ ಪ್ರಗತಿಗೆ ಧಾರ್ಮಿಕ ದೃಷ್ಟಿಕ್ಷೇಪವು ಸಹಾಯಮಾಡುವುದಿಲ್ಲ ಅಷ್ಟೇಕೆ, ತಡೆಯನ್ನೂ ಒಡ್ಡುತ್ತದೆ ಎಂದು ಒತ್ತಿ ಹೇಳಬೇಕಾಗಿದೆ ಸಾಮಾನ್ಯವಾಗಿ ಧರ್ಮವು ದೇವರ ಅಥವಾ ಬ್ರಹ್ಮದ ಒಂದು ಅಸಾಮಾಜಿಕ ಅನ್ವೇಷಣೆಯಾಗುತ್ತದೆ, ಮತ್ತು ಧಾರ್ಮಿಕ ವ್ಯಕ್ತಿಯೊಬ್ಬನು ಸಮಾಜದ ಮಂಗಳಕ್ಕಿಂತ ಅತ್ಯಂತ ಹೆಚ್ಚಾಗಿ ತನ್ನ ಮುಕ್ತಿಯಲ್ಲೇ ಆಸ್ಥೆಯನ್ನಿಡುತ್ತಾನೆ ಯೋಗಧ್ಯಾನವಾದಿಯು ಅಹಮ್ಮನ್ನು ನಿಗ್ರಹಿಸಲು ಪ್ರಯ ತ್ನಿಸಿ, ಆ ಪ್ರಯತ್ನದಲ್ಲಿ, ಅದೇ ಅವನ ಬಗೆಯಲ್ಲಿ ತುಂಬಿಕೊಂಡುಬಿಟ್ಟು ಗೀಳಾಗಿ ಬಿಡುತ್ತದೆ ಸಾಮಾಜಿಕ ಆವಶ್ಯಕತೆಗಳಿಗೆ ನೈತಿಕಪ್ರಮಾಣಗಳು ಯಾವ ಸಂಬಂಧ ವನ್ನೂ ಹೊಂದಿರದೆ ಉನ್ನತ ತಾತ್ತ್ವಿಕ ವಾಪವಾದದ ಮೇಲೆ ನೆಲಸಿವೆ ಸಂಘಟಿತ ಧರ್ಮವು ಅನಿವಾರ್ಯವಾಗಿ ಸ್ವಾರ್ಥವಾಗಿ ಬಿಡುವುದು, ಮತ್ತು ಹೀಗಾಗಿ, ಅನಿವಾರ್ಯ ವಾಗಿ ವ್ಯತ್ಯಾಸ ಮತ್ತು ಪ್ರಗತಿಗಳನ್ನು ಎದುರಿಸುವ ಪ್ರತೀಕಾರಕ ಶಕ್ತಿಯಾಗಿಯೂ ಬಿಡುವುದು

ಪೂರ್ವಕಾಲದಲ್ಲಿ ಕ್ರಿಶ್ಚಿಯನ್ ಚರ್ಚು, ಗುಲಾಮರು ತಮ್ಮ ಸಾಮಾಜಿಕ ಮಟ್ಟವನ್ನು ನೇರ್ಪಡಿಸಿಕೊಳ್ಳುವುದಕ್ಕೆ ನೆರವಾಗಲಿಲ್ಲವೆಂಬುದು ವೇದ್ಯವಾದ ವಿಷಯ ಯೂರೋಪಿನ ಮಧ್ಯಯುಗದಲ್ಲಿ ಗುಲಾಮರು ಆರ್ಥಿಕ ವಿಧ್ಯಮಾನಗಳಿಂದ ಜಮೀನ್ದಾರಿ ದಾಸರಾದರು ಇನ್ನೂರೇ ವರ್ಷಗಳ ಹಿಂದೆ (೧೭೨೭) ಚರ್ಚಿನ ನಿಷ್ಕೃಷ್ಟ ಮನೋಭಾವವು, ಲಂಡನ್ನಿನ ಬಿಷಪ್ಪರು ಅಮೇರಿಕದ ದಕ್ಷಿಣಾತ್ಯ ವಸಾಹತಗಳ ಗುಲಾಮ ಮಾಲೀಕರಿಗೆ ಬರೆದ ಪತ್ರ * ವೊಂದರಲ್ಲಿ ದೃಷ್ಟಾಂತ ವಾಗಿದೆ.

* ರೀನ್‌ಹೋಲ್ಡ್ ನೀಬುಹ್‌ರ್‌ರ 'ಮಾರಲ ಮ್ಯಾನ್ ಅಂಡ್ ಇಮ್ಮಾರಲ್ ಸೊಸೈಟಿ (ನೈತಿಕ ಮಾನವ ಮತ್ತು ಅನೈತಿಕ ಸಮಾಜ) (ಪುಟ ೭೮) ಎಂಬ ಅತ್ಯಂತ ಕುತೂಹಲಜನಕವೂ ಪ್ರಚೋದಕವೂ ಆದ ಪುಸ್ತಕದಲ್ಲಿ ಈ ಪತ್ರವು ಉದ್ಧಾರವಾಗಿದೆ

ಬಿಷಪ್ಪರು ಹೀಗೆ ಬರೆದರು "ಕ್ರೈಸ್ತಮತ ಮತ್ತು ಸುವಾರ್ತೆಯ ಸ್ವೀಕಾರಗಳು ಪೌರ ಆಸ್ತಿಯನ್ನಾಗಲಿ ಇಲ್ಲವೆ ಪೌರ ಸಂಬಂಧಿಗಳಿಗೆ ಸೇರಿದ ಕರ್ತವ್ಯಗಳನ್ನಾಗಲಿ ಸ್ವಲ್ಪವಾದರೂ ವ್ಯತ್ಯಾಸ ಮಾಡುವುದಿಲ್ಲ, ಅಲ್ಲದೆ ಈ ವಿಷಯಗಳಲ್ಲಿ ಮನುಷ್ಯರು ಹಿಂದೆ ಹೇಗಿದ್ದರೋ ಅದೇ ಸ್ಥಿತಿಯಲ್ಲಿ ಅವರನ್ನು ನಡೆಸುತ್ತದೆ ಕ್ರೈಸ್ತಮತವು ಕೊಡುವ ಸ್ವಾತಂತ್ರ್ಯವು, ಪಾಪ ಮತ್ತು ಸೈತಾನ್‌ಗಳ ಬಂಧನದಿಂದ ಮತ್ತು ಮಾನವರ ಕಾಮಕ್ರೋಧಾದಿ ಅರಿಷಡ್ವರ್ಗಗಳಿಂದ ಬಿಡಿಸಿಕೊಡುವ ಸ್ವಾತಂತ್ರ್ಯ, ಆದರೆ ಅವರ ಬಾಹ್ಯಪರಿಸ್ಥಿತಿಯು, ದಾಸ್ಯವಾಗಲಿ, ಸ್ವಾತಂತ್ರ್ಯವಾಗಲಿ, ಅದು ಹಿಂದೆ ಹೇಗೆ ಇದ್ದಿತೋ ಹಾಗೆಯೇ ಇರುತ್ತೆ ಜ್ಞಾನಸ್ನಾನ ಮತ್ತು ಕ್ರೈಸ್ತಮತಾವಲಂಬನಗಳು ಅವುಗಳಲ್ಲಿ ಯಾವ ವ್ಯತ್ಯಾಸವನ್ನೂ ಮಾಡುವುದಿಲ್ಲ"

ಯಾವ ಸಂಘಟಿತ ಧರ್ಮವಾಗಲಿ ಇಂದು ಈ ಬಿಚ್ಚು ಮಾತಿನ ವಿಧಾನದಲ್ಲಿ ಉಕ್ತವಾಗುವುದಿಲ್ಲ ಆದರೆ ಸಾರಭೂತವಾಗಿ ಆಸ್ತಿ ಮತ್ತು ಪ್ರಚಲಿತ ಸಾಮಾಜಿಕ ಪದ್ಧತಿಗಳನ್ನು ಕುರಿತು ಅದರ ನಿಷ್ಕೃಷ್ಟ ಮನೋಭಾವವು ಇದೇ ಆಗಿರುತ್ತದೆ

ಕೇವಲ ಪದಗಳು ಅಭಿಪ್ರಾಯ ಪ್ರಕಟಣೆಗೆ ತೀರ ಅಪೂರ್ಣವಾದ ಸಾಧನವೆಂಬುದು ವೇದ್ಯವಾಗಿದೆ ಅಲ್ಲದೆ ಅವುಗಳನ್ನು ವಿವಿಧ ರೀತಿಗಳಲ್ಲಿ ಅರ್ಥಮಾಡಿಕೊಳ್ಳುತ್ತಾರೆ 'ರಿಲಿಜನ್' (ಅಥವಾ ಇತರ ಭಾಷೆಗಳಲ್ಲಿನ ತತ್ಸಮವಾದ ಪದಗಳು)ಎಂಬ ಪದವನ್ನು ಕುರಿತು ವಿವಿಧ ಜನರು ಮಾಡುವಷ್ಟು ವಿವಿಧ ವ್ಯಾಖ್ಯಾನಗಳನ್ನು ಯಾವ ಭಾಷೆಯಲ್ಲೂ ಯಾವ ಪದಕ್ಕೂ ಮಾಡಲಾರರು ಪ್ರಾಯಃ ಈ ಪದವನ್ನು ಕೇಳಿದೊಡನೆ ಅಥವಾ ಓದಿದೊಡನೆ ಯಾರಿಬ್ಬರಿಗೂ ಒಂದೇ ವಿಧವಾದ ಭಾವಗಳ ಮತ್ತು ಚಿತ್ರಗಳ ಕಲಬೆರಿಕೆಯು ಉದ್ಭವಿಸುವುದಿಲ್ಲ ಈ ಕಲ್ಪನೆ ಮತ್ತು ಚಿತ್ರಗಳಲ್ಲಿ ಇವೆಲ್ಲವೂ ಸೇರಿರಬಹುದು ವ್ರತಗಳು, ಕರ್ಮತಂತ್ರಗಳು, ಪವಿತ್ರಗ್ರಂಥಗಳು, ಜಾತಿಯೊಂದರ ಜನಗಳು, ಕೆಲವು ಸಿದ್ಧಾಂತಗಳು, ನೀತಿಗಳು, ಭಕ್ತಿ, ಪ್ರೇಮ, ಭಯ, ದ್ವೇಷ, ದಾನ, ತ್ಯಾಗ, ಸಂನ್ಯಾಸ, ಉಪವಾಸ, ಸಮಾರಾಧನೆ, ಜಪ, ಪ್ರಾಚೀನ ಇತಿಹಾಸ, ಮದುವೆ, ಮರಣ, ಪರಲೋಕ, ದೊಂಬಿಗಳು ಮತ್ತು ತಲೆಗಳ ಒಡೆತ, ಇತ್ಯಾದಿ, ಇತ್ಯಾದಿ ಈ ಅನೇಕ ವಿವಿಧ ಪ್ರತಿಬಿಂಬಗಳು ಮತ್ತು ವ್ಯಾಖ್ಯಾನಗಳಿಂದ ಉಂಟಾದ ಭಯಂಕರ ಅಕಟವಿಕಟಾವಸ್ಥೆಯನ್ನು ಬಿಟ್ಟರೂ, ಪಕ್ಷಪಾತವಿಲ್ಲದ ಪರ್ಯಾಲೋಚನೆಯನ್ನು ಅಸಾಧ್ಯವಾಗಿಸುವ ಬಲವತ್ತರವಾದ ರಾಗದ ಮಾರ್ದನಿಯು ಅನಿವಾರ್ಯವಾಗಿ ಏಳುತ್ತದೆ ರಿಲಿಜನ್ ಎಂಬ ಪದವು ಅದರ ನಿಷ್ಕೃಷ್ಟ ಸಂಕೇತಾರ್ಥವನ್ನು (ಅದಕ್ಕೆ ಎಂದಾದರೂ ಹಾಗಿದ್ದಿದ್ದರೆ) ಸಂಪೂರ್ಣವಾಗಿ ಕಳೆದುಕೊಂಡುಬಿಟ್ಟಿದೆ ಅನೇಕ ವೇಳೆ ಅದಕ್ಕೆ ಸಂಪೂರ್ಣ ಭಿನ್ನವಾದ ಅರ್ಥಗಳನ್ನು ಆರೋಪಿಸಿದಾಗ ಅದು ಸುಮ್ಮನೆ ಗೊಂದಲವೆ

ಬ್ಬಿಸಿ, ಕೊನೆಯಿಲ್ಲದ ವಾದಪ್ರತಿವಾದಗಳಿಗೆ ಕಾರಣವಾಗುತ್ತದೆ. ಇದರ ಉಪಯೋಗವನ್ನು ಸಂಪೂರ್ಣವಾಗಿ ಬಿಟ್ಟುಬಿಟ್ಟು, ಸ್ವಲ್ಪ ಎಲ್ಲೆಯುಳ್ಳ ಅರ್ಥಗಳನ್ನೊಳಗೊಂಡ ಈ ವಿಧವಾದ ಪದಗಳನ್ನು ಉಪಯೋಗಿಸುವುದು ಎಷ್ಟೋ ಲೇಸು. ಬ್ರಹ್ಮವಿಜ್ಞಾನ ದರ್ಶನ, ನೀತಿಶಾಸ್ತ್ರ, ಆಧ್ಯಾತ್ಮಿಕತೆ, ತತ್ತ್ವಶಾಸ್ತ್ರ, ಕರ್ತವ್ಯ, ಕರ್ಮತಂತ್ರಗಳು ಇತ್ಯಾದಿ, ಇತ್ಯಾದಿ. ಈ ಪದಗಳೂ ಸಹ ಸಾಕಷ್ಟು ಅಸ್ಪಷ್ಟವಾಗಿಯೇ ಇವೆ. ಆದರೆ ಇವು 'ರಿಲಿಜನ್' ಎಂಬುದಕ್ಕಿಂತ ಬಹಳ ಮಟ್ಟಿಗೆ ಕಡಿಮೆಯಾದ ಅರ್ಥವ್ಯಾಪ್ತಿಯನ್ನು ಹೊಂದಿವೆ. 'ರಿಲಿಜನ್' ಎಂಬ ಪದವನ್ನು ಸುತ್ತಿಕೊಂಡು ಮುಚ್ಚಿಕೊಂಡಿರುವ ಆವೇಶಗಳು ಮತ್ತು ರಾಗಗಳನ್ನು ಈ ಪದಗಳನ್ನು ತಮಗೆ ತಾವು ತಷ್ಟು ಮಟ್ಟಿಗೆ ಹಚ್ಚಿಕೊಳ್ಳದಿರುವುದು ಒಂದು ದೊಡ್ಡ ಅನುಕೂಲ.

ಹಾಗದರೆ ಧರ್ಮ (ಸ್ವತಸ್ಸಿದ್ಧವಾದ ಅನಾನುಕೂಲಗಳಿದ್ದರೂ ಅದೇ ಪದವನ್ನು ಪಯೋಗಿಸಿದರೆ) ವೆಂದರೇನು ? ಪ್ರಾಯಃ ಅದು ವ್ಯಕ್ತಿಯ ಆಂತರಿಕವಾದ ಬೆಳವಣಿಗೆ, ಉತ್ತಮವೆಂದು ಪರಿಗಣಿಸಲ್ಪಟ್ಟಿರುವ ದಿಕ್ಕಿನಲ್ಲಿ, ಅವನ ಜಾಗೃತಿಯ ವಿಕಾಸ. ಆ ದಿಕ್ಕು ಏನೆಂಬುದು ಪುನಃ ವಾದಪ್ರತಿವಾದಗಳಿಗೆ ಬೀಳುವುದು. ಆದರೆ ನಾನು ಅರ್ಥಮಾಡಿಕೊಂಡಿರುವ ಮಟ್ಟಿಗೆ, ಧರ್ಮವು ಈ ಆಂತರಿಕ ವ್ಯತ್ಯಾಸವನ್ನು ಅವಧಾರಣೆಮಾಡಿ, ಬಾಹ್ಯವ್ಯತ್ಯಾಸವು ಒಳಗಿನ ಬೆಳವಣಿಗೆಯ ಪ್ರತಿರೂಪಮಾತ್ರವೆಂದು ಪರಿಗಣಿಸುತ್ತದೆ. ಈ ಒಳಗಿನ ಬೆಳವಣಿಗೆಯು ಹೊರಗಿನ ಆವರಣದಮೇಲೆ ಪ್ರಬಲವಾದ ಪ್ರಭಾವವನ್ನು ಬೀರುತ್ತದೆಯೆಂಬುದು ನಿಸ್ಸಂದೇಹವಾದುದು. ಅಂತೆಯೇ ಬಾಹ್ಯಾವರಣವೂ ಒಳಗಿನ ಬೆಳವಣಿಗೆಯ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರುತ್ತದೆ ಎಂಬುದು ಸಹ ಅಷ್ಟೇ ಸ್ವತಸ್ಸಿದ್ಧವಾಗಿದೆ. ಈ ಎರಡೂ ಒಂದರೊಂದರ ಮೇಲೆ ಕ್ರಿಯೆ ಅಂತಃಕ್ರಿಯೆಗಳನ್ನು ನಡೆಸುತ್ತವೆ. ಆಧುನಿಕ ಕೈಗಾರಿಕೆಯ ಪಶ್ಚಿಮದಲ್ಲಿ ಹೊರಗಣ ಬೆಳವಣಿಗೆಯು ಒಳಗಣದಕ್ಕಿಂತ ಬಹಳ ಮುಂದೆ ಹೊರಟುಹೋಗಿದೆಯೆಂಬುದು ಸರ್ವಸಾಮಾನ್ಯವಾದ ವಿಷಯ. ಆದರೆ ಇದರಿಂದ, ಪೂರ್ವದಲ್ಲಿ ಅನೇಕರು ಕಲ್ಪಿಸಿಕೊಂಡಿರುವಂತೆ, ನಾವು ಕೈಗಾರಿಕೆಗಳಲ್ಲಿ ಹಿಂದೆಬಿದ್ದಿರುವುದರಿಂದಲೂ ನಮ್ಮ ಹೊರಗಣ ಬೆಳವಣಿಗೆಯು ನಿಧಾನವಾಗಿರುವುದರಿಂದಲೂ ನಮ್ಮ ಆಂತರಿಕ ವಿಕಾಸವು ಇನ್ನೂ ಹೆಚ್ಚಾಗಿರುವುದೆಂದು ಹೇಳಲಾಗುವುದಿಲ್ಲ. ನಾವು ಕೆಳಗಿನ ತರಗತಿಯವರೆಂಬ ಭಾವನೆಯನ್ನು ಮೀರುವುದಕ್ಕೂ ನಮ್ಮನ್ನು ನಾವು ಸಂತಯಿಸಿಕೊಳ್ಳುವುದಕ್ಕೂ ಉಪಯೋಗಿಸಿಕೊಳ್ಳುತ್ತಿರುವ ಭ್ರಮೆಗಳಲ್ಲಿ ಇದೊಂದು. ವ್ಯಕ್ತಿಗಳು ಪರಿಸ್ಥಿತಿಗಳನ್ನೂ ಆವರಣವನ್ನೂ ಮೀರಿ ಉತ್ತುಂಗ ಆಂತರಿಕ ಉನ್ನತಿಗಳನ್ನು ಪಡೆಯಬಹುದು. ಆದರೆ ದೊಡ್ಡ ದೊಡ್ಡ ಗುಂಪುಗಳಿಗೂ ಜನಾಂಗಗಳಿಗೂ ಆಂತರಿಕ ವಿಕಾಸವು ಆಗುವುದಕ್ಕಿಂತ ಮುಂಚೆ ಒಂದಷ್ಟು ಬಾಹ್ಯದಬೆಳವಣಿಗೆಯು ಅತ್ಯಾವಶ್ಯಕ. ಆರ್ಥಿಕ ಪರಿಸ್ಥಿತಿಗಳಿಗೆ ತುತ್ತಾದ ಮತ್ತು ಜೀವಿಸುವುದಕ್ಕಾಗಿ ಮಾಡುವ ಹೊಡೆದಾಟದಿಂದ ಸುತ್ತಲೂ ಕಟ್ಟಿ

ಹಾಕಲ್ಪಟ್ಟಿರುವ ಮನುಷ್ಯನೊಬ್ಬನು ಆಂತರಿಕ ಜಾಗೃತಿಯ ಯಾವ ಮಟ್ಟದ ಔನ್ನತ್ಯ ವನ್ನಾದರೂ ಪಡೆಯುವುದು ಅತಿ ವಿರಳ ಕೆಳಗೆ ಹಾಕಿ ತುಳಿಯಲ್ಪಟ್ಟ ಮತ್ತು ದುರುಪ ಯೋಗಕ್ಕೀಡಾದ ತರಗತಿಯೊಂದು ಆಂತರಿಕವಾಗಿ ಪ್ರಗತಿಹೊಂದಲೇ ಆರದು ರಾಜ ಕೀಯವಾಗಿಯೂ ಆರ್ಥಿಕವಾಗಿಯೂ ಇನ್ನೊಂದಕ್ಕೆ ಅಡಿಯಾಳಾಗಿರುವ, ಒತ್ತಲ್ಪಟ್ಟು ಸುತ್ತುಗಟ್ಟಲ್ಪಟ್ಟು ದುರುಪಯೋಗಪಡಿಸಲ್ಪಡುತ್ತಿರುವ ಜನಾಂಗವೊಂದು, ಒಳಗಿನ ಬೆಳವಣಿಗೆಯನ್ನು ಎಂದಿಗೂ ಹೊಂದಲಾರದು ಹೀಗೆ ಒಳಗಿನ ಬೆಳವಣಿಗೆಗೆ ಸಹ ಹೊರಗಿನ ಸ್ವಾತಂತ್ರ್ಯ ಮತ್ತು ಅನುಕೂಲವಾದ ಆವರಣಗಳು ಆವಶ್ಯಕವಾಗುತ್ತವೆ ಈ ಬಾಹ್ಯ ಸ್ವಾತಂತ್ರ್ಯವನ್ನು ಗೆದ್ದುಕೊಳ್ಳುವ ಮತ್ತು ಒಳಗಣ ಬೆಳವಣಿಗೆಗೆ ಇರುವ ಎಲ್ಲ ತಡೆಗಳನ್ನೂ ತೆಗೆದುಬಿಡುವ ಹಾಗೆ ಆವರಣವನ್ನು ವ್ಯತ್ಯಾಸಮಾಡುವ ಪ್ರಯತ್ನ ದಲ್ಲಿ, ಸಾಧನವು ನಿಜವಾದ ಧ್ಯೇಯವನ್ನು ಕೆಡಿಸಬಾರದಂತಿರಬೇಕು, ಎಂಬುದು ಅಪೇಕ್ಷ ಣೀಯವಾದುದು ಸಿದ್ಧಿಗಿಂತ ಸಾಧನವು ಮುಖ್ಯವಾದುದೆಂದು ಗಾಂಧಿಜಿಯವರು ಹೇಳುವಾಗ ಈ ವಿಧವಾದ ಯಾವುದೋ ಒಂದನ್ನು ಮನಸ್ಸಿನಲ್ಲಿ ಇಟ್ಟುಕೊಂಡಿರಬೇ ಕೆಂದು ತೋರುತ್ತದೆ ಆದರೆ ಸಾಧನಗಳು ಸಿದ್ಧಿಗೆ ಕರೆದೊಯ್ಯುವಂಥವಾಗಿರಬೇಕು ಇಲ್ಲದಿದ್ದರೆ ಅವು ವಿಫಲ ಪ್ರಯತ್ನವಾಗುತ್ತವೆ ಅಲ್ಲದೆ ತತ್ಪರಿಣಾಮವಾಗಿ ಒಳಗಿನ ಮತ್ತು ಹೊರಗಿನ ಹೆಚ್ಚುಹೆಚ್ಚಾದ ಕೇಡಾಗಬಹುದು

"ಧರ್ಮವಿಲ್ಲದೆ ಯಾರೊಬ್ಬರೂ ಜೀವಿಸಲಾರರು," ಎಂದು ಗಾಂಧಿಜಿಯವರು ಎಲ್ಲಿಯೋ ಒಂದು ಕಡೆ ಬರೆದಿದ್ದಾರೆ "ಅವರ ವಿವೇಚನ ಶಕ್ತಿಯ ಅಹಂಭಾವದಲ್ಲಿ ಕೆಲವರು, ತಮಗೂ ಧರ್ಮಕ್ಕೂ ಯಾವ ಸಂಬಂಧವೂ ಇಲ್ಲವೆಂದು ಉಗ್ಗಡಿ ಸುತ್ತಾರೆ ಎಂದರೆ, ಮನುಷ್ಯನೊಬ್ಬನು ತಾನು ಉಸಿರಾಡುತ್ತಿದ್ದಾನೆಂದೂ, ಆದರೆ ತನಗೆ ಮೂಗೇ ಇಲ್ಲವೆಂದೂ ಹೇಳಿದಂತೆ" ಅವರು ಪುನಃ ಹೀಗೆ ಹೇಳುತ್ತಾರೆ "ಸತ್ಯದಲ್ಲಿರುವ ನನ್ನ ಭಕ್ತಿಯು ನನ್ನನ್ನು ರಾಜಕೀಯ ಕ್ಷೇತ್ರಕ್ಕೆ ಸೆಳೆದಿದೆ, ಮತ್ತು ಯಾರು ಧರ್ಮಕ್ಕೂ ರಾಜಕಾರಣಕ್ಕೂ ಯಾವ ಸಂಬಂಧವೂ ಇಲ್ಲವೆಂದು ಹೇಳುತ್ತಾರೆಯೋ ಅವರಿಗೆ ಧರ್ಮವೆಂದರೇನೆಂಬುದು ತಿಳಿಯದು ಎಂದು ನಾನು ಸ್ವಲ್ಪವೂ ಹಿಂದುಮುಂದು ನೋಡದೆ, ಆದರೂ ವಿನಯಪೂರ್ವಕವಾಗಿ, ಹೇಳಬಲ್ಲೆ" ಜೀವನ ಮತ್ತು ರಾಜಕಾರಣಗಳಿಂದ ಧರ್ಮವನ್ನು ಸಂಪೂರ್ಣವಾಗಿ ಹೊರಗಿಡ ಬೇಕೆಂದಿರುವ ಈ ಜನರಲ್ಲನೇಕರು 'ಧರ್ಮ' ಎಂಬ ಪದಕ್ಕೆ ಗಾಂಧಿಜಿಯವರ ಅರ್ಥ ಕ್ಕಿಂತ ಬಹು ಭಿನ್ನವಾದ ಅರ್ಥವನ್ನಿಟ್ಟುಕೊಂಡಿರುವರೆಂದು ಅವರು ಹೇಳಿದ್ದರೆ, ಪ್ರಾಯಃ ಅದು ಇನ್ನೂ ಸರಿಯಾದ ಮಾತಾಗುತ್ತಿತ್ತು ಅವರು ಅದನ್ನು ಬೇರೆ ಅರ್ಥದಲ್ಲಿ,—ಪ್ರಾಯಃ ಇತರರೆಲ್ಲರಿಗಿಂತಲೂ ಹೆಚ್ಚಾದ ನೈತಿಕ ದೃಷ್ಟಿಗಳಿಂದ— ಧರ್ಮದ ಇತರ ವಿಮರ್ಶಕರಿಗಿಂತ ಭಿನ್ನವಾದ ಅರ್ಥದಲ್ಲಿ, ಅವರು ಉಪಯೋಗಿಸುತ್ತಿ ದ್ದಾರೆಂಬುದು ಸ್ವತಸ್ಸಿದ್ಧವಾಗಿದೆ ಏಕಮಾತ್ರ ಪದದ ಈ ಬೇರೆಬೇರೆ ಅರ್ಥಗಳ

ಪ್ರಯೋಗಗಳು ಪರಸ್ಪರ ಜ್ಞಾನವಿನಿಮಯವನ್ನೂ ಇನ್ನೂ ಹೆಚ್ಚು ಕಷ್ಟವಾಗಿ ಸುತ್ತದೆ

ಧಾರ್ಮಿಕ ಪುರುಷರು ಎಂದಿಗೂ ಒಪ್ಪದಿರುವ, ಧರ್ಮದ ಒಂದು ಅತ್ಯಾಧುನಿಕ ನಿರೂಪಣೆಯು ಪ್ರೊ॥ ಜಾನ್ ಡ್ಯುವೆ. ಅವರದು ಅವರ ಪ್ರಕಾರ ಧರ್ಮವು "ಮಾರ್ಪಡುತ್ತಿರುವ ಅಸ್ತಿತ್ವದ ಪ್ರಸಂಗಗಳಲ್ಲೂ ಅಸ್ತವ್ಯಸ್ತವಾದ ಭಿನ್ನಾಂಶಗಳಲ್ಲೂ ದೂರ ಹತ್ತಿರಗಳನ್ನು ಮತ್ತು ವರ್ಣವಿವರ್ಣಗಳನ್ನು ಕುರಿತ ಒಂದು ನಿಜವಾದ ದೃಷ್ಟಿಕ್ಷೇಪವನ್ನು ಕೊಡುವುದು", ಅಥವಾ ಪುನಃ "ಪ್ರತಿಬಂಧಕಗಳ ಎದುರಿನಲ್ಲೂ, ಅದರ ಸಾಮಾನ್ಯ ಮತ್ತು ನಿಡುಗಾಲ ಬಾಳುವ ಬೆಲೆಯ ಮನಗಾಣ್ಕೆಯಿಂದ, ಸ್ವಕೀಯ ನಷ್ಟಗಳ ಬೆದರಿಕೆಗಳಿದ್ದರೂ, ಆದರ್ಶ ಧ್ಯೇಯವೊಂದಕ್ಕಾಗಿ, ಪಟ್ಟಾಗಿ ಅನುಸರಿಸುವ ಎಲ್ಲ ಚಲನವಲನಗಳೂ ಗುಣದಲ್ಲಿ ಧಾರ್ಮಿಕವಾಗಿದ" ಇದು ಧರ್ಮವಾದರ ಯಾರೂ ಇದಕ್ಕೆ ಆಕ್ಷೇಪಣೆ ತರಲಾರರು

ಸಂಘಟಿತ ಧರ್ಮಗಳಲ್ಲಿನ ವೈದಿಕ ಧರ್ಮಗಳನ್ನು ಪ್ರಾಯಃ ಅತ್ಯಂತ ಭಯಪಡಿಸುವ ಒಂದು ಮಟ್ಟಕ್ಕೆ ರೋಮಾ ರೋಲಾಂರವರೂ ಧರ್ಮದ ಅರ್ಥವನ್ನು ಹಿಗ್ಗಿಸಿದ್ದಾರ ಅವರ "ಲೈಫ್ ಆಫ್ ರಾಮಕೃಷ್ಣ" (ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆ)ದಲ್ಲಿ ಹೀಗೆ ಹೇಳುತ್ತಾರ

" ಎಲ್ಲ ವಿಧವಾದ ಧಾರ್ಮಿಕ ಶ್ರದ್ಧೆಯಿಂದಲೂ ದೂರವಾಗಿರುವೆವೆಂದು ನಂಬಿರುವ ಅಥವಾ ದೂರವಾಗಿರುವ, ಆದರೆ ಯಾರು ನಿಜವಾಗಿ ಸಮತಾವಾದ, ಕಮ್ಯೂನಿಸಂ, ಮಾನವತಾವಾದ, ರಾಷ್ಟ್ರೀಯತಾವಾದ ಮತ್ತು ವಿವೇಚನವಾದ ಎಂದು ಅವರೇ ಹೆಸರಿಟ್ಟಿರುವ ಅನೇಕರು 'ಅತಿ-ವಿವೇಚನ' ಜಾಗೃತಾವಸ್ಥೆಯಲ್ಲಿ ಮುಳುಗಿ ಜೀವಿಸುತ್ತಿರುವರು ಆಲೋಚನೆಯ ಉತ್ಪತ್ತಿಸ್ಥಾನವನ್ನು ನಿರ್ದೇಶಿಸಿ ಅದು ಧರ್ಮದಿಂದ ಹೊರಬಿದ್ದುದೇ ಅಲ್ಲವೇ ಎಂಬುದನ್ನು ನಾವು ನಿರ್ಣಯಿಸಲು ಅವಕಾಶ ಕೊಡುವುದು ಆಲೋಚನೆಯ ಯೋಗ್ಯತೆಯೇ ಹೊರತು ಗುರಿಯಲ್ಲ ಎಲ್ಲ ನಷ್ಟಗಳ ಎದುರಿನಲ್ಲೂ ಯಾವ ತ್ಯಾಗಕ್ಕಾದರೂ ಸಿದ್ಧವಾಗಿರುವ ಏಕಮನಸ್ಸಿನ ನಿಸ್ಪೃಹತೆಯಿಂದಲೂ ಅದು ಸತ್ಯಾನ್ವೇಷಣೆಗೆ ಆರಂಭಿಸಿದರೆ ನಾನು ಅದನ್ನು ಧಾರ್ಮಿಕ ಎಂದು ಕರೆಯಬೇಕು— ಏಕೆಂದರೆ ಅದು ಪ್ರಚಲಿತ ಸಮಾಜ ಜೀವನಕ್ಕಿಂತ ಉನ್ನತವಾದ ಮತ್ತು ಒಟ್ಟಿನಲ್ಲಿ ಇಡೀ ಮಾನವಜೀವನಕ್ಕಿಂತ ಉನ್ನತತರವಾದ ಮಾನವ ಪ್ರಯತ್ನದ ಸಿದ್ಧಿಯೊಂದರಲ್ಲಿ ಶ್ರದ್ಧೆಯನ್ನು ಪೂರ್ವಭಾವಿಯಾಗಿಯೇ ಚಿಂತಿಸುತ್ತದ ಸರ್ವ ಸಂದೇಹವಾದವು ಸಂಪೂರ್ಣ ಸತ್ವಯುಕ್ತವಾಗಿರುವ ಪ್ರವೃತ್ತಿಗಳಿಂದ ಹೊರಬಿದ್ದಾಗ, ಅದು ಶಕ್ತಿಯ ಉಕ್ತಿಯಾಗಿದ್ದು ದೌರ್ಬಲ್ಯದ್ದಲ್ಲದಿರುವಾಗ, ಅದು ಧಾರ್ಮಿಕ ಮಹಾತ್ಮರ ತೇಜೋಮಯವಾದ ಸೈನ್ಯದ ನಡೆಯೊಂದಿಗೆ ತಾನೂ ಸೇರಿಕೊಳ್ಳುತ್ತದೆ."

ರೋಮಾ ರೋಲಾಂರವರು ಇಟ್ಟಿರುವ ನಿಯಮಗಳನ್ನು ನಾನು ಪಾಲಿಸುವೆನೆಂದು ಹೇಳಿಕೊಳ್ಳಲಾರ ಆದರ ಈ ನಿಯಮಗಳನ್ನನುಸರಿಸಿ ತೇಜೋಮಯವಾದ ಆ ಸೈನ್ಯದ, ಬಡ ಪಾಳೆಯ–ಅನುಯಾಯಿಯಾಗಿರಲು ನಾನು ಸಿದ್ಧನಿದ್ದೇನೆ

## ೪೮

# ಬ್ರಿಟಿಷ್ ಸರಕಾರದ ' ದ್ವೈಧೀಭಾವದ ನೀತಿ '

ಯರವ್‌ಡಾ ಸೆರೆಯೊಳಗಿಂದ ಮತ್ತು ಆಮೇಲೆ ಹೊರಗಿಂದ, ಗಾಂಧಿಜಿಯವರಿಂದ ಮಾರ್ಗದರ್ಶಿತವಾದ ಹರಿಜನ ಚಳವಳಿಯು ನಡೆಯುತ್ತಲೇ ಇತ್ತು. ದೇವಾಲಯ ಪ್ರವೇಶದ ತಡೆಗಳನ್ನು ತೆಗೆದುಹಾಕಲು ದೊಡ್ಡ ಚಳವಳಿಯೇ ನಡೆದಿತ್ತು ಮತ್ತು ತತ್ಪರಿಣಾಮಕ್ಕಾಗಿ ಕೇಂದ್ರ ಶಾಸನ ಸಭೆಯಲ್ಲಿ ಮಸೂದೆಯೊಂದರ ಪ್ರವೇಶವಾಯಿತು ಆಮೇಲೆ, ದೆಹಲಿಯಲ್ಲಿ ಮನೆಯಿಂದ ಮನೆಗೆ ಕಾಂಗ್ರೆಸ್ಸಿನ ಮಹಾನಾಯಕರೊಬ್ಬರು ಹೋಗುತ್ತಿದ್ದು, ಶಾಸನ ಸಭೆಯ ಸದಸ್ಯರಿಗೆ ಭೇಟಿಕೊಡುತ್ತ ದೇವಾಲಯ ಪ್ರವೇಶ ಮಸೂದೆಯನ್ನು ಕುರಿತ ಅಭಿಮತವನ್ನು ಸಂಗ್ರಹಿಸುತ್ತಿದ್ದುದರ ಗಮನಾರ್ಹವಾದ ದೃಶ್ಯವು ಕಣ್ಣಿಗೆ ಬಿತ್ತು ಅವರ ಮೂಲಕ ಸ್ವಯಂ ಗಾಂಧಿಜಿಯವರೇ ಶಾಸನ ಸಭೆಯ ಸದಸ್ಯರಿಗೆ ಮನವೆಯನ್ನು ಕಳುಹಿಸಿದ್ದರು. ಇನ್ನೂ ಶಾಸನಭಂಗವು ನಡೆಯುತ್ತಲೇ ಇತ್ತು , ಜನರು ಸೆರೆಮನೆಗೆ ಹೋಗುತ್ತಲೇ ಇದ್ದರು , ಶಾಸನ ಸಭೆಯು ಕಾಂಗ್ರೆಸ್ಸಿನಿಂದ ಬಹಿಷ್ಕೃತವಾಗಿದ್ದು ನಮ್ಮ ಸದಸ್ಯರೆಲ್ಲ ಅದರಿಂದ ಹೊರಬಿದ್ದರು ಉಳಿದಿದ್ದ ಬಾಲಂಗೋಚಿಗಳೂ ಖಾಲಿ ಬಿದ್ದ ಸ್ಥಾನಗಳನ್ನು ಮಂಡಿಸಿದ್ದ ಇತರರೂ ಈ ಸಂದುಕಟ್ಟಿನಲ್ಲಿ ಕಾಂಗ್ರೆಸ್ಸಿಗೆ ವಿರೋಧವಾಗಿದ್ದು ಸರಕಾರಕ್ಕೆ ಬೆಂಬಲ ಕೊಟ್ಟು ಹೆಸರುವಾಸಿಯಾದರು ಅದರಲ್ಲಿ ಬಹು ಸಂಖ್ಯಾತರು ದಬ್ಬಾಳಿಕೆಯ ಶಾಸನಗಳನ್ನು ಅನುಮೋದಿಸುವುದರಲ್ಲಿ ಸರಕಾರಕ್ಕೆ ಸಹಾಯಮಾಡಿ, ಆರ್ಡಿನೆನ್ಸುಗಳ ಅಸಾಮಾನ್ಯ ಕೈವಾಡಗಳಿಗೆ ಒಂದು ಶಾಶ್ವತವಾದ ಅಸ್ತಿತ್ವವನ್ನು ಕೊಟ್ಟರು ಒಟ್ಟಾವ ಒಪ್ಪಂದವನ್ನವರು ನುಂಗಿದರು ದೆಹಲಿ, ಸಿಮ್ಲಾ ಮತ್ತು ಲಂಡನ್‌ಗಳಲ್ಲಿ ಮಹಾ ವ್ಯಕ್ತಿಗಳೊಡನೆ ಸಹಪಂಕ್ತಿಯಲ್ಲಿ ಸೇರಿ ವನಭೋಜನ ಮಾಡಿ ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಗಾಗಿ ಕೃತಜ್ಞತೆಯನ್ನು ಸೂಚಿಸುವುದರಲ್ಲಿ ಒಟ್ಟುಗೂಡಿ, ಭಾರತದಲ್ಲಿ ' ದ್ವೈಧೀಭಾವದ ನೀತಿ ' ಯೆಂದು ಹೆಸರಾದುದರ ವಿಜಯಕ್ಕಾಗಿ ಪ್ರಾರ್ಥಿಸಿದರು

ಆಗ ವಿದ್ಯಮಾನಗಳಿದ್ದಂತೆ, ಗಾಂಧಿಜಿಯವರ ಮನವೆಯನ್ನು ಕಂಡು, ಅದರಲ್ಲಿಯೂ ಕೆಲವು ವಾರಗಳ ಹಿಂದೆ ಕಾಂಗ್ರೆಸ್ಸಿನ ಹಂಗಾಮಿ ಅಧ್ಯಕ್ಷರಾಗಿದ್ದ ರಾಜಗೋಪಾಲಾಚಾರ್ಯರ ಅವಿರತ ಶ್ರದ್ಧಾಭರಿತ ಪ್ರಯತ್ನಗಳನ್ನು ಕಂಡು, ನಾನು ವಿಸ್ಮಯಗೊಂಡೆ ವಾಸ್ತವವಾಗಿಯೂ ಈ ಕಾರ್ಯಕಲಾಪಗಳಿಂದ ಶಾಸನ ಭಂಗಕ್ಕೆ ಹಾನಿಯಾಯಿತು ಆದರೆ ನನ್ನನ್ನು ಹೆಚ್ಚಾಗಿ ನೋಯಿಸಿದುದಾವುದೆಂದರೆ ಅದರ

ನೈತಿಕ ಮುಖ ಗಾಂಧಿಜಿಯವರಾಗಲಿ ಅಥವಾ ಕಾಂಗ್ರೆಸ್ಸಿನ ಯಾವ ನಾಯಕ ರಾಗಲಿ ಅಂಥ ಕಾರ್ಯಕಲಾಪಗಳಿಗೆ ಆಶ್ರಯ ಕೊಡುವುದೆಂದರೆ ಅದು ನನಗೆ ಅನೈತಿಕ ವೆಂದೂ ಅನೇಕ ಜನರು ಸೆರೆಮನೆಯಲ್ಲಿರುವಂದು, ಅಥವಾ ಸಂಗ್ರಾಮವನ್ನು ನಡೆಸು ತ್ತಿರುವಂದು, ಅದು ಬಹುತರ ವಿಶ್ವಾಸಘಾತುಕತನವೆಂದೂ ತೋರಿತು ಆದರೆ ಅದನ್ನವರು ನೋಡುವ ದೃಷ್ಟಿಯು ಭಿನ್ನವೆಂದು ನಾನು ಅರಿತಿದ್ದೆ

ಈ ದೇವಾಲಯ ಪ್ರವೇಶ ಮಸೂದೆಯನ್ನು ಕುರಿತ ಸರಕಾರದ ನಿಶ್ಯೃಷ್ಟ ಮನೋಭಾವವು ಆಗಲೂ ಆಮೇಲೂ ಬಹಳ ಮಟ್ಟಿಗೆ ಅಂತರಂಗವನ್ನು ಬಯಲು ಮಾಡುವುದಾಗಿತ್ತು ಅದು ಆ ಮಸೂದೆಯ ಪುರಸ್ಕಾರಕರ ದಾರಿಯಲ್ಲಿ ಸಾಧ್ಯವಾದ ಪ್ರತಿಯೊಂದು ಎಡರನ್ನೂ ತಂದೊಡ್ಡಿ, ಅದನ್ನು ಮುಂದುಮುಂದಕ್ಕೆ ತಳ್ಳುತ್ತ, ಅದರ ಪ್ರತಿಭಟನೆಯನ್ನು ಪ್ರೋತ್ಸಾಹಿಸುತ್ತ, ಕೊನೆಗೆ ಅದಕ್ಕೆ ತನ್ನ ಸ್ವಂತ ವಿರೋ ಧವನ್ನು ಸಾರಿ, ಅದನ್ನು ಕೊಂದುಹಾಕಿಬಿಟ್ಟಿತು ಭಾರತದಲ್ಲಿನ ಸಾಮಾಜಿಕ ಸುಧಾ ರಣೆಯ ಎಲ್ಲ ಪ್ರಯತ್ನಗಳನ್ನು ಕುರಿತ ಅದರ ಮನೋಭಾವವು, ಸ್ವಲ್ಪ ಹೆಚ್ಚುಕಡಿಮೆ, ಇದೇ, ಮತ್ತು ಮತಪ್ರಶ್ನೆಯನ್ನು ಕುರಿತ ತಟಸ್ಥಭಾವದ ನೆಪದಿಂದ ಅದು ಸಾಮಾಜಿಕ ಪ್ರಗತಿಯನ್ನು ತಡೆಗಟ್ಟಿದೆ ಆದರ ಇದು, ನಮ್ಮ ಸಾಮಾಜಿಕ ಕುಂದು ಕೊರತೆಗಳನ್ನು ಟೀಕಿಸುವುದನ್ನಾಗಲಿ ಇತರರನ್ನೂ ಹಾಗೆ ಮಾಡಲು ಪ್ರೇರಿಸುವದನ್ನಾ ಗಲಿ ತಡೆಗಟ್ಟಿಲ್ಲವೆಂದು ಬೇರೆ ಹೇಳಬೇಕಾಗಿಲ್ಲ ಅಡ್ಡೀಟಿನಲ್ಲಿ ಒಂದು ಗುಡ್ಡೇಟಿ ನಿಂದ ಶಾರದಾ ಶಿಶುವಿವಾಹ ನಿರೋಧ ಮಸೂದೆಯು ಶಾಸನವಾಯಿತು ಆದರೆ ಈ ದೌರ್ಭಾಗ್ಯ ಶಾಸನದ ಈಚಿನ ಇತಿಹಾಸವು, ಅಂತಹ ಯಾವ ಶಾಸನವನ್ನಾದರೂ ಬಲಾತ್ಕಾರದಿಂದ ಪ್ರಚಾರಕ್ಕೆ ತರಲು ಸರಕಾರವು ಎಷ್ಟು ವಿಮುಖವಾಗಿತ್ತು ಎಂಬುದನ್ನು ಎಲ್ಲಕ್ಕಿಂತ ಹೆಚ್ಚಾಗಿ ತೋರಿಸಿತು ಮಾರನೆಯ ದಿನದ ಉಪಯೋಗಕ್ಕಾಗಿ ಹಿಂದಿನ ರಾತ್ರಿಯೇ ಆರ್ಡಿನೆನ್ಸುಗಳನ್ನು ನಿರ್ಮಿಸಬಲ್ಲ, ಹೊಸ ಅಪರಾಧಗಳನ್ನು ಸೃಷ್ಟಿಸುತ್ತ ಒಬ್ಬನ ತಪ್ಪಿಗಾಗಿ ಇನ್ನೊಬ್ಬನಿಗೆ ಕೊಡುವ ಶಿಕ್ಷೆಗೆ ಅವಕಾಶಕೊಡಬಲ್ಲ, ಮತ್ತು ಅವುಗಳ ಹವಣಿಕೆಗಳನ್ನು ಮುರಿದುದಕ್ಕಾಗಿ ಹತ್ತಾರು ಸಾವಿರ ಜನಗಳನ್ನು ಸೆರೆಮನೆಗೆ ಕಳುಹಿಸಬಲ್ಲ ಸರಕಾರವು, ಕಣ್ಣಿಗೆ ತೋರುವಂತೆ, ಶಾರದಾ ಶಾಸನದಂಥ ತನ್ನ ಸಕ್ರಮ ಶಾಸನಗಳಲ್ಲೊಂದನ್ನು ಪ್ರಚಾರಕ್ಕೆ ತರುವ ಆಲೋಚನೆಗೆ ತತ್ತರಿಸಿತು ಯಾವ ಕೇಡಿನೊಡನೆ ಹೋರಾಡಲು ಅದು ಉದ್ದೇಶಿಸಿತ್ತೋ ಅದನ್ನೇ ಬಹಳ ಹೆಚ್ಚಾಗಿ ಬೆಳೆ ಸುವುದೇ ಆ ಶಾಸನದ ಮೊದಮೊದಲಿನ ಪರಿಣಾಮವಾಯಿತು ಏಕೆಂದರೆ ಶಾಸನವು ತಿಳಿಗೇಡಿತನದಿಂದ ನೀಡಿದ ಅಂತರಾಯದ ಆರುತಿಂಗಳ ಅವಕಾಶ ಸೌಲಭ್ಯವನ್ನು ಉಪಯೋಗಿಸಿಕೊಳ್ಳಲು ಜನರು ನುಗ್ಗಿದರು ಆಮೇಲೆ ಶಾಸನವು ಹೆಚ್ಚುಕಡಿಮೆ ಅಣಕವೊಂದೆಂದೂ ಸರಕಾರದಿಂದ ಯಾವ ನ್ಯಾಯ ಕಾರ್ಯಕ್ರಮಗಳೂ ಕೈಗೊಳ್ಳಲ್ಪ ಡದೆ ಸುಲಭವಾಗಿ ಜನಗಳಿಂದ ಉಪೇಕ್ಷಿತವಾಗಬಹುದೆಂದೂ ಕಂಡುಹಿಡಿಯಲಾಯಿತು ಸರಕಾರದ ಪರವಾಗಿ ಪ್ರಚಾರ ಕಾರ್ಯವನ್ನು ಕುರಿತ ಯಾವ ಅಲ್ಪ ಪ್ರಯತ್ನವೂ

ನಡೆಯಲಿಲ್ಲ, ಮತ್ತು ಹಳ್ಳಿಗಳಲ್ಲಿ ಅನೇಕ ಜನರು ಶಾಸನವೇನೆಂಬುದನ್ನೇ ತಿಳಿದಿರಲಿಲ್ಲ ಸತ್ಯಾಂಶಗಳನ್ನು ತಾವೇ ಅರಿಯದಿದ್ದ ಹಿಂದೂ ಮತ್ತು ಮುಸಲ್ಮಾನ ಗ್ರಾಮೋಪದೇಶಕರಿಂದ ವಿಕಾರವಮಾಡಲ್ಪಟ್ಟ ಅದರ ವರದಿಗಳನ್ನು ಅವರು ಕೇಳಿದರು

ಬ್ರಿಟಿಷ್ ಸರಕಾರವು ಭಾರತದ ಸಾಮಾಜಿಕ ಕುಂದು ಕೊರತೆಗಳನ್ನು ಕುರಿತು ತೋರಿಸಿರುವ ಈ ಅಸಾಮಾನ್ಯ ಸಹನಶೀಲತೆಯು ಅವುಗಳ ವಿಷಯದಲ್ಲಿನ ಯಾವ ಪಕ್ಷಪಾತದಿಂದಲೂ ಅಲ್ಲವೆಂಬುದು ಸ್ಪಷ್ಟವಾಗಿದೆ ಅವುಗಳ ಪರಿಹಾರವನ್ನು ಕುರಿತು ಅವರು ಹೆಚ್ಚಾಗಿ ಹಂಬಲಿಸುವುದಿಲ್ಲವೆಂಬುದು ನಿಜವಾದುದು ಏಕೆಂದರೆ ಈ ಕುಂದುಕೊರತೆಗಳು, ಭಾರತವನ್ನು ಆಳುವ ಮತ್ತು ಅದರ ಸೌಕರ್ಯಗಳನ್ನು ಸ್ವಾರ್ಥಕ್ಕಾಗಿ ಸುಲಿಯುವ ಅವರ ಜಂಬರದ ಗೋಜಿಗೆ ಹೋಗುವುದಿಲ್ಲ ಸಾಮಾಜಿಕ ಸುಧಾರಣೆಗಳನ್ನು ಸೂಚಿಸಿ ಬಗೆಬಗೆಯ ಜನರನ್ನು ರೇಗಿಸುವ ಆಪತ್ತು ಸದಾ ಇದ್ದೇ ಇರುವುದು, ಮತ್ತು ರಾಜಕೀಯ ಸಮಕ್ಷೇತ್ರದಲ್ಲಿ ಸಾಕಷ್ಟು ಕೋಪವನ್ನೂ, ಕಿರುಕುಳವನ್ನೂ ಎದುರಿಸಬೇಕಾಗಿ ಬಂದಿರುವುದರಿಂದ ಬ್ರಿಟಿಷ್ ಸರಕಾರವು ತನ್ನ ಜಂಜಡಗಳನ್ನು ಹೆಚ್ಚಿಸಿಕೊಳ್ಳಬಯಸುವುದಿಲ್ಲ ಆದರೆ ಆಮೇಲಾಮೇಲಿನಿಂದ ಅವಸ್ಥಾನವು ಸಮಾಜ ಸುಧಾರಕನ ದೃಷ್ಟಿಯಿಂದ ಬಹಳ ಕೆಟ್ಟುಹೋಗಿದೆ ಏಕೆಂದರೆ ಬ್ರಿಟಿಷರು ಹೆಚ್ಚುಹೆಚ್ಚಾಗಿ ಈ ಕುಂದು ಕೊರತೆಗಳ ನಿದ್ದಿಲ್ಲದ ಕೋಟೆಕೊತ್ತಳಗಳಾಗುತ್ತಿದ್ದಾರೆ ಭಾರತದಲ್ಲಿನ ತೀರ ಪ್ರತೀಕಾರಕ ಅಂಶಗಳೊಂದಿನ ಅವರ ಸಂಪರ್ಕವೇ ಇದಕ್ಕೆ ಕಾರಣವಾಗಿದೆ ಅವರ ಪ್ರಭುತ್ವಕ್ಕೆ ವಿರೋಧವು ಹೆಚ್ಚಿದಂತೆಲ್ಲ ಅವರು ವಿಲಕ್ಷಣವಾದ ಬೀಗತನಗಳನ್ನು ಹುಡುಕಬೇಕಾಗುವುದು ಮತ್ತು ಇಂದು, ತೀವ್ರ ಕೋಮುವಾರು ವಾದಿಗಳೂ ಮತೀಯ ಪ್ರತೀಕಾರಿಗಳೂ ತಿಳಿವಿನ ಹಗೆ (ಅಬ್ಸ್ಕ್ಯೂರಾಂಟ್)ಗಳೂ ಭಾರತದಲ್ಲಿನ ಬ್ರಿಟಿಷ್ ಪ್ರಭುತ್ವದ ಜಪ್ಪಯ್ಯ ಎಂದರೂ ಜಗ್ಗದ ಜಗಜಟ್ಟಿಗಳಾಗಿದ್ದಾರೆ ಮುಸಲ್ಮಾನ ಕೋಮುವಾರು ಸಂಸ್ಥೆಗಳು ಪ್ರತಿಯೊಂದು ದೃಷ್ಟಿಯಿಂದಲೂ—ರಾಜಕೀಯ, ಆರ್ಥಿಕ, ಸಾಮಾಜಿಕ—ಅಪಕೀರ್ತಿಕರ ಪ್ರತೀಕಾರಿಗಳಾಗಿವೆ ಹಿಂದೂ ಮಹಾಸಭೆಯು ಅದರ ಮೇಲಾಡಿ ಆದರೆ ಅದು, ಚುರುಕಿನಿಂದ ಕೂಡಿದ, ಅಥವಾ ಗಾದರೂ ಮುಕ್ತಕಂಠದಿಂದ ಉಕ್ತವಾದ ಬ್ರಿಟಿಷ್ ಪ್ರಭುತ್ವವನ್ನು ಕುರಿತ ರಾಜಭಕ್ತಿ, ತೀವ್ರವಾದ ಮಾದರಿಯ ಧಾರ್ಮಿಕ ತಿಳಿವಿನ ಹಗೆತನ, ಇವುಗಳನ್ನು ಒಟ್ಟಿಗೆ ಮೈಗೂಡಿಸಿಕೊಂಡಿರುವ ಸನಾತನಿಗಳಿಂದ, ಈ ವಿಗತಿ ಮಾರ್ಗದ ಜೂಜಿನಲ್ಲಿ ಬಹಳ ಹಿಂದ ಬಿಡಲ್ಪಟ್ಟಿದೆ

ಬ್ರಿಟಿಷ್ ಸರಕಾರವು ಅನಾಸಕ್ತವಾಗಿದ್ದು, ಶಾರದಾ ಶಾಸನವನ್ನು ಜನಸಾಮಾನ್ಯ ಪ್ರೀತವನ್ನಾಗಿ ಮಾಡಿ ಪ್ರಚಾರ ಮಾಡಲು ಯಾವ ಪ್ರಯತ್ನವನ್ನೂ ಮಾಡದಿದ್ದರೆ, ಕಾಂಗ್ರೆಸ್ಸಾಗಲಿ ಇಲ್ಲವೆ ಇತರ ಖಾಸಗಿ ಸಂಸ್ಥೆಗಳಾಗಲಿ ಅದರ ಪರವಾಗಿ ಏಕೆ ಪ್ರಚಾರ ಕಾರ್ಯ ಮಾಡಲಿಲ್ಲ ? ಬ್ರಿಟಿಷ್ ಮತ್ತು ಇತರ ವಿದೇಶಿ ವಿಮರ್ಶಕ

ರಿಂದ ಈ ಪ್ರಶ್ನೆಯು ಪದೇಪದೇ ಹಾಕಲ್ಪಡುತ್ತಿದೆ ಕಾಂಗ್ರೆಸ್ಸಿನ ಅಸ್ತಿಯನ್ನು ಕುರಿತು ಹೇಳುವುದಾದರೆ, ಅದು ಕಳೆದ ಹದಿನೈದು ವರ್ಷಗಳಲ್ಲಿ, ವಿಶೇಷವಾಗಿ ೧೯೩೦ ರಿಂದ, ರಾಷ್ಟ್ರೀಯ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷ್ ಆಳರಸರೊಂದಿಗೆ ಭೀಕರವಾದ ಅಳಿವು ಉಳಿವುಗಳ ಕಾಳಗದಲ್ಲಿ ತೊಡಗಿದೆ ಇತರ ಸಂಸ್ಥೆಗಳು ನಿಜವಾದ ಶಕ್ತಿಯಿಂದ ಕೂಡಿಲ್ಲ ಅಥವಾ ಜನಜಂಗುಳಿಯ ಸಂಪರ್ಕವನ್ನು ಪಡೆದಿಲ್ಲ ಆದರ್ಶಗಳು, ಶೀಲ ಚೈತನ್ಯ ಮತ್ತು ಜನ ಜಂಗುಳಿಯ ಮೇಲಿನ ಪ್ರಭಾವ ಸ್ಫೂರ್ತಿಗಳಿಂದ ಕೂಡಿದ ಸ್ತ್ರೀ ಪುರುಷರು ಕಾಂಗ್ರೆಸ್ಸಿಗೆ ಆಕರ್ಷಿತರಾಗಿ, ತಮ್ಮ ಜೀವಮಾನದ ಬಹು ಭಾಗವನ್ನು ಬ್ರಿಟಿಷ್ ಸೆರೆಮನೆಗಳಲ್ಲಿ ಕಳೆದರು

ಇತರ ಸಂಸ್ಥೆಗಳಾದರೋ, ಜನಜಂಗುಳಿಯ ಸಂಪರ್ಕಕ್ಕೆ ಹೆದರಿದ ಆಯ್ದ ಕೆಲವು ಮಂದಿಯಿಂದ ಕೂಡಿದ್ದು, ಠರಾವುಗಳನ್ನು ಅನುಮೋದಿಸುವುದಕ್ಕಿಂತ ಹೆಚ್ಚು ದೂರ ಹೋಗುವುದೇ ಇಲ್ಲ ಅವು ಕುಲೀನ ಪುರುಷನಂತೆ ಇಲ್ಲವೇ ಅಖಿಲಭಾರತ ಮಹಿಳಾ ಸಂಘದಂತೆ ಕುಲೀನ ಸ್ತ್ರೀಯ ರೀತಿಯಲ್ಲಿ ಕೆಲಸ ಮಾಡಿದುವು, ಮೇಲೆ ಬೀಳುವ ಪ್ರಚಾರಕಾರ್ಯವು ಅದರದಲ್ಲವಾಗಿತ್ತು ಮೇಲಾಗಿ ಆರ್ಡಿನೆನ್ಸುಗಳ ಹಿಂದೆಯೇ ಬಂದ ಶಾಸನಗಳಿಂದುಂಟಾದ ಸಕಲ ಸಾರ್ವಜನಿಕ ಕಾರ್ಯಕಲಾಪಗಳ ಭೀಕರ ನಿಗ್ರಹದಿಂದ ಅವಕ್ಕೆ ಕೂಡ ಕೈಕಟ್ಟಿದಂತಾಯಿತು ಸಮರ ಶಾಸನವು ಕ್ರಾಂತಿಕಾರಕ ಕಾರ್ಯಕಲಾಪಗಳನ್ನು ಮುರಿಯಬಹುದು, ಆದರೆ ಅದೇ ಕಾಲದಲ್ಲಿ ಅದು ನಾಗರಿಕತೆ ಮತ್ತು ಬಹುತರ ನಾಗರಿಕ ಕಾರ್ಯಕಲಾಪಗಳ ಹೆಡೆಮುರಿಕಟ್ಟಿಹಾಕಿ ಬಿಡುತ್ತದೆ

ಆದರೆ ಕಾಂಗ್ರೆಸ್ಸು ಮತ್ತು ಇತರ ಖಾಸಗಿ ಸಂಸ್ಥೆಗಳು ಸಾಮಾಜಿಕ ಸುಧಾರಣೆಗೆ ಹೆಚ್ಚು ದುಡಿಯಲಾರವೆಂಬುದಕ್ಕೆ ಕಾರಣವು ಇನ್ನೂ ಆಳವಾದುದು ನಾವು ರಾಷ್ಟ್ರೀಯತಾವಾದವೆಂಬ ವ್ಯಾಧಿಯಿಂದ ಬಾಧೆಪಡುತ್ತಿದ್ದೇವೆ, ಅದು ನಮ್ಮ ಗಮನವನ್ನೆಲ್ಲ ಹೀರಿಕೊಂಡುಬಿಡುತ್ತದೆ, ನಾವು ರಾಜಕೀಯ ಸ್ವಾತಂತ್ರ್ಯವನ್ನು ಸಂಪಾದಿಸುವವರೆಗೆ ಅದು ಹಾಗೆಯೇ ಇರುತ್ತದೆ ಬರ್ನಾರ್ಡ್ ಷಾರವರು ಹೇಳಿದಂತೆ “ ವಿಜಿತ ರಾಷ್ಟ್ರವೊಂದು ವ್ರಣದಿಂದ ನರಳುವ ಮನುಷ್ಯನಂತೆ, ಅವನು ಮತ್ತಾವುದನ್ನೂ ಚಿಂತಿಸಲಾರ ವಾಸ್ತವವಾಗಿ, ದನ್ಯುವಾದ ಸಹಜಕಾರ್ಯವೊಂದರ ಸಂತಪಿಸುವ ಸುಳುವಾದ ರಾಷ್ಟ್ರೀಯ ಚಳವಳಿಗಿಂತ ಹೆಚ್ಚಾದ ಶಾಪವೊಂದು ಯಾವ ಜನಪದಕ್ಕೂ ಇಲ್ಲ ವಿಜಿತ ರಾಷ್ಟ್ರಗಳು ಪ್ರಪಂಚದ ಪ್ರಗತಿಯಲ್ಲಿ ತಮ್ಮ ಸ್ಥಾನವನ್ನು ಕಳೆದುಕೊಳ್ಳುವುವು, ಏಕೆಂದರೆ ತಮ್ಮ ರಾಷ್ಟ್ರೀಯ ಸ್ವಾತಂತ್ರ್ಯವನ್ನು ಪುನಃ ಸಂಪಾದಿಸಿಕೊಂಡು ತಮ್ಮ ರಾಷ್ಟ್ರೀಯ ಚಳವಳಿಗಳಿಂದ ಮುಕ್ತರಾಗಲು ವ್ಯವಸಾಯಮಾಡುವ ಹೊರತು ಅವು ಇನ್ನೇನನ್ನೂ ಮಾಡಲಾರವು ”

ಪ್ರಜೆಗಳನ್ನು, ಚುನಾಯಿತ ಸಚಿವರ ಅಂಕೆಗೆ ವರ್ಗಾಯಿಸುವ ತೋರಿಕೆಯಿದ್ದರೂ ಪ್ರಚಲಿತ ವಿದ್ಯಮಾನಗಳಿರುವಂತೆ, ನಾವು ಯಾವ ಪ್ರಮಾಣದ ಸಾಮಾಜಿಕ ಪ್ರಗತಿಯನ್ನೂ ಸಾಧಿಸಲಾರೆವೆಂಬುದನ್ನು, ಭೂತಕಾಲದ ಅನುಭವವು ನಮಗೆ ತಿಳಿಸುತ್ತದೆ ಸರಕಾರದ ಮಹತ್ತಾದ ಜಡತ್ವವು ಪೂರ್ವಸಂಪ್ರದಾಯವಾದಿ ಅಂಶಗಳಿಗೆ ಸದಾ ಸಹಾಯಕವಾಗಿದೆ, ಅನೇಕ ತಲೆಮಾರುಗಳಿಂದ ಬ್ರಿಟಿಷ್ ಸರಕಾರವು ಆರಂಭ ಸ್ಫೂರ್ತಿಯನ್ನು ಮುರಿದು, ಸ್ವಚ್ಛಂದಾಧಿಕಾರದಿಂದ, ಇಲ್ಲವೇ ತಾನೇ ಕರೆದುಕೊಂಡಂತೆ ಪಿತೃಧರ್ಮಾಧಿಕಾರದಿಂದ ಆಳಿದೆ ಅದು ಖಾಸಗಿ ಮಹಾಜನರ ಯಾವ ದೊಡ್ಡ ಸಂಘಟಿತ ವ್ಯವಸಾಯವನ್ನಾಗಲಿ ಒಪ್ಪದೆ, ಹಿಂದ ಅಡಗಿರುವ ಉದ್ದೇಶಗಳನ್ನು ಕುರಿತು ಸಂದೇಹಪಡುವುದು ಹರಿಜನ ಚಳವಳಿ, ಅದರ ಸಂಘಟಕರು, ಎಷ್ಟೇ ಜಾಗರೂಕತೆಯಿಂದಿದ್ದರೂ ಪ್ರಾಸಂಗಿಕವಾಗಿ ಅಧಿಕಾರಿಗಳೊಂದಿಗೆ ಸಂಘರ್ಷಿಸಿದ್ದಾರೆ ಕಾಂಗ್ರೆಸ್ಸೊಂದುವೇಳೆ ಸಾಬೂನಿನ ಹೆಚ್ಚು ಉಪಯೋಗಕ್ಕಾಗಿ ದೇಶೋವಿಶಾಲವಾದ ಪ್ರಚಾರ ಕಾರ್ಯವನ್ನು ಕೈಕೊಂಡರೆ, ಸರಕಾರದೊಡನೆ ಅದು ಅನೇಕ ಕಡೆಗಳಲ್ಲಿ ಸಂಘರ್ಷಿಸಬೇಕಾಗುವುದೆಂದು ನನ್ನ ದೃಢವಾದ ನಂಬಿಕೆ

ಸರಕಾರವು ಸಮಸ್ಯೆಯನ್ನು ಕೈಗೊಂಡರೆ, ಜನಜಂಗುಳಿಯನ್ನು ಸಾಮಾಜಿಕ ಸುಧಾರಣೆಗೆ ಒಲಿಸಿಕೊಳ್ಳುವುದು ಬಹಳ ಕಷ್ಟವೆಂದು ನಾನು ಹೇಳುವುದಿಲ್ಲ ಆದರೆ ವಿದೇಶಿ ಪ್ರಭುಗಳು ಯಾವಾಗಲೂ ಸಂದೇಹಗ್ರಸ್ತರಾಗಿರುತ್ತಾರೆ ಮತಾಂತರಗೊಳಿಸುವ ಈ ಕಾರ್ಯವಿಧಾನದಲ್ಲಿ ಅವರು ಬಹುದೂರ ಸಾಗಲಾರರು ವಿದೇಶಿ ಅಂಶಗಳು ನಿವಾರಿಸಲ್ಪಟ್ಟು, ಆರ್ಥಿಕ ವ್ಯತ್ಯಾಸಗಳಿಗೆ ಪ್ರಾಧಾನ್ಯ ದೊರತರೆ, ಸತ್ವಯುಕ್ತವಾದ ಆಡಳಿತವೊಂದು ಬಹುಮುಖ ಪರಿಣಾಮಗಳುಳ್ಳ ಸಾಮಾಜಿಕ ಸುಧಾರಣೆಗಳನ್ನು ಸುಲಭವಾಗಿ ತರಬಹುದಾಗಿದೆ

ಹರಿಜನ ಚಳವಳಿಯು ಶಾಸನ ಭಂಗದ ಗತಿಗೆ ಅಡ್ಡಬಂದಿತ್ತೆಂದು ನಾನು ಸ್ವಲ್ಪ ಮಟ್ಟಿಗೆ ಜುಗುಪ್ಸೆಪಟ್ಟಿದ್ದುದರ ಮಟ್ಟಿಗೆ ಹೊರತು, ಸಾಮಾಜಿಕ ಸುಧಾರಣೆ, ಶಾರದಾ ಶಾಸನ ಮತ್ತು ಹರಿಜನ ಚಳವಳಿಗಳು ಸೆರೆಮನೆಯಲ್ಲಿದ್ದ ನಮ್ಮ ಮನಸ್ಸುಗಳಲ್ಲಿ ತುಂಬಿಕೊಂಡಿರಲಿಲ್ಲ ೧೯೩೩ರ ಮೇ ಮೊದಮೊದಲು ಶಾಸನಭಂಗವು ಆರು ತಿಂಗಳವರೆಗೆ ತಾತ್ಕಾಲಿಕವಾಗಿ ನಿರೋಧಿಸಲ್ಪಟ್ಟಿತು, ಮತ್ತು ನಾವು ಮುಂದಿನ ಬೆಳವಣಿಗೆಗಳನ್ನು ತವಕದಿಂದ ನಿರೀಕ್ಷಿಸಿದೆವು ಈ ತಾತ್ಕಾಲಿಕ ನಿರೋಧವು ಚಳವಳಿಗೆ ಕೊನೆಯ ಧಕ್ಕೆಯನ್ನು ಬಡಿದಿತ್ತು ಏಕೆಂದರೆ ರಾಷ್ಟ್ರೀಯ ಸಂಗ್ರಾಮವೊಂದನ್ನು ಕುರಿತು ಒಬ್ಬನು ನಾಜವಾಬ್ದಾರಿಯಿಂದ ದುಡಿಯಲಾಗದು, ಮನ ಬಂದಾಗ ಅದನ್ನು ಹೂಡಿ ಮನ ಬಂದಾಗ ಅದನ್ನು ಹಿಂತೆಗೆಯಲಾಗದು. ತಾತ್ಕಾಲಿಕ ನಿರೋಧಕ್ಕೆ ಮುಂಚಿತವಾಗಿ ಕೂಡ ಚಳವಳಿಯ ನಾಯಕತ್ವವು ವಿಶೇಷವಾಗಿ ದುರ್ಬಲವೂ ವಿಫಲವೂ ಆಗಿತ್ತು. ಕ್ಷುಲ್ಲಕ ಸಮ್ಮೇಳನಗಳು ಸಮಾವೇಶವಾಗುತ್ತಿದ್ದುವು, ಚೂಟಿಯಾದ ಕಾರ್ಯವನ್ನು

ವಿರೋಧಿಸುವ ಬಗೆಬಗೆಯ ವದಂತಿಗಳು ಹರಡಿದುವು ಕಾಂಗ್ರೆಸ್ಸಿನ ಹಂಗಾಮಿ ಅಧ್ಯಕ್ಷರಲ್ಲಿ ಕೆಲವರು ಬಹಳ ಮಾನನೀಯ ಪುರುಷರಾಗಿದ್ದರು, ಆದರೆ ಅವರನ್ನು ಪ್ರವರ್ತಕ ಪ್ರಸ್ಥಾನವೊಂದರ ಸೇನಾಪತಿಗಳನ್ನಾಗಿ ಮಾಡಿದುದು ಅವರಿಗೆ ನಿಷ್ಕರುಣೆಯನ್ನು ತೋರಿಸಿದಂತಾಗಿತ್ತು ಆಸರಿಕೆಯ ಮತ್ತು ಕಷ್ಟವಾದೊಂದು ಅವಸ್ಥಾನದಿಂದ ಪಾರಾಗಬೇಕೆಂಬ ಬಯಕೆಯ ಸುಳುವು ಅವರಲ್ಲಿ ಹೆಚ್ಚಾಗಿಯೇ ತೋರಿ ಬರುತ್ತಿತ್ತು ಈ ಆಂದೋಳನದ ಮತ್ತು ಅನಿರ್ಧಾರದ ಸ್ಥಿತಿಯನ್ನು ಕುರಿತು ಮೇಲಿನ ರಾಣೆಗಳಲ್ಲಿ ಸ್ವಲ್ಪಮಟ್ಟಿಗೆ ಅತೃಪ್ತಿಯುಂಟಾಗಿತ್ತು ಆದರೆ ಕಾಂಗ್ರೆಸ್ ಸಂಸ್ಥೆಗಳೆಲ್ಲ ಅಕ್ರಮಕೂಟಗಳಾಗಿದ್ದುದರಿಂದ ಆದನ್ನು ಸಂಘಟಿತ ರೀತಿಯಲ್ಲಿ ವ್ಯಕ್ತಪಡಿಸುವುದು ಕಷ್ಟವಾಗಿತ್ತು

ಆಮೇಲೆ ಗಾಂಧಿಜಿಯವರ ಇಪ್ಪತ್ತೊಂದು ದಿನಗಳ ಉಪವಾಸ ವ್ರತ, ಸೆರೆಮನೆಯಿಂದ ಅವರ ಬಿಡುಗಡೆ ಮತ್ತು ಆರು ವಾರಗಳವರೆಗಿನ ಶಾಸನಭಂಗದ ತಾತ್ಕಾಲಿಕ ನಿರೋಧಗಳ ಸುದ್ದಿ ಬಂದಿತು ಉಪವಾಸ ಮುಗಿಯಿತು, ಅವರು ಬಹಳ ನಿಧಾನವಾಗಿ ಅದರಿಂದ ಗುಣಹೊಂದಿದರು ಜೂನ್‌ನ ಮಧ್ಯ ಭಾಗದಲ್ಲಿ ಶಾಸನ ಭಂಗದ ತಾತ್ಕಾಲಿಕ ನಿರೋಧಾವಧಿಯು ಇನ್ನೂ ಆರು ವಾರಗಳಷ್ಟು ಹೆಚ್ಚಿಸಲ್ಪಟ್ಟಿತು ಏತನ್ಮಧ್ಯೇ ಸರಕಾರವು ತನ್ನ ದಬ್ಬಾಳಿಕೆಯನ್ನು ಯಾವ ಬಗೆಯಲ್ಲಿಯೂ ಕಡಿಮೆ ಮಾಡಿರಲಿಲ್ಲ ಅಂದಮಾನ್ ದ್ವೀಪಗಳಲ್ಲಿ (ಬಂಗಾಳದಲ್ಲಿ ಕ್ರಾಂತಿಕಾರಕ ಹಿಂಸಾತ್ಮಕ ಕ್ರಿಯೆಗಳಿಗಾಗಿ ಶಿಕ್ಷಿಸಲ್ಪಟ್ಟು ಅಲ್ಲಿ ಕಳುಹಿಸಲ್ಪಟ್ಟಿದ್ದ) ರಾಜಕೀಯ ಬಂದಿಗಳು ತಮ್ಮ ಉಪಚಾರದ ವಿಷಯದಲ್ಲಿ ಉಪವಾಸ ಮುಷ್ಕರ ತೊಟ್ಟಿದ್ದರು, ಅವರಲ್ಲಿ ಒಬ್ಬಿಬ್ಬರು ಸಾಯುವವರೆಗೆ ಹೊಟ್ಟೆಗೆ ಹಾಕದೆ ಸತ್ತುಹೋಗಿದ್ದರು ಇತರರು ಸಾಯುತ್ತ ಬಿದ್ದಿದ್ದರು ಅಂದಮಾನ್‌ಗಳಲ್ಲಿ ನಡೆಯುತ್ತಿದ್ದುದನ್ನು ಕುರಿತು ಖಂಡಿಸುತ್ತ ಭಾರತದ ಸಭೆಗಳಲ್ಲಿ ಭಾಷಣ ಮಾಡಿದವರು ಕೂಡ ದಸ್ತಗಿರಿ ಮಾಡಲ್ಪಟ್ಟು ಶಿಕ್ಷಿಸಲ್ಪಟ್ಟರು ನಾವು ಬಾಧೆ ಪಡಬೇಕಾದುದೊಂದೇ ಅಲ್ಲ, ವಿರೋಧಿಸಲು ಇನ್ನಾವ ಮಾರ್ಗವೂ ಇಲ್ಲದೆ ಉಪವಾಸ ಮುಷ್ಕರದ ವಿಷಮ ಪರೀಕ್ಷೆಯಿಂದ ಸೆರೆಯಾಳುಗಳು ಸತ್ತರೂ ನಾವು ದೂರಲು ಸಹ ಕೂಡದಾಗಿತ್ತು ಕೆಲವು ತಿಂಗಳುಗಳಾದ ಮೇಲೆ, ೧೯೩೩ ರ ಸೆಪ್ಟೆಂಬರಿನಲ್ಲಿ (ನಾನು ಸೆರೆಮನೆಯಿಂದ ಹೊರಗಿದ್ದಾಗ), ರವೀಂದ್ರನಾಥ ಠಾಕೂರ್, ಸಿ ಎಫ್ ಆಂಡ್ರೂಸ್ ಮುಂತಾಗಿ ಕಾಂಗ್ರೆಸ್ಸಿಗೆ ಸಂಪೂರ್ಣವಾಗಿ ಸಂಬಂಧ ಪಡದ ಪ್ರಸಿದ್ಧ ಮಹನೀಯರನೇಕರ ಸಹಿಗಳನ್ನೊಳಗೊಂಡು ಪ್ರಕಟಿತವಾದ ಬಿನ್ನಹದಲ್ಲಿ, ಅಂದಮಾನ್‌ಗಳ ಸೆರೆಯಾಳುಗಳಿಗೆ ಹೆಚ್ಚು ಕರುಣೆಯ ಉಪಚಾರವನ್ನು ನೀಡಬೇಕೆಂದೂ ಭಾರತೀಯ ಸೆರೆಮನೆಗಳಿಗೆ ಅವರನ್ನು ವರ್ಗಾಯಿಸುವುದು ಲೇಸೆಂದೂ ಬೇಡಲಾಯಿತು ಇಂಡಿಯಾ ಸರಕಾರದ ಹೋಮ್ ಮೆಂಬರು ಈ ವಾಜ್ಮೂಲವನ್ನು ಕುರಿತು ತಮ್ಮ ದೊಡ್ಡ ಅಸಂತೋಷಕ್ಕೆ ಉಕ್ತಿಗೊಟ್ಟು ಸೆರೆಯಾಳುಗಳಿಗೆ ಸಹಾನುಭೂತಿಯನ್ನು ತೋರಿದ ಸಹಿಕಾರರನ್ನು ಕುರಿತು ತೀಕ್ಷ್ಣವಾಗಿ

ಟೀಕೆ ಮಾಡಿದರು ಆಮೇಲೆ, ನನಗೆ ನೆನಪಿರುವಂತೆ, ಅಂಥ ಸಹಾನುಭೂತಿಗೆ ಉಕ್ತಿಕೊಡುವುದು ಬಂಗಾಳದಲ್ಲಿ ಶಿಕ್ಷಣಾರ್ಹವಾದ ಅಪರಾಧವಾಗಿ ಮಾಡಲ್ಪಟ್ಟಿತು

ಶಾಸನಭಂಗದ ಎರಡನೆಯ ಆರು ವಾರಗಳ ತಾತ್ಕಾಲಿಕ ನಿರೋಧವು ಮುಗಿವುದಕ್ಕೆ ಮುಂಚೆ, ಗಾಂಧಿಜಿಯವರು ಪುಣೆಯಲ್ಲಿ ಅನಾಂಪ್ರತ ಸಮ್ಮೇಳನವೊಂದನ್ನು ಕರೆದಿದ್ದರೆಂಬ ಸುದ್ದಿಯು ನಮಗೆ ಡೆಹ್ರಾ ಡುನ್ ಸರೆಮನೆಯಲ್ಲಿ ತಿಳಿಯಿತು ಇನ್ನೂರು ಅಥವಾ ಮುನ್ನೂರು ಜನರು ಅಲ್ಲಿ ಸೇರಿದರು, ಮತ್ತು ಗಾಂಧಿಜಿಯವರ ಸೂಚನೆಯಂತೆ ಜಂಗುಳಿಯ ಶಾಸನ ಭಂಗವು ನಿಲ್ಲಿಸಲ್ಪಟ್ಟು ವ್ಯಕ್ತಿ ಸಂಬಂಧವಾದ ಶಾಸನ ಭಂಗವು ಒಪ್ಪಿತವಾಯಿತು, ಎಲ್ಲ ಗುಪ್ತ ಕಾರ್ಯಕ್ರಮಗಳೂ ಬಹಿಷ್ಕೃತವಾದುವು ನಿರ್ಧಾರಗಳು ಅಷ್ಟು ಸ್ಫೂರ್ತಿಪತ್ತಾಗಿರಲಿಲ್ಲ ಅವುಗಳಿದ್ದಷ್ಟು ಮಟ್ಟಿಗೆ ನಾನು ಅವನ್ನು ವಿಶೇಷವಾಗಿ ಆಕ್ಷೇಪಿಸಲಿಲ್ಲ ಜಂಗುಳಿಯ ಶಾಸನ ಭಂಗವನ್ನು ನಿಲ್ಲಿಸುವುದೆಂದರೆ ಪ್ರಸ್ತುತ ವಿದ್ಯಮಾನಗಳನ್ನು ಕಂಡುಕೊಂಡು ಭದ್ರಮಾಡಿಕೊಳ್ಳುವುದು ಏಕೆಂದರೆ, ನಿಜವಾಗಿಯೂ ಆಗ ಜಂಗುಳಿಚಳವಳಿಯೇ ಇರಲಿಲ್ಲ ಗುಪ್ತ ಕಾರ್ಯವಾದರೋ ನಾವು ನಡೆಸಿಕೊಂಡು ಹೋಗುತ್ತಿದ್ದ ಕೇವಲ ನಟನೆಯೊಂದು ಮಾತ್ರವಾಗಿದ್ದು ಮತ್ತು ನಮ್ಮ ಚಳವಳಿಯ ಶೀಲವನ್ನು ಗಮನಿಸಿದರ ಅನೇಕ ವೇಳೆ ಅದು ನೀತಿಗೆಡಿಸುವಂಥದಾಗಿತ್ತು ಮಿತವ್ಯಾಪ್ತಿಯಲ್ಲಿ ಅದು ಆಜ್ಞಾಪೂರ್ವಕ ಸೂಚನೆಗಳನ್ನು ಕಳುಹಿಸುವುದಕ್ಕೂ ಸಂಪರ್ಕಗಳನ್ನು ಉಳಿಸಿಕೊಳ್ಳುವುದಕ್ಕೂ ಆವಶ್ಯಕವಾಗಿತ್ತು, ಆದರೆ ಶಾಸನ ಭಂಗವೇ ಸ್ವತಃ ಗೋಪ್ಯವಾಗಿರಲಾಗದಾಗಿತ್ತು

ಪ್ರಸ್ತುತ ವಿದ್ಯಮಾನ ಮತ್ತು ನಮ್ಮ ಗೊತ್ತುಗುರಿಗಳನ್ನು ಕುರಿತ ಯಾವ ನಿಜವಾದ ಚರ್ಚೆಯೂ ಪುಣೆಯಲ್ಲಿ ನಡೆಯದಿದ್ದುದು ನನಗ ಸಖೇದಾಶ್ಚರ್ಯವನ್ನುಂಟುಮಾಡಿತು ಸುಮಾರು ಎರಡು ವರ್ಷಗಳ ಸಂಘರ್ಷಣೆ ಮತ್ತು ನಿಗ್ರಹಗಳಾದ ಮೇಲೆ ಕಾಂಗ್ರೆಸ್ಸಿನವರು ಒಟ್ಟಿಗೆ ನೇರಿದ್ದರು ಏತನ್ಮಧ್ಯೇ ವಿಶಾಲ ಪ್ರಪಂಚದಲ್ಲಿಯೂ ಭಾರತದಲ್ಲಿಯೂ ರಾಜ್ಯಾಂಗ ಸುಧಾರಣೆಗಳನ್ನು ಕುರಿತ ಬ್ರಿಟಿಷ್ ಸರಕಾರದ ಸೂಚನೆಗಳನ್ನೊಳಗೊಂಡ ಶ್ವೇತಸತ್ರ ಪ್ರಕಟಣೆ ಮುಂತಾಗಿ ಬೇಕಾದಷ್ಟು ಸಂಭವಿಸಿದ್ದುವು ಈ ಅವಧಿಯಲ್ಲಿ ನಾವು ಬಲಾತ್ಕಾರವಾದ ಮೌನದಿಂದ ಸಹಿಸಿಕೊಂಡಿರಬೇಕಾಗಿತ್ತು, ಮತ್ತು ಪ್ರತಿಪಕ್ಷದ ಕಡೆ, ವಾದಾಂಶಗಳನ್ನು ಮುಚ್ಚಿಡುವ ಎಡೆಬಿಡದ ಮತ್ತು ವಿಪರೀತವಾದ ಪ್ರಚಾರವು ನಡೆಯುತ್ತಿತ್ತು ಕಾಂಗ್ರೆಸ್ಸು ತನ್ನ ಸ್ವಾತಂತ್ರ್ಯದ ಗೊತ್ತುಗುರಿಯನ್ನು ಬಿಟ್ಟುಬಿಟ್ಟಿದೆಯೆಂದು ಸರಕಾರಕ್ಕೆ ಬೆಂಬಲ ನಿಂತವರಿಂದ ಮಾತ್ರವಲ್ಲದೆ ಉದಾರವಾದಿಗಳಿಂದಲೂ ಇತರರಿಂದಲೂ ಪದೇಪದೇ ಹೇಳಲ್ಪಡುತ್ತಿತ್ತು ನಮ್ಮ ರಾಜಕೀಯ ಗೊತ್ತುಗುರಿಯನ್ನು ಅವಧಾರಣ ಮಾಡಿ ಸ್ಪಷ್ಟಪಡಿಸುವುದು, ಮತ್ತು ಸಾಧ್ಯವಿದ್ದರೆ ಅದಕ್ಕ ಸಾಮಾಜಿಕ ಮತ್ತು ಆರ್ಥಿಕ ಗೊತ್ತುಗುರಿಗಳನ್ನು ಜಂಟಿಸುವುದು,—ಇವನ್ನಾದರೂ ಕನಿಷ್ಠಪಕ್ಷ ಮಾಡಬೇಕಾಗಿತ್ತು,

ಎಂದುಕೊಂಡೆ ಇದಕ್ಕೆ ಪ್ರತಿಯಾಗಿ, ಜಂಗುಳಿ ಮತ್ತು ವ್ಯಕ್ತಿ ಸಂಬಂಧವಾದ ಶಾಸನ ಭಂಗಗಳ ಪರಸ್ಪರ ಸ್ಥೈರ್ಯಗಳನ್ನು ಮತ್ತು ಗುಟ್ಟಿನ ಬೇಕು ಬೇಡಗಳನ್ನು ಕುರಿತ ವ್ಯಾಪ್ತಿಯುಷ್ಟರಲ್ಲಿಯೇ ಚರ್ಚೆಯು ನಡೆದಿದ್ದಂತೆ ತೋರುತ್ತದೆ ಜೊತೆಗೆ ಸರಕಾರ ದೊಂದಿಗೆ 'ಶಾಂತಿ ಸಂಧಾನ'ದ ವಿಲಕ್ಷಣ ಮಾತುಕತೆಯೂ ನಡೆದಿತ್ತು ನನಗೆ ಜ್ಞಾಪಕವಿರುವ ಮಟ್ಟಿಗೆ ಗಾಂಧಿಜಿಯವರು ವೈಸ್‌ರಾಯ್‌ರಿಗೆ ಒಂದು ತಂತಿಯನ್ನು ಕೊಟ್ಟು ಸಂದರ್ಶನಾವಕಾಶವನ್ನು ಬೇಡಿದರು ಅದಕ್ಕೆ ವೈಸ್‌ರಾಯ್‌ರು 'ಆಗುವುದಿಲ್ಲ' ವೆಂದುತ್ತರವಿತ್ತರು ಬಳಿಕ ಗಾಂಧಿಜಿಯವರು ಎರಡನೆಯ ತಂತಿಯನ್ನು ಕಳುಹಿಸಿ 'ಗೌರವನೀಯ ಶಾಂತಿ'ಯನ್ನು ಕುರಿತು ಏನನ್ನೋ ಪ್ರಸ್ತಾಪಿಸಿದರು ಸರಕಾರವು ಸರ್ವ ಮಾರ್ಗಗಳಲ್ಲಿಯೂ ವಿಜಯೋನ್ಮತ್ತತೆಯಿಂದ ಜನಪದವನ್ನು ಮುರಿಯಲು ಪ್ರಯತ್ನಿಸುತ್ತಿದ್ದಾಗ ಮತ್ತು ಅಂಡಮಾನ್‌ಗಳಲ್ಲಿ ಜನರು ಉಪವಾಸದಿಂದ ಸಾಯುತ್ತಿದ್ದಾಗ, ಮೃಗ್ಯವಾಗಿದ್ದ, ನುಣ್ಚಿಕೊಳ್ಳುವ, ಈ ಶಾಂತಿಯು ಎಲ್ಲಿತ್ತು? ಆದರೆ, ಏನೇ ಸಂಭವಿಸಲಿ, ಶಾಂತಿಹಸ್ತವನ್ನು ಮೊದಲು ನೀಡುವುದು ಗಾಂಧಿಜಿಯವರ ಭಾಗಕ್ಕೇ ಮೀಸಲೆಂದು ನಾನು ತಿಳಿದಿದ್ದೆ

ದಬ್ಬಾಳಿಕೆಯು ತುಂಬುರುಬಿನಿಂದ ಸಾಗುತ್ತಿತ್ತು, ಮತ್ತು ಸಾರ್ವಜನಿಕ ಕಾರ್ಯಕಲಾಪಗಳನ್ನು ನಿಗ್ರಹಿಸುವ ವಿಶೇಷ ಶಾಸನಗಳೆಲ್ಲ ಜಾರಿಯಲ್ಲಿದ್ದುವು ೧೯೩೩ ರ ಫೆಬ್ರುವರಿಯಲ್ಲಿ ನನ್ನ ತಂದೆಯವರ ಪುಣ್ಯ ತಿಥಿಯ ಸಂಬಂಧವಾದ ಸ್ಮಾರಕ ಸಭೆಯೂ ಸಹ, ಅದು ಕಾಂಗ್ರೆಸ್ಸೇತರ ಸಭೆಯಾಗಿದ್ದು, ಮತ್ತು ಸರ್ ತೇಜ್ ಬಹಾದುರ್ ಸಪ್ರುರವರಂಥ ಸಭ್ಯ ಮಿತವಾದಿಗಳು ಅದಕ್ಕೆ ಅಧ್ಯಕ್ಷರಾಗಲಿದ್ದರೂ ಪೊಲೀಸರಿಂದ ತಡೆಯಲ್ಪಟ್ಟಿತು ಹಾಗೂ ಭಾರೀ ಅನುಗ್ರಹಗಳ ಕಣಸಿನ ರೂಪದಲ್ಲಿ ನಾವು ಶ್ವೇತಪತ್ರದಿಂದ ಬಹುಮಾನಿತರಾಗಿದ್ದೆವು

ಇದು ಅಪೂರ್ವವಾದ ಸಾಧನ*ವಾಗಿದ್ದು, ಅದರ ಅವಲೋಕನವು ಒಬ್ಬನನ್ನು ಉಗರಿಸುವಂತೆ ಮಾಡುತ್ತಿತ್ತು ಸಂಯುಕ್ತ ರಾಜ್ಯಾಂಗ ವ್ಯವಸ್ಥೆಯಲ್ಲಿ ದೇಶೀಯ ಸಂಸ್ಥಾನಗಳ ಜಮೀನ್‌ದಾರಿಪ್ರತಿನಿಧಿಗಳ ಅಧಿಕರಿಸುವ ಪ್ರಭಾವವಿರುವ ಮಹಿಮಾವೃತ ಭಾರತೀಯ ರಾಜ್ಯವಾಗಿ ಭಾರತವು ಮಾರ್ಪಡಿಸಲ್ಪಡಲಿತ್ತು ಆದರೆ ದೇಶೀಯ ಸಂಸ್ಥಾನಗಳಲ್ಲಿ ಯಾವ ಹೊರಗಿನ ಮಧ್ಯಸ್ಥಿಕೆಯನ್ನೂ ಸಹಿಸದ ಶುದ್ಧ ನಿರಂಕುಶ ಪ್ರಭುತ್ವವು ಪ್ರಬಲಿಸುತ್ತಲೇ ಹೋಗುವುದು ನಿಜವಾದ ಸಾಮ್ರಾಜಿಕ ಸಂಬಂಧಗಳಾದ ಸಾಲದ ಸರಪಣಿಗಳು ನಮ್ಮನ್ನು ಲಂಡನ್ ನಗರದೊಂದಿಗೆ ಎಂದೆಂದಿಗೂ ಕಟ್ಟಿಹಾಕುವುವು, ಹಾಗೂ ಕರೆನ್ಸಿ ಮತ್ತು ಹಣದ ನೀತಿಯು ಕೂಡ ರಿಸರ್ವ್ ಬ್ಯಾಂಕೊಂದರ ಮೂಲಕ ಬ್ಯಾಂಕ್ ಆಫ್ ಇಂಗ್ಲೆಂಡಿನ ಅಂಕೆಗೊಳಗಾಗುವುದು ಎಲ್ಲ ಸ್ವಾರ್ಥಗಳ ದುರ್ಭೇದ್ಯವಾದ ರಕ್ಷಣೆಯೊಂದಿರುವುದಲ್ಲದೆ ಹೆಚ್ಚಿನ

* Document, (ಡ್ಯಾಕುಮೆಂಟ್)

ಹೊಸ ಸ್ವಾರ್ಥಗಳೂ ಸೃಷ್ಟಿಸಲ್ಪಡುವುವು ಈ ಸ್ವಾರ್ಥಗಳ ಲಾಭಕ್ಕಾಗಿಯೇ ನಮ್ಮ ಮೋಕ್ಷವು ಸಂಪೂರ್ಣವಾಗಿ ಭೋಗ್ಯಮಾಡಲ್ಪಡುವುದು ನಾವು ಬಹುವಾಗಿ ಪ್ರೀತಿಸುವ ಮಹಾ ಸಾಮ್ರಾಜಿಕ ನೌಕರಿಗಳು ಅಂಕೆಗೊಳಗಾಗದೆ ಮತ್ತು ಯಾರ ಅಂಟೂ ಇಲ್ಲದೆ, ನಮ್ಮನ್ನು ಸ್ವರಾಜ್ಯದ ಮುಂದಿನ ಕಂತುಗಳಿಗೆ ಅನುಗೊಳಿಸಲು ಮಾಸಲಾಗಿ ನಡೆಯುವುವು ಪ್ರಾಂತ ಸ್ವರಾಜ್ಯ (ಪ್ರೊವಿನ್ಷಿಯಲ್ ಆಟಾನಮಿ)ವು ಬರಲಿರುವುದು, ಆದರೆ ಗವರ್ನರು ನಮ್ಮನ್ನು ಹದ್ದಿನಲ್ಲಿಡುವ ಕಾರುಣ್ಯಯುಕ್ತ ಮತ್ತು ಸರ್ವಶಕ್ತ ಸರ್ವಾಧಿಕಾರಿಯಾಗಿರುವರು ಮತ್ತು ಎಲ್ಲರಿಗಿಂತ ಎತ್ತರದಲ್ಲಿ, ಸರ್ವೋತ್ತುಂಗ ಶ್ರೇಷ್ಠ ಸರ್ವಾಧಿಕಾರಿ ವೈಸ್‌ರಾಯರು, ಮನಬಂದಂತೆ ಮಾಡುವ, ಬೇಕಾದಾಗ ಅಂಕೆಯಲ್ಲಿಡುವ ಸರ್ವಚೈತನ್ಯ ಸ್ವಾತಂತ್ರ್ಯದೊಡನೆ ಕುಳಿತಿರುವರು ವಾಸ್ತವವಾಗಿ ವಸಾಹತದ ಸರಕಾರವನ್ನು ಕುರಿತ ಬ್ರಿಟಿಷ್ ಪ್ರಭುತ್ವವರ್ಗದ ಪ್ರತಿಭೆಯು ಇನ್ನೆಂದೂ ಇಷ್ಟು ಸ್ಪಷ್ಟವಾಗಿರಲಿಲ್ಲ ಹಿಟ್ಲರ್‌ಗಳೂ ಮುಸ್ಸೋಲಿನಿಗಳೂ ಅವರನ್ನು ಮೆಚ್ಚುವುದೂ ಭಾರತದ 'ವೈಸ್‌ರಾಯ್'ರನ್ನು ಕಂಡು ಮತ್ಸರಿಸುವುದೂ ಸಹಜವೇ ಆಗಿದೆ

ಭಾರತದ ಕೈಕಾಲುಗಳನ್ನು ಕಟ್ಟಿಹಾಕುವ ರಾಜ್ಯಾಂಗ ರಚನೆಯೊಂದನ್ನು ರಚಿಸಿ, 'ವಿಶೇಷ ಹೊಣೆಗಾರಿಕೆಗಳು' ಮತ್ತು ರಕ್ಷಣೆಗಳ ಹೆಚ್ಚಿನ ಸಂಕೋಲೆಗಳ ಗುಂಪೊಂದನ್ನು ಜೋಡಿಸಿ, ದುಃಖ ಭಾಜನವಾದ ನಾಡನ್ನು ಅಲುಗಾಡಲಾಗದ ಸೆರೆಯಾಳನ್ನಾಗಿ ಮಾಡಿದರು ಮಿ॥ ನೆವಿಲ್ ಛೇಂಬರ್ಲೈಯಿನ್‌ರವರು ಹೇಳಿದಂತೆ "ರಾಜ್ಯಾಂಗ ರಚನೆಯ ಸೂಚನೆಗಳನ್ನು ಅವರು ಆದಷ್ಟುಮಟ್ಟಿಗೆ, ಮಾನವನ ಬುದ್ಧಿ ಚಮತ್ಕಾರವು ಯೋಜಿಸಬಲ್ಲ ಎಲ್ಲ ರಕ್ಷಣೆಗಳಿಂದಲೂ ಸುತ್ತುಗಟ್ಟಿದ್ದಾರೆ"

ಮೇಲಾಗಿ, ಈ ಅನುಗ್ರಹಗಳ ಸಲುವಾಗಿ ನಾವು, ಮೊದಲು ಕೆಲವು ಕೋಟಿಗಳಷ್ಟು ಒಂದೇಗಂಟು, ಆಮೇಲೆ ವರ್ಷ ವರ್ಷಕ್ಕೂ ಸಂದಾಯ, ಹೀಗೆ ಬಹಳ ಹೆಚ್ಚಾಗಿ ಹಣ ಕೊಡಬೇಕೆಂದು ತಿಳಿಸಿದರು. ತಕ್ಕ ಹಣ ಸಂದಾಯವಿಲ್ಲದೆ ನಾವು ಸ್ವರಾಜ್ಯದ ಶ್ರೇಯಃಫಲಗಳನ್ನು ಹೊಂದುವಹಾಗಿಲ್ಲ ಭಾರತವು ದಾರಿದ್ರ್ಯಗ್ರಸ್ತವಾದ ದೇಶ, ಇದುವರೆಗಾಗಲೇ ಬಹಳ ಹೆಚ್ಚಿನ ಹೊರೆಯನ್ನು ಹೊರಬೇಕಾಗಿತ್ತು, ಮತ್ತು ಸ್ವಾತಂತ್ರ್ಯವು ಅದನ್ನು ಹಗುರಮಾಡಬೇಕೆಂದು ನಿರೀಕ್ಷಿಸುತ್ತಿದ್ದೆವು, ಎಂಬ ಮರುಳಾಟದಿಂದ ನರಳುತ್ತಿದ್ದೆವು ಅದೇ ಜನತೆಯ ಸ್ವಾತಂತ್ರ್ಯ ಪ್ರೇರಣೆಯಾಗಿತ್ತು ಆದರೆ ಹೊರೆಯು ಇನ್ನೂ ಭಾರವಾಗಲಿತ್ತೆಂಬುದು ಈಗ ತೋರಿಬಂದಿತು

ಭಾರತೀಯ ಸಮಸ್ಯೆಯನ್ನು ಕುರಿತ ಈ ತಲೆಕೆಳಗಾದ ಪರಿಹಾರೋಪಾಯವನ್ನು ನೈಜವಾದ ಬ್ರಿಟಿಷ್ ಪ್ರಸನ್ನತೆಯಿಂದಲೇ ನೀಡಿ, ನಮ್ಮ ಪ್ರಭುವರ್ಗವು ಎಷ್ಟು ಉದಾರಿಗಳೆಂದು ನಮಗೆ ಹೇಳಿದರು ಸಾಮ್ರಾಜಿಕ ಸರಕಾರವೊಂದು ಹಿಂದೆ ಎಂದೂ, ತನ್ನ ದಾಸ್ಯಕ್ಕೀಡಾದ ಪ್ರಜೆಗಳಿಗೆ ಇಷ್ಟು ಅಧಿಕಾರವನ್ನೂ ಅವಕಾಶ

ಗಳನ್ನೂ ತನ್ನ ಸ್ವಂತ ಉದಾರ ಮನಸ್ಸಿನಿಂದ ನೀಡಲಿಲ್ಲ ಮತ್ತು ಇಂಗ್ಲೆಂಡಿನಲ್ಲಿ, ಮಹಾ ದಾನಶೂರರಿಗೂ, ಅಂಥ ಔದಾರ್ಯವನ್ನು ಕಂಡು ಬೆಚ್ಚಿಬಿದ್ದು ಆಕ್ಷೇಪಿಸಿದವ ರಿಗೂ ಮಹಾ ಚರ್ಚೆಯೇ ಆವಿರ್ಭವಿಸಿತು ಮೂರು ವರ್ಷಗಳ ಅವಧಿಯಲ್ಲಿ ಭಾರತ ಮತ್ತು ಇಂಗ್ಲೆಂಡ್‌ಗಳ ಮಧ್ಯೇ ನಡೆದ ಅನೇಕ ಆಗಮನ ನಿರ್ಗಮನಗಳು, ಮೂರು ಚಕ್ರಗೋಷ್ಠಿಗಳು ಮತ್ತು ಅಸಂಖ್ಯಾತವಾದ ಸಮಿತಿಗಳು ಮತ್ತು ಪರ್ಯಾಲೋಚನೆಗಳ ಪರಿಣಾಮವೇ ಇದು.

ಆದರೆ ಇಂಗ್ಲೆಂಡಿನ ಪ್ರವಾಸಗಳು ಇನ್ನೂ ಮುಗಿದುಹೋಗಿರಲಿಲ್ಲ ಶ್ವೇತ ಪತ್ರದ ಮೇಲೆ ನ್ಯಾಯಾಧಿಪತ್ಯ ಮಾಡಲಿದ್ದ ಬ್ರಿಟಿಷ್ ಪಾರ್ಲಿಮೆಂಟಿನ ಜಂಟಿ ಸೆಲೆಕ್ಟ್ ಸಮಿತಿಯು ಕಾರ್ಯಭಾರ ನಡೆಸಲಿದ್ದು ಭಾರತೀಯರು ಅದಕ್ಕೆ ಒಂದು ವಿಧವಾದ ನ್ಯಾಯದರ್ಶಿಗಳಂತೆಯೂ ಸಾಕ್ಷಿಗಳಂತೆಯೂ ಹೋದರು ಇನ್ನೂ ಅನೇಕ ಇತರ ಸಮಿತಿಗಳೂ ಲಂಡನ್ನಿನಲ್ಲಿ ಸೇರಿದ್ದುವು ಸಾಮ್ರಾಜ್ಯದ ಹೃದಯಕ್ಕೆ ಬಿಟ್ಟ ಪ್ರಯಾಣ ವನ್ನೂ ಅಲ್ಲಿ ವಸತಿಯನ್ನೂ ಕಲ್ಪಿಸುವ ಯಾವುದೇ ಸಮಿತಿಯ ಸದಸ್ಯತ್ವದ ಸೀರುಂಡೆ ಯಾಗಲಿ, ತೆರೆಯ ಹಿಂದೆ ಸಿಗ್ಗಿಲ್ಲದೆ ನುಗ್ಗಾಡಿವರು ಶ್ವೇತಪತ್ರದ ಗಾಬರಿಪಡಿಸುವ ಪೂರ್ವೋಪಾಯಗಳಿಂದ ಎದೆಗೆಡದ ಗಂಡಾಡಿಗಳು, ಶ್ವೇತಪತ್ರದ ಪೂರ್ವೋಪಾಯ ಗಳನ್ನು ವ್ಯತ್ಯಾಸಗೊಳಿಸಲು ತಮ್ಮ ಯೋಗ್ಯತಾನುಸಾರವಾದ ವಾಗ್ವೈಖರಿ ಮತ್ತು ಸಾನುನಯ ಶಕ್ತಿಗಳೊಡನೆ ಪ್ರಯತ್ನಪಡುವುದಕ್ಕಾಗಿ ಲಂಡನ್ ನಗರದಲ್ಲಿರುವ ಕಷ್ಟ ತರ ಅಪಾಯಗಳಿಗೂ ಸಮುದ್ರಯಾನ ಅಥವಾ ಅಂತರಿಕ್ಷ ಪ್ರಯಾಣದ ವಿಪತ್ತು ಗಳಿಗೂ ಎದೆಗೊಡಲು ಸಿದ್ಧರಾದರು. ಕರ್ತವ್ಯವು ತೀರ ನಿರಾಶೆಯಿಂದ ಕೂಡಿದು ದೆಂದು ಅವರು ತಿಳಿದಿದ್ದರು ಮತ್ತು ಹಾಗೆ ಹೇಳಿಯೂ ಹೇಳಿದರು ಆದರೆ ಅವರು ಸಾಕುಮಾಡುವವರಲ್ಲ, ಮತ್ತು ತಮ್ಮ ಮಾತನ್ನು ಕೇಳುವವರು ಯಾರೊಬ್ಬರೂ ಇಲ್ಲ ದಿದ್ದರೂ ತಮ್ಮ ಹೇಳಿಕೆಯನ್ನೇ ಸಾಧಿಸುವರು ಅವರಲ್ಲೊಬ್ಬರು, ರೆಸ್ಪಾನ್ಸಿ ವಿಸ್ಟರ ನಾಯಕರು, ಇತರರಲ್ಲರೂ ಹೊರಟು ಹೋದಮೇಲೆ ಲಂಡನ್ನಿನಲ್ಲಿ ಅಧಿಕಾರ ದಲ್ಲಿರುವವರೊಡನೆ ಪ್ರಾಯಶಃ ಭೇಟಿಗಳ ಮೇಲೆ ಭೇಟಿಗಳನ್ನು ಪಡೆಯುತ್ತ, ಭೋಜ ನಗಳ ಮೇಲೆ ಭೋಜನಗಳನ್ನು ಮಾಡುತ್ತ, ತಾವು ಇಷ್ಟಪಟ್ಟಿದ್ದ ರಾಜಕೀಯ ವ್ಯತ್ಯಾಸಗಳನ್ನು ಅವರ ಮೇಲೆ ಅಚ್ಚೊತ್ತಲು ಕಟು ಕೊನೆಯವರೆಗೂ ಪಟ್ಟಾಗಿ ಹಿಡಿದು ನಿಂತರು ಕಟ್ಟಕಡೆಗೆ ಅವರು ತಾಯ್ನಾಡಿಗೆ ಹಿಂತಿರುಗಿದಾಗ, ನಿರೀಕ್ಷಿಸು ತ್ತಿದ್ದ ಸಾರ್ವಜನಿಕರಿಗೆ, ತಾವು ತಮ್ಮ ಜಂಬರವನ್ನು ಬಿಟ್ಟುಬಿಡಲು ನಿರಾಕರಿಸಿದು ದಾಗಿಯೂ, ಮತ್ತು ಕೊನೆಯವರೆಗೂ ತಮ್ಮ ಹೇಳಿಕೆಯನ್ನು ಹೇಳಲು ತಾವು ಲಂಡ ನ್ನಿನಲ್ಲಿ ಇದ್ದುಬಿಟ್ಟುದಾಗಿಯೂ ಮರಾಠರ ಪ್ರಸಿದ್ಧ ಧಾರಣಶಕ್ತಿಯಿಂದ ಹೇಳಿದರು

ತಮ್ಮ ರೆಸ್ಪಾನ್ಸಿವಿಸ್ಟ್ ಮಿತ್ರರಿಗೆ ಹಾಸ್ಯ ಪ್ರವೃತ್ತಿಯಿಲ್ಲವೆಂದು ನನ್ನ ತಂದೆ ಯವರು ಆಗಾಗ್ಯೆ ಮಾಡುತ್ತಿದ್ದ ಆಕ್ಷೇಪಣೆಯು ನನ್ನ ಜ್ಞಾಪಕಕ್ಕೆ ಬರುತ್ತದೆ

ತಮ್ಮ ಹಾಸ್ಯಾತ್ಮಕ ಟೀಕೆಗಳ ಸ್ವಾರಸ್ಯವನ್ನವರು ಗ್ರಹಿಸದೆಯೇ ಹೋದುದರಿಂದ ತಾವು ಆಗಾಗ್ಗೆ ಆ ಮಿತ್ರರೊಡನೆ ಅನೇಕ ವೇಳೆ ಘರ್ಷಣೆಗೆ ಸಿಕ್ಕುತ್ತಿದ್ದರು, ಆಮೇಲೆ ಅವರಿಗೆ ವಿವರಿಸಿ ಸಮಾಧಾನ ಮಾಡಬೇಕಾಗಿತ್ತು—ಪ್ರಯಾಸಕರವಾದ ಕಾರ್ಯ ನಾನಾದರೋ, ಮುರಿದರೂ ಸಗ್ಗದ ಮಹಾನುಭಾವರೂ ದುರ್ದಮ್ಯರೂ ಆದ ತಿಲಕರನ್ನೂ ಹಿಂದೆ ಮಾತ್ರವಲ್ಲದೆ ಇಂದು ಕೂಡ ನಮ್ಮ ರಾಷ್ಟ್ರೀಯ ಸಂಗ್ರಾಮಗಳಲ್ಲಿ ಮೆರೆದ ಮರಾಠರ ಶ್ರೇಷ್ಠ ಯುದ್ಧೋತ್ಸಾಹವನ್ನೂ ಕುರಿತು ಧ್ಯಾನಮಾಡಿದೆ

ಉದಾರ ವಾದಿಗಳಿಗೆ ಶ್ವೇತಪತ್ರವು ಸಂಪೂರ್ಣವಾಗಿ ಅನಿಷ್ಟವಾಗಿತ್ತು ಭಾರತದಲ್ಲಿ ದಿನದಿನವೂ ನಡೆಯುತ್ತಲೇ ಇದ್ದ ದಬ್ಬಾಳಿಕೆಯನ್ನವರು ಒಪ್ಪಲಿಲ್ಲ, ಮತ್ತು ಕಾಂಗ್ರೆಸ್ಸನ್ನೂ ಅದರ ಸಕಲ ಕಾರ್ಯಗಳನ್ನೂ ತಾವು ಖಂಡಿಸುವುದಾಗಿ ಯಾವಾಗಲೂ ಸ್ಪಷ್ಟಪಡಿಸುತ್ತ ವಿರಳವಾಗಿಯಾದರೂ ಕೆಲವು ವೇಳೆ, ದಬ್ಬಾಳಿಕೆಯನ್ನು ವಿರೋಧಿಸುತ್ತಲೂ ಇದ್ದರು ಕೆಲವು ಪ್ರಮುಖ ಕಾಂಗ್ರೆಸ್ಸಿನವರನ್ನು ಸೆರೆಮನೆಯಿಂದ ಬಿಡುಗಡೆ ಮಾಡಬೇಕೆಂದವರು ಪ್ರಾಸಂಗಿಕವಾಗಿ ಸರಕಾರಕ್ಕೆ ಸಲಹೆಕೊಡುತ್ತಿದ್ದರು—ತಮಗೆ ಪರಿಚಯವಿದ್ದ ಕೆಲವು ವ್ಯಕ್ತಿಗಳ ದೃಷ್ಟಿಯಿಂದ ಮಾತ್ರ ಯೋಚಿಸಲು ಅವರಿಗೆ ಸಾಧ್ಯವಿತ್ತು ಉದಾರವಾದಿ ಮತ್ತು ರೆಸ್ಪಾನ್ಸಿವಿಸ್ಟರಿಬ್ಬರಿಂದಲೂ ಮುಂದಿಡಲ್ಪಟ್ಟ ವಾದವಿದು ಸಾರ್ವಜನಿಕ ಶಾಂತಿಗೆ ಇತಃಪರ ಯಾವ ವಿಪತ್ತೂ ಇಲ್ಲವಾದುದರಿಂದ ಇಂಥಿಂಥವರು ಬಿಡುಗಡೆಮಾಡಲ್ಪಡಬೇಕು, ಒಂದುವೇಳೆ ಆ ವ್ಯಕ್ತಿಯು ತಪ್ಪಿ ನಡೆದರೆ ಸರಕಾರವು ಅಂಥವನನ್ನು ಪುನಃ ದಸ್ತಗಿರಿ ಮಾಡುವ ಸ್ವಾತಂತ್ರ್ಯವನ್ನು ಪಡೆದೇ ಇದೆ, ಅಲ್ಲದೆ ಸರಕಾರವು ಇನ್ನೂ ಹೆಚ್ಚು ಸಮರ್ಥನೆಯಿಂದ ಹಾಗೆ ಮಾಡಬಹುದು ಈ ಕಾರಣಗಳಿಂದ ಕಾರ್ಯನಿರ್ವಾಹಕ ಸಮಿತಿಯ ಕೆಲವು ಸದಸ್ಯರನ್ನೋ ಇಲ್ಲವೇ ವಿಶಿಷ್ಟ ವ್ಯಕ್ತಿಗಳನ್ನೋ ಬಿಡುಗಡೆಮಾಡಬೇಕೆಂದು ಇಂಗ್ಲೆಂಡಿನಲ್ಲಿಯೂ ಸಹ ಕೆಲವು ಸಜ್ಜನರು ಬಿನ್ನವಿಸಿಕೊಂಡರು ನಾವು ಸೆರೆಮನೆಯಲ್ಲಿದ್ದಾಗ ನಮ್ಮ ವಿಷಯದಲ್ಲಿ ಆಸಕ್ತಿ ವಹಿಸಿದ ಜನರನ್ನು ಕುರಿತು ನಾವು ಕೃತಜ್ಞರಾಗಿರದಿರಲು ಸಾಧ್ಯವಿರಲಿಲ್ಲ, ಆದರೆ ಸದುದ್ದೇಶಗಳಿಂದ ಕೂಡಿದ ನಮ್ಮ ಮಿತ್ರರಿಂದ ನಾವು ಮುಕ್ತರಾದರೆ ಲೇಸೆಂದು ಕೂಡ ಕೆಲವು ವೇಳೆ ಭಾವಿಸಿದೆವು ನಾವು ಅವರ ಸದುದ್ದೇಶಗಳನ್ನು ಶಂಕಿಸಲಿಲ್ಲ, ಆದರೆ ಅವರು ಬ್ರಿಟಿಷ್ ಸರಕಾರದ ಕಲ್ಪನವಿಜ್ಞಾನವನ್ನು ಸಂಪೂರ್ಣವಾಗಿ ಒಪ್ಪಿಕೊಂಡಿದ್ದರೆಂಬುದು ಸ್ಪಷ್ಟವಾಗಿತ್ತು, ಅವರಿಗೂ ನಮಗೂ ನಡುವೆ ವಿಶಾಲವಾದ ಬಿರುಕೊಂದಿತ್ತು

ಭಾರತದಲ್ಲಿ ನಡೆಯುತ್ತಿದ್ದುದನೇಕವನ್ನು ಉದಾರವಾದಿಗಳು ಒಪ್ಪಲಿಲ್ಲ, ಅದನ್ನು ಕುರಿತು ಅವರು ಅಸಂತುಷ್ಟರಾಗಿದ್ದರು, ಆದರೂ ಅವರೇನನ್ನು ತಾನೆ ಮಾಡಬೇಕಾಗಿತ್ತು? ಸರಕಾರಕ್ಕೆ ವಿರುದ್ಧವಾಗಿ ಯಾವ ಪರಿಣಾಮಕಾರಿ ಪ್ರಯತ್ನವನ್ನು ಮಾಡುವುದೆಂದರೂ ಅವರ ಯೋಚನೆಗೂ ಸಲ್ಲದ್ದಾಗಿತ್ತು ಕೇವಲ, ತಾವು ಪ್ರತ್ಯೇಕ ಅಸ್ತಿತ್ವವಾಗಿ ಉಳಿಯಲು ಜನಜಂಗುಳಿಯಿಂದ ಮತ್ತು ಜನಸಂಖ್ಯೆಯ ಚೂಟಿಯಾದ

ಅಂಶಗಳಿಂದ ಅವರು ದೂರದೂರ ಸರಿಯಬೇಕಾಯಿತು ತಮ್ಮ ಕಲ್ಪನವಿಜ್ಞಾನವು ಸರಕಾರದ ಕಲ್ಪನವಿಜ್ಞಾನದಿಂದ ಸಾಸಿವೆಯಷ್ಟೂ ಭಿನ್ನವಲ್ಲವೆನ್ನುವವರೆಗೆ ಅವರು ಬಲಮಗ್ಗುಲಿಗೆ ಸರಿಯಬೇಕಾಯಿತು ಸಂಖ್ಯೆಯಲ್ಲಿ ಕಿರಿದಾಗಿ, ಜನಜಂಗುಳಿಯ ಸಂಪರ್ಕಶೂನ್ಯತೆಯಿಂದ, ಅವರು ಜಂಗುಳಿಹೋರಾಟದಲ್ಲಿ ಯಾವ ವ್ಯತ್ಯಾಸವನ್ನೂ ಮಾಡಲಾರದಿದ್ದರು ಆದರೆ ಅವರಲ್ಲಿ ಕೆಲವು ವ್ಯಕ್ತೀಕೃತರೂ ಸ್ವಕೀಯವಾಗಿ ಸಂಭಾವಿತರೂ ಆದ ಪ್ರಸಿದ್ಧ ಪುರುಷರಿದ್ದರು, ಇದೇ ಮುಂದಾಳುಗಳೂ ಇಡೀ ಉದಾರವಾದಿ ಮತ್ತು ರೆಸ್ಪಾನ್ಸಿವಿಸ್ಟ್ ಪಕ್ಷಗಳೂ ಮಹಾ ವಿಷಮ ಸನ್ನಿವೇಶವೊಂದರಲ್ಲಿ ಅಧಿಕಾರಿಗಳ ರಾಜನೀತಿಗೆ ನೈತಿಕ ಸಹಕಾರವನ್ನಿತ್ತು ಬ್ರಿಟಿಷ್ ಸರಕಾರಕ್ಕೆ ಗುಣವಿಮರ್ಶನಾತೀತವಾದ ಸೇವೆಯನ್ನು ಮಾಡಿದರು ಸರಕಾರದ ಜೋರಾವರಿ ಮತ್ತು ಶಾಸನಬಾಹಿರತೆಗಳೂ ಕೂಡ ಉದಾರವಾದಿಗಳ ಪರಿಣಾಮಕಾರಿ ಟೀಕೆಯ ಅಭಾವ, ಪ್ರಾಸಂಗಿಕ ಮೂಗೊಪ್ಪಿಗೆ ಮತ್ತು ಸಮ್ಮತಿಗಳಿಂದ ಲಾಭ ಪಡೆದುವು ಹೀಗೆ ಉದಾರವಾದಿಗಳೂ ರೆಸ್ಪಾನ್ಸಿವಿಸ್ಟರೂ, ಸರಕಾರಕ್ಕೇ ಸಮರ್ಥಿಸಲು ಕಷ್ಟವಾಗಿದ್ದ, ದೇಶದಲ್ಲಿ ನಡೆಯುತ್ತಿದ್ದ ಭೀಕರವೂ ಅದೃಷ್ಟಾಶ್ಚತಪೂರ್ವವೂ ಆದ ಜೋರಾವರಿಗೆ ನೈತಿಕ ಸಮ್ಮತಿಯನ್ನಿತ್ತರು

ಶ್ವೇತಪತ್ರವು ಕೆಡಕಾದುದು, ತೀರ ಕೆಡಕಾದುದು, ಎಂದು ಉದಾರವಾದಿ ನಾಯಕರು ಹೇಳಿದರು ಅದನ್ನು ಕುರಿತು ಮಾಡುವುದೇನು? ೧೯೩೩ ರ ಏಪ್ರಿಲ್‌ನಲ್ಲಿ ಕಲ್ಕತ್ತೆಯಲ್ಲಿ ಸಮಾವೇಶವಾದ ಲಿಬರಲ್ ಫೆಡರೇಷನ್‌ನಲ್ಲಿ, ಉದಾರವಾದಿಗಳಲ್ಲಿ ಅತ್ಯುತ್ತುಂಗರಾದ ಶ್ರೀ|| ಶ್ರೀನಿವಾಸಶಾಸ್ತ್ರಿಗಳು ಭಾಷಣಮಾಡುತ್ತ, ರಾಜ್ಯಾಂಗರಚನಾ ಸುಧಾರಣೆಗಳು ಎಷ್ಟೇ ಅಸಮರ್ಪಕವಾಗಿರಬಹುದಾಗಿದ್ದರೂ ಅದನ್ನು ಕಾರ್ಯರಂಗದಲ್ಲಿ ಪ್ರಯೋಗಮಾಡಬೇಕೆಂದು ವಾದಿಸಿದರು. "ಸುಮ್ಮನೆ ನಿಂತುಬಿಟ್ಟಿದ್ದು ಘಟನೆಗಳನ್ನು ಅವುಗಳ ಗತಿಗೆ ಬಿಡುವಕಾಲವಿದಲ್ಲ" ಎಂದರು ಕೊಟ್ಟುದನ್ನೊಪ್ಪಿಕೊಂಡು ಅದನ್ನು ಕಾರ್ಯಕಾರಿಯನ್ನಾಗಿ ಮಾಡುವ ಒಂದು ಪ್ರಯತ್ನ ಮಾತ್ರ ಅವರ ಊಹೆಗೆ ಹೊಳೆದಂತೆ ತೋರಿತು ಇದಕ್ಕೆ ಪಕ್ಷಾಂತರವೆಂದರೆ ಯಾವ ಕೆಲಸವನ್ನೂ ಮಾಡದಿರುವುದು. ಮಾತನ್ನು ಮುಂದುವರಿಸಿ ಹೀಗೆಂದರು "ಜ್ಞಾನ, ಅನುಭವ, ಮಿತವಾದ, ಸಾನುನಯಶಕ್ತಿ, ಗೂಢಪ್ರಭಾವ ಸ್ಫೂರ್ತಿ, ಮತ್ತು ನೈಜ ದಕ್ಷತೆಗಳು ನಮ್ಮಲ್ಲಿದ್ದರೆ–ಈ ಸದ್ಗುಣಗಳು ನಮ್ಮಲ್ಲಿದ್ದರೆ, ಅವುಗಳನ್ನು ಸಂಪೂರ್ಣವಾಗಿ ಮೆರೆಯಬೇಕಾದ ಕಾಲವಿದು" "ಜ್ಯೋತಿಃಪುಂಜವಾದ ಪದಗಳು" ಎಂಬುದು ಕಲ್ಕತ್ತೆಯ 'ಸ್ಟೇಟ್ಸ್‌ಮನ್' ಪತ್ರಿಕೆಯು ಈ ವಾಕ್ಚಾತುರ್ಯದ ಬಿನ್ನಹವನ್ನು ಕುರಿತು ಮಾಡಿದ ಟೀಕೆ

ಶ್ರೀ|| ಶಾಸ್ತ್ರಿಗಳು ಯಾವಾಗಲೂ ಚಾತುರ್ಯದಿಂದ ಭಾಷಣಮಾಡುವರು, ಮತ್ತು ಭಾಷಣಕಾರನ ಚೆಲುವಾದ ಮಾತುಗಳ ಮತ್ತು ಅದರ ನಾದಾದತ್ಮಕ ಪ್ರಯೋಗದ ಪ್ರೇಮವು ಅವರಲ್ಲಿದೆ.ಆದರೆ ಅವರು ತಮ್ಮ ಉತ್ಸಾಹದಲ್ಲಿ ಲಯವಾಗಶಕ್ಯವರಾಗಿ

ದ್ದಾರೆ, ಮತ್ತು ಅವರು ಬಿಡುವ ನುಡಿಯು ಸಂಪು ಇತರರಿಗೆ ಮಾತ್ರವಲ್ಲದೆ ಪ್ರಾಯಃ ತಮಗೇ ತಮ್ಮ ಅರ್ಥವನ್ನು ಕಳಂಕಿಸುವುದು ಶಾಸನ ಭಂಗ ಚಳವಳಿಯು ಮುಂದು ವರಿಯುತ್ತಿದ್ದಾಗ ೧೯೩೩ ರ ಏಪ್ರಿಲ್‌ನಲ್ಲಿ ಅವರು ಕಲ್ಕತ್ತೆಯಲ್ಲಿ ಮಾಡಿದ ಬಿನ್ನಹ ವನ್ನು ಪರೀಕ್ಷಮಾಡುವುದು ಲೇಸು ಮೂಲಧ್ಯೇಯಗಳು ಮತ್ತು ಗೊತ್ತುಗುರಿಗಳನ್ನು ಬಿಟ್ಟರೆ, ಎರಡು ಅಂಶಗಳು ಗಮನಾರ್ಹವೆಂದು ನನಗೆ ತೋರುತ್ತದೆ ಏನಾದರೂ ಸಂಭವಿಸಲಿ, ನಾವು ಬ್ರಿಟಿಷ್ ಸರಕಾರದಿಂದ ಎಷ್ಟೇ ಅವಮಾನಿತರಾಗಲಿ, ಮುರಿಯು ಲ್ಪಡಲಿ, ತೇಜೋವಧೆಗೆ ಗುರಿಯಾಗಲಿ ಮತ್ತು ಸುಲಿಯಲ್ಪಡಲಿ, ನಾವು ಅದಕ್ಕೆ ಮಣಿದೇ ತೀರಬೇಕು, ಎಂಬುದು ಮೊದಲನೆಯದು ನಾವು ದಾಟಕೂಡದ ಗೆರೆ ಯನ್ನು ಎಳೆಯಲು ಅಸಾಧ್ಯ ಒಂದು ಹುಳುವು ಹೊರಳಬಹುದು ಆದರೆ ಶ್ರೀ|| ಶಾಸ್ತ್ರಿಗಳ ಉಪದೇಶದಂತೆ ನಡೆವ ಭಾರತೀಯ ಜನತೆಯಲ್ಲ ಅವರ ಪ್ರಕಾರ ಮಾರ್ಗಾಂತರವಿಲ್ಲ ಎಂದರೆ, ಅವರ ಮನೋದೃಷ್ಟಿಯಂತೆ, ಬ್ರಿಟಿಷ್ ಸರಕಾರದ ನಿರ್ಣಯಗಳಿಗೆ ಮಣಿದು ಒಪ್ಪಿದರೆ, ಅದು ಧರ್ಮಕ್ಕೆ (ಆ ದೌರ್ಭಾಗ್ಯ ಪದವನ್ನು ನಾನು ಉಪಯೋಗಿಸಬಹುದಾದರೆ) ಸಮಾನವಾದುದೆಂದರ್ಥ ನಮಗೆ ಬೇಕಿರಲಿ, ಬೇಡದಿರಲಿ, ನಾವೆಲ್ಲರೂ ಮಣಿಯಲೇಬೇಕಾದ ವಿಧಿಯದು—ಕಿಸ್ಮತ್

ನಿಸ್ಸ್ಪಷ್ಟವೂ ಜ್ಞಾತವೂ ಆದ ವಿನ್ಯಮಾನವೊಂದನ್ನು ಕುರಿತು ಅವರು ಉಪದೇಶ ಮಾಡುತ್ತಿರಲಿಲ್ಲವೆಂಬುದನ್ನು ಗಮನಿಸಬೇಕು ಅವು ಅತ್ಯಂತ ಅಹಿತವಾ ಗಿರುವುವೆಂಬುದರ ಒಂದು ಸರಿಸುಮಾರಾದ ಭಾವನೆಯಿದ್ದರೂ ' ರಾಜ್ಯಾಂಗ ರಚನಾ ವ್ಯತ್ಯಾಸ 'ಗಳು ಇನ್ನೂ ಮಾಳ್ಕೆಯಲ್ಲಿದ್ದುವು ಶ್ವೇತಪತ್ರದ ಸೂಚನೆಗಳು ಅಹಿತ ವಾಗಿರುವುದಾಗಿದ್ದರೂ ಎಲ್ಲ ಪರಿಸ್ಥಿತಿಗಳ ದೃಷ್ಟಿಯಿಂದ, ಅವು ಜಾರಿಗೆ ಬಂದರೆ, ನಾನು ಅದನ್ನು ಕಾರ್ಯಕಾರಿಯನ್ನಾಗಿ ಮಾಡುವುದಕ್ಕೆ ಇಷ್ಟಪಡುತ್ತೇನೆ, ಎಂದು ಅವರು ಹೇಳಿದ್ದರೆ ಅವರ ಬುದ್ಧಿವಾದವು, ಕೆಟ್ಟದಾಗಲಿ ಒಳ್ಳೆಯದಾಗಲಿ, ಅದು ಪ್ರಚಲಿತ ಸಂಗತಿಗಳಿಗೆ ಸಂಬಂಧವನ್ನು ಹೊಂದಿರುತ್ತಿತ್ತು ಶ್ರೀ|| ಶಾಸ್ತ್ರಿಗಳು ಇನ್ನೂ ಮುಂದಕ್ಕೆ ಹೊರಟರು ಹೊರಟು, ರಾಜ್ಯಾಂಗ ರಚನಾ ವ್ಯತ್ಯಾಸಗಳು ಎಷ್ಟೇ ಅಸಮರ್ಪಕವಾಗಿದ್ದರೂ ಅವರ ಬುದ್ಧಿವಾದವು ಆಗಲೂ ಸಮರ್ಥನೀಯವಾಗುವು ದೆಂದು ಹೇಳಿದರು ದೇಶದ ದೃಷ್ಟಿಕೋನದಿಂದ ಅತಿ ಸತ್ವಯುತವಾದ ವಿಷಯದಲ್ಲಿ ಅವರು ಬ್ರಿಟಿಷ್ ಸರಕಾರಕ್ಕೆ ಸರ್ವತಂತ್ರ ಸ್ವಾತಂತ್ರ್ಯವನ್ನು ಕೊಡಲು ಸಿದ್ಧರಿದ್ದರು ಯಾವ ವ್ಯಕ್ತಿಯಾಗಲಿ, ಗೋಷ್ಠಿಯಾಗಲಿ, ಪಂಗಡವಾಗಲಿ, ಅದಕ್ಕೆ ನಿಯಮಗಳು ಅಥವಾ ನೈತಿಕ ಮತ್ತು ರಾಜಕೀಯ ಪರಿಮಾಣಗಳಾವುವೂ ಇಲ್ಲದೆ ಇದ್ದು, ಆಳರಸರ ಆಜ್ಞೆಗಳಿಗೆ ಅನವರತವಾಗಿ ದಾಸ್ಯವನ್ನು ಪ್ರಕಟಿಸುವುದು ಅದರ ಮತ ಮತ್ತು ನೀತಿ ಯಾಗಿದ್ದಲ್ಲಿ ಹೊರತು, ಅದೃಷ್ಟವಾದ ಭವಿಷ್ಯತ್ತಿಗೆ ಒಪ್ಪಿ ಹೇಗೆ ಸಿಕ್ಕಿಕೊಳ್ಳುವುದೆಂಬ ಈ ಮನೋಭಾವವನ್ನು ಅರ್ಥಮಾಡಿಕೊಳ್ಳುವುದು ನನಗೆ ಸ್ವಲ್ಪ ಕಷ್ಟವೇ.

ನನಗೆ ಹೊಳೆಯುವ ಎರಡನೆಯ ಅಂಶವೆಂದರೆ ಕೇವಲ ತಂತ್ರಗಳಲ್ಲೊಂದರದು. ಹೊಸ ರಾಜ್ಯಾಂಗ ಸುಧಾರಣೆಗಳ ಶಾಸನ ರಚನೆಯ ದೀರ್ಘ ಪ್ರಸ್ಥಾನದಲ್ಲಿ ಶ್ವೇತಪತ್ರವು ಒಂದು ಮಜಲಾಗಿತ್ತು. ಸರಕಾರದ ದೃಷ್ಟಿಯಿಂದ ಅದು ಮುಖ್ಯವಾದ ಮಜಲಾಗಿತ್ತು. ಆದರೆ ಇನ್ನೂ ಅನೇಕ ಮಜಲುಗಳಿದ್ದುವು. ಮತ್ತು ಅದು ಅದರ ಮುಂದಿನ ಪ್ರಯಾಣಗಳಲ್ಲಿ ಒಳ್ಳೆಯದಕ್ಕೋ ಕೆಟ್ಟದಕ್ಕೋ ಮಾರ್ಪಡಿಸಲ್ಪಡುವ ಸಾಧ್ಯತೆಯಿತ್ತು. ಬಗೆಬಗೆಯ ಸ್ವಾರ್ಥಗಳು ಬ್ರಿಟಿಷ್ ಸರಕಾರ ಮತ್ತು ಪಾರ್ಲಿಮೆಂಟಿನ ಮೇಲೆ ತರುವ ಒತ್ತಾಯವನ್ನು ಈ ಮಾರ್ಪಾಟುಗಳು ಅವಲಂಬಿಸುವುವೆಂಬುದು ಸ್ಪಷ್ಟವಾಗಿತ್ತು. ಈ ಎಳೆದಾಟದಲ್ಲಿ ಭಾರತೀಯ ಉದಾರವಾದಿಗಳನ್ನು ತನ್ನ ಪಕ್ಷಕ್ಕೆ ಒಲಿಸಿಕೊಳ್ಳುವ ಆಶೆಯು ಬ್ರಿಟಿಷ್ ಸರಕಾರದ ಮೇಲೆ ಪ್ರಭಾವವನ್ನು ಬೀರಬಹುದಾಗಿದ್ದು, ಅದರ ಸೂಚನೆಗಳನ್ನು ಉದಾರೀಕರಿಸಿ ಅಥವಾ ಅಕ್ರಮಗಳನ್ನಾದರೂ ನಿರೋಧಿಸುವ ಮಟ್ಟಿಗೆ ಪ್ರೇರೇಪಿಸಿರಬೇಕು. ಆದರೆ, ಹೊಸ ಸುಧಾರಣೆಗಳ ಸ್ವೀಕಾರ ಅಥವಾ ತಿರಸ್ಕಾರ, ಅವನ್ನು ಕಾರ್ಯಕಾರಿಯಾಗಿಸುವುದು ಅಥವಾ ಕಾರ್ಯಕಾರಿಯಾಗಿಸದಿರುವುದು, ಈ ಪ್ರಶ್ನೆಯು ಹುಟ್ಟುವುದಕ್ಕಿಂತ ಬಹಳ ಮುಂಚೆಯೇ ಶ್ರೀ॥ ಶಾಸ್ತ್ರಿಗಳು ಅವಧಾರಣೆ ಮಾಡಿದ ಉಗ್ಗಡಣೆಯು ಸರಕಾರಕ್ಕೆ ಭಾರತೀಯ ಉದಾರವಾದಿಗಳನ್ನು ಸಂಪೂರ್ಣವಾಗಿ ಉಪೇಕ್ಷೆ ಮಾಡಿಬಿಡಬಹುದೆಂದು ಸ್ಫುಟಪಡಿಸಿತು. ಅವರನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವ ಪ್ರಶ್ನೆಯೇ ಇರಲಿಲ್ಲ. ಅವರನ್ನು ಒಂದುವೇಳೆ ಹೊರದೂಡಿಬಿಟ್ಟರೂ ಅವರು ಸರಕಾರವನ್ನು ಕೈಬಿಡುತ್ತಿರಲಿಲ್ಲ. ನನಗೆ ಸಾಧ್ಯವಾದ ಮಟ್ಟಿಗೆ ವಿಷಯವನ್ನು ಉದಾರವಾದಿ ದೃಷ್ಟಿಕೋನದಿಂದ ನೋಡಿದರೆ ಶ್ರೀ॥ ಶಾಸ್ತ್ರಿಗಳ ಕಲ್ಕತ್ತೆಯ ಭಾಷಣವು ಉದಾರವಾದಿ ಧ್ಯೇಯಕ್ಕೆ ಹೆಚ್ಚು ಹಾನಿಕರವಾಗಿಯೂ ಅತ್ಯಾಶ್ಚರ್ಯಕರವಾಗಿ ತಪ್ಪುತಪ್ಪಾದ ತಂತ್ರವೆಂದೂ ನನಗೆ ತೋರುತ್ತದೆ.

ಶ್ರೀ॥ ಶಾಸ್ತ್ರಿಗಳ ಹಳೆಯ ಭಾಷಣದ ಮೇಲೆ ಇಷ್ಟೊಂದು ಬರೆಯಲು ನಾನು ಮುನ್ನುಗ್ಗಿರುವುದಕ್ಕೆ ಆ ಭಾಷಣದ ಆನುಷಂಗಿಕ ಪ್ರಾಮುಖ್ಯತೆಯಾಗಲಿ, ಲಿಬರಲ್ ಫಡರೇಷನ್ನಿನ ಸಭೆ ನೇರುವಿಕೆಯಾಗಲಿ ಕಾರಣವಲ್ಲ. ಉದಾರವಾದಿ ಮುಂದಾಳುಗಳ ಮನಃಪ್ರವೃತ್ತಿ ಮತ್ತು ಮಾನಸಿಕತೆಗಳನ್ನು ಅರ್ಥಮಾಡಿಕೊಳ್ಳುವ ನನ್ನ ಆಶೆಯೇ ಕಾರಣ. ಅವರು ದಕ್ಷರು, ಗೌರವನೀಯ ವ್ಯಕ್ತಿಗಳು, ಆದರೂ ನಾನು ಅತ್ಯಂತ ಸೌಜನ್ಯದಿಂದ ಇದ್ದರೂ ಅವರು ಮಾಡುವಂತೆ ಏಕೆ ಮಾಡುತ್ತಾರೆ ಎಂಬುದರ ಸ್ವಾರಸ್ಯವನ್ನು ಸ್ವಲ್ಪವಾದರೂ ಗ್ರಹಿಸಲು ನನಗೆ ಸಾಧ್ಯವಾಗಿಲ್ಲ. ನಾನು ಸೆರೆಮನೆಯಲ್ಲಿ ಓದಿದ ಶ್ರೀ॥ ಶಾಸ್ತ್ರಿಗಳ ಬೇರೊಂದು ಭಾಷಣವು ನನ್ನ ಮೇಲೆ ಹೆಚ್ಚಾಗಿ ಪ್ರಭಾವವನ್ನು ಬೀರಿತು. ಅವರು ಪುಣೆಯಲ್ಲಿ ೧೯೩೩ ರ ಜೂನ್‌ನಲ್ಲಿ ತಾವು ಅಧ್ಯಕ್ಷರಾಗಿರುವ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯಲ್ಲಿ ಭಾಷಣ ಮಾಡಿದರು. ಬ್ರಿಟಿಷ್ ಪ್ರಭಾವವು ಹಠಾತ್ತಾಗಿ ಮೈದೆಗೆಯಲ್ಪಟ್ಟರೆ, ಭಾರತದಲ್ಲಿ ಹುಟ್ಟುವ ತೀವ್ರ

ದ್ವೇಷ, ಪರಹಿಂಸೆ ಮತ್ತು ಪಂಗಡಗಳ ಪರಸ್ಪರ ಮರ್ದನ, ಇವುಗಳನ್ನೊಳಗೊಂಡ ರಾಜಕೀಯ ಚಳವಳಿಗಳ ಅಪಾಯಗಳನ್ನು ತೋರಿಸಿದರಂತೆ. ಇನ್ನೊಂದು ಕಡೆ, ಬ್ರಿಟಿಷ್ ರಾಜಕೀಯ ಜೀವನದಲ್ಲಿ ಮೊದಲಿನಿಂದ ಕೊನೆಯವರೆಗೂ ಪರಸಹಿಷ್ಣುತೆಯು ಮುಖ್ಯ ಗುಣವೊಂದಾಗಿದ್ದುದರಿಂದ, ಭಾರತದ ಭವಿಷ್ಯತ್ತನ್ನು ಬ್ರಿಟನ್ನಿನೊಂದಿಗೆ ಎಷ್ಟೆಷ್ಟು ಸಹಕಾರದಿಂದ ರಚಿಸುತ್ತೇವೆಯೋ ಅಷ್ಟಷ್ಟು ಭಾರತದಲ್ಲಿ ಪರಸಹಿಷ್ಣುತೆಯು ನೆಲೆಗೊಳ್ಳುವುದರ ಸಂಭವ ಹೆಚ್ಚು ಸರಯಲ್ಲಿದ್ದುದರಿಂದ, ಕಲ್ಕತ್ತೆಯ 'ಸ್ಟೇಟ್ಸ್ ಮನ್' ಪತ್ರಿಕೆಯು ಒದಗಿಸಿದ ಶ್ರೀ॥ ಶಾಸ್ತ್ರಿಗಳ ಭಾಷಣದ ಸಾರಾಂಶವನ್ನು ಆಧಾರವಾಗಿಟ್ಟುಕೊಳ್ಳಬೇಕಾಗಿದೆ 'ಸ್ಟೇಟ್ಸ್ ಮನ್' ಪತ್ರಿಕೆಯು ಜೊತೆಗೆ ಹೀಗೆ ಬರೆಯಿತು "ಅದೊಂದು ಸುಖಮಯವಾದ ಸಿದ್ಧಾಂತ, ಮತ್ತು ಡಾ॥ ಮೂಂಜಿಯವರೂ ಸಹ ಇದೇ ಅರ್ಥದಲ್ಲಿ ಭಾಷಣ ಮಾಡುತ್ತಿದ್ದಾರೆಂಬುದನ್ನು ನಾವು ಗಮನಿಸಿದ್ದೇವೆ" ರಷ್ಯ, ಇಟಲಿ ಮತ್ತು ಜರ್ಮನಿಗಳಲ್ಲಿ ನಡೆಯುತ್ತಿದ್ದ ಸ್ವಾತಂತ್ರ್ಯದ ನಿಗ್ರಹ, ಕ್ರೌರ್ಯಗಳು, ಮತ್ತು ಕಾಡುತನಗಳು ಇವನ್ನು ಕುರಿತು ಸಹ ಶ್ರೀ॥ ಶಾಸ್ತ್ರಿಗಳು ಅನ್ವಯ ಮಾಡಿದರಂತೆ

ಇದನ್ನು ಓದಿದಾಗ ಬ್ರಿಟನ್ ಮತ್ತು ಭಾರತವನ್ನು ಕುರಿತ ಶ್ರೀ॥ ಶಾಸ್ತ್ರಿಗಳ ದೃಷ್ಟಿಕ್ಷೇಪಕ್ಕೂ ಬ್ರಿಟಿಷ್ ಕನ್ಸರ್ವೆಟಿವ್ ಅಗ್ನಿಭಕ್ಷಕರ ದೃಷ್ಟಿಕ್ಷೇಪಕ್ಕೂ ಎಷ್ಟು ಅಸಾಮಾನ್ಯವಾದ ಸಾಸಟಿಯಿದೆಯೆಂಬುದು ನನಗೆ ಹೊಳೆಯಿತು ವಿವರಗಳ ಸಂಗತಿಗಳಲ್ಲಿ ಭಿನ್ನತೆಗಳಿದ್ದುವೆಂಬುದು ನಿಸ್ಸಂದೇಹವಾದುದು, ಆದರೆ ಮೂಲತಃ ಕಲ್ಪನ ವಿಜ್ಞಾನವು ಒಂದೇ ಆಗಿತ್ತು ತಮ್ಮ ನಂಬಿಕೆಗಳಿಗೆ ಯಾವ ಹಾನಿಯನ್ನೂ ತಂದುಕೊಳ್ಳದೆ, ಮಿ॥ ವಿನ್ಸ್ಟನ್ ಚರ್ಚಿಲ್‌ರವರು ತತ್ಸದೃಶವಾದ ಭಾಷೆಯಲ್ಲಿ ಉಕ್ತಿಗೊಡಬಹುದಾಗಿತ್ತು ಇಷ್ಟಾದರೂ ಶ್ರೀ॥ ಶಾಸ್ತ್ರಿಗಳು ಉದಾರವಾದಿ ಪಕ್ಷದ ಎಡ ಮಗ್ಗುಲಿನವರು, ಮತ್ತು ಅದರ ಮುಂದಾಳುಗಳಲ್ಲಿ ಅತ್ಯಂತ ದಕ್ಷರಾದವರು

ಶ್ರೀ॥ ಶಾಸ್ತ್ರಿಗಳ ಇತಿಹಾಸದ ಓದನ್ನು, ಇಲ್ಲವೇ ವಿಶ್ವವಿಚಾರಗಳನ್ನು ಮತ್ತು ಅದರಲ್ಲಿಯೂ ಹೆಚ್ಚು ವಿಶೇಷವಾಗಿ ಬ್ರಿಟನ್ ಮತ್ತು ಭಾರತಗಳನ್ನು ಕುರಿತ ಅವರ ಅಭಿಪ್ರಾಯಗಳನ್ನು ನಾನು ಸ್ವಲ್ಪವೂ ಒಪ್ಪುವುದಕ್ಕೆ ಸಾಧ್ಯವಿಲ್ಲವಾಗಿದೆ ಪ್ರಾಯಶಃ ಆಂಗ್ಲನಲ್ಲದ ಯಾವ ಪರಕೀಯನೂ ಅವುಗಳನ್ನೊಪ್ಪನು, ಪ್ರಗತಿಪರವಾದ ಅಭಿಪ್ರಾಯಗಳುಳ್ಳ ಅನೇಕ ಇಂಗ್ಲಿಷರು ಅವರಿಂದ ಭಿನ್ನಾಭಿಪ್ರಾಯಿಗಳಾಗುತ್ತಾರೆ ಪ್ರಪಂಚವನ್ನೂ ತನ್ನ ಸ್ವಂತ ದೇಶವನ್ನೂ ಬ್ರಿಟಿಷ್ ಪ್ರಭುತ್ವವರ್ಗದ ಬಣ್ಣದ ಕನ್ನಡಕದಿಂದ ನೋಡುವುದೇ ಅವರ ಲಲಿತ ಪ್ರತಿಭೆಯಾಗಿದೆ ಆದರೂ ಕಳೆದ ಹದಿನೆಂಟು ತಿಂಗಳುಗಳಲ್ಲಿ ದಿನಂಪ್ರತಿ ಮತ್ತು ತಾವು ಭಾಷಣಕೊಟ್ಟ ಕಾಲದಲ್ಲಿ ಭಾರತದಲ್ಲಿ ನಡೆಯುತ್ತಿದ್ದ ತೀರ ಅಪೂರ್ವವಾದ ಘಟನೆಗಳನ್ನೇ ಅವರು ತಮ್ಮ ಭಾಷಣದಲ್ಲಿ ಅಲಕ್ಷ್ಯಮಾಡಿರುವುದು ಆಶ್ಚರ್ಯಕರವಾಗಿದೆ ಅವರು ರಷ್ಯ, ಇಟಲಿ, ಮತ್ತು

ಜರ್ಮನಿಗಳನ್ನು ಕುರಿತು ಅನ್ವಯಮಾಡಿದರು. ಆದರೆ ತಮ್ಮ ಸ್ವಂತ ದೇಶದಲ್ಲಿನ ಎಲ್ಲ ಸ್ವಾತಂತ್ರ್ಯಗಳ ಕ್ರೂರ ದಮನ ಮತ್ತು ನಿಗ್ರಹಗಳ ಉಸಿರೆತ್ತಲಿಲ್ಲ ನಡೆಯುತ್ತಿದ್ದುದರ ಹೆಚ್ಚು ಭಾಗವನ್ನು ವಾರ್ತಾಪ್ರಕಟನ ಬಹಿಷ್ಕಾರದ ದಪ್ಪತೆರೆಯು ಮುಚ್ಚಿದ್ದುದರಿಂದ ಗಡಿನಾಡು ಮತ್ತು ಬಂಗಾಳಗಳಲ್ಲಿನ ಭಯಂಕರ ಪ್ರಸಕ್ತಿಗಳೆಲ್ಲವೂ—ರಾಜೇಂದ್ರ ಬಾಬೂರವರು ತಮ್ಮ ಇತ್ತೀಚಿನ ಕಾಂಗ್ರೆಸ್ ಅಧ್ಯಕ್ಷಭಾಷಣದಲ್ಲಿ ಕರೆದಿರುವಂತೆ ' ಬಂಗಾಳದ ಮೇಲಿನ ಅತ್ಯಾಚಾರ '—ಅವರಿಗೆ ತಿಳಿಯದಿರಬಹುದು ಆದರೆ ಭಾರತದ ಬಾಧಾನುಭವ ಮತ್ತು ತಮ್ಮ ನಾಡಿಗರು ಜೀವನ ಮತ್ತು ಸ್ವಾತಂತ್ರ್ಯಗಳಿಗಾಗಿ ಶಕ್ತಿವಂತ ಎದುರಾಳಿಗೆ ಪ್ರತಿಯಾಗಿ ಹೂಡಿದ್ದ ಹೋರಾಟಗಳನ್ನು ಕುರಿತು ಅವರು ಮರೆತುಬಿಟ್ಟಿದ್ದರೆ ? ವಿಸ್ತಾರ ಕ್ಷೇತ್ರಗಳಲ್ಲಿ ಪ್ರಬಲಿಸಿದ್ದ ಪೊಲೀಸ್ ಪ್ರಭುತ್ವ, ಸಮರ ಶಾಸನ ಸದೃಶವಾದ ಪರಿಸ್ಥಿತಿಗಳು, ಆರ್ಡಿನೆನ್ಸುಗಳು, ನೆರೆಮನೆಯಲ್ಲಿ ಉಪವಾಸ ಮುಷ್ಕರಗಳು ಮುಂತಾದ ಸಂಕಟಗಳನ್ನು ಅವರು ತಿಳಿದಿರಲಿಲ್ಲವೆ ? ಯಾವ ಪರಸಹಿಷ್ಣುತೆ ಮತ್ತು ಸ್ವಾತಂತ್ರ್ಯಗಳಿಗಾಗಿ ಯಾವ ಬ್ರಿಟನ್ನನ್ನು ಅವರು ಕೈವಾರಿಸಿದರೋ ಅದೇ ಬ್ರಿಟನ್ನು ಅವನ್ನು ಭಾರತದಲ್ಲಿ ಮುರಿಯುತ್ತಿರುವುದನ್ನು ಅವರು ಅರಿತಿರಲಿಲ್ಲವೆ ?

ಅವರು ಕಾಂಗ್ರೆಸ್ಸಿನ ರೀತಿ ನೀತಿಗಳನ್ನು ಒಪ್ಪಿದರೋ ಬಿಟ್ಟರೋ ಅದು ಆಲೋಚ್ಯ ವಿಷಯವಲ್ಲ ಕಾಂಗ್ರೆಸ್ ನೀತಿಯನ್ನು ಟೀಕಿಸಿ ಖಂಡಿಸುವುದಕ್ಕವರು ಸಂಪೂರ್ಣ ಬಾಧ್ಯರಾಗಿದ್ದರು ಆದರೆ, ಭಾರತೀಯರೊಬ್ಬರು, ಸ್ವಾತಂತ್ರ್ಯ ಪ್ರೇಮಿಗಳೊಬ್ಬರು, ಶೀಘ್ರವೇದಿಗಳೊಬ್ಬರು ಎಂದವರನ್ನು ಗಮನಿಸಿದರೆ, ತಮ್ಮ ದೇಶಬಂಧುಗಳಾದ ಸ್ತ್ರೀ ಪುರುಷರ ವಿಸ್ಮಯಕರವಾದ ಧೈರ್ಯ ತ್ಯಾಗಗಳಿಗೆ ಅವರಲ್ಲಿ ಯಾವ ಪ್ರತಿಕ್ರಿಯೆಗಳು ಹುಟ್ಟಿದುವು ? ನಮ್ಮ ಆಳರಸರು ಭಾರತದ ಹೃದಯಕ್ಕೆ ಕೊಡಲಿಯನ್ನು ಇಟ್ಟಾಗ ಅವರಿಗೆ ಯಾವ ನೋವೂ ಸಂಕಟವೂ ಆಗಲಿಲ್ಲವೆ ? ಮದೋನ್ಮತ್ತ ಸಾಮ್ರಾಜ್ಯದ ಭೌತ ಶಕ್ತಿಯ ಮುಂದೆ ಮಣಿಯಲು ನಿರಾಕರಿಸುತ್ತಿದ್ದು, ತಮ್ಮ ಮೈಗಳನ್ನು ಮುರಿಯಲು, ಮನೆಗಳನ್ನು ನೆಲಸಮ ಮಾಡಲು, ಇಷ್ಟರನ್ನು ಹಿಂಸಿಸಲು ಅವಕಾಶ ಕೊಡುವುದೇ ತಮ್ಮ ಆತ್ಮಗಳ ಮಣಿತಕ್ಕಿಂತ ಲೇಸೆಂದು ಹತ್ತಾರುಸಾವಿರ ಜನರು ಮೆರೆದುದು ಅವರಿಗೆ ಹುಲ್ಲಿಗಿಂತ ಕಡೆಯೆ ? ನಾವು ನೆರೆಮನೆಯಲ್ಲೂ ಹೊರಗೂ ವೀರಭಂಗಿಗಳನ್ನು ಮೆರೆದೆವು, ನಸುನಕ್ಕೆವು, ಹಿಗ್ಗಾಡಿದೆವು, ಆದರೆ ಅನೇಕ ವೇಳೆ ನಮ್ಮ ನಗುವು ಕಂಬನಿಯ ಮೂಲಕ ಚಿಮ್ಮಿತು, ಮತ್ತು ಕೆಲವು ವೇಳೆ ನಮ್ಮ ನಗುವು ಅಳುವಿನ ಅಂಚಿನಲ್ಲಿತ್ತು.

ಗಂಡಾಡಿಗಳೂ ಉದಾರಿ ಇಂಗ್ಲಿಷರೂ ಆದ ಮಿ॥ ವೆರಿಯರ್ ಎಲ್ವಿನ್‌ರವರು ತಮ್ಮಲ್ಲುಂಟಾಗಿದ್ದ ಪ್ರತಿ ಕ್ರಿಯೆಗಳನ್ನು ಬಣ್ಣಿಸುತ್ತಾರೆ " ಇಡೀ ಜನಾಂಗವೊಂದು ದಾಸ್ಯದ ಮಾನಸಿಕ ಶೃಂಖಲೆಗಳನ್ನು ಕಿತ್ತೊಗೆದು ನಿರ್ಭೀತ ಪ್ರತಿಜ್ಞೆಯ ನೈಜ

ಪ್ರತಿಷ್ಠೆಗೆ ತಕ್ಕಂತೆ ಜಾಗೃತಿ ಹೊಂದುತ್ತಿದ್ದುದು ವಿಸ್ಮಯಕರವಾದ ಅನುಭವವಾಗಿತ್ತು" ಎಂದು ೧೯೩೦ ನ್ನು ಕುರಿತು ಅವರು ಹೇಳುತ್ತಾರೆ ಮತ್ತು ಪುನಃ "ಸತ್ಯಾಗ್ರಹ ಸಂಗ್ರಾಮದಲ್ಲಿ ಕಾಂಗ್ರೆಸ್ ಸ್ವಯಂಸೇವಕರನೇಕರು ತೋರಿದ ಅತ್ಯಾಶ್ಚರ್ಯಕರ ಶಿಸ್ತಿಯನ್ನು ಪ್ರಾಂತ ಗವರ್ನರ್‌ಗಳಲ್ಲೊಬ್ಬರು ಔದಾರ್ಯದಿಂದ ಪ್ರಶಂಸಿಸಿದ್ದಾರೆ "

ದೇಶಬಾಂಧವರಿಂದ ಅಮಿತವಾಗಿ ಗೌರವಿಸಲ್ಪಡುವ ಶ್ರೀ|| ಶ್ರೀನಿವಾಸಶಾಸ್ತ್ರಿಗಳು ದಕ್ಷರೂ ಶೀಘ್ರವೇದಿಗಳೂ ಆಗಿದ್ದಾರೆ ಆದರೆ ಅವರಲ್ಲಿ ಅದೇ ರೀತಿ ಪ್ರತಿಕ್ರಿಯೆಯುಂಟಾಗುತ್ತದೆಯೆಂಬುದೂ, ಅವರು ಅಂಥ ಸಂಗ್ರಾಮದಲ್ಲಿ ದೇಶಬಾಂಧವರಿಗಾಗಿ ಸಂವೇದನೆಯನ್ನು ಅನುಭವಿಸುವರೆಂಬುದೂ ಅಸಾಧ್ಯವೆಂದು ತೋರುತ್ತದೆ. ಸಕಲ ವಿಧವಾದ ಪೌರಸ್ವಾತಂತ್ರ್ಯ ಮತ್ತು ಸಾರ್ವಜನಿಕ ಕಾರ್ಯಕಲಾಪಗಳು ಸರಕಾರದಿಂದ ನಿಗ್ರಹಿಸಲ್ಪಟ್ಟುದಕ್ಕೆ ಅವರು ಖಂಡನವಾಣಿಯನ್ನೆತ್ತುವರೆಂದು ನಿರೀಕ್ಷಿಸಬಹುದಾಗಿತ್ತು ಬಾಧಿತ ಕ್ಷೇತ್ರಗಳಿಗೆ–ಬಂಗಾಳ ಮತ್ತು ಗಡಿನಾಡು–ಅವರೂ ಅವರ ಸಹೋದ್ಯೋಗಿಗಳೂ, ಕಾಂಗ್ರೆಸ್ ಅಥವಾ ಶಾಸನ ಭಂಗಗಳಿಗೆ ಯಾವ ವಿಧದಲ್ಲಾದರೂ ಸಹಾಯ ಮಾಡುವುದಕ್ಕಲ್ಲವಾದರೂ, ಅಧಿಕಾರಿಗಳ ಮತ್ತು ಪೋಲೀಸರ ಅತ್ಯಾಚಾರಗಳನ್ನು ಎತ್ತಿಹಾಕಿ ತಡೆಯಲು ಹೋಗುವರೆಂದೂ ಇನ್ನೂ ಹೆಚ್ಚಾಗಿ ಆಶಿಸಿರಬಹುದಾಗಿತ್ತು ಇತರ ದೇಶಗಳಲ್ಲಿ ಸ್ವಾತಂತ್ರ್ಯ ಮತ್ತು ಪೌರಸ್ವಾತಂತ್ರ್ಯ ಪ್ರೇಮಿಗಳು ಹೀಗೆ ಸಾಮಾನ್ಯವಾಗಿ ಮಾಡುವರು ಆದರೆ ಹೀಗೆ ಮಾಡುವುದಕ್ಕೆ ಪ್ರತಿಯಾಗಿ ಸರಕಾರದ ಕಾರ್ಯನಿರ್ವಹಣ ಸಿಬ್ಬಂದಿಯು ಭಾರತದ ಸ್ತ್ರೀ ಪುರುಷರನ್ನು ತೀವ್ರವಾಗಿ ತುಳಿದುಹಾಕುತ್ತ ಸಾಮಾನ್ಯ ಸ್ವಾತಂತ್ರ್ಯಗಳನ್ನೂ ಇಲ್ಲವಾಗಿಸಿದ್ದಾಗ, ಅದನ್ನು ತಡೆಯುವುದಕ್ಕೆ ಪ್ರತಿಯಾಗಿ, ಕಡೆಯ ಪಕ್ಷ, ಏನೇನು ನಡೆದುಹೋಗುತ್ತಿತ್ತೆಂಬುದನ್ನಾದರೂ ತಿಳಿಯಲು ಪ್ರಯತ್ನಿಸುವುದಕ್ಕೆ ಪ್ರತಿಯಾಗಿ, ಭಾರತದಲ್ಲಿ ಬ್ರಿಟಿಷ್ ಪ್ರಭುತ್ವದಲ್ಲಿ ಯಾವ ಗುಣಗಳಿಗೆ ಸಂಪೂರ್ಣವಾಗಿ ವಾರಡಿ ಬಂದಿತ್ತೋ ಆ ಪರಸಹಿಷ್ಣುತೆ ಮತ್ತು ಸ್ವಾತಂತ್ರ್ಯಗಳಿಗಾಗಿ ಬ್ರಿಟಿಷರಿಗೆ ಪ್ರಶಸ್ತಿಯನ್ನು ಕೂಡ ಹೋಗುವುದನ್ನು ಆಯ್ದುಕೊಂಡರು ಅವರಿಗೆ ಅವರು ನೈತಿಕ ಸಹಕಾರವನ್ನಿತ್ತು, ಅವರ ನಿಗ್ರಹ ಕರ್ತವ್ಯದಲ್ಲಿ ಅವರನ್ನು ಪ್ರೋತ್ಸಾಹಿಸಿ ಎದೆಗೊಳಿಸಿದರು.

ಇದು ಹೀಗಾಗುವುದೆಂದಾಗಲಿ, ಅಥವಾ ತಮ್ಮ ಕಾರ್ಯದ ಪರಿಣಾಮಗಳನ್ನಾಗಲಿ ಅವರು ಆಲೋಚಿಸಲಿಲ್ಲವೆಂದು ನನ್ನ ದೃಢವಾದ ನಂಬಿಕೆ. ಆದರೆ ಅವರ ಭಾಷಣವು ಇದೇ ಪರಿಣಾಮವನ್ನುಂಟು ಮಾಡಿತೆಂಬುದರಲ್ಲಿ ಯಾವ ಸಂದೇಹವೂ ಇಲ್ಲ ಹಾಗಾದರೆ ಅವರು ಹೀಗೇಕೆ ಆಲೋಚಿಸಿ ಕೆಲಸ ನಡೆಸಬೇಕು ?

ಉದಾರವಾದಿ ನಾಯಕರು ತಮ್ಮ ದೇಶಬಾಂಧವರಿಂದ ಹಾಗೂ ಎಲ್ಲ ಆಧುನಿಕ ಆಲೋಚನೆಗಳಿಂದ ಸಂಪೂರ್ಣ ಬೇರೆಯಾಗಿ ದೂರವಾಗಿ ಹೋಗಿದ್ದಾರೆ ಎಂಬು

ದರ ಹೊರತು ಈ ಪ್ರಶ್ನೆಗೆ ತಕ್ಕ ಉತ್ತರವನ್ನೂ ನಾನು ಕಂಡಿಲ್ಲ ಅವರು ಓದುವ ಮುಗ್ಗಲು ಹಿಡಿದ ಹಳೆಯ ಗ್ರಂಥಗಳು ಭಾರತದ ಪ್ರಜಾಕೋಟಿಯನ್ನು ಅವರ ದೃಷ್ಟಿ ಯಿಂದ ಮರೆಮಾಡಿವೆ, ಮತ್ತು ಅವರು ಒಂದು ವಿಧವಾದ ಆತ್ಮ ಪ್ರೇಮ * ವನ್ನು ಬೆಳೆಸಿಕೊಂಡಿದ್ದಾರೆ ನಾವು ಸೆರೆಮನೆಗಳಿಗೆ ಹೋದೆವು ಮತ್ತು ನಮ್ಮ ದೇಹಗಳು ಓವರಿಗಳಲ್ಲಿ ಬಂಧಿತವಾಗಿದ್ದುವು, ಆದರೆ ನಮ್ಮ ಮನಸ್ಸುಗಳು ಸ್ವಾತಂತ್ರ್ಯದಿಂದ ಅಲೆದುವು, ಮತ್ತು ನಮ್ಮ ಉತ್ಸಾಹಗಳು ನಿರಾಶೆಗೊಳ್ಳಲಿಲ್ಲ ಆದರೆ ಅವರು ತಮ್ಮದೇ ಆದ ಕೌಶಲದಿಂದ ಮಾನಸಿಕ ಕಾರಾಗೃಹಗಳನ್ನು ಸೃಷ್ಟಿಸಿಕೊಂಡರು, ಅಲ್ಲಿ ಅವರು ಸುತ್ತು ಸುತ್ತುತ್ತ ಅದರಿಂದ ಮುಕ್ತಿಯನ್ನು ಕಾಣಲಿಲ್ಲ ಇದ್ದಂತಿರುವ 'ವಿದ್ಯಮಾನಗಳ ದೇವ'ರನ್ನು ಪೂಜಿಸಿದರು, ಆದರೆ ವ್ಯತ್ಯಾಸವಾಗುವ ಈ ಪ್ರಪಂಚ ದಲ್ಲಿ ನಡೆವಂತೆ ವಿದ್ಯಮಾನಗಳು ವ್ಯತ್ಯಾಸವಾದಾಗ, ಅವರು ವೈಬಗೆಗಳಲ್ಲಿ ನಿಸ್ಸಹಾಯರಾಗಿ, ಕಲ್ಪನೆಗಳು ಅಥವಾ ನೈತಿಕ ಪ್ರಮಾಣಗಳಿಲ್ಲದೆ ಮಾರ್ಗದ ರ್ಶಕ ಧ್ಯೇಯ ಮತ್ತು ದೃಗ್ಭಾವರಹಿತರಾದರು ನಮ್ಮಲ್ಲಿ ಒಬ್ಬೊಬ್ಬರಿಗೂ ಇದ್ದ ಆಯ್ಕೆಯು ಮುನ್ನುಗ್ಗುವುದು ಇಲ್ಲವೇ ನೂಕಿಸಿಕೊಳ್ಳುವುದು, ಜಂಗಮ ಜಗತ್ತಿನಲ್ಲಿ ನಾವು ಸ್ಥಾವರವಾಗಿರಲಾರೆವು ವ್ಯತ್ಯಾಸ ಮತ್ತು ಚಲನಗಳಿಂದ ಭೀತರಾಗಿ, ತಮ್ಮನ್ನು ಬಳಸಿಕೊಂಡಿದ್ದ ಬಿರುಗಾಳಿಗಳಿಗೆ ಉದಾರವಾದಿಗಳು ಹೆದರಿದರು, ಜಂಘಾ ಬಲ ಉಡುಗಿದವರಾಗಿ ಮುನ್ನುಗ್ಗಲಾರದಿದ್ದರು, ಆದ್ದರಿಂದ ಅವರು ಸಿಕ್ಕಿದ ಒಂದೊಂದು ಹುಲ್ಲಗರಿಕೆಯನ್ನೂ ಜೀವವುಳಿಸಿಕೊಳ್ಳಲು ಹಿಡಿದುಕೊಳ್ಳುತ್ತಿದ್ದು ಅಲ್ಲಿಂದಿ ಲ್ಲಿಗೆ ಇಲ್ಲಿಂದಲ್ಲಿಗೆ ಬೆಂಡಾಡಲ್ಪಟ್ಟರು ಆಲೋಚನೆಯ ವಿವರ್ಣವಾದ ಎರಕದಿಂದ ಬೇಸರಹೊಂದಿ ನಿತ್ಯ ಸಂದೇಹಗ್ರಸ್ತರಾಗಿ, ಮನ್ನಾಡುತ್ತ, ನಿಶ್ಚಿತಭಾವವಿಲ್ಲದೆ ಅವರು ಭಾರತೀಯ ರಾಜಕಾರಣದ ಹ್ಯಾಮ್ಲೆಟ್‌ಗಳಾದರು

> " ಕಾಲವದು ತಾಂಕೀಲು ತಪ್ಪಿಹುದು ಓ ಕೇಡಿ ಮತ್ಸರವೆ !
> ನಾನಾದೊಡಮದೇಕದನು ನೇರ್ಪಡಿಸೆ ಪುಟ್ಟಿದೆನೋ "

ಉದಾರವಾದಿ ವಾರಪತ್ರಿಕೆಯಾದ " ಸರ್ವೆಂಟ್ ಆಫ್ ಇಂಡಿಯಾ "ವು ಶಾಸನ ಭಂಗ ಚಳವಳಿಯ ಉತ್ತರೋತ್ತರ ದಿನಗಳಲ್ಲಿ, ಕಾಂಗ್ರೆಸ್ಸಿನವರು ಸೆರೆಮನೆಗೆ ಹೋಗಲು ಆಸೆಪಡುವರೆಂದೂ, ಹೊಕ್ಕಮೇಲೆ ಹೊರಬರಲು ಆಶೆಪಡುವರೆಂದೂ ದೋಷಾರೋಪಣೆ ಮಾಡಿತು ಅದೇ ಕಾಂಗ್ರೆಸ್ಸಿನ ಏಕಮಾತ್ರ ರಾಜನೀತಿಯೆಂದು

---

* Narcissism. ನಾರ್ಸಿಸಸ್ ಎಂಬ ಸುಂದರ ಯುವಕನಲ್ಲಿ ಎಕೋ ಎಂಬ ಅಪ್ಸರೆ ಯೊಬ್ಬಳು ಪ್ರಣಯಭಿಕ್ಷೆಯನ್ನು ಬೇಡಿದಳು ಅವನಾದರೋ ಪ್ರೇಮರಹಿತನಾಗಿದ್ದು ಆಕೆಯನು ನಿರಾಕರಿಸಿದನು ಅದುದರಿಂದ ಆಕೆಯು ಕೊರಗಿಕೊರಗಿ ಸತ್ತುಹೋದಳು ವಿಧಿಯು ನಾರ್ಸಿ ಸಸ್‌ನನ್ನು ಶಿಕ್ಷಿಸಲು, ಅವನು ಕಲ್ಯಾಣಿಯೊಂದರಲ್ಲಿ ಕಂಡ ತನ್ನ ಪ್ರತಿಬಿಂಬದಲ್ಲ ಮೋಹಗೊಳ್ಳು ವಂತೆ ಮಾಡಿತು ಅವನೂ ಹಾಗೆಯೇ ಕೊರಗಿಕೊರಗಿ, ಕೊನೆಗೆ ಪುಷ್ಪವಾಗಿ ಮಾರ್ಪಡಿಸಲ್ಪಟ್ಟನು.

ಸ್ವಲ್ಪ ಕಿರುಕುಳಗೊಂಡೇ ಅದು ಹೇಳಿತು ಅದಕ್ಕೆ ಉದಾರವಾದಿ ಪಕ್ಷಾಂತರವೆಂದರೆ, ತೋರುವಂತೆ, ಬ್ರಿಟಿಷ್ ಮಂತ್ರಿಗಳಲ್ಲಿ ಬಿನ್ನವಿಸಿಕೊಳ್ಳಲು ಇಂಗ್ಲೆಂಡಿಗೆ ನಿಯೋಗ ಗೋಷ್ಠಿಯೊಂದನ್ನು ಕಳುಹಿಸುವುದು, ಅಥವಾ ಇಂಗ್ಲೆಂಡಿನಲ್ಲಿ ಸರಕಾರದ ವ್ಯತ್ಯಾಸ ವೊಂದಾಗುವುದನ್ನು ನಿರೀಕ್ಷಿಸಿ ಅದಕ್ಕಾಗಿ ಪ್ರಾರ್ಥನೆ ಮಾಡುವುದು

ಆರ್ಡಿನೆನ್ಸ್ ಶಾಸನಗಳು ಮತ್ತು ತದಿತರ ನಿಗ್ರಹಕಾರಿ ಶಾಸನಗಳನ್ನು ಪ್ರತಿಭಟಿ ಸುವುದೇ ಅಂದು ಸ್ವಲ್ಪಮಟ್ಟಿಗೆ ಕಾಂಗ್ರೆಸ್ ನೀತಿಯಾಗಿದ್ದುದು ನಿಜ, ಮತ್ತು ಇದು ಸೆರೆಮನೆಗೆ ದಾರಿಯಾಯಿತು ಕಾಂಗ್ರೆಸ್ಸೂ ರಾಷ್ಟ್ರವೂ ದೀರ್ಘ ಸಂಗ್ರಾಮಾನಂತರ ಬಳಲಿದ್ದು ಸರಕಾರದ ಮೇಲೆ ಯಾವ ಪರಿಣಾಮಕಾರಿ ಒತ್ತಾಯವನ್ನೂ ತರಲಾರ ದ್ದಾಗಿದ್ದುವೆಂಬುದೂ ನಿಜ ಆದರೆ ಕ್ರಿಯಾತ್ಮಕ ಮತ್ತು ನೈತಿಕ ಪರ್ಯಾಲೋಚನೆ ಯೊಂದಿತ್ತು

ಭಾರತವು ಅನುಭವಿಸುತ್ತಿದ್ದಂಥ ನಗ್ನವಾದ ದಬ್ಬಾಳಿಕೆಯು ಆಳುವವರಿಗೆ ಬಹು ವೆಚ್ಚದ ವಿಷಯ ಅವರಿಗೂ ಕೂಡ ಅದು ದುಃಖಪ್ರದವಾದ ಮತ್ತು ಧೃತಿಗುಂದಿಸುವ ವಿಷಮ ಪರೀಕ್ಷೆ, ಮತ್ತು ಕೊನೆಯಲ್ಲಿ ಅದು ತಮ್ಮ ಬುನಾದಿಗಳನ್ನು ದುರ್ಬಲಪಡಿಸುವುದೆಂದೂ ಚೆನ್ನಾಗಿ ಬಲ್ಲರು ಅದು ಅವರ ಆಳ್ವಿಕೆಯ ನೈಜಗುಣ ವನ್ನು ಜೋರಾವರಿಗೊಳಗಾದ ಜನರಿಗೂ ವಿಶಾಲಪ್ರಪಂಚಕ್ಕೂ ನಿರಂತರವಾಗಿ ಬಯಲು ಮಾಡುವುದು. ವಜ್ರಮುಷ್ಟಿಯನ್ನು ಮರೆಮಾಡಲು ಮಕಮಲ್ ಕೈಚೀಲ ವನ್ನು ತೊಟ್ಟುಕೊಳ್ಳುವದೇ ಲೇಸೆಂದವರು ಅನಂತವಾಗಿ ಭಾವಿಸುವರು ಮತ್ತು ಅಂತ್ಯ ವಿಭಜನೆಯಲ್ಲಿ, ಪರಿಣಾಮವೇನೇ ಆದರೂ ತನ್ನ ಸಂಕಲ್ಪಕ್ಕೆ ಮಣಿಯದಿರುವ ಜನ ದೊಡನೆ ವ್ಯವಹರಿಸುವುದಕ್ಕಿಂತ ಸರಕಾರವೊಂದಕ್ಕೆ ಹೆಚ್ಚು ಕೇಡಾದುದೂ ಹೆಚ್ಚು ಕಿರುಕುಳಕೊಡುವುದೂ ಬೇರೊಂದಿಲ್ಲ ಆದ್ದರಿಂದ ನಿಗ್ರಹಾತ್ಮಕ ಶಾಸನಗಳನ್ನು ಕುರಿತ ಅಲ್ಲಲ್ಲಿನ ಪ್ರತಿಭಟನೆಗಳಿಗೆ ಸಹ ಬೆಲೆಯಿತ್ತು, ಅದು ಜನರನ್ನು ಎದೆಗೊಳಿಸಿದು ದಲ್ಲದೆ ಸರಕಾರದ ಮಾನಸಿಕ ಶಿಷ್ಟ ನೀತಿಗಳನ್ನು ಹೀರಿ ಹಿಪ್ಪೆಮಾಡಿತು

ನೈತಿಕ ಪರ್ಯಾಲೋಚನೆಯು ಇನ್ನೂ ಹೆಚ್ಚು ಮುಖ್ಯವಾಗಿತ್ತು ಪ್ರಸಿದ್ಧ ವಾದ ಪ್ರಕರಣವೊಂದರಲ್ಲಿ ತೋರೋರವರು ಹೀಗೆ ಹೇಳಿದ್ದಾರೆ "ಸ್ತ್ರೀ ಪುರುಷರು ಯಾವಾಗ ಅನ್ಯಾಯವಾಗಿ ಬಂಧಿಸಲ್ಪಟ್ಟಿರುವರೋ ಆಗ ಪ್ರಾಮಾಣಿಕ ಸ್ತ್ರೀಪುರು ಷರ ಸ್ಥಾನವೂ ಸೆರೆಯಲ್ಲಿಯೇ " ಈ ಉಪದೇಶವು ಉದಾರವಾದಿಗಳಿಗೂ ಇತರರಿಗೂ ರುಚಿಸದಿರಬಹುದು, ಆದರೆ, ಶಾಸನಭಂಗವನ್ನು ಬಿಟ್ಟರೂ, ನಮ್ಮ ಸಹೋದ್ಯೋಗಿ ಗಳಲ್ಲನೇಕರು ಸದಾ ಸೆರೆಮನೆಯಲ್ಲಿದ್ದಾಗ, ಮತ್ತು ಸರಕಾರದ ಜೋರಾವರಿ ಯಂತ್ರವು ನಿರಂತರವಾಗಿ ನಮ್ಮನ್ನು ನಿಗ್ರಹಿಸಿ ತೇಜೋವಧೆಗೆ ಈಡು ಮಾಡುತ್ತಿದ್ದು ನಮ್ಮ ಜನರ ಸುಲಿಗೆಗೆ ಸಹಾಯ ಮಾಡುತ್ತಿದ್ದಾಗ, ನಮ್ಮಲ್ಲನೇಕರು ಅನೇಕವೇಳೆ, ಪ್ರಸಕ್ತ

ವಿದ್ಯಮಾನಗಳಲ್ಲಿ ನೈತಿಕ ಜೀವನವೊಂದು ಅಸಾಧ್ಯವೆಂದು ಭಾವಿಸುತ್ತೇವೆ ನಮ್ಮ ಮಾತುಗಳೆಲ್ಲ ಸರ್ವವ್ಯಾಪಿ ರಾಜದ್ರೋಹಾತ್ಮಕ ಶಾಸನವನ್ನು ಉಲ್ಲಂಘಿಸಿದೆಯೋ ಏನೋ ಎಂದು ಲಿಖಿತವಾಗುತ್ತ, ನಮ್ಮ ಪತ್ರವ್ಯವಹಾರಗಳು ಶೋಧನೆಗೊಳಗಾಗುತ್ತ, ಯಾವುದಾದರೊಂದು ಅಧಿಕಾರಿಯ ನಿರೋಧಾಜ್ಞೆಯ ಅಥವಾ ದಸ್ತಗಿರಿಯ ಸಂಭವವು ಯಾವಾಗಲೂ ನಮ್ಮೆದುರಿಗಿರುತ್ತ, ನಮ್ಮ ಸ್ವಂತ ದೇಶದಲ್ಲಿಯೇ ನಾವು ಅನುಮಾನಿತ ವ್ಯಕ್ತಿಗಳಾಗಿ ನೆರಳಿನಂತೆ ಹಿಂಬಾಲಿಸುವವರ ಕಾವಲಿನಲ್ಲಿ ಓಡಾಡುತ್ತೇವೆ. ನಮ್ಮ ಆಯ್ಕೆಯಿದು ಸರಕಾರದ ಶಕ್ತಿಗೆ ತುಚ್ಛವಾದ ಅಧೀನತೆ, ಆತ್ಮಿಕ ಅಧಃಪತನ, ನಮ್ಮಲ್ಲಿರುವ ಸತ್ಯದ ನಿವಾರಣೆ, ನಾವು ತುಚ್ಛವೆಂದು ಬಗೆದಿರುವ ಉದ್ದೇಶಗಳಿಗಾಗಿ ನಮ್ಮ ನೈತಿಕ ವ್ಯಭಿಚಾರ—ಅಥವಾ ಸರ್ವ ಪರಿಣಾಮಗಳಿಗೂ ಸಿದ್ಧವಾದ ವಿರೋಧ ಸೆರೆಮನೆಗೆ ಹೋಗುವುದಕ್ಕಾಗಲಿ, ಕಷ್ಟವನ್ನು ಆಹ್ವಾನಿಸುವುದಕ್ಕಾಗಲಿ ಯಾರಿಗೂ ಇಷ್ಟವಿಲ್ಲ ಆದರೆ ಅನೇಕ ವೇಳೆ ಇತರ ಪಕ್ಷಾಂತರಕ್ಕಿಂತ ಸೆರೆಮನೆಯೇ ಲೇಸು—ಬರ್ನಾರ್ಡ್‌ಷಾರವರು ಬರೆದಿರುವಂತೆ, " ನೀನು ತುಚ್ಛವೆಂದು ಬಗೆದಿರುವ ಉದ್ದೇಶಗಳಿಗಾಗಿ ಸ್ವಾರ್ಥಪರ ಪುರುಷರು ನಿನ್ನನ್ನು ದುರುಪಯೋಗಪಡಿಸಿಕೊಳ್ಳುವುದೇ ಜೀವನದ ನೈಜ ರುದ್ರ ಪ್ರಕರಣ ಉಳಿದುವೆಲ್ಲ ಎಷ್ಟೇ ಕೆಟ್ಟದ್ದಾದರೂ ಕೇವಲ ದೌರ್ಭಾಗ್ಯ ಮತ್ತು ಮರಣ ಇದೊಂದೇ ರೋತೆ, ದಾಸ್ಯ, ನೆಲದ ಮೇಲಿನ ನರಕ."

೪೯

# ದೀರ್ಘಾವಧಿಯೊಂದರ ಮುಕ್ತಾಯ

ನನ್ನ ಬಿಡುಗಡೆಯ ಕಾಲವು ಬಳಿಸಾರುತ್ತಿತ್ತು 'ಒಳ್ಳಡತೆ'ಗಾಗಿ ನಾನು ಎಂದಿನ ಉತ್ತಾರಗಳನ್ನು ಪಡೆದಿದ್ದೆ, ಮತ್ತು ಇದು ನನ್ನ ಎರಡು ವರ್ಷ ಅವಧಿಯಲ್ಲಿ ಮೂರೂವರೆ ತಿಂಗಳುಗಳನ್ನು ಕಡಿಮೆ ಮಾಡಿತ್ತು ನನ್ನ ಮನಶ್ಶಾಂತಿಯು, ಎಂದರೆ ಸೆರೆಮನೆಯು ಹುಟ್ಟಿಸುವ ಮನಸ್ಸಿನ ಸಾಮಾನ್ಯ ಜಡಾವಸ್ಥೆಯು, ಬಂಧವಿಮೋಚನೆಯ ಪ್ರತ್ಯಾಶೆಯು ಸೃಷ್ಟಿಸುವ ಉದ್ದೀಪನದಿಂದ ಕದಡಲ್ಪಡುತ್ತಿತ್ತು ಹೊರಗೆ ನಾನೇನು ಮಾಡಬೇಕು ? ಜಟಿಲವಾದ ಪ್ರಶ್ನೆಯೊಂದದು, ಅದಕ್ಕುತ್ತರ ಕೊಡಲು ನನ್ನಲ್ಲುಂಟಾದ ಮುನ್ನಾಟವು ಬಿಡುಗಡೆಯ ಆನಂದವನ್ನು ಅಪಹರಿಸಿತು ಆದರೆ ಅದು ಕೂಡ ಕ್ಷಣಿಕವಾದ ಭಾವನೆ ಮತ್ತು ನಿಡುಗಾಲ ನಿಗ್ರಹಿಸಲ್ಪಟ್ಟಿದ್ದ ಚೈತನ್ಯವು ಕುದಿಯುತ್ತ ಉಬ್ಬುತ್ತಿದ್ದು ನಾನು ಹೊರಬರುವ ತವಕದಿಂದಿದ್ದೆ

೧೯೩೩ ರ ಜುಲೈ ಕೊನೆಯು ತುಂಬುದುಃಖದ ಮತ್ತು ಅತ್ಯಂತ ತಲ್ಲಣಗೊಳಿಸುವ ಸುದ್ದಿಯನ್ನು ತಂದಿತು—ಜೆ ಎಂ ಸೇನ್‌—ಗುಪ್ತರ ಹಠಾತ್ತಾದ ಮರಣ. ಕಾಂಗ್ರೆಸ್ ಕಾರ್ಯನಿರ್ವಾಹಕ ಸಮಿತಿಯಲ್ಲಿ ಬಹಳ ವರ್ಷಗಳವರೆಗೆ ನಾವು ನಿಕಟ ಸಹೋದ್ಯೋಗಿಗಳಾಗಿದ್ದೆವಲ್ಲದೆ, ಅವರು ಕೇಂಬ್ರಿಡ್ಜಿನಲ್ಲಿ ನನ್ನ ಮೊದಲ ದಿನಗಳ ನೆನಪಾಗಿದ್ದರು. ಮೊದಲು ನಾವು ಕೇಂಬ್ರಿಡ್ಜಿನಲ್ಲಿ ಸಂಧಿಸಿದೆವು—ನಾನು ಹೊಸಬನಾಗಿದ್ದೆ, ಅವರು ಆಗತಾನೆ ಪ್ರಶಸ್ತಿಯನ್ನು ಪಡೆದಿದ್ದರು

ಸೇನ್‌—ಗುಪ್ತರು ಕಾವಲು ಸೆರೆಯಲ್ಲಿ ಮರಣಹೊಂದಿದರು. ೧೯೩೨ ರ ಆದಿಭಾಗದಲ್ಲಿ ಅವರು ಯೂರೋಪಿನಿಂದ ಹಿಂತಿರುಗಿದಾಗ ಬೊಂಬಾಯಿನಲ್ಲಿ ಇನ್ನೂ ಹಡಗಿನ ಮೇಲೆಯೇ ಇದ್ದಾಗ ಅವರನ್ನು ರಾಜಬಂದಿಗಳನ್ನಾಗಿ ಮಾಡಿದ್ದರು ಆಗಿನಿಂದ ಅವರು ಸೆರೆಯಾಳು ಅಥವಾ ಕಾವಲು ಸೆರೆಯಾಳಾಗಿಯೇ ಇದ್ದರು, ಮತ್ತು ಅವರ ಆರೋಗ್ಯವು ಕೆಟ್ಟಿತ್ತು. ಸರಕಾರವು ಅವರಿಗೆ ಬಗೆಬಗೆಯ ಸೌಕರ್ಯಗಳನ್ನು ಕೊಟ್ಟಿತ್ತು, ಆದರೆ ಅದು ವಾಸ್ತವವಾಗಿಯೂ ವ್ಯಾಧಿಯ ಗತಿಯನ್ನು ತಡೆಗಟ್ಟಲಾರದೆ ಹೋಯಿತು ಕಲ್ಕತ್ತೆಯಲ್ಲಿ ನಡೆದ ಅದರ ಶವಸಂಸ್ಕಾರವು ಅಪೂರ್ವ ಜನಜಂಗುಳಿಯ ಶೋಕಪ್ರದರ್ಶನ ಮತ್ತು ಕಾಣಿಕೆಗಳ ಸಂದರ್ಭವಾಗಿತ್ತು, ದೀರ್ಘಕಾಲ ಬಂಧಿತವಾಗಿದ್ದ ವೇದಾನುಭವಿಯಾದ ಬಂಗಾಳದ ಆತ್ಮಕ್ಕೆ ಕ್ಷಣಕಾಲದಷ್ಟಾದರೂ ಆೂಭೊಂದು ಲಭಿಸಿದಂತೆ ತೋರಿತು,

ಅಂತು ಸೇನ್–ಗುಪ್ತರು ಹೋಗಿಬಿಟ್ಟಿದ್ದರು. ಅನೇಕ ವರ್ಷಗಳ ದಿಗ್ಬಂಧನೆ ಮತ್ತು ಕಾರಾಗೃಹವಾಸಗಳಿಂದ ಆರೋಗ್ಯವಳಿದಿದ್ದ ಸುಭಾಷ್ ಬೋಸರಿಗೆ, ಚಿಕಿತ್ಸೆಗಾಗಿ ಯೂರೋಪಿಗೆ ಹೋಗಬಹುದೆಂದು ಕಟ್ಟಕಡೆಗೆ ಸರಕಾರವು ಅನುಮತಿಕೊಟ್ಟಿತ್ತು. ಹಳೆಯ ಹುಲಿ ವಿಟ್ಠಲಭಾಯಿ ಪಟೇಲರೂ ಯೂರೋಪಿನಲ್ಲಿ ರೋಗಗ್ರಸ್ತರಾಗಿ ಬಿದ್ದಿದ್ದರು. ಸೆರೆಯ ಬಾಳಿನ ಮತ್ತು ಹೊರಗಿನ ಬಿಡುವಿಲ್ಲದ ಚಟುವಟಿಕೆಯ ವೈಮುಲುಕನ್ನು ಸೈರಿಸಲಾಗದೆ ಇತರ ಅನೇಕರು ಎಷ್ಟು ಮಂದಿ ಆರೋಗ್ಯವನ್ನು ಕಳೆದುಕೊಂಡರು ಇಲ್ಲವೇ ಅಳಿದರು ! ಹೊರಕ್ಕೆ ಮಾರ್ಪಾಟು ಕಾಣದಿದ್ದರೂ ಎಷ್ಟುಮಂದಿ ತಾವು ಸ್ವಭಾವ ವ್ಯತಿರಿಕ್ತವಾದ ಜೀವನವನ್ನು ನಡೆಯಬೇಕಾಗಿಯೇ ಬಂದ ಕಾರಣದಿಂದ ಆಳವಾದ ಮಾನಸಿಕ ಅವ್ಯವಸ್ಥೆಗಳಿಂದ ನರಳುತ್ತಿದ್ದರು, ಮತ್ತು ಮನೋವೈಪರೀತ್ಯಗಳನ್ನು ಬೆಳೆಸಿಕೊಂಡಿದ್ದರು !

ಸೇನ್–ಗುಪ್ತರ ಮರಣವು, ಇಡೀ ನಾಡಿನಲ್ಲಿ ಸಾಗುತ್ತಿದ್ದ ಭಯಂಕರವಾದ ಮೂಕ ಸಂಕಟದ ಅನುಭವವನ್ನು ನನಗೆ ಸ್ಪಷ್ಟವಾಗಿ ತೋರಿಸಿತು. ನಾನು ಬೇಸತ್ತು ಕುಗ್ಗಿಹೋದೆ. ಇದಕ್ಕೆಲ್ಲ ಗುರಿಯೇನು ? ಗುರಿಯೇನು ?

ನನ್ನ ಸ್ವಂತ ಆರೋಗ್ಯದ ವಿಚಾರದಲ್ಲಿ ನಾನು ಅದೃಷ್ಟಶಾಲಿಯಾಗಿದ್ದೆ. ಕಾಂಗ್ರೆಸ್ ಕಾರ್ಯಕಲಾಪಗಳ ಮುಲುಕು ಮತ್ತು ಅಕ್ರಮ ಜೀವನಗಳಿದ್ದರೂ ಒಟ್ಟಿನಲ್ಲಿ ನಾನು ಆರೋಗ್ಯದಿಂದಲೇ ಇದ್ದೆ. ಅಂಶತಃ, ನಾನು ಒಳ್ಳೆಯ ಮೈಕಟ್ಟನ್ನು ಪಿತ್ರಾರ್ಜಿತವಾಗಿ ಪಡೆದುಕೊಂಡು ಬಂದಿದ್ದುದು ಮತ್ತು ಅಂಶತಃ ನಾನು ಮೈಯನ್ನು ಜಾಗರೂಕತೆಯಿಂದ ನೋಡಿಕೊಳ್ಳುತ್ತ ಬಂದುದು ಇದಕ್ಕೆ ಕಾರಣವೆಂದು ಭಾವಿಸುತ್ತೇನೆ. ರೋಗ ಮತ್ತು ದುರ್ಬಲವಾದ ಆರೋಗ್ಯಗಳೂ ಹೆಚ್ಚು ಬೊಜ್ಜುಮೈಯೂ ತೀರ ಸಲ್ಲದ ಪರಿಸ್ಥಿತಿಯೆಂದು ತೋರಿಬಂದಿತು, ಮತ್ತು ಅಂಗಸಾಧನೆ, ಕಟ್ಟಾಸುರದ ಹೊಸಗಾಳಿ ಮತ್ತು ಸಾಮಾನ್ಯ ಆಹಾರ, ಇವುಗಳಿಂದ ನಾನು ಅವುಗಳನ್ನು ಹೇಗೋ ದೂರವಿಟ್ಟೆ. ಭಾರತೀಯ ಮಧ್ಯಮ ತರಗತಿಯ ವ್ಯಾಧಿಗಳ ವಿಸ್ತಾರ ಪರಿಮಾಣವು ಅಕ್ರಮವಾದ ಆಹಾರದಿಂದಲೇ ಉಂಟಾಗುವುದೆಂಬುದು ನನ್ನ ಸ್ವಂತ ಅನುಭವವಾಗಿದೆ, ಆಹಾರವು ಸಮೃದ್ಧವಾದುದು ಹಾಗೂ ಅತೀವವಾದುದು. ಅಂಥ ದುಂದುಗಾರಿಕೆಯ ಅಭ್ಯಾಸ ಸಾಧ್ಯವಿದ್ದವರಿಗೆ ಇದು ಅನ್ವಯಿಸುವುದು. ಸಿಹಿತಿಂಡಿ ಮೊದಲಾದ ಮಧುರವಾದ ಆಹಾರಗಳನ್ನು ಮಗುವಿಗೆ ಹೆಚ್ಚು ಹೆಚ್ಚಾಗಿ ತಿನ್ನಿಸಿ, ಅಕ್ಕರೆಯ ತಾಯಿಯು ಜೀವನ ಪರಿಯಂತದ ಅಜೀರ್ಣದ ಭದ್ರವಾದ ಬುನಾದಿಯನ್ನು ಹಾಕುವಳು. ಮಗುವನ್ನು ಬಹಳ ಬಟ್ಟೆಗಳಿಂದ ಸುತ್ತಿ ಮುಚ್ಚಿಟ್ಟುಬಿಡುವರು. ಭಾರತದಲ್ಲಿರುವ ಇಂಗ್ಲಿಷರು ಕೂಡ ತಮ್ಮ ಆಹಾರವು ಕಡಿಮೆ ಸಮೃದ್ಧವಾಗಿದ್ದರೂ ಬಹಳ ಹೆಚ್ಚಾಗಿ ತಿನ್ನುವಂತೆ ತೋರುತ್ತದೆ. ಪ್ರಾಯಶಃ ಅವರು, ಬಿಸಿಯಾದ ಮತ್ತು ಬಲವಾದ

ಆಹಾರವನ್ನು ಅಸಾಧಾರಣ ಪರಿಮಾಣಗಳಲ್ಲಿ ಗಿಡಿದುಕೊಳ್ಳುತ್ತಿದ್ದ ಹಿಂದಿನ ತಲೆಮಾರಿಗಿಂತ ಸ್ವಲ್ಪ ಮೇಲಾಗಿರುವರು

ಆಹಾರದ ಮುಗ್ಧಭ್ರಾಂತಿಗಳ ಚಿಂತೆಯೇ ನನಗಿಲ್ಲ, ಮತ್ತು ಅತಿಯಾದ ಆಹಾರ ಸ್ವೀಕಾರ ಮತ್ತು ಸಮೃದ್ಧ ಆಹಾರಗಳನ್ನು ಬಿಟ್ಟಿದ್ದೇನೆ ಸಾಮಾನ್ಯವಾಗಿ ಎಲ್ಲ ಕಾಶ್ಮೀರಿ ಬ್ರಾಹ್ಮಣರಂತೆ ನಮ್ಮದು ಮಾಂಸಾಹಾರಿ ಕುಟುಂಬ. ನನಗೆ ಅದನ್ನು ಕುರಿತ ಹೆಚ್ಚು ಚಾಪಲ್ಯವಿರದಿದ್ದರೂ ಎಳಮೆಯಿಂದಾಚೆಗೆ, ನಾನು ಸದಾ ಮಾಂಸವನ್ನು ತಿನ್ನುತ್ತಿದ್ದೆ ೧೯೨೦ ರಲ್ಲಿ ಅಸಹಕಾರದ ಆಗಮನದಿಂದ ನಾನು ಮಾಂಸವನ್ನು ತ್ಯಜಿಸಿ ಶಾಕಾಹಾರಿಯಾದೆ ಆರು ವರ್ಷಗಳ ಮೇಲೆ, ನಾನು ಯೂರೋಪಿಗೆ ತೆರಳುವವರೆಗೆ ಶಾಕಾಹಾರಿಯಾಗಿಯೇ ಇದ್ದೆ, ಆಮೇಲೆ ನಾನು ಮಾಂಸವನ್ನು ತಿನ್ನಲು ಪುನರಾರಂಭಿಸಿದೆ ಭಾರತಕ್ಕೆ ಹಿಂತಿರುಗಿದಮೇಲೆ ಪುನಃ ಶಾಕಾಹಾರಿಯಾದೆ, ಮತ್ತು ಆಗಿನಿಂದ ನಾನು ಹೆಚ್ಚು ಕಡಿಮೆ ಶಾಕಾಹಾರಿಯಾಗಿಯೇ ಇದ್ದೇನೆ ಮಾಂಸಾಹಾರವು ನನಗೆ ಚೆನ್ನಾಗಿ ಒಗ್ಗುವಂತೆ ತೋರುತ್ತದ, ಆದರೆ ಅದನ್ನು ಕುರಿತು ನನ್ನಲ್ಲಿ ಅಸಹ್ಯಭಾವನೆಯು ಬೆಳೆದಿದೆ, ಮತ್ತು ಅದು ನನ್ನಲ್ಲಿ ಒರಟುತನದ ಭಾವನೆಯನ್ನುಂಟುಮಾಡುತ್ತದೆ

ನನ್ನ ವ್ಯಾಧಿಗಳ ಅವಧಿಗಳು, ಮುಖ್ಯವಾಗಿ ೧೯೩೨ ರಲ್ಲಿ ಸೆರೆಮನೆಯಲ್ಲಿ, ದಿನವಹಿ ಅನೇಕ ತಿಂಗಳುಗಳವರೆಗೆ ಜ್ವರಬರುತ್ತಿದ್ದಾಗ, ನನ್ನಲ್ಲಿ ಜುಗುಪ್ಸೆಯನ್ನುಂಟುಮಾಡಿದುವು, ಏಕೆಂದರೆ ಅವು ನನ್ನ ಒಳ್ಳೆಯ ಆರೋಗ್ಯದ ಬಿಂಕವನ್ನು ನೋಯಿಸಿದುವು. ಮೊಟ್ಟಮೊದಲನೆಯ ಬಾರಿ, ನನಗೆ ವಾಡಿಕೆಯಾಗಿದ್ದಂತೆ, ನಾನು ತುಂಬು ಬಾಳು ಮತ್ತು ಚೈತನ್ಯಗಳ ದೃಷ್ಟಿಯಿಂದ ಆಲೋಚಿಸಲಿಲ್ಲ ಆದರೆ ಕ್ರಮಕ್ರಮವಾದ ಕ್ಷಯದ ಅಪಚ್ಛಾಯೆಯೂ, ಸವೆತವೂ ನನ್ನಮುಂದೆ ನಿಂತು ನನ್ನನ್ನು ಭಯಗೊಳಿಸಿದುವು ವಿಶೇಷವಾಗಿ ನಾನು ಸಾವಿಗೆ ಭಯಪಡಲಿಲ್ಲವೆಂದು ನನ್ನ ಭಾವನೆ ಆದರೆ ದೇಹಮನಸ್ಸುಗಳ ನಿಧಾನವಾದ ಅಪಚಯವೊಂದು ತೀರ ಭಿನ್ನವಾದ ಇನ್ನೊಂದು ಪ್ರಮೇಯ ಅಂತು ನನ್ನ ಭಯಗಳು ಉತ್ಪ್ರೇಕ್ಷಿತವಾದವುಗಳೆಂದು ರುಜುವಾದುವು, ಅಲ್ಲದೆ ಅಸ್ವಾಸ್ಥ್ಯವನ್ನು ತೊಲಗಿಸಿ ನನ್ನ ಮೈಯನ್ನು ಅಂಕೆಯಲ್ಲಿಟ್ಟುಕೊಂಡು ಹೇಗೋ ಗೆದ್ದುಕೊಂಡೆ ಚಳಿಗಾಲದಲ್ಲಿ ಬಹಳ ಹೊತ್ತಿನ ಬಿಸಿಲ್ಮೀಹವು ಆರೋಗ್ಯದ ಭಾವನೆಯನ್ನು ಪುನಃ ತಳೆಯುವುದರಲ್ಲಿ ನನಗೆ ನೆರವಾಯಿತು ಸೆರೆಯಲ್ಲಿ ನನ್ನ ಗೆಳೆಯರು ತಮ್ಮ ಅಂಗಿ ಮತ್ತು ಶಾಲುಗಳಲ್ಲಿ ಸೇರಿಕೊಂಡು ನಡುಗುತ್ತಿದ್ದಾಗ, ನಾನು ಬತ್ತಲೆ ಮೈಯಲ್ಲೇ, ನೇಸರಪ್ಪಿನ ನಲಿವಿನ ಕಾವಿನಲ್ಲಿ ಕುಳಿತಿರುತ್ತಿದ್ದೆ. ಇದು ಚಳಿಗಾಲದಲ್ಲಿ ಕೇವಲ ಉತ್ತರಭಾರತದಲ್ಲಿ ಮಾತ್ರ ಸಾಧ್ಯವಾಗಿತ್ತು, ಏಕೆಂದರೆ ಇತರ ಸ್ಥಳಗಳಲ್ಲಿ ಸಾಧಾರಣವಾಗಿ ಬಿಸಿಲು ಅತಿ ಬಿರುಸಾಗಿರುವುದು.

ನನ್ನ ಅಂಗಸಾಧನೆಗಳಲ್ಲಿ ಒಂದಂತೂ ನನಗೆ ವಿಶೇಷವಾಗಿ ಪ್ರಿಯವಾಗಿತ್ತು— ಶೀರ್ಷಾಸನ—ಕೈಬೆರಳುಗಳನ್ನೆಲ್ಲ ಹೆಣೆದು, ಮೊಣಕೈಯನ್ನು ನೆಲಕ್ಕೆ ಊರಿಬಿಟ್ಟು,

ವೈಯನ್ನು ನೀಟಾಗಿಮಾಡಿ ಅಂಗೈಯನ್ನು ಹಿಂದಲೆಗಾನಿಸಿ ತಲಕೆಳಗಾಗಿ ನಿಲ್ಲುವುದು ದೈಹಿಕವಾಗಿ ಈ ವ್ಯಾಯಾಮವು ಬಹಳ ಒಳ್ಳೆಯದೆಂದು ನನ್ನ ಭಾವನೆ. ಅದು ನನ್ನಲ್ಲಿ ತರುವ ಮಾನಸಿಕ ವ್ಯತ್ಯಾಸಕ್ಕಾಗಿಯೂ ಅದನ್ನು ನಾನು ಹೆಚ್ಚಾಗಿ ಪ್ರೀತಿಸಿದೆ ಕಿಂಚಿತ್ ಪ್ರಹಸನಾತ್ಮಕ ಭಂಗಿಯದರದು ನನ್ನ ಸುಮನೋಭಾವವನ್ನು ಹೆಚ್ಚಿಸಿ, ಬಾಳಿನ ವಿಲಕ್ಷಣ ಘಟನೆಗಳನ್ನು ಕುರಿತು ನಾನು ಇನ್ನೂ ಸ್ವಲ್ಪ ಹೆಚ್ಚು ಸಹನೆಯಿಂದಿರುವಂತೆ ಮಾಡಿತು

ನನ್ನ ಎಂದಿನ ಒಳ್ಳೆಯ ಆರೋಗ್ಯವೂ ದೇಹದ ನೆಮ್ಮದಿಯ ಭಾವವೂ ಸೆರೆಮನೆಯಲ್ಲಿ ಅನಿವಾರ್ಯಗಳಾಗಿದ್ದ ಕುಗ್ಗಿದ ಮನಃಪರಿಸ್ಥಿತಿಗಳ ಅವಧಿಗಳಿಂದ ಪಾರಾಗುವುದಕ್ಕಾಗಿ ನನಗೆ ಬಹಳ ನೆರವಾಗಿವೆ ಸೆರೆಮನೆಯಲ್ಲೂ ಹೊರಗೂ ವ್ಯತ್ಯಸ್ತವಾಗುತ್ತಿದ್ದ ಪರಿಸ್ಥಿತಿಗಳಿಗೆ ನಾನು ಒಗ್ಗಿಕೊಳ್ಳುವುದಕ್ಕೂ ಅವು ಸಹಾಯ ಮಾಡಿವೆ ನನಗೆ ಅನೇಕ ಧಕ್ಕೆಗಳು ಬಡಿದಿವೆ ಬಡಿದಾಗ ಅವು ನನ್ನನ್ನು ಚೆಂಡಿನಂತೆ ಹಾರಿಸಿಬಿಟ್ಟಿವೆ, ಆದರೆ ನನಗೇ ಆಶ್ಚರ್ಯವಾಗುವಂತೆ, ನಾನು ನಿರೀಕ್ಷಿಸಿದ್ದುದಕ್ಕಿಂತ ಬೇಗ ಎಚ್ಚೆತ್ತುಕೊಂಡಿದ್ದೇನೆ. ತೀವ್ರವಾದ ತಲೆನೋವು ಏನೆಂಬುದೇ ನನಗೆ ತಿಳಿಯದಿರುವುದೂ ಎಂದಿಗೂ ನಾನು ನಿದ್ರಾಲೋಪದಿಂದ ನರಳದಿರುವುದೂ ನನ್ನ ಸಾರಭೂತವಾದ ಅಮಲುಗೊಳ್ಳದಿರುವಿಕೆ ಮತ್ತು ಚಿತ್ತಸ್ವಾಸ್ಥ್ಯಗಳಿಗೆ ಸಾಕ್ಷಿ ನಾಗರಿಕತೆಯ ಈ ಸಾಮಾನ್ಯ ವ್ಯಾಧಿಗಳಿಂದ ಮತ್ತು ಓದುಬರಹಗಳಿಗೆ, ಕೆಲವುವೇಳೆ ಸೆರೆಮನೆಗಳಲ್ಲಿ ಬಹಳ ಮಂಕಾದ ಬೆಳಕಿನಲ್ಲಿ ಸಹ ನನ್ನ ಕಣ್ಣುಗಳಿಗೆ ಹೆಚ್ಚಾಗಿ ಕೆಲಸ ಕೊಟ್ಟಿದ್ದರೂ ದೃಷ್ಟಿದೌರ್ಬಲ್ಯದಿಂದ ತಪ್ಪಿಸಿಕೊಂಡಿದ್ದೇನೆ ಹೋದವರ್ಷ ನನ್ನ ಉತ್ತಮ ದೃಷ್ಟಿಬಲವನ್ನು ಕಂಡು ನೇತ್ರವೈದ್ಯ ವಿಶಾರದರೊಬ್ಬರು ತಮ್ಮ ಆಶ್ಚರ್ಯವನ್ನು ವ್ಯಕ್ತಗೊಳಿಸಿದರು ನಾನು ಇನ್ನು ಒಂದು ಇಲ್ಲವೇ ಎರಡು ವರ್ಷಗಳಲ್ಲಿ ಕನ್ನಡಕವನ್ನು ಹಾಕಿಕೊಳ್ಳಬೇಕಾಗುವುದೆಂದು ಅವರು ಎಂಟುವರ್ಷಗಳ ಹಿಂದೆಯೇ ಪ್ರವಾದಿಸಿದ್ದರು ಅವರ ಎಣಿಕೆಯು ಬಹಳ ಮಟ್ಟಿಗೆ ತಪ್ಪಾಗಿದ್ದಿತು ಅಲ್ಲದೆ ನಾನು ಇನ್ನೂ ಅವುಗಳ ಸಹಾಯವಿಲ್ಲದೆ ಯಶಸ್ವಿಯಾಗಿ ಕೆಲಸವನ್ನು ನಡೆಸುತ್ತಿದ್ದೇನೆ ಈ ಸಂಗತಿಗಳು ನನ್ನ ಅಮಲುಗೊಳ್ಳುವ ಚಿತ್ತಸ್ವಾಸ್ಥ್ಯದ ಹೆಸರುವಾಸಿಯನ್ನು ಸ್ಥಾಪಿಸಿದರೂ, ತಪ್ಪಿಸಿಕೊಳ್ಳಲಾಗದೆ ಮತ್ತು ವ್ಯತ್ಯಾಸವಾಗದೆ ಸ್ವಸ್ಥಚಿತ್ತರಾಗಿಯೂ ಅಮಲುಗೊಳ್ಳದೆಯೂ ಇರುವ ಜನರನ್ನು ಕಂಡರೆ ನನಗೆ ಭಯಮಿಶ್ರಿತ ಅಸಹ್ಯಭಾವನೆಯಿದೆಯೆಂದು ಹೇಳಬಯಸುತ್ತೇನೆ

ನಾನು ಸೆರೆಮನೆಯಿಂದ ನನ್ನ ಬಿಡುಗಡೆಗಾಗಿ ಕಾದಿದ್ದಾಗ, ಹೊರಗಡೆ ವ್ಯಕ್ತಿಗಳಿಗೆ ಹೊಸರೂಪದ ಶಾಸನಭಂಗವು ಮೊದಲಾಗುತ್ತಿತ್ತು ಗಾಂಧಿಜಿಯವರು ಚೂಣಿಯಲ್ಲಿ ನಿಂತು ನಡೆಯಲು ನಿರ್ಧರಿಸಿದರು ಮತ್ತು, ಅಧಿಕಾರಿಗಳಿಗೆ ಸಂಪೂರ್ಣ ತಿಳಿವಳಿಕೆಯನ್ನು ಕೊಟ್ಟಮೇಲೆ, ಗುಜರಾತ್ ಬೇಸಾಯಗಾರ ಜಂಗುಳಿಗೆ ಶಾಸನ

ನಿರೋಧವನ್ನು ಬೋಧಿಸುವ ಉದ್ದೇಶದಿಂದ ಆಗಸ್ಟ್ ೧ ನೆಯ ತಾರೀಖಿನ ದಿನ ಉದ್ಯಮಿಸಿದರು ಕೂಡಲೆ ಅವರು ದಸ್ತಗಿರಿ ಮಾಡಲ್ಪಟ್ಟು, ಒಂದು ವರ್ಷ ಸಜ ವಿಧಿಸಲ್ಪಟ್ಟು, ಯರವ್‌ಡಾದಲ್ಲಿನ ಅವರ ಓವರಿಗೆ ಸಾಗಿಸಲ್ಪಟ್ಟರು. ಅವರು ಹಿಂತಿರುಗಿದುದಕ್ಕಾಗಿ ನಾನು ಸಂತೋಷಪಟ್ಟೆ ಆದರೆ ಬೇಗ ಹೊಸದೊಂದು ತೊಡಕು ಹುಟ್ಟಿಕೊಂಡಿತು ಸೆರೆಮನೆಯಿಂದಲೇ ಹರಿಜನ ಕಾರ್ಯವನ್ನು ನಡೆಸಿಕೊಂಡು ಹೋಗಲು ತಮಗೆ ಹಿಂದೆ ಇದ್ದಂತೆಯೇ ಸೌಕರ್ಯಗಳ ಹಕ್ಕು ಕೇಳಿದರು, ಸರಕಾರವು ಕೊಡಲು ನಿರಾಕರಿಸಿತು ಈ ಅಂಗವನ್ನು ಕುರಿತು ಗಾಂಧಿಜಿಯವರು ಉಪವಾಸವ್ರತವನ್ನಾರಂಭಿಸಿದರೆಂದು ಇದ್ದಕ್ಕಿದ್ದಂತೆಯೇ ನಮಗೆ ತಿಳಿಯಿತು ಅಂಥ ಮಹಾಸಂಕಲ್ಪಕ್ಕೆ ಅದು ತೀರ ಕ್ಷುಲ್ಲಕ ವಿಷಯುವೆಂದು ತೋರಿತು ಸರಕಾರದೊಂದಿಗೆ ಅವರ ವಾದವು ಸಂಪೂರ್ಣ ನ್ಯಾಯುವಾಗಿರಬಹುದಾದರೂ ಅವರ ನಿರ್ಧಾರವನ್ನು ಬಗೆಗೊಳ್ಳಲು ನನಗೆ ಬಹಳ ಕಷ್ಟವಾಯಿತು ನಾವೇನೂ ಮಾಡಲಾರದಿದ್ದು ದಿಗ್ಭ್ರಮೆಯಿಂದ ಕಣ್ಣುಕಣ್ಣು ಬಿಡುತ್ತಿದ್ದೆವು

ಉಪವಾಸಕಾಲದ ಒಂದು ವಾರವಾದಮೇಲೆ ಅವರ ಪರಿಸ್ಥಿತಿಯು ವೇಗವಾಗಿ ಕೆಟ್ಟಿತು ಆಸ್ಪತ್ರೆಯೊಂದಕ್ಕೆ ಅವರು ಸಾಗಿಸಲ್ಪಟ್ಟಿದ್ದರು, ಆದರೆ ಇನ್ನೂ ಅವರು ಸೆರೆಯಾಳಾಗಿಯೇ ಇದ್ದರು ಮತ್ತು ಸರಕಾರವು ಹರಿಜನ ಕಾರ್ಯಕ್ಕಾಗಿ ಸೌಕರ್ಯಗಳನ್ನು ಕೊಡುವ ವಿಷಯದಲ್ಲಿ ಸಗ್ಗುವವರಲ್ಲ ಬದುಕುವ ಇಷ್ಟವನ್ನು (ಹಿಂದಿನ ಉಪವಾಸ ಕಾಲಗಳಲ್ಲಿ ಹೊಂದಿದ್ದರು) ಅವರು ಕಳೆದುಕೊಂಡು ಬಿಟ್ಟು ಅಳಿದುಹೋಗಲು ಅನುವಾದರು ಕೊನೆಯು ಹತ್ತಿರವಿದ್ದಂತೆ ತೋರಿತು. ತಮ್ಮ ಬಳಿಯಿದ್ದ ಕೆಲವು ಸ್ವಕೀಯ ಸರಕುಗಳನ್ನು ಬೀಳ್ಕೊಟ್ಟು ಕೆಲವನ್ನು ದಾದಿಯರಿಗೆ ಹಂಚಿಯೂ ಬಿಟ್ಟರು ಆದರೆ ಸರಕಾರವು ತಮ್ಮ ಕೈಯಲ್ಲಿದ್ದಾಗ ಗಾಂಧಿಜಿಯವರನ್ನು ಸಾಯಗೊಡಲು ಇಷ್ಟಪಡಲಿಲ್ಲ ಅಂದಿನ ಸಾಯುಂಕಾಲವೇ ಇದ್ದಕ್ಕಿದ್ದಂತೆ ಅವರನ್ನು ಬಿಡುಗಡೆಮಾಡಿದರು ಅದು ಅವರನ್ನು ಪಾರುಮಾಡಲು ಸಕಾಲವಾಗಿತ್ತು ಇನ್ನೊಂದು ದಿನ ತಡವಾಗಿದ್ದರೆ ಪ್ರಾಯಶಃ ಅದು ತೀರ ಕೈಮೀರಿ ಹೋಗುತ್ತಿತ್ತು. ಅವರನ್ನು ಕಾಪಾಡಿದ ಕೀರ್ತಿಯ ಬಹುಭಾಗವು ಬಹುಶಃ, ಗಾಂಧಿಜಿಯವರ ಸೂಚನೆಗೆ ವಿರೋಧವಾಗಿ ಭಾರತಕ್ಕೆ ಓಡಿ ಬಂದಿದ್ದ ಸಿ ಎಫ್ ಆಂಡ್ರೂಸ್‌ರವರಿಗೆ ಸಲ್ಲತಕ್ಕದ್ದು

ಏತನ್ಮಧ್ಯೇ ನಾನು ಆಗಸ್ಟ್ ೨೩ ರಲ್ಲಿ ಡೆಹ್ರಾಡುನ್ ಸೆರೆಯಿಂದ ವರ್ಗಾಯಿಸಲ್ಪಟ್ಟು, ಒಂದೂವರೆ ವರ್ಷಕ್ಕಿಂತ ಹೆಚ್ಚಾಗಿ ಇತರ ಸೆರೆಮನೆಗಳಲ್ಲಿ ವಾಸವಿದ್ದ ಬಳಿಕ ನೈನಿ ಸೆರೆಮನೆಗೆ ಹಿಂತಿರುಗಿದೆ. ಆಗತಾನೆ ನನ್ನ ತಾಯಿಯ ಹಠಾತ್ತಾದ ರೋಗದ ಮತ್ತು ಆಕೆಯನ್ನು ಆಸ್ಪತ್ರೆಗೆ ಸಾಗಿಸಿದ ಸುದ್ದಿ ಬಂದಿತು ೧೯೩೩ ರ ಆಗಸ್ಟ್ ೩೦ ರಲ್ಲಿ, ನನ್ನ ತಾಯಿಯ ಪರಿಸ್ಥಿತಿಯು ಕಳವಳಾಸ್ಪದವೆಂದು ಪರಿಗಣಿಸಲ್ಪಟ್ಟಿದ

ರಿಂದ ನಾನು ನೈನಿಯಿಂದ ಬಿಡುಗಡೆಮಾಡಲ್ಪಟ್ಟೆ ಸಾಮಾನ್ಯವಾಗಿ ನಾನು ಹೆಚ್ಚೆಂದರೆ ಸೆಪ್ಟೆಂಬರ್ ೧೨ ರಲ್ಲಿ ನನ್ನ ಅವಧಿಯು ತೀರಿದಾಗ ಬಿಡುಗಡೆ ಮಾಡಲ್ಪಡುತ್ತಿದ್ದೆ ಹೀಗೆ ನನಗೆ ಪ್ರಾಂತ ಸರಕಾರದಿಂದ ಹದಿಮೂರು ದಿನಗಳ ಹೆಚ್ಚಿಗೆ ಉತ್ತಾರವು ಲಭಿಸಿತು.

೫೦

# ಗಾಂಧಿಜಿಯವರನ್ನೊಮ್ಮೆ ಕಂಡುದು

ನನ್ನ ಬಿಡುಗಡೆಯಾದೊಡನೆಯೇ ನಾನು ಹಾಸಿಗೆ ಹಿಡಿದಿದ್ದ ತಾಯ ಬಳಿಗೆಂದು ಲಕ್ನೋವಿಗೆ ಬೇಗ ಹೋಗಿ, ಕೆಲವು ದಿನಗಳವರೆಗೆ ಆಕೆಯ ಸಾನ್ನಿಧ್ಯದಲ್ಲಿದ್ದೆ ಸಾಕಷ್ಟು ನಿಡುಗಾಲ ಕಳೆದ ಮೇಲೆ ನಾನು ಸೆರೆಮನೆಯಿಂದ ಹೊರಬಿದ್ದಿದ್ದೆ. ಮತ್ತು ನನ್ನ ಸುತ್ತಣ ಆವರಣವನ್ನು ಕುರಿತು ನಿರ್ಲಿಪ್ತನಾಗಿಯೂ ಸಂಪರ್ಕದೂರನಾಗಿಯೂ ಇದ್ದೆ ಸ್ವಲ್ಪ ಧಕ್ಕೆ ಬಡಿದಂತಾಗಿ, ನಮ್ಮೆಲ್ಲರಿಗೂ ಸರ್ವಸಾಮಾನ್ಯವಾಗಿರುವಂತೆಯೇ, ನಾನು ಸೆರೆಮನೆಯಲ್ಲಿ ಜಡತೆಯಿಂದ ಬಿದ್ದಿದ್ದಾಗ ಪ್ರಪಂಚವು ಚಲಿಸುತ್ತ ವ್ಯತ್ಯಾಸವಾಗುತ್ತ ಹೋಗಿತ್ತು, ಎಂಬುದನ್ನು ನಾನು ಅರಿತೆ ಮಕ್ಕಳು, ಹುಡುಗರು ಮತ್ತು ಹುಡುಗಿಯರು ಬೆಳೆಯುತ್ತಿರುವುದು, ಮದುವೆ, ಜನನ ಮರಣಗಳು, ಪ್ರೇಮ ಮತ್ತು ದ್ವೇಷ, ಕೆಲಸ ಮತ್ತು ಆಟ, ರುದ್ರಭದ್ರ ಪ್ರಕರಣಗಳು ಜೀವನದಲ್ಲಿ ಹೊಸ ಸ್ವಾರಸ್ಯಾಭಿರುಚಿಗಳು, ಸಂಭಾಷಣೆಗೆ ಹೊಸ ವಿಷಯಗಳು, ನಾನು ನೋಡಿದ ಮತ್ತು ಕೇಳಿದ ಎಲ್ಲದರಲ್ಲೂ ಆಶ್ಚರ್ಯದ ಸ್ವಲ್ಪ ಅಂಶವು ಸದಾ ಇತ್ತು ನನ್ನನ್ನು ಹಿನ್ನೀರಿನಲ್ಲಿ ಬಿಟ್ಟು ಜೀವವಾಹಿನಿಯು ಮುಂದೆ ಹರಿದುಹೋಗಿದ್ದಂತೆ ತೋರಿತು. ಅದು ಸ್ವಲ್ಪವೂ ಹರ್ಷ ಸಂವೇದನೆಯಾಗಿರಲಿಲ್ಲ ಬೇಗ ನಾನು ಸುತ್ತಣ ಆವರಣಕ್ಕೆ ಒಗ್ಗಿಕೊಂಡುಬಿಡುತ್ತಿದ್ದೆ ಆದರೆ ಹಾಗೆ ಮಾಡಲು ಯಾವ ಪ್ರೇರಣೆಯೂ ಒದಗಲಿಲ್ಲ ಸೆರೆಮನೆಯ ಹೊರಗೆ ಅಲ್ಪ ಕಾಲಾವಧಿಯ ಪ್ರವಾಸವನ್ನು ಮಾತ್ರ ಹೊಂದಿದ್ದೆನೆಂದೂ, ಬೇಗನೆ ಪುನಃ ಒಳ ಹೋಗಬೇಕಾಗುವುದೆಂದೂ ಮನಗಂಡೆ ಆದ್ದರಿಂದ ಯಾವುದನ್ನು ನಾನು ಬೇಗ ಬಿಟ್ಟುಬಿಡುವೆನೋ ಅದಕ್ಕೆ ಒಗ್ಗಿಕೊಳ್ಳಲು ಕಷ್ಟಪಡುವುದೇಕೆ ?

ರಾಜಕೀಯವಾಗಿ, ಸ್ವಲ್ಪ ಹೆಚ್ಚು ಕಡಿಮೆ ಭಾರತವು ಶಾಂತವಾಗಿದ್ದಿತು ಸಾರ್ವಜನಿಕ ಕಾರ್ಯಕಲಾಪಗಳು ಬಹುತರವಾಗಿ ಸರಕಾರದ ಅಂಕೆಗೊಳಗಾಗಿ ನಿಗ್ರಹಿಸಲ್ಪಟ್ಟಿದ್ದುವು, ಮತ್ತು ಪ್ರಾಸಂಗಿಕವಾಗಿ ದಸ್ತಗಿರಿಗಳು ನಡೆಯುತ್ತಿದ್ದುವು. ಆದರೆ ಭಾರತದ ಮೌನವು ಅಂದು ಅರ್ಥಪೂರ್ಣವಾಗಿತ್ತು ಉಗ್ರನಿಗ್ರಹದ ಅವಧಿಯನ್ನು ಅನುಭವಿಸಿದ ಮೇಲುಂಟಾಗುವ ಆಲಸ್ಯಾನಂತರದ ಶಕುನದಿಂತಿದ್ದ ಮೌನವದು ಅನೇಕವೇಳೆ ಪೆಂಪು ಮಾತುಗಾರಿಕೆಯನ್ನು ಪಡೆದ ಆದರೆ ನಿಗ್ರಹಿಸುವ ಸರಕಾರದ ಅರಿವಿಗೆ ನಿಲುಕದ ಮೌನವದು ಭಾರತವು ಆದರ್ಶ ಪೊಲೀಸು ರಾಜ್ಯವಾಗಿದ್ದು ಸರಕಾಗದ ಎಲ್ಲ ಕಡೆಗಳಲ್ಲೂ ಪೊಲೀಸು ಮನಃಪ್ರವೃತ್ತಿಯು

ಹರಡಿಕೊಂಡಿತ್ತು. ಹೊರಹೊರಗೆ ಎಲ್ಲ ಬಗೆಯ ಅನನುವರ್ತನೆಯು ತುಳಿಯಲ್ಪಟ್ಟಿದ್ದು ಬೇಹುಗಾರರು ಮತ್ತು ಗುಟ್ಟು ವಾರುಷತ್ತೈಗಾರರ ಅಕ್ಷೋಹಿಣಿಯೇ ನಾಡಿನಲ್ಲಿ ಒಳಗೊಳಗೆ ಹರಡಿತ್ತು. ಜನರಲ್ಲಿ ನೀತಿಪತನದ ಆವರಣ ಮತ್ತು ಸರ್ವ ವ್ಯಾಪಿಯಾದ ಭೀತಿಗಳಿದ್ದುವು. ಯಾವ ರಾಜಕೀಯ ಕಾರ್ಯಕಲಾಪವೇ ಆಗಲಿ, ಅದರಲ್ಲೂ ವಿಶೇಷವಾಗಿ ಗ್ರಾಮಾಂತರಗಳಲ್ಲಿ, ಕೂಡಲೇ ನಿಗ್ರಹಿಸಲ್ಪಟ್ಟಿತು. ಕಾಂಗ್ರೆಸ್ಸಿನವರನ್ನು ಪೌರಸಭಾ ನೌಕರಿಗಳಿಂದಲೂ ಸ್ಥಳೀಯ ಸಂಸ್ಥೆಗಳಿಂದಲೂ ಹೊರದೂಡಲು ವಿವಿಧ ಪ್ರಾಂತ ಸರಕಾರಗಳು ಹವಣಿಸುತ್ತಿದ್ದುವು. ಸರಕಾರದ ದೃಷ್ಟಿಯಂತೆ, ಶಾಸನ ಭಂಗಕಾರನಾಗಿ ಸೆರೆಮನೆಗೆ ನಡೆದ ಪ್ರತಿಯೊಬ್ಬನೂ ಪೌರಸಭಾ ಶಾಲೆಯಲ್ಲಿ ಪಾಠ ಹೇಳುವುದಕ್ಕಾಗಲಿ ಅಥವಾ ಮತ್ತಾವ ಬಗೆಯಲ್ಲಾದರೂ ಪೌರಸಭೆಗೆ ಸೇವೆ ಸಲ್ಲಿಸುವುದಕ್ಕಾಗಲಿ ಅನರ್ಹನಾಗಿದ್ದನು. ತಪ್ಪು ಮಾಡುವ ಕಾಂಗ್ರೆಸ್ಸಿನವರನ್ನು ಕೆಲಸದಿಂದ ತೆಗೆದುಹಾಕದಿದ್ದರೆ ಸರಕಾರದ ಕೊಡುಗೆಗಳನ್ನು ನಿಲ್ಲಿಸಿಬಿಡುವುದಾಗಿ ಬೆದರಿಕೆಗಳೂ ಕಟು ಒತ್ತಾಯವೂ ಪೌರಸಭೆಗಳು ಇತ್ಯಾದಿಗಳ ಮೇಲೆ ತರಲ್ಪಟ್ಟವು. ಕಲ್ಕತ್ತಾ ಪೌರಸಭೆಯಲ್ಲಿ ಈ ಜೋರಾವರಿಯ ಅತ್ಯಂತ ಅಪಕೀರ್ತಿಕರ ನಿದರ್ಶನವೊಂದು ನಡೆಯಿತು. ಕೊನೆಗೆ, ಬಂಗಾಳಾ ಸರಕಾರವು, ರಾಜಕೀಯ ಅಪರಾಧಗಳಿಗಾಗಿ ಶಿಕ್ಷಿತರಾದ ಜನರಿಗೆ ಪೌರಸಭೆಯಲ್ಲಿ ಕೆಲಸ ಕೊಡಕೂಡದೆಂದು ಶಾಸನವೊಂದನ್ನು ರಚಿಸಿದರೆಂದು ನನ್ನ ಭಾವನೆ.

ಜರ್ಮನಿಯಲ್ಲಿನ ನಾಜಿ ಅತ್ಯಾಚಾರಗಳ ವರದಿಗಳು ಭಾರತದಲ್ಲಿ ಬ್ರಿಟಿಷ್ ಅಧಿಕಾರಿಗಳು ಮತ್ತು ಅವರ ವೃತ್ತ ಪತ್ರಿಕೆಗಳ ಮೇಲೆ ವಿಚಿತ್ರ ಪರಿಣಾಮಗಳನ್ನುಂಟು ಮಾಡಿದುವು. ಭಾರತದಲ್ಲಿ ಅವರು ಮಾಡಿದುದೆಲ್ಲವನ್ನೂ ಅವು ಸಮರ್ಥಿಸಿದುವು, ಮತ್ತು ತಮ್ಮ ಸದ್ಗುಣವನ್ನರಿತ ಹೆಮ್ಮೆಯಿಂದ ಅವರು, ಒಂದು ವೇಳೆ ನಮಗೂ ನಾಜಿಗಳಿಗೂ ಏನಾದರೂ ಸಂಬಂಧವಿದ್ದಿದ್ದರೆ ನಮ್ಮ ಪಾಡು ಎಷ್ಟು ಹೀನತರವಾಗಿರುತ್ತಿತ್ತೆಂಬುದನ್ನು ನಮಗೆ ಸೂಚಿಸಿದರು. ನಾಜಿಗಳು ನೂತನ ಪ್ರಮಾಣಗಳು ಮತ್ತು ಸಾಧನ ಪರಾಕಾಷ್ಠೆಗಳನ್ನು ಸ್ಥಾಪಿಸಿದ್ದರು, ಮತ್ತು ಅವುಗಳನ್ನು ಕುರಿತು ಪ್ರತಿಸ್ಪರ್ಧಿಸುವುದು ವಾಸ್ತವವಾಗಿಯೂ ಸುಲಭ ವಿಷಯವಾಗಿರಲಿಲ್ಲ. ಪ್ರಾಯಶಃ ನಮ್ಮ ಪಾಡು ಹೀನತರವಾಗುತ್ತಿತ್ತು, ಕಳೆದ ಐದು ವರ್ಷಗಳಿಂದ ಭಾರತದ ವಿವಿಧ ಭಾಗಗಳಲ್ಲಿ ನಡೆದಿರುವ ಪ್ರಸಕ್ತಿಗಳನ್ನು ಕುರಿತ ಸಂಪೂರ್ಣ ಸತ್ಯಾಂಶಗಳ ಅರಿವು ನನಗಿಲ್ಲವಾದ್ದರಿಂದ ನಾನು ಯಾವ ನಿರ್ಣಯಕ್ಕೂ ಬರಲಾರೆ. ಎಡಗೈ ಮಾಡಿದುದನ್ನು ಬಲಗೈಯರಿಯಕೂಡದೆಂಬ ದಾನಧರ್ಮವನ್ನು ಭಾರತದಲ್ಲಿ ಬ್ರಿಟಿಷ್ ಸರಕಾರವು ನಂಬುತ್ತದೆ, ಆದುದರಿಂದಲೇ ಪಕ್ಷಪಾತರಹಿತ ವಿಚಾರಣೆಯೊಂದಕ್ಕಾಗಿ—ಅಂಥ ವಿಚಾರಣೆಗಳಲ್ಲಿ ಸರಕಾರದ ಹೆಚ್ಚು ಪ್ರಭಾವವೇ ಸದಾ ಇದ್ದರೂ—ಸೂಚಿತವಾದ ಪ್ರತಿಯೊಂದು ಸೂಚನೆಯನ್ನೂ ಅದು ತಳ್ಳಿಹಾಕಿದೆ. ಸಾಮಾನ್ಯ ಆಂಗ್ಲೇಯನು ಪಾಶವೀಕ್ರೌರ್ಯ

ವನ್ನು ಹೇಸುವನೆಂಬುದು ನಿಜವೆಂದು ನನ್ನ ನಂಬಿಕೆ, ಮತ್ತು ನಾಜಿಗಳು ಮಾಡುವಂತೆ ಆಂಗ್ಲೇಯರು 'ಬ್ರೂಟಾಲಿಟಾಟ್' (ಅಥವಾ ಅದಕ್ಕೆ ಸಮನಾದ ಇಂಗ್ಲಿಷ್ ಪದ) ಎಂಬ ಪದವನ್ನು ಬಹಿರಂಗವಾಗಿ ಗುಣಗಾನ ಮಾಡುವುದನ್ನಾಗಲಿ ಭಾವಿಸಲಾರೆ ಅಂಥ ಕಾರ್ಯದಲ್ಲಿ ಉದ್ಯುಕ್ತರಾದಾಗಲೂ ಅವರು ಸ್ವಲ್ಪ ಹೇವರಿಸುವರು ನಾವು ಜರ್ಮನರಾಗಲಿ, ಇಲ್ಲವೇ ಆಂಗ್ಲೇಯರಾಗಲಿ, ಇಲ್ಲವೇ ಭಾರತೀಯರಾಗಲಿ, ನಮ್ಮ ನಾಗರಿಕ ಗುಣದ ಬಾಹ್ಯ ಲೇಪನವು ತೀರ ತೆಳುವಾಗಿದೆಯೆಂದು ಅಳುಕುತ್ತೇನೆ, ಮತ್ತು ನಮ್ಮ ರಾಗಗಳು ಉದ್ರೇಕಿಸಲ್ಪಟ್ಟಾಗ, ಅದು ಅಳಸಿಹೋಗಿ, ನೋಡಲು ಚೆನ್ನಲ್ಲದ ಯಾವುದೋ ಒಂದು ಇದನ್ನು ರಟ್ಟುಮಾಡುವುದು ಮಹಾ ಯುದ್ಧವು ಮಾನವತೆಯನ್ನು ಭಯಂಕರವಾಗಿ ಪಾಶವೀಕ್ರೌರ್ಯಕ್ಕೆ ಈಡುಮಾಡಿತು, ಯುದ್ಧ ವಿರಾಮಾನಂತರವೂ ನಾವು ಅದರ ಫಲಾಂತರವನ್ನು ಜರ್ಮನಿಯು ಹೊಟ್ಟೆಗಿಲ್ಲದೆ ನರಳುವಂತಾದ ಘೋರವಾದ ಮುತ್ತಿಗೆಯಲ್ಲಿ ಕಂಡೆವು—ಆಂಗ್ಲೇಯ ಬರೆಹಗಾರ ರೊಬ್ಬರು ಬಣ್ಣಿಸಿರುವಂತೆ ಅದು "ಯಾವ ರಾಷ್ಟ್ರವೂ ಮಾಡದ ಅತ್ಯಂತ ನಾಚಿಕೆಗೆಟ್ಟ ಪಾಶವೀಕ್ರೌರ್ಯ ಮತ್ತು ವಿಕಟ ಘೋರ ದುಷ್ಕರ್ಮಗಳಲ್ಲೊಂದು" ೧೮೫೭ ಮತ್ತು ೧೮೫೮ ರ ವರ್ಷಗಳನ್ನು ಭಾರತವು ಇನ್ನೂ ಮರೆತಿಲ್ಲ ನಮ್ಮ ಸ್ವಂತ ಸ್ವಾರ್ಥಗಳನ್ನು ಕುರಿತ ಆಕರಣೆ ಬಂದಾಗಲೆಲ್ಲ ನಾವು ನಮ್ಮ ಸೌಶೀಲ್ಯವನ್ನೂ ಸಾಮಾಜಿಕ ಸಭ್ಯತೆ ಗಳನ್ನೂ ಮರೆತುಬಿಡುವೆವು, ಅಸತ್ಯವು 'ಪ್ರಚಾರ'ವಾಗುವುದು, ಹಾಗೂ ಪಾಶವೀ ಕ್ರೌರ್ಯವು 'ವೈಜ್ಞಾನಿಕ ನಿಗ್ರಹ' ಮತ್ತು 'ಶಾಂತಿ ಮತ್ತು ಶಿಸ್ತಿ'ಗಳ ರಕ್ಷಣೆಯಾಗಿ ಬಿಡುವುದು.

ಅದು ವ್ಯಕ್ತಿಗಳ ಅಥವಾ ವಿಶಿಷ್ಟ ಜನಾಂಗದ ದೋಷವಲ್ಲ ತತ್ತುಲ್ಯವಾದ ಪರಿಸ್ಥಿತಿಗಳಲ್ಲಿ ಹೆಚ್ಚು ಕಡಿಮೆ ಪ್ರತಿಯೊಬ್ಬನೂ ಹಾಗೆಯೇ ವರ್ತಿಸುವನು ಭಾರತ ದಲ್ಲಿ ಮತ್ತು ಪರಕೀಯಾಧಿಕರಣಕ್ಕೊಳಗಾದ ಪ್ರತಿಯೊಂದು ರಾಜ್ಯದಲ್ಲಿಯೂ ಆಳುವ ಸರಕಾರಕ್ಕೆ ಪ್ರತಿಯಾಗಿ ಸುಪ್ತವಾದ ಅಭಿಯೋಗವಿದ್ದೇ ಇರುವುದು, ಮತ್ತು ಆಗಾಗ್ಯೆ ಅದು ಹೆಚ್ಚು ಸ್ಪಷ್ಟವೂ ತರ್ಜನೆಯೂ ಆಗುವುದು ಈ ಅಭಿಯೋಗವು ಪ್ರಭುತ್ವ ವರ್ಗಗಳಲ್ಲಿ ಸದಾ ಸೈನಿಕ ಧರ್ಮಗಳನ್ನೂ ಅಧರ್ಮಗಳನ್ನೂ ಬೆಳಸುವುದು ಈ ಸೈನಿಕ ಧರ್ಮಾಧರ್ಮಗಳ ಪರಾಕಾಷ್ಠೆಯ ಅಂಶವನ್ನು ಭಾರತದಲ್ಲಿ ಕಳೆದ ಕೆಲವು ವರ್ಷಗಳಿಂದ ಸ್ಪಷ್ಟವಾಗಿ ಕಾಣುತ್ತಿದ್ದೇವೆ, ಏಕೆಂದರ ನಮ್ಮ ಅಭಿ ಯೋಗವು ಅಷ್ಟು ಶಕ್ತಿಯುತವೂ ಪರಿಣಾಮಕಾರಿಯೂ ಆಗಿತ್ತು ಆದರೆ ನಾವು ಭಾರತದಲ್ಲಿ ಸ್ವಲ್ಪಮಟ್ಟಿಗೆ ಸೈನಿಕ ಭಾವನೆಯನ್ನು (ಅಥವಾ ಅದರ ಇಲ್ಲಮೆಯನ್ನು) ಸದಾ ಸಹಿಸಿಕೊಂಡಿರಬೇಕಾಗಿದೆ ಇದು ಸಾಮ್ರಾಜ್ಯದ ಪ್ರತಿಫಲಗಳಲ್ಲೊಂದು, ಮತ್ತು ಅದರಲ್ಲಿ ತೊಡಗಿರುವ ಉಭಯಪಕ್ಷಗಳನ್ನೂ ಅದು ಕೀಳ್ಪಡಿಸುವುದು ಭಾರ ತೀಯರ ಅವನತಿಯು ಸಾಕಷ್ಟು ಸ್ಪಷ್ಟವಾದುದೇನೋ ಹೌದು. ಇನ್ನೊಂದು ಅವ ನತಿಯು ಹೆಚ್ಚು ಸೂಕ್ಷ್ಮವಾದುದು, ಆದರೆ ಸಂದುಕಟ್ಟೊದಗಿದ ವೇಳೆಗಳಲ್ಲಿ ಅದು

ವಿಶದವಾಗುತ್ತದೆ ಆಮೇಲೆ ಉಭಯ ಲಕ್ಷಣಗಳ ಅವನತಿಯನ್ನು ದೌರ್ಭಾಗ್ಯ ವಶಾತ್ ಒಳಗೊಂಡ ಮೂರನೆಯ ಗುಂಪು ಇರುವುದು.

ಶ್ರೇಷ್ಠ ಅಧಿಕಾರಿಗಳ ಭಾಷಣಗಳು, ಕೇಂದ್ರ ಮತ್ತು ಪ್ರಾಂತ ಶಾಸನ ಸಭೆಗಳಲ್ಲಿ ಪ್ರಶ್ನೆಗಳಿಗೆ ಅವರು ಕೊಡುತ್ತಿದ್ದ ಉತ್ತರಗಳು, ಮತ್ತು ಸರಕಾರಿ ಹೇಳಿಕೆಗಳನ್ನು ಓದಲು ನನಗೆ ಸೆರೆಮನೆಯಲ್ಲಿ ಬೇಕಾದಷ್ಟು ವ್ಯವಧಾನವಿರುತ್ತಿತ್ತು ಕಳೆದ ಮೂರು ವರ್ಷಗಳಲ್ಲಿ ಗಮನಾರ್ಹ ವ್ಯತ್ಯಾಸವೊಂದು ಅವರಲ್ಲಿ ಉಂಟಾಗುತ್ತಿದ್ದುದನ್ನು ನಾನು ಗಮನಿಸಿದೆ, ಮತ್ತು ಈ ವ್ಯತ್ಯಾಸವು ವೃದ್ಧಿಂಗತವಾಗಿ ಹೆಚ್ಚುಹೆಚ್ಚು ಸ್ಫುಟವಾಗುತ್ತ ಬಂದಿತು ಹೆಚ್ಚುಹೆಚ್ಚಾಗಿ ಜಬರಿಸುತ್ತ ಮತ್ತು ಅಬ್ಬರಿಸುತ್ತ, ತನ್ನ ಯೋಧರನ್ನು ಸಾರ್ಜೆಂಟ್–ಮೇಜರು ಸಂಬೋಧಿಸುವ ಗತ್ತನ್ನು ಇನ್ನೂ ಹೆಚ್ಚುಹೆಚ್ಚಾಗಿ ಬೆಳೆಸಿ ಕೊಂಡರು ೧೯೩೩ ರ ನವೆಂಬರ್ ಅಥವಾ ಡಿಸೆಂಬರಿನಲ್ಲಿ ಬಂಗಾಳದ ಪ್ರಾಯಃ ಮಿಡ್ನಾಪುರದ ಕಮಿಷನರು ಮಾಡಿದ ಭಾಷಣವು ಇದರ ಗಮನಾರ್ಹ ನಿದರ್ಶನ ವೊಂದಾಗಿತ್ತು. ಈ ಸೋಲಿನ ಹಾಸಿನಲ್ಲಿ ಹೊಕ್ಕಾಗಿ ಗೆಲುವಿನ ತುಂಬುಸೂರೆಯನ್ನು ಹೀರುವ ಗೆದ್ದವನ ಆಶೆಯು ಹರಿಯುವಂತೆ ತೋರುತ್ತದೆ ಖಾಸಗಿ ಐರೋಪ್ಯರು, ಮುಖ್ಯವಾಗಿ ಬಂಗಾಳದಲ್ಲಿ ಅಧಿಕಾರಿಗಳ ಜಾತಿಗಿಂತ ಮುಂದೆ ಹೋಗಿ, ಅವರ ಭಾಷಣ ಗಳಲ್ಲೂ ಕ್ರಿಯೆಗಳಲ್ಲೂ ಬಹಳ ನಿಷ್ಕೃಷ್ಟವಾದ ಫ್ಯಾಸಿಸ್ಟ್‌ಮನೋಗತಿಯನ್ನು ಪ್ರದರ್ಶಿಸಿದ್ದಾರೆ

ಪಾಶವೀಕ್ರೂರಕೃತ್ಯದ ಗುಟ್ಟು ಬಯಲಾಗುವ ಇನ್ನೊಂದು ನಿದರ್ಶನವು ಸಿಂಧ್ ನಲ್ಲಿ ಈಚೆಗೆ ಸಾರ್ವಜನಿಕರೆದುರು ಶಿಕ್ಷಿತ ಅಪರಾಧಿಗಳಲ್ಲಿ ಕೆಲವರನ್ನು ಗಲ್ಲಿಗೇರಿಸಿದ ಪ್ರಸಂಗದ್ದಾಗಿತ್ತು ಸಿಂಧ್‌ನಲ್ಲಿ ಅಪರಾಧಗಳು ಏರಿನಲ್ಲಿದ್ದುದರಿಂದ ಇತರರಿಗೆ ಎಚ್ಚರಿಕೆ ಕೊಡುವ ಸಲುವಾಗಿ ಅಪರಾಧಿಗಳನ್ನು ಸಾರ್ವಜನಿಕವಾಗಿ ಗಲ್ಲಿಗೇರಿಸಲು ಅಧಿಕಾರಿಗಳು ನಿರ್ಧರಿಸಿದರು ಈ ಘೋರ ದೃಶ್ಯವನ್ನು ಅವಲೋಕಿಸಲು ಸರ್ವಜನರಿಗೂ ಎಲ್ಲ ಸೌಕರ್ಯಗಳನ್ನೂ ಒದಗಿಸಲಾಗಿತ್ತು, ಮತ್ತು ಅನೇಕ ಸಾವಿರ ಜನರು ನೋಡಿಬಂದರಂತೆ

ಹೀಗೆ ಸೆರೆಮನೆಯಿಂದ ನನ್ನ ಬಿಡುಗಡೆಯಾದಮೇಲೆ, ನಾನು ಭಾರತದ ರಾಜ ಕೀಯ ಮತ್ತು ಆರ್ಥಿಕ ಪರಿಸ್ಥಿತಿಗಳನ್ನು ದಿಗ್ದರ್ಶನಮಾಡಿ, ಅವುಗಳನ್ನು ಕುರಿತು ಸ್ವಲ್ಪವೂ ಉತ್ಸಾಹಶಾಲಿಯಾಗಲಿಲ್ಲ ನನ್ನ ಒಡನಾಡಿಗಳಲ್ಲನೇಕರು ಸೆರೆಯಲ್ಲಿದ್ದರು ಹೊಸ ದಸ್ತಗಿರಿಗಳು ಮುಂದುವರಿದುವು, ಆರ್ಡಿನೆನ್ಸುಗಳೆಲ್ಲ ಪ್ರಯೋಗದಲ್ಲಿದ್ದುವು, ವಾರ್ತಾ ಬಹಿಷ್ಕಾರವು ವೃತ್ತಪತ್ರಿಕೆಯ ಗೋಮಾಳೆಯನ್ನು ಮಿಸುಕುತ್ತಿದ್ದು ನಮ್ಮ ಪತ್ರವ್ಯವಹಾರವನ್ನು ತಲಕೆಳಗು ಮಾಡಿದುವು ನನ್ನ ಸಹೋದ್ಯೋಗಿಯೊಬ್ಬರಾದ ರಫಿ ಅಹ್ಮದ್ ಕಿಡ್ವಾಯಿಯವರು ತಮ್ಮ ಪತ್ರವ್ಯವಹಾರವನ್ನು ಕುರಿತ ಆಕ್ಷೇಪಕರ ವೈಲಕ್ಷಣ್ಯದಿಂದ ಬಹಳ ಸಿಟ್ಟಾದರು ಪತ್ರಗಳು ಹಿಡಿದಿಡಲ್ಪಟ್ಟಿದ್ದು ಬಹಳ ನಿಧಾನ

ವಾಗಿ ಕೈಸೇರುತ್ತಿದ್ದುವು, ಅಥವಾ ಕಳೆದು ಹೋಗುತ್ತಿದ್ದುವು, ಇದು ಅವರ ಕಾರ್ಯಗೌರವಗಳನ್ನು ತಲಕೆಳಗುಮಾಡುತ್ತಿದ್ದಿತು ಆಕ್ಷೇಪಕರು ತಮ್ಮ ಉದ್ಯೋಗವನ್ನು ಸ್ವಲ್ಪ ಹೆಚ್ಚು ದಕ್ಷತೆಯಿಂದ ಮಾಡಬೇಕೆಂದು ಬಿನ್ನವಿಸಿಕೊಳ್ಳಲು ಇಷ್ಟಪಟ್ಟರು ಆದರೆ ಅವರು ಯಾರಿಗೆ ಬರೆಯಬೇಕು? ಆಕ್ಷೇಪಕರು ಸಾರ್ವಜನಿಕ ಅಧಿಕಾರಿಯಾಗಿರಲಿಲ್ಲ ಪ್ರಾಯಶಃ ಆತನು ಒಬ್ಬಾನೊಬ್ಬ ಸಿ ಐ ಡಿ ಅಧಿಕಾರಿ ಗುಪ್ತವಾಗಿ ಕೆಲಸಮಾಡುತ್ತಿದ್ದ ಮತ್ತು ತನ್ನ ಅಸ್ತಿತ್ವವನ್ನೂ ಕಾರ್ಯವನ್ನೂ ಬಹಿರಂಗವಾಗಿ ಕೂಡ ಒಪ್ಪಿಕೊಳ್ಳದಿದ್ದ ರಫಿ ಅಹ್ಮದರು ಆಕ್ಷೇಪರಿಗೆ ಪತ್ರಬರೆದು, ಈ ಪತ್ರದ ಲಕೋಟೆಯ ಮೇಲೆ ತಮ್ಮ ವಿಳಾಸವನ್ನೇ ಬರೆದುಕಳುಹಿಸಿ ಕಷ್ಟವನ್ನು ಬಿಡಿಸಿದರು! ನಿಸ್ಸಂದೇಹವಾಗಿ ಪತ್ರವು ಅದರ ನೇರವಾದ ಗುರಿಯನ್ನು ಮುಟ್ಟಿತು, ಮತ್ತು ರಫಿ ಅಹ್ಮದರ ಪತ್ರವ್ಯವಹಾರದಲ್ಲಿ ಆಮೇಲೆ ಸ್ವಲ್ಪ ಮೇಲ್ಪಾಟು ಕಂಡುಬಂದಿತು

ಸೆರಮನೆಗೆ ಹಿಂತಿರುಗಲು ನನಗೆ ಇಷ್ಟವಿರಲಿಲ್ಲ ಕಟ್ಟರೆಯಾಗುವಷ್ಟು ಅದನ್ನು ಹೊಂದಿದ್ದೆ ಆದರೆ ನಾನು ಎಲ್ಲ ರಾಜಕೀಯ ಕಾರ್ಯಕಲಾಪಗಳಿಂದ ನಿವೃತ್ತನಾಗಲು ನಿಶ್ಚಯಿಸಿದ ಹೊರತು, ಪ್ರಸಕ್ತ ವಿದ್ಯಮಾನಗಳಲ್ಲಿ ಅದನ್ನು ತಪ್ಪಿಸಿಕೊಳ್ಳುವುದು ಹೇಗೆಂಬುದನ್ನು ಕಾಣಲಾಗದೆ ಹೋಯಿತು ನನಗೆ ಅಂಥ ಉದ್ದೇಶವಿರಲಿಲ್ಲ ಮತ್ತು ನಾನು ಸರಕಾರದೊಂದಿಗೆ ಸಂಘರ್ಷಿಸಿಯೇ ತೀರಬೇಕಾಗುವುದೆಂದೆಣಿಸಿದೆ ಯಾವ ಕ್ಷಣದಲ್ಲಾದರೂ ನನಗೆ ಹೀಗೆ ಮಾಡಬೇಕು ಇಲ್ಲವೇ ಹಾಗೆ ಮಾಡಕೂಡದು ಎಂದು ಅಪ್ಪಣೆ ಮಾಡುವ ಆಜ್ಞಾಪತ್ರವೊಂದು ಜಾರಿಮಾಡಲ್ಪಡಬಹುದು, ಮತ್ತು ಇಂಥ ದಾರಿಯಲ್ಲಿಯೇ ಹೋಗಬೇಕೆಂದು ಆಗುವ ಅಪ್ಪಣೆಗೆ ವಿರುದ್ಧವಾಗಿ ನನ್ನ ಮನಸ್ಸೆಲ್ಲ ದಂಗೆಯೇಳುತ್ತಿತ್ತು ಭಾರತದ ಪ್ರಜೆಗಳನ್ನು ಬೆದರಿಸಿ ನಿಗ್ರಹಿಸಲು ಪ್ರಯತ್ನವೊಂದು ನಡೆಯುತ್ತಿತ್ತು ನಾನು ನಿಸ್ಸಹಾಯನಾಗಿದ್ದೆ ವಿಸ್ತಾರ ಕ್ಷೇತ್ರದಲ್ಲಿ ಯಾವುದನ್ನು ಮಾಡಲು ಕೂಡ ನನಗೆ ಅಸಾಧ್ಯವಾಗಿತ್ತು ಆದರೆ ಹೇಗಾದರೂ, ಬೆದರಿಕೆ ದಬ್ಬಾಳಿಕೆಗಳಿಂದ ಪರಾಧೀನಕ್ಕೊಳಗಾಗುವುದಿಲ್ಲವೆಂದು ನನ್ನಮಟ್ಟಿಗೆ ನಾನು ನಿರಾಕರಿಸಬಹುದಾಗಿತ್ತು

ಸೆರೆಮನೆಗೆ ಹಿಂತಿರುಗುವ ಮುನ್ನ ನಾನು ಕೆಲವು ವಿಚಾರಗಳಿಗೆ ಗಮನ ಕೊಡಬೇಕೆಂದು ಬಯಸಿದೆ ಎಲ್ಲಕ್ಕಿಂತ ಮೊದಲು ನನ್ನ ತಾಯಿಯ ವ್ಯಾಧಿಯು ನನ್ನ ಗಮನವನ್ನು ಸೆಳೆಯಿತು ಆಕೆಯು ಬಹಳ ನಿಧಾನವಾಗಿ ಗುಣಹೊಂದಿದಳು, ಒಂದು ವರ್ಷವೆಲ್ಲ ಹಾಸಿಗೆಯಲ್ಲೇ ಮಲಗಿರುವಷ್ಟು ನಿಧಾನವಾಗಿ ಗುಣಹೊಂದುತ್ತ ಬಂದಳು ಪುಣೆಯಲ್ಲಿ ತಮ್ಮ ಇತ್ತೀಚಿನ ಉಪವಾಸದಿಂದ ಗುಣಹೊಂದುತ್ತಿದ್ದ ಗಾಂಧಿಜಿಯವರನ್ನು ನೋಡಲು ನಾನು ತವಕಗೊಂಡಿದ್ದೆ ಏಕೆಂದರೆ ನಾನು ಅವರನ್ನು ನೋಡಿ ಎರಡು ವರ್ಷಗಳಿಗಿಂತ ಹೆಚ್ಚಾಗಿತ್ತು ಅಲ್ಲದೆ ಸಾಧ್ಯವಾದಮಟ್ಟಿಗೂ ನನ್ನ ಪ್ರಾಂತ ಸಹೋದ್ಯೋಗಿಗಳನೇಕರೊಂದಿಗೆ, ಭಾರತದ ಪ್ರಸಕ್ತ ವಿದ್ಯಮಾನಗಳ

ನ್ನಲ್ಲದೆ ಪ್ರಪಂಚದ ವಿದ್ಯಮಾನಗಳನ್ನೂ ನನ್ನ ಬಗೆಯಲ್ಲಿ ತುಂಬಿಕೊಂಡಿದ್ದ ಭಾವನೆಗಳನ್ನೂ ಕುರಿತು ಚರ್ಚೆ ಮಾಡಬೇಕೆಂದು ಸಹ ಬಯಸಿದೆ ಪ್ರಪಂಚವು ರಾಜಕೀಯ ಮತ್ತು ಆರ್ಥಿಕ ವಿನಾಶವೊಂದಕ್ಕೆ ವೇಗವಾಗಿ ನಡೆಯುತ್ತಿದೆಯೆಂದು ನಾವು ನಮ್ಮ ರಾಷ್ಟ್ರೀಯ ಕಾರ್ಯಕ್ರಮಗಳನ್ನು ರಚಿಸುವಾಗ ಇದನ್ನು ಮನಸ್ಸಿನಲ್ಲಿಟ್ಟುಕೊಂಡಿರಲೇಬೇಕೆಂದೂ ಆಗ ಚಿಂತಿಸಿದೆ

ನನ್ನ ಮನವಾಳ್ತೆಯು ಕೂಡ ನನ್ನ ಅವಧಾನವನ್ನು ಸೆಳೆದುಬಿಟ್ಟಿತು ಇದುವರೆಗೆ ನಾನು ಅದನ್ನು ಸಂಪೂರ್ಣವಾಗಿ ಉಪೇಕ್ಷಿಸಿದ್ದೆ, ಮತ್ತು ತಂದೆಯವರ ಮರಣಾರಭ್ಯ ಅವರ ಪತ್ರಗಳನ್ನು ಕೂಡ ಪರೀಕ್ಷಿಸಿರಲಿಲ್ಲ ನಮ್ಮ ವೆಚ್ಚವನ್ನು ನಾವು ಬಹಳವಾಗಿ ಕಡಿಮೆಮಾಡಿದ್ದೆವು, ಆದರೂ ಅದು ನಮ್ಮ ಅಳವಿಗೆ ಮೀರಿದುದಾಗಿತ್ತು ಹಾಗಾದರೂ ನಾವು ನಮ್ಮ ಆ ಮನೆಯಲ್ಲಿರುತ್ತಿದ್ದವರೆಗೆ ಅದನ್ನು ಇನ್ನೂ ಹೆಚ್ಚಾಗಿ ಕಡಿಮೆಮಾಡಲು ಕಷ್ಟವಾಗಿತ್ತು ನಮ್ಮ ದ್ರವ್ಯಾನುಕೂಲಕ್ಕೆ ಮೀರಿದುದಾಗಿದ್ದುದರಿಂದ ಮತ್ತು ಯಾವ ಕ್ಷಣದಲ್ಲಿಯಾದರೂ ಸರಕಾರದವರು ಜಫ್ತಿಮಾಡಿಬಿಡಬಹುದಾಗಿದ್ದುದರಿಂದ ನಾವು ಮೋಟಾರೊಂದನ್ನು ಇಟ್ಟುಕೊಂಡಿರಲಿಲ್ಲ. ಭಾಂಡಾರಿಕ ಕಷ್ಟಗಳಿಗೆ ಸಿಕ್ಕಿದವನಾಗಿದ್ದ ನಾನು ನನಗೆ ಬಂದಿದ್ದ ಅನೇಕಾನೇಕ ದೇಶಾವಾರದ ಪತ್ರಗಳ ಕಡೆಗೆ ತಿರುಗಿದೆ. (ಆ ಹೊರೆಯನ್ನೆಲ್ಲ ಆಕ್ಷೇಪಕನು ನನ್ನೆಡೆಗೆ ಕಳುಹಿಸಿದ್ದ) ನಾನು ಐಶ್ವರ್ಯವಂತನೆಂಬ ಸಾಮಾನ್ಯವಾದ ಮತ್ತು ಬಹಳ ತಪ್ಪಾದ ಭಾವನೆಯು ಮುಖ್ಯವಾಗಿ ದಕ್ಷಿಣ ಭಾರತದಲ್ಲಿ ನೆಲೆಸಿತ್ತು

ನನ್ನ ಬಿಡುಗಡೆಯಾದ ಅತ್ಯಲ್ಪಕಾಲದಲ್ಲಿಯೇ ನನ್ನ ತಂಗಿ ಕೃಷ್ಣಳ ವಿವಾಹವು ನಿಶ್ಚಯವಾಯಿತು ನನ್ನ ಬಲಾತ್ಕಾರದ ನಿರ್ಗಮನಕ್ಕೆ ಮುಂಚೆಯೇ ಮದುವೆ ನಡೆಯಬೇಕೆಂಬ ತವಕದಿಂದ ಕೂಡಿದ್ದೆ ಕೃಷ್ಣಳು ಕೂಡ, ಒಂದು ವರ್ಷದ ಶಿಕ್ಷಾವಧಿಯನ್ನು ಮುಗಿಸಿಕೊಂಡು, ಕೆಲವು ತಿಂಗಳುಗಳ ಮುಂಚೆಯೇ ಸೆರೆಮನೆಯಿಂದ ಹೊರಕ್ಕೆ ಬಂದಿದ್ದಳು

ನನ್ನ ತಾಯಿಯ ಆರೋಗ್ಯವು ಅವಕಾಶಕೊಟ್ಟೊಡನೆಯೇ ನಾನು ಗಾಂಧಿಜಿಯವರನ್ನು ಸಂದರ್ಶಿಸಲು ಪುಣೆಗೆ ಹೋದೆ ಅವರನ್ನು ನಾನು ಪುನಃ ನೋಡಿದುದಕ್ಕಾಗಿ ಮತ್ತು, ಅಶಕ್ತರಾಗಿದ್ದರೂ ಚೆನ್ನಾಗಿ ಗುಣಹೊಂದುತ್ತಿದ್ದುದಕ್ಕಾಗಿ ಸಂತೋಷಪಟ್ಟೆ. ನಾವು ನಿಡುಹೊತ್ತು ಮಾತನಾಡುತ್ತಿದ್ದೆವು ಜೀವನ, ರಾಜಕಾರಣ ಮತ್ತು ಅರ್ಥಶಾಸ್ತ್ರಗಳನ್ನು ಕುರಿತು ದೃಷ್ಟಿಕ್ಷೇಪಗಳಲ್ಲಿ ನಾವು ಬೇಕಾದಷ್ಟು ಭಿನ್ನರಾಗಿದ್ದೆವೆಂಬುದು ಸ್ವತಸ್ಸಿದ್ಧವಾಗಿತ್ತು, ಆದರೆ ನನ್ನ ದೃಷ್ಟಿಕೋನವನ್ನು ಸಂಧಿಸಲೋಸುಗ ಅದಷ್ಟು ಬಳಸಾರಲು ಉದಾರ ರೀತಿಯಲ್ಲಿ ಪ್ರಯತ್ನಿಸುತ್ತಿದ್ದುದಕ್ಕಾಗಿ ನಾನು ಅವರಿಗೆ ಕೃತಜ್ಞನಾಗಿದ್ದೆ ಆಮೇಲೆ ಪ್ರಕಟವಾದ ನಮ್ಮ ಪತ್ರವ್ಯವಹಾರವು ನನ್ನ ಬಗೆಯಲ್ಲಿ ತುಂಬಿ

ಕೊಂಡಿದ್ದ ಕೆಲವು ವಿಸ್ತಾರ ಸಮಸ್ಯೆಗಳನ್ನು ಸಮಾಲೋಚಿಸಿತ್ತು, ಮತ್ತು ಅವು ಅಸ್ಪಷ್ಟ ಭಾಷೆಯಲ್ಲಿ ಸೂಚಿತವಾಗಿದ್ದರೂ ಸಾಮಾನ್ಯ ಗತಿಯು ಸ್ಪಷ್ಟವಾಗಿತ್ತು ಬಲಾತ್ಕಾರವನ್ನು ಬಿಟ್ಟು ಮತಾಂತರದ ಮೂಲಕ ಕಾರ್ಯಸಿದ್ಧಿಯಾಗಬೇಕೆಂದು ಅವ ಧಾರಣೆ ಮಾಡಿದರೂ ಗಾಂಧಿಜಿಯವರು ಸ್ವಾರ್ಥಗಳನ್ನು ಅಸ್ವಾರ್ಥಗಳನ್ನಾಗಿಸ ಬೇಕೆಂದು ಸಾರಿದುದರಿಂದ ನಾನು ಸಂತುಷ್ಟನಾದೆ ನನ್ನ ಯೋಚನೆಯಂತೆ, ಅವರ ಮತಾಂತರದ ಕೆಲವು ರೀತಿಗಳು, ಅನುನಯ ಮತ್ತು ದಾಕ್ಷಿಣ್ಯಗಳ ಬಲಾತ್ಕಾರಕ್ಕೆ ತೀರ ದೂರವಲ್ಲವಾದ್ದರಿಂದ, ವ್ಯತ್ಯಾಸವು ಬಹಳ ಹೆಚ್ಚೆಂದು ನನಗೆ ತೋರಲಿಲ್ಲ ಅಸ್ಪಷ್ಟ ವಾದಗಳನ್ನು ಪರ್ಯಾಲೋಚಿಸುವುದಕ್ಕೆ ಅವರಿಗೆ ಇಷ್ಟವಿಲ್ಲದಿದ್ದರೂ ನಿಜಾಂಶಗಳ ತರ್ಕಸರಣಿಯು ಅವರನ್ನು ಹೆಜ್ಜೆ ಹೆಜ್ಜೆಯಾಗಿ ಮೂಲ ಸಾಮಾಜಿಕ ವ್ಯತ್ಯಾಸಗಳ ಅನಿವಾರ್ಯತೆಗೆ ಕರೆದೊಯ್ಯುವುದೆಂದು ನಾನು ಅವರನ್ನು ಕುರಿತು ಆಗ, ಹಿಂದಿನಂತೆಯೇ ಆಲೋಚಿಸಿದೆ ಅವರೊಬ್ಬ ವಿಚಿತ್ರಾದ್ಭುತ ವ್ಯಕ್ತಿಗಳಾಗಿದ್ದರು – ಮಿ॥ ವೆರಿಯರ್ ಎಲ್ವಿನ್‌ರು ಅವರನ್ನು ಕರೆದಿರುವಂತೆ, ಅವರು ಮಧ್ಯಕಾಲದ ಕ್ಯಾಥೊಲಿಕ್ ಯೋಗಿ ಯೊಬ್ಬನ ಮಾದರಿಯ ಪುರುಷರೊಬ್ಬರು—ಮತ್ತು ಅದೇ ಸಮಯದಲ್ಲಿ ಭಾರತೀಯ ಬೇಸಾಯಗಾರ ಜಂಗುಳಿಯ ನಾಡಿಯನ್ನು ಸದಾ ಹಿಡಿದಿರುವ ಕ್ರಿಯಾತ್ಮಕ ನಾಯಕರು ಸಂದುಕಟ್ಟೊಂದರಲ್ಲಿ ಅವರು ಯಾವ ಮಾರ್ಗಕ್ಕೆ ತಿರುಗಬಹುದೆಂಬುದನ್ನು ಹೇಳು ವುದು ಕಷ್ಟವಾಗಿತ್ತು, ಆದರೆ ಅದು ಯಾವ ಮಾರ್ಗವಾದರೂ ಆಗಲಿ, ಅದು ವ್ಯತ್ಯಾಸವೊಂದನ್ನುಂಟುಮಾಡುತ್ತಿತ್ತು ನಮ್ಮ ಆಲೋಚನೆಯಂತೆ ಅವರು ತಪ್ಪು ಹಾದಿಯಲ್ಲಿ ಹೋಗಬಹುದು, ಆದರೆ ಅವಶ್ಯಕತೆಯೊದಗಿದರೆ, ಆಗ ಭಿನ್ನಮಾರ್ಗ ಗಳಲ್ಲಿ ನಡೆಯಬೇಕಾಗುವುದು

ಸದ್ಯಕ್ಕೆ ಈ ಪ್ರಶ್ನೆಯು ಹುಟ್ಟಲಿಲ್ಲವೆಂದು ನಾನಾಗ ಆಲೋಚಿಸಿದೆ ನಾವು ನಮ್ಮ ರಾಷ್ಟ್ರೀಯ ಚಳವಳಿಯ ನಡುವೆ ಇದ್ದವು ಮತ್ತು ಶಾಸನ ಭಂಗವು, ವ್ಯಕ್ತಿ ಗಳಿಗದನ್ನು ಸಂಕೋಚಪಡಿಸಿದ್ದರೂ, ಶಾಸ್ತ್ರೀಯವಾಗಿ ಅದು ಇನ್ನೂ ಕಾಂಗ್ರೆಸ್ಸಿನ ಕಾರ್ಯಕ್ರಮವಾಗಿತ್ತು ನಾವು ಇರುವಂತೆಯೇ ಮುಂದೆ ನಾಗಬೇಕು, ಮತ್ತು ಕಾರ್ಯ ನೀತಿಯನ್ನು ಇನ್ನೊಮ್ಮೆ ಸಾರುವ ಕಾಲವೊದಗಿದಾಗ ನಾವು ಗಣನೀಯವಾದ ಪ್ರಗತಿಗೆ ಸಿದ್ಧವಾಗಿರಲೋಸುಗ ಸಮತಾವಾದ ಭಾವನೆಗಳನ್ನು ಜನರಲ್ಲಿ, ಅದರಲ್ಲಿಯೂ ವಿಶೇಷ ವಾಗಿ, ರಾಜಕೀಯವಾಗಿ ಹೆಚ್ಚು ಜಾಗೃತರಾದ ಕಾಂಗ್ರೆಸ್ ಕಾರ್ಯಕರ್ತರಲ್ಲಿ ಹರಡಲು ಪ್ರಯತ್ನಿಸಬೇಕು ಏತನ್ಮಧ್ಯೆ, ಕಾಂಗ್ರೆಸ್ಸು ಅಕ್ರಮಕೂಟವೊಂದಾಗಿತ್ತು, ಮತ್ತು ಬ್ರಿಟಿಷ್ ಸರಕಾರವು ಅದನ್ನು ಮುರಿಯಲು ಪ್ರಯತ್ನಿಸುತ್ತಿತ್ತು ನಾವು ಆ ಮುತ್ತಿಗೆ ಯನ್ನು ಎದುರಿಸಬೇಕಾಗಿತ್ತು

ಗಾಂಧಿಜಿಯವರ ಎದುರಿದ್ದ ಪ್ರಮುಖ ಪ್ರಶ್ನೆಯೆಂದರೆ ಆತ್ಮೀಯವಾದುದೊಂದು ಸ್ವಯಂ ತಾವು ಏನುಮಾಡಬೇಕು? ಅವರು ಸಿಕ್ಕಿನಲ್ಲಿ ಬಿದ್ದಿದ್ದರು, ಅವರು ಪುನಃ

ಸೆರೆಮನೆಗೆ ಹೋದರೆ ಹರಿಜನ ಸೇವಾಬಾಧ್ಯತೆಯ ಅದೇ ಪ್ರಶ್ನೆಯೇ ತಲೆಯೆತ್ತುವುದು, ಮತ್ತು ಊಹಿಸಬಹುದಾಗಿದ್ದಂತೆ, ಸರಕಾರವು ಸಗ್ಗುವುದಿಲ್ಲ, ಮತ್ತು ಅವರು ಪುನಃ ಉಪವಾಸವನ್ನು ಕೈಗೊಳ್ಳುತ್ತಿದ್ದರು ಅದೇ ವರ್ತುಳವನ್ನೇ ಪುನಃ ಸುತ್ತಬೇಕೆ? ಉಪವಾಸ ಮುಷ್ಕರತೊಟ್ಟವರನ್ನು ತಾತ್ಕಾಲಿಕವಾಗಿ ಬಿಡುಗಡೆಮಾಡಬೇಕಾದ ಪ್ರಸಂಗ ಯವನ್ನೊದಗಿಸುವ 'ಬೆಕ್ಕು–ಮತ್ತು–ಇಲಿ' ನೀತಿಗೆ ಮಣಿಯುವುದನ್ನವರು ನಿರಾಕರಿಸಿ, ಆ ಬಾಧ್ಯತೆಗಳಿಗಾಗಿ ತಾವು ಪುನಃ ಉಪವಾಸ ಮಾಡಿದರ, ಉಪವಾಸವು ತಮ್ಮ ಬಿಡುಗಡೆಯಾದಮೇಲೂ ಮುಂದುವರಿಯುವುದು, ಎಂದು ಹೇಳಿದರು ಎಂದರೆ ಆಮರಣಾಂತ ಉಪವಾಸ ಮಾಡುವುದಾಗಿ ಹೇಳಿದಂತಾಯಿತು

ಅವರ ಮುಂದಿದ್ದ ಎರಡನೆಯ ಸಾಧ್ಯಪಕ್ಷವೆಂದರೆ, ತಮ್ಮ ಶಿಕ್ಷೆಯ ಒಂದು ವರ್ಷದಲ್ಲಿ (ಇದರಲ್ಲಿ ಹತ್ತೂವರೆ ತಿಂಗಳುಗಳು ಇನ್ನೂ ಉಳಿದಿದ್ದುವು) ದಸ್ತಗಿರಿಯನ್ನು ಆಹ್ವಾನಿಸದೆ ಇದ್ದು, ಹರಿಜನ ಕಾರ್ಯದಲ್ಲಿ ತೊಡಗಿರುವುದು ಆದರೆ ತತ್ಕಾಲದಲ್ಲಿಯೇ ಅವರು ಕಾಂಗ್ರೆಸ್ ಕಾರ್ಯಕರ್ತರನ್ನು ಸಂಧಿಸಿ, ಆವಶ್ಯಕವಿದ್ದಾಗ ಬುದ್ಧಿವಾದಗಳನ್ನು ಹೇಳುವುದು.

ಅವರು ನನಗೆ ಸೂಚಿಸಿದ ತೃತೀಯ ಸಾಧ್ಯಪಕ್ಷವೆಂದರ, ಸ್ವಲ್ಪಕಾಲ ತಾವು ಕಾಂಗ್ರೆಸ್ಸಿನಿಂದ ಸಂಪೂರ್ಣವಾಗಿ ನಿವೃತ್ತರಾಗುವುದು ಮತ್ತು ಅವರು ಬಣ್ಣಿಸಿದಂತೆ ಅದನ್ನು "ತರುಣ ತಲೆಮಾರಿನವರ" ಕೈಗಳಲ್ಲಿ ಬಿಡುವುದು

ಉಪವಾಸದಿಂದ ಸಾವಿನಲ್ಲಿ ಮುಗಿಯುವಂತೆ ತೋರಿದ ಮೊದಲ ಕಾರ್ಯೋಪಾಯಕ್ಕೆ ಸಮ್ಮತಿಯನ್ನು ಸೂಚಿಸಲು ನಮ್ಮಲ್ಲಿ ಯಾರಿಗಾದರೂ ಅಸಾಧ್ಯವಾಗಿತ್ತು ಕಾಂಗ್ರೆಸ್ಸು ಅಕ್ರಮಕೂಟವಾಗಿದ್ದಾಗ ಮೂರನೆಯದು ತೀರ ಅನಿಷ್ಟವೆಂದು ತೋರಿತು ಶಾಸನ ಭಂಗವನ್ನೂ ಪ್ರತ್ಯಕ್ಷಕಾರ್ಯದ ಎಲ್ಲ ವಿಧಾನಗಳನ್ನೂ ಕೂಡಲೇ ಮೈದೆಗೆಯುವುದು, ನ್ಯಾಯಬದ್ಧತೆ ಮತ್ತು ರಚನಾತ್ಮಕ ಕಾರ್ಯಕಲಾಪಗಳಿಗೆ ಹಿಂತಿರುಗುವುದು ಇಲ್ಲವೇ ಈಗ ಗಾಂಧಿಜಿಯವರಿಂದ ಸಹ, ಬಹಿಷ್ಕೃತವೂ ಪ್ರತ್ಯೇಕಿಸಲ್ಪಟ್ಟುದೂ ಆದ, ಕಾಂಗ್ರೆಸ್ಸಿಗೆ ಹಿಂತಿರುಗಿ, ಸರಕಾರದಿಂದ ಇನ್ನೂ ಹೆಚ್ಚು ಮುರಿಯಲ್ಪಡುವುದೂ ಇದರ ಪರಿಣಾಮ ಅಲ್ಲದೆ, ಸಭೆಸೇರಿ ಯಾವ ನೀತಿಯನ್ನೂ ಚರ್ಚಿಸಲಾಗದಿದ್ದ ಅಕ್ರಮಕೂಟವನ್ನು ಯಾವ ಗೋಷ್ಠಿಯೂ ಸ್ವಾಧೀನಪಡಿಸಿಕೊಳ್ಳುವ ಪ್ರಶ್ನೆಯೇ ಇರಲಿಲ್ಲ ದೂರೀಕರಣ ವಿಧಾನವೊಂದರಿಂದ, ಅವರು ಸೂಚಿಸಿದ ಎರಡನೆಯ ಕಾರ್ಯೋಪಾಯಕ್ಕೆ ನಾವು ಹೀಗೆ ನಿರ್ಧರಿಸಿದೆವು. ನಮ್ಮಲ್ಲನೇಕರು ಅದಕ್ಕೆ ಇಷ್ಟಪಡಲಿಲ್ಲ, ಮತ್ತು ಅದು ಶಾಸನ ಭಂಗದ ಶೇಷಕ್ಕೆ ಬಲವಾದ ಏಟನ್ನು ಕೊಡುವುದೆಂದು ನಾವು ಅರಿತಿದ್ದೆವು ಹೋರಾಟದಿಂದ ಮುಂದಾಳುವೇ ನಿವೃತ್ತನಾಗಿದ್ದರೆ ಉತ್ಸಾಹಶಾಲಿಗಳಾದ ಕಾಂಗ್ರೆಸ್ ಕಾರ್ಯಕರ್ತರನೇಕರು ಬೆಂಕಿಯೊಳಕ್ಕೆ ಧುಮುಕುವ ಸಂಭವವಿರಲಿಲ್ಲ ಆದರೆ ಸಿಕ್ಕಿನಿಂದ

ಪಾರಾಗಲು ಗತ್ಯಂತರವಿಲ್ಲವೆಂದು ತೋರಿತು ಮತ್ತು ಗಾಂಧಿಜಿಯವರು ಅಂತೆಯೇ ತಮ್ಮ ಪ್ರಕಟಣೆಯನ್ನು ಹೊರಗೆಡಹಿದರು

ಗಾಂಧಿಜಿಯವರೂ ನಾನೂ, ಪ್ರಾಯಶಃ ಭಿನ್ನಕಾರಣಗಳಿಂದ, ಶಾಸನ ಭಂಗವನ್ನು ಹಿಂತೆಗೆಯುವ ಸಮಯ ಬಂದಿಲ್ಲವೆಂದೂ ಅದನ್ನು ಕೆಳಮಟ್ಟದಲ್ಲಾದರೂ ನಡೆಸಿ ಕೊಂಡು ಹೋಗಬೇಕೆಂದೂ ಒಪ್ಪಿದೆವು ಉಳಿದುದೆಂದರೆ ನಾನು ಜನರ ಗಮನವನ್ನು ಸಮತಾವಾದ ಸಿದ್ಧಾಂತಗಳು ಮತ್ತು ಪ್ರಪಂಚ ವಿದ್ಯಮಾನಗಳ ಕಡೆಗೆ ತಿರುಗಿಸಲು ಇಚ್ಛಿಸಿದುದು

ಹಿಂತಿರುಗುವ ದಾರಿಯಲ್ಲಿ ನಾನು ಬೊಂಬಾಯಿಯಲ್ಲಿ ಕೆಲವು ದಿನಗಳನ್ನು ಕಳೆದೆ ಅಲ್ಲಿ ನಾನು ಉದಯಶಂಕರರನ್ನು ಸಂಧಿಸಿ, ಅವರ ನಾಟ್ಯವನ್ನು ನೋಡುವ ಸುಯೋಗ ದೊರೆಯಿತು ಅನಿರೀಕ್ಷಿತವಾದ ಈ ರಸ ಸಮಾರಾಧನೆಯಿಂದ ನಾನು ಬಹಳವಾಗಿ ಆನಂದಪಟ್ಟೆ ನಾಟಕ ಮಂದಿರಗಳು, ಸಂಗೀತ, ಸಿನಿಮ, ಟಾಕೀಸ್, ರೇಡಿಯೋ ಮತ್ತು ಬ್ರಾಡ್‌ಕಾಸ್ಟಿಂಗ್—ಇವುಗಳೆಲ್ಲವೂ ಅನೇಕ ವರ್ಷಗಳಿಂದ ನನಗೆ ಮೀರಿದುವಾಗಿದ್ದುವು ಏಕೆಂದರೆ ನನ್ನ ಬಿಡುಗಡೆಯ ಅವಧಿಗಳಲ್ಲಿ ಕೂಡ ನಾನು ಇತರ ಕಾರ್ಯಕಲಾಪಗಳಲ್ಲಿ ಹೆಚ್ಚು ಮಗ್ನನಾಗಿರುತ್ತಿದ್ದೆ ಇದುವರೆಗೆ ನಾನು ಟಾಕಿಯೊಂದಕ್ಕೆ ಒಮ್ಮೆ ಮಾತ್ರ ಹೋಗಿದ್ದೇನೆ ಮತ್ತು ಸಿನಿಮಾ ನಟನಕ್ಷತ್ರಗಳ ಹಿರಿಯ ಹೆಸರುಗಳು ನನಗೆ ಕೇವಲ ಹೆಸರುಗಳು ಮಾತ್ರವಾಗಿವೆ ವಿಶೇಷವಾಗಿ ನಾನು ನಾಟಕ ಮಂದಿರಗಳಿಗೆ ಹೋಗಿಯೇ ಇಲ್ಲ, ಮತ್ತು ವಿದೇಶಗಳ ಹೊಸ ನಾಟಕಗಳನ್ನು ಕುರಿತು ಓದಿ ಕರುಬಿದ್ದೇನೆ ಉತ್ತರ ಭಾರತದಲ್ಲಿ ನಾನು ನೆರ ಮನೆಯಿಂದ ಹೊರಬಿದ್ದಿದ್ದಾಗ ಕೂಡ, ಉತ್ತಮ ನಾಟಕಾವಲೋಕನಕ್ಕೆ ಸ್ವಲ್ಪ ಅವಕಾಶವೂ ಇರಲಿಲ್ಲ ಏಕೆಂದರೆ ಅಂಥವು ಯಾವುವೂ ನನಗೆ ಅನುಕೂಲವಾಗಿ ಲಭಿಸಲಿಲ್ಲ ಬಂಗಾಳಿ, ಗುಜರಾತಿ ಮತ್ತು ಮರಾಠಿ ನಾಟಕವು ಸ್ವಲ್ಪಮಟ್ಟಿಗೆ ಪ್ರಗತಿಯನ್ನು ಸಾಧಿಸಿದೆಯೆಂದು ನಂಬುತ್ತೇನೆ, ಆದರೆ ಹಿಂದೂಸ್ತಾನಿ ರಂಗ ಭೂಮಿಯು ಹಾಗಿರದೆ ಅತ್ಯಂತ ಒರಟಾಗಿಯೂ ಕಲಾಶೂನ್ಯವಾಗಿಯೂ ಇದೆ ಅಥವಾ (ಏಕೆಂದರೆ ಇತ್ತೀಚಿನ ಬೆಳವಣಿಗೆಗಳು ನನಗೆ ಗೊತ್ತಿಲ್ಲ) ಇತ್ತು ಭಾರ ತೀಯ ಚಲತ್‌ಚಿತ್ರಗಳನೇಕವು, ಮೂಕ ಮತ್ತು ವಾಕ್ ಚಲತ್‌ಚಿತ್ರಗಳೆರಡೂ, ಕಲಾಚಾತುರ್ಯದ ದಿಕ್ಕಿನಲ್ಲಿ ತಪ್ಪು ಮಾಡವೆಂದು ಕೇಳಿದ್ದೇನೆ ಸಾಮಾನ್ಯವಾಗಿ ಅವು ಭಾರತೀಯ ಇತಿಹಾಸ ಅಥವಾ ಪುರಾಣಗಳಿಂದ ಯಾವುದೋ ಒಂದು ವಸ್ತುವನ್ನು ಪಡೆದುಕೊಂಡಿರುವ ಸಂಗೀತ ನಾಟಕಗಳು ಇಲ್ಲವೇ ರಸ, ಕಾವ್ಯಧರ್ಮ ಮತ್ತು ಭದ್ರ ಮುಕ್ತಾಯಗಳ ಸಲುವಾಗಿ ಒರಟೊರಟಾಗಿ ಸಾಗುವ ನಾಟಕಗಳು

ನಗರವಾಸಿಗಳು ಬಹುವಾಗಿ ಮೆಚ್ಚುವುದನ್ನೇ ಅವು ಒದಗಿಸುವುವೆಂದು ನನ್ನ ನಂಬುಗೆ ಈ ಒರಟಾದ ಮತ್ತು ಬೇಸರಿಕೆಯನ್ನುಂಟುಮಾಡುವ ಪ್ರದರ್ಶನವನ್ನೂ

ಜನಪದ ಗೀತ, ನೃತ್ಯ ಮತ್ತು ಗ್ರಾಮ ನಾಟಕ ಸಹ, ಇವುಗಳಲ್ಲಿ ಇನ್ನೂ ಉಳಿದುಬರುತ್ತಿರುವ ಕಲಾ ಚಾತುರ್ಯವನ್ನೂ ಎದುರದುರಿಡುವುದರಿಂದ ವ್ಯತಿರೇಕವು ಸ್ಪಷ್ಟವಾದುದು. ಬಂಗಾಳದಲ್ಲೂ ಗುಜರಾತ್‌ನಲ್ಲೂ ಮತ್ತು ದಕ್ಷಿಣ ಭಾರತದಲ್ಲೂ ಮೂಲತಃ ಆದರೂ ಅರಿವಿಲ್ಲದೆಯೇ ಗ್ರಾಮಾಂತರ ಜನಜಂಗಳಿಯು ಎಷ್ಟುಮಟ್ಟಿಗೆ ಕಲಾವಿದರೆಂಬದನ್ನು ಲಲಿತಾಶ್ಚರ್ಯಚಕಿತನಾಗಿ ಒಬ್ಬನು ಕೆಲವು ವೇಳೆ ಕಂಡುಕೊಳ್ಳುವನು. ಆದರೆ ಮಧ್ಯಮ ವರ್ಗದವರು ಹಾಗಲ್ಲ. ಅವರು ತಮ್ಮ ಬೇರುಗಳನ್ನು ಕಳೆದುಕೊಂಡಂತೆ ತೋರುವರಲ್ಲದೆ ಹಿಡಿದುಕೊಳ್ಳಲು ಅವರಿಗೆ ಸುಸಂಸ್ಕೃತಾಭಿರುಚಿಯ ಸಂಪ್ರದಾಯವಿಲ್ಲ. ಜರ್ಮನಿ ಮತ್ತು ಆಸ್ಟ್ರಿಯಗಳಲ್ಲಿ ಅವರು ರಾಶಿರಾಶಿಯಾಗಿ ಮುದ್ರಿಸುವ ಅಗ್ಗದ ಮತ್ತು ಭಯಾನಕ ಚಿತ್ರಗಳಲ್ಲಿ ಮೈಮರೆಯುವರು. ಮತ್ತು ರವಿವರ್ಮನ ಚಿತ್ರಗಳಿಗಾದರೂ ಕೆಲವು ವೇಳೆ ಏರುವರು. ಹಾರ್ಮೋನಿಯಮ್ಮೂ ಅವರ ಪ್ರಿಯವಾದ ವಾದ್ಯ (ಈ ಭಯಂಕರ ವಾದ್ಯವನ್ನು ಬಹಿಷ್ಕರಿಸುವುದು ಸ್ವರಾಜ್ಯ ಸರಕಾರದ ಮೊಟ್ಟಮೊದಲ ಕೆಲಸಗಳಲ್ಲಿ ಒಂದು ಎಂಬ ಆಶೆಯಿಂದ ಬದುಕಿದ್ದೇನೆ). ಆದರೆ ಎಲ್ಲ ಕಲಾತ್ಮಕ ನಿಯಮಗಳ ಬೇಸರಿಕೆಯನ್ನುಂಟುಮಾಡುವ ಅನೌಚಿತ್ಯವೂ ಉಲ್ಲಂಘನವೂ ಪ್ರಾಯಶಃ ಲಕ್ನೊ ಮತ್ತು ಇತರ ಕಡೆಗಳಲ್ಲಿನ ಬಹುದೊಡ್ಡ ತಾಲ್ಲೂಕುದಾರರ ಮನೆಯಲ್ಲಿ ಕಾಣಬರುವುದು. ವೆಚ್ಚಮಾಡಲು ಹಣವೂ, ಮೆರೆಯಬೇಕೆಂಬ ಆಶೆಯೂ ಅವರಿಗಿರುವುದು, ಮತ್ತು ಅವರು ಹಾಗೆಯೇ ಮಾಡುವರು, ಅವರನ್ನು ಭೇಟಿಮಾಡಲು ಹೋದ ಜನರೇ ಈ ಆಕಾಂಕ್ಷೆಯ ಆಪ್ಯಾಯನದ ನೊಂದ ಪ್ರೇಕ್ಷಕರು.

ಪ್ರತಿಭಾವಂತ ಠಾಕೂರ ಕುಟುಂಬದ ನೇತೃತ್ವದಲ್ಲಿ ಇತ್ತೀಚೆಗೆ ಕಲಾಜಾಗೃತಿಯೊಂದು ನೆರವೇರಿದೆ, ಮತ್ತು ಅದರ ಪ್ರಭಾವ ಮುದ್ರೆಯು ಆಗಲೇ ಇಡೀ ಭಾರತದಲ್ಲಿ ತೋರಿಬರುತ್ತಿದೆ. ನಾಡಿನ ಜನರು ಪ್ರತಿಯೊಂದು ತಿರುವಿನಲ್ಲಿಯೂ, ತಡೆಯಲ್ಪಟ್ಟು, ಪ್ರತಿಷೇಧಿಸಲ್ಪಟ್ಟು, ನಿಗ್ರಹಿಸಲ್ಪಡುತ್ತಿರುವಾಗ ಮತ್ತು ಭಯ ವಾತಾವರಣದಲ್ಲಿ ಬದುಕಿರುವಾಗ ಯಾವ ಕಲೆಯು ತಾನೆ ವಿಸ್ತಾರವಾಗಿ ಬೆಳೆಯ ಬಲ್ಲುದು?

ಬೊಂಬಾಯಿಯಲ್ಲಿ ನಾನು ಅನೇಕ ಸ್ನೇಹಿತರನ್ನೂ ಸಹೋದ್ಯೋಗಿಗಳನ್ನೂ— ಅವರಲ್ಲಿ ಕಲವರು ಈಚೆಗೆ ಸೆರೆಮನೆಯಿಂದ ಹೊರ ಬಿದ್ದವರು—ಸಂದರ್ಶಿಸಿದೆ. ಅಲ್ಲಿ ಸಮತಾವಾದದ ಅಂಶವು ಪ್ರಬಲವಾಗಿದ್ದು ಕಾಂಗ್ರೆಸ್ಸಿನ ಮೇಲಿನ ಶ್ರೇಣಿಗಳಲ್ಲಿ ನಡೆಯುತ್ತಿದ್ದ ಈಚಿನ ಘಟನೆಗಳನ್ನು ಕುರಿತು ಬಹಳ ಆಕ್ಷೇಪಣೆಯಿತ್ತು. ರಾಜಕಾರಣಕ್ಕೆ ದಾರ್ಶನಿಕ ದೃಷ್ಟಿಕ್ಷೇಪವನ್ನು ಸಂಪ್ರಯೋಗಿಸುತ್ತಿದ್ದುದಕ್ಕಾಗಿ ಗಾಂಧಿಜಿಯವರು ತೀಕ್ಷ್ಣವಾಗಿ ಟೀಕಿಸಲ್ಪಟ್ಟರು. ಟೀಕೆಯ ಬಹು ಭಾಗವನ್ನು ನಾನು ಒಪ್ಪಿದೆ. ಆದರೆ ನಾವಿದ್ದ ಅವಸ್ಥಾನದಲ್ಲಿ ಮತ್ತಾವ ಆಯ್ಕೆಯೂ ಆ ವಿಷಯದಲ್ಲಿ ನಮಗಿರಲಿಲ್ಲವೆಂಬೂ ಕೆಲಸವನ್ನು ನಡೆಸಿಕೊಂಡು ಹೋಗಬೇಕಾ

ಗಿತ್ತೆಂದೂ ನಾನು ಸ್ಪಷ್ಟವಾಗಿ ತಿಳಿದಿದ್ದೆ. ಶಾಸನ ಭಂಗವನ್ನು ಉಪಸಂಹರಿಸುವ ಯಾವ ಪ್ರಯತ್ನವೂ ನಮಗ ಉಪಶಾಂತಿಯನ್ನು ತರುತ್ತಿರಲಿಲ್ಲ, ಏಕೆಂದರ ಸರಕಾರದ ಜಯ ಪ್ರಸ್ತಾನವು ಮುಂದುವರಿದು, ಎಲ್ಲ ಪರಿಣಾಮಕಾರಿ ಕಾರ್ಯವೂ ಅನಿವಾರ್ಯವಾಗಿ ಸೆರೆಮನೆಗೇ ಒಯ್ಯುತ್ತಿತ್ತು. ಸರಕಾರದಿಂದ ನಿಗ್ರಹಿಸಲ್ಪಡಬೇಕಾಗಿದ್ದ ಮಜಲಿಗೆ ನಮ್ಮ ರಾಷ್ಟ್ರೀಯ ಚಳವಳಿಯು ಬಂದಿತ್ತು, ಇಲ್ಲದಿದ್ದರೆ ಅದು ತನ್ನ ಮನೋಸಂಕಲ್ಪವನ್ನು ಬ್ರಿಟಿಷ್ ಸರಕಾರದ ಮೇಲೆ ಅಚ್ಚೊತ್ತಿ ಬೆಚ್ಚುವಂತೆ ಮಾಡುವುದು, ಎಂದರೆ, ಅದು ಎಂದಿಗೂ ಅಕ್ರಮಕೂಟವೆಂದು ಸಾರಲ್ಪಡುವ ಮಜಲಿಗೆ ಬಂದಿತೆಂದ ಹಾಗಾಯಿತು, ಮತ್ತು ಚಳವಳಿಯಂದು ಪರಿಗಣಿಸಿದರೆ ಅದು ಶಾಸನ ಭಂಗವನ್ನು ಉಪಸಂಹರಿಸಿದರೂ ಹಿಂಜರಿಯುವ ಹಾಗಿರಲಿಲ್ಲ. ಶಾಸನ ಭಂಗದ ಮುನ್ನಡೆಯು ಕಾರ್ಯತಃ ಯಾವ ವ್ಯತ್ಯಾಸವನ್ನೂ ಮಾಡಲಿಲ್ಲ, ಆದರೆ ಹುರುಪಿನಿಂದ ಕೂಡಿದ ನೈತಿಕ ಪ್ರತಿಭಟನೆಯ ಕಾರ್ಯವದಾಗಿತ್ತು. ಹೋರಾಟವನ್ನು ತಾತ್ಕಾಲಿಕವಾಗಿ ನಿಲ್ಲಿಸಿ ನೀತಿ ಪತನಕ್ಕೆಡೆಯಾದಾಗ ಹೊಸ ಭಾವನೆಗಳನ್ನು ಹರಡುವುದಕ್ಕಿಂತ ಹೋರಾಟದ ಕಾಲದಲ್ಲಿ ಹೊಸ ಭಾವನೆಗಳನ್ನು ಹರಡುವುದು ಸುಲಭವಾಗಿತ್ತು. ಹೋರಾಟಕ್ಕೆ ಇದ್ದ ಒಂದೇ ಪರ್ಯಾಂತರವೆಂದರ ಬ್ರಿಟಿಷ್ ಅಧಿಕಾರಕ್ಕೆ ರಾಜಿಯ ಮನೋಭಾವ ಪ್ರಕಟಣೆ ಮತ್ತು ಶಾಸನ ಸಭೆಗಳಲ್ಲಿ ರಚನಾತ್ಮಕ ಕಾರ್ಯ.

ಅದೊಂದು ಕಷ್ಟವಾದ ಅವಸ್ಥಾನವಾಗಿತ್ತು. ಮತ್ತು ಆಯ್ಕೆಯು ಸುಲಭವಾದುದಾಗಿರಲಿಲ್ಲ. ನನ್ನ ಸಹೋದ್ಯೋಗಿಗಳ ಒಳತೋಟಿಗಳನ್ನು, ನಾನು ಮೆಚ್ಚಿದೆ, ಏಕೆಂದರೆ ನಾನು ಅವುಗಳನ್ನು ಎದುರಿಸಬೇಕಾಗಿತ್ತು. ಆದರ ನಾನು ಭಾರತದ ಇತರ ಕಡೆಗಳಲ್ಲಿ ಕಂಡಂತೆ ಅಲ್ಲಿಯೂ ಉತ್ತುಂಗ ಸಮತಾವಾದದ ಸಿದ್ಧಾಂತವನ್ನು ಕಾರ್ಯ ದ್ವೇಷಕ್ಕೆ ಆಶ್ರಯವನ್ನಾಗಿ ಮಾಡಬಯಸುತ್ತಿದ್ದ ಕೆಲವು ಜನರನ್ನು ಕಂಡೆ. ತಾವು ಮಾತ್ರ ಎಳ್ಳಷ್ಟೂ ದುಡಿಯದೆ, ಹೋರಾಟದ ನೂಕುನುಗ್ಗಲಿನಲ್ಲಿ ಹೊರೆಯನ್ನು ಸರ್ವ ಕಾಲಗಳಲ್ಲಿಯೂ ಹೊತ್ತಿರುವ ಇತರರನ್ನು ಪ್ರತೀಕಾರಿಗಳೆಂದು ಟೀಕಿಸುವ ಜನರನ್ನು ಕಂಡರೆ ಸ್ವಲ್ಪ ಜುಗುಪ್ಸೆಯುಂಟಾಗುತ್ತಿತ್ತು. ಈ ಕೋಣೆಯ ಸಮತಾವಾದಿಗಳು ಗಾಂಧಿಜಿಯವರು ಪ್ರಧಾನ ಪ್ರತೀಕಾರಿಗಳೆಂದು ಅವರ ಮೇಲೆ ವಿಶೇಷವಾಗಿ ಕಟುವಾಗಿದ್ದು, ತರ್ಕಶಾಸ್ತ್ರದ ದೃಷ್ಟಿಯಿಂದ ಪರಿಪೂರ್ಣವಾಗುವ ವಾದಾನುವಾದಗಳನ್ನು ಮುಂಡಿಸುವರು, ಆದರೆ ಈ 'ಪ್ರತೀಕಾರಿ'ಯು ಭಾರತವನ್ನು ಬಲ್ಲರು. ಭಾರತವನ್ನು ಅರಿತಿರುವರು, ಪ್ರಾಯಿಕವಾಗಿ ಬೇಸಾಯಗಾರ ಭಾರತವೇ ತಾವಾಗಿರುವರು. ಯಾವ ಕ್ರಾಂತಿಕಾರನೆಂಬ ಹೆಸರಿನವನೂ ಮಾಡಿರದಂತೆ ಭಾರತವನ್ನು ಅಲ್ಲಾಡಿಸಿರುವರು ಎಂಬ ಸಣ್ಣ ಸತ್ಯಾಂಶವು ಸ್ಥಿರವಾಗಿದೆ. ಅವರ ಇತ್ತೀಚಿನ ಹರಿಜನ ಕಾರ್ಯಕಲಾಪಗಳು ನಯವಾಗಿ ಆದರೆ ಅಪ್ರತಿಹತವಾಗಿ ವೈದಿಕ ಹಿಂದೂ ಮತಕ್ಕೆ ಹಾನಿ ತಂದು ಅದನ್ನು ಬುಡಮಟ್ಟ ಅಲ್ಲಾಡಿಸಿಬಿಟ್ಟಿದೆ. ವೈದಿಕ ಸಮೂಹವೆಲ್ಲ ಅವರಿಗೆ ವಿರುದ್ಧವಾಗಿ ಸಾಲುಗಟ್ಟಿ ನಿಂತಿರುವರು ಮತ್ತು

ಗಾಂಧಿಜಿಯವರು ಅವರನ್ನು ಸರ್ವವಿಧದ ನಯ ಮತ್ತು ಅನುನಯಗಳಿಂದ ಕಾಣು ತ್ತಿದ್ದರೂ ವೈದಿಕರು ಅವರನ್ನು ತಮ್ಮ ಅತ್ಯಂತ ಅಪಾಯಕರ ಶತ್ರುವೆಂದು ಪರಿ ಗಣಿಸಿದ್ದಾರೆ ಅವರು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ, ನೀರಿನ ಮೇಲಿನ ಅಲೆ ಗಳಂತೆ ಹರಡುವ ಪ್ರಚಂಡ ಶಕ್ತಿಗಳನ್ನು ಬೀರಿ ಲಕ್ಷಾಂತರ ಜೀವಿಗಳ ಮೇಲೆ ಪರಿ ಣಾಮವನ್ನುಂಟುಮಾಡುವ ಜಾಣ್ಮೆಯನ್ನು ಹೊಂದಿದ್ದಾರೆ ಪ್ರತೀಕಾರಿಯಾಗಲಿ ಇಲ್ಲವೇ ಕ್ರಾಂತಿಕಾರರಾಗಲಿ, ಅವರು ಭಾರತದ ಮುಖಭಂಗಿಯನ್ನು ಮಾರ್ಪಡಿಸಿ, ಹಲ್ಲುಕಿರಿವ ಮತ್ತು ನೀತಿಗೆಟ್ಟ ಜನಕ್ಕೆ ಹೆಮ್ಮೆಯನ್ನೂ ಶೀಲವನ್ನೂ ಇತ್ತು, ಜನ ಜಂಗುಳಿಯಲ್ಲಿ ಪೌರುಷವನ್ನೂ ಜಾಗೃತಿಯನ್ನೂ ಕೆರಳಿಸಿ ಕಟ್ಟಿ ಭಾರತೀಯ ಸಮಸ್ಯೆ ಯನ್ನು ವಿಶ್ವಸಮಸ್ಯೆಯನ್ನಾಗಿ ಮಾಡಿದ್ದಾರೆ ಅಹಿಂಸಾತ್ಮಕ ಅಸಹಕಾರ ಅಥವಾ ಶಾಸನ ನಿರೋಧವಿಧಾನವು, ಅದರ ಗೊತ್ತು ಗುರಿ ಮತ್ತು ಅದರಲ್ಲಿರುವ ತಾತ್ವಿಕ ಸಿಕ್ಕುಗಳನ್ನು ಬಿಟ್ಟರೆ, ಭಾರತಕ್ಕೂ ಪ್ರಪಂಚಕ್ಕೂ ಅವರ ಅಪೂರ್ವವೂ ವೀರ್ಯವತ್ತೂ ಆದ ಕಾಣಿಕೆಯಾಗಿದೆ ಭಾರತೀಯ ವಿದ್ಯಮಾನಗಳಿಗೆ ಅದು ವಿಚಿತ್ರವಾಗಿ ಹೊಂದಿ ಕೊಳ್ಳುವುದೆಂಬುದರಲ್ಲಿ ಯಾವ ಸಂಶಯವೂ ಇಲ್ಲ

ಪ್ರಾಮಾಣಿಕ ವಿಮರ್ಶೆಯನ್ನು ಪ್ರೋತ್ಸಾಹಿಸಿ ನಮ್ಮ ಸಮಸ್ಯೆಗಳನ್ನು ಕುರಿತು ಆದಷ್ಟು ಮಟ್ಟಿಗೆ ಹೆಚ್ಚಾಗಿ ಸಾರ್ವಜನಿಕ ಚರ್ಚೆಗಳನ್ನು ಮಾಡಬೇಕಾದುದು ನ್ಯಾಯವೆಂದು ನಾನು ಭಾವಿಸುತ್ತೇನೆ ಈ ಚರ್ಚೆಯನ್ನು ಸ್ವಲ್ಪಮಟ್ಟಿಗೆ ಗಾಂಧಿಜಿ ಯವರ ಪ್ರಬಲವಾದ ಅವಸ್ಥಾನವು ತಡೆಗಟ್ಟಿರುವುದು ದುರ್ದೈವ. ಅವರನ್ನು ನಂಬಿ ತೀರ್ಮಾನವನ್ನು ಅವರಿಗೇ ಬಿಡುವ ಚಟವು ಯಾವಾಗಲೂ ಇದ್ದೇ ಇರುವುದು ಸ್ಪಷ್ಟವಾಗಿ ಇದು ತಪ್ಪು ಗೊತ್ತುಗುರಿಗಳು ಮತ್ತು ಕಾರ್ಯವಿಧಾನಗಳ ವಿವೇಕ ಪೂರ್ಣಸ್ವೀಕಾರ, ಅಂಧ ಆಜ್ಞಾನುವರ್ತನವನ್ನು ಆಶ್ರಯಿಸದೆ ಅವುಗಳನ್ನೇ ಬುನಾದಿ ಯಾಗುಳ್ಳ ಸಹಕಾರ ಮತ್ತು ಶಿಸ್ತು, ಇವುಗಳಿಂದ ಮಾತ್ರವೇ ರಾಷ್ಟ್ರವು ಏಳಿಗೆಹೊಂದ ಬಲ್ಲುದು ಯಾವನು ಎಷ್ಟೇ ಹಿರಿಯವನಾಗಿರಲಿ, ಟೀಕೆಗೆ ಮೀರಿದವನಾಗಿರ ಬಾರದು ಆದರೆ ಯಾವಾಗ ಟೀಕೆಯು ಕಾರ್ಯದ್ವೇಷಕ್ಕೆ ಕೇವಲ ಆಶ್ರಯಸ್ಥಾನ ವಾಗುವುದೇ ಅದರಲ್ಲಿ ಏನೋ ತಪ್ಪಿರಬೇಕು ಸಮತಾವಾದಿಗಳು ಈ ತೆರನಾದ ವಿಷಯದಲ್ಲಿ ಉದ್ಯುಕ್ತರಾಗುವುದೆಂದರೆ ಸಾರ್ವಜನಿಕರಿಂದ ಖಂಡನೆಯನ್ನು ಆಹ್ವಾನಿ ಸುವುದು, ಏಕೆಂದರೆ ಜನಜಂಗುಳಿಯು ಕಾರ್ಯಗಳಿಂದ ತೀರ್ಮಾನ ಮಾಡುವುದು "ಯಾವನು ಭವಿಷ್ಯತ್ತಿನ ನಯಗೆಲಸಗಳನ್ನು ಕುರಿತ ಕನಸಿನ ಹೆಸರಿನಲ್ಲಿ ಇಂದಿನ ಮೊನೆಗೆಲಸಗಳನ್ನು ನಿರಾಕರಿಸುವನೋ, ಅವನು ಅಮುಗವಾದಿಯಾಗುತ್ತಾನೆ ಎಂದರೆ ಒಬ್ಬನು ನೈಜಜೀವನದಲ್ಲಿ ಇಂದು ನಡೆಯುತ್ತಿರುವ ಬೆಳವಣಿಗೆಗಳನ್ನು ತನಗೆ ಆಧಾರವಾಗಿಟ್ಟುಕೊಳ್ಳುವುದರಲ್ಲಿ ವಿಫಲನಾಗುವುದು, ಕನಸುಗಳ ಹೆಸರಿನಲ್ಲಿ ಅವು ಗಳನ್ನು ಕುರಿತು ಅನಾಸಕ್ತವಾಗುವುದು, ಎಂದು ತತ್ವತಃ ಅರ್ಥವಾಗುವುದು" ಎಂಬುದಾಗಿ ಲೆನಿನ್‌ರವರು ಹೇಳಿದ್ದಾರೆ

ಕೈಗಾರಿಕೆಯ ಶ್ರಮಜೀವಿಗಳನ್ನು ಕುರಿತು ಬರೆದಿರುವ ಸಾಹಿತ್ಯದಿಂದಲೇ ಭಾರತದಲ್ಲಿ ಸಮತಾವಾದಿಗಳೂ ಕಮ್ಯೂನಿಸ್ಟರೂ ಬಹುತರ ಶಿಕ್ಷಿತರಾಗಿದ್ದಾರೆ. ಬೊಂಬಾಯಿ ಅಥವಾ ಕಲ್ಕತ್ತೆಯ ಹತ್ತಿರದಂಥ ಕೆಲವು ಆಯ್ದ ಕ್ಷೇತ್ರಗಳಲ್ಲಿ ಕಾರ್ಖಾನೆ ಕೂಲಿಗಾರರು ಹೆಚ್ಚಾಗಿದ್ದಾರೆ. ಆದರೆ ಮಿಕ್ಕ ಭಾರತವು ಬೇಸಾಯಗಾರವಾಗಿದೆ, ಭಾರತೀಯ ಸಮಸ್ಯೆಯನ್ನು ಕೈಗಾರಿಕೆ ಕೂಲಿಗಾರರ ದೃಷ್ಟಿಯಿಂದ ಪರಿಹಾರಮಾಡಲಾಗುವುದಿಲ್ಲ ಅಥವಾ ಪರಿಣಾಮಕಾರಿಯಾಗಿ ವಿವೇಚಿಸಲಾಗುವುದಿಲ್ಲ. ರಾಷ್ಟ್ರೀಯತಾವಾದ ಮತ್ತು ಗ್ರಾಮಾಂತರ ಮಿತವ್ಯಯಗಳು ಅಧಿಕರಿಸುವ ವಿವೇಚನಾಂಶಗಳು, ಐರೋಪ್ಯ ಸಮತಾವಾದವು ಇವುಗಳನ್ನು ಪರಿಗಣಿಸುವುದು ವಿರಳ. ರಷ್ಯದ ಯುದ್ಧ ಪೂರ್ವ ವಿದ್ಯಮಾನಗಳು ಭಾರತಕ್ಕೆ ಹೆಚ್ಚು ನಿಕಟ ಸಂಬಂಧವನ್ನು ಪಡೆದಿದ್ದುವು, ಆದರೆ ಅಲ್ಲಿ ಕೂಡ ಅತ್ಯಂತ ಅಸಾಮಾನ್ಯವೂ ಅಪೂರ್ವವೂ ಆದ ಪ್ರಸಕ್ತಿಗಳು ನಡೆದುವು, ಮತ್ತು ಇವುಗಳ ಪುನರಾವರ್ತನೆಯನ್ನು ಮತ್ತೆಲ್ಲಿಯಾದರೂ ನಿರೀಕ್ಷಿಸುವುದು ಮೂಢತನ. ಕಮ್ಯೂನಿಸಮ್ಮಿನ ವೇದಾಂತವು ಯಾವುದಾದರೊಂದು ದೇಶದ ಸದ್ಯಃ ಪರಿಸ್ಥಿತಿಗಳನ್ನು ಅರ್ಥಮಾಡಿಕೊಂಡು ವಿಭಜಿಸಲು ನೆರವಾಗುವುದು ಮತ್ತು ಭವಿಷತ್ ಪ್ರಗತಿಗೆ ಮಾರ್ಗದರ್ಶಿಯಾಗುವುದು, ಎಂದು ನಾನು ನಂಬುತ್ತೇನೆ. ಆದರೆ ಆ ವೇದಾಂತವನ್ನು ಕುರುಡುತನದಿಂದ ಮತ್ತು ಸತ್ಯಾಂಶ ವಿದ್ಯಮಾನಗಳನ್ನು ಕುರಿತು ಲಕ್ಷ್ಯವಿಲ್ಲದೆ ಸುಪ್ರಯೋಗಿಸುವುದೆಂದರೆ ಅದಕ್ಕೆ ಅಪಚಾರ ಅನ್ಯಾಯಗಳನ್ನು ಮಾಡಿದಂತೆ.

ಹೇಗೆಯೇ ಆದರೂ ಜೀವನವು ಒಂದು ತೊಡಕುತೊಡಕಾದ ಪ್ರಸಂಗ. ಜೀವನದ ಸಂಘರ್ಷಣೆಗಳು ಮತ್ತು ಅಪಲಾಪಗಳು ಒಬ್ಬನಲ್ಲಿ ಒಂದೊಂದು ವೇಳೆ ಸ್ವಲ್ಪಮಟ್ಟಿನ ನಿರಾಶೆಯನ್ನು ಹುಟ್ಟಿಸುತ್ತವೆ. ಜನಗಳು ಭಿನ್ನಾಭಿಪ್ರಾಯ ಪಡುವುದಾಗಲಿ ಅಥವಾ ಸಮಸ್ಯೆಗಳಿಗೆ ಸಮಾನ ಪ್ರಸ್ಥಾನವನ್ನು ಹೊಂದಿರುವ ಸಂಗಡಿಗರು ಸಹ ಭಿನ್ನವಾದ ತೀರ್ಮಾನಗಳಿಗೆ ಬರುವುದಾಗಲಿ ಆಶ್ಚರ್ಯವಲ್ಲ. ಆದರೆ ತನ್ನ ದೌರ್ಬಲ್ಯವನ್ನು ಕೇವಲ ನಾದಾತ್ಮಕ ವಾಗ್ಘಂಸನಗಳಲ್ಲೂ ಉತ್ತಮ ಧ್ಯೇಯ ಸೂತ್ರಗಳಲ್ಲೂ ಮಾಂಜಲು ಪ್ರಯತ್ನಿಸುವವನು ಅನುಮಾನಕ್ಕೆ ಗುರಿಯಾಗುತ್ತಾನೆ. ಸರಕಾರಕ್ಕೆ ಮುಚ್ಚಳಿಕೆಗಳು ಮತ್ತು ಭರವಸೆಗಳನ್ನು ಕೊಟ್ಟೋ ಅಥವಾ ಇತರ ಅನುಮಾನಾಸ್ಪದ ನಡತೆಗಳಿಂದಲೋ ಸೆರೆಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿ ಇತರರನ್ನು ಕುರಿತು ಟೀಕಿಸುವ ಗಂಡು ತಾನು ಆಧರಿಸುವ ಪಕ್ಷಕ್ಕೆ ಹಾನಿಯನ್ನು ತರುವ ಸಂಭವವಿದೆ.

ಬೊಂಬಾಯಿಯು ವಿಶಾಲ ವಿಶ್ವಾಭಿರಾಮ ನಗರವಾಗಿರುವುದರಿಂದ ಬಗೆ ಬಗೆಯ ಜನಗಳನ್ನು ಒಳಗೊಂಡಿತ್ತು. ಆದರೂ ಪ್ರಮುಖ ನಾಗರಿಕರೊಬ್ಬರು ತಮ್ಮ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ದೃಷ್ಟಿ ಕ್ಷೇಪದಲ್ಲಿ ಒಂದು ವಿಚಿತ್ರ ವ್ಯಾಪಕತ್ವವನ್ನು ಪ್ರದರ್ಶಿಸಿದರು. ಕಾರ್ಮಿಕ ಮುಂದಾಳುಗಳಾಗಿದ್ದುದರಿಂದ

ಅವರು ಸಮತಾವಾದಿಗಳು, ರಾಜಕಾರಣದಲ್ಲಿ ಸಾಧಾರಣವಾಗಿ ತಮ್ಮನ್ನು ತಾವು ಪ್ರಜಾಸತ್ತಾವಾದಿ ಎಂದು ಕರೆದುಕೊಳ್ಳುತ್ತಿದ್ದರು, ಅವರು ಹಿಂದೂ ಸಭೆಯ ಅಭಿಮಾನಕ್ಕೆ ಪಾತ್ರರಾಗಿದ್ದು ಹಳೆಯ ಮತೀಯ ಮತ್ತು ಸಾಮಾಜಿಕ ಸಂಪ್ರದಾಯಗಳನ್ನು ರಕ್ಷಿಸುವುದಾಗಿಯೂ ಶಾಸನ ಸಭೆಯು ತಲೆಹಾಕುವುದನ್ನು ತಗ್ಗಿಸುವುದಾಗಿಯೂ ವಾಗ್ದಾನ ಮಾಡಿದರು ಚುನಾವಣೆಯ ಕಾಲದಲ್ಲಿ ಪ್ರಾಚೀನ ರಹಸ್ಯಗಳ ಪೀಠದ ಬಳಿಯ ಉತ್ತುಂಗ ಪುರೋಹಿತರಾದ ಸನಾತನಿಗಳ ಉಮೇದುವಾರರಾದರು ಈ ವಿವಿಧ ವಿನೋದ ಜೀವನ ಯಾತ್ರೆಯು ಸಾಕಷ್ಟು ಆಯಾಸಕರವಾಗಿಲ್ಲದಿದ್ದುದರಿಂದ ಅವರು ಉಳಿದ ಶಕ್ತಿಯನ್ನು, ಕಾಂಗ್ರೆಸ್ಸನ್ನು ಟೀಕಿಸುವುದರಲ್ಲಿಯೂ ಗಾಂಧಿಜಿಯವರು ಪ್ರತೀಕಾರಿಯೆಂದು ಖಂಡಿಸುವುದರಲ್ಲಿಯೂ ವಿನಿಯೋಗಿಸಿದರು ಇನ್ನು ಕೆಲವು ಮಂದಿಯ ಸಹಕಾರದೊಡನೆ ಅವರು ಕಾಂಗ್ರೆಸ್ ಪ್ರಜಾಸತ್ತಾತ್ಮಕ ಸಂಗಡವೊಂದನ್ನು ಆರಂಭಿಸಿದರು ಪ್ರಾಸಂಗಿಕವಾಗಿ ಅದಕ್ಕೂ ಪ್ರಜಾಸತ್ತೆಗೂ ಯಾವ ಸಂಬಂಧವೂ ಇರಲಿಲ್ಲ ಮತ್ತು ಅದು ಆ ಮಹಿಮಾನ್ವಿತ ಸಂಸ್ಥೆಯ ಮೇಲ ಬೀಳುತ್ತಿದ್ದಮಟ್ಟಿಗೆ ಅದಕ್ಕೂ ಕಾಂಗ್ರೆಸ್ಸಿಗೂ ಇದ್ದ ಸಂಬಂಧ ನೂತನ ಕ್ಷೇತ್ರಗಳನ್ನು ಅರಸುತ್ತ, ಅವರು ಅನಂತರ ಜಿನೀವ ಕೂಲಿಕಾರ ಸಮ್ಮೇಳನದಲ್ಲಿ ಕೂಲಿಕಾರ ನಿಯೋಗಿಯಾಗಿ ಭಾಗವಹಿಸಿದರು ಆಂಗ್ಲ ಮಾದರಿಯ 'ರಾಷ್ಟ್ರೀಯ' ಸರಕಾರವೊಂದರ ಪ್ರಧಾನ ಮಂತ್ರಿತ್ವಕ್ಕೆ ಅವರು ಅರ್ಹತೆಯನ್ನು ಪಡೆದುಕೊಳ್ಳುತ್ತಿದ್ದರೆಂದು ಬಹುತರವಾಗಿ ಯೋಚಿಸಬಹುದು

ಇಷ್ಟೊಂದು ವಿವಿಧವಾದ ದೃಷ್ಟಿಕ್ಷೇಪ ಮತ್ತು ಕಾರ್ಯಕಲಾಪಗಳ ಅನುಕೂಲ್ಯವನ್ನು ಕೆಲವರು ಮಾತ್ರ ಪಡೆಯಲು ಸಾಧ್ಯ ಆದರೂ ಕಾಂಗ್ರೆಸ್ಸಿನ ಟೀಕೆಗಾರರಲ್ಲನೇಕರು ವಿವಿಧ ಕ್ಷೇತ್ರಗಳಲ್ಲಿ ಪ್ರಯೋಗ ಪರೀಕ್ಷೆಗಳನ್ನು ನಡೆಸಿದವರೂ ಅನೇಕ ರಂಗಗಳಲ್ಲಿ ಕುಣಿದವರೂ ಆಗಿದ್ದರು ಇವರಲ್ಲಿ ಕೆಲವರು ತಮ್ಮನ್ನು ತಾವು ಸಮತಾವಾದಿಗಳೆಂದು ಕರದುಕೊಂಡು ಕೆಟ್ಟ ಹೆಸರನ್ನು ತಂದರು

## ೫೧

# ಉದಾರವಾದ ದೃಷ್ಟಿಕ್ಷೇಪ

ಗಾಂಧಿಜಿಯವರನ್ನು ಸಂದರ್ಶನಮಾಡಲು ಪುಣೆಗೆ ನಾನು ಹೋಗಿದ್ದಾಗ್ಯೆ, ಅವರೊಡನೆ ನಾನು ಒಂದು ಸಾಯಂಕಾಲ ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಭವನಕ್ಕೆ ಹೋಗಿದ್ದೆ ಸೊಸೈಟಿಯ ಕೆಲವು ಸದಸ್ಯರು ಅವರನ್ನು ಒಂದು ಘಂಟೆಯ ಹೊತ್ತೋ ಏನೋ, ರಾಜಕೀಯ ವಿಚಾರಗಳನ್ನು ಕುರಿತು ಪ್ರಶ್ನೆ ಮಾಡಿದರು ಅವರು ಅವಕ್ಕೆ ಉತ್ತರವಿತ್ತರು ಸೊಸೈಟಿಯ ಅಧ್ಯಕ್ಷರು ಶ್ರೀ॥ ಶ್ರೀನಿವಾಸ ಶಾಸ್ತ್ರಿಗಳು ಅಲ್ಲಿರಲಿಲ್ಲ ಪ್ರಾಯಶಃ ಇತರ ಸದಸ್ಯರಲ್ಲೆಲ್ಲ ಅತ್ಯಂತ ದಕ್ಷರಾದ ಪಂಡಿತ ಹೃದಯನಾಥ ಕುನ್ಜ್ರುರವರೂ ಇರಲಿಲ್ಲ ಆದರೆ ಕೆಲವು ಹಿರಿಯ ಸದಸ್ಯರು ಹಾಜರಿದ್ದರು ಆ ಸಂದರ್ಭದಲ್ಲಿ ಅಲ್ಲಿದ್ದ ನಾವು ಕಲವರು, ವರ್ಧಿಸುತ್ತಿದ್ದ ಅತಿಶಯವಾದ ಆಶ್ಚರ್ಯದಿಂದ ಆಲಿಸಿದೆವು ಏಕೆಂದರೆ ತೀರ ಕ್ಷುಲ್ಲಕವಾದ ಪ್ರಸಕ್ತಿಗಳನ್ನು ಕುರಿತ ಪ್ರಶ್ನೆಗಳವು. ಪ್ರಾಯಿಕವಾಗಿ ಅವು ಹಿಂದೆ ಗಾಂಧಿಜಿಯವರು ವೈಸ್‌ರಾಯರನ್ನು ಭೇಟಿಗಾಗಿ ಬೇಡಿದ ಪ್ರಾರ್ಥನೆ ಮತ್ತು ವೈಸ್‌ರಾಯರ ನಿರಾಕರಣೆಯನ್ನು ಕುರಿತಿದ್ದುವು ಸಮಸ್ಯೆಗಳಿಂದ ತುಂಬಿಹೋಗಿದ್ದ ಈ ಪ್ರಪಂಚದಲ್ಲಿ, ಅದರಲ್ಲಿಯೂ ತಮ್ಮ ಸ್ವಂತ ದೇಶವೇ ಸ್ವಾತಂತ್ರ್ಯಕ್ಕಾಗಿ ಕಠಿಣವಾದ ಸಂಗ್ರಾಮವನ್ನು ನಡೆಸುತ್ತ ಹೋಗುತ್ತಿದ್ದಾಗ ಮತ್ತು ನೂರಾರು ಸಂಘಟಿತ ಸಂಸ್ಥೆಗಳು ರಾಜರಕ್ಷಣಬಾಹಿರವೆಂದು ಪರಿಗಣಿಸಲ್ಪಡುತ್ತಿದ್ದಾಗ, ಅವರು ಆಲೋಚಿಸಬಹುದಾದ ಮುಖ್ಯ ವಿಷಯವು ಇದು ಮಾತ್ರವೆ? ವಿಶಾಲವ್ಯಾಪ್ತ ನಿರುದ್ಯೋಗಕ್ಕೆ ಕಾರಣವಾದ ಕ್ಷೇತ್ರ ವಿಷಯಿಕವಾದ ವಿಷಮಾವಸ್ಥೆಯೂ ಕೈಗಾರಿಕೆಯ ಅಳವಳವೂ ಇದ್ದುವು ಬಂಗಾಳದಲ್ಲೂ ಗಡಿನಾಡಿನಲ್ಲೂ ಭಾರತದ ಇತರ ಪ್ರಾಂತಗಳಲ್ಲೂ ಭಯಂಕರ ಪ್ರಸಕ್ತಿಗಳು—ಆಲೋಚನೆ, ಮಾತು ಬರವಣಿಗೆ ಮತ್ತು ನೆರವಿಗಳ ನಿಗ್ರಹ, ಮತ್ತು ಇತರ ಅನೇಕ ವಿಧದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮಸ್ಯೆಗಳು ಕಣ್ಣೆದುರಿಗಿದ್ದುವು ಆದರೆ ಪ್ರಶ್ನೆಗಳು ಅಮುಖ್ಯವಾದ ಪ್ರಸಕ್ತಿಗಳಿಗೂ ಗಾಂಧಿಜಿಯವರ ಸನ್ನಾಹದಿಂದ ವೈಸ್‌ರಾಯರಲ್ಲೂ ಇಂಡಿಯಾ ಸರಕಾರದಲ್ಲೂ ಉಂಟಾಗಬಹುದಾದ ಪ್ರತೀಕಾರಗಳಿಗೂ ಮಾತ್ರ ಅನ್ವಯಿಸಿದ್ದುವು

ಯಾವ ಮರದ ನಿವಾಸಿಗಳು ಪರಿಣಾಮಕಾರಿಯಾದ ಸಂಪರ್ಕದಿಂದಲೂ ಬಾಹ್ಯ ಪ್ರಪಂಚದಿಂದಲೂ ಬಹಳ ಹಿಂದೆಯೇ ಬೇರ್ಪಡಿಸಲ್ಪಟ್ಟಿದ್ದರೋ ಆ ಮರವನ್ನು ಒಳ ಹೊಕ್ಕಿದ್ದಂತೆ ನನ್ನಲ್ಲಿ ಗಾಢಭಾವನೆಯಿತ್ತು. ಆದರೂ ಆ ನಮ್ಮ ಗೆಳೆ

ಯರು ಚತುರರೂ ನಿಪುಣರೂ ಆದ ರಾಜಕಾರಣಪಟುಗಳೂ ದೀರ್ಘವಾದ ಸಾರ್ವಜನಿಕ ಸೇವೆ ಮತ್ತು ತ್ಯಾಗಗಳಿಂದ ಕೂಡಿದ ದಕ್ಷರೂ ಆಗಿದ್ದರು. ಇತರ ಕೆಲವರೊಡನೆ ಅವರು ಉದಾರವಾದಿ ಪಕ್ಷದ ನಿಜವಾದ ಬೆಂಬಲವಾಗಿದ್ದರು. ಆ ಪಕ್ಷದ ಮಿಕ್ಕ ಭಾಗವು ಅಸ್ಫುಟವಾದ ಆಕಾರವಿಲ್ಲದ ಜನಶ್ರೇಣಿಯಿಂದ ಕೂಡಿತ್ತು. ಮುಖ್ಯವಾಗಿ, ಬೊಂಬಾಯಿ ಮತ್ತು ಮದರಾಸುಗಳಲ್ಲಿ ಸರಕಾರಿ ಅಧಿಕಾರಿಗಳಿಂದ ಇವರಲ್ಲಿ ಕೆಲವ ರನ್ನು ವ್ಯಕ್ತೀಕರಿಸಲು ಅಸಾಧ್ಯವಾಗಿತ್ತು.

ನಾಡೊಂದು ಹಾಕುವ ಪ್ರಶ್ನಮಾಲೆಯು ಆ ನಾಡಿನ ರಾಜಕೀಯ ಪ್ರಗತಿಯ ಪರಿಮಾಣವನ್ನು ಕುರಿತದ್ದಾಗಿರುವುದು. ಅನೇಕವೇಳೆ ಆ ನಾಡಿನ ವಿಫಲತೆಗೆ ಕಾರಣ ವೆಂದರೆ ಅದು ತನಗೆ ತಾನೇ ಸಚೂಟಿ ಪ್ರಶ್ನೆಯನ್ನು ಹಾಕಿಕೊಂಡಿರಲಿಲ್ಲವೆಂಬುದು. ಸ್ಥಾನಗಳ ಕೋಮುವಾರು ವಿಂಗಡಣೆಗಾಗಿ ನಾವು ನಮ್ಮ ಕಾಲವನ್ನೂ ಶಕ್ತಿಯನ್ನೂ ಗುಣಗಳನ್ನೂ ಅಪವ್ಯಯ ಮಾಡುತ್ತಿರುವುದು, ಅಥವಾ ಕೋಮುವಾರು ಒಪ್ಪಂದಕ್ಕ ನುಗುಣವಾಗಿ ನಾವು ಪಕ್ಷಗಳನ್ನು ಸ್ಥಾಪಿಸಿ, ನಿಜವಾದ ಸತ್ವಯುಕ್ತವಾದ ಸಮಸ್ಯೆಗಳನ್ನು ದೂರೀಕರಿಸಿ, ಅದಕ್ಕಾಗಿ ಬಂಜೆ ಮಾತುಕತೆಗಳನ್ನು ನಡೆಸಿಕೊಂಡು ಹೋಗುವುದು, ಇವೆಲ್ಲ ನಮ್ಮ ರಾಜಕೀಯ ಮುಖಹೇಡಿತನದ ಪರಿಮಾಣವನ್ನು ತೋರಿಸುವುವು. ಇದೇ ರೀತಿಯಲ್ಲಿ, ಅಂದು, ಸರ್ವೆಂಟ್ಸ್ ಆಫ್ ಇಂಡಿಯಾ ಸೊಸೈಟಿಯ ಭವನದಲ್ಲಿ ಗಾಂಧಿಜಿಯವರಿಗೆ ಹಾಕಿದ ಪ್ರಶ್ನೆಗಳು ಆ ಸೊಸೈಟಿಯ ಮತ್ತು ಉದಾರವಾದಿ ಪಕ್ಷದ ವಿಲಕ್ಷಣ ಮಾನಸಿಕ ಪರಿಸ್ಥಿತಿಯನ್ನು ಕನ್ನಡಿಸಿದುವು. ಅವರಿಗೆ ಯಾವ ರಾಜ ಕೀಯ ಅಥವಾ ಆರ್ಥಿಕ ಧ್ಯೇಯಸೂತ್ರಗಳಾಗಲಿ, ಯಾವ ವಿಶಾಲ ದೃಷ್ಟಿಕ್ಷೇಪ ವಾಗಲಿ ಇಲ್ಲವೆಂದು ತೋರಿತು, ಮತ್ತು ಅವರ ರಾಜಕಾರಣವು ಕೊರಡಿಯ ಅಥವಾ ಒಡ್ಡೋಲಗದ ರೀತಿಯದು—ಶ್ರೇಷ್ಠ ಅಧಿಕಾರಿಗಳು ಏನು ಮಾಡುವರು ಏನು ಮಾಡುವುದಿಲ್ಲ ಎಂಬುದನ್ನು ಕುರಿತದ್ದು.

'ಲಿಬರಲ್ ಪಾರ್ಟಿ' (ಉದಾರವಾದಿ ಪಕ್ಷ) ಎಂಬ ಹೆಸರಿನಿಂದೊಬ್ಬನು ತಪ್ಪು ಅರ್ಥಮಾಡಿಕೊಳ್ಳುವುದು ಸಹಜವಾಗಿದೆ. ಬೇರೊಂದೆಡೆ, ಅದರಲ್ಲೂ ವಿಶೇಷತಃ ಇಂಗ್ಲೆಂಡಿನಲ್ಲಿ ಆ ಪದವು ಒಂದು ಬಗೆಯ ಆರ್ಥಿಕ ನೀತಿಗೂ—ಸ್ವತಂತ್ರ ವಾಣಿಜ್ಯ ಮತ್ತು 'ಸರಕಾರವು ಕೈಹಾಕದೆ ಸ್ವತಂತ್ರವಾಗಿ ಸಾಗುವ ವ್ಯಾಪಾರ ವ್ಯವಹಾರ', ಇತ್ಯಾದಿಗಳಿಗೂ—ಮತ್ತು ವೈಯಕ್ತಿಕ ಸ್ವಾತಂತ್ರ್ಯ ಮತ್ತು ಪೌರ ಸ್ವಾತಂತ್ರ್ಯಗಳ ಒಂದು ರೀತಿಯ ಕಲ್ಪನವಿಜ್ಞಾನಗಳಿಗೂ ಸಂಕೇತವಾಗಿತ್ತು. ಆಂಗ್ಲ ಲಿಬರಲ್ ಸಂಪ್ರದಾಯವು ಆರ್ಥಿಕ ಬುನಾದಿಗಳ ಮೇಲೆ ನಿಂತಿತ್ತು. ವಾಣಿಜ್ಯದಲ್ಲಿ ಸ್ವತಂತ್ರವಾಗಿರಬೇಕೆಂಬ ಮತ್ತು ರಾಜನ ಗುತ್ತಿಗೆ ಮತ್ತು ಸ್ವೇಚ್ಛಾನು ಸಾರವಾದ ತೆರಿಗೆಗಳಿಂದ ದೂರವಾಗಿರಬೇಕೆಂಬ ಅಪೇಕ್ಷೆಯು ರಾಜಕೀಯ ಸ್ವಾತಂತ್ರ್ಯದ ಅಪೇಕ್ಷೆಯನ್ನು ಪ್ರಚೋದಿಸಿತ. ಭಾರತೀಯ ಉದಾರವಾದಿಗಳಿಗೆ

ಅಂಥ ಯಾವ ಹಿನ್ನೆಲೆಯೂ ಇಲ್ಲ. ನ್ಯಾಯಿಕವಾಗಿ ಎಲ್ಲರೂ ಆರ್ಥಿಕ ನೀತಿ ಪ್ರತಿಪಾಲಕವಾದಿಗಳಾದುದರಿಂದ ಅವರಿಗೆ ಸ್ವತಂತ್ರ ವಾಣಿಜ್ಯದಲ್ಲಿ ನಂಬಿಕೆಯಿಲ್ಲ, ಮತ್ತು ಇತ್ತೀಚಿನ ಘಟನೆಗಳು ತೋರಿಸಿರುವಂತೆ ಪೌರ ಸ್ವಾತಂತ್ರ್ಯಕ್ಕೆ ಅವರು ಯಾವ ಬೆಲೆಯನ್ನೂ ಕಟ್ಟುವುದಿಲ್ಲ. ಪ್ರಜಾಸತ್ತೆಯ ಆರಂಭಗಳು ಮತ್ತು ಸ್ವಕೀಯ ಸ್ವಾತಂತ್ರ್ಯಗಳು ಕೂಡ ಇಲ್ಲವಾಗಿರುವ ಅರ್ಧ–ಜಮೀನ್‌ದಾರಿ ಮತ್ತು ನಿರಂಕುಶ ಪ್ರಭುತ್ವಗಳಿರುವ ದೇಶೀಯ ಸಂಸ್ಥಾನಗಳೊಂದಿಗೆ ಅವರಿಗಿರುವ ನಿಕಟ ಸಂಪರ್ಕ ಮತ್ತು ಅವುಗಳ ಸಾಮಾನ್ಯ ಬೆಂಬಲಗಳು ಅವರನ್ನು ಐರೋಪ್ಯ ಮಾದರಿಯ ಲಿಬರಲ್‌ನಿಂದ ವ್ಯಕ್ತೀಕರಿಸುವುವು. ನಿಜವಾಗಿಯೂ ಭಾರತೀಯ ಉದಾರವಾದಿಗಳು, ಆ ಪದದ ಯಾವ ಅರ್ಥದಲ್ಲಿಯೂ ಉದಾರಿಗಳೇ ಅಲ್ಲ, ಅಥವಾ ಹೆಚ್ಚೆಂದರೆ ಬೊಟ್ಟು ತೇಪೆಗಳಲ್ಲಿ ಮಾತ್ರ ಅವರು ಉದಾರಿಗಳು. ಅವರ ನಿರ್ದಿಷ್ಟವಾದ ಗುರಿಯೇನೆಂಬುದನ್ನು ನುಡಿಯುವುದು ಕಷ್ಟ, ಏಕೆಂದರೆ ಅವರಿಗೆ ಭದ್ರವಾದ ಯಾವ ನಿಶ್ಚಿತ ಭಾವನೆಗಳ ಬುನಾದಿಯೂ ಇಲ್ಲ, ಸಂಖ್ಯೆಯಲ್ಲಿ ಕಡಿಮೆ ಯಾಗಿದ್ದರೂ ಒಬ್ಬರಿಂದ ಇನ್ನೊಬ್ಬರು ಭಿನ್ನರು. ನಿಷೇಧದಲ್ಲಿ ಮಾತ್ರ ನಿಸ್ಸೀಮರು. ಎಲ್ಲೆಲ್ಲಿಯೂ ಅವರು ತಪ್ಪನ್ನು ನೋಡುವರು. ಅದರಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸು ವರು. ಹಾಗೆ ಮಾಡುವುದರಿಂದ ಸತ್ಯವನ್ನು ಕಾಣುವುದಾಗಿ ಆಶಿಸುವರು. ಅವರ ದೃಷ್ಟಿಯಿಂದ ಸತ್ಯವು ಎರಡು ಅತಿರೇಕಗಳ ಮಧ್ಯೆ ಬಿದ್ದಿದೆ. ಅತಿರೇಕವೆಂದು ಸಂಭಾ ವಿಸುವ ಎಲ್ಲವನ್ನೂ ಟೀಕೆಮಾಡಿ, ತಾವು ನೈಪುಣ್ಯಗಾರರು, ಮಿತವಾದಿಗಳು, ಒಳ್ಳೆಯ ವರು ಎಂಬ ಸಂವೇದನೆಯನ್ನು ಅನುಭವಿಸುವರು. ಈ ವಿಧಾನವು ದುಃಖಾವೃತವೂ ಮತ್ತು ಕಷ್ಟದಾಯಿಯೂ ಆದ ಆಲೋಚನೆಗಳ ವ್ಯವಹೃತಿಯನ್ನು ನಿವಾರಿಸಿಕೊಳ್ಳಲೂ ರಚನಾತ್ಮಕ ಭಾವನೆಗಳನ್ನು ಮುಂದಿಡಲೂ ಅವರಿಗೆ ನೆರವಾಗುವುದು. ಬಂಡವಾಳ ವಾದವು ಯುರೋಪಿನಲ್ಲಿ ಸಂಪೂರ್ಣವಾಗಿ ಗೆದ್ದಿಲ್ಲ, ಕಷ್ಟದಲ್ಲಿ ಸಿಕ್ಕಿಕೊಂಡಿದೆ, ಇನ್ನೊಂದು ಕಡೆ ಸಮತಾವಾದವು ಸ್ವಾರ್ಥವನ್ನು ತಾಗುವುದಾದ ಕಾರಣ ಸ್ವತಸ್ಸಿದ್ಧ ವಾಗಿ ಕೆಡುಕಾದುದು. ನ್ಯಾಯಶಃ ಯಾವುದೋ ಒಂದು ರಹಸ್ಯಪೂರ್ಣ ಪರಿಹಾ ರೋಪಾಯವೊಂದು, ನಡುದಾರಿಯ ವಸತಿಯೊಂದು, ಭವಿಷ್ಯತ್ತಿನಲ್ಲಿ ಸಿದ್ಧವಾಗು ವುದು, ಮತ್ತು ಏತನ್ಮಧ್ಯೆ ಸ್ವಾರ್ಥಗಳನ್ನು ಸಲಹಬೇಕು. ಭೂಮಿಯು ಗುಂಡಾಗಿ ದೆಯೋ ಇಲ್ಲವೇ ಚಪ್ಪಟೆಯಾಗಿದೆಯೋ ಎಂಬ ವಾದ ಪ್ರತಿವಾದವೇನಾದರೂ ನಡೆದಲ್ಲಿ ಅವರು ಎರಡನ್ನೂ ಅತಿರೇಕಾಭಿಪ್ರಾಯಗಳೆಂದು, ಹಳಿದು ಅದು ಚಚ್ಚೌಕವಾಗಿಯೋ ಇಲ್ಲವೇ ಅಂಡಾಕಾರವಾಗಿಯೋ ಇರಬಹುದೆಂದು ಪರೀಕ್ಷಾರ್ಥವಾಗಿ ಸೂಚನೆ ಕೊಡುವರು.

ಕ್ಷುಲ್ಲಕವೂ ಗೌಣವೂ ಆದ ವಿಷಯಗಳನ್ನು ಕುರಿತು ಅವರು ತೀರ ಉದ್ದೀಪಿತ ರಾಗುತ್ತಾರೆ, ಮತ್ತು ವಿಸ್ಮಯಕರವಾಗುವಷ್ಟು ಮಟ್ಟಿನ ಗದ್ದಲವೂ ಘೋಷವೂ ಇರುತ್ತದೆ. ಮನಸ್ಸಾಕ್ಷಿಯಾಗಿಯೂ ಉಪಮನಸ್ಸಾಕ್ಷಿಯಾಗಿಯೂ ಅವರು ಮೂಲ

ಸಮಸ್ಯೆಗಳನ್ನು ಛೇದಿಸುವುದನ್ನು ತಪ್ಪಿಸಿಕೊಳ್ಳುತ್ತಾರೆ ಏಕೆಂದರೆ ಅಂಥ ಸಮಸ್ಯೆಗಳಿಗೆ ಮೂಲ ಚಿಕಿತ್ಸೆಗಳೂ ಆಲೋಚನೆ ಮತ್ತು ಕ್ರಿಯೆಗಳ ಧೃತಿಯೂ ಆವಶ್ಯಕ. ಆದುದರಿಂದ ಉದಾರವಾದಿ ಸೋಲುಗಳಿಗೂ ಗೆಲುವುಗಳಿಗೂ ಬೆಲೆಯಿಲ್ಲ. ಅವುಗಳಿಗೆ ಯಾವ ಧ್ಯೇಯದ ಸಂಬಂಧವೂ ಇಲ್ಲ. ಆ ಪಕ್ಷದ ಪ್ರಮುಖ ಲಕ್ಷಣವೂ, ವ್ಯಕ್ತೀಕರಿಸುವ ಚಿಹ್ನೆಯೂ, ಹಾಗೊಂದು ವೇಳೆ ಸಂಭಾವಿಸುವುದಾದರೆ, ಒಳ್ಳೆಯದೋ ಕೆಟ್ಟದ್ದೋ, ಅಂತು ಎಲ್ಲದರಲ್ಲಿಯೂ ಮಿತವಾದ ಜೀವನವನ್ನು ಕುರಿತ ದೃಷ್ಟಿಕ್ಷೇಪವದು. ಹಳೆಯ ಹೆಸರಾದ ಮಾಡರೇಟ್ಸ್ (ಮಿತವಾದಿಗಳು) ಎಂಬುದೇ ಪ್ರಾಯಶಃ ಅತ್ಯುಚಿತವಾದ ಪದ.

> "ಎನ್ನೆಲ್ಲ ಹೆಮ್ಮೆಯನು ಮಿತವಾದದಲ್ಲಿಟ್ಟು
> ಟೋರಿಗಳು ವ್ಹಿಗ್‌ನೆಂದು, ವ್ಹಿಗ್‌ರೆಲ್ಲ ಟೋರಿಯೆಂದು
> ಕರೆಯುತ್ತಲಿರಲೆನ್ನ."*

ಆದರೆ ಎಷ್ಟೇ ಮುಚ್ಚತಕ್ಕದ್ದಾದರೂ ಮಿತವಾದವು ತಳತಳಿಸುವ ಮತ್ತು ಮಿನುಮಿನುಗುವ ಸ್ಥೈರ್ಯವಲ್ಲ. ಅದು ದಡ್ಡತನವನ್ನು ಬೆಳೆಸುತ್ತದೆ. ಆದುದರಿಂದ ಭಾರತೀಯ ಉದಾರವಾದಿಗಳು ದುರದೃಷ್ಟವಶದಿಂದ 'ದಡ್ಡ ಸೈನ್ಯಾಂಗ' ವಾಗಿದ್ದಾರೆ—ವ್ಯಸನಧೀರ, ಮುಖಭಾವ, ದಡ್ಡಬರವಣಿಗೆ ಮತ್ತು ಸಂಭಾಷಣೆ ಮತ್ತು ಹಾಸ್ಯವಿಹೀನತೆ, ನಿಸ್ಸಂಶಯವಾಗಿ ವಿನಾಯಿತಿಯಾದವರೂ ಇದ್ದಾರೆ. ಇವರಲ್ಲಿ ಪ್ರಮುಖರಾದವರೆಂದರೆ ಸರ್ ತೇಜ್ ಬಹಾದ್ದೂರ್ ಸಪ್ರೂರವರು. ಅವರು ತಮ್ಮ ವೈಯಕ್ತಿಕ ಜೀವನದಲ್ಲಿ ಖಂಡಿತವಾಗಿಯೂ ಜಡರಲ್ಲ, ಹಾಸ್ಯವಿಹೀನರಲ್ಲ, ಮತ್ತು ತಮ್ಮನ್ನು ಕುರಿತ ಹಾಸ್ಯವನ್ನಾದರೂ ಸಂತೋಷದಿಂದ ಸ್ವೀಕರಿಸುವರು. ಆದರೆ ಒಟ್ಟಿನಲ್ಲಿ ಉದಾರವಾದಿ ಗುಂಪು ಮಹೋನ್ನತಿಯ ಮಧ್ಯಶ್ರೇಣಿಯನ್ನು ಅದರ ನಿಸ್ಸಾರಸ್ಥೈರ್ಯದೊಂದಿಗೆ ಪ್ರತಿನಿಧಿಸುವುದಾಗಿದೆ. ಪ್ರಮುಖ ಉದಾರವಾದಿ ವೃತ್ತಪತ್ರಿಕೆಯಾದ ಅಲಹಾಬಾದಿನ ಲೀಡರ್‌ನಲ್ಲಿ ಕಳೆದ ವರ್ಷ ಗುಟ್ಟು ರಟ್ಟುಮಾಡುವ ಸಂಪಾದಕೀಯ ಸೂಚನೆಯೊಂದಿತ್ತು. ಹಿರಿಯ ಮತ್ತು ಅಪೂರ್ವ ಮನುಜರು ಪ್ರಪಂಚವನ್ನು ಎಂದಿಗೂ ಜಂಜಡಕ್ಕೀಡು ಮಾಡಿದವರೆಂದೂ ಅದಕ್ಕಾಗಿ ಸಾಧಾರಣವಾದ ಮತ್ತು ಮಧ್ಯಮರೀತಿಯ ಮನುಷ್ಯರೇ ಲೇಸೆಂದೂ ಅದು ಹೇಳಿತು. ಸೊಗಸಾದ ಮತ್ತು ಸಚಾತುರ್ಯಾದ ಭಂಗಿಯಿಂದ ಅದು ತನ್ನ ಧ್ವಜವನ್ನು ಮಧ್ಯಮತ್ವಕ್ಕೆ ಹಿಡಿದಿತ್ತು.

ಮಿತವಾದವೂ ಸಂಪ್ರದಾಯವಾದವೂ ಅಪಾಯ ಮತ್ತು ಆಕಸ್ಮಿಕ ವ್ಯತ್ಯಾಸಗಳಿಂದ ತಪ್ಪಿಸಿಕೊಳ್ಳಬೇಕೆಂಬ ಅಪೇಕ್ಷೆಯೂ ಅನೇಕವೇಳೆ ಮುದಿ ವಯಸ್ಸಿನ ಅನಿವಾರ್ಯ ಸಾಂಗತ್ಯಗಳು. ಯುವಕರಲ್ಲಿ ಅವು ಅಷ್ಟು ಉಚಿತವಾಗಿ ಕಾಣುವುದಿಲ್ಲ, ಆದರೆ

* ಅಲೆಗ್ಸಾಂಡರ್ ಪೋಪ್.

ನಮ್ಮದು ಪ್ರಾಚೀನ ಭೂಮಿ ಕಲವು ವೇಳೆ ತವರ ಮಕ್ಕಳು ತೇಜೋಪೇಸಂಗಿಯೂ ವಯಸ್ಸಿನ ಚಿಹ್ನೆಗಳಿಂದ ಕೂಡಿಯೂ ಬಳಲಿ ಬೇಸತ್ತವರಂತೆಯೂ ಹುಟ್ಟುವಂತ ತೋರುವುದು ಆದರೆ ಈ ಪ್ರಾಚೀನ ದೇಶವನ್ನು ಕೂಡ ಈಗ ವ್ಯತ್ಯಾಸದ ಶಕ್ತಿಗಳು ವಿಲಿವಿಲಿಸುತ್ತಿವೆ, ಮತ್ತು ಮಿತವಾದಿ ದೃಷ್ಟಿಕ್ಷೇಪವು ತಲ್ಲಣಿಸುತ್ತಿದೆ ಹಳೆಯ ಜಗತ್ತು ಸರಿದುಹೋಗುತ್ತಿದೆ, ಉದಾರವಾದಿಗಳಿಗೆ ಸಾಧ್ಯವಾದ ಮಧುರ ವಿವೇಚನೆಯೂ ಯಾವ ವ್ಯತ್ಯಾಸವನ್ನೂ ಮಾಡದು ಅವರು ಬಿರುಗಾಳಿ ಅಥವಾ ಪ್ರವಾಹ ಅಥವಾ ಭೂಕಂಪದೊಡನೆ ಚರ್ಚೆಯನ್ನು ಕೂಡ ಮಾಡಬಹುದು ಹಳೆಯ ಕಲ್ಪನೆಗಳು ಅವರನ್ನು ಕೈಬಿಡುತ್ತಿವೆ ಹಾಗೂ ಆಲೋಚನೆ ಮತ್ತು ಕ್ರಿಯೆಗಳ ಹೊಸ ಮಾರ್ಗಗಳನ್ನು ಹುಡುಕಲು ಅವರಿಗೆ ಗುಂಡಿಗೆಯಿಲ್ಲ ಡಾ|| ಎ ಎನ್ ವೈಟ್ ಹೆಡ್ ರವರು ಐರೋಪ್ಯ ಪರಂಪರೆಯನ್ನು ಕುರಿತು ಹೀಗೆ ಹೇಳುತ್ತಾರೆ "ಪ್ರತಿಯೊಂದು ತಲೆಮಾರೂ ತನ್ನ ತಾತ ಮುತ್ತಾತಂದಿರು ಬದುಕಿದಾಗ ಅಧಿಕರಿಸಿದ ಪರಿಸ್ಥಿತಿಗಳಲ್ಲೇ ತಾನೂ ಅಧ್ಯತೆಯಿಂದ ಬದುಕುವುದೆಂದೂ ಈ ಪರಿಸ್ಥಿತಿಗಳನ್ನು ಅದೇ ಶಕ್ತಿಯಿಂದ ತನ್ನ ಮಕ್ಕಳಿಗೆ ವರ್ಗಾಯಿಸುವುದೆಂದೂ ಮಾಡಿಕೊಂಡಿರುವ ದುಷ್ಟ ಕಲ್ಪನೆಯು ಈ ಪರಂಪರೆಯನ್ನು ಅಕಟಾಯಿಸಿದೆ ಈ ಕಲ್ಪನೆಯನ್ನು ಸುಳ್ಳೆಂದು ಬಗೆವ ಮಾನವ ಇತಿಹಾಸದ ಆರಂಭ ಕಾಲಾವಧಿಯಲ್ಲಿ ನಾವು ಬದುಕುತ್ತಿದ್ದೇವೆ" ಡಾ|| ವೈಟ್ ಹೆಡ್‌ರವರು ತಮ್ಮ ವಿಭಜನೆಯಲ್ಲಿ ಮಿತವಾದದ ಕಡೆಗೆ ತಪ್ಪು ಮಾಡಿದ್ದಾರೆ ಪ್ರಾಯಶಃ ಆ ಕಲ್ಪನೆಯು ಸದಾ ಅಸತ್ಯವೇ ಆಗಿದೆ ಐರೋಪ್ಯ ಪರಂಪರೆಯು ಸಂಪ್ರದಾಯಪ್ರಿಯತೆಯೇ ಆಗಿದ್ದರೆ ನಮ್ಮದು ಇನ್ನೆಷ್ಟು ಅಧಿಕ ವಾಗಿರಬೇಕು ? ಆದರೆ ಇತಿಹಾಸದ ಯಂತ್ರ ವಿಜ್ಞಾನಿಗಳು ವ್ಯತ್ಯಾಸವಾಗಬೇಕಾದ ಕಾಲ ಬಂದಾಗ ಈ ಪರಂಪರೆಗಳಿಗೆ ಯಾವ ಲಕ್ಷ್ಯವನ್ನೂ ಕೊಡುವುದಿಲ್ಲ. ನಾವು ನಿಸ್ಸಹಾಯರಾಗಿ ನೋಡುತ್ತ, ನಮ್ಮ ಹಂಚಿಕೆಗಳು ವಿಫಲವಾದುದಕ್ಕಾಗಿ ಇತರರನ್ನು ಬಯ್ಯುತ್ತೇವೆ ಮಿ|| ಜೆರಾಲ್ಡ್ ಹರ್ಡ್‌ರವರು ಸೂಚಿಸುವ ಹಾಗೆ ಭ್ರಾಂತಿಗಳಲ್ಲೆಲ್ಲ ತೀರ ಅಪತ್ಕಾರಕವಾದುದದು ಒಬ್ಬನ ಹಂಚಿಕೆಗಳ ವಿಫಲತೆಗೆ ಅವನ ಎಣಿಕೆಯಲ್ಲಿನ ದೋಷವು ಕಾರಣವಲ್ಲ, ಆದರೆ ಇನ್ನಾರೋ ಬೇಕೆಂದೇ ಬಂದು ಹಾಳು ಮಾಡಿದುದು, ಎಂದು ತನ್ನನ್ನು ತಾನೇ ಸಮಾಧಾನ ಮಾಡಿಕೊಳ್ಳುವ ದೃಷ್ಟಿಯದು

ನಾವೆಲ್ಲರೂ ಈ ಭಯಂಕರ ಭ್ರಾಂತಿಯಿಂದ ತೊಳಲುತ್ತಿದ್ದೇವೆ ಗಾಂಧಿಜಿಯ ವರು ಅದರಿಂದ ದೂರವಾಗಿಲ್ಲವೆಂದು ನಾನು ಕೆಲವುವೇಳೆ ಚಿಂತಿಸುತ್ತೇನೆ ಆದರೆ ನಾವು ಕೊನೆಯಪಕ್ಷ ಕಾರ್ಯವನ್ನಾದರೂ ಮಾಡುತ್ತೇವೆ ಮತ್ತು ಬಾಳಿನೊಂದಿಗೆ ಸಂಪ ರ್ಕವನ್ನಿಟ್ಟುಕೊಳ್ಳಲು ಪ್ರಯತ್ನಿಸುತ್ತೇವೆ ಪ್ರಯತ್ನ ಮತ್ತು ದೋಷಗಳಿಂದ ಕೆಲವು ವೇಳೆ ಭ್ರಾಂತಿಯ ಕಸುವನ್ನು ಕಡಿಮೆಮಾಡಿ ಮುಗ್ಗರಿಸುತ್ತಲಾದರೂ ಹೋಗುತ್ತೇವೆ ಆದರೆ ಉದಾರವಾದಿಗಳು ಬಹಳ ಹೆಚ್ಚಾಗಿ ತೊಳಲುತ್ತಾರೆ ಏಕೆಂದರೆ ಎಲ್ಲಿ ತಪ್ಪು

ಕೆಲಸಮಾಡಿಬಿಡಬೇಕಾಗುವುದೋ ಎಂದು ಹೆದರಿ ಕೆಲಸಮಾಡುವುದಿಲ್ಲ, ಬಿದ್ದು ಹೋಗ ಬಹುದೆಂಬ ಭಯದಿಂದ ಕದಲುವುದಿಲ್ಲ ಜನಜಂಗುಳಿಯ ಆರೋಗ್ಯಕರವಾದ ಎಲ್ಲ ಸಂಪರ್ಕಗಳಿಂದಲೂ ದೂರವಾಗಿದ್ದು ತಮ್ಮ ಮಾನಸಿಕ ಓವರಿಗಳಲ್ಲಿ ಪಂಪಿಗೊಳಗಾಗಿ ಸ್ವಪ್ರೇರಿತ ಆವೇಶ ನಿದ್ರೆಗೆ ಸಲ್ಲುತ್ತಾರೆ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು ಒಂದೂವರ ವರ್ಷದ ಹಿಂದೆ ಸಹೋದ್ಯೋಗಿ ಉದಾರವಾದಿಗಳಿಗೆ ಎಚ್ಚರಿಕೆ ಕೊಡುತ್ತ “ನಿಂತು ಘಟನೆಗಳನ್ನು ಸಾಗಲು ಅವಕಾಶ ಕೊಡ” ಕೂಡದೆಂದರು ಪ್ರಾಯಶಃ ಅವರು ಕಂಡುಕೊಂಡುದಕ್ಕಿಂತ ಹೆಚ್ಚಾದ ಸತ್ಯವು ಆ ಎಚ್ಚರಿಕೆಯಲ್ಲಿತ್ತು. ಸರಕಾರವು ಏನುಮಾಡಿತು ಎಂಬ ದೃಷ್ಟಿಯಿಂದಲೇ ಅವರು ಸದಾ ಆಲೋಚನೆ ಮಾಡುತ್ತಿದ್ದು, ಬಗೆಬಗೆಯ ಅಧಿಕಾರಿಗಳ ಸಮಿತಿಯವರಿಂದ ರಚಿಸಲ್ಪಡುತ್ತಿದ್ದ ರಾಜ್ಯಾಂಗರಚನೆ ಯನ್ನು ಕುರಿತು ಅನ್ವಯಮಾಡುತ್ತಿದ್ದರು ಆದರೆ ತಮ್ಮ ಜನರೇ ಮುನ್ನಡೆಯುತ್ತಿ ದ್ದಾಗ ತಾವು ಮಾತ್ರ ನಿಂತು ಘಟನೆಗಳನ್ನು ಅವುಗಳ ಗತಿಗೆ ಬಿಡುತ್ತಿದ್ದುದೇ ಉದಾರ ವಾದಿಗಳ ಅವದಶೆಯಾಗಿತ್ತು. ಅವರು ತಮ್ಮ ಜನಜಂಗುಳಿಗೇ ಹೆದರುತ್ತಿದ್ದರು ನಮ್ಮ ಪ್ರಭುತ್ವದವರಿಂದ ಬೇರೆಯಾಗುವುದಕ್ಕಿಂತ ಈ ಜನಜಂಗುಳಿಯಿಂದ ದೂರವಾ ಗುವುದೇ ಲೇಸೆಂದು ಬಗೆಗೊಂಡರು ಇಂಥವರು ತಮ್ಮ ನಾಡಿಗೇ ಹೊಸಬರಾದುದ ರಲ್ಲಿಯೂ ಬಾಳು ಅವರನ್ನು ನಿಂತೆಡೆಯೇ ಬಿಟ್ಟು ಮುಂದಕ್ಕೆ ಸರಿಯಿತೆಂಬುದರಲ್ಲಿಯೂ ವಿಸ್ಮಯವೇನುಂಟು? ಸ್ವಾತಂತ್ರ್ಯಕ್ಕಾಗಿಯೂ ಜೀವನಕ್ಕಾಗಿಯೂ ದೇಶಬಾಂಧವರು ಭಯಂಕರ ಕಾಳಗವನ್ನು ಕೊಟ್ಟಾಗ ಉದಾರವಾದಿಗಳು ತಡೆಗಟ್ಟಿನ ಯಾವ ಪಕ್ಕದಲ್ಲಿ ನಿಂತರೆಂಬುದನ್ನು ಕುರಿತು ಯಾವ ಸಂಶಯವೂ ಇರಲಿಲ್ಲ ತಡೆಗಟ್ಟಿನ ಆಚಿನ ಪಕ್ಕದಿಂದ ಅವರು ನಮಗೆ ಒಳ್ಳೆಯ ಬುದ್ಧಿವಾದವನ್ನು ಕೊಟ್ಟರು ನೀತಿಚಿಂತಾ ಮಣಿಗಳಿಂದ ಅವರು ತುಂಬಿತುಳುಕುತ್ತಿದ್ದರು, ಅಂಟುಬಣ್ಣದಂತೆ ಅವನ್ನು ಮೆತ್ತುತ್ತ ಮೆತ್ತುತ್ತಿದ್ದರು ಚಕ್ರ ಗೋಷ್ಠಿಗಳಲ್ಲೂ ಸಮಿತಿಗಳಲ್ಲೂ ಅವರು ಬ್ರಿಟಿಷ್ ಸರಕಾರ ದೊಡನೆ ಮಾಡಿದ ಸಹಕಾರವು, ಸರಕಾರಕ್ಕೆ ಬೆಲೆಯಾದ ನೈತಿಕ ಬೆಂಬಲವಾಗಿತ್ತು ಅದರ ನಿರಾಕರಣವು ಬಹಳ ವ್ಯತ್ಯಾಸವನ್ನು ಮಾಡುತ್ತಿತ್ತು ಈ ಗೋಷ್ಠಿಗಳಲ್ಲೊಂದ ರಿಂದ ಬ್ರಿಟಿಷ್ ಲೇಬರ್ ಪಾರ್ಟಿಯು ಕೂಡ ದೂರವಾದುದು ಆಶ್ಚರ್ಯಕರವಾದುದು, ಆದರ ಕೆಲವು ಬ್ರಿಟಿಷರು ಭಾಗವಹಿಸಕೂಡದೆಂದು ಪ್ರಾರ್ಥಿಸಿಕೊಂಡರೂ ನಮ್ಮ ಉದಾರವಾದಿಗಳು ಹಾಗೆ ಮಾಡಲಿಲ್ಲ

ನಾವೆಲ್ಲರೂ ಬಗೆಬಗೆಯ ಪರಿಮಾಣಗಳಲ್ಲಿ ಬಗೆಬಗೆಯ ಗೊತ್ತುಗುರಿಗಳಿಗಾಗಿ ಮಿತವಾದಿಗಳೋ ತೀವ್ರವಾದಿಗಳೋ ಆಗಿದ್ದೇವೆ. ಯಾವುದನ್ನಾದರೂ ಕುರಿತು ನಾವು ಲಕ್ಷ್ಯವಿಡುವುದಾದರೆ, ಅದನ್ನು ಕುರಿತು ಗಾಢವಾಗಿ ಚಿಂತನ ಮಾಡುವು ದಾಗಲಿ, ತೀವ್ರವಾದಿಗಳಾಗುವುದಾಗಲಿ ಸಾಧ್ಯ ಇಲ್ಲದಿದ್ದರೆ ನಮ್ಮ ಉಪೇಕ್ಷೆಯನ್ನು ಸ್ವಲ್ಪಮಟ್ಟಿಗೆ ನಿಜವಾಗಿಯೂ ಮರೆಮಾಡುವ ಕೃಪಾಪೂರ್ವಕ ಸಹನೆಯನ್ನೂ, ದಾರ್ಶನಿಕ ಮಿತಿಯನ್ನೂ ಮೆರೆಯಲು ನಮಗೆ ಸಾಧ್ಯ ದೇಶದ ಕೆಲವು ಸ್ವಾರ್ಥ

ಗಳನ್ನು ಗುಡಿಸಿಬಿಡಬೇಕೆಂಬ ಸೂಚನೆಯನ್ನು ಮಾಡಿದಾಗ ಮಿತವಾದಿಗಳಲ್ಲೂ ಅತ್ಯಂತ ಸೌಮ್ಯರಾದವರು ಬಹಳ ಮೇಲೆ ಬೀಳುವವರೂ ತೀವ್ರವಾದಿಗಳೂ ಆದುದನ್ನು ನೋಡಿದ್ದೇನೆ ನಮ್ಮ ಉದಾರವಾದಿ ಮಿತ್ರರು ಏಳಿಗೆಯಲ್ಲಿರುವವರನ್ನು ಮತ್ತು ನೆಮ್ಮದಿವಂತರನ್ನು ಸ್ವಲ್ಪಮಟ್ಟಿಗೆ ಪ್ರತಿನಿಧಿಸುತ್ತಾರೆ ಅವರು ಸ್ವರಾಜ್ಯಕ್ಕಾಗಿ ಕಾದಿರಬಲ್ಲರು ಅದರ ವಿಷಯದಲ್ಲಿ ತಮ್ಮನ್ನು ತಾವು ಉದ್ದೀಪಿಸಿಕೊಳ್ಳಬೇಕಾಗಿಲ್ಲ ಆದರೆ ಆಮೂಲಾಗ್ರ ಸಾಮಾಜಿಕ ವ್ಯತ್ಯಾಸವಾಗಬೇಕೆಂಬ ಸೂಚನೆಯು ಅವರನ್ನು ಬಹಳ ಕದಲಿಸುತ್ತದೆ, ಮತ್ತು ಅದನ್ನು ಕುರಿತು ಅವರು ಮಿತವಾದಿಗಳಾಗಿಯೂ ಇರರು ಅಥವಾ ಮಧುರ ವಿವೇಚನೆಯನ್ನೂ ಮಾಡರು ಈ ದೃಷ್ಟಿಯಿಂದ ನಿಜವಾಗಿಯೂ ಅವರ ಮಿತವಾದವು ಬ್ರಿಟಿಷ್ ಸರಕಾರದ ಕಡೆಗಿರುವ ಅವರ ನಿಷ್ಕೃಷ್ಟ ಮನೋಭಾವದಷ್ಟು ಮಾತ್ರದಲ್ಲಿ ನಿಂತಿದೆ, ಮತ್ತು ಸಾಕಷ್ಟು ಗೌರವಯುತರಾಗಿಯೂ ರಾಜಿಯಿಂದ ನಡೆವವರಾಗಿಯೂ ಇದ್ದರೆ, ಈ ನಡತೆಗೆ ಪ್ರತಿಫಲವಾಗಿ ಅವರ ಹೇಳಿಕೆಯನ್ನು ಕೇಳಲಾಗುವುದೆಂಬ ಆಶೆಗೆ ಅರ್ಪಿತವಾಗುತ್ತಿದ್ದಾರೆ ಅನಿವಾರ್ಯವಾಗಿ ಅವರು ಬ್ರಿಟಿಷ್ ದೃಷ್ಟಿಕೋನವನ್ನು ಅಂಗೀಕರಿಸಬೇಕಾಗಿದೆ ಸರಕಾರಿ ವರದಿಗಳು (ಬ್ಲೂ ಬುಕ್ಸ್) ಅವರಿಗೆ ಮೋಹಕವಾದ ಅಧ್ಯಯನ ಗ್ರಂಥಗಳಾಗಿವೆ, ಎರ್ಸ್‌ಕೈನ್ ಮೇ ಅವರ 'ಪಾರ್ಲಿಮೆಂಟರಿ ಪ್ರ್ಯಾಕ್ಟಿಸ್' ಮತ್ತು ತದಿತರ ಪುಸ್ತಕಗಳು ಅವರ ಎಡೆಬಿಡದ ಒಡನಾಡಿಗಳಾಗಿವೆ, ಮತ್ತು ಹೊಸದೊಂದು ಸರಕಾರಿ ವರದಿಯು ಅವರ ಉದ್ದೀಪನಕ್ಕೂ ತರ್ಕ ವಿಮರ್ಶೆಗಳಿಗೂ ಕಾರಣವಾದ ಸಂಗತಿಯಾಗಿದೆ ಇಂಗ್ಲೆಂಡಿನಿಂದ ಹಿಂತಿರುಗಿ ಬರುವ ಉದಾರವಾದಿ ಮುಂದಾಳುಗಳು 'ವೈಟ್ ಹಾಲ್' ನಲ್ಲಿನ ದೊಡ್ಡ ದೊಡ್ಡ ವ್ಯಕ್ತಿಗಳ ಮಾತುಗಳನ್ನು ಕುರಿತು ರಹಸ್ಯಪೂರ್ಣವಾದ ಹೇಳಿಕೆಗಳನ್ನು ಕೊಡುತ್ತಾರೆ ಏಕೆಂದರೆ 'ಶ್ವೇತ ಭವನ'ವು (ವೈಟ್ ಹಾಲ್) ರೆಸ್ಪಾನ್ಸಿವಿಸ್ಟರ, ಉದಾರವಾದಿಗಳ ಮತ್ತು ತದಿತರ ಪಂಗಡಗಳ ವೀರಸ್ವರ್ಗ (ವಲ್ಹಾಲ್ಲ) ಪೂರ್ವಕಾಲದಲ್ಲಿ, ಒಳ್ಳೆಯ ಅಮೇರಿಕನರು ಸತ್ತಮೇಲೆ ಪ್ಯಾರಿಸ್ ಪಟ್ಟಣಕ್ಕೆ ಹೋಗುತ್ತಿದ್ದರೆಂಬ ಪ್ರತೀತಿಯಿತ್ತು, ಈಗಲಾದರೋ ಒಳ್ಳೆಯ ಉದಾರವಾದಿಗಳ ಪ್ರೇತಗಳು ಕೆಲವುವೇಳೆ 'ಶ್ವೇತ ಭವನ'ದ ಆವರಣದಲ್ಲಿ ಅಲೆಯುವುವೆಂದು ಹೇಳಬಹುದು

ಉದಾರವಾದಿಗಳನ್ನು ಕುರಿತು ನಾನು ಬರೆಯುತ್ತಿದ್ದೇನೆ ಆದರೆ ನಾನು ಬರೆಯುವುದು ಕಾಂಗ್ರೆಸ್ಸಿನಲ್ಲಿನ ನಮ್ಮಲ್ಲನೇಕರಿಗೂ ಕೂಡ ಅನ್ವಯಿಸುತ್ತದೆ ಇದಕ್ಕಿಂತ ಇನ್ನೂ ಹೆಚ್ಚಾಗಿ ಅದು, ಮಿತವಾದದಲ್ಲಿ ಉದಾರವಾದಿಗಳನ್ನೂ ಹಿಂದಹಾಕಿ, ಬಹುದೂರ ಹೋಗಿಬಿಟ್ಟಿರುವ ರೆಸ್ಪಾನ್ಸಿವಿಸ್ಟರಿಗೆ ಅನ್ವಯಿಸುವುದು ಸಾಮಾನ್ಯ ಉದಾರವಾದಿಗೂ ಸಾಮಾನ್ಯ ಕಾಂಗ್ರೆಸ್‌ನವನಿಗೂ ಮಧ್ಯೇ ಮಹದಂತರವಿರುವುದು. ಆದರೂ ವಿಭಾಗಿಸುವ ಗೆರೆಯು ಅಷ್ಟು ಸ್ಪಷ್ಟವಾಗಿಯೂ ನಿಷ್ಕೃಷ್ಟವಾಗಿಯೂ ಇಲ್ಲ ಕಲ್ಪನವಿಜ್ಞಾನತಃ ಪ್ರಗತಿಗಾಮಿ ಉದಾರವಾದಿಯಲ್ಲಿ ಮತ್ತು

ಮಿತವಾದಿ ಕಾಂಗ್ರೆಸ್ಸಿನವನಲ್ಲಿ ಆಯ್ಕೆಯ ಅಂಶವು ಎಳ್ಳಿನಷ್ಟಿದೆ ಆದರೆ, ಗಾಂಧಿಜಿಯವರ ಸೈಪಿಸಿಂದ, ಪ್ರತಿಯೊಬ್ಬ ಕಾಂಗ್ರೆಸ್ಸಿನವನೂ ನೆಲದ ಮತ್ತು ನಾಡಿನ ಜನತೆಯ ಸಂಪರ್ಕವನ್ನಿಟ್ಟುಕೊಂಡಿದ್ದಾನೆ. ಮತ್ತು ಅವನು ಗೆಯ್ಮೆಯಲ್ಲಿ ಕೈಯಾಡಿದ್ದಾನೆ, ಮತ್ತು ಇದಕ್ಕಾಗಿಯೇ ಅವನು ಅಸ್ಪಷ್ಟವೂ ನ್ಯೂನವೂ ಆದ ಕಲ್ಪನ ವಿಜ್ಞಾನದ ಕೆಲವು ಪರಿಣಾಮಗಳಿಂದ ತಪ್ಪಿಸಿಕೊಂಡಿದ್ದಾನೆ ಆದರೆ ಉದಾರವಾದಿಗಳು ಹಾಗಲ್ಲ, ಅವರು ಪ್ರಾಚೀನ ಅರ್ವಾಚೀನಗಳೆರಡರ ಸಂಪರ್ಕವನ್ನು ತೊರೆದುಕೊಂಡಿರುವರು ಗೋಷ್ಠಿಯ ದೃಷ್ಟಿಯಿಂದ ಅವರು ಲಯಿಸುತ್ತಿರುವ ವರ್ಗವನ್ನು ಪ್ರತಿನಿಧಿಸುವರು

ನಮ್ಮಲ್ಲನೇಕರು ಪ್ರಾಚೀನ ಮಿಥ್ಯಾದೇವತಾರ್ಚನೆಯ ಭಾವನೆಯನ್ನು ಕಳೆದುಕೊಂಡಿದ್ದೇವೆ, ಮತ್ತು ನೂತನ ಅವಬೋಧವನ್ನು ಸಂಪಾದಿಸಲಿಲ್ಲ "ಪ್ರೋಟಿಯಸ್ಸನು ಸಾಗರದಿಂದ ಮೇಲಕ್ಕೆ ಏಳುತ್ತಿರುವ ದೃಶ್ಯವನ್ನು ನೋಡುವುದಾಗಲಿ" ಅಥವಾ "ವೃದ್ಧ ಟ್ರಿಟನ್‌ನು ತನ್ನ ಹೆಣಿಗೆಕೊಂಬನ್ನೂದುವುದನ್ನು ಕೇಳುವುದಾಗಲಿ" ನಮ್ಮ ಪಾಲಿಗಿಲ್ಲ

" ಹರಳು ಮಳಲಲ್ಲಿ ಇಳೆಯ ನೀಕ್ಷಿಪ್ಪುದು
ಮೇಣ್ ವನಸುಮದಿ ಸ್ವರ್ಗಧಾಮವನು,
ನಿನ್ನ ಅಂಗೈಯೊಳನಂತವ ಪಿಡಿಯೆ
ಚಣದೊಳ್ ಶಾಶ್ವತವ ಪಿಡಿಯೆ '

ನಮ್ಮಲ್ಲಿ ಬಹಳ ಕೊಂಚ ಮಂದಿ ಮಾತ್ರ ಅದೃಷ್ಟಶಾಲಿಗಳು

ದೌರ್ಭಾಗ್ಯವಶಾತ್, ಪ್ರಕೃತಿ ಮಾತೆಯ ರಹಸ್ಯ ಜೀವನವನ್ನು ಅನುಭವಿಸುವುದು, ನಮ್ಮ ಕಿವಿದೆರೆಯ ಬಳಿ ಆಕೆಯು ಪಿಸುಗುಟ್ಟುವುದನ್ನು ಆಲಿಸುವುದು, ಆಕೆಯ ಸೋಂಕಿನಿಂದ ಪುಳುಕಿತರಾಗಿ ಸ್ಫುರಿತವಾಗುವುದು ನಮ್ಮಲ್ಲಿ ಅನೇಕರಿಗೆ ಅಳವಲ್ಲ ಆ ದಿನಗಳು ಕಳೆದುಹೋದುವು ಹಿಂದೆ ನಮಗೆ ವಾಡಿಕೆಯಾಗಿದ್ದಂತೆ ಈಗ ನಾವು ಪ್ರಕೃತಿ ಮಾತೆಯ ಪೆಂಪನ್ನು ನೋಡದಿರಬಹುದಾದರೂ ಅವನ್ನು, ಮಾನವತೆಯ ವೈಭವ ಮತ್ತು ರುದ್ರಘಟನೆ, ಅದರ ಮಹಾ ಸ್ವಪ್ನಗಳು ಮತ್ತು ಒಳಗಿನ ಬಿರುಪಾಳಿಗಳು, ಅದರ ನೋವುಗಳು ಮತ್ತು ಪರಾಭವಗಳು, ಅದರ ಒಳತೋಟಿ ಮತ್ತು ಆಗಚಾಟಲುಗಳು, ಮತ್ತು ಇವೆಲ್ಲಕ್ಕಿಂತ ಹೆಚ್ಚಾಗಿ ಮಹಾ ಪ್ರಾರಬ್ಧದಲ್ಲಿ ಅದರ ವಿಶ್ವಾಸ ಮತ್ತು ಆಕಾಂಕ್ಷಗಳ ಸಾಧನೆ, ಇವುಗಳಲ್ಲಿ ಕಾಣಲು ಪ್ರಯತ್ನಿಸಿದ್ದೇವೆ ಅಂಥ ಅನ್ವೇಷಣವು ಒಳಗೊಂಡಿರುವ ಎಲ್ಲ ಬಗೆಯ ಹೃದಯ ವಿದಾರಣಗಳಿಗೂ ಸ್ವಲ್ಪಮಟ್ಟಿನ ಪ್ರತಿಫಲವಿರುವುದು, ಮತ್ತು ಅನೇಕವೇಳೆ ನಾವು ಬಾಳಿನ ಸಣ್ಣತನದಿಂದ ಉದ್ಧಾರವಾಗಿದ್ದೇವೆ. ಆದರೆ ಅನೇಕರು ಈ ಅನ್ವೇಷಣವನ್ನು ಕೈಕೊಂಡಿಲ್ಲ ಪ್ರಾಚೀನ ಮಾರ್ಗಗಳಿಂದ ಕವಲುದಾರಿಗೆ ಹೊರಳಿ ವರ್ತ

ಮಾನದಲ್ಲಿ ಹೊಸ ಹಾದಿಯನ್ನು ಕಾಣಲಾರದೆ ಹೋಗಿದ್ದಾರೆ ಅವರು ಕನಸು ಕಾಣಲೂ ಆರರು, ಗೆಯ್ಮೆ ಮಾಡಲೂ ಆರರು ಫ್ರೆಂಚ್ ಮಹಾಕ್ರಾಂತಿ ಅಥವಾ ರಷ್ಯನ್ ಮಹಾಕ್ರಾಂತಿಗಳಂತಹ ಮಾನವೀಯ ವಿಲಿವಿಲಿಗಳ ಅರಿವು ಅವರಿಗಿಲ್ಲ ಬಹು ಕಾಲದಿಂದ ಅಣಗಿಸಲ್ಪಟ್ಟ ಮಾನವೀಯ ಆಕಾಂಕ್ಷೆಗಳ ಮಿಶ್ರ, ತೀವ್ರ ಮತ್ತು ಕ್ರೂರ ಸ್ಫೋಟನಗಳು ಅವರ ಗುಂಡಿಗೆಯನ್ನು ಒಡೆಯುವುವು ಅವರಿಗೆ ಬ್ಯಾಸ್ಟೈಲ್* ಇನ್ನೂ ಪತನವಾಗಿಲ್ಲ

"ಸ್ವದೇಶಾಭಿಮಾನವು ಕಾಂಗ್ರೆಸ್ಸಿನವರ ಗುತ್ತಿಗೆಯಲ್ಲ" ಎಂದು ಅನೇಕವೇಳೆ ಧಾರ್ಮಿಕ ರೋಷದಿಂದ ಹೇಳಲಾಗಿದ ಅದೇ ವಾಕ್ಯವೇ ಭಾವಸ್ಫೂರ್ತಿ ಶೂನ್ಯತೆಯಿಂದ ವ್ಯಗ್ರಪಡಿಸುತ್ತ ಪುನಃಪುನಃ ಉಕ್ತವಾಗಿದೆ ಈ ರಾಗದ ಮೂಲೆಯೊಂದರಲ್ಲಿ ಯಾವ ಕಾಂಗ್ರೆಸ್ಸಿನವನೂ ಆಸರೆಯನ್ನು ಹಕ್ಕು ಕೇಳಲಿಲ್ಲವೆಂದು ನಂಬಿದ್ದೇನೆ ವಾಸ್ತವವಾಗಿಯೂ, ಅದು ಕಾಂಗ್ರೆಸ್ಸಿನ ಗುತ್ತಿಗೆಯೆಂದು ನಾನು ಭಾವಿಸುವುದಿಲ್ಲ ಬಯಸುವ ಯಾರಿಗಾದರೂ ಅದನ್ನು ಕಾಣಿಕೆಯಾಗಿ ಕೊಡಲು ನಾನು ಆನಂದ ಪಡುತ್ತೇನೆ ಅನೇಕವೇಳೆ ಆಮುಗವಾದಿಗಳಿಗೂ ಉದ್ಯೋಗವಾದಿಗಳಿಗೂ ಅದು ನಾಕಷ್ಟು ಆಶ್ರಯವಾಗಿದೆ, ಮತ್ತು ಎಲ್ಲಬಗೆಯ ಅಭಿರುಚಿಗಳು, ಹವ್ಯಾಸಗಳು ಮತ್ತು ಮಾರ್ಗದವರಿಗೆ ಹೊಂದಿಕೆಯಾಗಲು ಅದರಲ್ಲಿ ಬಹುಮುಖ ವೈವಿಧ್ಯಗಳಿವೆ ಇಂದು ಜುಡಾಸ** ನು ಬದುಕಿದ್ದರೆ, ಅವನೂ ಆದರ ಹೆಸರಿನಲ್ಲಿಯೇ ನಿಸ್ಸಂದೇಹವಾಗಿ ದುಡಿಯುತ್ತಿದ್ದ ಸ್ವದೇಶಾಭಿಮಾನವು ಇತಃಪರ ಎಳ್ಳಿನಷ್ಟೂ ಸಾಲದು, ಅದಕ್ಕಿಂತ ಉತ್ತುಂಗವಾದ, ವಿಶಾಲವಾದ ಮತ್ತು ಗಂಭೀರವಾದುದೊಂದು ನಮಗೆ ಬೇಕು

ಮಿತವಾದವೂ ತದ್ವ್ಯಾಪ್ತಿಯಲ್ಲಿ ನಾಲದಾಗಿದೆ ಸಂಯಮವು ಲೇಸಾದುದು ಮತ್ತು ಅದು ನಮ್ಮ ಸಂಸ್ಕೃತಿಯ ಒಂದು ಪರಿಮಾಣ ಆದರೆ ಆ ಸಂಯಮದ ಹಿಂದೆ ನಿರೋಧಿಸಬೇಕಾದ, ಹಿಡಿದಿಡಬೇಕಾದ ಯಾವುದೋ ಒಂದು ಇದು ಇರಬೇಕು ಭೌತಶಕ್ತಿಗಳನ್ನು ಅಂಕೆಯಲ್ಲಿಡುವುದು, ಗುಡುಗಿನ ಮೇಲೆ ಸವಾರಿಮಾಡುವುದು, ಪ್ರಳಯಾಗ್ನಿ ಮತ್ತು ನುಗ್ಗುತ್ತ ಉರುಳುತ್ತಿರುವ ಪ್ರವಾಹಗಳನ್ನು ತನ್ನ ಉಪಯೋಗಕ್ಕೆ ಬಗ್ಗಿಸಿಕೊಳ್ಳುವುದು, ಇವು ಮಾನವನ ಪ್ರಾರಬ್ಧವಾಗಿವೆ ಮತ್ತು ಆಗುತ್ತಿದೆ

---

*ಪ್ಯಾರಿಸ್ಸಿನಲ್ಲಿದ್ದ ಈ ಹೆಸರಿನ ದುರ್ಗವೊಂದನ್ನು ಅನೇಕ ವರ್ಷಗಳಿಂದ ರಾಜ್ಯದ ಕಾರಾಗೃಹವನ್ನಾಗಿ ಮಾಡಿಕೊಂಡಿದ್ದರು ೧೭೮೯ ರಲ್ಲಿ ಕ್ರಾಂತಿಕಾರಕ ಜನಜಂಗುಳಿಯು ಇದನ್ನು ಮುತ್ತಿ, ನೆಲಸಮ ಮಾಡಿದರು

** ಈತನು ಏಸು ಕ್ರಿಸ್ತನ ದ್ವಾದಶ ಶಿಷ್ಯರಲ್ಲಿ ಒಬ್ಬನು ಮೊದಲೇ ಕ್ರಿಸ್ತನು ಹೇಳಿದಂತೆ ಈತನು ತನ್ನ ಗುರುವನ್ನು ಶತ್ರು ಪಕ್ಷದವರಿಗೆ ಬಿಟ್ಟುಕೊಟ್ಟನು ಈತನು ಈ ಕಾರ್ಯದಿಂದ ವಿಶ್ವಾಸಘಾತಕತನಕ್ಕೆ ಹೆಸರಾದನು.

ಆದರೆ ಅವನಿಗೆ ಎಲ್ಲಕ್ಕಿಂತ ಕಷ್ಟತಮವಾದುದೆಂದರೆ, ತನ್ನನ್ನು ಆಹುತಿಗೊಳ್ಳುತ್ತಿರುವ ರಾಗಗಳನ್ನು ತಡೆಗಟ್ಟಿ ನಿರೋಧಿಸುವುದು ತಾನು ಅವುಗಳ ಒಡೆಯನಾಗುವವರೆಗೆ ಅವನು ತನ್ನ ಮಾನವೀಯ ಪಿತ್ರಾರ್ಜಿತವನ್ನು ಸಂಪೂರ್ಣವಾಗಿ ಅನುಭವಿಸಲಾರ ಆದರೆ ನಾವು ಚಲಿಸದ ಪಾದಗಳನ್ನು ಮತ್ತು ಪಕ್ಷವಾತ ಗ್ರಸ್ತಹಸ್ತಗಳನ್ನು ನಿರೋಧಿಸಬೇಕೆ ?

ಕೆಲವು ದಕ್ಷಿಣ ಆಫ್ರಿಕ ಕಾದಂಬರಿಕಾರರನ್ನು ಕುರಿತು ರಾಯ್ ಕ್ಯಾಂಬೆಲ್‌ರು ಬರೆದ ಬರವಣಿಗೆಯಿಂದ ನಾಲ್ಕು ಪಾದಗಳನ್ನು ಉದ್ಧಾರ ಮಾಡುವ ಚಾಪಲ್ಯವನ್ನು ನಾನು ತಡೆಯಲಾರೆ ಅವು ಭಾರತದ ಅನೇಕ ರಾಜಕೀಯ ಪಕ್ಷಗಳಿಗೆ ತತ್ಸದೃಶವಾಗಿ ಅನ್ವಯಿಸುವಂತೆ ತೋರುತ್ತದೆ

" ನೀವೆಲ್ಲರುಂ ಗಾಢಸಂಯಮದಿ ಬರೆವುದನು ಹೊಗಳುವರು
ನಿಜದಿಂದೆ ನಾನಿದನ್ ಒಪ್ಪುವೆನು
ಕಡಿವಾಣವನು ನೀವು ಚೆನ್ನಾಗಿ ಬಳಸುಪಿರಿ
ಆದರಾ ಹಾಳ್ಕುದುರೆಯಲ್ಲಿಹುದು ? "

ಮಧ್ಯಮ ಪರಿಪಾಟಿಯ ಇಕ್ಕಟ್ಟಿನ ಹಾದಿಯನ್ನು ನಾವು ಅನುಸರಿಸುತ್ತಿರುವುದಾಗಿಯೂ ಕಾಂಗ್ರೆಸ್ ಮತ್ತು ಸರಕಾರಗಳ ಅತಿರೇಕಗಳ ಮಧ್ಯೇ ಹಡಗು ನಡೆಸುವುದಾಗಿಯೂ ನಮಗೆ ನಮ್ಮ ಉದಾರವಾದಿ ಮಿತ್ರರು ಹೇಳುತ್ತಾರೆ ಇಬ್ಬರ ದೌರ್ಬಲ್ಯಗಳ ನ್ಯಾಯಾಧಿಕಾರಿಗಳೆಂದು ಅವರು ತಮ್ಮನ್ನು ತಾವು ನೇಮಿಸಿಕೊಂಡು, ಇಬ್ಬರ ಗೋಜಿನಿಂದಲೂ ತಮಗೆ ಬಿಡುಗಡೆಯಿದೆಯಂದು ಆತ್ಮ ಪ್ರಶಂಸೆ ಮಾಡಿಕೊಳ್ಳುವರು ತಕ್ಕಡಿಯನ್ನು ಹಿಡಿಯಲು ಅವರು ಪ್ರಯತ್ನಿಸುವರು ಮತ್ತು ಪ್ರಾಯಶಃ ಧರ್ಮದೇವತೆಯ ವಿಗ್ರಹದಂತೆ ಅವರು ಎರಡು ಕಣ್ಣುಗಳನ್ನೂ ಮುಚ್ಚಿಕೊಂಡಿರುವರು, ಇಲ್ಲವೇ ಅವನ್ನು ಪಟ್ಟಿಯಿಂದ ಕಟ್ಟಿಕೊಂಡಿರುವರು ನನ್ನನ್ನು ಶತಮಾನಗಳ ಹಿಂದಕ್ಕೆ ಕರೆದೊಯ್ದು, ಆ ಪ್ರಸಿದ್ಧ ವಾಣಿಯನ್ನು ಆಲಿಸುವಂತೆ ಮಾಡುವುದು ಕೇವಲ ನನ್ನ ಮನೋಭ್ರಾಂತಿಯೇನು 'ಸ್ಕ್ರೈಬ್ಸ್ ಮತ್ತು ಫ್ಯಾರಸಿಗಳೇ ಸೊಳ್ಳೆಯನ್ನು ನುಂಗಲು ತಿಣುಕುತ್ತ ಒಂಟೆಯನ್ನು ಗುಳಕ್ಕನೆ ನುಂಗಿಬಿಡುವ ಅಂಧಮಾರ್ಗದರ್ಶಿಗಳೇ ! "

೫೨

# ಡೊಮಿನಿಯನ್ ಸ್ಟೇಟಸ್ ಮತ್ತು ಸ್ವಾತಂತ್ರ್ಯ

ಕಳೆದ ಹದಿನೇಳು ವರ್ಷಗಳಿಂದ ಕಾಂಗ್ರೆಸ್ಸಿನ ನೀತಿಗೆ ರೂಪುರೇಷೆಗಳನ್ನಿತ್ತವರಲ್ಲಿ ಅನೇಕರು ಮಧ್ಯವರ್ಗದವರು ಉದಾರವಾದಿಗಳಾಗಲಿ ಕಾಂಗ್ರೆಸ್ಸಿನವರಾಗಲಿ, ಎಲ್ಲರೂ ಒಂದೇ ತರಗತಿಯವರು, ಒಂದೇ ವಾತಾವರಣದಲ್ಲಿ ಬೆಳೆದವರು ಅವರ ಸಾಮಾಜಿಕ ಜೀವನ, ಸಂಪರ್ಕಗಳು ಸ್ನೇಹಗಳಲ್ಲಿ ಸಾಸಟಿಯಿದೆ, ಮತ್ತು ಆರಂಭದಲ್ಲಿ ಅವರು ಮೆರೆದ ಇಬ್ಬಗೆಗಳ ಮಧ್ಯಶ್ರೇಣಿಯ ಆದರ್ಶಗಳಿಗೆ ಪರಸ್ಪರ ವ್ಯತ್ಯಾಸವೇ ಇರಲಿಲ್ಲ ಪ್ರಾವೃತ್ತಿಕ ಮತ್ತು ಮಾನಸಿಕ ಭಿನ್ನತೆಗಳು ಅವರವರನ್ನು ಬೇರಬೇರೆ ಮಾಡಲಾರಂಭಿಸಿದುವು ಅವರವರು ಬೇರೆಬೇರೆ ದಿಕ್ಕುಗಳಲ್ಲಿ ನೋಡಲಾರಂಭಿಸಿದರು—ಒಂದು ಗುಂಪು, ಸರಕಾರದ, ಬಲ್ಲಿದರ, ಮೇಲ್ಮಧ್ಯಮ ತರಗತಿಯ ಕಡೆಗೆ, ಇನ್ನೊಂದು ಗುಂಪು ಕೆಳಮಧ್ಯಮ ತರಗತಿಗಳ ಕಡೆಗೆ ಆದರೂ ಕಲ್ಪನವಿಜ್ಞಾನವು ಒಂದೇ ಆಗಿತ್ತು, ಗೊತ್ತುಗುರಿಗಳು ಭಿನ್ನವಾಗಿರಲಿಲ್ಲ, ಆದರೆ ಆ ವೇಳೆಗೆ ಎರಡನೆಯ ಸಂಗಡದ ಹಿಂದೆ, ಸಂತೆಮಾಳದವರ, ಕೀಳ್ತರ ದರ್ಜೆಯ ಉದ್ಯೋಗಸ್ಥರ ಮತ್ತು ಕಲಿತ ನಿರುದ್ಯೋಗಿಗಳ ಬಹುಮಂದಿಯ ತಳ್ಳು ಇದ್ದಿತು ಸ್ವಭಾವವು ವ್ಯತ್ಯಸ್ತವಾಯಿತು, ಅದರಲ್ಲಿ ಗೌರವತೆಯಾಗಲಿ ವಿನಮ್ರತೆಯಾಗಲಿ ಇಲ್ಲದೆ, ಮುನ್ನುಗ್ಗುವಿಕೆಯೂ ಮೇಲ್ಬೀಳುವಿಕೆಯೂ ಇದ್ದಿತು ಪರಿಣಾಮಕಾರಿಯಾಗುವ ಕಾರ್ಯವನ್ನು ಮಾಡಲು ಶಕ್ತಿಯಲ್ಲಿ ವಾರಡಿ ಬಂದಿದ್ದುದರಿಂದ, ಕಟುವಾದ ಭಾಷೆಯಲ್ಲಿ ಕೊಂಚ ಮಟ್ಟಿನ ಬಿಡುಗಡೆ ದೊರೆಯಿತು ಈ ಹೊಸ ಬೆಳವಣಿಗೆಯನ್ನು ಕಂಡು ಬೆದರಿ, ಮಿತಗಾಮಿ ಅಂಶಗಳು ಹೊರಬಿದ್ದು ಒಂಟಿರಿ ನೆಲೆಯಲ್ಲಿ ನೆಮ್ಮದಿಯಾಗಿರಲು ಹವಣಿಸಿದರು ಹೀಗಾದರೂ, ಸಂಖ್ಯಾಬಲದಲ್ಲಿ ಸಣ್ಣ ಮಧ್ಯಶ್ರೇಣಿಯವರು ಅಧಿಕರಿಸಿದ್ದರೂ, ಕಾಂಗ್ರೆಸ್ಸಿನಲ್ಲಿ ಮೇಲ್ಮಧ್ಯಮ ತರಗತಿಗಳ ಪ್ರಾತಿನಿಧ್ಯವು ಬಲವಾಗಿದ್ದಿತು ಅವರು ರಾಷ್ಟ್ರೀಯ ಸಂಗ್ರಾಮದಲ್ಲಿ ವಿಜಯವನ್ನು ಪಡೆಯಬೇಕೆಂಬ ಆಶೋತ್ತರದಿಂದ ಮಾತ್ರವಲ್ಲದ, ಆ ಸಂಗ್ರಾಮದಲ್ಲಿ ಒಂದು ಆಂತರಿಕ ಸಂತೃಪ್ತಿಯನ್ನು ಪಡೆಯಬೇಕೆಂಬ ಹವಣಿಕೆಯಿಂದಲೂ ಸಹ ಅವರು ಸೆಳೆಯಲ್ಪಟ್ಟರು ಅದರಿಂದ ಅವರ ಕಳೆದು ಹೋದ ಪ್ರತಿಷ್ಠೆಯನ್ನು ಮತ್ತು ಆತ್ಮಗೌರವವನ್ನು ತಿರುಗಿ ಪಡೆದುಕೊಳ್ಳಲು, ಪುಡಿಪುಡಿಯಾಗಿ ಹೋಗಿದ್ದ ಅವರ ಮಾನವನ್ನು ಪುನರುಜ್ಜೀವನಗೊಳಿಸಲು ಹವಣಿಸಿದರು ಅದು ಎಂದಿನ ರಾಷ್ಟ್ರೀಯ ಪ್ರೇರಣೆಯೇ, ಎಲ್ಲರಿಗೂ ಇದು ಸಾಮಾನ್ಯವಾಗಿದ್ದರೂ, ವಿಷಯವೇನೆಂದರೆ, ಮಿತಗಾಮಿಗಳ ಮತ್ತು ತೀವ್ರಗಾಮಿಗಳ ಪ್ರಾವೃತ್ತಿಕ ಭಿನ್ನತೆಯು ಪರಿಸ್ಫುಟವಾಯಿತು ಕ್ರಮಕ್ರಮವಾಗಿ ಕೆಳಮಧ್ಯಮ ತರಗತಿಯವರು ಕಾಂಗ್ರೆಸ್ಸಿ

ನಲ್ಲಿ ಅಧಿಕರಿಸಲಾರಂಭಿಸಿದರು, ಮುಂದೆ ಬೇಸಾಯಗಾರ ಜಂಗುಳಿಯು ತನ್ನ ಪ್ರಭಾವ ವನ್ನು ಬೀರಿತು

ಕಾಂಗ್ರೆಸ್ಸು ಹಳ್ಳಿಗಾಡು ಜಂಗುಳಿಯನ್ನು ಹೆಚ್ಚುಹೆಚ್ಚಾಗಿ ಪ್ರತಿನಿಧಿಸುತ್ತ ಬಂದಂತೆಲ್ಲ ಉದಾರವಾದಿಗಳಿಗೂ ಅದಕ್ಕೂ ನಡುವೆಯಿದ್ದ ಕಮರಿಯು ಅಗಲ ವಾಗುತ್ತ ಬಂದು, ಉದಾರವಾದಿಗೆ ಕಾಂಗ್ರೆಸ್ಸಿನ ದೃಷ್ಟಿಕೋನವನ್ನು ಅರ್ಥಮಾಡಿ ಕೊಳ್ಳಲಾಗಲಿ ಅಥವಾ ಸ್ವಾರಸ್ಯವನ್ನು ಗ್ರಹಿಸಲಾಗಲಿ ಬಹುತರವಾಗಿ ಅಸಾಧ್ಯವಾಗಿ ಬಿಟ್ಟಿತು ಉತ್ತಮವರ್ಗದ ಸ್ವಾಗತ ಕೊಠಡಿಗೆ ಬಡ ಗುಡಿಲನ್ನೋ ಮಣ್ಣು ಜೋಪಡಿಯನ್ನೋ ಅರ್ಥಮಾಡಿಕೊಳ್ಳುವುದು ಸುಲಭವಲ್ಲ ಇಷ್ಟು ಭಿನ್ನತೆಗಳಿದ್ದರೂ, ಉಭಯ ಕಲ್ಪನವಿಜ್ಞಾನಗಳೂ ರಾಷ್ಟ್ರೀಯತಾವಾದಿಯೂ ಮಧ್ಯಶ್ರೇಣಿಯವೂ ಆಗಿದ್ದುವು, ವ್ಯತ್ಯಾಸವು ಮಟ್ಟದ್ದಾಗಿತ್ತೇ ವಿನಾ ವರ್ಗದ್ದಾಗಿರಲಿಲ್ಲ ಉದಾರವಾದಿ ಗುಂಪಿನೊಂದಿಗೆ ಒಗ್ಗಿ ಬಾಳಬಹುದಾಗಿದ್ದ ಅನೇಕ ಮಂದಿ ಕೊನೆಯವರೆಗೂ ಕಾಂಗ್ರೆಸ್ಸಿನಲ್ಲಿ ಉಳಿದರು

ಅನೇಕ ತಲೆಮಾರುಗಳವರೆಗ ಬ್ರಿಟಿಷರು ಭಾರತವನ್ನು ತಮ್ಮ ಸ್ವಾಧೀನದ ಅತಿ ದೊಡ್ಡ ಭೂಮಿಕಾಣಿಗಳ ನಡುವೆ ಕಟ್ಟಿರುವ, ಮೇಲ್ವಿಚಾರಣೆಯ ಕೇಂದ್ರವಾದ 'ಹಳ್ಳಿ ಮನೆ' (ಕಂಟ್ರಿ ಹೌಸ್) ಯಂತೆ ಪರಿಗಣಿಸಿದ್ದಾರೆ [ಹಳೆಯ ಇಂಗ್ಲಿಷ್ ಮಾದರಿಯ ಅನುಕರಣವಿದು) ಅವರು ದೊಡ್ಡ ಮನುಷ್ಯರಾದ ಮನೆಯ ಯಜಮಾನ ವರ್ಗದವರೂ, ಮನೆಯ ಅಪೇಕ್ಷಣೀಯ ಭಾಗಗಳನ್ನು ಆಕ್ರಮಿಸಿಕೊಂಡವರೂ ಆಗಿದ್ದರು ಭಾರತೀಯರಾದರೋ ಆಳುಗಳ ತೊಟ್ಟಿ, ಉಗ್ರಾಣ ಮತ್ತು ಅಡುಗೆ ಮನೆಗಳಲ್ಲಿ ಮಾತ್ರ ಕಟ್ಟಿಹಾಕಲ್ಪಟ್ಟರು ಸಂಪ್ರದಾಯಬದ್ಧವಾದ ಪ್ರತಿಯೊಂದು 'ಹಳ್ಳಿ–ಮನೆ' ಯಲ್ಲಿಯೂ ಅಧೋಲೋಕಗಳಲ್ಲಿ ಒಂದು ಅಚಲವಾದ ಪೌರೋಹಿತ್ಯಾಧಿಕಾರದ ಶ್ರೇಣಿಯಿದ್ದು, ವರ್ಗವರ್ಗಗಳಲ್ಲಿ ಪ್ರಾಧಾನ್ಯ ಮುಂತಾದವುಗಳ ಕಟ್ಟುನಿಟ್ಟಾದ ಅನುಸರಣೆಯಿದ್ದಿತು ಬಡಿಸುವವ, ಮನೆಯ ಆಳು, ಬಾಣಸಿಗ, ಹೆಣ್ಣಾಳು, ಕಾಲಾಳು, ಇತ್ಯಾದಿ ಇತ್ಯಾದಿ ಆದರೆ ಮನೆಯ ಊರ್ಧ್ವಲೋಕ ಮತ್ತು ಅಧೋಲೋಕಗಳ ನಡುವೆ ದಾಟಲಸದಳವಾದ ಸಾಮಾಜಿಕ ಮತ್ತು ರಾಜಕೀಯ ಅಡ್ಡಗೋಡೆಯಿದ್ದಿತು ಈ ಏರ್ಪಾಡನ್ನು ಬ್ರಿಟಿಷ್ ಸರಕಾರವು ನಮ್ಮಗಳ ಮೇಲೆ ಒತ್ತಿ ನಡೆಸಿದುದು ಆಶ್ಚರ್ಯಕರವಾಗಿರಲಿಲ್ಲ ಆದರೆ ನಿಜವಾಗಿ ಆಶ್ಚರ್ಯಕರವಾಗಿರುವಂತೆ ತೋರುವ ವಿಷಯವೆಂದರ, ನಾವು ಅಥವಾ ನಮ್ಮಲ್ಲನೇಕರು ಅದನ್ನು ನಮ್ಮ ಜೀವನದ ಮತ್ತು ವಿಧಿಯ ನೈಸರ್ಗಿಕ ಮತ್ತು ಅನಿವಾರ್ಯವಾದ ನೇರ್ಪಾಟೆಂದು ಅದನ್ನು ನಾವು ಒಪ್ಪಿಕೊಂಡುದು 'ಹಳ್ಳಿ ಮನೆ' ಯ ಒಳ್ಳೆಯ ಆಳಿನ ಮನಃಪ್ರವೃತ್ತಿಯನ್ನು ನಾವು ಬೆಳೆಯಿಸಿಕೊಂಡೆವು ಒಂದೊಂದು ವೇಳೆ ನಮಗೆ ಅತ್ಯಪೂರ್ವವಾದ ಮನ್ನಣೆಯು ಲಭಿಸುತ್ತಿತ್ತು, ಸ್ವಾಗತ ಕೊಠಡಿಯಲ್ಲಿ ನಮಗೆ ಒಂದು

ಲೋಟ ಚಾ ದೊರೆಯುತ್ತಿತ್ತು ಗೌರವಸ್ಥರಾಗಬೇಕೆಂಬುದು, ಊರ್ಧ್ವಲೋಕಗಳಿಗೆ ಒಬ್ಬೊಬ್ಬರಾಗಿ ಏರಬೇಕೆಂಬುದು ನಮ್ಮ ಹಬ್ಬಯಕೆಯ ತುಟ್ಟತುದಿಯಾಯಿತು ಶಸ್ತ್ರಾಸ್ತ್ರಗಳ ಅಥವಾ ಕುಟಿಲ ನೀತಿಯ ಯಾವ ಅಪ್ರತಿಮ ದಿಗ್ವಿಜಯಕ್ಕಿಂತ ಭಾರತದಲ್ಲಿ ಬ್ರಿಟಿಷರು ಕೈಗೂಡಿಸಿಕೊಂಡ ಈ ಮಾನಸಿಕ ವಿಜಯ ಬಹು ದೊಡ್ಡದು ಪೂರ್ವಕಾಲದಲ್ಲಿ ಪ್ರಾಜ್ಞರು ಹೇಳಿದಂತೆ, ದಾಸನು ದಾಸೋಚಿತವಾಗಿಯೇ ಆಲೋಚನೆ ಮಾಡಲಾರಂಭಿಸಿದನು

ಕಾಲಧರ್ಮವು ವ್ಯತ್ಯಾಸವಾಗಿದೆ 'ಹಳ್ಳಿ-ಮನೆ'ಯ ಮಾದರಿಯ ನಾಗರಿಕತೆಯು ಈಗ ಇಂಗ್ಲೆಂಡಿನಲ್ಲಾಗಲಿ ಭಾರತದಲ್ಲಾಗಲಿ ಎದೆಯಾರ ಸ್ವೀಕೃತವಾಗುವುದಿಲ್ಲ ಆಳುಗಳು ತೊಟ್ಟಿಗಳಲ್ಲೇ ಇದು ಬಿಡಬೇಕೆಂಬ ಅಪೇಕ್ಷೆಯಿದ್ದು, ಅವರು ತೊಟ್ಟಿರುವ ಜರತಾರಿಯ ಅಂಗಿಗುಚ್ಚು ಮತ್ತು ಹೊಳೆವ ಡವಾಲಿಗಳ ವಿಷಯದಲ್ಲಿ ಹೆಮ್ಮೆಪಡುವವರು ಇನ್ನೂ ನಮ್ಮ ನಡುವೆ ಇದ್ದಾರೆ ಇತರರು, ಉದಾರವಾದಿಗಳಂಥವರು, ಆ 'ಹಳ್ಳಿ ಮನೆ'ಯನ್ನು ಸಂಪೂರ್ಣವಾಗಿ ಒಪ್ಪುತ್ತಾರೆ, ಅದರ ಶಿಲ್ಪಕೌಶಲವನ್ನೂ ಇಡೀ ಕಟ್ಟಡವನ್ನೂ ಮೆಚ್ಚುತ್ತಾರೆ, ಆದರ ಮನೆಯ ಯಜಮಾನರುಗಳನ್ನು ಒಬ್ಬೊಬ್ಬರನ್ನಾಗಿ ಹೊರದೂಡಿ, ಆ ಸ್ಥಳಗಳಲ್ಲಿ ತಾವು ಕುಳಿತುಕೊಳ್ಳುವ ಪ್ರತ್ಯಾಪಯನ್ನಿಟ್ಟುಕೊಂಡು ಇದ್ದಾರೆ ಇದನ್ನು ಅವರು ಭಾರತೀಕರಣ ಎನ್ನುತ್ತಾರೆ ಅವರ ಮುಂದಿರುವ ಸಮಸ್ಯೆಯೆಂದರೆ, ಆಡಳಿತದ ಬಣ್ಣವನ್ನು ಬೇರೆಮಾಡುವುದು ಅಥವಾ ಕನಿಷ್ಠಪಕ್ಷ ಬೇರೊಂದು ಹೊಸ ಆಡಳಿತವನ್ನು ನಡೆಸುವುದು ಹೊಸದೊಂದು ರಾಜ್ಯರಚನೆಯ ದೃಷ್ಟಿಯಲ್ಲಿ ಅವರು ಯೋಚಿಸುವುದೇ ಇಲ್ಲ

ಅವರಿಗೆ ಸ್ವರಾಜ್ಯವೆಂದರೆ ಎಲ್ಲವೂ ಹಿಂದಿದ್ದಂತೆಯೇ ಇರುವ, ಆದರೆ ಕೃಷ್ಣವರ್ಣಯುಕ್ತವಾದ ಪರಿಸ್ಥಿತಿ, ತಾವು ಅಥವಾ ತಮ್ಮಂತಹವರು ಮುಖ್ಯಪಾತ್ರವನ್ನು ವಹಿಸಿ, ಆಂಗ್ಲ ಉತ್ತುಂಗ ಅಧಿಕಾರಿಗಳ ಸ್ಥಾನಗಳಲ್ಲಿ ತಾವು ಕುಳಿತುಕೊಳ್ಳುವುದು, ಇದೇ ವಿಧವಾದ ನೌಕರಿಗಳು, ಸರಕಾರಿ ಇಲಾಖೆಗಳು, ಶಾಸನ ಸಭೆಗಳು, ವಾಣಿಜ್ಯ, ಕೈಗಾರಿಕೆಗಳು—ಎ ಸಿ ಯಸ್ ಪ್ರಭೃತಿಗಳು ಅವರವರ ಕೆಲಸಗಳಲ್ಲಿ ನಿರತರಾಗಿರುವುದ್ , ಆಗಾಗ ವಿಕಟ ವೇಷಭೂಷಣಗಳಲ್ಲಿ ಅಥವಾ ಮದುವಣಿಗನ ವಸಂತದಿನದ ಉಡುಪಿನಲ್ಲಿ ಮಿರುಮಿರಿಯುತ್ತ ತಮ್ಮ ಪ್ರಜೆಗಳಿಗೆ ದಂಗುಬಡಿಸಲು ತೋರಿಕೊಳ್ಳುವ ಅರಸರು ಅವರ ಅರಮನೆಗಳಲ್ಲಿ, ವಿಶೇಷ ರಕ್ಷಣೆಗಳನ್ನು ಹಕ್ಕು ಕೇಳುತ್ತಿರುವ ತಮ್ಮ ಒಕ್ಕಲಿನವರಿಗೆ ಕೋಟಲೆಗೊಡುತ್ತಿರುವ ಜಮೀನ್ದಾರರು, ಹಣದ ಗಂಟುಗಳಿಂದೊಡಗೂಡಿದ, ಜಮೀನ್ದಾರನನ್ನೂ ಒಕ್ಕಲಿನವನನ್ನೂ ಪ್ರಾಣತೆಗೆಯುತ್ತಿರುವ ಲೇವಾದೇವಿಯವನು, ವರಮಾನವನ್ನು ಕೇಳುತ್ತಿರುವ ವಕೀಲ ಮತ್ತು ಕ್ಷೀರಸಾಗರದಲ್ಲಿ ಸರ್ಪತಲ್ಪದ ಮೇಲೆ ಮಲಗಿರುವ ದೇವಾದಿದೇವ

ಇದ್ದುದನ್ನಿದ್ದಂತೆಯೇ ಇಟ್ಟು ನಡೆಸಿಕೊಂಡು ಹೋಗುವುದರ ಮೇಲೆಯೇ ಅವರ ದೃಷ್ಟಿಕ್ಷೇಪವು ಸಾರಭೂತವಾಗಿ ನೆಲೆಸಿದೆ, ಅವರು ಅಪೇಕ್ಷಿಸುವ ವ್ಯತ್ಯಾಸಗಳನ್ನು ಬಹುತರವಾಗಿ ವೈಯಕ್ತಿಕ ವ್ಯತ್ಯಾಸಗಳು ಎಂದು ಕರೆಯಬಹುದು ಈ ವ್ಯತ್ಯಾಸಗಳನ್ನು, ಬ್ರಿಟಿಷರ ಸೌಜನ್ಯದ ಸಹಾಯದಿಂದ, ನಿಧಾನವಾಗಿ ಜಲ್ಲಡಿಯಲ್ಲಿ ನುಸುಳುತ್ತ ಪಡೆದುಕೊಳ್ಳಲು ಹವಣಿಸುತ್ತಾರೆ ಬ್ರಿಟಿಷ್ ಸಾಮ್ರಾಜ್ಯದ ನಡೆನೆಲೆಗಳ ತಳಹದಿಯ ಮೇಲೆ ಅವರ ರಾಜನೀತಿ ಮತ್ತು ಅರ್ಥಶಾಸ್ತ್ರಗಳು ನಿಂತಿವೆ ಎಷ್ಟಿಲ್ಲವೆಂದರೂ ಇನ್ನೂ ಬಹಳ ಕಾಲದವರೆಗೆ ಸಾಮ್ರಾಜ್ಯವು ಅಲ್ಲಾಡಿಸಲಸಾಧ್ಯವೆಂದು ತಿಳಿದುಕೊಂಡು ಅದಕ್ಕೇ ಹೊಂದಿಕೊಂಡು, ಅದರ ರಾಜಕೀಯ ಮತ್ತು ಆರ್ಥಿಕ ಕಲ್ಪನವಿಜ್ಞಾನಗಳನ್ನು ಸ್ವೀಕರಿಸುವುದು ಮಾತ್ರವಲ್ಲದೆ, ಬ್ರಿಟಿಷ್ ಅಧಿಕರಣದ ಮುನ್ನಡೆಯನ್ನು ಭದ್ರಪಡಿಸುವುದಕ್ಕಾಗಿಯೇ ಸೃಷ್ಟಿತವಾಗಿರುವ ಅದರ ನೈತಿಕ ನಿಯಮಗಳನ್ನು ಬಹುತರವಾಗಿ ಸ್ವೀಕರಿಸುತ್ತಾರೆ

ಕಾಂಗ್ರೆಸ್ಸು ಹೊಸದೊಂದು ರಾಜ್ಯರಚನೆಯನ್ನು ಅರಸುವುದೇ ವಿನಾ ಕೇವಲ ಬೇರೆ ಆಡಳಿತವನ್ನು ಅರಸದಿರುವುದರಿಂದ, ಅದರ ಮನೋಭಾವವು ಅವರ ಮನೋಭಾವದಿಂದ ಭಿನ್ನವಾಗಿರುತ್ತದೆ ಆ ನೂತನ ರಾಜ್ಯರಚನೆಯು ಹೇಗಿರುತ್ತದೆ ಎಂಬುದು ಸಾಧಾರಣ ಕಾಂಗ್ರೆಸ್ಸಿನವನಿಗೆ ಸ್ಫುಟವಾಗಿಲ್ಲದಿರಬಹುದು ಮತ್ತು ಅದನ್ನು ಕುರಿತ ಅಭಿಪ್ರಾಯಗಳು ಬೇರೆಬೇರೆಯಾಗಿರಬಹುದು ಆದರೆ ಪ್ರಚಲಿತ ಪರಿಸ್ಥಿತಿಗಳೂ ವಿಧಾನಗಳೂ ಇನ್ನು ಮುಂದೆ ನಡೆಯಲಾರವೆಂದೂ ನಡೆಯಕೂಡದೆಂದೂ ಮತ್ತು ಮೂಲ ವ್ಯತ್ಯಾಸಗಳು ಅತ್ಯಾವಶ್ಯಕವೆಂದೂ ನಂಬಿಹೇಳುವ ಸಮಾನಕ್ಷೇತ್ರವೊಂದು ಸುವಿಸ್ತಾರವಾದ ಅಂಶುಕಪ್ರಾಂತದ ಹೊರತಾಗಿ ಕಾಂಗ್ರೆಸ್ಸಿನವರಿಗೆ ಇದೆ ಡೊಮಿನಿಯನ್ ಸ್ಟೇಟಸ್ಸಿಗೂ ಸ್ವಾತಂತ್ರ್ಯಕ್ಕೂ ಇರುವ ವ್ಯತ್ಯಾಸವು ಇದರಲ್ಲಿಯೇ ಬ್ರಿಟಿಷ್ ಆರ್ಥಿಕ ವ್ಯವಸ್ಥೆಗೆ ನಮ್ಮನ್ನು ಕಟ್ಟಿಹಾಕಿರುವ, ಕಾಣುವ ಮತ್ತು ಕಾಣದ ಅನೇಕ ಕಟ್ಟುಗಳನ್ನುಳ್ಳ, ಹಳೆಯ ಕಟ್ಟಡವನ್ನು ಮೊದಲಿನದು ಚಿತ್ರಿಸುತ್ತದೆ, ನಮ್ಮ ಪರಿಸ್ಥಿತಿಗಳಿಗನುಕೂಲವಾಗಿರುವ ಹೊಸದೊಂದು ಕಟ್ಟಡವನ್ನು ಕಟ್ಟಿಕೊಳ್ಳಲು, ಎರಡನೆಯದು ಸ್ವಾತಂತ್ರ್ಯವನ್ನು ಕೊಡುತ್ತದೆ ಅಥವಾ ಕೊಡಲೇ ಬೇಕು

ಅದು, ಇಂಗ್ಲೆಂಡ್ ಅಥವಾ ಇಂಗ್ಲಿಷರನ್ನು ಕುರಿತ ತಣಿಯದ, ದುಸ್ಸಂಧೇಯವಾದ ವೈರದ ಅಥವಾ ಏನೇ ಆಗಲಿ ಅವರಿಂದ ಬೇರೆಯಾಗಿ ಬಿಡಬೇಕೆಂಬ ಆಸೆಯ ಪ್ರಶ್ನೆಯಲ್ಲ ಈಗ ನಡದುಹೋಗಿರುವುದೆಲ್ಲದರ ಮೇಲೆ ಭಾರತಕ್ಕೂ ಇಂಗ್ಲೆಂಡಿಗೂ ವೈಮನಸ್ಯವಿದ್ದರೆ ಅದು ಸ್ವಾಭಾವಿಕವೇ "ಅಧಿಕಾರದ ಕೊಕ್ಕರೆಬಿಕ್ಕರೆತನವು ಬೀಗದ ಕೈಯ್ಯನ್ನು ಹಾಳುಮಾಡಿ ಪಿಕಾಶಿಯನ್ನು ಉಪಯೋಗಿಸುತ್ತದೆ," ಎಂದು ಠಾಕೂರರು ಹೇಳುತ್ತಾರೆ. ನಮ್ಮ ಹೃದಯಗಳ ಬೀಗದ ಕೈ ಬಹಳ ಹಿಂದೆಯೇ ಹಾಳುಮಾಡಲ್ಪಟ್ಟಿತ್ತು, ಮತ್ತು ಪಿಕಾಶಿಯ ಹೇರಳವಾದ ಪ್ರಯೋಗವು ನಮ್ಮನ್ನು

ಬ್ರಿಟಿಷರ ಬಗ್ಗೆ ಪಕ್ಷಪಾತಿಗಳನ್ನಾಗಿ ಮಾಡಿಲ್ಲ ಭಾರತದ ಮತ್ತು ಮಾನವರ ವಿಶಾಲತರ ಪಕ್ಷವನ್ನು ವಹಿಸುವೆವೆಂದು ನಾವು ಹೇಳಿಕೊಂಡರೆ, ನಾವು ನಮ್ಮ ಕ್ಷಣಿಕರಾಗಗಳ ಸಳವಿನಲ್ಲಿ ತೇಲಿಹೋಗಲು ಸಾಧ್ಯವಿಲ್ಲ ಒಂದು ವೇಳೆ ಹಾಗೆ ನಾವು ಬಗೆಯನ್ನು ಪಾಲಿಸಿದರೂ ಗಾಂಧಿಜಿಯವರು ಹದಿನೈದು ವರ್ಷಗಳಿಂದ ನಮಗೆ ಕೊಟ್ಟಿರುವ ಕಠಿಣಶಿಕ್ಷಣವು ನಮ್ಮನ್ನು ತಡೆಯುವುದು ಬ್ರಿಟಿಷ್ ಸೆರೆಮನೆಯಲ್ಲಿ ಕುಳಿತು ನಾನು ಇದನ್ನು ಬರೆಯುತ್ತಿದ್ದೇನೆ ಅನೇಕ ತಿಂಗಳುಗಳಿಂದ ನನ್ನ ಮನಸ್ಸು ತಲ್ಲಣಗಳಿಂದ ತುಂಬಿದೆ ಈ ಏಕಾಂತ ಕಾರಾಗೃಹವಾಸದಲ್ಲಿ ಹಿಂದಿನ ಎಲ್ಲ ವಾಸಗಳಿಗಿಂತಲೂ ಪ್ರಾಯಃ ಹೆಚ್ಚಾಗಿಯೇ ನೊಂದಿದ್ದೇನೆ ಅನೇಕ ಘಟನೆಗಳಿಂದ ಕೋಪವೂ ಕಟುಭಾವನೆಯೂ ನನ್ನ ಮನಸ್ಸನ್ನು ಅನೇಕವೇಳೆ ಆವರಿಸಿಕೊಂಡಿವೆ ಆದರೂ ನಾನು ಇಲ್ಲಿ ಕುಳಿತಿರುವ ಹಾಗೆಯೇ ನನ್ನ ಹೃದಯ ಮನಸ್ಸುಗಳ ಆಳವನ್ನು ಭೇದಿಸಿನೋಡಿದರೆ ಇಂಗ್ಲೆಂಡನ್ನು ಕುರಿತಾಗಲಿ, ಇಂಗ್ಲಿಷರನ್ನು ಕುರಿತಾಗಲಿ ಅಲ್ಲಿ ಯಾವ ಕೋಪವೂ ಕಾಣಲಿಲ್ಲ ಬ್ರಿಟಿಷ್ ಸಾಮ್ರಾಜ್ಯಶತ್ವವು ನನಗೆ ಅನಿಷ್ಟವಾಗಿದೆ ಅದನ್ನು ಭಾರತದ ಮೇಲೆ ಹೊರಿಸಿರುವುದನ್ನು ನಾನು ಹೇಸುತ್ತೇನೆ ಬಂಡವಾಳ ವ್ಯವಸ್ಥೆಯು ನನಗೆ ಅನಿಷ್ಟವಾಗಿದೆ ಬ್ರಿಟನ್ನಿನ ಆಳರಸವರ್ಗಗಳು ಭಾರತವನ್ನು ಸ್ವಪ್ರಯೋಜನಕ್ಕಾಗಿ ದುರುಪಯೋಗ ಪಡಿಸುತ್ತಿರುವ ವಿಧಾನವನ್ನು ನಾನು ಅತಿಯಾಗಿ ಹೇಸುತ್ತೇನೆ ಮತ್ತು ಖಂಡಿಸುತ್ತೇನೆ ಆದರೆ ಇಂಗ್ಲೆಂಡನ್ನಾಗಲಿ ಅಥವಾ ಒಟ್ಟಿನಲ್ಲಿ ಇಂಗ್ಲಿಷ್ ಜನತೆಯನ್ನಾಗಲಿ ಇದಕ್ಕೆ ಹೊಣೆಯೆಂದು ನಾನು ಹೇಳುವುದಿಲ್ಲ ಒಂದುವೇಳೆ ನಾನು ಅಭಿಪ್ರಾಯಪಟ್ಟರೂ ಅದರಿಂದ ಹೆಚ್ಚು ವ್ಯತ್ಯಾಸವಾಗುವುದೆಂದು ನಾನು ಯೋಚಿಸುವುದಿಲ್ಲ, ಏಕೆಂದರೆ ಇಡೀ ಜನತೆಯನ್ನು ಕುರಿತು ಕೋಪಮಾಡಿಕೊಳ್ಳುವುದೆಂದರೆ ಅಥವಾ ಅದನ್ನು ಖಂಡಿಸುವುದೆಂದರೆ ಅದು ಸ್ವಲ್ಪ ಅವಿವೇಕ ಪರಿಸ್ಥಿತಿಗೆ ನಾವೆಷ್ಟುಮಟ್ಟಿಗೆ ತುತ್ತಾದವರೋ ಅವರೂ ಅಷ್ಟೇಮಟ್ಟಿಗೆ ತುತ್ತಾದವರು

ಸ್ವಕೀಯವಾಗಿ, ಇಂಗ್ಲೆಂಡಿಗೆ ನಾನು ಸಂಪೂರ್ಣ ಪರಕೀಯನಾಗಿರುವಂತೆ ಎಂದಿಗಾದರೂ ಭಾವಿಸಿಕೊಳ್ಳಲು ಅಸಾಧ್ಯವಾಗುವಷ್ಟು ನನ್ನ ಮಾನಸಿಕ ಕಟ್ಟಡಕ್ಕಾಗಿ ಆಕಗೆ ಋಣಿಯಾಗಿದ್ದೇನೆ ಮತ್ತು ನಾನು ಏನೇ ಮಾಡಿದರೂ ಇಂಗ್ಲೆಂಡಿನಲ್ಲಿ ಶಾಲೆ ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ನಾನು ಪಡೆದುಕೊಂಡ ಮಾನಸಿಕ ಅಭ್ಯಾಸಗಳು, ಮತ್ತು ಇತರ ರಾಜ್ಯಗಳನ್ನೂ ಸಾಮಾನ್ಯವಾಗಿ ಜೀವನವನ್ನೂ ಕುರಿತು ಪರ್ಯಾಲೋಚಿಸುವ ಪರಿಮಾಣಗಳು, ಮತ್ತು ವಿಧಾನಗಳು, ಇವುಗಳನ್ನು ಬಿಟ್ಟುಬಿಡಲು ನನಗೆ ಸಾಧ್ಯವಿಲ್ಲ ನನ್ನ ಪಕ್ಷಪಾತಗಳೆಲ್ಲ (ರಾಜಕೀಯ ಸಮುಕ್ಷೇತ್ರವನ್ನು ಬಿಟ್ಟು) ಇಂಗ್ಲೆಂಡಿನ ಮತ್ತು ಇಂಗ್ಲಿಷ್ ಜನತೆಯ ಕಡೆಗೇ ಇವೆ ಜನರು ಹೇಳುವಂತೆ, ಭಾರತದಲ್ಲಿ ಬ್ರಿಟಿಷ್ ಪ್ರಭುತ್ವದ ಸಗ್ಗದ ಪ್ರತಿಕಕ್ಷಿಯು ನಾನಾಗಿದ್ದರೆ ಅದು ಬಹುತರವಾಗಿ ನನ್ನನ್ನು ನಾನು ಮಾರಿಯೇ

ನಾವು ಆಕ್ಷೇಪಿಸುವುದು ಮತ್ತು ಯಾವುದರೊಡನೆ ನಾವು ಸಮ್ಮತದಿಂದ ಒಡಂಬಡುವುದಸಾಧ್ಯವಾಗಿರುವುದೋ ಅದು ಆ ಪ್ರಭುತ್ವ, ಆ ಆಧಿಕರಣ—ಇಂಗ್ಲಿಷ್ ಜನತೆಯಲ್ಲ ಸಂತೋಷವಾಗಿ ಇಂಗ್ಲಿಷ್ ಮತ್ತು ಇತರ ವಿದೇಶೀ ಜನತೆಗಳೊಂದಿಗೆ ಆದಷ್ಟು ಅತಿನಿಕಟ ಸಂಪರ್ಕಗಳನ್ನು ಪಡೆಯೋಣ ನಮಗೆ ಭಾರತದಲ್ಲಿ ಹೊಸ ಗಾಳಿ, ಹೊಸ ಮತ್ತು ಸತ್ವಯುಕ್ತ ಕಲ್ಪನೆಗಳು, ಆರೋಗ್ಯದಾಯಕವಾದ ಸಹಕಾರ, ಇವು ಬೇಕು, ಮುಪ್ಪೇರಿ ನಮಗೆ ಮುಗ್ಗಲು ಹಿಡಿದುಹೋಗಿದೆ ಆದರೆ ಇಂಗ್ಲಿಷರು ವ್ಯಾಘ್ರ ಪಾತ್ರವನ್ನು ಧರಿಸಿ ಬಂದರ ಅವರು ಸ್ನೇಹವನ್ನಾಗಲಿ, ಸಹಕಾರವನ್ನಾಗಲಿ ನಿರೀಕ್ಷಿಸಬೇಕಾಗಿಲ್ಲ ಸಾಮ್ರಾಜ್ಯತತ್ವದ ಹುಲಿಗೆ ಅತ್ಯುಗ್ರ ಪ್ರತಿಭಟನೆಯು ಮಾತ್ರವಿದೆ ಇಂದು ನಮ್ಮ ನಾಡು ಆ ಉಗ್ರ ಜಂತುವಿನೊಡನೆ ವ್ಯವಹರಿಸಬೇಕಾಗಿದೆ ಅರಣ್ಯದ ಕ್ರೂರ ವ್ಯಾಘ್ರವನ್ನು ಪಳಗಿಸಬಹುದು, ಅದರ ಸ್ವಾಭಾವಿಕ ಕ್ರೌರ್ಯವನ್ನು ಪಂಪುಬಿಟ್ಟು ತೆಗೆದುಬಿಡಬಹುದು ಆದರ ಬಂಡವಾಳಗಾರಿಕ ಮತ್ತು ಸಾಮ್ರಾಜ್ಯತತ್ವಗಳು ಒಟ್ಟಾಗಿ ಸೇರಿ ದುರ್ಭಾಗ್ಯ ನಾಡೊಂದರ ಮೇಲೆ ಬೀಳಲ್ಕು ಉಜ್ಜುಗಿಸುವಾಗ ಅವುಗಳನ್ನು ಪಳಗಿಸುವ ಈ ವಿಧವಾದ ಯಾವ ಸಾಧ್ಯತೆಯೂ ಇಲ್ಲ.

ತಾನಾಗಲಿ ತನ್ನ ನಾಡಾಗಲಿ ಒಡಂಬಡುವುದಿಲ್ಲವೆಂದು ಒಬ್ಬನು ಹೇಳಿದರ ಅದು ಒಂದು ಅರ್ಥದಲ್ಲಿ ಅವಿವೇಕವಾದ ಮಾತು ಏಕೆಂದರೆ ಜೀವನವು ನಮ್ಮನ್ನು ಯಾವಾಗಲೂ ಒಡಂಬಡಿಕೆಗೆ ಬಲಾತ್ಕರಿಸುತ್ತಿದೆ ಇದನ್ನು ಬೇರ ನಾಡಿಗಾಗಲಿ ಜನತೆಗಾಗಲಿ ಸಂಪ್ರಯೋಗಿಸಿದಾಗ ಅದು ಸಂಪೂರ್ಣವಾಗಿ ಅವಿವೇಕ ಆದರೆ ಅದು ಒಂದು ವ್ಯವಸ್ಥೆಗಾಗಲಿ ಅಥವಾ ಒಂದು ವಿಶೇಷ ಪರಿಸ್ಥಿತಿಗಳ ಜೋಡಣೆಗಾಗಲಿ ಸಂಪ್ರಯೋಗವಾದರ ಅದರಲ್ಲಿ ಸತ್ಯವಿರುತ್ತದ ಆಮೇಲೆ ಅದು ಮಾನವೀಯ ಶಕ್ತಿಗೆ, ನಿರ್ವಹಿಸಲು ಮೀರಿದುದಾಗುತ್ತದೆ ಭಾರತೀಯ ಸ್ವಾತಂತ್ರ್ಯ ಮತ್ತು ಬ್ರಿಟಿಷ್ ಸಾಮ್ರಾಜ್ಯತತ್ವ ಇವೆರಡೂ ಸೇರದವು, ಮತ್ತು ಸಮರ ಶಾಸನದಿಂದಾಗಲಿ ಅಥವಾ ಬೇಕಾದಷ್ಟು 'ಕಂಕುಳಲ್ಲಿ—ದೊಣ್ಣೆ—ಕೈಯಲ್ಲಿ—ಶರಣಾರ್ತಿ'ಯಿಂದಾಗಲಿ ಅವುಗಳನ್ನು ಒಟ್ಟಿಗೆ ತರುವುದೋ ಇಲ್ಲವೇ ಸೇರಿಸುವುದೋ ಸಾಧ್ಯವಿಲ್ಲ ಭಾರತದಿಂದ ಬ್ರಿಟಿಷ್ ಸಾಮ್ರಾಜ್ಯತತ್ವದ ಹೊರವಡಣೆಯೊಂದು ಮಾತ್ರದಿಂದಲೇ ನಿಜವಾದ ಭಾರತೀಯ-ಬ್ರಿಟಿಷ್ ಸಹಕಾರವು ನಡೆಯಲು ಸಾಧ್ಯವಾದ ಪರಿಸ್ಥಿತಿಗಳು ಸೃಷ್ಟಿತವಾಗುವುವು

ಹೆಚ್ಚುಹೆಚ್ಚಾಗಿ ಪರಸ್ಪರಾಶ್ರಿತವಾಗುತ್ತಿರುವ ಆಧುನಿಕ ಪ್ರಪಂಚದಲ್ಲಿ ಸ್ವಾತಂತ್ರ್ಯವು ಸಂಕುಚಿತವಾದ ಶ್ರದ್ಧೆಯೆಂದೂ ಆದುದರಿಂದ ಸ್ವಾತಂತ್ರ್ಯಕ್ಕಾಗಿ ತಗಾದೆ ಮಾಡುವುದರಿಂದ ನಾವು ಕಾಲಚಕ್ರವನ್ನು ಹಿಂದಕ್ಕೆ ತಿರುಗಿಸಲು ಪ್ರಯತ್ನ ಮಾಡಿದಂತಾಗುತ್ತದಯೆಂದೂ ನಮಗೆ ಹೇಳುತ್ತಾರೆ ಬ್ರಿಟನ್ನಿನ ಉದಾರವಾದಿಗಳೂ

ಶಾಂತಿವಾದಿಗಳೂ ಮತ್ತು ಸಮತಾವಾದಿಗಳೆಂದು ಹೇಳಿಕೊಳ್ಳುವವರೂ ಸಹ ಇದೇ ನೆಪವನ್ನು ಮುಂದಿಟ್ಟು, ನಮ್ಮ ಸಂಕುಚಿತ ರಾಷ್ಟ್ರೀಯತಾವಾದಕ್ಕಾಗಿ ನಮ್ಮನ್ನು ಹಳಿದು, ಪ್ರಾಸಂಗಿಕವಾಗಿ ಸಂಪೂರ್ಣತರ ರಾಷ್ಟ್ರೀಯ ಜೀವನಕ್ಕೆ 'ಬ್ರಿಟಿಷ್ ಕಾಮನ್‌ವೆಲ್ತ್ ಆಫ್ ನೇಷನ್ಸ್' ಒಂದು ಮಾತ್ರ ಮಾರ್ಗವಾಗಿದೆಯೆಂದು ಸೂಚಿಸುತ್ತಾರೆ ಇಂಗ್ಲೆಂಡಿನಲ್ಲಿ ಎಲ್ಲ ಮಾರ್ಗಗಳೂ—ಔದಾರ್ಯವಾದ, ಶಾಂತಿವಾದ, ಸಮತಾವಾದ, ಇತ್ಯಾದಿ—ಹೇಗೆ ಸಾಮ್ರಾಜ್ಯದ ಸಂರಕ್ಷಣೆಗೆ ಕರೆದೊಯ್ಯುವುವು, ಎಂಬುದು ವಿಚಿತ್ರವಾಗಿದೆ "ವಿಜಯಿಯಾದ ರಾಜ್ಯದ ಸೂರೆಯನ್ನು ಪಟ್ಟಾಗಿ ಹಿಡಿಯಬೇಕೆಂಬ ಆಶೆಯು ಹೇಗೆ ಸುಲಭವಾಗಿ ಶಾಂತಿವಾದದ ರೂಪವನ್ನು ಧರಿಸುತ್ತದೆಯೋ ಹಾಗೆಯೇ ಆಳುವ ರಾಜ್ಯದ ಇದ್ದುದನ್ನು ಇದ್ದಂತೆಯೇ ಇಡಬೇಕೆಂಬ ಆಶೆಯು ಪದೇಪದೇ 'ರಾಷ್ಟ್ರೀಯತಾವಾದ'ಕ್ಕಿಂತ ಉತ್ತಮವಾದದ್ದೊಂದರಂತೆ ವೇಷಭೂಷಣಗಳನ್ನು ಧರಿಸುತ್ತಿದೆ ಹೀಗೆ ಗಾಂಧಿಜಿಯವರ ಸಮ್ಮುಖದಲ್ಲಿ ಮ್ಯಾಕ್ಡೊನಾಲ್ಡರು ತಾವು ಅಂತರರಾಷ್ಟ್ರೀಯತಾವಾದಿಯಾಗಿರುವಂತೆ ತೋರುತ್ತದೆ," ಎಂದು ಟ್ರಾಟ್ಸ್ಕಿಯವರು ಹೇಳುತ್ತಾರ

ಭಾರತವು ರಾಜಕೀಯವಾಗಿ ಸ್ವತಂತ್ರವಾದಾಗ ಅದು ಹೇಗಿರುವುದೆಂದಾಗಲಿ ಅಥವಾ ಅದು ಏನು ಮಾಡುವುದೆಂದಾಗಲಿ ನನಗೆ ಗೊತ್ತಿಲ್ಲ ಆದರೆ ಇಂದು ಅದರ ಜನತೆಯಲ್ಲಿ ಯಾರು ಯಾರು ರಾಷ್ಟ್ರೀಯ ಸ್ವಾತಂತ್ರ್ಯಕ್ಕಾಗಿ ನಿಂತಿರುವರೋ ಅವರು ಅತ್ಯಂತ ವಿಶಾಲವಾದ ಅಂತರರಾಷ್ಟ್ರೀಯತಾವಾದಕ್ಕಾಗಿಯೂ ಸಹ ನಿಂತಿದ್ದಾರೆಂಬುದು ನನಗೆ ಗೊತ್ತು. ಸಮತಾವಾದಿಗೆ ರಾಷ್ಟ್ರೀಯತಾವಾದವು ಯಾವ ಅರ್ಥವನ್ನೂ ನೀಡುವುದಿಲ್ಲ ಆದರೂ ಕಾಂಗ್ರೆಸ್ಸಿನ ಮುನ್ನಡೆದಿರುವ ಶ್ರೇಣಿಗಳ ಅನೇಕ ಸಮತಾವಾದಿಗಳಲ್ಲದವರೂ ಕೂಡ ದೃಢವಾದ ಅಂತರರಾಷ್ಟ್ರೀಯತಾವಾದಿಗಳಾಗಿರುತ್ತಾರ ನಾವು ಇಂದು ಸ್ವಾತಂತ್ರ್ಯವನ್ನು ಹಕ್ಕು ಕೇಳಿದರೆ ಅದು ಏವಿಕ್ತತ್ವದ ಆಶೆಯಿಂದಲ್ಲ ಅದಕ್ಕೆ ಪ್ರತಿಯಾಗಿ ನಾವು ನಿಜವಾದ ಅಂತರರಾಷ್ಟ್ರೀಯ ವ್ಯವಸ್ಥೆಗೆ ಇತರ ದೇಶಗಳಂತೆಯೇ ನಮ್ಮ ಆ ಸ್ವಾತಂತ್ರ್ಯದ ಭಾಗವೊಂದನ್ನು ಬಿಟ್ಟುಕೊಡಲು ಸಂಪೂರ್ಣ ಸಮ್ಮತದಿಂದಿದ್ದೇವೆ ಯಾವ ಸಾಮ್ರಾಜಿಕ ವ್ಯವಸ್ಥೆಯಾಗಲಿ ಅದು ಯಾವ ಅಟ್ಟಹಾಸದ ಹೆಸರಿನಿಂದ ಕರೆಯಿಸಿಕೊಂಡರೂ ಸರಿಯೆ, ಅದು ಈ ವಿಧವಾದ ವ್ಯವಸ್ಥೆಯೊಂದರ ಶತ್ರು, ಮತ್ತು ವಿಶ್ವಸಹಕಾರವನ್ನಾಗಲಿ, ವಿಶ್ವಶಾಂತಿಯನ್ನಾಗಲಿ ಪಡೆಯುವುದು ಈ ವಿಧವಾದ ವ್ಯವಸ್ಥೆಯ ಮೂಲಕವಲ್ಲ

ಇಡೀ ಜಗತ್ತಿನಲ್ಲಿರುವ ವಿವಿಧ ಸಾಮ್ರಾಜಿಕ ವ್ಯವಸ್ಥೆಗಳು ಹೇಗೆ ಸ್ವಾಶ್ರಯಿಯಾಸತ್ತೆಯಿಂದಲೂ ಆರ್ಥಿಕ ಸಾಮ್ರಾಜ್ಯತತ್ವದಿಂದಲೂ ತಮ್ಮನ್ನು ತಾವು ಹೆಚ್ಚುಹೆಚ್ಚಾಗಿ ಬೇರ್ಪಡಿಸಿಕೊಳ್ಳುತ್ತಿವೆಯೆಂಬುದನ್ನು ಇತ್ತೀಚಿನ ಬೆಳವಣಿಗೆಗಳು, ತೋರಿಸಿಕೊಟ್ಟಿವೆ ಅಂತರರಾಷ್ಟ್ರೀಯತಾವಾದದ ಬೆಳೆವಣಿಗೆಗೆ ಬದಲಾಗಿ ಆ ಕಾರ್ಯವಿಧಾನದ ಹಿಂದು ಮುಂದಾದ ನಡೆಯನ್ನು ನೋಡುತ್ತಿದ್ದೇವೆ ಇದಕ್ಕೆ ಕಾರಣಗಳನ್ನು

ಹುಡುಕಿ ತಿಳಿಯುವುದು ಕಷ್ಟವಲ್ಲ, ಮತ್ತು ಅವು ಪ್ರಚಲಿತ ಆರ್ಥಿಕ ವ್ಯವಸ್ಥೆಯ ವೃದ್ಧಿಂಗತ ದೌರ್ಬಲ್ಯವನ್ನು ಸೂಚಿಸುತ್ತವೆ ಈ ನೀತಿಯ ಫಲಗಳಲ್ಲೊಂದೆಂದರೆ, ಅದು ಸ್ವಾಶ್ರಯಿಾಸತ್ತಾಕ್ಷೇತ್ರದಷ್ಟರಲ್ಲಿ ಹೆಚ್ಚಾದ ಸಹಕಾರವನ್ನು ಸೃಷ್ಟಿಸುವಂತೆಯೇ ಹೊರಗಣ ಪ್ರಪಂಚದಿಂದ ವಿವಿಕ್ತತ್ವವನ್ನು ಸೃಷ್ಟಿಸುತ್ತದೆ ಒಟ್ಟಾವ ಮತ್ತು ಇತರ ನಿರ್ಧಾರಗಳಿಂದ ನಾವು ನೋಡಿರುವಂತೆ, ಭಾರತದ ವಿಷಯದಲ್ಲಿ ಅದು ಇತರ ರಾಜ್ಯಗ ಳೊಡನೆ ನಮ್ಮ ಬಾಂಧವ್ಯಗಳು ಮತ್ತು ಸಂಪರ್ಕಗಳನ್ನು ವೃದ್ಧಿಂಗತವಾಗಿ ಕಡಿಮೆ ಮಾಡುವುದೆಂದಾಗಿದೆ ನಾವು ಹಿಂದಿಗಿಂತಲೂ ಹೆಚ್ಚಾಗಿ ಬ್ರಿಟಿಷ್ ಕೈಗಾರಿಕೆಯ ಆಶ್ರಿತರಾಗಿದ್ದೇವೆ, ಮತ್ತು ಅನೇಕ ವಿಧಗಳಲ್ಲಿ ಮಾಡಿರುವ ಸದ್ಯಃಪಕ್ಷದ ಹಾನಿ ಯನ್ನು ಬಿಟ್ಟರೂ ಈ ನೀತಿಯ ಅಪಾಯಗಳು, ಸ್ವತಸ್ಸಿದ್ಧವಾಗಿವೆ ಹೀಗೆ ಡೊಮಿನಿ ಯನ್ ಸ್ಟೇಟಸ್ಸು ವಿವಿಕ್ತತ್ವಕ್ಕೆ ಕರೆದೊಯ್ಯುವಂತೆ ತೋರುತ್ತದೆಯೇ ಹೊರತು ವಿಶಾಲತರ ಅಂತರರಾಷ್ಟ್ರೀಯ ಸಂಪರ್ಕಗಳಿಗಲ್ಲ

ನಮ್ಮ ಮಿತ್ರರಾದ ಭಾರತೀಯ ಉದಾರವಾದಿಗಳು ಜಗತ್ತನ್ನು ಅದರಲ್ಲಿಯೂ ವಿಶೇಷವಾಗಿ ಅವರ ಸ್ವದೇಶವನ್ನೇ ನಿಜ-ನೀಲಿ ಬಣ್ಣದ ಬ್ರಿಟಿಷ್ ಸುಲೋಚನಗಳ ಮೂಲಕ ನೋಡುವ ಆಶ್ಚರ್ಯಕರವಾದ ಚಾಳಿಯನ್ನು ಪಡೆದಿದ್ದಾರೆ ಕಾಂಗ್ರೆಸ್ಸು ಏನನ್ನು ಹೇಳುತ್ತದ ಮತ್ತು ಏತಕ್ಕೆ ಹಾಗೆ ಹೇಳುತ್ತದ, ಎಂಬುದರ ಸ್ವಾರಸ್ಯವನ್ನು ಗ್ರಹಿಸಲೆತ್ನಿಸದೆ ಸ್ವಾತಂತ್ರ್ಯವು ಡೊಮಿನಿಯನ್ ಸ್ಟೇಟಸ್ಸಿಗಿಂತ ಹೆಚ್ಚು ಸಂಕುಚಿತ ವಾದುದೆಂದೂ ಸೂನ್ಯವಾದ ಇತ್ಯೋದ್ದಾರಕವೆಂದೂ ಹೇಳುವ ಹಳೆಯ ಬ್ರಿಟಿಷ್‌ವಾದ ವನ್ನು ಪುನರುಚ್ಚರಿಸುತ್ತಾರ ಅವರಿಗೆ ಅಂತರರಾಷ್ಟ್ರೀಯತಾವಾದವೆಂದರೆ ಶ್ವೇತ ಭವನ ಏಕೆಂದರೆ ಅವರು ಅಂಶತಃ ಭಾಷೆಯ ತೊಂದರೆಯಿಂದಲೂ ಆದರೆ ಅದ ಕ್ಕಿಂತ ಹೆಚ್ಚಾಗಿ ಅವರಿಗೆ ಇತರ ರಾಜ್ಯಗಳನ್ನು ಸಂಪೂರ್ಣವಾಗಿ ಮರೆತು ಬಿಡುವುದೇ ಸಾಕಾಗಿರುವುದರಿಂದಲೂ ಅವರು ಇತರ ರಾಜ್ಯಗಳನ್ನು ಕುರಿತು ವಿಶೇಷವಾಗಿ ಅಜ್ಞರಾ ಗಿದ್ದಾರೆ. ಸ್ವಾಭಾವಿಕವಾಗಿ ಅವರು ಭಾರತದಲ್ಲಿ ಪ್ರತ್ಯಕ್ಷ ಕಾರ್ಯಕ್ಕೆ ಅಥವಾ ಒಂದು ವಿಧವಾದ ಮೇಲ್ಬೀಳುವ ರಾಜಕಾರಣಕ್ಕೆ ವಿಮುಖರು ಆದರೆ ಅವರ ಕೆಲವು ಮುಂದಾಳುಗಳು ತತ್ಸದೃಶವಾದ ವಿಧಾನಗಳನ್ನು ಇತರ ದೇಶಗಳಲ್ಲಿ ಪ್ರಯೋಗಿಸುವು ದಕ್ಕೆ ಯಾವ ಆಕ್ಷೇಪಣೆಯನ್ನೂ ಮಾಡದಿರುವುದು ಒಂದು ಕೌತುಕ ದೂರದಿಂದಲೇ ಅವುಗಳ ಸ್ವಾರಸ್ಯವನ್ನು ಗ್ರಹಿಸಿ ಅವುಗಳನ್ನು ಶ್ಲಾಘಿಸಲು ಅವರಿಗೆ ಸಾಧ್ಯವಿದೆ, ಮತ್ತು ಪಾಶ್ಚಾತ್ಯ ರಾಜ್ಯಗಳ ಇಂದಿನ ಸರ್ವಾಧಿಕಾರಿಗಳು ಕೆಲವರು ಅವರ ಮಾನಸಿಕ ಪಾದವಂದನೆಯನ್ನು ಸ್ವೀಕರಿಸುತ್ತಾರೆ

ಹೆಸರುಗಳು ಸಾಮಾನ್ಯವಾಗಿ ಅಪಾರ್ಥಗಳನ್ನು ನೀಡುತ್ತವೆ ಆದರೆ ನಮ್ಮ ಮುಂದಿರುವ ಪ್ರಶ್ನೆಯು ಇದು ನಮ್ಮ ಗುರಿಯು ಹೊಸದೊಂದು ರಾಜ್ಯರಚನೆಯೆ ಅಥವಾ ಕೇವಲ ಹೊಸದೊಂದು ಆಡಳಿತವೆ ಉದಾರವಾದಿಗಳ ಉತ್ತರವು ಸ್ಪಷ್ಟ

ವಾಗಿದೆ, ಅವರಿಗೆ ಬೇಕಾಗಿರುವುದು ಎರಡನೆಯದು, ಮತ್ತೇನೂ ಬೇಡ, ಅದೂ ಸಹ ಬಹಳ ದೂರದ ಮತ್ತು ಆನುಕ್ರಮಿಕವಾಗಿ ಪಡೆಯಬೇಕಾದ ಗುರಿ 'ಡೊಮಿನಿಯನ್ ಸ್ಟೇಟಸ್' ಎಂಬ ಪದಗಳು ಆಗಿಂದಾಗ್ಗೆ ಹೇಳಲ್ಪಡುತ್ತಿರುತ್ತವೆ, ಆದರೆ ತತ್ಕಾಲದ ಅವರ ಗುರಿಯು ನಿಗೂಢವಾದ ಈ ಮಾತುಗಳಲ್ಲಿ ಉಕ್ತವಾಗಿದೆ "ಕೇಂದ್ರದಲ್ಲಿ ಉತ್ತರವಾದಿತ್ವ" ತುಂಬುಜೀವಕಳೆಯ ಮಾತುಗಳು—ಅಧಿಕಾರ, ಅನಧೀನತೆ, ಸ್ವಾತಂತ್ರ್ಯ, ಬಿಡುಗಡೆ—ಅವರಿಗಲ್ಲ, ಅವುಗಳಲ್ಲಿ ಅಪಾಯಕರವಾದ ನಾದವಿದೆ ಜನಮಲ್ಲಳಿಗೆ ಅದು ಉತ್ಸಾಹವನ್ನು ತುಂಬದಿದ್ದರೂ, ವಕೀಲರ ಭಾಷೆಯೂ, ಪ್ರಸ್ತಾಪನವೂ ಅವರಿಗೆ ಬಹಳ ಹೆಚ್ಚಾಗಿ ರಂಜಿಸುತ್ತವೆ ಸ್ವದೇಶ ಮತ್ತು ಸ್ವಾತಂತ್ರ್ಯಗಳಿಗಾಗಿ ವ್ಯಕ್ತಿಗಳು ಮತ್ತು ಗುಂಪುಗಳು ಅಪಾಯಗಳನ್ನು ಎದುರಿಸಿ ತಮ್ಮ ಪ್ರಾಣವನ್ನು ಪಣವಾಗಿಟ್ಟ ಲೆಕ್ಕವಿಲ್ಲದಷ್ಟು ಪ್ರಸಂಗಗಳು ಇತಿಹಾಸದಲ್ಲಿವೆ "ಕೇಂದ್ರದಲ್ಲಿ ಉತ್ತರವಾದಿತ್ವ" ಎಂಬುದಕ್ಕಾಗಲಿ, ಅಥವಾ ಮತ್ತಿನ್ನಾವ ನ್ಯಾಯಶಾಸ್ತ್ರದ ಪದಸಮುಚ್ಚಯಕ್ಕಾಗಲಿ, ಯಾರಾದರೂಬ್ಬರು ಬುದ್ಧಿಪೂರ್ವಕವಾಗಿ ಒಂದು ಊಟವನ್ನು ಬಿಟ್ಟು ಕೊಡುತ್ತಾರೆಯೇ ಅಥವಾ ಸ್ವಲ್ಪ ಕಡಿಮೆ ನಿದ್ದೆ ಮಾಡುತ್ತಾರೆಯೇ ಎಂಬುದು ಬಹಳವಾಗಿ ಶಂಕಿಸಬೇಕಾದ ವಿಷಯ

ಅಂತೂ ಇದು ಅವರ ಗೊತ್ತುಗುರಿ ಇದನ್ನು 'ಪ್ರತ್ಯಕ್ಷಕಾರ್ಯ' ಅಥವಾ ಮತ್ತಿನ್ನಾವ ಕೆಣಕುವ ಕಾರ್ಯದಿಂದಾಗಲಿ ಪಡೆಯದೆ, ಶ್ರೀ॥ ಶ್ರೀನಿವಾಸಶಾಸ್ತ್ರಿಗಳು ಹೇಳಿದಂತೆ, "ಜ್ಞಾನ, ಅನುಭವ, ಮಿತವಾದ, ಸಾನುನಯ ಶಕ್ತಿ, ಗೂಢ ಪ್ರಭಾವ ಸ್ಫೂರ್ತಿ ಮತ್ತು ನೈಜ ದಕ್ಷತೆಗಳ" ಮೊರೆತದಿಂದ ಅದನ್ನು ಪಡೆಯಬೇಕು ನಮ್ಮ ಒಳ್ಳೆಯ ನಡತೆಯಿಂದಲೂ ಒಳ್ಳೆಯ ಕೆಲಸದಿಂದಲೂ ನಾವು ಕೊನೆಗೆ, ನಮ್ಮನ್ನಾಳುವವರನ್ನು ಅಧಿಕಾರವನ್ನು ಬಿಟ್ಟುಕೊಡುವಂತೆ ಬೋಳಯಿಸುವುದು ಸಾಧ್ಯವಿದೆಯೆಂಬ ಆಶೆಯಿದೆ ಎಂದರೆ, ನಮ್ಮ ಮೇಲೆಬೀಳುವ ಮನೋಭಾವದ ಬಗ್ಗೆ ನಮ್ಮನ್ನು ಕಂಡು ಸಿಡಿಮಿಡಿಗುಟ್ಟಿದ್ದಾರೆ ಅಥವಾ ನಮ್ಮ ಸಾಮರ್ಥ್ಯದ ಬಗ್ಗೆ ಅವರು ಶಂಕಿಸಿದ್ದಾರೆ ಅಥವಾ ಎರಡೂ ಕಾರಣಗಳಿಂದ ಅವರು ಈವೊತ್ತು ನಮ್ಮನ್ನು ವಿರೋಧಿಸಿ ನಿಗ್ರಹಿಸುತ್ತಿದ್ದಾರೆ ಸಾಮ್ರಾಜ್ಯತತ್ವದ ಮತ್ತು ಪ್ರಚಲಿತ ಪರಿಸ್ಥಿತಿಯ ಸರಳವಾದ ವಿಭಜನೆಯೊಂದರಂತೆ ಇದು ತೋರುತ್ತದೆ ಪ್ರಬುದ್ಧ ಆಂಗ್ಲ ಲೇಖಕರಾದ ಪ್ರೊಫೆಸರ್ ಆರ್ ಹೆಚ್ ಟಾನಿಯವರು ಆಳುವ ವರ್ಗಗಳ ಸಹಕಾರದೊಡನೆ ಮಜಲು ಮಜಲಾಗಿ ಅಧಿಕಾರವನ್ನು ಗೆದ್ದುಕೊಳ್ಳುವ ಕಲ್ಪನೆಯನ್ನು ಕುರಿತು ಒಂದು ಉಚಿತವಾದ ಮತ್ತು ಗಮನವನ್ನು ಸೆಳೆಯುವ ಬರವಣಿಗೆಯನ್ನು ಬರೆದಿದ್ದಾರೆ ಅವರು ಬರೆದಿರುವುದು ಬ್ರಿಟಿಷ್ ಲೇಬರ್ ಪಂಗಡವನ್ನು ಕುರಿತು ಆದರೆ ಅವರ ಮಾತುಗಳು ಭಾರತಕ್ಕೆ ಇನ್ನೂ ಹೆಚ್ಚಾಗಿಯೇ ಅನ್ವಯಿಸುತ್ತವೆ ಏಕೆಂದರೆ ಇಂಗ್ಲೆಂಡಿನಲ್ಲಿ, ಬಹುಸಂಖ್ಯಾತರ ಅಭಿಮತವು ಶಾಸ್ತ್ರರೀತ್ಯ ತನ್ನ ಪ್ರಭಾವವನ್ನು ತೋರಬಹು

ದಾದ ಪ್ರಜಾ ಸತ್ತಾತ್ಮಕ ಸಂಸ್ಥೆಗಳಾದರೂ ಇವೆ. ಪ್ರೊಫೆಸರ್ ಟಾನಿಯವರು ಹೀಗೆ ಬರೆಯುತ್ತಾರೆ :

" ಈರುಳ್ಳಿಯನ್ನು ಎಲೆಎಲೆಯಾಗಿ ತಿನ್ನಬಹುದು, ಆದರೆ ಜೀವಂತವಾಗಿರುವ ಹುಲಿಯೊಂದನ್ನು ಪಂಜರಪಂಜರವಾಗಿ ಸುಲಿಯಲು ಸಾಧ್ಯವಿಲ್ಲ. ಸಜೀವ ಪ್ರಾಣಿಯು ಅಂಗಾಂಗ ವಿಚ್ಛೇದನವು ಅದರ ಕಸುಬು, ಮತ್ತು ಅದು ಮೊದಲು ಚರ್ಮವನ್ನು ಸುಲಿಯುತ್ತದೆ.

ಯಾವ ರಾಜ್ಯದಲ್ಲಾದರೂ ಹಕ್ಕುದಾರ ವರ್ಗಗಳವರು ಏನೂ ತಿಳಿಯದ ಮಂಕರಾಗಿದ್ದರೆ, ಅದು ಖಂಡಿತವಾಗಿ ಇಂಗ್ಲೆಂಡಲ್ಲ. ಆಸ್ತಿಯೊಂದರ ಆಧಾರ ಪತ್ರಗಳನ್ನು ಇಟ್ಟುಕೊಂಡಿರುವ ಚಾಕಚಕ್ಯದ ವಕೀಲನೊಬ್ಬನಿಗೆ ಟೋಪಿಹಾಕಿ ಆಸ್ತಿಯನ್ನು ಕಸಿದುಕೊಳ್ಳಲೆತ್ನಿಸುವುದು ಎಷ್ಟು ವ್ಯರ್ಥವೋ, ಹಾಗೆಯೇ ಲೇಬರ್ ಪಂಗಡದ ಪಕ್ಷವನ್ನು ಮುಂದಿಡುವ ಚಾತುರ್ಯ ಮತ್ತು ಹೊಂದಿಕೊಳ್ಳುವ ಸ್ವಭಾವಗಳಿಂದ ಹಕ್ಕುದಾರವರ್ಗಗಳವರನ್ನು ಹಳ್ಳಕ್ಕೆ ಕೆಡಹಲುಬಹುದೆಂಬ ಭಾವನೆಯು ಅಷ್ಟೇ ವ್ಯರ್ಥ. ಧನಿಕ ಶಕ್ತಿಯುತ ವರ್ಗಗಳಲ್ಲಿರುವವರು ಇಷ್ಟುರಾದ, ತಂತ್ರಿಗಳಾದ, ಕಸುಬಿನಿಂದ ಕೂಡಿದ, ಆತ್ಮವಿಶ್ವಾಸಿಗಳಾದ, ಮತ್ತು ತಮಗೇ ಸಂಚಕಾರ ಬರುವಂತಾದರೆ ಯಾವುದಕ್ಕೂ ಹೇಸದ, ತಮ್ಮ ರೊಟ್ಟಿಯ ಯಾವ ಪಕ್ಕಕ್ಕೆ ಬೆಣ್ಣೆ ಹಚ್ಚಿದೆ ಎಂಬುದನ್ನು ತಿಳಿದ ಮತ್ತು ಬೆಣ್ಣೆಯ ಸಂಭಾರವು ಕಡಿಮೆಯಾಗಕೂಡದೆಂದು ನಿರ್ಧರಿಸಿರುವ ಜನಗಳು. ಅವರ ಅವಸ್ಥಾನಕ್ಕೆ ಮುನ್ನಾಟ ಉಂಟಾದರೆ, ಅವರು ಆಟದ ಹಲಗೆಯ ಮೇಲಿರುವ ಪ್ರತಿಯೊಂದು ಪೇದೆಯನ್ನೂ—ರಾಜಕೀಯ ಮತ್ತು ಆರ್ಥಿಕ—ಉಪಯೋಗಿಸುತ್ತಾರೆ. ಹೌಸ್ ಆಫ್ ಲಾರ್ಡ್ಸ್, ಪ್ರಭು, ವೃತ್ತಪತ್ರಿಕೆಗಳು, ಸೈನ್ಯದಲ್ಲಿ ಏತುಷ್ಟಿ, ಭಾಂಡಾರಿಕ ಸಂದುಕಟ್ಟು, ಅಂತರರಾಷ್ಟ್ರೀಯ ಜಂಜಡಗಳು ಮತ್ತು ೧೯೩೧ ರಲ್ಲಿ ಪೌಂಡಿನ ಮೇಲೆ ನಡೆದ ವೃತ್ತಪತ್ರಿಕೆಗಳ ಉಗ್ರ ಖಂಡನೆಗಳು ಎತ್ತಿ ತೋರಿಸಿದಂತೆ, ತಮ್ಮ ರೊಕ್ಕದ ಚೊಕ್ಕಣವನ್ನು ಸಂರಕ್ಷಿಸುವುದಕ್ಕಾಗಿ, ತಮ್ಮ ನಾಡನ್ನು ಅಪಾಯಕ್ಕೀಡಾಗಿಸುವ 'ಎಮಿಗ್ರಾ' * ತಂತ್ರ."

ಬ್ರಿಟಿಷ್ ಲೇಬರ್ ಪಂಗಡವು ಪ್ರಬಲವಾದ ಸಂಘಟಿತ ಸಂಸ್ಥೆ. ಲಕ್ಷಾಂತರ ಮಂದಿ ವರಾಡ ಕೊಡುವ ಸದಸ್ಯರಿಂದ ಕೂಡಿದ ಟ್ರೇಡ್ ಯೂನಿಯನ್ನುಗಳ, ಪ್ರಬುದ್ಧವಾಗಿ ಬೆಳೆದ ಸಹಕಾರದ ಸಂಘಟಿತ ಸಂಸ್ಥೆಯ, ಮತ್ತು ಕಸಬುದಾರ ವರ್ಗಗಳಲ್ಲಿನ ಸದಸ್ಯರುಗಳ ಮತ್ತು ಸಹಾಯಕರ ಬೆಂಬಲವು ಅದಕ್ಕಿದೆ. ಪ್ರಾಪ್ತವಯಸ್ಕರ ಅಭಿಮತವನ್ನಾಶ್ರಯಿಸಿರುವ ಪ್ರಜಾಸತ್ತಾತ್ಮಕ ಪಾರ್ಲಿಮೆಂಟರಿ ಸಂಸ್ಥೆಗಳೂ, ಪೌರಸ್ವಾತಂತ್ರ್ಯದ ದೀರ್ಘ ಪರಂಪರೆಯೂ ಬ್ರಿಟನ್ನಿಗೆ ಇವೆ. ಇಷ್ಟೆಲ್ಲಾ ಇದ್ದರೂ, ಮುಗುಳುನಗೆಯಿಂದಲೂ

---

* ಫ್ರಾನ್ಸಿನ ಕ್ರಾಂತಿ ಕಾಲದಲ್ಲಿ ದೇಶಭ್ರಷ್ಟನಾಗಿದ್ದ ರಾಜ ಪಕ್ಷದವನು.

ಬುಜ್ಜಯಿಸುವ ಮಾತಿನಿಂದಲೂ ಆ ಪ್ರಸ್ತಾಪನಗಳು ಪ್ರಯೋಜನಕಾರಿ ಮತ್ತು ಅಪೇಕ್ಷ ಣೀಯವಾದವುಗಳಾಗಿದ್ದರೂ, ಲೇಬರ್ ಪಂಗಡವು ನಿಜವಾದ ಅಧಿಕಾರವನ್ನು ಗಳಿಸುವ ಆಶೆಯಿಲ್ಲ ಎಂದು ಮಿ|| ಟಾನಿಯವರು ಅಭಿಪ್ರಾಯ ಪಡುತ್ತಾರೆ ಇತ್ತೀಚಿನ ಘಟನೆಗಳು ಈ ಅಭಿಪ್ರಾಯದ ಸತ್ಯವನ್ನು ನಿರ್ಧರಿಸಿವೆ ಒಂದು ವೇಳೆ ಲೇಬರ್ ಪಂಗಡದವರು ಹೌಸ್ ಆಫ್ ಕಾಮನ್ಸ್‌ನಲ್ಲಿ ಬಹು ಸಂಖ್ಯಾತರಾದರೂ, ಅಷ್ಟೊಂದು ರಾಜಕೀಯ, ಸಾಮಾಜಿಕ, ಆರ್ಥಿಕ, ಭಾಂಡಾರಿಕ, ಮತ್ತು ಸೈನಿಕ ಪುರದುರ್ಗಗಳನ್ನು ವಶದಲ್ಲಿಟ್ಟಿರುವ ಹಕ್ಕುದಾರ ವರ್ಗಗಳವರ ಪ್ರತಿಭಟನೆಯ ಎದುರಿನಲ್ಲಿ, ಯಾವ ಆಮೂಲಾಗ್ರ ವ್ಯತ್ಯಾಸಗಳನ್ನು ಮಾಡಲು ನಿಶ್ಶಕ್ತರಾಗಿಯೇ ಇರುವರೆಂದು ಸಹ ಮಿ|| ಟಾನಿಯವರು ಸೂಚಿಸುತ್ತಾರೆ ಭಾರತದಲ್ಲಿ ಪರಿಸ್ಥಿತಿಗಳು ತೀರ ಭಿನ್ನವಾಗಿವೆ ಎಂಬುದನ್ನು ಬೇರೆ ಹೇಳಬೇಕಾಗಿಲ್ಲ ಇಲ್ಲಿ ಯಾವ ಪ್ರಜಾಸತ್ತಾತ್ಮಕ ಸಂಸ್ಥೆಗಳಾಗಲಿ ಇಲ್ಲ ಅದಕ್ಕೆ ಪ್ರತಿಯಾಗಿ ಆರ್ಡಿನೆನ್ಸ್ ಮತ್ತು ಸರ್ವಾಧಿಕಾರದ ಆಡಳಿತದ ಮತ್ತು ವ್ಯಕ್ತಿ, ಮಾತು, ಬರವಣಿಗೆ, ಸಭೆ ಮತ್ತು ವೃತ್ತಪತ್ರಿಕೆಗಳ ಸ್ವಾತಂತ್ರ್ಯದ ತುಳಿತ, ಇವುಗಳು ಆಳವಾಗಿ ಬೇರೂರಿ ಬೆಳೆದುಬಂದ ಅಭ್ಯಾಸವಿದೆ ಉದಾರವಾದಿಗಳಿಗಾಗಲಿ ಯಾವ ಪ್ರಬಲ ಸಂಘಟನೆಯ ಬೆಂಬಲವೂ ಇಲ್ಲ ಹೀಗಾಗಿ ಅವರು ತಮ್ಮ ಮುಗುಳುನಗೆಯನ್ನು ಮಾತ್ರ ಆಶ್ರಯಿಸಬೇಕಾಗಿದೆ

'ರಚನಾತ್ಮಕವಲ್ಲದ' ಅಥವಾ 'ಅಕ್ರಮವಾದ' ಯಾವ ಕಾರ್ಯಕಲಾಪವಾಗಲಿ ಅದಕ್ಕೆ ಉದಾರವಾದಿಗಳು ಪ್ರಬಲವಾಗಿ ವಿರೋಧಿಸುತ್ತಾರ ಪ್ರಜಾಸತ್ತಾತ್ಮಕ ರಾಜ್ಯಾಂಗ ರಚನೆಗಳಿಂದೊಡಗೂಡಿದ ದೇಶಗಳಲ್ಲಿ 'ರಚನಾತ್ಮಕ' ಎಂಬ ಪದಕ್ಕೆ ವಿಶಾಲವಾದ ಅರ್ಥ ವಿಶೇಷವಿದೆ ಶಾಸನಗಳ ಸೃಷ್ಟಿಯನ್ನು ಅದು ಅಂಕೆಯಲ್ಲಿಡುತ್ತದೆ, ಸ್ವಾತಂತ್ರ್ಯಗಳನ್ನು ರಕ್ಷಿಸುತ್ತದೆ, ಕಾರ್ಯನಿರ್ವಹಣಾ ಮಂಡಲಿಗಳನ್ನು ಹದ್ದಿನಲ್ಲಿಡುತ್ತದೆ ರಾಜಕೀಯ ಆರ್ಥಿಕ ಕಟ್ಟಡಗಳಲ್ಲಿ ಪ್ರಜಾಸತ್ತಾತ್ಮಕ ವಿಧಾನಗಳಿಂದ ವ್ಯತ್ಯಾಸಗಳನ್ನು ಮಾಡಲು ಅನುಕೂಲವಾಗಿರುತ್ತದೆ ಆದರೆ ಭಾರತದಲ್ಲಿ ಈ ವಿಧವಾದ ಯಾವ ರಾಜ್ಯಾಂಗ ರಚನೆಯೂ ಇಲ್ಲ ಅಂತೆಯೇ ಆ ಪದಕ್ಕೆ ಈ ವಿಧವಾದ ಅರ್ಥವೂ ಇರಲಾರದು * ಆ ಪದವನ್ನು ಇಲ್ಲಿ ಉಪಯೋಗಿಸುವುದೆಂದರೆ ಇಂದಿನ ಭಾರತದಲ್ಲಿ ಅದಕ್ಕೆ ಸ್ಥಳವಿಲ್ಲದ ಒಂದು ಕಲ್ಪನೆಯನ್ನು ಸುಮ್ಮನೆ ಪ್ರವೇಶಮಾಡಿಸಿ

* "ಲೀಡರ್" ವೃತ್ತ ಪತ್ರಿಕೆಯ ಪ್ರಧಾನ ಸಂಪಾದಕರೂ ಪ್ರಮುಖ ಉದಾರವಾದಿ ಮುಂದಾಳುಗಳೂ ಆದ ಶ್ರೀ|| ಸಿ ವೈ ಚಿಂತಾಮಣಿಯವರು ಸ ಪ್ರಾ ಶಾಸನ ಸಭೆಯಲ್ಲಿ ಜಂಟಿ ಪಾರ್ಲಿಮೆಂಟರಿ ಸೆಲೆಕ್ಟ್ ಸಮಿತಿಯ ಭಾರತವನ್ನು ಕುರಿತ ವರದಿಯನ್ನು ಟೀಕಿಸುತ್ತ, ಭಾರತದಲ್ಲಿ ಯಾವ ವಿಧವಾದ ರಾಜ್ಯಾಂಗ ರಚನಾತ್ಮಕ ಸರಕಾರವೂ ಇಲ್ಲವಾಗಿದೆಯೆಂಬುದನ್ನು ಕುರಿತು ಒತ್ತಿ ಹೇಳಿದ್ದಾರೆ 'ಮುಂದಿನ ಇನ್ನೂ ಹೆಚ್ಚು ಪ್ರತೀಕಾರದ ಮತ್ತು ಇನ್ನೂ ಹೆಚ್ಚು ಹೆಚ್ಚಾದ ಅರಚನಾತ್ಮಕ ಸರಕಾರಕ್ಕೆ ಮಣಿಯುವುದಕ್ಕೆ ಪ್ರತಿಯಾಗಿ ಇಂದಿನ ಅರಚನಾತ್ಮಕ ಸರಕಾರಕ್ಕೆ ಮಣಿಯುವುದೇ ಲೇಸು"

ದಂತಾಗುವುದು ಇಲ್ಲಿ ಅನೇಕವೇಳೆ 'ರಚನಾತ್ಮಕ' ಎಂಬ ಪದವು, ಕಾರ್ಯನಿರ್ವಹಣ ಮಂಡಲಿಯ ಹೆಚ್ಚುಕಡಿಮೆ ನಿರಂಕುಶ ಕಾರ್ಯಗಳಿಗೆ ಬೆಂಬಲಕೊಡಲು ಉಪಯೋಗಿಸಲ್ಪಡುತ್ತದೆ ಅಥವಾ ಅದನ್ನು 'ಶಾಸನ ಬದ್ಧವಾದ' ಎಂಬ ಅರ್ಥದಲ್ಲಿ ಉಪಯೋಗಿಸುತ್ತಾರೆ ಅದೊಂದು ವಿಚಿತ್ರ ಅವು ಸಾಕಷ್ಟು ಮುಂಪರಮುಂಪರವಾಗಿದ್ದು ದಿನದಿನವೂ ವ್ಯತ್ಯಾಸ ಹೊಂದುತ್ತಿದ್ದರೂ, ನಾವು 'ಶಾಸನ ಬದ್ಧವಾದ' ಮತ್ತು 'ಶಾಸನ ಬದ್ಧವಲ್ಲದ' ಎಂಬ ಪದಗಳನ್ನೇ ಉಪಯೋಗಿಸುವುದು ಬಹಳಮಟ್ಟಿಗೆ ಲೇಸು

ಒಂದು ಹೊಸ ಆರ್ಡಿನೆನ್ಸ್ ಅಥವಾ ಶಾಸನವು ಹೊಸ ಅಪರಾಧಗಳನ್ನು ಸೃಷ್ಟಿಸುತ್ತದೆ ಸಾರ್ವಜನಿಕ ಸಭೆಯೊಂದರಲ್ಲಿ ಭಾಗವಹಿಸುವುದು ಅಪರಾಧ ಒಂದಾಗಿರಬಹುದು, ಅಂತೆಯೇ ಬೈಸಿಕಲ್ಲಿನ ಆರೋಹಣ, ಕೆಲವು ಉಡಿಗೆಗಳ ತೊಡಿಗೆ, ಸೂರ್ಯ ಮುಳುಗುವುದಕ್ಕಿಂತ ಮುಂಚೆ ಮನೆಯನ್ನು ಸೇರಿಕೊಳ್ಳದಿರುವುದು, ಪೊಲೀಸರ ಬಳಿಗೆ ದಿನವೂ ಹೋಗಿ ವರದಿಯನ್ನೊಪ್ಪಿಸದಿರುವುದು,—ಈ ಎಲ್ಲ ಮತ್ತು ಇನ್ನಿತರ ಅನೇಕ ನಡವಳಿಕೆಗಳು ಭಾರತದ ಭಾಗವೊಂದರಲ್ಲಿ ಇಂದು ಅಪರಾಧಗಳು ಒಂದು ನಡವಳಿಕೆಯು ದೇಶದ ಒಂದು ಭಾಗದಲ್ಲಿ ಅಪರಾಧವಾಗಿರಬಹುದು ಇನ್ನೊಂದು ಭಾಗದಲ್ಲಿ ಅಲ್ಲದಿರಬಹುದು ನಾಜವಾಬ್ದಾರಿ ಕಾರ್ಯನಿರ್ವಹಣ ಮಂಡಲಿಯೊಂದರಿಂದ ಹೆಚ್ಚು ಕಾಲಾವಧಿ ಕೊಡದೆ ಈ ಶಾಸನಗಳು ಉಗ್ಗಡಿಸಲ್ಪಟ್ಟಾಗ, 'ಶಾಸನ ಬದ್ಧ' ಎಂಬ ಪದದ ಅರ್ಥವು ಆ ನಿರ್ವಹಣ ಮಂಡಲಿಯ ಚಿತ್ತ ಎಂದೇ ವಿನಾ ಬೇರೆ ಏನೂ ಇಲ್ಲ ಸಾಮಾನ್ಯವಾಗಿ ಆ ಚಿತ್ತಕ್ಕೆ ಎಲ್ಲರೂ ಸಮ್ಮತದಿಂದಲೋ ಅಸಮ್ಮತದಿಂದಲೋ ಮಣಿಯುತ್ತಾರೆ ಏಕೆಂದರೆ ಅವಿಧೇಯತೆಯ ಪರಿಣಾಮಗಳು ಅಹಿತವಾಗಿರುತ್ತವೆ ಆದಕ್ಕೆ ಯಾವಾಗಲೂ ಮಣಿಯುತ್ತೇನೆಂದು ಯಾರಾದರೂ ಹೇಳಿದರೆ ಅದು ಸ್ವೇಚ್ಛಾಧಿಕಾರವೊಂದಕ್ಕೆ ಅಥವಾ ನಾಜವಾಬ್ದಾರಿಯ ಅಧಿಕಾರವೊಂದಕ್ಕೆ ತುಚ್ಛರೀತಿಯಿಂದ ಮಣಿಯುವುದು, ತನ್ನ ಅಂತರಾತ್ಮನನ್ನು ಇನ್ನೊಬ್ಬರಿಗೆ ಬಿಟ್ಟುಕೊಡುವುದು, ಮತ್ತು ಆತನ ಕಾರ್ಯಚಟುವಟಿಕೆಗಳಷ್ಟರಮಟ್ಟಿನಲ್ಲಿ ಎಂದಿಗಾದರೂ ಸ್ವಾತಂತ್ರ್ಯವನ್ನು ಗೆದ್ದುಕೊಳ್ಳುವುದರ ಅಸಾಧ್ಯತೆ, ಎಂದಂತಾಯಿತು.

ತಮ್ಮ ಕೈಯಲ್ಲಿರುವ ರಾಜ್ಯಾಂಗರಚನಾ ಯಂತ್ರದ ಮೂಲಕ ಸಾಧಾರಣ ರೀತಿಯಲ್ಲಿ ಆಮೂಲಾಗ್ರ ಆರ್ಥಿಕ ವ್ಯತ್ಯಾಸಗಳನ್ನು ಮಾಡಲು ಸಾಧ್ಯವೇ, ಎಂಬುದೊಂದು ವಾದವು ಇಂದು ಪ್ರತಿಯೊಂದು ಪ್ರಜಾಸತ್ತಾತ್ಮಕ ರಾಜ್ಯದಲ್ಲಿಯೂ ನಡೆಯುತ್ತಿದೆ ಹೀಗೆ ಮಾಡುವುದು ಸಾಧ್ಯವಿಲ್ಲವೆಂದೂ ಯಾವುದೋ ಅಸಾಮಾನ್ಯವಾದ ಮತ್ತು ಕ್ರಾಂತಿಕಾರಕ ವಿಧಾನವನ್ನು ಸಂಪ್ರಯೋಗಿಸಲೇ ಬೇಕಾಗುತ್ತೆಂದೂ ಅನೇಕರು ಅಭಿಪ್ರಾಯಪಡುತ್ತಾರೆ ಭಾರತದಲ್ಲಿ ನಮ್ಮ ಕೆಲಸಕ್ಕೆ ಈ ವಾದದ ನಿರ್ಧಾರವು ಪ್ರಕೃತವಲ್ಲ ಏಕೆಂದರೆ ನಾವು ಅಪೇಕ್ಷಿಸುವ ವ್ಯತ್ಯಾಸವನ್ನು ತರಲು ನಮಗೆ ಯಾವ ರಚ

ನಾತ್ಮಕ ಸಾಧನಗಳೂ ಇಲ್ಲ ಶ್ವೇತ ಪತ್ರವಾಗಲಿ ಅಥವಾ ಅಂಥದೇ ಬೇರೊಂದಾಗಲಿ ವಿಧಾಯಕವಾಗಿ ಬಿಟ್ಟರೆ ಅನೇಕ ದಿಕ್ಕುಗಳಲ್ಲಿ ರಚನಾತ್ಮಕ ಪ್ರಗತಿಯು ಸಂಪೂರ್ಣ ವಾಗಿ ನಿಂತುಹೋಗುವುದು ಕ್ರಾಂತಿ ಅಥವಾ ನ್ಯಾಯಬದ್ಧವಲ್ಲದ ಕಾರ್ಯಕ್ರಮದ ಹೊರತಾಗಿ ಬೇರೆ ಮಾರ್ಗವೇ ಇಲ್ಲ ಹಾಗಾದರ ಮಾಡುವುದೇನು? ವ್ಯತ್ಯಾಸದ ಭಾವನೆಯನ್ನೇ ಮರೆತುಬಿಟ್ಟು ದೇವರು ಮಾಡಿಸಿದ್ದಾಗಲಿ ಎಂದು ಸುಮ್ಮನಿದ್ದು ಬಿಡುವುದೆ?

ಇಂದು ಭಾರತದ ಅವಸ್ಥಾನವು ಇನ್ನೂ ವಿಚಿತ್ರವಾಗಿದೆ ಕಾರ್ಯನಿರ್ವಹಣ ಮಂಡಲಿಯು ಎಲ್ಲ ವಿಧವಾದ ಸಾರ್ವಜನಿಕ ಕಾರ್ಯಕಲಾಪಗಳನ್ನು ತಡೆಯುವ ಇಲ್ಲವೇ ಕಟ್ಟಿಹಾಕುವ ಕಾರ್ಯವನ್ನು ಮಾಡಬಲ್ಲುದು ಮತ್ತು ಮಾಡುತ್ತದೆ ಅದರ ಅಭಿಪ್ರಾಯದಲ್ಲಿ ಯಾವ ಕಾರ್ಯಚಟುವಟಿಕೆಯೂ ಅಪಾಯಕರವೆಂದಾಗುತ್ತದೆಯೋ ಅದು ಸಿದ್ಧವಾಗುತ್ತದೆ ಹೀಗೆ ಎಲ್ಲ ಪರಿಣಾಮಕಾರಿ ಸಾರ್ವಜನಿಕ ಚಟುವಟಿಕೆಯು ಹಿಂದಿನ ಮೂರು ವರ್ಷಗಳಲ್ಲಿ ಅದು ನಿಲ್ಲಿಸಲ್ಪಟ್ಟಂತೆ ನಿಲ್ಲಿಸಲ್ಪಡಬಹುದು, ಇದಕ್ಕೆ ಮಣಿಯುವುದೆಂದರೆ ಎಲ್ಲ ವಿಧವಾದ ಸಾರ್ವಜನಿಕ ಕೆಲಸವನ್ನೂ ಬಿಟ್ಟುಬಿಟ್ಟಂತೆ ಅದು ನಿಲ್ಲಲಸಾಧ್ಯವಾದ ಅವಸ್ಥಾನ

ಯಾರೊಬ್ಬನೂ ತಾನು ಯಾವಾಗಲೂ ಮತ್ತು ತಪ್ಪದೆ ನ್ಯಾಯಬದ್ಧವಾಗಿಯೇ ನಡೆದುಕೊಳ್ಳುವುದಾಗಿ ಹೇಳಲಾರ ಪ್ರಜಾಸತ್ತಾತ್ಮಕ ರಾಜ್ಯವೊಂದರಲ್ಲಿಯೂ ಸಹ ಒಬ್ಬಾತನು ತನ್ನ ಅಂತರಾತ್ಮನ ಒತ್ತಾಯದಿಂದ ವಿರುದ್ಧವಾಗಿ ವರ್ತಿಸಬೇಕಾಗಿ ಬರುವ ಸಂದರ್ಭಗಳು ಹುಟ್ಟಬಹುದು ಅಪರಾಜ ನೀತಿಯಿಂದ ಅಥವಾ ನಿರಂಕುಶ ನೀತಿಯಿಂದ ಆಳಲ್ಪಡುತ್ತಿರುವ ರಾಜ್ಯವೊಂದರಲ್ಲಿ ಈ ಸಂದರ್ಭಗಳು ಇನ್ನೂ ಹೆಚ್ಚುಹೆಚ್ಚಾಗಿ ಹುಟ್ಟುವುವು, ಅಷ್ಟೇಕೆ, ಅಂತಹ ರಾಜ್ಯದಲ್ಲಿ ಶಾಸನವು ತನ್ನ ಎಲ್ಲ ನೈತಿಕ ಸಮರ್ಥನೆಯನ್ನೂ ಕಳೆದುಕೊಂಡು ಬಿಡುತ್ತದ

"ಪ್ರತ್ಯಕ್ಷ ಕಾರ್ಯಕ್ರಮವು ಸರ್ವಾಧಿಕಾರಕ್ಕೆ ಸಂಬಂಧಪಟ್ಟಿದೆಯೇ ವಿನಾ ಪ್ರಜಾಸತ್ತೆಗಲ್ಲ ಯಾರು ಯಾರು ಪ್ರಜಾಸತ್ತೆಯನ್ನು ವಿಜಯಿಯಾಗಿ ಮಾಡಲೆಳಸುವರೋ ಅವರು ಪ್ರತ್ಯಕ್ಷಕಾರ್ಯಕ್ರಮವನ್ನು ವರ್ಜಿಸಬೇಕು," ಎಂದು ಉದಾರವಾದಿಗಳು ಹೇಳುತ್ತಾರೆ ಇದು ಅಕಟವಿಕಟವಾದ ಆಲೋಚನೆ, ಮತ್ತು ಅಳ್ಳಕವಾದ ಬರವಣಿಗೆ ಕೆಲವುವೇಳ ಪ್ರತ್ಯಕ್ಷ ಕಾರ್ಯಕ್ರಮವು—ಉದಾ ಕೆಲಸಗಾರರ ಮುಷ್ಕರ—ನ್ಯಾಯಬದ್ಧವಾಗಿ ಸಹ ಇರಬಹುದು ಆದರೆ ಪ್ರಾಯಃ ರಾಜಕೀಯ ಕಾರ್ಯಕ್ರಮವು ಇಂಗಿತವಾಗಿದ್ದಿರಬಹುದು ಇಂದು ಜರ್ಮನಿಯಲ್ಲಿ ಹಿಟ್ಲರರ ಆಡಳಿತದಲ್ಲಿ ಯಾವ ವಿಧವಾದ ಕಾರ್ಯಕ್ರಮವು ತಾನೆ ಸಾಧ್ಯ? ಇಲ್ಲವೇ ತುಚ್ಛವಾದ ಪರಾಭವ ಅಥವಾ ಅಕ್ರಮವಾದ ಮತ್ತು ಕ್ರಾಂತಿಕಾರಕ ಕಾರ್ಯಕ್ರಮ ಅಲ್ಲಿ ಪ್ರಜಾಸತ್ತೆಗೆ ಕೈಂಕರ್ಯ ನಡೆಸುವುದು ಹೇಗೆ?

ಭಾರತೀಯ ಉದಾರವಾದಿಗಳು ಅನೇಕ ವೇಳೆ ಪ್ರಜಾಸತ್ತೆಯನ್ನು ಕುರಿತು ಅನ್ವಯಮಾಡುವರು ಆದರೆ ಅವರಲ್ಲನೇಕರಿಗೆ ಅದರ ಬಳಿ ಹೋಗಲು ಇಷ್ಟವಿಲ್ಲ. ನಾಯಕರಲ್ಲಿ ಅತಿ ಪ್ರಮುಖರಲ್ಲೊಬ್ಬರಾದ ಸರ್ ಪಿ ಎಸ್ ಶಿವಸ್ವಾಮಿ ಅಯ್ಯರ್ ರವರು ಮೇ ೧೯೩೪ ರಲ್ಲಿ ಹೀಗೆ ಹೇಳಿದರು "ಕಾನ್ಸ್‌ಟಿಟ್ಯೂಯೆಂಟ್ ಅಸೆಂಬ್ಲಿಯ ಸಮಾವೇಶದ ಪರವಾಗಿ ವಾದಿಸುವುದರಿಂದ ಕಾಂಗ್ರೆಸ್ಸು ಜನಮಲ್ಲಳಿಯ ಜ್ಞಾನದಲ್ಲಿ ತೀರ ಹೆಚ್ಚಾದ ನಂಬಿಕೆಯನ್ನಿಟ್ಟು ಅನೇಕ ಚಕ್ರ ಗೋಷ್ಠಿಗಳಲ್ಲಿ ಭಾಗವಹಿಸಿದ ವ್ಯಕ್ತಿಗಳ ನಿಸ್ಪೃಹತೆ, ಮತ್ತು ದಕ್ಷತೆಗಳಿಗೆ ತೀರ ಕಡಿಮೆಯಾದ ಬೆಲೆಯನ್ನು ಕಟ್ಟುತ್ತದೆ. ಕಾನ್ಸ್‌ಟಿಟ್ಯೂಯೆಂಟ್ ಅಸೆಂಬ್ಲಿಯು ಇದಕ್ಕಿಂತ ಚೆನ್ನಾಗಿ ಕೆಲಸಮಾಡುತ್ತಿತ್ತೆ? ಎಂದು ನಾನು ಬಹಳಮಟ್ಟಿಗೆ ಶಂಕಿಸುತ್ತೇನೆ" ಹೀಗೆ ಸರ್ ಶಿವಸ್ವಾಮಿಯವರ ಪ್ರಜಾಸತ್ತೆಯನ್ನು ಕುರಿತ ಕಲ್ಪನೆಯು 'ಜನಮಲ್ಲಳಿ' ಯನ್ನು ಬಿಟ್ಟದ್ದಾಗಿದ್ದು, ಬ್ರಿಟಿಷ್ ಸರಕಾರದಿಂದ ನೇಮಿಸಲ್ಪಟ್ಟ 'ನಿಸ್ಪೃಹ ಮತ್ತು ದಕ್ಷ' ವ್ಯಕ್ತಿಗಳ ಗುಂಪೊಂದಕ್ಕೆ ಇನ್ನೂ ಹೆಚ್ಚಾಗಿ ಹೊಂದಿಕೊಳ್ಳುತ್ತದೆ ಹೆಚ್ಚಾಗಿ ಅವರು ಶ್ವೇತ ಪತ್ರವನ್ನು ಆಶೀರ್ವದಿಸುತ್ತಾರೆ, ಏಕೆಂದರೆ ಅದನ್ನು ಕುರಿತು "ಸಂಪೂರ್ಣ ತೃಪ್ತರಾಗದಿದ್ದರೂ ರಾಜ್ಯವು ಅದನ್ನು ಅಖಂಡವಾಗಿ ಪ್ರತಿಭಟಿಸುವುದು ಬುದ್ಧಿವಂತಿಕೆಯಲ್ಲವೆಂದು ಅವರು ಯೋಚಿಸಿದರು" ಬ್ರಿಟಿಷ್ ಸರಕಾರಕ್ಕೂ ಸರ್ ಪಿ ಎಸ್ ಶಿವಸ್ವಾಮಿ ಅಯ್ಯರ್‌ರವರಿಗೂ ಅತ್ಯಂತ ಸಂಪೂರ್ಣ ಸಹಕಾರವು ಇರದಿರುವುದಕ್ಕೆ ಯಾವ ಕಾರಣವೂ ಕಾಣಿಸುವುದಿಲ್ಲ

ಶಾಸನ ಭಂಗವನ್ನು ಕಾಂಗ್ರೆಸ್ಸು ಹಿಂತೆಗೆದಾಗ ಉದಾರವಾದಿಗಳು ಸ್ವಾಭಾವಿಕವಾಗಿಯೇ ಅದನ್ನು ಸ್ವಾಗತಿಸಿದರು ಈ "ಅವಿವೇಕವಾದ ಮತ್ತು ಅನ್ಯಾಯವಾದ ಚಳವಳಿ" ಯಿಂದ ದೂರವಿದ್ದುದಕ್ಕಾಗಿ ತಮ್ಮ ಬುದ್ಧಿವಂತಿಕೆಯನ್ನು ತಾವೇ ಹೊಗಳಿಕೊಂಡು ಹಿಗ್ಗಿದುದರಲ್ಲಿಯೂ ಆಶ್ಚರ್ಯವೇನೂ ಇಲ್ಲ "ನಾವು ಹಿಂದೆಯೇ ಹೀಗೆಂದು ಹೇಳಿರಲಿಲ್ಲವೆ?" ಎಂದು ನಮಗೆ ಹೇಳಿದರು ಅದೊಂದು ವಿಚಿತ್ರ ವಾದ ನಾವು ನಿಮಿರಿ ನಿಂತು ಕಸುವಿನಿಂದ ಕಾದಾಡಿದುದರಿಂದ ನಮ್ಮನ್ನು ಹೊಡೆದು ಕೆಳಕ್ಕುರುಳಿಸಿದರು, ಆದುದರಿಂದ ಇದರ ನೀತಿಯೆಂದರೆ—ನಿಮಿರಿ ನಿಲ್ಲುವುದು ತಪ್ಪು, ತೆವಳುವುದು ಅತ್ಯುತ್ತಮವಾದುದು, ಅತಿ ಕ್ಷೇಮಕರವಾದುದು ಏಟು ತಿಂದು ಆ ನೆಲಸಮವಾದ ನೆಲೆಯಿಂದ ನೆಲಕ್ಕುರುಳುವುದು ಅಥವಾ ಕೆಳಕ್ಕೆ ಬೀಳುವುದಾಗಲಿ ಸಂಪೂರ್ಣವಾಗಿ ಅಸಾಧ್ಯ

೫೩

# ಪ್ರಾಚೀನ ಮತ್ತು ನವೀನ ಭಾರತ

ಭಾರತೀಯ ರಾಷ್ಟ್ರೀಯತಾವಾದವು ಪರಕೀಯ ಪ್ರಭುತ್ವವನ್ನು ಕಂಡು ಮುನಿ ದುದು ಸ್ವಾಭಾವಿಕವೂ ಅನಿವಾರ್ಯವೂ ಆಗಿತ್ತು. ಆದರೂ ನಮ್ಮ ಕಲಿತವರಲ್ಲಿ ಬಹು ಮಂದಿ ಹತ್ತೊಂಬತ್ತನೆಯ ಶತಮಾನದಂತ್ಯದವರೆಗೆ ತಿಳಿದೋ ತಿಳಿಯದೆಯೋ ಸಾಮ್ರಾಜ್ಯದ ಬ್ರಿಟಿಷ್ ಕಲ್ಪನವಿಜ್ಞಾನವನ್ನು ಹೇಗೆ ಸ್ವೀಕರಿಸಿದರೆಂಬುದು ಕೌತುಕ. ಇದನ್ನು ಕುರಿತು ತಮ್ಮ ಸ್ವಂತ ವಾದಾನುವಾದಗಳನ್ನು ಕಟ್ಟಿ ಅದರ ಕೆಲವು ಹೊರಗಣ ತೋರ್ಕೆಗಳನ್ನು ಟೀಕಿಸಲು ಮಾತ್ರ ಎದೆಗೊಂಡರು. ಶಾಲೆಗಳು ಮತ್ತು ವಿಶ್ವವಿದ್ಯಾ ನಿಲಯಗಳಲ್ಲಿ ಕಲ್ಪಿಸಲ್ಪಡುತ್ತಿದ್ದ ಇತಿಹಾಸ, ಅರ್ಥಶಾಸ್ತ್ರ ಮತ್ತು ತದಿತರ ವಿಷಯ ಗಳು ಸಂಪೂರ್ಣವಾಗಿ ಬ್ರಿಟಿಷ್‌ಸಾಮ್ರಾಜಿಕ ದೃಷ್ಟಿಕೋನದಿಂದಲೇ ಬರೆಯಲ್ಪಟ್ಟಿದ್ದು, ನಮ್ಮ ಇಂದಿನ ಮತ್ತು ಹಿಂದಿನ ಅನೇಕಾನೇಕ ನ್ಯೂನಾತಿರೇಕಗಳು ಮತ್ತು ಬ್ರಿಟಿಷರ ಸದ್ಗುಣಗಳು ಮತ್ತು ಉತ್ತುಂಗ ಏಧಿ, ಇವುಗಳು ಅವಧಾರಣೆಮಾಡಲ್ಪಟ್ಟಿದ್ದುವು. ಈ ವಿಕಾರಗೊಳಿಸಲ್ಪಟ್ಟ ವಾರಾಂತರವನ್ನು ನಾವು ಸ್ವಲ್ಪಮಟ್ಟಿಗೆ ಒಪ್ಪಿಕೊಂಡೆವು. ಉಪ ಜ್ಞೆಯಿಂದ ಅದನ್ನು ನಾವು ವಿರೋಧಿಸಿದಾಗಲೂ ಸಹ, ಅದರ ಪ್ರಭಾವವು ನಮ್ಮ ಮೇಲೆ ಬಿದ್ದಿತು. ಆರಂಭದಲ್ಲಿ ಅದರಿಂದ ಮಾನಸಿಕವಾಗಿ ತಪ್ಪಿಸಿಕೊಳ್ಳಲು ಮಾರ್ಗವೇ ಇರಲಿಲ್ಲ. ಏಕೆಂದರೆ ನಮಗೆ ಇತರ ನಿಜಾಂಶಗಳಾಗಲಿ, ವಾದಾನುವಾದ ಗಳಾಗಲಿ ತಿಳಿದಿರಲಿಲ್ಲ. ಆದುದರಿಂದ ನಾವು ಧಾರ್ಮಿಕ ರಾಷ್ಟ್ರೀಯತಾವಾದದಲ್ಲಿ, ಧರ್ಮ ಮತ್ತು ವೇದಾಂತಗಳ ಪ್ರಪಂಚದಲ್ಲಿಯಾದರೂ ಬೇರೆ ಯಾವ ಜನಾಂಗಕ್ಕೂ ಕಡಿಮೆಯಿಲ್ಲವೆಂಬ ಆಲೋಚನೆಯಲ್ಲಿ ನೆಮ್ಮದಿಯನ್ನು ಪಡೆಯಲು ಹವಣಿಸಿದೆವು. ನಾವು ಪಶ್ಚಿಮದ ಹೊರಗಿನ ಬೆಡಗು ಥಳುಕುಗಳನ್ನು ಹೊಂದದಿದ್ದರೂ ಅದಕ್ಕಿಂತ ಬಹಳ ಬೆಲೆಯುಳ್ಳ ಮತ್ತು ಪಡೆದಿರಲರ್ಹವಾದ ನಿಜವಾದ ಆಂತರಿಕ ವಸ್ತುವೊಂದನ್ನು ಹೊಂದಿದ್ದೆವೆಂಬ ಕಲ್ಪನೆಯಿಂದ ನಮ್ಮ ದೌರ್ಭಾಗ್ಯ ಮತ್ತು ಅವನತಿಗಳಲ್ಲಿ ನಮ್ಮನ್ನು ನಾವು ಆಶ್ವಾಸನಗೊಳಿಸಿಕೊಂಡೆವು. ವಿವೇಕಾನಂದ ಮತ್ತು ಇತರರು, ಅಂತೆಯೇ ನಮ್ಮ ಪ್ರಾಚೀನ ವೇದಾಂತಗಳಲ್ಲಿ ಪಾಶ್ಚಾತ್ಯ ವಿದ್ವಾಂಸರು ತೋರಿದ ಶ್ರದ್ಧೆ, ಈ ಕಾರಣಗಳು ನಮಗೆ ಪುನಃ ಒಂದಷ್ಟು ಆತ್ಮಗೌರವವನ್ನು ಕೊಟ್ಟು ನಮ್ಮ ಗತವೈಭವ ವನ್ನು ಕುರಿತ ನಮ್ಮ ಸುಪ್ತಪ್ರತಿಷ್ಠೆಯನ್ನು ಹೊಡೆದೆಬ್ಬಿಸಿದುವು.

ನಮ್ಮ ಹಿಂದಿನ ಮತ್ತು ಇಂದಿನ ಪರಿಸ್ಥಿತಿಗಳನ್ನು ಕುರಿತ ಬ್ರಿಟಿಷರ ಹೇಳಿಕೆ ಗಳನ್ನು ಕುರಿತು ನಾವು ಕ್ರಮಕ್ರಮವಾಗಿ ಶಂಕಿಸಲು ಮತ್ತು ವಿಮರ್ಶನ ದೃಷ್ಟಿಯಿಂದ ಪರೀಕ್ಷಿಸಲು ಆರಂಭಿಸಿದೆವು. ಆದರೂ ನಾವು ಬ್ರಿಟಿಷ್ ಕಲ್ಪನವಿಜ್ಞಾನದ ಚೌಕ

ಟ್ಟಿನಷ್ಟರಲ್ಲಿ ಇನ್ನೂ ಯೋಚಿಸುತ್ತಲೂ ಕೆಲಸ ಮಾಡುತ್ತಲೂ ಇದ್ದೆವು ಕೆಟ್ಟ ದೊಂದು ವಸ್ತುವಿದ್ದರೆ ಅದು 'ನಾ–ಬ್ರಿಟಿಷ್' ಎಂದು ಕರೆಯಲ್ಪಡುತ್ತಿತ್ತು, ಭಾರತ ದಲ್ಲಿ ಬ್ರಿಟಿಷನೊಬ್ಬನು ತಪ್ಪಿ ನಡೆದರೆ, ತಪ್ಪು ಅವನದು, ವ್ಯವಸ್ಥೆಯದಲ್ಲ ಆದರ ಭಾರತದಲ್ಲಿನ ಬ್ರಿಟಿಷ್ ಪ್ರಭುತ್ವವನ್ನು ಕುರಿತ ಈ ವಿಮರ್ಶಾತ್ಮಕ ವಿಷಯಗಳ ಸಂಗ್ರ ಹವು, ಗ್ರಂಥಕರ್ತರ ಮಿತವಾದ ದೃಷ್ಟಿಕ್ಷೇಪವಿದ್ದರೂ ಸಹ, ಒಂದು ಕ್ರಾಂತಿಕಾರಕ ಉದ್ದೇಶಕ್ಕೆ ಸಹಾಯಮಾಡಿ ನಮ್ಮ ರಾಷ್ಟ್ರೀಯತಾವಾದಕ್ಕೆ ಒಂದು ರಾಜಕೀಯ ಮತ್ತು ಆರ್ಥಿಕ ತಳಹದಿಯನ್ನು ಕೊಟ್ಟಿತು ದಾದಾಭಾಯಿ ನೌರೋಜಿಯವರ 'ದಾರಿದ್ರ್ಯ ಮತ್ತು ಭಾರತದಲ್ಲಿನ ನಾ–ಬ್ರಿಟಿಷ್ ಪ್ರಭುತ್ವ,' ಮತ್ತು ರಮೇಶದತ್ತ್, ವಿಲಿಯಂ ಡಿಗ್ಬಿ ಮತ್ತು ಇತರರ ಗ್ರಂಥಗಳು ನಮ್ಮ ರಾಷ್ಟ್ರೀಯತಾಭಾವನಾಪ್ರಪಂಚದ ಬೆಳವಣಿಗೆಯಲ್ಲಿ ಹೀಗೊಂದು ಕ್ರಾಂತಿಕಾರಕ ಪಾತ್ರವನ್ನು ನಿರ್ವಹಿಸಿದುವು ಪ್ರಾಚೀನ ಭಾರತೀಯ ಇತಿಹಾಸದ ಸಂಶೋಧನೆಗಳು ಮುಂದುವರಿದು, ಉಜ್ವಲ ಮತ್ತು ಉನ್ನತ ನಾಗರಿಕ ಕಾಲಗಳು ಬೆಳಕಿಗೆ ಬಂದುವು ಇವುಗಳನ್ನು ಕುರಿತು ಮಹಾ ಸಂತೃಪ್ತಿ ಯಿಂದ ಓದಿದೆವು–ಅಂತೆಯೇ ಭಾರತದಲ್ಲಿನ ಬ್ರಿಟಿಷರ ಇತಿಹಾಸವು, ಅವರ ಇತಿಹಾಸ ಗ್ರಂಥಗಳ ಮೂಲಕ ನಾವು ನಂಬಿದುದಕ್ಕಿಂತ ಬಹಳ ಮಟ್ಟಿಗೆ ಬೇರೆಯಾಗಿತ್ತೆಂಬು ದನ್ನೂ ಕಂಡುಹಿಡಿದೆವು

ಇತಿಹಾಸ ಮತ್ತು ಅರ್ಥಶಾಸ್ತ್ರಗಳ ಬ್ರಿಟಿಷ್ ಪಾರಾಂತರ ಮತ್ತು ಭಾರತದಲ್ಲಿ ಅವರ ಆಡಳಿತ, ಇವುಗಳನ್ನು ಕುರಿತ ನಮ್ಮ ಆಕರಣೆಯು ಹೆಚ್ಚಿತು ಆದರೂ ಅವರ ಕಲ್ಪನವಿಜ್ಞಾನದ ಪಥದಷ್ಟರಲ್ಲಿ ನಾವು ಕೆಲಸ ಮಾಡುತ್ತಲೇ ಹೋದೆವು ಆ ಶತ ಮಾನದ ತಿರುವಿನಲ್ಲಿ, ಒಟ್ಟಿನಲ್ಲಿ ಇದು ಭಾರತೀಯ ರಾಷ್ಟ್ರೀಯತಾವಾದದ ಅವಸ್ಥಾನ ವಾಗಿತ್ತು ಉದಾರವಾದಿ ಪಂಗಡದ ಮತ್ತು ಇತರ ಸಣ್ಣ ಪಂಗಡಗಳ, ಅಂತೆಯೇ ಆಗಿಂದಾಗ ಮಾತ್ರ ವಾಗಾತ್ಮಕವಾಗಿ ಮುಂದೆ ಹೋದರೂ ಮಾನಸಿಕವಾಗಿ ಇನ್ನೂ ಹತ್ತೊಂಬತ್ತನೆಯ ಶತಮಾನದಲ್ಲಿ ಜೀವಿಸುತ್ತಿರುವ ಅನೇಕ ಮಿತವಾದಿ ಕಾಂಗ್ರೆಸ್ಸಿ ನವರ ಅವಸ್ಥಾನವು ಇನ್ನೂ ಅದೇ ಅದರಿಂದಲೇ ಉದಾರವಾದಿಯು ಭಾರತೀಯ ಸ್ವಾತಂತ್ರ್ಯದ ಕಲ್ಪನೆಯನ್ನು ಅರ್ಥ ಮಾಡಿಕೊಳ್ಳಲು ಅಸಮರ್ಥನಾಗಿದ್ದಾನೆ ಏಕೆಂದರೆ ಅವೆರಡೂ ಮೂಲವಾಗಿ ದುಸ್ಸಂಧೇಯಿಗಳು ಹೆಚ್ಚೆ ಹೆಚ್ಚೆಯಾಗಿ ತಾನು ದೊಡ್ಡ ದೊಡ್ಡ ಕಛೇರಿಗಳಿಗೆ ಹತ್ತಿ ದಪ್ಪ ದಪ್ಪವಾದ ಮತ್ತು ಹೆಚ್ಚು ಹೆಚ್ಚು ಮುಖ್ಯವಾದ ಕಾಗದದ ಕಡತಗಳನ್ನು ನೋಡಿ ವಿವೇಚಿಸುವುದಾಗಿ ಅವನು ಭಾವಿಸುತ್ತಾನೆ ಸರಕಾರದ ಯಂತ್ರವು ಎಂದಿನಂತೆ ನಿಶ್ಶಬ್ದವಾಗಿ ನಡೆದುಕೊಂಡು ಹೋಗುವುದು ತಾನು ಮಾತ್ರ ಅಚ್ಚಿನ ಬಳಿಯಿರುವನು ಹಿನ್ನೆಲೆಯಲ್ಲಿ ಎಲ್ಲಿಯೋ, ಹೆಚ್ಚು ತಲೆಹಾಕದೆ, ಆವಶ್ಯಕತೆ ಬಿದ್ದರೆ ಸಂರಕ್ಷಿಸಲು ಬ್ರಿಟಿಷ್ ಸೈನ್ಯವು ಸಿದ್ಧ ವಾಗಿರುವುದು ಸಾಮ್ರಾಜ್ಯದೊಳಗಿನ ಡೊಮಿನಿಯನ್ ಸ್ಟೇಟಸ್ಸಿನ ಆತನ ಭಾವನೆಯು ಅದು ಆದೊಂದು ಪಡೆಯಲಸಾಧ್ಯವಾದ ಬಹು ಸರಳ ಭಾವನೆ

ಏಕೆಂದರೆ ಬ್ರಿಟಿಷ್ ಸಂರಕ್ಷಣೆಯು ಬೇಕೆಂದರೆ ಭಾರತೀಯ ಪರಾಧೀನತೆ. ದೊಡ್ಡ ನಾಡೊಂದರ ಆತ್ಮಗೌರವಕ್ಕೆ ಅದು ಒಂದುವೇಳೆ ಕೀಳ್ಪಟ್ಟಿಲ್ಲದಿದ್ದರೂ, ಅಕ್ಕಿಯನ್ನೂ ನೆಂಟರನ್ನೂ ಉಳಿಸಿಕೊಳ್ಳುವುದು ಅಸಾಧ್ಯ. ಇತ್ತೀಚಿನ ಒಂದು ಪುಸ್ತಕದಲ್ಲಿ* ಸರ್ ಫ್ರೆಡರಿಕ್ ವೈಟ್‌ರು (ಅವರು ಭಾರತೀಯ ರಾಷ್ಟ್ರೀಯತಾವಾದದ ಪಕ್ಷದವರಲ್ಲ) ಹೀಗೆ ಹೇಳುತ್ತಾರೆ " ಆತನು (ಭಾರತೀಯನು) ತನಗೂ ವಿನಾಶಕ್ಕೂ ನಡುವೆ ಇಂಗ್ಲೆಂಡು ನಿಂತಿದೆಯೆಂದು ಇನ್ನೂ ನಂಬುತ್ತಾನೆ. ಈ ಭ್ರಮೆಯನ್ನು ಎಂದಿನವರೆಗೆ ಮನಸ್ಸಿನಲ್ಲಿಟ್ಟಿರುತ್ತಾನೆಯೋ ಅಂದಿನವರೆಗೆ ತನ್ನ ಸ್ವರಾಜ್ಯದ ಆದರ್ಶದ ತಳಹದಿಯನ್ನು ಸಹ ಹಾಕಲಾರನು " ಅವರು ಭಾರತೀಯ ಶಾಸನ ಸಭಾಧ್ಯಕ್ಷರಾಗಿದ್ದ ಕಾಲದಲ್ಲಿ, ಅವರಿಗೆ ಹೆಚ್ಚಾಗಿ ಯಾರ ಸಂಪರ್ಕ ದೊರೆತಿದ್ದಿರಬೇಕೋ ಆ ಉದಾರವಾದಿ ಅಥವಾ ಪ್ರತೀಕಾರಕ ಮತ್ತು ಕೋಮುವಾರುವಾದಿ ಜಾತಿಯ ಭಾರತೀಯರ ವಿಷಯವನ್ನು ಕುರಿತು ಅವರು ಬರೆಯುತ್ತಿದ್ದಾರೆಂಬುದು ಸ್ಪಷ್ಟವಾಗಿದೆ. ಇದು ಕಾಂಗ್ರೆಸ್ಸಿನ ನಂಬುಗೆಯಲ್ಲ. ಇತರ ಮುನ್ನಡೆದ ಗುಂಪುಗಳದಂತೂ ಅಲ್ಲವೇ ಅಲ್ಲ. ಹೇಗಾದರೂ, ಈ ಭ್ರಮೆಯು ತೊಲಗುವವರೆಗೆ, ಮತ್ತು ಅದೇ ಆಕೆಯ ವಿಧಿಯಾಗಿದ್ದರೆ, ಭಾರತವು ವಿನಾಶವನ್ನು ತಾನೇ ಎದುರಿಸಲು ಸ್ವತಂತ್ರವಾಗದಿದ್ದರೆ, ಸ್ವಾತಂತ್ರ್ಯವು ಬರುವುದಸಾಧ್ಯವೆಂಬ ವಿಷಯದಲ್ಲಿ ಅವರು ಸರ್ ಫ್ರೆಡರಿಕ್‌ರೊಡನೆ ಅಂಗೀಕರಿಸುತ್ತಾರೆ. ಬ್ರಿಟಿಷ್ ಸೈನಿಕ ಅಂಕೆಯು ಭಾರತದಿಂದ ಸಂಪೂರ್ಣವಾಗಿ ಹಿಂದೆಗೆಯಲ್ಪಟ್ಟಾಗಲೇ ಭಾರತೀಯ ಸ್ವಾತಂತ್ರ್ಯದ ಆವಿರ್ಭಾವವಾಗುವುದು.

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತದ ಕಲಿತವರು ಬ್ರಿಟಿಷ್ ಕಲ್ಪನವಿಜ್ಞಾನಕ್ಕೆ ತುತ್ತಾದುದು ಆಶ್ಚರ್ಯವಲ್ಲ. ಆಶ್ಚರ್ಯಕರವಾಗಿರುವುದೇನೆಂದರೆ, ಇಪ್ಪತ್ತನೆಯ ಶತಮಾನ ಹೂಡೆದೆಬ್ಬಿಸುವ ಘಟನೆಗಳು ಮತ್ತು ವ್ಯತ್ಯಾಸಗಳು ನಡೆದಮೇಲೆ ಸಹ ಜನರು ಕೆಲವರು ಆ ಭ್ರಾಂತಿ ಪ್ರಪಂಚದಲ್ಲಿ ಇದು ಕೊಂಡುಬಿಟ್ಟಿರುವುದು. ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷ್ ಆಳುವ ವರ್ಗಗಳು ಐಶ್ವರ್ಯ, ವಿಜಯ ಮತ್ತು ಅಧಿಕಾರಗಳ ದೀರ್ಘವಾದ ಇತಿಹಾಸವನ್ನು ಹಿಂದಿಟ್ಟುಕೊಂಡಿದ್ದ ಜಗತ್ತಿನ ಶ್ರೀಮಂತ ವರ್ಗದವರಾಗಿದ್ದರು. ಈ ದೀರ್ಘವಾದ ಇತಿಹಾಸ ಮತ್ತು ಶಿಕ್ಷಣಗಳು ಅವರಿಗೆ, ಶ್ರೀಮಂತವರ್ಗದ ಕೆಲವು ಸದ್ಗುಣಗಳನ್ನೂ ನ್ಯೂನಾತಿರಿಕ್ತಗಳನ್ನೂ ಕಲಿಸಿದವು. ಈ ಶ್ರೇಷ್ಠ ಸ್ಥಿತಿಯನ್ನೈದಲು ಸಾಮಗ್ರಿ ಮತ್ತು ಶಿಕ್ಷಣವನ್ನು ಒದಗಿಸುವುದರಲ್ಲಿ ಕಳೆದ ಒಂದೂಮುಕ್ಕಾಲು ಶತಮಾನದಲ್ಲಿ ಬಹಳ ಸಹಾಯ ಮಾಡಿದ್ದೇವೆಂದು ಭಾರತದಲ್ಲಿ ನಾವು ನೆಮ್ಮದಿಯನ್ನು ಪಡೆದುಕೊಳ್ಳಬಹುದು. ಇತರ ಎಷ್ಟೋ ಜನಾಂಗಗಳೂ ದೇಶಗಳೂ ಮಾಡಿರುವಂತೆ, ಅವರೂ ತಾವು ದೇವರ ಆಯ್ಕೆಯ ವಿಶೇಷಕ್ಕೆ ಪಾತ್ರ

* ಸರ್ ಫ್ರೆಡರಿಕ್ ವೈಟ್ 'ಪೂರ್ವ ಮತ್ತು ಪಶ್ಚಿಮಗಳ ಭವಿಷ್ಯ'

ರಾದವರೆಂದೂ,ಮತ್ತು ತಮ್ಮ ಸಾಮ್ರಾಜ್ಯವು ಭೂಕೈಲಾಸವೆಂದೂ ಯೋಚಿಸಲಾರಂಭಿಸಿದರು ಅವರ ವಿಶೇಷ ಅವಸ್ಥಾನವು ಅಂಗೀಕೃತವಾದರೆ, ಅವರ ಪ್ರಾಭವಕ್ಕೆ ಆಕರಣೆಯು ಬಾರದಿದ್ದರೆ, ಅವರು ಸುಪ್ರಸನ್ನರಾಗಿಯೂ ದಯಾವಂತರಾಗಿಯೂ–ಇದರಿಂದ ಯಾವ ಹಾನಿಯೂ ಉಂಟಾಗದಿದ್ದರೆ–ಇರುತ್ತಿದ್ದರು ಆದರೆ ಅವರನ್ನು ಪ್ರತಿಷೇಧಿಸುವುದೆಂದರೆ ಬ್ರಹ್ಮಲಿಖಿತ ವ್ಯವಸ್ಥೆಯನ್ನು ಪ್ರತಿಷೇಧಿಸಿದಂತೆ, ಮತ್ತು ಈ ಕಾರಣಾದಿಂದ ಅದು ಆವಶ್ಯಕವಾಗಿ ವರ್ಜಿಸಬೇಕಾದ ಘೋರ ಪಾಪವೂಂದು

ಮಾ|| ಆಂದ್ರೆ ಸೀಜ್‌ಫ್ರೀದ್ ಅವರು ಬ್ರಿಟಿಷ್ ಮನೋಧರ್ಮದ ಈ ಮುಖವನ್ನು ಕುರಿತ ಸುರಸವಾದ ವಚನವೊಂದನ್ನು ಬರೆದಿದ್ದಾರೆ *

"ಐಶ್ವರ್ಯವಂತರ ಸಂಯುಕ್ತ ಶಕ್ತಿಯ ವಂಶಪಾರಂಪರ್ಯ ಅಭ್ಯಾಸದಿಂದ, ಅದು ಒಂದು ವಿಧವಾದ ಪರಿತಪಿತ ಮತ್ತು ಶ್ರೀಮಂತ ಯೋಗ್ಯವಾದ ರೀತಿ ರಿವಾಜೊಂದನ್ನು ಬೆಳೆಯಿಸಿಕೊಳ್ಳುತ್ತದೆ ವಿಚಿತ್ರವಾಗಿ ಬ್ರಿಟಿಷ್ ಪ್ರಾಭವಕ್ಕೆ ಮೇಲಾಡಿಗಳೊದಗಿದಾಗಲೂ ಸಹ ವೃದ್ಧಿಗೊಳಿಸುವ ಸ್ವಜನಾಂಗದ ದಿವ್ಯಾನುಗ್ರಹೀತ ಅಧಿಕಾರದ ಭಾವನೆಯೊಂದು ಇದರಲ್ಲಿ ತುಂಬಿಕೊಂಡಿದೆ ಶತಮಾನದಂತ್ಯದ ತರುಣ ಪೀಳಿಗೆಯು, ಈ ವಿಜಯಕ್ಕೆ ಅವರೇ ಕಾರಣರೆಂದು ತಿಳಿಯದೆಯೇ ಹೇಳುತ್ತಾರೆ

ಸಂಗತಿಗಳ ಈ ರೀತಿಯ ವ್ಯಾಖ್ಯಾನವು ಗಮನಿಸಲು ಸ್ವಾರಸ್ಯವಾಗಿದೆ ಏಕೆಂದರೆ ವಿಶೇಷವಾಗಿ ಈ ನವುರಾದ ತೊಂದರೆಯಲ್ಲಿ ಅದು ಬ್ರಿಟಿಷ್ ಮನೋಧರ್ಮದ ಮೇಲೆ ಬೆಳಕನ್ನು ಬೀರುತ್ತದೆ. ಆಂಗ್ಲರು ತಮ್ಮ ಜಂಜಡಗಳ ಮೂಲವನ್ನು ಹೇಗೆ ಈ ಬಾಹ್ಯಕಾರಣಗಳಲ್ಲಿ ಕಂಡುಹಿಡಿಯಲು ತಿಳಿದಿದ್ದಾರೆ, ಎಂಬುದನ್ನು ಗಮನಿಸದಿರಲು ಸಾಧ್ಯವಿಲ್ಲ ಯಾವಾಗಲೂ, ಆರಂಭದಲ್ಲಿಯೇ, ತಪ್ಪು ಯಾರದೋ ಒಬ್ಬರದು ಈ ಯಾರೋ ಒಬ್ಬರು ತಮ್ಮನ್ನು ತಾವು ಸುಧಾರಿಸಿಕೊಂಡರೆ ಇಂಗ್ಲೆಂಡು ತನ್ನ ಅಭ್ಯುದಯವನ್ನು ತಾನು ಪುನಃ ಸಂಪಾದಿಸಿಕೊಳ್ಳುವುದು ತಮ್ಮನ್ನು ತಾವು ಸುಧಾರಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಇತರರನ್ನು ಸುಧಾರಿಸುವ ಸ್ವಾಭಾವಿಕವಾದ ಆಶೆಯು ಯಾವಾಗಲೂ ಇರುತ್ತದೆ!"

ಉಳಿದ ಪ್ರಪಂಚವನ್ನು ಕುರಿತ ಸಾಮಾನ್ಯವಾದ ಬ್ರಿಟಿಷ್ ಮನೋಭಾವವು ಹೀಗಿದ್ದಿತೆಂದರೆ ಭಾರತದಲ್ಲಿ ಅದು ಅತ್ಯಂತ ಸ್ಪಷ್ಟವಾಗಿತ್ತು. ಅದು ವಿಶೇಷವಾಗಿ ಸಿಡುಕೆಬ್ಬಿಸುವುದಾಗಿದ್ದರೂ ಭಾರತೀಯ ಸಮಸ್ಯೆಯನ್ನು ಕುರಿತ ಬ್ರಿಟಿಷ್ ಪ್ರಸ್ತಾಪನದಲ್ಲಿ ಯಾವುದೋ ಒಂದು ಮನೋಹರತೆಯಿದ್ದಿತು ಯಾವಾಗಲೂ ಸರಿಯಾದ ಮಾರ್ಗದಲ್ಲಿಯೇ ನಡೆಯುತ್ತಿರುವರೆಂಬ ಮತ್ತು ದೊಡ್ಡದೊಂದು ಹೊರೆಯನ್ನು

* "೨೦ ನೆಯ ಶತಮಾನದ ಬ್ರಿಟಿಷ್ ಸಂದುಕಟ್ಟು" ಎಂಬ ಗ್ರಂಥದಲ್ಲಿ

ಯಶಸ್ವಿಯಾಗಿ ನಿಭಾಯಿಸಿರುವರೆಂಬ ಪ್ರಶಾಂತವಾದ ನೆಚ್ಚಿಕೆ, ತಮ್ಮ ಜನಾಂಗದ ಉನ್ನತವಿಧಿ ಮತ್ತು ತಮ್ಮ ಮಾದರಿಯ ಸಾಮ್ರಾಜ್ಯತತ್ವಗಳಲ್ಲಿನ ಅಪಾರ ಶ್ರದ್ಧೆ, ಈ ನಿಜವಾದ ಶ್ರದ್ಧೆಯ ಬುನಾದಿಗಳನ್ನು ಕುರಿತು ಆಕರಿಸಿದ, ನಂಬದವರ ಮತ್ತು ಪಾಪಿಗಳ ವಿಷಯದಲ್ಲಿ ಧಿಕ್ಕಾರ ಮತ್ತು ಕೋಪ—ಈ ನಿಷ್ಕೃಷ್ಟ ಮನೋಭಾವದಲ್ಲಿ ಒಂದು ಧಾರ್ಮಿಕ ಪ್ರವೃತ್ತಿಯ ಸುಳಿವಿದ್ದಿತು ಪೂರ್ವಕಾಲದ ಇನ್‌ಕ್ವಿಸಿಟರ್ಸ್ § ರಂತೆ ನಮಗೆ ಇಷ್ಟವಿರಲಿ ಇಲ್ಲದಿರಲಿ ನಮಗೆ ಮೋಕ್ಷವನ್ನು ಕೊಡಲು ಅವರು ಕಂಕಣಬದ್ಧರಾಗಿದ್ದರು ಪ್ರಾಸಂಗಿಕವಾಗಿ ಈ ಸದ್ಗುಣದ ದುರ್ವ್ಯಾಪಾರದಿಂದ ಲಾಭಪಡೆದರು ಹೀಗೆ "ಪ್ರಾಮಾಣಿಕತೆಯು ಅತ್ಯುತ್ತಮ ನೀತಿ" ಎಂಬ ಹಳೆಯ ನಾಣ್ನುಡಿಯ ಸತ್ಯವನ್ನು ಸ್ಥಾಪಿಸಿದರು ಭಾರತದ ಪ್ರಗತಿಯೆಂದರೆ, ಸಾಮ್ರಾಜಿಕ ವ್ಯವಸ್ಥೆಗೆ ಭಾರತದ ಹೊಂದಿಕೆ ಮತ್ತು ಬ್ರಿಟಿಷ್ ಎರಕವನ್ನು ಅನುಸರಿಸಿ ಆಯ್ದ ಭಾರತೀಯರನ್ನು ತಿದ್ದುವುದು, ಎಂದಾಯಿತು ಬ್ರಿಟಿಷ್ ಆದರ್ಶಗಳು ಮತ್ತು ಆಶೋತ್ತರಗಳನ್ನು ನಾವು ಎಷ್ಟು ಹೆಚ್ಚಾಗಿ ಅಂಗೀಕರಿಸಿದರ 'ಸ್ವರಾಜ್ಯ'ಕ್ಕೆ ನಾವು ಅಷ್ಟು ಹೆಚ್ಚಾಗಿ ಅರ್ಹರು ನಾವು ಸ್ವಾತಂತ್ರ್ಯವನ್ನು ಬ್ರಿಟಿಷರ ಅಪೇಕ್ಷೆಗಳ ಪ್ರಕಾರವಾಗಿ ಮಾತ್ರ ಉಪಯೋಗಿಸುತ್ತೇವೆಯೆಂದು ಪ್ರದರ್ಶಿಸಿ ಮಾತುಕೊಟ್ಟು ಕೊಡಲೆ ಸ್ವಾತಂತ್ರ್ಯವು ನಮ್ಮದಾಗಿಬಿಡುತ್ತದೆ

ಭಾರತದಲ್ಲಿನ ಬ್ರಿಟಿಷ್ ಆಳ್ವಿಕೆಯ ಚರಿತ್ರೆಯನ್ನು ಕುರಿತು ಭಾರತೀಯರೂ ಆಂಗ್ಲರೂ ಭಿನ್ನಾಭಿಪ್ರಾಯಪಡುವ ಸಂಭವವಿದೆಯೆಂದು ನಂಬುತ್ತೇನೆ ಪ್ರಾಯಃ ಇದು ಸ್ವಾಭಾವಿಕವೆ, ಆದರೆ ಭಾರತದ ಸೆಕ್ರೆಟರಿ ಆಫ್ ಸ್ಟೇಟ್‌ಗಳನ್ನು ಒಳಗೊಂಡ ಉತ್ತುಂಗ ಬ್ರಿಟಿಷ್ ಅಧಿಕಾರಿಗಳು ಭಾರತದ ಹಿಂದಿನ ಮತ್ತು ಇಂದಿನ ಪರಿಸ್ಥಿತಿಗಳನ್ನು ಕುರಿತು ಇಚ್ಛಾಚಿತ್ರಗಳನ್ನು ಚಿತ್ರಿಸಿ ಸತ್ಯಾಂಶದ ತಳಹದಿಯಿಲ್ಲದ ಹೇಳಿಕೆಗಳನ್ನು ಹೇಳುವುದು ಖಂಡಿತವಾಗಿ ಒಂದು ಧಕ್ಕೆಯಾಗುವುದು ಕೆಲವು ತಜ್ಞರನ್ನೂ ಇತರರನ್ನೂ ಬಿಟ್ಟರೆ, ಆಂಗ್ಲ ಜನರು ಭಾರತದ ವಿಷಯದಲ್ಲಿ ಎಷ್ಟು ಅಜ್ಞರಾಗಿದ್ದಾರೆಂಬುದು ಆಶ್ಚರ್ಯಕರವಾಗಿದೆ ಸತ್ಯಾಂಶಗಳೇ ಅವರ ಹಿಡಿತಕ್ಕೆ ಸಿಕ್ಕದೆ ಹೋದ ಮೇಲೆ ಭಾರತದ ಆತ್ಮವು ಅವರಿಗೆ ನಿಲುಕದಂತೆ ಇನ್ನೆಷ್ಟು ದೂರದಲ್ಲಿರಬಹುದು ? ಅವರು ಆಕೆಯ ದೇಹವನ್ನು ಹಿಡಿದು ಸ್ವಾಧೀನಪಡಿಸಿಕೊಂಡರು ಆದರೆ ಅದು ಹಿಂಸೆಯಿಂದ ಸ್ವಾಧೀನಪಡಿಸಿಕೊಂಡದ್ದು ಅವರು ಆಕೆಯ ಪರಿಚಯ ಮಾಡಿಕೊಳ್ಳಲೂ ಇಲ್ಲ, ಅಥವಾ ಪರಿಚಯ ಮಾಡಿಕೊಳ್ಳಲು ಪ್ರಯತ್ನಿಸಲೂ ಇಲ್ಲ ಆಕೆಯ ಕಣ್ಣುಗಳನ್ನು ಅವರು ದಿಟ್ಟಿಸಿ ನೋಡಲೇ ಇಲ್ಲ ಏಕೆಂದರೆ ವಿಮುಖರಾಗಿದ್ದರು.

§ ಯೂರೋಪಿನಲ್ಲಿ ಸ್ವಮತದ್ರೋಹಿಗಳನ್ನು ಬಲಾತ್ಕಾರದಿಂದ ಮತ್ತು ಚಿತ್ರಹಿಂಸೆಯಿಂದ ಪುನಃ ಮತಾಂತರಗೊಳಿಸಿ ಮೋಕ್ಷವನ್ನು ಬಲಾತ್ಕಾರವಾಗಿ ಕೊಡಿಸುತ್ತಿದ್ದ ಇಲ್ಲವೇ ಜೀವಸಹಿತ ಸುಟ್ಟುಬಿಡುತ್ತಿದ್ದ ಸಂಸ್ಥೆಗೆ ಸೇರಿದವರು

ಅಪಮಾನ ಮತ್ತು ತೇಜೋವಧೆಗಳಿಂದ ಆಕೆಯು ತಲೆಯನ್ನು ತಗ್ಗಿಸಿದ್ದಳು ಅನೇಕ ಶತಮಾನಗಳ ಸಂಪರ್ಕವಿದ್ದರೂ ಅವರು ಪರಸ್ಪರ ಪರಕೀಯರಂತೆಯೂ ಪರಸ್ಪರ ಅನಿಷ್ಟದಿಂದ ತುಂಬಿದವರಾಗಿಯೂ ಒಬ್ಬರನ್ನೊಬ್ಬರು ನೋಡುತ್ತಾರೆ

ಇಷ್ಟಾದರೂ, ಇಷ್ಟೆಲ್ಲ ದಾರಿದ್ರ್ಯ ಮತ್ತು ಅವನತಿಗಳಿದ್ದರೂ, ಭಾರತಕ್ಕೆ ಸಾಕಷ್ಟು ಕುಲೀನತೆಯೂ ಹೆಗ್ಗಳಿಕೆಯೂ ಇದ್ದುವು ಪ್ರಾಚೀನ ಸಂಪ್ರದಾಯ ಮತ್ತು ಇಂದಿನ ರೀತಿಗಳ ಹೊರಲಾರದ ಹೊರೆಯನ್ನು ಹೊತ್ತಿದ್ದರೂ ಆಕೆಯ ರೆಪ್ಪೆಗಳು ಸ್ವಲ್ಪ ಆಯಾಸಗೊಂಡಿದ್ದರೂ ಆಕೆಗೆ "ಒಳಗಿನಿಂದ ಹೊರವ್ಯೆಯ ಮೇಲಕ್ಕೆ ತಿದ್ದಿ ಕೊಂಡು ಬಂದಿರುವ ಚೆಲುವೂ ಅಣುಅಣುವಾಗಿ ಅಲೌಕಿಕ ಆಲೋಚನೆಗಳ, ಕಾಲ್ಪನಿಕ ಪಾರವಶ್ಯಗಳ ಮತ್ತು ಉತ್ಕೃಷ್ಟ ರಾಗಗಳ ವಿನ್ಯಾಸವೂ" ಇವೆ ಜಜ್ಜಿಹೋದ ದೇಹದ ಹಿಂದೆ ಮತ್ತು ಒಳಗಡೆ, ಆಕೆಯ ಆತ್ಮವೈಭವದ ನಿಮಿಷದರ್ಶನವನ್ನು ಇನ್ನೂ ಹೊಂದಬಹುದಾಗಿತ್ತು ಅನೇಕ ಶತಮಾನಗಳಲ್ಲಿ ಆಕೆಯು ಪ್ರಯಾಣಮಾಡಿ, ದಾರಿಯಲ್ಲಿ ಬೇಕಾದಷ್ಟು ಜ್ಞಾನವನ್ನು ಸಂಪಾದಿಸಿ, ಪರಕೀಯರೊಂದಿಗೆ ವ್ಯವಹಾರ ನಡೆಸಿ, ತನ್ನ ದೊಡ್ಡ ಕುಟುಂಬಕ್ಕೆ ಅವರನ್ನು ಸೇರಿಸಿಕೊಂಡು, ಉನ್ನತಿ ಮತ್ತು ಅವನತಿಗಳ ದಿನಗಳನ್ನು ಕಂಡು, ಭಯಂಕರವಾದ ದುಃಖ ಮತ್ತು ತೇಜೋವಧೆಗಳನ್ನು ಅನುಭವಿಸಿದ್ದಳು, ಅನೇಕ ವಿಲಕ್ಷಣ ದೃಶ್ಯಗಳನ್ನು ನೋಡಿದ್ದಳು, ಆದರೆ ಆಕೆಯ ದೀರ್ಘವಾದ ಪ್ರಯಾಣದಲ್ಲಿ ಆಕೆಯು ತನ್ನ ಅತ್ಯಂತ ಪ್ರಾಚೀನ ಸಂಸ್ಕೃತಿಯನ್ನು ಪಟ್ಟಾಗಿ ಹಿಡಿದುಕೊಂಡಿದ್ದು ಅದರಿಂದ ಶಕ್ತಿ ಮತ್ತು ಸತ್ವಗಳನ್ನು ಹೀರಿಕೊಂಡು, ಅದನ್ನು ಇತರ ರಾಜ್ಯಗಳೊಂದಿಗೆ ಹಂಚಿಕೊಂಡಿದ್ದಳು ಆಂದೋಲಕದಂತೆ ಆಕೆಯು ಮೇಲಿಂದ ಕೆಳಕ್ಕೂ ಕೆಳಗಿನಿಂದ ಮೇಲಕ್ಕೂ ತೂಗಾಡಿದ್ದಳು ತನ್ನ ಆಲೋಚನೆಯ ಸಾಹಸ ಪ್ರವೃತ್ತಿಯಿಂದ ಆಕೆಯು ಮುಗಿಲನ್ನು ಮುಟ್ಟಿ ಅವುಗಳ ಗುಟ್ಟುಗಳನ್ನು ಬಿಚ್ಚಿತೋರಿಸಲು ಸಾಹಸಪಟ್ಟಿದ್ದಳು ನರಕಕೂಪದ ದುರ್ಭರವಾದ ಅನುಭವವನ್ನೂ ಪಡೆದಿದ್ದಳು ಮೂಢಭಕ್ತಿಯ ಮತ್ತು ಅಪಮಾನಕರ ಸಂಪ್ರದಾಯಗಳ ಸಂಕಟಕರ ರಾಶಿಯು ಆಕೆಯನ್ನು ಬಿಗಿಹಿಡಿದು ಕೆಳಕ್ಕೆ ಅದುಮಿದ್ದರೂ, ಇತಿಹಾಸದ ಅರುಣೋದಯದಲ್ಲಿ ಉಪನಿಷತ್ತುಗಳ ಮೂಲಕ ತನ್ನ ಮಕ್ಕಳಲ್ಲಿ ಸರ್ವಜ್ಞರಾದ ಕೆಲವರು ತನಗೆ ಕೊಟ್ಟ ಸ್ಫೂರ್ತಿಯನ್ನು ಆಕೆಯು ಸಂಪೂರ್ಣವಾಗಿ ಮರೆಯಲೇ ಇಲ್ಲ ಅನವರತವಾಗಿ ತವಕಿಸುತ್ತ, ಅನವರತವಾಗಿ ಪ್ರಯತ್ನಿಸುತ್ತ, ಅನ್ವೇಷಿಸುತ್ತ ಇದ್ದ ಅವರ ಚುರುಕಾದ ಬುದ್ಧಿಯು ಅಂಧ ಸಿದ್ಧಾಂತಗಳಲ್ಲಿ ನೆಮ್ಮದಿಯನ್ನು ಪಡೆಯಲು ಹವಣಿಸಲಿಲ್ಲ, ಅಥವಾ ಮೃತ ರೀತಿವ್ರತಮತಗಳ ನಿತ್ಯಾನುಷ್ಠಾನದಲ್ಲಿ ಸಂತುಷ್ಟರಾಗಿದ್ದುಬಿಡಲಿಲ್ಲ ವರ್ತಮಾನದ ದುಃಖ ಕಷ್ಟಗಳ ಅನುಭವದಿಂದ ಒಂದು ವೈಯಕ್ತಿಕ ಬಿಡುಗಡೆಯನ್ನಾಗಲಿ ಅಥವಾ ಭವಿಷ್ಯತ್ತಿನ ಸ್ವರ್ಗದಲ್ಲಿ ಸ್ಥಾನವೊಂದನ್ನಾಗಲಿ ಅವರು ಕೇಳಲಿಲ್ಲ ಅವರಿಗೆ ಬೇಕಾಗಿದ್ದುದು ಜ್ಞಾನಜ್ಯೋತಿ "ಸಟೆಯಿಂದೆ ದಿಟಕೆ ಕೈಹಿಡಿದು ನಡಸೆನ್ನನು ಕತ್ತಲೆಯಿಂ ಬೆಳಕಿಂಗೆ

ಕೈಹಿಡಿದು ನಡಸೆನ್ನನು ಬರ್ದಿನಿಂ ಬರ್ದಿಲತನಕೆ ಕೈಹಿಡಿದು ನಡಸಯ್ಯ "* ಇಂದೂ ಕೂಡ ಲಕ್ಷೋಪಲಕ್ಷ ಜನರು ದಿನವಹಿ ಜಪಿಸುತ್ತಿರುವ ಅತ್ಯಂತ ಪ್ರಸಿದ್ಧವಾದ ಗಾಯತ್ರಿ ಮಂತ್ರ § ದಲ್ಲಿರುವುದು ಜ್ಞಾನ ಮತ್ತು ಜ್ಯೋತಿಗಳಿಗಾಗಿ ಒಂದು ಮೊರ

ಅನೇಕ ವೇಳೆ ರಾಜಕೀಯವಾಗಿ ಛಿದ್ರ ಛಿದ್ರವಾಗಿದ್ದರೂ ಆಕೆಯ ಆತ್ಮವು ಎಲ್ಲರಿಗೂ ಸಮಾನವಾದ ಪಿತ್ರಾರ್ಜಿತ ಸೌಭಾಗ್ಯವೊಂದನ್ನು ಕಾಯ್ದುಕೊಂಡಿತ್ತು ಆಕೆಯ ವೈವಿಧ್ಯತೆಯಲ್ಲಿ ಆಶ್ಚರ್ಯಕರವಾದ ಏಕತ್ವವಿದ್ದಿತು † ಎಲ್ಲ ಪ್ರಾಚೀನ ರಾಜ್ಯಗಳಂತೆ ಆಕೆಯಲ್ಲಿ ಕೌತುಕಗೊಳಿಸುವ ಒಳ್ಳೆಯದರ ಮತ್ತು ಕೆಟ್ಟದರ ಬೆರಕೆಯಿತ್ತು ಆದರೆ ಒಳ್ಳೆಯದು ಮರೆಯಲ್ಲಡಗಿದ್ದು ಅದರ ಅನ್ವೇಷಣವಾಗಬೇಕಾಗಿತ್ತು ಮುಗ್ಗುಲುಹಿಡಿದ ವಾಸನೆಯು ಚೆನ್ನಾಗಿ ತಿಳಿಯುತ್ತಿತ್ತು, ಆಕೆಯ ಕರುಳಿಲ್ಲದ ಉರಿನೇಸರು ಕೆಟ್ಟದನ್ನು ಚೆನ್ನಾಗಿ ಎತ್ತಿತೋರಿಸಿತು

ಇಟಲಿಗೂ ಭಾರತಕ್ಕೂ ಒಂದು ವಿಧವಾದ ಸಾಸಟಿಯಿದೆ ಭಾರತದೊಡನೆ ಹೋಲಿಸಿದರೆ ಇಟಲಿಯು ಸ್ವಲ್ಪ ಇತ್ತೀಚಿನದಾದರೂ ಭಾರತವು ಅದಕ್ಕಿಂತ ಬಹಳ ವಿಸ್ತಾರ ದೇಶವಾದರೂ, ಎರಡೂ, ಸಂಸ್ಕೃತಿಯ ದೀರ್ಘ ಪರಂಪರೆಗಳನ್ನು ಹಿಂದಿಟ್ಟುಕೊಂಡಿರುವ ಪ್ರಾಚೀನ ರಾಜ್ಯಗಳು ಎರಡೂ ರಾಜಕೀಯವಾಗಿ ಒಡೆದು ಒಡೆದು ಹೋಗಿವೆ ಆದರೂ ಭಾರತಿಯ ಕಲ್ಪನೆಯಂತೆಯೇ ಇಟಾಲಿಯಳ ಕಲ್ಪನೆಯೂ ಸತ್ತು ಹೋಗಲೇ ಇಲ್ಲ ಅವರ ಎಲ್ಲ ವೈವಿಧ್ಯತೆಯಲ್ಲಿಯೂ ಐಕ್ಯತೆಯು ಅಧಿಕರಿಸಿತ್ತು

---

* ಬೃಹದಾರಣ್ಯಕೋಪನಿಷತ್ ಅಧ್ಯಾಯ-೧, ಬ್ರಾಹ್ಮಣ-೨, ಮಂತ್ರ-೨೭

'ಅಸತೋ ಮಾ ಸದ್ಗಮಯ |
ತಮಸೋ ಮಾ ಜ್ಯೋತಿರ್ಗಮಯ |
ಮೃತ್ಯೋರ್ಮಾಮೃತಂಗಮಯ |"

§ ಗಾಯತ್ರಿ ಮಂತ್ರ

ಓಂ | ತತ್ಸವಿತುರ್ವರೇಣ್ಯಮ್ |
ಭರ್ಗೋ ದೇವಸ್ಯ ಧೀಮಹಿ |
ಧಿಯೋಯೋನಃ ಪ್ರಚೋದಯಾತ್ |

† "ಭಾರತದಲ್ಲಿನ ಅತಿಮಹತ್ತಾದ ಪರಸ್ಪರ ವಿರುದ್ಧವಾದ ವಿಷಯವೆಂದರೆ, ವೈವಿಧ್ಯತೆಗಿಂತ ಹೆಚ್ಚಾಗಿದ್ದು ಅದರ ಮೇಲೆ ಹರಡಿಕೊಂಡಿರುವ ಐಕ್ಯತೆ ರಾಜಕೀಯ ಸ್ನಿಗ್ಧತೆಯ ಮೂಲಕ ದೇಶವನ್ನು ಒಂದಾಗಿ ಮಾಡುವುದರಲ್ಲಿ, ಒಂದು ಐತಿಹಾಸಿಕ ಉಕ್ತಿಯನ್ನು ಪಡೆಯುವುದರಲ್ಲಿ ಅದು ಯಶಸ್ವಿಯಾಗದಿದ್ದುದೇ ಇದಕ್ಕೆ ಕಾರಣ ಇಷ್ಟಾದರೂ ಅದರ ಪ್ರಭಾವವು ತಮ್ಮ ಮೇಲೆ ಪ್ರಬಲವಾಗಿ ಬಿದ್ದಿತೆಂದು ಭಾರತದ ಮುಸಲ್ಮಾನ್ ಪ್ರಪಂಚವು ಒಪ್ಪಿಕೊಳ್ಳುವಷ್ಟು, ಅದು ಶಕ್ತಿಯುತವಾದ ಸತ್ಯಾಂಶ' ಸರ್ ಫ್ರೆಡರಿಕ್ ವೈಟ್ 'ಪೂರ್ವ ಮತ್ತು ಪಶ್ಚಿಮಗಳ ಭವಿಷ್ಯ'

ಇಟಲಿಯಲ್ಲಿ ಐಕ್ಯತೆಯು ಬಹುತರವಾಗಿ 'ರೋಮನ್' ಐಕ್ಯತೆಯಾಗಿತ್ತು ಏಕೆಂದರೆ ರಾಜ್ಯವನ್ನು ಅಧಿಕರಿಸಿದ ಆ ಮಹಾನಗರವು ಐಕ್ಯತೆಯ ಚಿಲುವೆಯೂ ಚಿಹ್ನೆಯೂ ಆಗಿತ್ತು ಭಾರತದಲ್ಲಿ ಆ ತೆರನಾದ ಒಂದು ಕೇಂದ್ರವಾಗಲಿ ಅಥವಾ ಅಧಿಕರಿಸುವ ನಗರವಾಗಲಿ ಇರಲಿಲ್ಲ ಆದರೂ ಕಾಶಿಯನ್ನು ಒಂದುವೇಳೆ ಪೂರ್ವದ—ಕೇವಲ ಭಾರತಕ್ಕೆ ಮಾತ್ರವಲ್ಲ, ಪೌರ್ವಾತ್ಯ ಏಷ್ಯಾಖಂಡಕ್ಕೂ ಸಹ—'ಅಮರ ನಗರ' (ಇಟರ್ನಲ್ ಸಿಟಿ), ಎಂದು ಕರೆಯಬಹುದು ಆದರೆ ರೋಮಿನಂತಲ್ಲದೆ, ಕಾಶಿಯು ಸಾಮ್ರಾಜ್ಯದ ಬಯಕೆ ಯಲ್ಲಾಗಲಿ ಅಥವಾ ಪ್ರಾಪಂಚಿಕ ಅಧಿಕಾರದ ಯೋಚನೆಯಲ್ಲಾಗಲಿ ಕೈಯಾಡಲಿಲ್ಲ ಭಾರತದ ಯಾವ ಭಾಗವನ್ನೂ ಭಾರತೀಯ ಸಂಸ್ಕೃತಿಯ ಹೃದಯವೆಂದು ಕರೆಯಲು ಅಸಾಧ್ಯವಾಗುವಷ್ಟರಮಟ್ಟಿಗೆ ಅದು ದೇಶೋವಿಶಾಲವಾಗಿ ಹರಡಿತ್ತು ಕನ್ಯಾಕುಮಾ ರಿಯಿಂದ ಹಿಮಾಲಯದಲ್ಲಿರುವ ಅಮರನಾಥ ಮತ್ತು ಬದರೀನಾಥಗಳವರಗೆ, ದ್ವಾರಕೆ ಯಿಂದ ಪುರಿಯವರೆಗೆ, ಒಂದೇ ವಿಧವಾದ ಕಲ್ಪನೆಗಳ ಪ್ರವಾಹವು ಹರಿಯುತ್ತಿತ್ತು ಯಾವುದಾದರೊಂದು ಸ್ಥಳದಲ್ಲಿ ಕಲ್ಪನೆಗಳ ಘರ್ಷಣೆಯು ಸಂಭವಿಸಿದರೆ ಅದರ ಗದ್ದಲವು ಶೀಘ್ರವಾಗಿ ದೇಶದ ದೂರದ ಭಾಗಗಳಿಗೆ ಮುಟ್ಟುತ್ತಿತ್ತು ಪಾಶ್ಚಿಮಾತ್ಯ ಯೂರೋಪಿಗೆ ಇಟಲಿಯು, ಸಂಸ್ಕೃತಿ ಮತ್ತು ಮತಗಳ ದಾನವನ್ನು ನೀಡಿದಂತೆಯೇ (ಚೀಣವು ಭಾರತದಷ್ಟೇ ಪ್ರಾಚೀನವೂ ಗೌರವನೀಯವೂ ಆಗಿದ್ದರೂ) ಭಾರತವು ಪೌರ್ವಾತ್ಯ ಏಷ್ಯಕ್ಕೆ ಅಂತೆಯೇ ನೀಡಿತು ಇಟಲಿಯು ರಾಜಕೀಯವಾಗಿ ಮಲಗಿಬಿ ಟ್ಟಿದ್ದಾಗಲೂ ಕೂಡ ಆಕೆಯ ಜೀವಕಳೆಯು ಯೂರೋಪಿನ ಧಮನಿಗಳಲ್ಲಿ ಹರಿ ಯುತ್ತಿತ್ತು

ಇಟಲಿಯನ್ನು ಒಂದು "ಭೌಗೋಲಿಕ ಉಕ್ತಿ" ಎಂದು ಕರೆದವನು ಮೆಟರ್ನಿಕ್ ಅನೇಕ ಭಾವಿ ಮೆಟರ್ನಿಕ್‌ರು ಆ ವಾಕ್ಯಾಂಗವನ್ನು ಭಾರತಕ್ಕೆ ಉಪಯೋಗಿಸಿದ್ದಾರೆ ವಿಚಿತ್ರವಾಗಿ, ಎರಡು ಖಂಡಗಳಲ್ಲಿಯೂ ಅವುಗಳ ಭೌಗೋಲಿಕ ಅವಸ್ಥಾನಗಳಲ್ಲಿ ಸಹ ಸಾಸಟೆಯೊಂದಿದೆ ಇಂಗ್ಲೆಂಡ್ ಮತ್ತು ಆಸ್ಟ್ರಿಯಗಳ ಹೋಲಿಕೆಯು ಇದ ಕ್ಕಿಂತಲೂ ಸ್ವಾರಸ್ಯವಾಗಿದೆ ಏಕೆಂದರೆ ಇಪ್ಪತ್ತನೆಯ ಶತಮಾನದ ಇಂಗ್ಲೆಂಡು, ಇನ್ನೂ ಪ್ರತಿಷ್ಠೆ, ಅಹಂಕಾರ, ಮತ್ತು ವೈಭವಗಳನ್ನು ಹೊಂದಿದ್ದ ಆದರೆ ಶಕ್ತಿಯನ್ನು ಕೂಡುತ್ತಿದ್ದ, ಬೇರುಗಳು ಒಣಗುತ್ತಿದ್ದ, ಮತ್ತು ಆ ದೊಡ್ಡ ಕಟ್ಟಡವು ಹಾಳು ಬೀಳುತ್ತಿದ್ದ ಹತ್ತೊಂಬತ್ತನೆಯ ಶತಮಾನದ ಆಸ್ಟ್ರಿಯಕ್ಕೆ ಹೋಲಿಸಲ್ಪಟ್ಟಿಲ್ಲವೆ

ದೇಶವೊಂದಕ್ಕೆ ಮನುಷ್ಯತ್ವಾರೋಪಿತವಾದ ಸ್ವರೂಪವನ್ನು ಕೊಡುವ ಪ್ರವೃ ತ್ತಿಯನ್ನು ಹೇಗೆ ವ್ಯಕ್ತಿಯೊಬ್ಬನು ತಡೆದುಕೊಳ್ಳಲಾರನು ಎಂಬುದು ಕೌತುಕವಾಗಿದೆ ಅಭ್ಯಾಸದ ಮತ್ತು ಬಾಲ್ಯದ ಸಾಹಚರ್ಯಗಳ ಪ್ರಾಬಲ್ಯವಿದು ಭಾರತವು ಒಬ್ಬ ಸುಂದರಳಾದ, ಬಹಳ ಮುದಿಯಾದ ಆದರೂ ಸ್ವರೂಪದಲ್ಲಿ ಎಂದಿಗೂ ತುಂಬುಜೌವ ನದಿಂದ ಕೂಡಿದ, ಅಳಲ ಕಣ್ಣುಳ್ಳ ಮತ್ತು ದಿಕ್ಕೆಟ್ಟ ಹೊರನಾಡಿಗರ ಕ್ರೌರ್ಯಕ್ಕೆ ಸಿಕ್ಕಿ

ರುವ ಮತ್ತು ತನ್ನನ್ನು ರಕ್ಷಿಸಬೇಕೆಂದು ತನ್ನ ಮಕ್ಕಳನ್ನು ಕೂಗಿ ಕರೆಯುತ್ತಿರುವ ಸ್ತ್ರೀಯಾಗಿ 'ಭಾರತಮಾತೆ' ಯಾಗಿ ಪರಿಣಮಿಸುತ್ತದೆ ಈ ತೆರನಾದ ಯಾವುದೋ ಒಂದು ಚಿತ್ರವು ಸಾವಿರಾರು ಮಂದಿಯ ರಾಗಗಳನ್ನು ಹೊಡೆದೆಬ್ಬಿಸಿ ಅವರನ್ನು ಕಾರ್ಯಕ್ಕೂ ತ್ಯಾಗಕ್ಕೂ ಮುನ್ನುಗ್ಗಿಸುತ್ತದೆ ಇಷ್ಟಾದರೂ ಭಾರತವು ಮುಖ್ಯವಾಗಿ ಬೇಸಾಯಗಾರರನ್ನೂ ಕೆಲಸಗಾರರನ್ನೂ ಒಳಗೊಂಡಿದೆ ಇದು ಸುಂದರವಾಗಿಲ್ಲ ಏಕೆಂದರೆ ದಾರಿದ್ರ್ಯವು ಸುಂದರವಾದುದಲ್ಲ ನಮ್ಮ ಕಲ್ಪನಾ ಸುಂದರಿಯು ಕ್ಷೇತ್ರಗಳ ಮತ್ತು ಕಾರ್ಖಾನೆಗಳ ಬರಿಮೈಯ, ಬಾಗಿದ ಬೆನ್ನಿನ ಕೆಲಸಗಾರರನ್ನು ಪ್ರತಿನಿಧಿಸುತ್ತಾಳೆಯ ? ಅಥವಾ ಯುಗಯುಗಾಂತರಗಳಿಂದ ಜನಜಂಗುಳಿಯನ್ನು ತುಳಿದು, ಸ್ವಪ್ರಯೋಜನಕ್ಕಾಗಿ ಅವರನ್ನು ಸುಲಿದು, ಅವರ ಮೇಲೆ ಕ್ರೂರವಾದ ಸಂಪ್ರದಾಯಗಳ ಹೊರೆಯನ್ನು ಹೊರಿಸಿ, ಅವರಲ್ಲನೇಕರನ್ನು ಅಸ್ಪೃಶ್ಯರನ್ನಾಗಿಯೂ ಮಾಡಿದ ಸಣ್ಣ ಗುಂಪನ್ನೇ? ಸತ್ಯವನ್ನು ನಮ್ಮ ಕಲ್ಪನಾ ಜಂತುಗಳಿಂದ ಮುಚ್ಚಲು ಹವಣಿಸಿ, ನಾವು ಸತ್ಯಪ್ರಪಂಚದಿಂದ ನುಣ್ಚಿಕೊಂಡು ಸ್ವಪ್ನಪ್ರಪಂಚಕ್ಕೆ ಜಾರಲು ಪ್ರಯತ್ನಿಸುತ್ತೇವೆ

ಈ ವಿವಿಧ ತರಗತಿಗಳು ಮತ್ತು ಅವುಗಳ ಪರಸ್ಪರ ಸಂಘರ್ಷಣೆಗಳು ಇದ್ದರೂ ಭಾರತದಲ್ಲಿ ಅವನ್ನು ಒಂದುಗೂಡಿಸಿದ ಸಮಾನಬಂಧನವೊಂದಿತ್ತು ಅದರ ಬಲ, ಧಾರಣಶಕ್ತಿ ಮತ್ತು ನಿಡುಗಾಲ ಬಾಳುವ ಸತ್ವಗಳನ್ನು ನೋಡಿದರ ಅತ್ಯಾಶ್ಚರ್ಯವಾಗುತ್ತದೆ ಈ ಶಕ್ತಿಗೆ ಕಾರಣವಾವುದು ? ಯಾವಾಗಲೂ ಪ್ರಬಲವಾಗಿಯೇ ಇರುವ ಜಡತ್ವ ಮತ್ತು ಸಂಪ್ರದಾಯಗಳ ಕೇವಲ ತಟಸ್ಥ ಶಕ್ತಿ ಮತ್ತು ಭಾರಗಳು ಕಾರಣವಲ್ಲ ಅಲ್ಲಿ ಒಂದು ಚುರುಕಾದ ಆಧರಿಸುವ ಅಂತಶ್ಶಕ್ತಿಯಿದ್ದಿತು ಏಕೆಂದರೆ ಹೊರಗಣ ಪ್ರಬಲ ಪ್ರಭಾವಗಳನ್ನು ಯಶಸ್ವಿಯಾಗಿ ತಡೆಗಟ್ಟಿ ಅದರೊಡನೆ ಕಾಳೆಗ ಮಾಡಲು ಎದ್ದ ಒಳಗಣ ಶಕ್ತಿಗಳನ್ನು ತನ್ನಲ್ಲಿ ತಾನೇ ಹೀರಿಕೊಂಡುಬಿಟ್ಟಿತು ಇಷ್ಟಾದರೂ ರಾಜಕೀಯ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲಿಲ್ಲ, ರಾಜಕೀಯ ಐಕ್ಯತೆಯನ್ನು ಆಗಮಾಡಿಸಲು ಪ್ರಯತ್ನವನ್ನೂ ಮಾಡಲಿಲ್ಲ ಕೊನೆಯ ಈ ಎರಡು ಉದ್ದೇಶಗಳಿಗಾಗಿ ಅಷ್ಟು ಕಷ್ಟಪಡಬೇಕಾಗಿಲ್ಲವೆಂಬುದು ಪರಿಗಣಿಸಲ್ಪಟ್ಟಂತೆ ತೋರುತ್ತದೆ ಅವುಗಳ ಪ್ರಾಮುಖ್ಯತೆಯು ಅತ್ಯವಿವೇಕದಿಂದ ಉಪೇಕ್ಷಿತವಾಯಿತು ಈ ಉಪೇಕ್ಷೆಗಾಗಿ ನಾವು ಈಗ ನರಳುತ್ತಿದ್ದೇವೆ ಇಡೀ ಇತಿಹಾಸದಲ್ಲೆಲ್ಲ ಭಾರತದ ಪ್ರಾಚೀನ ಆದರ್ಶವು ರಾಜಕೀಯ ಮತ್ತು ಸೈನಿಕ ವಿಜಯವನ್ನು ಮೇಲಕ್ಕೆತ್ತಿ ಮೆರೆಯಲಿಲ್ಲ ಧನ ಮತ್ತು ಔದ್ಯೋಗಿಕವಾಗಿ ಧನಸಂಚಯನಮಾಡುವ ವರ್ಗಗಳನ್ನು ಅದು ಕೀಳಾಗಿ ಕಂಡಿತು ಗೌರವ ಮತ್ತು ಐಶ್ವರ್ಯಗಳು ಜೊತೆಯಲ್ಲಿರುತ್ತಿರಲಿಲ್ಲ ತಾತ್ವಿಕವಾಗಿಯಾದರೂ ಭಾಂಡಾರಿಕ ಸಂಭಾವನೆಯನ್ನು ಸ್ವಲ್ಪವೂ ಪಡೆಯದೆ ಪ್ರಜಾಸೇವೆಯನ್ನು ಗೈದ ಜನರಿಗೆ ಗೌರವವು ಸಲ್ಲಬೇಕೆಂಬ ಭಾವನೆಯಿತ್ತು

ಈ ಪ್ರಾಚೀನ ಸಂಸ್ಕೃತಿಯು ಅನೇಕ ಬಿರುಗಾಳಿ ಸುರಿಮಳೆಗಳಲ್ಲಿ, ಹೊಡೆತಕ್ಕೆ ಸಿಕ್ಕಿದರೂ, ಹೇಗೋ ಉಳಿದುಕೊಂಡಿತು ಆದರೆ ಅದು ತನ್ನ ಹೊರಮೈಯನ್ನು

ಉಳಿಸಿಕೊಂಡು, ನಿಜವಾದ ತಿರುಳನ್ನು ಕಳೆದುಕೊಂಡಿತು ಇಂದು ಅದು ಒಂದು ಹೊಸದಾದ ಸರ್ವಶಕ್ತವಾದ ಎದುರಾಳಿಗಳೊಡನೆ ಗದ್ದಲವಿಲ್ಲದೆ ತನ್ನ ಉಳಿವು ಇಲ್ಲವೆ ಅಳಿವಿಗಾಗಿ ಹೋರಾಡುತ್ತಿದೆ ಬಂಡವಾಳಗಾರ ಪಶ್ಚಿಮದ 'ಬನಿಯ' ನಾಗರಿಕತೆಯೇ ಆ ಎದುರಾಳಿ ಈ ಹೊಸಬನಿಗೆ ಅದು ತುತ್ತಾಗುತ್ತದೆ. ಏಕೆಂದರೆ ಪಶ್ಚಿಮವು ವಿಜ್ಞಾನವನ್ನು ತರುತ್ತದೆ, ಆ ವಿಜ್ಞಾನವು ಹಸಿದಿರುವ ಲಕ್ಷೋಪಲಕ್ಷ ಜನಗಳಿಗೆ ಆಹಾರವನ್ನು ತರುತ್ತದೆ ಆದರೆ ಈ ಕೊರಳು ಕೊಯ್ಯುವ ನಾಗರಿಕತೆಯ ಅನಿಷ್ಟಗಳಿಗೆ ಪರಿಹಾರಗಳನ್ನೂ ಪಶ್ಚಿಮವು ನೀಡುತ್ತದೆ—ಸಮತಾವಾದದ, ಸಹಕಾರದ, ಸರ್ವರ ಸುಖಕ್ಕಾಗಿ ಜನತಾ ಸೇವೆಯ ಸೂತ್ರಗಳನ್ನು ನೀಡುತ್ತದೆ ಇದಕ್ಕೂ ಪುರಾತನ ಬ್ರಾಹ್ಮಣ ಸೇವಾದರ್ಶಕ್ಕೂ ಅಷ್ಟೊಂದು ಹೋಲಿಕೆಯಿಲ್ಲದಿಲ್ಲ ಆದರೆ ಹಾಗೆಂದರೆ, ಎಲ್ಲ ವರ್ಗಗಳ ಮತ್ತು ಪಂಗಡಗಳ ಬ್ರಾಹ್ಮಣೀಕರಣ (ಧಾರ್ಮಿಕ ಅರ್ಥದಲ್ಲಲ್ಲ) ಮತ್ತು ವರ್ಗಗಳ ಪರಸ್ಪರ ತಾರತಮ್ಯಗಳನ್ನು ತೊಡೆದುಹಾಕುವುದು ಎಂದಂತೆ ಭಾರತಿಯು ಈ ಹೊಸ ಉಡುಪನ್ನು ಧರಿಸುವಾಗ—ಆಕೆಯು ಧರಿಸಲೇ ಬೇಕು, ಏಕೆಂದರೆ ಹಳೆಯ ಉಡುಪು ಹರಿದು ಚೂರುಚೂರಾಗಿಬಿಟ್ಟಿದೆ—ಇಂದಿನ ಪರಿಸ್ಥಿತಿಗಳಿಗೂ ಆಕೆಯ ಹಿಂದಿನ ಆಲೋಚನೆಗಳಿಗೂ ಒಗ್ಗುವಂತೆ ಈ ಉಡುಪನ್ನು ಕತ್ತರಿಸಿ ಹೊಲಿದು ತೊಟ್ಟುಕೊಳ್ಳಬೇಕು ಆಕೆಯು ಅಂಗೀಕರಿಸುವ ಕಲ್ಪನೆಗಳು ಆಕೆಯ ಸ್ವಭಾವಕ್ಕೆ ಒಗ್ಗಿಕೊಳ್ಳಬೇಕು

೫೪

# ಬ್ರಿಟಿಷ್ ಆಳ್ವಿಕೆಯ ಚರಿತೆ

ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯ ಚರಿತೆಯು ಏನಾಗಿದೆ ? ಈ ದೀರ್ಘವಾದ ಚರಿತೆಯನ್ನು ಯಾವ ಭಾರತೀಯನಾಗಲಿ ಅಥವಾ ಆಂಗ್ಲನಾಗಲಿ ರಾಗದ್ವೇಷ ರಹಿತವಾದ ಮತ್ತು ಕೇವಲ ವಿಷಯವನ್ನು ಮಾತ್ರ ಕುರಿತ ಒಂದು ದೃಷ್ಟಿಯಿಂದ ನೋಡಲು ಸಾಧ್ಯವೆ ಎಂದು ಶಂಕಿಸುತ್ತೇನೆ ಒಂದು ವೇಳೆ ಹೀಗೆ ಮಾಡುವುದು ಸಾಧ್ಯವಾದರೂ, ಮಾನಸಿಕ ಮತ್ತು ಇತರ ಸ್ಥೂಲವಲ್ಲದ ಕಾರಣಶಕ್ತಿಗಳನ್ನು ತೂಗುವುದೂ ಅಳೆಯುವುದೂ ಇನ್ನೂ ಕಷ್ಟವಾದ ವಿಷಯ ಬ್ರಿಟಿಷ್ ಆಳ್ವಿಕೆಯು "ಗತಶತಮಾನಗಳಲ್ಲೆಲ್ಲಾ ಭಾರತವು ಎಂದೂ ಪಡೆಯದೆಯೇ ಇದ್ದ, ಯಾವ ಸರಕಾರದ ಅಧಿಕಾರವನ್ನು ಆ ಉಪಖಂಡದ ಯಾವ ಭಾಗವೂ ಆಕರಿಸಿಲ್ಲವೋ ಆ ಸರಕಾರವನ್ನು ಅದಕೆಗೆ ಕೊಟ್ಟಿದೆ" * ಎಂದು ಹೇಳುತ್ತಾರೆ, ಶಾಸನದ ಆಳ್ವಿಕೆಯನ್ನೂ ನ್ಯಾಯ ಮತ್ತು ದಕ್ಷ ಆಡಳಿತವನ್ನೂ ಅದು ಸ್ಥಾಪಿಸಿದೆ, ಪಾರ್ಲಿಮೆಂಟರಿ ಸರಕಾರ ಮತ್ತು ವ್ಯಕ್ತಿ ಸ್ವಾತಂತ್ರ್ಯಗಳ ಪಾಶ್ಚಾತ್ಯ ಕಲ್ಪನೆಗಳನ್ನು ಭಾರತಕ್ಕೆ ತಂದಿದೆ, ಮತ್ತು "ಬ್ರಿಟಿಷ್ ಇಂಡಿಯಾವನ್ನು ಒಂದು ಐಕ್ಯ ರಾಜ್ಯವನ್ನಾಗಿ ಮಾರ್ಪಡಿಸಿ, ಭಾರತೀಯರಲ್ಲಿ ಒಂದು ವಿಧವಾದ ರಾಜಕೀಯ ಐಕ್ಯತೆಯ ಭಾವನೆಯನ್ನು ಹುಟ್ಟಿಸಿ," ಅದರಿಂದ ರಾಷ್ಟ್ರೀಯತಾ ಭಾವನೆಗಳ ಮೊದಲ ಅಂಕುರಗಳಿಗೆ ನೀರೆರೆದು ಬೆಳೆಯಿಸಿದೆ * ಅದು ಬ್ರಿಟಿಷರ ಪಕ್ಷ ಶಾಸನಬದ್ಧವಾದ ಆಡಳಿತ ಮತ್ತು ವ್ಯಕ್ತಿಸ್ವಾತಂತ್ರ್ಯಗಳು ಬಹಳ ವರ್ಷಗಳಿಂದ ಕಣ್ಣಿಗೆ ಕಾಣಿಸದೆ ಇದ್ದರೂ, ಆ ಮಾತಿನಲ್ಲಿ ಬಹಳ ಸತ್ಯವಿದ

ಈ ಅವಧಿಯ ಭಾರತೀಯ ಅವಲೋಕನವು ಇನ್ನಿತರ ಅನೇಕ ಕಾರಣಶಕ್ತಿಗಳನ್ನು ಅವಧರಿಸುತ್ತದೆ, ಪರಕೀಯ ಆಡಳಿತದಿಂದ ನಮಗೆ ಉಂಟಾದ ಭೌತಿಕ ಮತ್ತು ಆತ್ಮಿಕ ಹಾನಿಗಳನ್ನು ಕುರಿತು ಬೆರಳ್ತೋರಿಸುತ್ತದೆ ಕೆಲವು ವೇಳೆ, ಬ್ರಿಟಿಷರು ಕೊಂಡಾಡುವ ವಿಷಯವನ್ನೇ ಭಾರತೀಯರು ಖಂಡಿಸುತ್ತಾರೆ, ದೃಷ್ಟಿಕೋನಗಳು ಅಷ್ಟು ಭಿನ್ನವಾಗಿವೆ ಡಾಕ್ಟರ್ ಆನಂದ ಕುಮಾರಸ್ವಾಮಿಯವರು ಬರೆಯುವಂತೆ. "ಭಾರತದಲ್ಲಿನ ಬ್ರಿಟಿಷ್ ಆಳ್ವಿಕೆಯ ಅತ್ಯಂತ ಗಮನಾರ್ಹವಾದ ಮುಖಮುದ್ರೆಗಳ

* ಭಾರತೀಯ ರಾಜ್ಯಾಂಗ ಸುಧಾರಣೆ (೧೯೩೪) ಯನ್ನು ಕುರಿತ ಜಂಟಿ ಪಾರ್ಲಿಮೆಂಟರಿ ಸಮಿತಿಯ ವರದಿಯಿಂದ ಉದ್ಧೃತವಾಗಿವೆ

ಲ್ಲೊಂದೆಂದರೆ, ಭಾರತೀಯರಿಗೆ ಮಾಡಿರುವ ಅತ್ಯಂತ ಹಾನಿಕರವಾದ ಅಪಕಾರಗಳಿಗೆಲ್ಲ, ಹೊರಗೆ ಹಿತಕರವಾದ ಆಶೀರ್ವಾದ ಪ್ರಸಾದಗಳ ತೋರ್ಕೆಯಿದೆ"

ಕಳೆದ ಒಂದು ಶತಮಾನದಲ್ಲಿ ಅಥವಾ ಅದಕ್ಕಿಂತ ತುಸ ಹೆಚ್ಚಾದ ಕಾಲದಲ್ಲಿ ಭಾರತದಲ್ಲಿ ನಡೆದಿರುವ ವ್ಯತ್ಯಾಸಗಳು, ವಸ್ತುತಃ ಪೂರ್ವ ಪಶ್ಚಿಮಗಳಲ್ಲಿನ ಅನೇಕ ರಾಜ್ಯಗಳಿಗೆ ಸಾಮಾನ್ಯವಾಗಿದ್ದ ಜಗತ್ತಿನ ವ್ಯತ್ಯಾಸಗಳು ಪಾಶ್ಚಿಮಾತ್ಯ ಯೂರೋಪಿನಲ್ಲಿನ, ಅನಂತರ ಪ್ರಪಂಚದ ಮಿಕ್ಕ ಭಾಗದಲ್ಲಿನ, ಕೈಗಾರಿಕಾಭಿವೃದ್ಧಿವಾದದ ಪ್ರಗತಿಯು ರಾಷ್ಟ್ರೀಯತಾವಾದವನ್ನೂ ಪ್ರಬಲವಾದ ಐಕ್ಯ ರಾಜ್ಯಾಂಗವನ್ನೂ ಎಲ್ಲೆಲ್ಲಿಯೂ ಹಿಂದೆಯೇ ಕರೆದು ತಂದಿತು ಪಶ್ಚಿಮದ ಕಡೆಗಿದ್ದ ಭಾರತದ ಕಿಟಕಿಯನ್ನು ತೆರೆದು ಪಾಶ್ಚಾತ್ಯ ಕೈಗಾರಿಕಾಭಿವೃದ್ಧಿವಾದ ಮತ್ತು ವಿಜ್ಞಾನಗಳ ಮುಖವೊಂದನ್ನು ತಂದುಕೊಟ್ಟುದಕ್ಕಾಗಿ ಬ್ರಿಟಿಷರು ಹೆಮ್ಮೆಪಡಬಹುದು ಆದರೆ ಅಷ್ಟು ಮಾಡಿದರಲ್ಲದೆ, ಪರಿಸ್ಥಿತಿಗಳು ಅವರನ್ನು ಜಗ್ಗಿಸುವವರೆಗೆ, ಅವರು ದೇಶದ ಮುಂದಿನ ಕೈಗಾರಿಕೆಗಳ ಬೆಳವಣಿಗೆಯು ಕೊರಳನ್ನು ಮಿಸುಕಿ ಹಿಡಿದರು ಭಾರತವು ಆಗಿಗಾಗಲೇ ಎರಡು ಸಂಸ್ಕೃತಿಗಳ—ಪಾಶ್ಚಾತ್ಯ ಏಷ್ಯದ ಇಸ್ಲಾಮಿನ ಸಂಸ್ಕೃತಿ, ಮತ್ತು ಪೂರ್ವದ ಸರಕೇ ಆದ, ದೂರದ ಪೂರ್ವ ಸೀಮಾಪ್ರಾಂತಗಳವರೆಗೆ ಹರಡಿದ ಪೌರ್ವಾತ್ಯ ಸಂಸ್ಕೃತಿ— ಸಂಗಮವಾಗಿತ್ತು ಈಗ ಮೂರನೆಯದಾದ ಇನ್ನೂ ಹೆಚ್ಚು ಶಕ್ತಿಯುತವಾದೊಂದು ಪ್ರೇರಣೆಯು ಇನ್ನೂ ದೂರದ ಪಶ್ಚಿಮದಿಂದ ನುಗ್ಗಿಬಂದಿತು, ಭಾರತವು ವಿವಿಧ ಹೊಸ ಮತ್ತು ಹಳೆಯ ಕಲ್ಪನೆಗಳ ಸಂಕರ್ಷಣ ಕೇಂದ್ರವೂ ಕುರುಕ್ಷೇತ್ರವೂ ಆಯಿತು. ಈ ಮೂರನೆಯ ಪ್ರೇರಣೆಯು ವಿಜಯಿಯಾಗಿ, ತತ್ಪರಿಣಾಮವಾಗಿ ಭಾರತದ ಪ್ರಾಚೀನ ಸಮಸ್ಯೆಗಳಲ್ಲನೇಕವನ್ನು ಪರಿಹರಿಸಿಬಿಡುತ್ತಿತ್ತು, ಎಂಬುದರಲ್ಲಿ ಸಂದೇಹವಿಲ್ಲ ಆದರೆ ಅದನ್ನು ಬಳೆಯಿಸಲು ಸಹಾಯ ಮಾಡಿದ್ದ ಬ್ರಿಟಿಷರೇ ಅದರ ಮುನ್ನಡೆಯನ್ನು ತಡೆಯಲು ಪ್ರಯತ್ನಿಸಿದರು ಅವರು ನಮ್ಮ ಕೈಗಾರಿಕೆಗಳ ಬೆಳವಣಿಗೆಯನ್ನು ತಡೆಗಟ್ಟಿ, ಅದರಿಂದ ನಮ್ಮ ರಾಜಕೀಯ ಬೆಳವಣಿಗೆಯನ್ನು ಸಾವಕಾಶಮಾಡಿಸಿದರು ಅವರಿಗೆ ದೇಶದಲ್ಲಿ ದೊರೆತ ಎಲ್ಲ ವಿಧವಾದ ಹೊತ್ತುಗೆಟ್ಟ ಜಮೀನ್‌ದಾರಿ ಪದ್ಧತಿ ಮತ್ತು ಇತರ ಅವಶೇಷಗಳನ್ನು ಕಾಪಾಡಿದರು ನಾವು ವ್ಯತ್ಯಾಸ ಹೊಂದುವುದನ್ನೂ ಮತ್ತು ಸ್ವಲ್ಪಮಟ್ಟಿಗೆ, ಪ್ರಗತಿಗಾಮಿ ಶಾಸನಗಳ ಮತ್ತು ಸಂಪ್ರದಾಯಗಳನ್ನೂ, ಅವುಗಳಿದ್ದ ಮಜಲುಗಳಲ್ಲಿಯೇ ಹಪ್ಪುಗಟ್ಟಿಸಿ, ನಾವು ಆ ಶೃಂಖಲೆಗಳಿಂದ ತಪ್ಪಿಸಿಕೊಳ್ಳಲು ಇನ್ನೂ ಹೆಚ್ಚು ಕಷ್ಟವಾಗುವಂತೆ ಮಾಡಿದರು. ಭಾರತದಲ್ಲಿ ಮಧ್ಯಶ್ರೇಣಿಯವರು ಬೆಳೆದು ಬಂದುದು ಬ್ರಿಟಿಷರ ಸೌಜನ್ಯದಿಂದಾಗಲಿ ಸಹಾಯದಿಂದಾಗಲಿ ಅಲ್ಲ ಆದರೆ ರೈಲ್ವೆ ಮತ್ತು ಕೈಗಾರಿಕಾಭಿವೃದ್ಧಿವಾದದ ಇತರ ಸರಕುಗಳನ್ನು ತಂದಿಟ್ಟ ಮೇಲೆ, ವ್ಯತ್ಯಾಸದ ಚಕ್ರವನ್ನು ತಡೆಯಲು ಅವರಿಂದಾಗಲಿಲ್ಲ, ಅದನ್ನು ತಾತ್ಕಾಲಿಕವಾಗಿ ತಡೆಯಲು ಮತ್ತು ನಿಧಾನವಾಗಿಸಲು ಮಾತ್ರ ಸಾಧ್ಯವಿತ್ತು ಚೆನ್ನಾಗಿ ಕಾಣುವಂತೆ ಅವರು ತಮ್ಮ ಅನುಕೂಲಕ್ಕಾಗಿ ಇದನ್ನು ಮಾಡಿಯೇ ಮಾಡಿದರು

"ಈ ಘನವಾದ ಬುನಾದಿಯ ಮೇಲೆ ಇಂಡಿಯಾ ಸರಕಾರದ ವೈಭವಯುಕ್ತ ಕಟ್ಟಡವು ನಿಂತಿದೆ ೧೮೫೮ ರಿಂದ ಈಚಿನ ಕಾಲಾವಧಿಯಲ್ಲಿ, ಚಕ್ರವರ್ತಿಗಳು ಈಸ್ಟ್ ಇಂಡಿಯಾ ಕಂಪೆನಿಯ ಎಲ್ಲ ರಾಜ್ಯಗಳ ಮೇಲಿನ ಅಧಿಕಾರವನ್ನು ಸ್ವೀಕರಿಸಿದಾಗಿನಿಂದ ಇಂದಿನವರೆಗೆ, ಭಾರತದ ಐದ್ಯಾಭ್ಯಾಸಿಕ ಮತ್ತು ಭೌತಿಕ ಪ್ರಗತಿಯು, ಆಕೆಯ ದೀರ್ಘ ಮತ್ತು ಉನ್ನತಿ ಅವನತಿಗಳಿಂದ ಕೂಡಿದ ಇತಿಹಾಸದಲ್ಲೆಲ್ಲಾ ತಾನು ಪಡೆದುಕೊಳ್ಳಲು ಸಾಧ್ಯವಾಗಿದ್ದೆಲ್ಲಕ್ಕಿಂತಲೂ ಬಹಳ ಹೆಚ್ಚಾಗಿದೆ,"* ಎಂದು ಖಂಡಿತವಾಗಿ ಹೇಳಿಕೊಳ್ಳಬಹುದು ಈ ಹೇಳಿಕೆಯು ಅದು ತೋರುವಷ್ಟು ಸ್ವತಸ್ಸಿದ್ಧವಾಗಿಲ್ಲ, ಬ್ರಿಟಿಷ್ ಆಳ್ವಿಕೆಯು ಬಂದ ಮೇಲೆ ಅಕ್ಷರಸ್ಥರ ಸಂಖ್ಯೆಯು ವಾಸ್ತವವಾಗಿ ಕಡಿಮೆಯಾಗಿಬಿಟ್ಟಿತೆಂದು ಅನೇಕ ವೇಳೆ ಹೇಳಲಾಗಿದೆ ಒಂದು ವೇಳೆ ಈ ಹೇಳಿಕೆಯು ಸಂಪೂರ್ಣ ನಿಜವಾಗಿದ್ದರೂ, ಆಧುನಿಕ ಕೈಗಾರಿಕೆಯ ಯುಗವನ್ನು ಕಳೆದುಹೋದ ಯುಗಗಳೊಂದಿಗೆ ಹೋಲಿಸಿದಂತಾಗುತ್ತದೆ ವಿಜ್ಞಾನ ಮತ್ತು ಕೈಗಾರಿಕಾಭಿವೃದ್ಧಿವಾದಗಳಿಂದ, ಪ್ರಪಂಚದಲ್ಲಿ ಬಹುತರವಾಗಿ ಪ್ರತಿಯೊಂದು ದೇಶದಲ್ಲಿಯೂ ವಿದ್ಯಾಭ್ಯಾಸಿಕ ಮತ್ತು ಭೌತಿಕ ಪ್ರಗತಿಯು ಮಹತ್ತಾಗಿ ನಡೆದಿದೆ ಈ ತೆರನಾದ ದೇಶವಾವುದಾದರೊಂದರ ಈ ವಿಧವಾದ ಪ್ರಗತಿಯು "ಅದರ ದೀರ್ಘ ಮತ್ತು ಉನ್ನತಿ ಅವನತಿಗಳಿಂದ ಕೂಡಿದ ಇತಿಹಾಸದಲ್ಲೆಲ್ಲಾ ತಾನು ಪಡೆದುಕೊಳ್ಳಲು ಸಾಧ್ಯವಾಗಿದ್ದೆಲ್ಲಕ್ಕಿಂತಲೂ ಬಹಳ ಹೆಚ್ಚಾಗಿದೆ"—ಪ್ರಾಯಃ ಭಾರತೀಯ ಇತಿಹಾಸದೊಂದಿಗೆ ಹೋಲಿಸಿದರೆ ಆ ದೇಶದ ಇತಿಹಾಸವು ಬಹಳ ದೀರ್ಘವಾಗಿರಲಾರದು—ಎಂದು ಭರವಸೆಯಿಂದ ಹೇಳಬಹುದು ಈ ಕೈಗಾರಿಕಾಭಿವೃದ್ಧಿವಾದಿ ಯುಗದಲ್ಲಿ ಈ ವಿಧವಾದ ಯಾವುದೋ ಒಂದು ವೃತ್ತಿವಿಜ್ಞಾನದ ಪ್ರಗತಿಯು, ಹೇಗಾದರೂ, ಬ್ರಿಟಿಷ್ ಪ್ರಭುತ್ವವಿಲ್ಲದಿದ್ದರೂ, ದೊರಯುತ್ತಿತ್ತೆಂದು ಹೇಳಿದರೆ, ನಾವು ಅನಾವಶ್ಯಕವಾಗಿ ಜಗಳಗಂಟಿಗಳೂ ವಕ್ರಮತಿಗಳೂ ಆಗುತ್ತೇವೆಯೆ? ಅಷ್ಟೇಕೆ, ನಮ್ಮ ಸ್ಥಿತಿಯನ್ನು ಇತರ ದೇಶಗಳ ಸ್ಥಿತಿಯೊಂದಿಗೆ ಹೋಲಿಸಿಕೊಂಡರೆ ಈ ವಿಧವಾದ ಪ್ರಗತಿಯನ್ನು ಇನ್ನೂ ಬಹಳ ಹೆಚ್ಚಾಗಿ ಪಡೆಯಬಹುದಾಗಿತ್ತೆಂದು ಊಹಿಸುವ ಕೆಚ್ಚೆದೆಯನ್ನು ಮರೆಯಬಾರದೆ? ಏಕೆಂದರೆ ಬ್ರಿಟಿಷರೇ ಆ ಪ್ರಗತಿಯನ್ನು ಮಿಸುಕುತಿದ್ದುದರಿಂದ ಅದಕ್ಕೆ ವಿರುದ್ಧವಾಗಿ ನಾವು ಹೋರಾಡಬೇಕಾಗಿತ್ತು. ರೈಲುಗಳು, ತಂತಿಗಳು, ಟೆಲಿಫೋನುಗಳು, ಅಲೆಯಂಚೆ ಮತ್ತು ತದಿತರ ವಸ್ತುಗಳು ಬ್ರಿಟಿಷ್ ಆಳ್ವಿಕೆಯ ಸೌಜನ್ಯದ ಅಥವಾ ಉಪಕಾರದ ಪ್ರಮಾಣಗಳಲ್ಲವೇ ಅಲ್ಲ ಅವು ಸ್ವಾಗತನೀಯವೂ ಮತ್ತು ಆವಶ್ಯಕವೂ ಆಗಿದ್ದವು, ಮತ್ತು ಅವುಗಳನ್ನು ಮೊದಲು ತಂದ ಕಾರ್ಯಭಾರಿಗಳು ಬ್ರಿಟಿಷರಾದುದರಿಂದ ಅವರಿಗೆ ನಾವು ಕೃತಜ್ಞರಾಗಿರಬೇಕು ಆದರೆ ಕೈಗಾರಿಕಾಭಿವೃದ್ಧಿವಾದದ ಈ ಭಟ್ಟಂಗಿಗಳೂ ಸಹ ನಮಗೆ ಬಂದುದು ಮುಖ್ಯವಾಗಿ ಆಳ್ವಿಕೆಯನ್ನು ಭದ್ರ ಮಾಡುವುದಕ್ಕಾಗಿ, ವ್ಯಾಪಾರವನ್ನು ಹೆಚ್ಚಿಸುತ್ತ,

* ಜಂಟಿ ಪಾರ್ಲಿಮೆಂಟರಿ ಸಮಿತಿಯ ವರದಿ (೧೯೩೪)

ಬೆಳೆಯನ್ನು ಒಯ್ಯುತ್ತ ಹೊಸ ಜೀವಕಳೆಯನ್ನೂ ಐಶ್ವರ್ಯವನ್ನೂ ದೇಶದ ಕೋಟಿ ಗಳಿಗೆ ನೀಡುತ್ತಿರುವ ನಾಡಿನ ರಕ್ತವು ಹರಿಯಬೇಕಾಗಿದ್ದ ರಕ್ತ ನಾಳಗಳವು ಎಲ್ಲೋ ಮುಂದ, ಬಹಳ ಕಾಲವಾದಮೇಲೆ ಈ ವಿಧವಾದ ಫಲವು ದೊರೆಯುವ ಸಂಭವವಿತ್ತು ಎಂಬುದು ನಿಜ ಆದರ ಅವು ಬೇರ ಉದ್ದೇಶಸಾಧನೆಗಾಗಿ—ಸಾಮ್ರಾಜಿಕ ಹಿಡಿತ ವನ್ನು ಬಲಪಡಿಸುವುದಕ್ಕೆ ಮತ್ತು ಬ್ರಿಟಿಷ್ ಸರಕುಗಳಿಗೆ ಸಂತೆಗಳನ್ನು ಸೂರೆಗೊಳ್ಳು ವುದಕ್ಕೆ, ಇದನ್ನು ಸಡೆಯುವುದರಲ್ಲಿ ಅವರು ಯಶಸ್ವಿಗಳಾದರು—ಸ್ಪಷ್ಟಿತವಾಗಿ ನಡೆಸ ಲ್ಪಟ್ಟವು ಕೈಗಾರಿಕೆಗಳ ಅಭಿವೃದ್ಧಿ ಮತ್ತು ಪ್ರಸಾರ, ಅತ್ಯಾಧುನಿಕವಾದ ಒಯ್ಯುವ ವಿಧಾನಗಳು, ಇವುಗಳಿಗೆ ನನ್ನ ಸಂಪೂರ್ಣ ಸಮ್ಮತಿಯಿದ ಆದರೆ ಕೆಲವು ವೇಳೆ ನಾನು ಭಾರತದ ಬಯಲುಗಳ ಮೇಲೆ ವೇಗವಾಗಿ ಹಾಯ್ದು ಹೋಗುವಾಗ, ಜೀವ ದಾತವಾದ ರೈಲು, ಭಾರತವನ್ನು ಬಂಧಿಸಿ ಸೆರಯೊಳಗಿಟ್ಟಿರುವ ಕಬ್ಬಿಣದ ಪಟ್ಟಿಗಳಂತೆ ನನಗೆ ತೋರಿದೆ.

ಭಾರತವನ್ನು ಆಳುವ ಬ್ರಿಟಿಷ್ ಕಲ್ಪನೆಯು, ರಾಜ್ಯದ ಪೊಲೀಸ್ ಕಲ್ಪನೆ ಯಾಗಿತ್ತು ಸರಕಾರದ ಜಂಬರವೆಂದರೆ, ರಾಜ್ಯವನ್ನು ರಕ್ಷಿಸುವುದು, ಉಳಿದುದನ್ನು ಇತರರಿಗೆ ಬಿಟ್ಟುಬಿಡುವುದು ಅವರ ಸಾರ್ವಜನಿಕ ಭಂಡಾರವು, ಸೈನ್ಯದ ವೆಚ್ಚ, ಪೊಲೀಸ್, ಪೌರ ಆಡಳಿತ, ಸಾಲದ ಮೇಲಿನ ಬಡ್ಡಿ, ಇವುಗಳಿಗಾಗಿ ವ್ಯಯವಾಗುತ್ತಿತ್ತು ಪ್ರಜೆಗಳ ಆರ್ಥಿಕ ಆವಶ್ಯಕತೆಗಳಿಗೆ ಹೇಳಿಕೇಳುವವರು ಇಲ್ಲದೆ, ಅವು ಬ್ರಿಟಿಷ್ ಸ್ವಾರ್ಥಗಳಿಗೆ ಬಲಿಗೊಡಲ್ಪಟ್ಟವು ಪುಟ್ಟ ಒಕ್ಕೈಯಷ್ಟನ್ನು ಬಿಟ್ಟರೆ ಜನತೆಯ ಸಾಂಸ್ಕೃತಿಕ ಮತ್ತು ಇತರ ಆವಶ್ಯಕತೆಗಳು ಸಂಪೂರ್ಣವಾಗಿ ಉಪೇಕ್ಷಿತವಾದವು ಪುಕ್ಕಟೆಯಾದ ಮತ್ತು ಸರ್ವತ್ರವಾದ ವಿದ್ಯಾಭ್ಯಾಸ, ಸಾರ್ವಜನಿಕ ಆರೋಗ್ಯದ ಉತ್ತ ಮೀಕರಣ, ಬಡವರ ಮತ್ತು ದುರ್ಬಲಮತಿಗಳ ಯೋಗಕ್ಷೇಮ, ರೋಗ, ಮುದಿತನ, ನಿರುದ್ಯೋಗ, ಇತ್ಯಾದಿಗಳ ಸಂಭವದಲ್ಲಿ ಕಷ್ಟಗಳನ್ನು ನಿವಾರಿಸಲು ಕೆಲಸಗಾರರ ವಿಮೆ, ಇವುಗಳನ್ನು ಇತರ ದೇಶಗಳಿಗೆ ನೀಡಿದ್ದ ಸಾರ್ವಜನಿಕ ಭಾಂಡಾರದ ವ್ಯತ್ಯಸ್ತ ಕಲ್ಪನೆಗಳು, ಸರಕಾರದ ನೋಟಕ್ಕೆ ಬಹಳ ಮಟ್ಟಿಗೆ ಮೀರಿದುವಾಗಿದ್ದುವು ಈ ವ್ಯಯ ಮಾಡುವ ಕಾರ್ಯಕಲಾಪಗಳಿಗೆ ಅದು ಮನಸ್ಸನ್ನು ಸಡಿಲಬಿಡುವುದು ಅಸಾಧ್ಯವಾಗಿತ್ತು ಏಕೆಂದರೆ, ದೊಡ್ಡದೊಡ್ಡ ಆದಾಯಗಳಿಗಿಂತ ಬಹಳ ಹೆಚ್ಚಾಗಿ ಸಣ್ಣ ಸಣ್ಣ ಆದಾಯ ಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತಿದ್ದು, ಅವರ ಕರವ್ಯವಸ್ಥೆಯು ಪ್ರತ್ಯಾವರ್ತನೆಯದಾ ಗಿತ್ತು ಅದರ ರಕ್ಷಣೆಯ ಮತ್ತು ಆಡಳಿತದ ಕ್ರಿಯೆಗಳಿಗಾಗಿ ಮಾಡುತ್ತಿದ್ದ ವ್ಯಯವು ಬೃಹತ್ತಾಗಿದ್ದು ಆದಾಯದ ಬಹುಭಾಗವನ್ನೆಲ್ಲ ನುಂಗಿಹಾಕಿಬಿಡುತ್ತಿತ್ತು

ದೇಶದ ಮೇಲಿನ ಅವರ ರಾಜಕೀಯ ಮತ್ತು ಆರ್ಥಿಕ ಹಿಡಿತವನ್ನು ಬಲಪಡಿ ಸುವ ಪ್ರತಿಯೊಂದನ್ನೂ ಅವರು ಬಿಡದೆ ಗಮನಿಸಿ ಬಲಪಡಿಸಿದುದು ಬ್ರಿಟಿಷ್ ಪ್ರಭು ತ್ವದ ಪ್ರಮುಖ ಮುಖ ಉಳಿದುದೆಲ್ಲವೂ ಅಪ್ರಸಂಗಿಕವಾಗಿತ್ತು ಶಕ್ತಿಯುತವಾದ

ಕೇಂದ್ರ ಸರಕಾರವೊಂದನ್ನೂ ದಕ್ಷವಾದ ಪೊಲೀಸ್ ಪಡೆಯೊಂದನ್ನೂ ಅವರು ನಿರ್ಮಿಸಿದ್ದರೆ ಆ ಕಾರ್ಯಸಿದ್ಧಿಗೆ ಅವರು ಕೀರ್ತಿಯನ್ನು ಪಡೆದುಕೊಳ್ಳಬಹುದು. ಆದರೆ ಭಾರತದ ಜನಗಳು ಅದಕ್ಕಾಗಿ ತಮ್ಮನ್ನು ತಾವು ಹೊಗಳಿಕೊಳ್ಳುವಂತಿಲ್ಲ ಐಕ್ಯತೆಯು ಒಳ್ಳೆಯದು ಆದರೆ ದಾಸ್ಯಾವಸ್ಥೆಯಲ್ಲಿ ಐಕ್ಯತೆಯು ಪ್ರತಿಷ್ಠಪಡಬೇಕಾದ ವಿಷಯವಲ್ಲ ನಿರಂಕುಶ ಸರಕಾರವೊಂದರ ಪ್ರಾಬಲ್ಯವೇ ಜನತೆಗೆ ಇನ್ನೂ ಹೆಚ್ಚಾದ ಭಾರವಾಗಿ ಪರಿಣಮಿಸಬಹುದು, ಮತ್ತು, ಅನೇಕ ವಿಧಗಳಲ್ಲಿ ಖಂಡಿತವಾಗಿಯೂ ಉಪಯುಕ್ತವಾಗಿರುವ ಪೊಲೀಸ್ ಪಡೆಯೊಂದನ್ನು, ಅದು ಯಾವ ಜನರನ್ನು ರಕ್ಷಿಸುವುದೆಂದು ಪ್ರಸಿದ್ಧವಾಗಿರುತ್ತದೋ ಅದೇ ಜನರ ಮೇಲೆ ಅದನ್ನು ತಿರುಗಿಸಲೂಬಹುದು ಮತ್ತು ಸಾಕಷ್ಟು ಸಲ ತಿರುಗಿಸಿಯೂ ಇದ್ದಾರೆ ಹಳೆಯ ಗ್ರೀಕ್ ನಾಗರಿಕತೆಯೊಂದಿಗೆ ಆಧುನಿಕ ನಾಗರಿಕತೆಯನ್ನು ಹೋಲಿಸುತ್ತ, ಬರ್ಟ್ರಾಂಡ್ ರಸಲ್ ಅವರು ಮೊನ್ನೆ ಮೊನ್ನೆ ತಾನೆ ಹೀಗೆ ಬರೆದಿದ್ದಾರ, "ನಮ್ಮ ನಾಗರಿಕತೆಯೊಂದಿಗೆ ಗ್ರೀಕ್ ನಾಗರಿಕತೆಯನ್ನು ಹೋಲಿಸಿದರ, ಅನೇಕ ಸಭ್ಯಜನರು ತಪ್ಪಿಸಿಕೊಳ್ಳಲು ಅವಕಾಶಕೊಟ್ಟ ಪೊಲೀಸರ ಅದಕ್ಷತೆಯೊಂದು ಮಾತ್ರವೇ ಆದರ ಪ್ರಮುಖ ಉತ್ಕೃಷ್ಟತೆ"

ಭಾರತದಲ್ಲಿನ ಬ್ರಿಟಿಷ್ ಪ್ರಾಭವವು ನಮಗೆ ಶಾಂತಿಯನ್ನು ನೀಡಿತು ಮೊಗಲ್ ಸಾಮ್ರಾಜ್ಯವು ಒಡೆದುಹೋದಮೇಲೆ ಅದರ ಹಿಂದೆಯೇ ಬಂದ ಜಂಜಡಗಳು ಮತ್ತು ದೌರ್ಭಾಗ್ಯ ಪ್ರಸಂಗಗಳನ್ನು ಅನುಭವಿಸಿದಮೇಲೆ, ಭಾರತಕ್ಕೆ ಶಾಂತಿಯು ಅತ್ಯವಶ್ಯಕವಾಗಿ ಬೇಕಿತ್ತು ಯಾವ ವಿಧವಾದ ಪ್ರಗತಿಗಾದರೂ ಅತ್ಯಾವಶ್ಯಕವಾಗಿರುವ ಶಾಂತಿಯು ಬಹು ಬೆಲೆಬಾಳುವ ಸರಕು ಅದು ನಮಗೆ ದೊರತಾಗ, ನಮಗೆ ಸ್ವಾಗತನೀಯವಾಗಿತ್ತು ಆದರೆ ಶಾಂತಿಯನ್ನು ಸಹ ಅತಿ ವಿಪರೀತವಾದ ಬೆಲೆಗೆ ಕೊಂಡುಕೊಳ್ಳಬಹುದು, ಸ್ಮಶಾನದ ಸಮೃದ್ಧ ಶಾಂತಿಯನ್ನು, ಪಂಜರದ ಅಥವಾ ಸೆರೆಯ ಪರಮ ಭದ್ರತೆಯನ್ನು ಪಡೆಯಬಹುದು ಅಥವಾ ಶಾಂತಿಯು, ತಮ್ಮನ್ನು ತಾವು ಉತ್ತಮಗೊಳಿಸಿಕೊಳ್ಳಲಾರದ ಜನರ ದೃಢ ನಿರಾಶೆಯಾಗಿರಬಹುದು ಪರಕೀಯ ವಿಜಯಿಯು ಹೊರಿಸುವ ಶಾಂತಿಗೆ, ನಿಜವಾದ ಶಾಂತಿಯು ಸಂತುಷ್ಟಿ ಮತ್ತು ಆಶ್ವಾಸನಗಳನ್ನು ನೀಡುವ ಗುಣಗಳಿಲ್ಲ ಯುದ್ಧವು ಭಯಂಕರವಾದ ಪ್ರಸಂಗ, ಮತ್ತು ಆದಷ್ಟು ಮಟ್ಟಿಗೆ ಅದರಿಂದ ತಪ್ಪಿಸಿಕೊಳ್ಳಬೇಕು ಆದರ ಮನಶ್ಶಾಸ್ತ್ರ ವಿಜ್ಞಾನಿ, ವಿಲಿಯಂ ಜೇಮ್ಸ್ ಅವರ ಪ್ರಕಾರ ಅದು ಉತ್ತೇಜನಕೊಡುವ ಕಲವು ಸದ್ಗುಣಗಳೆಂದರೆ ಪರಸ್ಪರ ನಂಬಿಕೆ, ಸ್ನಿಗ್ಧತೆ, ಧಾರಣಶಕ್ತಿ, ಕಲಿತನ, ಮನಸ್ಸಾಕ್ಷಿ, ಶಿಕ್ಷಣ ಕಲ್ಪನಾಶಕ್ತಿ, ಮಿತವ್ಯಯ, ದೈಹಿಕ ಆರೋಗ್ಯ ಮತ್ತು ಕಸುವು ಇದರಿಂದ ಜೇಮ್ಸರು ಯುದ್ಧದ ಭಯಾನಕ ಪ್ರಸಂಗ ಬಾಹಿರವಾದ, ಜನತೆಯೊಂದರಲ್ಲಿ ಈ ಸದ್ಗುಣಗಳನ್ನು ಉದ್ದೀಪನಗೊಳಿಸುವ, ಯುದ್ಧಕ್ಕೆ ನೈತಿಕ ಸಮಾನಾಂಶವೊಂದನ್ನು ಹುಡುಕಿದರು ಪ್ರಾಯಃ ಅವರಿಗೆ ಅಸಹಕಾರದ ಮತ್ತು ಶಾಸನ ಭಂಗದ ಪರಿಚಯವಾಗಿದ್ದಿದ್ದರೆ ಅವರ

ಹೃದಯಕ್ಕೆ ಪ್ರಿಯವಾದ, ಯುದ್ಧದ ನೈತಿಕ ಮತ್ತು ಶಾಂತ ಸಮಾನಾಂಶವನ್ನು ಕಾಣುತ್ತಿದ್ದರು

ಇತಿಹಾಸದ 'ರೆಗಳ' ನ್ನೂ ಮತ್ತು ಸಾಧ್ಯಾಸಾಧ್ಯತೆಗಳನ್ನೂ ಪರಿಗಣಿಸುವುದು ನಿರರ್ಥಕವಾದ ಕೆಲಸ ಭಾರತವು ವೈಜ್ಞಾನಿಕ ಮತ್ತು ಕೈಗಾರಿಕೆಗಳ ಪಾಶ್ಚಾತ್ಯ ರಾಜ್ಯಗಳ ಸಂಪರ್ಕವನ್ನು ಪಡೆದುದು ಬಹಳ ಲೇಸೆಂದು ನನಗೆ ಖಂಡಿತವಾಗಿ ತೋರುತ್ತದೆ ವಿಜ್ಞಾನವು ಪಶ್ಚಿಮವು ಕೊಟ್ಟ ದೊಡ್ಡ ಕೊಡುಗೆ ಭಾರತದಲ್ಲಿ ಇದರ ಅಭಾವವಿತ್ತು ಇದಿಲ್ಲದಿದ್ದರೆ ಆಕೆಯು ಖಂಡಿತವಾಗಿಯೂ ಹಾಳಾಗುತ್ತಿದ್ದಳು ನಮ್ಮ ಸಂಪರ್ಕಗಳ ರೀತಿಯು ನಿರ್ಭಾಗ್ಯವಾಗಿತ್ತು ಆದರೂ ಪ್ರಾಯಃ, ಪ್ರಬಲವಾದ ಧಕ್ಕೆಗಳ ಪರಂಪರೆಗೆ ಮಾತ್ರ ನಮ್ಮನ್ನು ನಮ್ಮ, ಮಾಂದ್ಯ ಮತ್ತು ತಾಮಸಗಳಿಂದ ಹೊಡೆದೆಬ್ಬಿಸಲು ಸಾಧ್ಯವಿತ್ತು ಈ ದೃಷ್ಟಿಕೋನದಿಂದ ಪ್ರಾಟೆಸ್ಟೆಂಟ್‌ರಾದ, ಆಂಗ್ಲೋ–ಸ್ಯಾಕ್ಸನ್ ಇಂಗ್ಲಿಷರು ತಕ್ಕವರಾಗಿದ್ದರು ಏಕೆಂದರೆ ಇತರ ಎಲ್ಲ ಪಾಶ್ಚಾತ್ಯರಿಗಿಂತಲೂ ಅವರು ನಮ್ಮಿಂದ ಭಿನ್ನರಾಗಿದ್ದು, ನಮಗೆ ಬಲತರವಾದ ಧಕ್ಕೆಗಳನ್ನು ಕೊಡಲು ಶಕ್ತರಾಗಿದ್ದರು

ಅವರು ನಮಗೆ ರಾಜಕೀಯ ಐಕ್ಯತೆಯನ್ನು ಕೊಟ್ಟರು ಅದು ಅಪೇಕ್ಷಣೀಯ ವಾಗಿತ್ತು ಆದರೆ ಈ ಐಕ್ಯತೆಯು ನಮಗೆ ದೊರಕಿದ್ದಿರಲಿ ಅಥವಾ ಇಲ್ಲದಿರಲಿ, ಭಾರತೀಯ ರಾಷ್ಟ್ರೀಯತಾವಾದವು ಬೆಳೆದುಬಂದು ಆ ಐಕ್ಯತೆಯು ಬೇಕೆಂದು ಕೇಳಿಯೇ ಕೇಳುತ್ತಿತ್ತು ಇಂದು ಅರಬರ ಪ್ರಪಂಚವು ಅನೇಕ ಬೇರೆ ಬೇರೆ ರಾಜ್ಯ ಗಳಾಗಿ–ಸ್ವತಂತ್ರ, ರಕ್ಷಿತ, ಕಾರ್ಯಭಾರಿ, ಆಡಳಿತದ ಮತ್ತು ತದಿತರ–ರಾಜ್ಯಗಳು ಒಡೆದುಹೋಗಿವೆ ಆದರೆ ಅವುಗಳಲ್ಲವುಗಳಲ್ಲಿಯೂ ಅರಬರ ಐಕ್ಯತೆಯ ಅಪೇಕ್ಷೆಯು ಹರಿಯುತ್ತಿದೆ ಪಾಶ್ಚಾತ್ಯ, ಸಾಮ್ರಾಜಿಕ ರಾಜ್ಯಗಳು ಅಡ್ಡವಾಗಿ ನಿಲ್ಲದಿದ್ದರೆ, ಅರಬರ ರಾಷ್ಟ್ರೀಯತಾವಾದವು ಈ ಐಕ್ಯತೆಯನ್ನು ಬಹುತರವಾಗಿ ಪಡೆದುಕೊಳ್ಳುತ್ತಿದ್ದಿತು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ ಆದರೆ, ಭಾರತದಲ್ಲಿ ನಂತೆಯೇ ವಿಚ್ಛೇದಕ ಪ್ರವೃತ್ತಿಗಳಿಗೆ ಉತ್ತೇಜನವನ್ನು ಕೊಡುವುದು, ರಾಷ್ಟ್ರೀಯತಾ ಪ್ರೇರಣೆಯ ಮೇಲೆ ವಿರುದ್ಧ ಕ್ರಿಯೆ ನಡೆಯಿಸಿ ದುರ್ಬಲಪಡಿಸುವ ಮತ್ತು ಆ ಸಾಮ್ರಾಜಿಕ ರಾಜ್ಯವು ಅಲ್ಲಿಯೇ ನಿಂತು ನಿಷ್ಪಕ್ಷಪಾತಿಯಾದ ಪಂಚಾಯತನ ಪಾತ್ರವನ್ನು ವಹಿಸಲು ನೆವನೀಡುವ, ಅಲ್ಪ ಸಂಖ್ಯಾತರ ಸಮಸ್ಯೆಗಳನ್ನು ಸೃಷ್ಟಿಸುವುದು, ಇದೇ ಆ ರಾಜ್ಯಗಳ ಮುಖ್ಯೋದ್ದೇಶಗಳು

ಬ್ರಿಟಿಷ್ ಸಾಮ್ರಾಜ್ಯದ ಪ್ರಗತಿಯ ಉಪ–ಉತ್ಪತ್ತಿಯೊಂದಾಗಿ, ಪ್ರಾಸಂಗಿಕ ವಾಗಿ ಭಾರತದ ರಾಜಕೀಯ ಐಕ್ಯತೆಯನ್ನು ಸಾಧಿಸಲಾಗಿತ್ತು ಅಮೇಲಾಮೇಲೆ, ಆ ಐಕ್ಯತೆಯು ರಾಷ್ಟ್ರೀಯತಾವಾದದೊಂದಿಗೆ ಬೀಗತನವನ್ನು ಬೆಳೆಯಿಸಿ, ಪರಕೀಯ

ಪ್ರಭುತ್ವಕ್ಕೆ ಅಭಿಯೋಗವನ್ನಿತ್ತಾಗ, ನಮ್ಮ ಮುಂದಿನ ಪ್ರಗತಿಗೆ ಪ್ರಬಲಕಂಟಗಳಾದ ಭೇದಭಾವ, ಕೋಮುವಾರು ಭಾವಗಳನ್ನು ಬುದ್ಧಿಪೂರ್ವಕವಾಗಿಯೇ ಅದು ಬೆಳೆಯಿಸಿದುದನ್ನು ನಾವು ಕಣ್ಣಾರೆ ಕಂಡೆವು

ಬ್ರಿಟಿಷರು ಇಲ್ಲಿಗೆ ಬಂದು ಎಷ್ಟೊಂದು ದಿನಗಳಾಗಿ ಹೋದವು, ಅವರು ಪ್ರಾಭವ ಹೊಂದಿದಂದಿನಿಂದ ಒಂದೂಮುಕ್ಕಾಲು ಶತಮಾನಗಳು ಕಳೆದು ಹೋದವು! ನಿರಂಕುಶ ಸರಕಾರಗಳಂತೆ, ಅವರು ಸರ್ವಶಕ್ತರಾಗಿದ್ದು, ಭಾರತವನ್ನು ತಮ್ಮ ಇಷ್ಟಕ್ಕೆ ಬಂದಂತೆ ರೂಪಿಸುವ ಅದ್ಭುತಾವಕಾಶವಿದ್ದಿತು ಈ ವರ್ಷಗಳಲ್ಲಿ ಜಗತ್ತು ಗುರುತಿಸಲಸಾಧ್ಯವಾಗುವಷ್ಟು ಮಟ್ಟಿಗೆ ವ್ಯತ್ಯಸ್ತವಾಗಿ ಹೋಗಿದೆ—ಇಂಗ್ಲೆಂಡ್, ಯೂರೋಪ್, ಅಮೆರಿಕ, ಜಪಾನ್ ಅಟ್ಲಾಂಟಿಕ್ ಸಾಗರಕ್ಕೆ ಅಂಚುಕಟ್ಟಿದ್ದ ಹದಿನೆಂಟನೆಯ ಶತಮಾನದ ಯಃಕಶ್ಚಿತ ಅಮೇರಿಕನ್ ವಸಾಹತಗಳು ಇಂದು ಅತ್ಯಂತ ಐಶ್ವರ್ಯಯುಕ್ತ, ಶಕ್ತಿಯುತ, ಮತ್ತು ಬಹಳ ಮಟ್ಟಿನ ವೃತ್ತಿವಿಜ್ಞಾನಪ್ರಗತಿಯನ್ನು ಹೊಂದಿರುವ ಜನಪದವಾಗಿ ಬಿಟ್ಟಿವೆ ಅಲ್ಪಕಾಲಾವಧಿಯಲ್ಲಿ ಜಪಾನು ಅತ್ಯಾಶ್ಚರ್ಯಕರ ವ್ಯತ್ಯಾಸಗಳನ್ನು ಹೊಂದಿದೆ, ಮೊನ್ನೆತಾನೆ ಎಲ್ಲಿ ಟ್ಸಾರ್‌ನ ಸರಕಾರದ ಮೃತಹಸ್ತವು ಎಲ್ಲ ಬೆಳವಣಿಗೆಯನ್ನೂ ಮರ್ದಿಸಿ ಮಿಸುಕುತ್ತಿದ್ದಿತೋ, ಆ ಯು ಎಸ್ ಎಸ್ ಆರ್. ನ ಅತಿವಿಶಾಲ ರಾಜ್ಯಾಂಗಗಳು ಇಂದು ಹೊಸಜೀವಕಳೆಯಿಂದ ಕಳಕಳಿಸುತ್ತ ನಮ್ಮೆದುರಿನಲ್ಲಿಯೇ ಹೊಸದೊಂದು ಪ್ರಪಂಚವನ್ನು ಕಟ್ಟುತ್ತಿವೆ ಭಾರತದಲ್ಲಿಯೂ ಸಹ ಬೃಹದ್ವ್ಯತ್ಯಾಸಗಳು ನಡೆದಿವೆ, ಹದಿನೆಂಟನೆಯ ಶತಮಾನದಲ್ಲಿದ್ದುದಕ್ಕೂ ಈಗಿಗೂ ಬಹಳ ವ್ಯತ್ಯಾಸವಿದೆ ರೈಲ್ವೆಗಳು, ನಾಲಾಕಾಮಗಾರಿಗಳು, ಕಾರ್ಖಾನೆಗಳು, ಶಾಲೆಗಳು ಮತ್ತು ಕಾಲೇಜುಗಳು, ಭೀಮಾಕಾರದ ಸರಕಾರಿ ಕಟ್ಟಡಗಳು, ಇತ್ಯಾದಿ, ಇತ್ಯಾದಿ

ಇಷ್ಟು ವ್ಯತ್ಯಾಸಗಳು ನಡೆದಿದ್ದರೂ, ಇವೊತ್ತು ಭಾರತವು ಹೇಗಿದೆ? ಅದರ ಅದ್ಭುತ ಶಕ್ತಿಯು ಪಂಜರದಲ್ಲಿ ಸಿಕ್ಕಿಕೊಂಡು, ಹಾಯಾಗಿ ಉಸಿರನ್ನು ಸಹ ಬಿಡಲು ಹೆದರುತ್ತ, ಅತಿದೂರದಿಂದ, ಪರಕೀಯರಿಂದ ಆಳಲ್ಪಡುತ್ತಿರುವ ಪರಾಧೀನ ರಾಜ್ಯವದು, ಆಕೆಯ ಮಕ್ಕಳು ಅನ್ಯಾದೃಶ ದಾರಿದ್ರ್ಯದಲ್ಲಿ ನರಳುತ್ತ, ಅಲ್ಪಾಯುಗಳಾಗಿಯೂ ರೋಗರುಜನಗಳನ್ನು ತಡೆದುಕೊಳ್ಳಲಾರದವರಾಗಿಯೂ ಇದ್ದಾರೆ, ಅವಿದ್ಯೆಯು ತಾನೇತಾನಾಗಿದೆ; ಆರೋಗ್ಯದ ವ್ಯವಸ್ಥೆ ಮತ್ತು ವೈದ್ಯ ಸಹಾಯಗಳೇ ಇಲ್ಲದ ವಿಶಾಲ ಕ್ಷೇತ್ರಗಳು, ಜನಜಂಗುಳಿಯಲ್ಲೂ ಮಧ್ಯ ತರಗತಿಗಳಲ್ಲೂ ಘೋರಾಕಾರದ ನಿರುದ್ಯೋಗ ಸ್ವಾತಂತ್ರ್ಯ, ಪ್ರಜಾಸತ್ತೆ, ಸಮತಾವಾದ, ಕಮ್ಯೂನಿಸಮ್ ಇವುಗಳು, ಬರಿಯ ಬಾಯಿಮಾತಿನ ಆದರ್ಶವಾದಿಗಳ, ಪರಿಸ್ಥಿತಿಗೆ ಲಕ್ಷ್ಯಕೊಡದೆ ನಿಯಮಗಳನ್ನು ಆಡಂಬರದಿಂದ ಸಂಪ್ರಯೋಗಿಸುವವರ ಅಥವಾ ಪಟಿಂಗರ ಘೋಷಗಳು, ಎಂದು ಹೇಳುತ್ತಾರೆ ಇಡೀ ಜನತೆಯ ಯೋಗಕ್ಷೇಮವು ನಿಜವಾದ ಪರೀಕ್ಷೆಯಾಗಿರಬೇಕು

ನಿಜವಾಗಿಯೂ ಇದು ಸತ್ವಯುಕ್ತವಾದ ಪರೀಕ್ಷೆ ಆ ಪರೀಕ್ಷೆಯ ಪ್ರಕಾರ ಭಾರತವು ಇಂದು ಬಹಳ ಹೀನಾವಸ್ಥೆಯಲ್ಲಿದೆ ಇತರ ದೇಶಗಳಲ್ಲಿ ನಡೆಯುತ್ತಿರುವ ನಿರುದ್ಯೋಗ ನಿವಾರಣೆ ಮತ್ತು ಕಷ್ಟದ ಉಪಶಮನಗಳನ್ನು ಮಾಡಲೆಳಸುವ ದೊಡ್ಡದೊಡ್ಡ ಹಂಚಿಕೆಗಳ ವಿಚಾರವನ್ನು ಕುರಿತು ಓದುತ್ತೇವೆ, ನಮ್ಮ ಲಕ್ಷೋಪಲಕ್ಷ ನಿರುದ್ಯೋಗಿಗಳ ಮತ್ತು ವಿಶಾಲವ್ಯಾಪ್ತವಾದ ಸ್ಥಿರವಾದ ಕಷ್ಟ, ಇವುಗಳ ಗತಿಯೇನು? ಇತರ ಕಡೆಗಳಲ್ಲಿನ ಗೃಹವಸತಿ ಕಲ್ಪನೆಯ ಹಂಚಿಕೆಗಳನ್ನು ಕುರಿತು ಸಹ ಓದುತ್ತೇವೆ ಮಣ್ಣಿನ ಗುಡಿಲುಗಳಲ್ಲಿ ವಾಸಮಾಡುತ್ತಿರುವ ಅಥವಾ ವಾಸಮಾಡಲು ಏನೂ ಇಲ್ಲದ ನಮ್ಮ ಲಕ್ಷಾಂತರ ಜನಗಳ ಮನೆಗಳು ಎಲ್ಲಿವೆ? ವಿದ್ಯಾಭ್ಯಾಸ, ಆರೋಗ್ಯವ್ಯವಸ್ಥೆ, ವೈದ್ಯಚಿಕಿತ್ಸೆ, ಸಾಂಸ್ಕೃತಿಕ ಸೌಕರ್ಯಗಳು ಮತ್ತು ಉತ್ಪತ್ತಿಗಳು ಬಹಳ ವೇಗ ಮುಂದು ಮುಂದುವರಿಯುತ್ತಿರುವಾಗ ನಾವು ಇದ್ದಲ್ಲಿಯೇ ಇದ್ದೇವೆ, ಅಥವಾ ಬಸವನ ಹುಳುವಿನ ವೇಗದಿಂದ ಕಾಲುಗಳನ್ನು ಎಳೆದುಹಾಕಿಕೊಂಡು ನಡೆಯುತ್ತೇವೆ ಇತರ ದೇಶಗಳನ್ನು ಕಂಡು ನಾವು ಕರುಬಬಾರದ? ಸಂಕ್ಷಿಪ್ತವಾದ ಹನ್ನೆರಡು ವರ್ಷಗಳ ಅವಧಿಯಲ್ಲಿ ಆಶ್ಚರ್ಯಕರ ಪ್ರಯತ್ನದಿಂದ ರಷ್ಯವು ತನ್ನ ವಿಶಾಲ ರಾಜ್ಯಾಂಗಗಳಲ್ಲಿ ಅವಿದ್ಯೆಯನ್ನು ಬಹುತರವಾಗಿ ತೊಡೆದುಹಾಕಿಬಿಟ್ಟಿದೆ, ಜನಜಂಗುಳಿಯ ಜೀವನದ ಸಂಪರ್ಕವನ್ನುಳ್ಳ ಉತ್ಕೃಷ್ಟವಾದ ಮತ್ತು ಆಧುನಿಕ ವಿದ್ಯಾಭ್ಯಾಸ ಕ್ರಮವನ್ನು ವಿಕಾಸಗೊಳಿಸಿಕೊಂಡಿದೆ ಹಿಂದುಳಿದಿದ್ದ ತುರ್ಕಿಯು ಅಟಾಟರ್ಕ್ ಮುಸ್ತಫ ಕೆಮಾಲ್‌ರ ಮುಂದಾಳುತನದಲ್ಲಿ ವಿಶಾಲವ್ಯಾಪ್ತ ವಿದ್ಯಾಭ್ಯಾಸದ ಕಡೆಗೆ ದಾಪು ಹೆಜ್ಜೆಗಳನ್ನು ಹಾಕುತ್ತ ಮುನ್ನಡೆದಿದೆ ಫ್ಯಾಸಿಸ್ಟ್ ಇಟಲಿಯು ತನ್ನ ಹೊಸ ಬಾಳಿನ ಹೊಸ್ತಿಲಲ್ಲಿ ಅವಿದ್ಯೆಯ ಮೇಲೆ ಪ್ರಬಲವಾದ ಸಂಗ್ರಾಮವನ್ನು ಹೂಡಿತು ಮೇಲ್ತರಗತಿಯ ವಿದ್ಯಾಭ್ಯಾಸ ಸಚಿವರು, "ಅವಿದ್ಯೆಯ ಮೇಲೆ ಒಟ್ಟಾಗಿ ಬೀಳಬೇಕು ನಮ್ಮ ಜನತೆಯಲ್ಲಿ ಕೊಳೆತು ನಾರುತ್ತಿರುವ ಆ ದುರ್ಮಾಂಸವನ್ನು ಕಾದ ಕಬ್ಬಿಣದಿಂದ ಸುಟ್ಟು ಬೂದಿಮಾಡಿ ತೊಡೆದುಹಾಕಬೇಕು" ಎಂದು ಹೇಳಿದರು ಕಟುವಾದ ಪದಗಳು, ಸ್ವಾಗತಮಂದಿರಕ್ಕೆ ತಕ್ಕವಲ್ಲ ಆದರೆ ಅವು ಆಲೋಚನೆಯ ಹಿಂದೆ ನಿಂತಿರುವ ಶ್ರದ್ಧೆ ಮತ್ತು ಶಕ್ತಿಗಳನ್ನು ಸೂಚಿಸುತ್ತವೆ ಇಲ್ಲಾದರೋ ನಾವು ಹೆಚ್ಚು ವಿನಯಪೂರ್ವಕವಾಗಿದ್ದು ಇನ್ನೂ ಹೆಚ್ಚು ನಯವಾದ ವಾಕ್ಯಾಂಗಗಳನ್ನು ಉಪಯೋಗಿಸುತ್ತೇವೆ ಎಚ್ಚರಿಕೆಯಿಂದ ನಡೆಯುತ್ತ ನಮ್ಮ ಶಕ್ತಿಯನ್ನು ಕಮಿಷನ್ನುಗಳಲ್ಲಿಯೂ ಸಮಿತಿಗಳಲ್ಲಿಯೂ ವ್ಯಯ ಮಾಡುತ್ತೇವೆ

ಭಾರತೀಯರು ಬಹಳ ಹೆಚ್ಚಾಗಿ ಮಾತನಾಡುತ್ತಾರೆಂದೂ ಬಹಳ ಸ್ವಲ್ಪ ಕೆಲಸ ಮಾಡುತ್ತಾರೆಂದೂ ಆರೋಪಣೆಯಿದೆ ಅದು ನ್ಯಾಯವಾದ ಆಕ್ಷೇಪಣೆಯೇ ಆದರೆ ಬಹಳ ಕಷ್ಟಪಟ್ಟು ವ್ಯುತ್ಪತ್ತಿ ಪ್ರದರ್ಶಕವಾದ ವರದಿಗಳನ್ನು—"ಮಹತ್ತಾದ ರಾಜ್ಯ ಸಾಧನಗಳು", ಇವು ಅಭ್ಯಾಸರೀತ್ಯ ಪ್ರಶಂಸಿಸಲ್ಪಟ್ಟು ಕಡತದ ಪೆಟ್ಟಿಗೆಯಲ್ಲಿ ಸೇರಿ ಹೋಗುತ್ತವೆ,— ಹೊರ ಹೊರಡಿಸುವ ಸಮಿತಿಗಳು ಮತ್ತು ಕಮಿಷನ್ನುಗಳನ್ನು ಕೊನೆ ಮೊದಲಿಲ್ಲದೆ ಸೃಷ್ಟಿಸುವ ಬ್ರಿಟಿಷ್ ಸಾಮರ್ಥ್ಯದ ಬಗ್ಗೆ ನಾವು ಆಶ್ಚರ್ಯವನ್ನು ಪ್ರಕ

ಟಿಸಕೂಡದೇಕೆ? ಹೀಗಾಗಿ, ಮುನ್ನಡೆಯುತ್ತಿರುವ ಪ್ರಗತಿಯನ್ನೆಣ್ಣಿದುತ್ತಿರುವ ಭಾವನೆಯನ್ನು ಪಡೆಯುತ್ತೇವೆ ಅದೇ ಕಾಲದಲ್ಲಿ ನಮಗೆ ಇದ್ದ ಕಡೆಯಲ್ಲೇ ಇರುವುದರ ಅನುಕೂಲ್ಯವು ಲಭಿಸುತ್ತದೆ ಗೌರವವು ಸಂತೃಪ್ತವಾಗುತ್ತದೆ ಸ್ವಾರ್ಥಗಳು ಯಾವ ಹಾನಿಯೂ ಇಲ್ಲದೆ ಸುರಕ್ಷಿತವಾಗಿರುತ್ತವೆ ಇತರ ರಾಷ್ಟ್ರಗಳು ಹೇಗೆ ಮುನ್ನಡೆಯಬೇಕೆಂದು ಪರ್ಯಾಲೋಚನೆ ಮಾಡುತ್ತವೆ, ನಾವಾದರೋ ಎಲ್ಲಿ ಬಹಳ ಬೇಗ ಮುನ್ನಡೆದು ಬಿಡುವೆವೋ ಎಂದು ತಡೆಗಳು, ಹಿಡಿತಗಳು ಮತ್ತು ರಕ್ಷಣೆಗಳನ್ನು ಕುರಿತು ಪರ್ಯಾಲೋಚಿಸುತ್ತೇವೆ

"ಸಾಮ್ರಾಜಿಕ ವೈಭವವು ಜನತೆಯ ದಾರಿದ್ರ್ಯದ ಮಾನದಂಡವಾಗಿತ್ತು," ಎಂದು ೧೯೩೪ ರ ಜಂಟಿ ಪಾರ್ಲಿಮೆಂಟರಿ ಸಮಿತಿಯು ಮೊಘಲ್ ಕಾಲದ ಬಗ್ಗೆ ಹೇಳುತ್ತದೆ ಅದು ನ್ಯಾಯವಾದ ವ್ಯಾಖ್ಯಾನವೇ ಆದರ ಇಂದು ನಾವು ಅದೇ ಮಾನದಂಡವನ್ನು ಸಂಪ್ರಯೋಗಿಸಕೂಡದೇಕೆ? ವೈಸ್‌ರಾಯ್‌ರ ವೈಭವ ಮತ್ತು ಆಡಂಬರಗಳನ್ನೊಳಗೊಂಡ ಹೊಸ ದೆಹಲಿಯು ಪಾತೇನು? ಎಲ್ಲ ವಿಧವಾದ ಪರುಟವಣೆಯಿಂದ ಕೂಡಿದ ಪ್ರಾಂತ ಗವರ್ನರ್‌ಗಳ ಪಾತ್ರೇನು? ಈ ಇದಕ್ಕೆಲ್ಲ ಹಿನ್ನೆಲೆ ಯಾವರೋ ತುಚ್ಛವಾದ ಮತ್ತು ಆಶ್ಚರ್ಯಕರವಾದ ದಾರಿದ್ರ್ಯ ಎದುರೆದುರಿಡುವುದರಿಂದ ಮನಸ್ಸಿಗೆ ನೋವಾಗುವುದು, ಮತ್ತು ಶ್ರೀಘ್ರವೇದಿಗಳು ಹೇಗೆ ಇದನ್ನು ತಡೆದುಕೊಳ್ಳಲು ಶಕ್ತರಾಗುವರು, ಎಂಬುದನ್ನು ಊಹಿಸುವುದು ಕಷ್ಟ ಈ ಎಲ್ಲ ಸಾಮ್ರಾಜಿಕ ಮುನ್ನೆಲೆಯ ವೈಭವಗಳ ಹಿಂದೆ ಇಂದು ಭಾರತವು ಬಡಕಲಾದ ಮತ್ತು ಘೋರವಾದ ನೋಟ ಬೇಕಾದಷ್ಟು ತೇವೆಯ ಕೆಲಸವೂ ತೇಲುಗೆಯ್ಮೆಯೂ ಇವೆ ಇದರ ಹಿಂದೆ ಆಧುನಿಕ ಪರಿಸ್ಥಿತಿಗಳಿಂದ ಹೆಚ್ಚುಹೆಚ್ಚಾಗಿ ಮುರಿಯಲ್ಪಡುತ್ತಿರುವ ದುಃಖಭಾಜನವಾದ ಕ್ಷುಲ್ಲಕ ಮಧ್ಯಶ್ರೇಣಿ ತರಗತಿಯಿದೆ ಇದಕ್ಕಿಂತ ಬಹಳ ಹಿಂದೆ, ಅರೆಯುತ್ತಿರುವ ಬಡತನದಲ್ಲಿ ನರಳುತ್ತಿರುವ ಕೆಲಸಗಾರರು ಆ ಮೇಲೆ ಭಾರತದ ಸಂಕೇತವಾದ "ಕೊನೆಯಿಲ್ಲದ ಕತ್ತಲಲ್ಲಿಯೇ ಹುಟ್ಟಿ ಬಾಳಬೇಕಾದ" ಬೇಸಾಯಗಾರನು.

"ಶತಮಾನಗಳ ಭಾರದಿಂದ ಕುಗ್ಗಿ ಒರಗಿಹನು
ತನ್ನ ನೇಗಿಲಮೇಲೆ ಮಣ್ಮೇಲವ ನಿರೀಕ್ಷಿಸನು,
ಯುಗಗಳಾ ಶೂನ್ಯತೆಯ ಮೋರೆಯಲಿ ಹೊತ್ತಿಹನು
ಮೇಣ್ ಬೆನ್ನಿನಲಿ ತಿರೆಯ ಹೊರೆಯನ್ನು

ಈ ಘೋರ ರೂಪಿನಿಂ ನೊಂದಯುಗ ನೋಡುತಿವೆ
ನೋವಿನಲಿ ಕುಗ್ಗಿದಾ ಭಂಗಿಯಲಿ ಕಾಲದಾ
ರುದ್ರನಾಟಕವಿಹುದು, ಈ ಘೋರ ರೂಪಿನಿಂ,

ಎರಡ–ಬಗೆ–ದ್ರೋಹಕ್ಕೆ ತುತ್ತಾದ, ಸುಲಿದ ಮೇಣ್
ಅಪವಿತ್ರವಾಗಿಸಿದ, ಸ್ವಾಮ್ಯವನು ಕಳೆಕೊಂಡ
ಮಾನವತೆ ಜಗತ್ಕರ್ತರೆದುರಿನಲಿ ದೋಸಿತಾ
ನಲ್ಲೆಂದು ಚೀರುವುದು, ಕಣಿ ಕೂಡ ಆ ದೂರು " *

ಭಾರತದ ಎಲ್ಲ ಕೇಡುಗಳ ಹೊಣೆಗಾರಿಕೆಯನ್ನು ಬ್ರಿಟಿಷರ ಮೇಲೆ ಹೊರಿಸುವುದು ವಿಪರೀತ ಆ ಉತ್ತರವಾದಿತ್ವವನ್ನು ನಾವು ಹೆಗಲ್ಗೊಳ್ಳಬೇಕು ಅದರಿಂದ ನಾವು ಹಿಂತೆಗೆಯಬಾರದು ನಮ್ಮ ದೌರ್ಬಲ್ಯಗಳಿಂದ ಅನಿವಾರ್ಯವಾಗಿ ಉಂಟಾದ ಪರಿಣಾಮಗಳಿಗಾಗಿ ಇತರರನ್ನು ದೂಷಿಸುವುದು ನಡತೆಯಲ್ಲ ಅಧಿಕಾರಯುಕ್ತ ಸರಕಾರವೊಂದು, ಅದರಲ್ಲಿಯೂ ವಿಶೇಷವಾಗಿ ಪರಕೀಯವಾದ ಸರಕಾರವೊಂದು ದಾಸ್ಯಮನೋಧರ್ಮಕ್ಕೆ ಉತ್ತೇಜನಕೊಟ್ಟು ಜನತೆಯ ಮಾನಸಿಕ ದೃಷ್ಟಿಕ್ಷೇಪವನ್ನೂ ದಿಗಂತವನ್ನೂ ಆದಷ್ಟು ಮಟ್ಟಿಗೆ ಮಿತಪಡಿಸಲು ಪ್ರಯತ್ನಿಸಲೇಬೇಕು ಯೌವನದ ಅತಿಶ್ರೇಷ್ಠ ಗುಣಗಳಲ್ಲಿ ಬಹುಭಾಗವನ್ನು ಅದು ಮುರಿದು–ಉತ್ಸಾಹ ಶೀಲತೆ, ಸಾಹಸ ಮನೋವೃತ್ತಿ, ಕಲ್ಪನಾಶಕ್ತಿ, 'ಪೌರುಷ'– ಚಾಡಿಗಾರತನ, ಕಟ್ಟುನಿಟ್ಟಾದ ಅನುವರ್ತನೆ ಮತ್ತು ಯಜಮಾನರ ಮುಂದೆ ಹಲ್ಲುಹಲ್ಲು ಕಿರಿಯುತ್ತ ಅವರನ್ನು ಪ್ರಸನ್ನರಾಗಿಸಿಕೊಳ್ಳುವ ಆಶೆ, ಇವುಗಳಿಗೆ ಉತ್ತೇಜನ ಕೊಡಬೇಕು ಈ ವಿಧವಾದ ವ್ಯವಸ್ಥೆಯು ನಿಜವಾದ ಸೇವಾಮನಃಪ್ರವೃತ್ತಿಯನ್ನಾಗಲಿ ಸಾರ್ವಜನಿಕ ಸೇವೆ ಆದರ್ಶಗಳಲ್ಲಿ ಶ್ರದ್ಧೆಯನ್ನಾಗಲಿ ಬೆಳೆಸುವುದಿಲ್ಲ ತಾವು ತಮ್ಮ ಜೀವನದಲ್ಲಿ ಚೆನ್ನಾಗಿ ಬದುಕಬೇಕೆಂಬ ಆಕಾಂಕ್ಷೆಯೊಂದನ್ನು ಮಾತ್ರ ಇಟ್ಟುಕೊಂಡಿರುವ, ಸಾರ್ವಜನಿಕ ಸೇವಾಶ್ರದ್ಧೆಯು ಸ್ವಲ್ಪವೂ ಇಲ್ಲದಿರುವ ಜನರನ್ನು ಅದು ಆಯ್ದುಕೊಳ್ಳುತ್ತದೆ ಭಾರತದಲ್ಲಿ ಬ್ರಿಟಿಷರು ತಮ್ಮ ಕಡೆಗೆ ಸೆಳೆದುಕೊಳ್ಳುವ ಜನರು ಯಾವ ವರ್ಗದವರು, ಎಂಬುದು ನಮಗೆ ಕಾಣುತ್ತದೆ! ಅವರಲ್ಲಿ ಕೆಲವರು ಬೌದ್ಧಿಕವಾಗಿ ಚುರುಕಾಗಿದ್ದು ಚೆನ್ನಾಗಿ ಕೆಲಸವನ್ನು ಮಾಡುವ ಸಾಮರ್ಥ್ಯವನ್ನು ಪಡೆದಿರುತ್ತಾರೆ ಅವರು ಸರಕಾರಿ ನೌಕರಿಗೊ ಅಥವಾ ಅರೆಸರಕಾರಿ ನೌಕರಿಗೊ ಜಾರಿಕೊಳ್ಳುತ್ತಾರ ಏಕೆಂದರೆ ಇತರ ಕಡೆಗಳಲ್ಲಿ ಅವರಿಗೆ ಅಮುಗದೊರಯುವುದಿಲ್ಲ ಅಲ್ಲಿ ಅವರ ಅಂತಸ್ತು ಇಳಿಯುತ್ತ ಬಂದು, ಅವರ ಮನಸ್ಸುಗಳು ಏಕತಾನದ ದಿನಚರಿಯ ಕೆಲಸದ ಸೆರೆಯಲ್ಲಿ ಸಿಕ್ಕಿ, ದೊಡ್ಡದೊಂದು ಯಂತ್ರದ ಕೇವಲ ಭಾಗಗಳಾಗಿಬಿಡುತ್ತಾರ ಅವರು ಆಳರಸರ ಗುಣಗಳನ್ನು ಬೆಳೆಸಿಕೊಳ್ಳುತ್ತಾರ—"ಗುಮಾಸ್ತೆಗಿರಿಯ ದಕ್ಷಪರಿಜ್ಞಾನ ಮತ್ತು ಕಛೇರಿಯನ್ನು ನಡೆಯಿಸಿಕೊಂಡು ಹೋಗುವ ರಾಜತಂತ್ರದ ಕಲೆ." ಬಹಳ ಹೆಚ್ಚೆಂದರೆ, ಅವರಲ್ಲಿ ಸಾರ್ವಜನಿಕ ಸೇವೆಯನ್ನು ಕುರಿತ ತಟಸ್ಥ ಶ್ರದ್ಧೆಯಿರುತ್ತದೆ

* ಈ ಉದ್ಧೃತಿಗಳು ಅಮೆರಿಕನ್ ಕವಿ ಇ ಮಾರ್ಖಾಂ ಅವರ ಕಾವ್ಯದಿಂದ 'ನೇಗಿಲನ್ನು ನೆಮ್ಮಿನಿಂತ ಆಳು'

ಉರಿಯುವ ಉತ್ಸಾಹವು ಇಲ್ಲ, ಅಥವಾ ಇರಲು ಸಾಧ್ಯವೂ ಇಲ್ಲ ಪರಕೀಯ ಸರಕಾರದ ಕೈಕೆಳಗಿರುವಾಗ ಇದು ಅಸಾಧ್ಯ

ಇವರನ್ನು ಬಿಟ್ಟರೆ ಸಣ್ಣ ಅಧಿಕಾರಿಗಳ ಬಹು ಸಂಖ್ಯಾತರು ಶ್ಲಾಘಿಸಲು ಅರ್ಹರಾದ ಗುಂಪಲ್ಲ ಏಕೆಂದರೆ ಅವರು ತಮಗಿಂತ ಮೇಲಿನವರ ಮುಂದೆ ಹಲ್ಲು ಹಲ್ಲು ಕಿರಿಯುವುದನ್ನೂ ಅವರಿಗಿಂತ ಕೆಳಗಿನವರ ಮೇಲೆ ಜಬರ್ ಮಾಡುವುದನ್ನೂ ಮಾತ್ರ ಕಲಿತಿದ್ದಾರೆ ತಪ್ಪು ಅವರದಲ್ಲ ಅದು, ವ್ಯವಸ್ಥೆಯು ಅವರಿಗೆ ಕೊಡುವ ಶಿಕ್ಷಣ ಮುಖಸ್ತುತಿ ಮತ್ತು ಕುಲಪಕ್ಷಪಾತಗಳು ಏಳಿಗೆಯಲ್ಲಿದ್ದರೆ, ಅವು ಅನೇಕ ವೇಳೆ ಇರುವಂತೆ, ಅವನ್ನು ಕಂಡು ಆಶ್ಚರ್ಯಪಡಬೇಕೆ ? ನೌಕರಿಯಲ್ಲಿ ಅವರಿಗೆ ಆದರ್ಶಗಳಾವುವೂ ಇಲ್ಲ ನಿರುದ್ಯೋಗದ ಮತ್ತು ತತ್ಪರಿಣಾಮವಾದ ಉಪವಾಸಗಳ ಅಲೆಯುವ ಭಯವು ಅವರನ್ನು ಬೆನ್ನಟ್ಟಿ ಬರುತ್ತವೆ ಅವರ ನೌಕರಿಗಳಿಗೆ ಅವರು ಪಟ್ಟಾಗಿ ಅಂಟಿಕೊಂಡಿದ್ದು, ಅವರ ನಂಟರು ಮತ್ತು ಗೆಳೆಯರಿಗೆ ಇತರ ಜಂಬರಗಳನ್ನು ಕೊಡಿಸಿಕೊಡುವುದೇ ಅವರ ಮುಖ್ಯವಾದ ಆಸ್ಥೆ ಎಲ್ಲಿ ಹಿನ್ನೆಲೆಯಲ್ಲಿ ಗೂಢಚಾರನೂ ಅತ್ಯಸಹ್ಯ ಜಂತುವಾದ ಚಾಡಿಗಾರನೂ ಸದ್ದಿಲ್ಲದ ಹೊಂಚುಹಾಕುತ್ತಿರುತ್ತಾರೋ ಅಲ್ಲಿ ಜನಗಳಲ್ಲಿ ಹೆಚ್ಚು ಅಪೇಕ್ಷಣೀಯವಾದ ಸದ್ಗುಣಗಳನ್ನು ಬೆಳೆಯಿಸುವುದು ಸುಲಭವಲ್ಲ

ಇತ್ತೀಚಿನ ಬೆಳವಣಿಗೆಗಳು, ಶೀಘ್ರವೇದಿಗಳೂ ಸಾರ್ವಜನಿಕ ಸೇವಾಸಕ್ತರೂ ಆದ ವ್ಯಕ್ತಿಗಳು ಸರಕಾರಿ ನೌಕರಿಗೆ ಸೇರುವುದನ್ನು ಇನ್ನೂ ಹೆಚ್ಚು ಕಷ್ಟವಾಗಿಸಿವೆ ಸರಕಾರಕ್ಕೆ ಅವರು ಬೇಕಿಲ್ಲ ಆರ್ಥಿಕ ಪರಿಸ್ಥಿತಿಯ ಒತ್ತಾಯದಿಂದಲ್ಲದಿದ್ದರೆ ಅವರು ಅದರೊಡನೆ ಅತಿ ನಿಕಟವಾಗಿ ವ್ಯವಹರಿಸಲು ಇಷ್ಟಪಡುವುದಿಲ್ಲ

ಆದರೆ, ಇಡೀ ಜಗತ್ತಿಗೇ ತಿಳಿದಿರುವಂತೆ, ಸಾಮ್ರಾಜ್ಯದ ಭಾರವನ್ನು ಹೊತ್ತಿರುವವನು ಬಿಳಿಯ ಆಳೇ ವಿನಾ ಕಂದು ಬಣ್ಣದವನಲ್ಲ ಸಾಮ್ರಾಜಿಕ ಪರಂಪರೆಯನ್ನು ನಡೆಸಿಕೊಂಡು ಹೋಗಲು ನಮ್ಮಲ್ಲಿ ವಿವಿಧ ಸಾಮ್ರಾಜಿಕ ನೌಕರಿಗಳಿವೆ ಇವುಗಳ ವಿಶೇಷ ಹಕ್ಕುಬಾಧ್ಯತೆಗಳನ್ನು ರಕ್ಷಿಸಲು ಸಾಕಷ್ಟು ರಕ್ಷಣೆಗಳಿವೆ ಇವೆಲ್ಲವೂ ಭಾರತದ ಯೋಗಕ್ಷೇಮಕ್ಕಾಗಿಯೇ ಎಂದು ನಮಗೆ ಹೇಳುತ್ತಾರೆ ಈ ನೌಕರಿಗಳ ಪುರೋಭಿವೃದ್ಧಿ ಮತ್ತು ಸ್ವತಸಿದ್ಧವಾದ ಯೋಗಕ್ಷೇಮಗಳೊಂದಿಗೆ ಭಾರತದ ಒಳ್ಳೆ ಬಲವಾಗಿ ಕಟ್ಟಿಹಾಕಲ್ಪಟ್ಟಿದೆಯೆಂಬುದು ಗಮನಾರ್ಹವಾಗಿದೆ ಇಂಡಿಯನ್ ಸಿವಿಲ್ ಸರ್ವಿಸ್ಸಿನ ಯಾವುದಾದರೊಂದು ಹಕ್ಕುಬಾಧ್ಯತೆಯಾಗಲಿ ಅಥವಾ ಪ್ರಸಾದತುಲ್ಯವಾದ ನೌಕರಿಯಾಗಲಿ ತೆಗೆದುಹಾಕಲ್ಪಟ್ಟರೆ, ಅದಕ್ಷತೆಯೂ ಲಂಚ ಹೀರುವುದೂ ಉಂಟಾಗುವುವೆಂದು ನಮಗೆ ಹೇಳುತ್ತಾರೆ ಇಂಡಿಯನ್ ಮೆಡಿಕಲ್ ಸರ್ವಿಸ್ಸಿನ ಕಾದಿಡಲ್ಪಟ್ಟ ಜಂಬರಗಳ ಸಂಖ್ಯೆಯು ಕಡಿಮೆಯಾದರೆ, ಇದು "ಭಾರತದ ಆರೋಗ್ಯಕ್ಕೆ ಅಪಾಯಕರವಾಗುವುದು" ನಿಸ್ಸಂದೇಹವಾಗಿ, ಸೈನ್ಯದಲ್ಲಿರುವ ಬ್ರಿಟಿಷ್ ಅಂಶವನ್ನು ಮುಟ್ಟಿದರೆಂದರೆ ಎಲ್ಲ ವಿಧವಾದ ಭಯಂಕರ ವಿಪತ್ತುಗಳು ನಮ್ಮೆದುರಿಗೆ ನಿಲ್ಲುವುವು

ಇದರಲ್ಲಿ ಸ್ವಲ್ಪ ಸತ್ಯವಿದೆಯೆಂದು ನಾನು ಭಾವಿಸುತ್ತೇನೆ ಶ್ರೇಷ್ಠಾಧಿಕಾರಿಗಳು ಇದ್ದಕ್ಕಿದ್ದಂತೆಯೇ ಹೊರಟುಹೋಗಿಬಿಟ್ಟು ತಮ್ಮ ಇಲಾಖೆಗಳನ್ನು ತಮ್ಮ ಕೈಕೆಳಗಿನವರ ಕೈಯಲ್ಲಿ ಬಿಟ್ಟುಬಿಟ್ಟರೆ ದಕ್ಷತೆಯಲ್ಲಿ ಸ್ವಲ್ಪ ಬೀಳಾಗುವುದು ಆದರೆ ವ್ಯವಸ್ಥೆಯನ್ನು ಹಾಗೆ ನಿರ್ಮಿಸಿರುವುದೇ ಇದಕ್ಕೆ ಕಾರಣ, ಮತ್ತು ಕೈಕೆಳಗಿನವರು ಅಷ್ಟೊಂದು ಅತ್ಯುತ್ತಮ ವ್ಯಕ್ತಿಗಳಲ್ಲ ಅಲ್ಲದೆ ಅವರಿಗೆ ಹೊಣೆಗಾರಿಕೆಯನ್ನು ಹೊರುವ ಅಭ್ಯಾಸವನ್ನು ಮಾಡಿಸಿಲ್ಲ ಭಾರತದಲ್ಲಿ ಬೇಕಾದಷ್ಟು ಒಳ್ಳೆಯ ಸಾಮಗ್ರಿಯಿದೆಯೆಂದೂ ಸ್ವಲ್ಪ ಕಾಲದಲ್ಲಿಯೇ, ಅದಕ್ಕೆ ಸರಿಯಾದ ಕಾರ್ಯಕ್ರಮ ನಡೆಸಿದರೆ ಅದನ್ನು ಉಪಯೋಗಿಸಿಕೊಳ್ಳಬಹುದೆಂದೂ, ನನಗೆ ದೃಢವಾದ ನಂಬಿಕೆಯಿದೆ ಆದರೆ, ಹಾಗೆಂದರೆ, ನಮ್ಮ ಆಡಳಿತದ ಮತ್ತು ಸಾಮಾಜಿಕ ದೃಷ್ಟಿಕ್ಷೇಪದಲ್ಲಿ ಸಂಪೂರ್ಣವಾದ ವ್ಯತ್ಯಾಸವಾಗಬೇಕು ಎಂದರೆ ಹೊಸದೊಂದು ರಾಜ್ಯರಚನೆಯಾಗಬೇಕು

ರಚನಾತ್ಮಕ ಯಂತ್ರ ಸಲಕರಣೆಗಳಲ್ಲಿ ಯಾವ ವ್ಯತ್ಯಾಸಗಳು ನಡೆದರೂ ನಮಗೆ ಕಾವಲಾಗಿದ್ದು, ನಮ್ಮನ್ನು ರಕ್ಷಿಸುವ ದೊಡ್ಡ ನೌಕರಗಳ ಬಲವಾದ ಚೌಕಟ್ಟು ಹಿಂದಿನಂತೆಯೇ ಇರುತ್ತದೆ, ಎಂದು ಹೇಳುತ್ತಾರೆ ಸರಕಾರದ ಪವಿತ್ರ ರಹಸ್ಯಗಳ ಮುಖ್ಯ ಪುರೋಹಿತರಾಗಿದ್ದು ಅವರು ಗರ್ಭಗುಡಿಯನ್ನು ಕಾದಿಟ್ಟುಕೊಂಡು ಅದರ ಪವಿತ್ರಾವರಣಕ್ಕೆ ಅಸಭ್ಯರು ನುಗ್ಗದಂತೆ ತಡೆಯುತ್ತಾರೆ ಬರುಬರುತ್ತ ನಾವು ಆ ಬಾಧ್ಯತೆಗೆ ಅರ್ಹತೆಯನ್ನು ಗಳಿಸಿಕೊಳ್ಳುತ್ತ ಬಂದಂತೆಲ್ಲ ಅವರು ತೆರೆಗಳನ್ನು ಒಂದೊಂದಾಗಿ ತೆಗೆಯುತ್ತಾ ಬರುತ್ತಾರೆ ಮುಂದೆ ಯಾವುದೊ ಒಂದು ಯುಗದಲ್ಲಿ ಪವಿತ್ರರಲ್ಲಿ ಅತಿ ಪವಿತ್ರರಾದವರು ಸಹ ನಮ್ಮ ಆಶ್ಚರ್ಯ ಮತ್ತು ಭಕ್ತಿಪೂರಿತ ನಯನಗಳೆದುರಿನಲ್ಲಿ ಯವನಿಕಾರಹಿತರಾಗಿ ನಿಲ್ಲುತ್ತಾರೆ

ಈ ಎಲ್ಲ ಸಾಮ್ರಾಜಿಕ ನೌಕರಿಗಳಲ್ಲಿಯೂ ಇಂಡಿಯನ್ ಸಿವಿಲ್ ಸರ್ವಿಸ್ಸು ಅಗ್ರಸ್ಥಾನವನ್ನು ಪಡೆದಿದೆ ಭಾರತದಲ್ಲಿನ ಸರಕಾರವನ್ನು ನಡೆಸುವ ಕೀರ್ತಿ ಅಥವಾ ಅಪಕೀರ್ತಿಯು ಬಹುಮಟ್ಟಿಗೆ ಅದಕ್ಕೇ ಸಲ್ಲತಕ್ಕದ್ದು ಈ ನೌಕರಿಯ ಅನೇಕ ಸದ್ಗುಣಗಳನ್ನು ಮೇಲಿಂದ ಮೇಲೆ ನಮಗೆ ಹೇಳುತ್ತಲೇ ಇರುತ್ತಾರೆ. ಸಾಮ್ರಾಜಿಕ ವ್ಯವಸ್ಥೆಯಲ್ಲಿ ಅದರ ಮಹತ್ವವು ಬಹಳ ಮಟ್ಟಿಗೆ ನಾಣ್ನುಡಿಯೊಂದಾಗಿಬಿಟ್ಟಿದೆ ಭಾರತದಲ್ಲಿ ಅದಕ್ಕಿರುವ ಸರ್ವತಂತ್ರ ಸ್ವತಂತ್ರಾಧಿಕಾರ, ಬಹುತರವಾಗಿ ಅದಕ್ಕೆ ಇದರಿಂದ ಬರುವ ನಿರಂಕುಶಾಧಿಕಾರ, ಮತ್ತು ಅದಕ್ಕೆ ದೊರೆಯುವ ಬೇಕಾದಷ್ಟು ಉತ್ಪ್ರೇಕ್ಷಿತ ಶ್ಲಾಘನೆ ಮತ್ತು ಕೈವಾರ, ಇವು ಯಾವ ಗುಂಪಿನ ಅಥವಾ ವ್ಯಕ್ತಿಯ ಸಮಚಿತ್ತತೆಗೂ ಸಂಪೂರ್ಣವಾಗಿ ಒಳ್ಳೆಯದಾಗಿರಲಾರದು ನಾನು ಆ ನೌಕರಿಯನ್ನು ಬಹಳವಾಗಿ ಮೆಚ್ಚುತ್ತೇನೆ ಆದರೆ ಒಟ್ಟಿನಲ್ಲಿಯೂ ವೈಯುಕ್ತಿಕವಾಗಿಯೂ ಆ ಹಳೆಯದಾದ ಆದರೂ ಸ್ವಲ್ಪ ಹೊಸದೇ ಆದ ರೋಗಕ್ಕೆ—ಅಹಂಕಾರ ಮತ್ತು ವೈಭವಗಳನ್ನು ಕುರಿತು ಭ್ರಾಂತಿಪಡುವ ಮನೋವ್ಯಾಧಿಗೆ—ಅದು ವಿಶೇಷವಾಗಿ ತುತ್ತಾಗುವ ಸಂಭವವಿದೆ ಯೆಂದು ನಾನು ಒಪ್ಪಿಕೊಳ್ಳಬೇಕಾಗಿದೆ.

ಐ. ಸಿ. ಎಸ್. ನ ಒಳ್ಳೆಯ ಗುಣಗಳನ್ನು ನಿಷೇಧಿಸುವುದು ವ್ಯರ್ಥವಾದ ಕೆಲಸ ಏಕೆಂದರೆ ಅವುಗಳನ್ನು ನಾವು ಮರೆಯದಂತೆ ಮಾಡುತ್ತಾರೆ. ಆದರ ಆ ನೌಕರಿಯನ್ನು ಕುರಿತು ಬಹಳ ಹೆಚ್ಚಾಗಿ ಒಣಬರುಡೆಯು ಬಿಡಲ್ಪಟ್ಟಿರುವುದರಿಂದ ಮತ್ತು ಬಿಡಲ್ಪಡು ತ್ತಿರುವುದರಿಂದ ಕೆಲವುವೇಳೆ ಆದನ್ನು ಕೊಂಚಮಟ್ಟಿಗೆ ಖಂಡಿಸುವುದು ಅಪೇಕ್ಷಣೀಯ ವಾದುದು, ಎಂದು ನನ್ನ ಭಾವನೆ. ಅಮೆರಿಕದ ಅರ್ಥಶಾಸ್ತ್ರ ಪ್ರವೀಣರಾದ ವೆಬ್ಲೆನ್ ರವರು ಹಕ್ಕುದಾರ ವರ್ಗಗಳನ್ನು "ಇಟ್ಟುಕೊಳ್ಳಲ್ಪಟ್ಟಿರುವ ವರ್ಗಗಳು" ಎಂದು ಕರೆದಿದ್ದಾರೆ. ಐ. ಸಿ. ಎಸ್. ಮತ್ತು ಇತರ ಸಾಮ್ರಾಜಿಕ ನೌಕರಿಗಳನ್ನು "ಇಟ್ಟು ಕೊಳ್ಳಲ್ಪಟ್ಟಿರುವ ವರ್ಗಗಳು" ಎಂದು ಕರೆದರ ಅಷ್ಟೇ ಸರಿಯಾಗಿರುತ್ತದೆ. ಅದೊಂದು ದುಂದುವೆಚ್ಚದ ಭೋಗ ಸಾಮಗ್ರಿ.

ಹಿಂದೆ ಬ್ರಿಟಿಷ್ ಪಾರ್ಲಿಮೆಂಟಿನ ಲೇಬರ್ ಸದಸ್ಯರಾಗಿದ್ದ ಮತ್ತು ಭಾರತೀಯ ಪ್ರಸಕ್ತಿಗಳಲ್ಲಿ ಬಹುಮಟ್ಟಿನ ಶ್ರದ್ಧೆವಹಿಸುವ ಮೇಜರ್ ಡಿ. ಗ್ರಹ್ಯಾಂ ಪೋಲ್ ಅವರು ಸ್ವಲ್ಪಕಾಲದ ಹಿಂದ 'ಮಾಡರ್ನ್ ರವ್ಯೂ' ಮಾಸಪತ್ರಿಕಯಲ್ಲಿ ಹೀಗೆ ಬರೆ ದರು. "ಐ. ಸಿ. ಎಸ್. ಅತ್ಯಂತ ಸಮರ್ಥವಾದ ಮತ್ತು ದಕ್ಷವಾದ ನೌಕರಿ, ಎಂಬ ಅಂಶವನ್ನು ಕುರಿತು ವಿವಾದಿಸಲು ಯಾರೂ ಪ್ರಯತ್ನಿಸಿಲ್ಲ." ತತ್ಸದೃಶವಾದ ಹೇಳಿಕೆ ಗಳು ಇಂಗ್ಲೆಂಡಿನಲ್ಲಿ ಮೇಲಿಂದ ಮೇಲೆ ಹೇಳಲ್ಪಡುತ್ತವೆ. ಅವನ್ನು ನಂಬಿಯೂ ನಂಬುತ್ತಾರೆ. ಹೀಗಿರುವುದರಿಂದ ಇದನ್ನು ಪರೀಕ್ಷಿಸುವುದು ಪ್ರಯೋಜನಕರ. ಸುಲಭ ವಾಗಿ ಖಂಡಿಸಲ್ಪಡಬಹುದಾದ, ಸ್ಪಷ್ಟವೂ ನಿಶ್ಯಸ್ಪಷ್ಟವೂ ಆದ ಈ ತೆರನಾದ ಹೇಳಿಕ ಗಳನ್ನು ಕೊಡುವುದು ಯಾವಾಗಲೂ ಅಪಾಯಕರವಾದುದು. ಈ ಅಂಶವು ವಿವಾದಿಸ ಲ್ಪಟ್ಟಿಲ್ಲವೆಂದು ಭಾವಿಸುವುದರಲ್ಲಿ ಮೇಜರ್ ಗ್ರಹ್ಯಾಂ ಪೋಲ್‌ರವರು ಸಂಪೂರ್ಣವಾಗಿ ತಪ್ಪುಮಾಡಿದ್ದಾರೆ. ಅದನ್ನು ಕುರಿತ ಆಕರಣಗಳೂ ವಿವಾದಗಳೂ ಮೇಲಿಂದ ಮೇಲೆ ನಡೆದಿವೆ. ಬಹಳ ವರ್ಷಗಳ ಹಿಂದ ಶ್ರೀ|| ಜಿ. ಕೆ. ಗೋಖಲೆಯವರೂ ಸಹ ಐ. ಸಿ. ಎಸ್. ಬಗ್ಗೆ ಅನೇಕ ಕಟುವಾದ ಮಾತುಗಳನ್ನು ಆಡಿದ್ದರು. ಸಾಮಾನ್ಯ ಭಾರತೀಯನೊಬ್ಬನು—ಕಾಂಗ್ರೆಸ್ಸಿನವನಾಗಿರಲಿ ಕಾಂಗ್ರೆಸ್ಸೇತರನವನಾಗಿರಲಿ—ಖಂಡಿತ ವಾಗಿಯೂ ಮೇಜರ್ ಗ್ರಹ್ಯಾಂ ಪೋಲ್‌ರವರೊಡನೆ ಈ ಸಮಸ್ಯೆಯನ್ನು ಕುರಿತು ವಾದಿಸಲು ಸಿದ್ಧನಾಗಿರುತ್ತಾನೆ. ಆದರೂ ಇಬ್ಬರೂ ಅಂಶತಃ ಸರಿಯಾಗಿರಬಹುದು, ಇಬ್ಬರೂ ಬೇರೆ ಬೇರೆ ಯೋಗ್ಯತಾಸಿದ್ಧಿಗಳನ್ನು ಕುರಿತು ಯೋಚಿಸುತ್ತಿರಬಹುದು. ದಕ್ಷತೆ ಮತ್ತು ಸಾಮರ್ಥ್ಯಗಳು ಯಾವುದಕ್ಕೋಸ್ಕರ? ಈ ದಕ್ಷತೆ ಮತ್ತು ಸಾಮರ್ಥ್ಯ ಗಳನ್ನು, ಭಾರತದಲ್ಲಿನ ಬ್ರಿಟಿಷ್ ಸಾಮ್ರಾಜ್ಯವನ್ನು ಬಲಪಡಿಸುವ, ಬಲಪಡಿಸಿ ದೇಶವನ್ನು ಸುಲಿಯುವುದರಲ್ಲಿ ಅದಕ್ಕೆ ಸಹಾಯವಾಗಿರುವರೆಂಬ ದೃಷ್ಟಿಕೋನ ದಿಂದ ಅಳೆದರೆ, ಐ. ಸಿ. ಎಸ್. ಕೃತಕೃತ್ಯರಾಗಿದ್ದೇವೆಂದು ಹೇಳಿಕೊಳ್ಳಬಹುದು. ಹಾಗಿಲ್ಲದೆ ಭಾರತೀಯ ಜನಜಂಗುಳಿಯ ಯೋಗಕ್ಷೇಮವು ಒರೆಗಲ್ಲಾದರೆ ಅವರು ಅದ್ಭುತವಾಗಿ ಸೋತಿದ್ದಾರೆ. ಯಾವ ಜನಜಂಗುಳಿಯಿಂದ ಒಟ್ಟಿನಲ್ಲಿ ಅವರ ವಿವಿಧ

ಆದಾಯಗಳು ದೊರೆಯುವುವೋ, ಯಾವ ಜನಜಂಗುಳಿಯ ಸೇವೆಯನ್ನು ಅವರು ಮಾಡುತ್ತಾರೆಂದು ಪ್ರಸಿದ್ಧವಾಗಿದೆಯೋ ಆ ಜಂಗುಳಿಗೂ ಅವರಿಗೂ ಆದಾಯ ಮತ್ತು ಜೀವನ ವಿಧಾನಗಳ ದೃಷ್ಟಿಯಿಂದ ಇರುವ ಅತಿ ದೊಡ್ಡ ಅಂತರವನ್ನು ನೋಡಿದರೆ ಅವರ ಸೋಲು ಇನ್ನೂ ಚೆನ್ನಾಗಿ ಕಾಣುತ್ತದೆ

ಒಟ್ಟಿನಲ್ಲಿ ಈ ನೌಕರಿಯು ಒಂದು ಪ್ರಮಾಣವನ್ನು ಮೆರೆಯುತ್ತದೆಯೆಂಬುದು ಸತ್ಯವಾದ ವಿಷಯ ಈ ಪ್ರಮಾಣವು ಆವಶ್ಯಕವಾಗಿ ಸಾಧಾರಣವಾದುದು ಆಗಾಗ್ಯೆ ಅದರಲ್ಲಿ ಅಪೂರ್ವ ವ್ಯಕ್ತಿಗಳು ಕಾಣಿಸಿಕೊಂಡಿದ್ದಾರೆ ಈ ವಿಧವಾದ ಯಾವ ನೌಕರಿಯಿಂದಾಗಲಿ ಇದಕ್ಕಿಂತ ಹೆಚ್ಚಾಗಿ ನಿರೀಕ್ಷಿಸುವುದು ಸಲ್ಲದುದಾಗಿದೆ ಒಳ್ಳೆಯ ಮತ್ತು ಕೆಟ್ಟ ಅಂಶಗಳಿಂದ ಕೂಡಿದ ಬ್ರಿಟಿಷ್ ಪಬ್ಲಿಕ್ ಸ್ಕೂಲಿನ ಮನೋಭಾವವನ್ನು ಅದು ಸಾರಭೂತವಾಗಿ ವೈಗೂಡಿಸಿಕೊಂಡಿತ್ತು (ಐ ಸಿ ಎಸ್ ನೌಕರರಲ್ಲನೇಕರು ಇಂದು ಪಬ್ಲಿಕ್ ಸ್ಕೂಲಿನವರಲ್ಲ ) ಅದು ಒಂದು ಒಳ್ಳೆಯ ಪ್ರಮಾಣವನ್ನಿಟ್ಟುಕೊಂಡಿದ್ದರೂ ಅದರ ಜಾತಿಗೆ ಒಗ್ಗದುದನ್ನೆಲ್ಲ ಕಟುವಾಗಿ ನಿಷೇಧಿಸಿತು, ವ್ಯಕ್ತಿಗಳ ವಿಶೇಷ ಸಾಮರ್ಥ್ಯಗಳು ದಿನದ ಮೊದ್ದಾದ ಏಕತಾನದ ಕೆಲಸದಲ್ಲಿಯೂ ಸ್ವಲ್ಪಮಟ್ಟಿಗೆ, ಇತರರಿಂದ ಎಲ್ಲಿ ಭಿನ್ನವಾಗಿ ತೋರಿಬಿಡುತ್ತೇವೆಯೋ ಎಂಬ ಭಯದಲ್ಲಿಯೂ ದಿಕ್ಕೆಟ್ಟು ಮಾಯವಾದುವು ಸೇವೆಯ ಅನೇಕ ವಿಧವಾದ ಕಲ್ಪನೆಗಳಿಂದ ಕೂಡಿದ್ದ ಅನೇಕ ನಿಸ್ಪೃಹರಾದ ನೌಕರರಿದ್ದರು ಆದರೆ ಅದು ಸಾಮ್ರಾಜ್ಯದ ಸೇವೆಯಾಗಿದ್ದು ಭಾರತವು ಮಲತಾಯಿ ಮಾತ್ರವಾಗಿತ್ತು ಅವರಿಗಾಗಿದ್ದ ಶಿಕ್ಷಣದ ಮತ್ತು ಅವರಿದ್ದ ಪರಿಸ್ಥಿತಿಯ ದೃಷ್ಟಿಯಿಂದ ಅವರು ಈ ವಿಧವಾಗಿ ಮಾತ್ರ ಕೆಲಸ ಮಾಡಲು ಸಾಧ್ಯವಿತ್ತು ಅವರ ಸಂಖ್ಯೆಯು ಸ್ವಲ್ಪವಾಗಿದ್ದು ಅವರು ಪರಕೀಯ ಮತ್ತು ಅನೇಕವೇಳೆ ಶತ್ರುಭಾವವನ್ನು ಮೆರೆಯುತ್ತಿದ್ದ ಜನತೆಯಿಂದ ಅಪ್ಯತರಾಗಿದ್ದುದರಿಂದ ಅವರು ಸಂಘಟಿತರಾಗಿದ್ದು ಒಂದು ಪ್ರಮಾಣವನ್ನು ಇಟ್ಟುಕೊಂಡಿದ್ದರು ಜನಾಂಗದ ಮತ್ತು ಅಧಿಕಾರದ ಪ್ರತಿಷ್ಠೆಗಳಿಗೆ ಇದು ಆವಶ್ಯಕವಾಗಿತ್ತು ಅವರಿಗೆ ನಿರಂಕುಶಾಧಿಕಾರವಿದ್ದುದರಿಂದ ಅವರು ಎಲ್ಲ ವಿಧವಾದ ವಿಮರ್ಶೆಯನ್ನೂ ಕಂಡು ಸಿಡಿಮಿಡಿಗುಟ್ಟುತ್ತ ಅದನ್ನು ಘೋರ ಪಾಪಗಳಲ್ಲೊಂದಾಗಿ ಪರಿಗಣಿಸಿದರು ಬರುಬರುತ್ತ ಅವರು ಹೆಚ್ಚು ಹೆಚ್ಚಾಗಿ ಅಸಹಿಷ್ಣುಗಳೂ ಪ್ರಬೋಧಕರೂ ಆಗಿ, ನಾಜವಾಬ್ದಾರಿ ಆಳರಸರ ಅನೇಕ ಅವಗುಣಗಳನ್ನು ಬೆಳೆಯಿಸಿಕೊಂಡರು ಅವರು ಆತ್ಮಸಂತೃಪ್ತರೂ ಆತ್ಮವರ್ಾಪ್ತರೂ ಆಗಿದ್ದರು, ಸಂಕುಚಿತವಾದ ಮತ್ತು ಅಚಲವಾದ ಮನಸ್ಕರಾಗಿದ್ದು ಅವರು ವ್ಯತ್ಯಸ್ತವಾಗುತ್ತಿದ್ದ ಪ್ರಪಂಚದಲ್ಲಿ ಸ್ಥಾವರವಾಗಿದ್ದರು ಪ್ರಗತಿಗಾಮಿ ಆವರಣಕ್ಕೆ ಅವರು ಸಂಪೂರ್ಣವಾಗಿ ಹಾಳತಗೆಟ್ಟಿದ್ದರು ಅವರಿಗಿಂತ ದಕ್ಷರಾದ ಮತ್ತು ಸನ್ನಿವೇಶಕ್ಕೆ ಪಳಗುವ ಬುದ್ಧಿಗಳು ಭಾರತೀಯ ಸಮಸ್ಯೆಯನ್ನು ಪಟ್ಟಾಗಿ ಹಿಡಿದಾಗ ಅವರು ಸಿಡಿಮಿಡಿಗುಟ್ಟಿ, ಕೆಟ್ಟ ಬೈಗಳನ್ನು ಉಪಯೋಗಿಸಿ, ಅವರನ್ನು ಅದುಮಿಟ್ಟು, ಅವರ ಹಾದಿಯಲ್ಲಿ ಸಾಧ್ಯವಾದ ಎಲ್ಲ ಎಡೆತಡೆಗಳನ್ನೂ ತಂದೊಡ್ಡಿದರು ಮಹಾ

ಯುದ್ಧಾನಂತರದ ವ್ಯತ್ಯಾಸಗಳು ಸಚೇತನ ಪರಿಸ್ಥಿತಿಗಳನ್ನು ತಂದಾಗ ಅವರು ಸಂಪೂರ್ಣವಾಗಿ ಕಂಗೆಟ್ಟು ಆ ಪರಿಸ್ಥಿತಿಗಳಿಗೆ ಪಳಗಿಕೊಳ್ಳಲು ಅಸಮರ್ಥರಾದರು ಅವರ ಮಿತವಾದ ಸಂಕುಚಿತ ವಿದ್ಯಾಭ್ಯಾಸವು, ಅವರಿಗೆ ಈ ಬಗೆಯ ತರಾತುರಿಯ ಪರಿಸ್ಥಿತಿಗಳಿಗೂ ವಿಚಿತ್ರ ಸನ್ನಿವೇಶಗಳಿಗೂ ಒಗ್ಗಿಕೊಳ್ಳುವ ಶಕ್ತಿಯನ್ನು ಕೊಟ್ಟಿರಲಿಲ್ಲ ನಾಜವಾಬ್ದಾರಿಯ ದೀರ್ಘಾವಧಿಯೊಂದರ ಪ್ರಭಾವದಿಂದ ಅವರು ತೊಂಡುಗೆಟ್ಟಿದ್ದರು ಒಟ್ಟಿನಲ್ಲಿ ಅವರಿಗೆ ವಾಸ್ತವವಾಗಿ ಸಂಪೂರ್ಣಾಧಿಕಾರವಿತ್ತು ಬ್ರಿಟಿಷ್ ಪಾರ್ಲಿಮೆಂಟಿನ ಅಂಕೆಯು ಕೇವಲ ಶಾಸ್ತ್ರೀಯವಾಗಿತ್ತು "ಅಧಿಕಾರವು ಕೆಡಿಸುತ್ತದೆ, ಮತ್ತು ಸಂಪೂರ್ಣಾಧಿಕಾರವು ಸಂಪೂರ್ಣವಾಗಿ ಕಡಿಸುತ್ತದ," ಎಂದು ಲಾರ್ಡ್ ಆಕ್ಟನ್‌ರವರು ಹೇಳುತ್ತಾರೆ

ಅವರು ಒಟ್ಟಿನಲ್ಲಿ ಅವರ ಮಿತವಾದ ಮಾರ್ಗದಲ್ಲ ದಿನದಿನದ ಕೆಲಸವನ್ನು ಪ್ರತಿಭಾಶೂನ್ಯರಾಗಿ ಸಾಕಷ್ಟು ದಕ್ಷತೆಯಿಂದ ನಡೆಸಿಕೊಂಡು ಹೋಗುತ್ತಿದ್ದ ನಂಬಿಕೆಯ ಅಧಿಕಾರಿಗಳಾಗಿದ್ದರು ಅವರ ಆತ್ಮವಿಶ್ವಾಸ, ಸಕ್ರಮಪ್ರವೃತ್ತಿ, ಮತ್ತು ಸ್ವಜಾತಿವಾತ್ಸಲ್ಯಗಳು ಅವರನ್ನು ತಕ್ಷಣದ ಜಂಜಡಗಳಿಂದ ಪಾರುಮಾಡಿದರೂ ಸಂಪೂರ್ಣವಾಗಿ ಅನಿರೀಕ್ಷಿತವಾಗಿದ್ದ ಪರಿಸ್ಥಿತಿಯೊಂದರ ಸಮ್ಮುಖದಲ್ಲಿ ಅವರು ಸಾಕಷ್ಟು ಸಮರ್ಥರಾಗದ ಇದ್ದುದಕ್ಕೆ ಅವರ ಶಿಕ್ಷಣವೇ ಕಾರಣ ಪ್ರಸಿದ್ಧವಾದ ಮೆಸಪೊಟೇಮಿಯದ ಅವ್ಯವಸ್ಥೆಯು ಬ್ರಿಟಿಷ್ ಇಂಡಿಯನ್ ಸರಕಾರದ ಅದಕ್ಷತೆಯನ್ನೂ ಮೊದ್ದುತನವನ್ನೂ ಬೆಳಕಿಗೆಳೆಯಿತು ಆದರ ತತ್ಸಪ್ರಶವಾದ ಅನೇಕ ಅವ್ಯವಸ್ಥೆಗಳು ಬೆಳಕಿಗೆ ಬರುವುದಿಲ್ಲ ಶಾಸನ ಭಂಗಕ್ಕೆ ಅದರಲ್ಲುತ್ಪನ್ನವಾದ ಪ್ರತಿಕ್ರಿಯೆಯೂ ಸಹ ಒರಟು ಒರಟಾಗಿತ್ತು ಗುಂಡನ್ನು ಹಾರಿಸುವುದರಿಂದ ಮತ್ತು ಲಾಠಿಯನ್ನು ಪ್ರಯೋಗಿಸುವುದರಿಂದ ವಿರೋಧಿಗಳು ಸ್ವಲ್ಪಕಾಲದ ಮಟ್ಟಿಗೆ ದೂರವಾಗಬಹುದು ಆದರ ಅದರಿಂದ ಯಾವ ಸಮಸ್ಯೆಯೂ ಪರಿಹಾರವಾಗುವುದಿಲ್ಲ, ಮತ್ತು ಇದು ಯಾವ ದೊಡಸ್ತಿಕೆಯ ಭಾವನೆಯನ್ನು ರಕ್ಷಿಸುವುದಕ್ಕೆದೆಯೋ ಅದೇ ದೊಡ್ಡಸ್ತಿಕೆಯ ಬುಡಕ್ಕೆ ಕೊಡಲಿಯನ್ನಿಡುತ್ತದೆ ಬೆಳೆಯುತ್ತಿದ್ದ, ಮೇಲೆ ಬೀಳುತ್ತಿದ್ದ ರಾಷ್ಟ್ರೀಯ ಚಳವಳಿಯನ್ನೆದುರಿಸಲು ಅವರು ಹಿಂಸಾತ್ಮಕ ಕಾರ್ಯಗಳನ್ನು ಕೈಗೊಂಡುದು ಆಶ್ಚರ್ಯವಲ್ಲ ಅದು ಅನಿವಾರ್ಯವಾಗಿತ್ತು ಏಕೆಂದರೆ ಸಾಮ್ರಾಜ್ಯಗಳು ಅದರ ಮೇಲೆ ನಿಂತಿವೆ, ಮತ್ತು ಅವು ವಿರೋಧವನ್ನೆದುರಿಸುವ ಬೇರೆ ಯಾವ ವಿಧಾನವನ್ನೂ ಕಲಿತಿಲ್ಲ ಆದರೆ ಉಪಯೋಗಿತವಾದ ಅತಿ ಹೆಚ್ಚಾದ ಮತ್ತು ಅನಾವಶ್ಯಕವಾದ ಹಿಂಸೆಯು, ಅವರು ಸನ್ನಿವೇಶದ ಪಟ್ಟನ್ನು ಸಂಪೂರ್ಣವಾಗಿ ಕಳೆದುಕೊಂಡುಬಿಟ್ಟಿದ್ದರೆಂಬುದನ್ನೂ ಸಾಧಾರಣ ಸಮಯಗಳಲ್ಲಿ ಅವರು ಪಡೆದಿದ್ದಂತೆ ಕಾಣುತ್ತಿದ್ದ ಆತ್ಮಸಂಯಮವನ್ನೂ ನಿರೋಧವನ್ನೂ ಈಗ ಪಡೆದಿರಲಿಲ್ಲವೆಂಬುದನ್ನೂ ತೋರಿಸಿತು ಮೇಲಿಂದ ಮೇಲೆ ನರಗಳು ಮುರಿದುಹೋಗುತ್ತಿದ್ದು ಅವರ ಸಾರ್ವಜನಿಕ ಭಾಷಣಗಳಲ್ಲಿ ಸಹ ಸನ್ನಿಯ ಸುಳಿವಿದ್ದಿತು ಕಳೆದು

ಹೋದ ದಿನಗಳ ಪ್ರಶಾಂತ ವಿಶ್ವಾಸವು ಹಾರಿಹೋಗಿತ್ತು. ಸಂದುಕಟ್ಟೊಂದು ನಿಷ್ಕರುಣೆಯ ವಿಧಾನದಿಂದ ನಮ್ಮ ಗುಟ್ಟನ್ನೆಲ್ಲ ರಟ್ಟುಮಾಡಿ ನಮ್ಮ ಅತ್ಯಂತ ಆಳದಲ್ಲಿರುವ ದೌರ್ಬಲ್ಯಗಳನ್ನು ಹೊರಗೆಡುವುತ್ತದೆ. ಶಾಸನ ಭಂಗವು ಅಂತಹದೊಂದು ಸಂದುಕಟ್ಟು ಪರೀಕ್ಷೆಯೂ ಆಗಿತ್ತು. ಅಡ್ಡ ತಡೆಯ ಇಕ್ಕಟ್ಟುಗಳಲ್ಲಿಯೂ—ಕಾಂಗ್ರೆಸ್ಸಿನ ಕಡೆಯಾಗಲಿ, ಸರಕಾರದ ಕಡೆಯಾಗಲಿ—ಅತಿ ಸ್ವಲ್ಪ ಮಂದಿ ಮಾತ್ರ ಆ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಸಂದುಕಟ್ಟೊಂದರಲ್ಲಿ ಶ್ರೇಷ್ಠ ಯೋಗ್ಯತೆಯನ್ನು ಪಡೆದಿರುವ ಸ್ತ್ರೀ ಪುರುಷರ ಸಂಖ್ಯೆಯು ಅತಿ ಕೊಂಚವೆಂದು ಗೊತ್ತಾಗುತ್ತದೆ, ಎಂದು ಮಿ॥ ಲಾಯ್ಡ್ ಜಾರ್ಜರು ಹೇಳುತ್ತಾರೆ, ಮತ್ತು "ಸಂದುಕಟ್ಟೊಂದರಲ್ಲಿ ಉಳಿದವರು ಲೆಕ್ಕಕ್ಕೆ ಬಾರರು. ತಿಳಿಯಾದ ವಾತಾವರಣದಲ್ಲಿ ಉನ್ನತ ಶಿಖರಗಳಂತೆ ಕಾಣುತ್ತಿದ್ದ ದಿಣ್ಣೆಗಳು ದೊಡ್ಡ ಪ್ರವಾಹದಲ್ಲಿ ಮುಳುಗಿ ಹೋಗುತ್ತವೆ. ನೀರಿನ ಮೇಲ್ಮಯ್ಯ ಮೇಲೆ ಅತ್ಯುನ್ನತ ಶಿಖರಗಳು ಮಾತ್ರ ಕಾಣಬರುತ್ತವೆ."

ನಡೆದ ಘಟನೆಗೆ ಐ. ಸಿ. ಎಸ್. ನವರು ಬೌದ್ಧಿಕವಾಗಿಯೂ ರಾಗಿಕವಾಗಿಯೂ ಸಿದ್ಧರಿರಲಿಲ್ಲ. ಅವರಲ್ಲನೇಕರ ಮೊದಲಿನ ಶಿಕ್ಷಣವು ಸುಸಂಸ್ಕೃತವಾದುದಾಗಿತ್ತು. ಇದು ಅವರಿಗೆ ಒಂದು ವಿಧವಾದ ಸಂಸ್ಕೃತಿಯನ್ನೂ ಮತ್ತು ಹೊನಹನ್ನೂ ಕೊಟ್ಟಿತು. ಅದು ಮಧ್ಯಯುಗದ ನಿಷ್ಕೃಷ್ಟ ಮನೋಭಾವವಾಗಿದ್ದು ವಿಕ್ಟೋರಿಯನ್ ಯುಗಕ್ಕೆ ಹಾಳತವಾಗಿತ್ತು. ಆದರೆ ಆಧುನಿಕ ಪರಿಸ್ಥಿತಿಗಳಲ್ಲಿ ಅದಕ್ಕೆ ಸ್ಥಾನವಿರಲಿಲ್ಲ. ಸ್ವಸೃಷ್ಟಿತವಾದ ಇಕ್ಕಟ್ಟಾದ ಮತ್ತೂ ಮಿತವಾದ ಪ್ರಪಂಚದಲ್ಲಿ—ಈಕಡೆ ಇಂಗ್ಲೆಂಡೂ ಅಲ್ಲದ ಆಕಡೆ ಇಂಡಿಯವೂ ಅಲ್ಲದ ಆಂಗ್ಲೋ ಇಂಡಿಯನ್ ಪ್ರಪಂಚದಲ್ಲಿ ಅವರು ಜೀವಿಸುತ್ತಿದ್ದರು. ಸಮಕಾಲಿಕ ಸಮಾಜದಲ್ಲಿ ಕೆಲಸ ಮಾಡುತ್ತಿದ್ದ ಶಕ್ತಿಗಳ ಬಗ್ಗೆ ಅವರಲ್ಲಿ ಯಾವ ಮೆಚ್ಚಿಕೆಯೂ ಇರಲಿಲ್ಲ. ತಾವು ಭಾರತೀಯ ಜನಜಂಗುಳಿಯ ಧರ್ಮದರ್ಶಿಗಳು ಮತ್ತು ಪೋಷಕರು ಎಂಬ ಸೋಜಿಗಗೊಳಿಸುವ ನಂಬುವಳಿಕೆಯನ್ನಿಟ್ಟುಕೊಂಡಿದ್ದರೂ ಅವರಿಗೆ ಅದನ್ನು ಕುರಿತು ಬಹಳ ಸ್ವಲ್ಪ ಜ್ಞಾನ ಮಾತ್ರವಿತ್ತು, ಹೊಸ ಮೇಲ್ಬೀಳುವ ಪ್ರವೃತ್ತಿಯ ಮಧ್ಯಶ್ರೇಣಿಯನ್ನು ಕುರಿತ ಜ್ಞಾನವು ಇನ್ನೂ ಕಡಿಮೆಯಾಗಿತ್ತು. ಅವರ ಸುತ್ತಲೂ ಆವರಿಸಿಕೊಂಡಿದ್ದ ಕೃಪಾರಿಗಳಿಂದಲೂ ಉದ್ಯೋಗಾನ್ವೇಷಕರಿಂದಲೂ ಭಾರತೀಯರ ಬೆಲೆಯನ್ನು ಕಟ್ಟಿ ಇತರರನ್ನು ಚಳವಳಗಾರರೆಂದೂ ಪಟಿಂಗರೆಂದೂ ಓಡಿಸಿಬಿಡುತ್ತಿದ್ದರು. ಇಡೀ ಜಗತ್ತಿನಲ್ಲೆಲ್ಲ ನಡೆದ ಮಹಾ ಯುದ್ಧಾನಂತರದ ವ್ಯತ್ಯಾಸಗಳನ್ನು ಕುರಿತ, ಅದರಲ್ಲಿಯೂ ವಿಶೇಷವಾಗಿ ಆರ್ಥಿಕ ಪ್ರಪಂಚದಲ್ಲಿ ನಡೆದ ವ್ಯತ್ಯಾಸಗಳನ್ನು ಕುರಿತ ಅವರ ಜ್ಞಾನವಂತೂ ಅತಿ ಸ್ವಲ್ಪವಾಗಿತ್ತು, ಬಹಳಮಟ್ಟಿಗೆ ತುಳಿದ ದಾರಿಯಲ್ಲಿಯೇ ನಡೆದು ನಡೆದು, ವ್ಯತ್ಯಸ್ತವಾಗುತ್ತಿದ್ದ ಪರಿಸ್ಥಿತಿಗಳಿಗೆ ತಮ್ಮನ್ನು ತಾವು ಸರಿಹೊಂದಿಸಿಕೊಳ್ಳುವುದು ಅತಿ ಕಷ್ಟವಾಗಿತ್ತು. ಆಧುನಿಕ ಪರಿಸ್ಥಿತಿಗಳಲ್ಲಿ ಅವರು ಪ್ರತಿನಿಧಿಸಿದ್ದ ವ್ಯವಸ್ಥೆಗೆ ಸ್ಥಾನಮಾನಗಳಿರಲಿಲ್ಲ.

ವೆಂಬುದನ್ನೂ ಅವರು ಹೆಚ್ಚು ಹೆಚ್ಚಾಗಿ, ಟಿ ಎಸ್ ಇಲಿಯಟ್ಟರು 'ದಿ ಹಾಲೋ ಮನ್' (ಟೊಳ್ಳಾಳ್ಗಳು) ಎಂಬುದರಲ್ಲಿ ವರ್ಣಿಸಿರುವ ಗುಂಪೊಂದಕ್ಕೆ ಸರಿಸುಮಾರಾಗಿ ಹೋಲುತ್ತ ಬರುತ್ತಿದ್ದರೆಂಬುದನ್ನೂ ಅವರು ಕಂಡುಕೊಳ್ಳಲಿಲ್ಲ

ಆದರೂ ಬ್ರಿಟಿಷ್ ಸಾಮ್ರಾಜ್ಯತತ್ವವು ನಡೆದುಕೊಂಡು ಹೋಗುವವರೆಗೆ ಈ ವ್ಯವಸ್ಥೆಯೂ ನಡೆಯುತ್ತದೆ ಸಾಮ್ರಾಜ್ಯತತ್ವವು ಇನ್ನೂ ಸಾಕಷ್ಟು ಶಕ್ತಿಯುತವಾಗಿರುವುದಲ್ಲದೆ ದಕ್ಷರೂ ಆಢ್ಯರೂ ಆದ ನಾಯಕರನ್ನು ಹೊಂದಿದೆ ಭಾರತದಲ್ಲಿನ ಬ್ರಿಟಿಷ್ ಸರಕಾರವು ಹುಳುಕು ಹಲ್ಲಿನಂತಿದ, ಆದರೆ ಹಲ್ಲು ಇನ್ನೂ ಬಲವಾಗಿ ಬೇರೂರಿದೆ ಅದು ತುಂಬಾ ನೋವನ್ನು ಕೊಡುತ್ತದೆ, ಆದರೆ ಅದನ್ನು ಸುಲಭವಾಗಿ ಕೀಳಲಾಗುವುದಿಲ್ಲ ನೋವು ಇನ್ನೂ ಇದ್ದೇತೀರುವ, ಮತ್ತು ಹಲ್ಲು ಕೀಳಲ್ಪಡುವವರೆಗೆ ಅಥವಾ ತಾನಾಗಿಯೇ ಬಿದ್ದುಹೋಗುವವರೆಗೆ ಇನ್ನೂ ಹೆಚ್ಚಾಗುವ ಸಂಭವವಿದೆ

ಪಬ್ಲಿಕ್ ಸ್ಕೂಲ್ ಮಾದರಿಯ ಜೀವಮಾನವು ಇಂಗ್ಲೆಂಡಿನಲ್ಲಿ ಕೂಡ ಆಗಿಹೋಯಿತು, ಮತ್ತು ಅದು ಇನ್ನೂ ಸಾರ್ವಜನಿಕ ಪ್ರಸಂಗಗಳಲ್ಲಿ ಪ್ರಮುಖವಾಗಿದ್ದರೂ, ಹಿಂದ ಪಡೆದಿದ್ದ ಸ್ಥಾನಮಾನವನ್ನು ಪಡೆದಿಲ್ಲ ಭಾರತದಲ್ಲಾದರೋ ಅದು ಇನ್ನೂ ಅನುಚಿತವಾಗಿದೆ, ಮತ್ತು ಮೇಲೆಬೀಳುವ ರಾಷ್ಟ್ರೀಯತಾವಾದಕ್ಕೆ ಅದು ಎಂದಿಗೂ ಹೊಂದಿಕೆಯಾಗುವುದಿಲ್ಲ ಅಥವಾ ಅದರೊಂದಿಗೆ ಸಹಕಾರದಿಂದಿರುವುದಿಲ್ಲ ಸಾಮಾಜಿಕ ವ್ಯತ್ಯಾಸಕ್ಕಾಗಿ ದುಡಿವವರೊಂದಿಗಂತೂ ಅದು ಎಂದಿಗೂ ಹಾಗಾಗುವುದೇ ಇಲ್ಲ

ಐ ಸಿ ಎಸ್ ನಲ್ಲಿ ವಾಸ್ತವವಾಗಿ ಅನೇಕ ಅತ್ಯುತ್ತಮ ಆಂಗ್ಲರೂ ಭಾರತೀಯರೂ ಇದ್ದಾರೆ, ಆದರ ಪ್ರಚಲಿತ ವ್ಯವಸ್ಥೆಯು ನಡೆದುಕೊಂಡು ಹೋಗುವವರೆಗೆ ಅವರ ಶ್ರೇಷ್ಠತೆಯು ಭಾರತೀಯ ಜನತೆಗೆ ಅನುಕೂಲವಲ್ಲದ ಉದ್ದೇಶಗಳಿಗಾಗಿ ಉಪಯೋಗಿಸಲ್ಪಡುತ್ತದ ನೌಕರಿಯಲ್ಲಿನ ಕೆಲವು ಭಾರತೀಯರು 'ರಾಜನಿಗಿಂತ ಹೆಚ್ಚಾದ ರಾಜಭಕ್ತ'ರಾಗಿಬಿಡುವಷ್ಟರಮಟ್ಟಿಗೆ ಈ ಪಬ್ಲಿಕ್ ಸ್ಕೂಲ್ ಮನೋಭಾವಕ್ಕೆ ಮಾರುಹೋಗುತ್ತಾರ ತನ್ನನ್ನು ಕುರಿತು ತಾನು ಬಹಳ ಹೆಮ್ಮೆಪಡುತ್ತಿದ್ದ ಒಬ್ಬ ಭಾರತೀಯ ಯುವಕ ಐ ಸಿ ಎಸ್ ನವನನ್ನು ಭೇಟಿಮಾಡಿದುದರ ನೆನಪು ನನಗೆ ಚೆನ್ನಾಗಿದೆ ದುರ್ದೈವವಶಾತ್ ನಾನಾದರೊ ಆತನ ವಿಚಾರದಲ್ಲಿ ಆ ಘನವಾದ ಅಭಿಪ್ರಾಯವನ್ನು ಇಟ್ಟುಕೊಂಡಿಲ್ಲ ಆತನು ತನ್ನ ನೌಕರಿಯ ಅನೇಕ ಸದ್ಗುಣಗಳ ಕಡೆಗೆ ಬೆರಳುತೋರಿ ಕೊನೆಗೆ ಉತ್ತರವನ್ನೀಯಲರಿದಾದ ಬ್ರಿಟಿಷ್ ಸಾಮ್ರಾಜ್ಯ ಪಕ್ಷದ ವಾದವೊಂದನ್ನು ಮಂಡಿಸಿ ಮುಗಿಸಿದನು—ಅದು ರೋಮನ್ ಸಾಮ್ರಾಜ್ಯಕ್ಕಿಂತಲೂ ಚೆಂಗಿಸ್ ಖಾನ್ ಮತ್ತು ತೈಮೂರರ ಸಾಮ್ರಾಜ್ಯಗಳಿಗಿಂತಲೂ ಮೇಲಾಗಿರಲಿಲ್ಲವೆ?

ಐ ಸಿ ಎಸ್ಸಿನವರ ಒಳಗಿನ ಸಂಬಾವಳಿಕೆಯೆಂದರೆ ಅವರು ತಮ್ಮ ಕೆಲಸವನ್ನು ಅತಿ ದಕ್ಷತೆಯಿಂದ ನಿರ್ವಹಿಸುವರು, ಮತ್ತು ಆದುದರಿಂದ ಅವರು ತಮ್ಮ ಬಾಧ್ಯತೆಗಳನ್ನು ಕುರಿತು ಒತ್ತಿ ಹೇಳಬಹುದು ಎಂಬುದು ಆ ಹಕ್ಕುಬಾಧ್ಯತೆಗಳಾದರೋ ಅನೇಕವಾಗಿಯೂ ವಿವಿಧವಾಗಿಯೂ ಇವೆ ಭಾರತಕ್ಕೆ ಬಡತನವೂದಗಿದ್ದರೆ ಅದು ಆಕೆಯ ಸಾಮಾಜಿಕ ಪದ್ಧತಿಗಳು, ಆಕಯ ಬನಿಯರು ಮತ್ತು ಸಾಹುಕಾರರು ಮತ್ತು ಎಲ್ಲದಕ್ಕಿಂತ ಹೆಚ್ಚಾಗಿ ಆಕೆಯ ಅದುತ ಜನಸಂಖ್ಯೆ, ಇವುಗಳಿಂದ ಅತಿ ದೊಡ್ಡ ಬನಿಯನಾಗಿರುವ ಭಾರತದಲ್ಲಿನ ಬ್ರಿಟಿಷ್ ಸರಕಾರವು ಸ್ವಸೌಕರ್ಯಕ್ಕಾಗಿ ಉಪೇಕ್ಷಿತವಾಗುತ್ತದ. ಈ ಜನಸಂಖ್ಯೆಯ ಬಗ್ಗೆ ಅವರು ಏನು ಮಾಡಹೋಗುತ್ತಾರೆ, ಎಂಬುದು ನನಗೆ ತಿಳಿಯದು ಏಕೆಂದರೆ, ಕ್ಷಾಮಗಳು, ಸಾಂಕ್ರಾಮಿಕ ಜಾಡ್ಯಗಳು ಮತ್ತು ಬಹು ಹೆಚ್ಚಾದ ಮರಣದ ಗತಿ ಇವುಗಳ ಪ್ರಬಲವಾದ ಸಹಾಯವಿದ್ದರೂ ಜನಸಂಖ್ಯೆಯು ಇನ್ನೂ ವಿಪುಲವಾಗಿದೆ ಸಂತಾನ ನಿರೋಧವು ಸೂಚಿತವಾಗಿದೆ, ಮತ್ತು ನಾನಂತೂ ಸಂತಾನ ನಿರೋಧದ ಜ್ಞಾನ ಮತ್ತು ವಿಧಾನಗಳ ಪ್ರಚಾರಕ್ಕೆ ಸಂಪೂರ್ಣವಾಗಿ ಅನುಮೋದಿಸುತ್ತೇನೆ ಆದರೆ ಈ ವಿಧಾನಗಳನ್ನು ಬಳಸುವುದೆಂದರ, ಜನಜಂಗುಳಿಗೆ ಇನ್ನೂ ಹೆಚ್ಚಿನ ಜೀವನದ ಅಂತಸ್ತು, ಸಾಮಾನ್ಯ ಶಿಕ್ಷಣದ ಒಂದು ಪ್ರಮಾಣ ಮತ್ತು ಇಡೀ ದೇಶದಲ್ಲಿ ಅಸಂಖ್ಯಾತವಾದ ಚಿಕಿತ್ಸಾಗೃಹ (ಕ್ಲಿನಿಕ್) ಗಳು, ಇವು ಆವಶ್ಯಕ ಪ್ರಸಕ್ತ ವಿದ್ಯಮಾನಗಳಲ್ಲಿ ಸಂತಾನ ನಿರೋಧ ವಿಧಾನಗಳು ಜನಜಂಗುಳಿಗೆ ತೀರ ಎಟುಕದಾಗಿವೆ. ಅವುಗಳಿಂದ ಮಧ್ಯಮ ತರಗತಿಗಳು ವೃದ್ಧಿಂಗತವಾಗುತ್ತಿಯಲ್ಲಿ, ಅವರು ಮಾಡುತ್ತಿರುವಂತೆ, ಲಾಭ ಪಡೆಯಬಹುದು, ಎಂದು ನಾನು ನಂಬುತ್ತೇನೆ

ಆದರ ಅತಿಜನಸಂಖ್ಯೆಯ ಈ ವಾದವು ಇನ್ನೂ ಹೆಚ್ಚಾಗಿ ಗಮನಿಸುವುದಕ್ಕೆ ಯೋಗ್ಯವಾದುದು ಆಹಾರದ ಅಭಾವ ಅಥವಾ ಇತರ ಅಗತ್ಯಗಳ ಅಭಾವವು ಇಂದು ಇಡೀ ಪ್ರಪಂಚದಲ್ಲಿನ ಸಮಸ್ಯೆಯಾಗಿಲ್ಲ, ತಿನ್ನುವ ಆಳುಗಳ ಅಭಾವ, ಅಥವಾ ಬೇರೆ ತೆರನಾಗಿ ಹೇಳಬೇಕಾದರ, ಅಗತ್ಯಪಡುತ್ತಿರುವವರಿಗಾಗಿ ಆಹಾರ ಕೊಂಡುಕೊಳ್ಳುವ ಅಳವಿನ ಅಭಾವವೇ ನಿಜವಾದ ಸಮಸ್ಯೆ ಬೇರೆಯಾಗಿ ಪರಿಗಣಿಸಿದರೆ ಭಾರತದಲ್ಲಿ ಕೂಡ ಆಹಾರದ ಅಭಾವವಿಲ್ಲ, ಮತ್ತು ಜನಸಂಖ್ಯೆಯು ಏರಿದ್ದರೂ, ಆಹಾರದ ಸಂಭಾರವೂ ಹೆಚ್ಚಿದೆ ಮತ್ತು ಜನಸಂಖ್ಯೆಗಿಂತ ಪರಿಮಾಣತಃ ಹೆಚ್ಚಬಹುದು ಮೇಲಾಗಿ ಬಹು ಪ್ರಚಾರವಾದ ಭಾರತದ ಜನಸಂಖ್ಯೆಯು (ಕಳೆದ ದಶಮಾನದ ವಿನಾ) ಪಾಶ್ಚಾತ್ಯ ದೇಶಗಳನೇಕವಕ್ಕಿಂತ ಬಹಳ ಕಳಮಟ್ಟದ ಗತಿಯಲ್ಲಿ ನಡೆದಿದೆ ಮುಂದ ವ್ಯತ್ಯಾಸವು ಬಹಳ ಹೆಚ್ಚಾಗುವುದೆಂಬುದು ನಿಜ, ಏಕೆಂದರೆ ಪಾಶ್ಚಾತ್ಯ ದೇಶಗಳಲ್ಲಿ ಜನಸಂಖ್ಯೆಯನ್ನು ಕಡಿಮೆ ಮಾಡಲು ಅಥವಾ ನಿಲ್ಲಿಸಲು ಕೂಡ ಅನೇಕ ಶಕ್ತಿಗಳು ಹವಣಿಸುತ್ತಿವೆ ಆದರೆ ಭಾರತದಲ್ಲಿ ಕೂಡ ಬೇಗ ಮಿತಪಡಿಸುವ ಕಾರಣಶಕ್ತಿಗಳು ಜನಸಂಖ್ಯೆಯನ್ನು ಅಂಕೆಯಲ್ಲಿಡುವ ಸಂಭವವಿದೆ

ಭಾರತವು ಸ್ವತಂತ್ರವಾಗಿ, ತಾನು ಬಯಸಿದ ರೀತಿಯಲ್ಲಿ ತನ್ನ ನವಜೀವನವನ್ನು ರಚಿಸುವ ಅವಸ್ಥಾನದಲ್ಲಿರುವಾಗ, ಈ ಉದ್ದೇಶಕ್ಕಾಗಿ ಆಕೆಗೆ ತನ್ನ ಅತ್ಯುತ್ತಮ ಕುವರ ಕುವರಿಯರು ಅಗತ್ಯವಾಗಿ ಬೇಕಾಗಿದೆ ಒಳ್ಳೆಯ ಮಾನವ ಸಾಮಗ್ರಿಯು ಯಾವಾಗಲೂ ವಿರಳವಾದುದು, ಮತ್ತು ಭಾರತದಲ್ಲಂತೂ ಅದು, ಬ್ರಿಟಿಷ್ ಆಳ್ವಿಕೆಯಲ್ಲಿನ ಅವಗಗಳ ಕೊರತೆಯ ಕಾರಣದಿಂದ ಇನ್ನೂ ವಿರಳತರವಾಗಿದೆ ಸಾರ್ವಜನಿಕ ಕಾರ್ಯಕಲಾಪದ ಅನೇಕ ಶಾಖೆಗಳಲ್ಲಿ, ತತ್ರಾಪಿ ವಿಶೇಷವಾಗಿ ವೃತ್ತಿ ಶೈಕ್ಷಣಿಕ ಮತ್ತು ವೈಜ್ಞಾನಿಕ ಅರಿವು ವಿಶೇಷವಾಗಿ ಆವಶ್ಯಕವಾದ ಶಾಖಗಳಲ್ಲಿ, ನಮಗೆ ಅನೇಕ ವಿದೇಶಿ ಪ್ರವೀಣರ ಸಹಾಯವು ಬೇಕಾಗುವುದು ಹೊಸ ರಾಜ್ಯವ್ಯವಸ್ಥೆಗೆ ಆವಶ್ಯಕರಾದವರೂ ಸ್ವಾಗತನೀಯರಾದವರೂ, ಭಾರತೀಯರಾಗಲಿ ಅಥವಾ ವಿದೇಶೀಯರಾಗಲಿ ಐ ಸಿ ಎಸ್ ಅಥವಾ ಇತರ ಸಾಮ್ರಾಜಿಕ ನೌಕರಿಗಳಲ್ಲಿ ಕೆಲಸಮಾಡಿದವರಲ್ಲಿ ಅನೇಕರಿದ್ದಾರ ಆದರ ಎಂದಿನವರೆಗ ಐ ಸಿ ಎಸ್ ನ ಪ್ರವೃತ್ತಿಯು ನಮ್ಮ ಆಡಳಿತ ಮತ್ತು ನಮ್ಮ ಸಾರ್ವಜನಿಕ ನೌಕರಿಗಳಲ್ಲಿ ವ್ಯಾಪಿಸಿರುವುದೋ ಆದುವರಗೆ ಭಾರತದಲ್ಲಿ ಯಾವ ಹೊಸ ರಾಜ್ಯ ವ್ಯವಸ್ಥೆಯನ್ನೂ ರಚಿಸಲಾಗುವುದಿಲ್ಲ ಎಂದು ಖಂಡಿತವಾಗಿ ಹೇಳಬಲ್ಲೆ ಅಧಿಕಾರವಾದಪ್ರವೃತ್ತಿಯು ಸಾಮ್ರಾಜ್ಯತತ್ತ್ವದ ಸಂಬಂಧಿ, ಮತ್ತು ಅದು ಸ್ವಾತಂತ್ರ್ಯದೊಡನೆ ಪುದುವಾಳದು ಸ್ವಾತಂತ್ರ್ಯವನ್ನು ಮುರಿಯುವುದರಲ್ಲದು ಯಶಸ್ವಿಯಾಗುವುದು, ಇಲ್ಲವೇ ತಾನಾಗಿಯೇ ಲಯವಾಗುವುದು ಒಂದು ರಾಜ್ಯವ್ಯವಸ್ಥೆಯ ಮಾದರಿಯೊಡನೆ ಮಾತ್ರ ಅದು ಒಗ್ಗಿಕೊಂಡಿರುವ ಸಂಭವವಿದೆ ಫ್ಯಾಸಿಸ್ಟ್ ಮಾದರಿಯ ರಾಜ್ಯವದು ಹೊಸ ರಾಜ್ಯವ್ಯವಸ್ಥೆಯನ್ನು ಕುರಿತ ನಿಜವಾದ ಕಾರ್ಯಕಲಾಪಗಳನ್ನು ನಾವು ಆರಂಭಮಾಡುವ ಮುನ್ನ ಐ ಸಿ ಎಸ್ ಮತ್ತು ತತ್ಸದೃಶ ನೌಕರಿಗಳು ಸಂಪೂರ್ಣವಾಗಿ ಮಾಯವಾಗಿಬಿಡುವುದು ಅತ್ಯಾವಶ್ಯಕವೆಂದು ನನಗೆ ತೋರುತ್ತದೆ ಈ ನೌಕರಿಗಳಲ್ಲಿನ ವ್ಯಕ್ತಿಗಳು ಹೊಸ ಜಂಬರಕ್ಕೆ ಇಷ್ಟಪಡುವವರೂ ದಕ್ಷರೂ ಆಗಿದ್ದರ ಅವರಿಗೆ ಸ್ವಾಗತವಿರುತ್ತದೆ ಆದರೆ ಮಾತ್ರ ಹೊಸ ನಿಯಮಗಳನ್ನು ಪಾಲಿಸಬೇಕು ಇಂದು ಅವರಿಗೆ ಕೊಡಲ್ಪಡುತ್ತಿರುವ ಅತಿ ವಿಪರೀತವಾದ ಸಂಬಳಗಳೂ ಭತ್ಯಗಳೂ ಅವರಿಗೆ ಸಲ್ಲುವುವೆಂಬುದು ಅಸಂಭವ ನೂತನ ಭಾರತವು, ತಾವು ಸೇವೆಗೆಯ್ಯುತ್ತಿರುವ ಧ್ಯೇಯದಲ್ಲಿ ದೃಢನಂಬುಗೆಯುಳ್ಳ, ಸಿದ್ಧಿಯನ್ನು ಪಡೆದೇ ಪಡೆಯಬೇಕೆಂಬ ಕಟ್ಟಾಶೆಯುಳ್ಳ, ದೊಡ್ಡ ಸಂಬಳಗಳ ಆಶೆಗಳಿಲ್ಲದೆ ಆ ಸೇವೆಯಿಂದ ಲಭಿಸುವ ಸಂತೋಷಕ್ಕಾಗಿಯೂ ಆತ್ಮಾನಂದಕ್ಕಾಗಿಯೂ ಕೆಲಸ ಮಾಡುವ ಶ್ರದ್ಧಾಯುತರೂ ದಕ್ಷರೂ ಆದ ಕೆಲಸಗಾರರಿಂದ ಸೇವಿಸಲ್ಪಡಬೇಕು ಹಣದ ಉದ್ದೇಶವು ಕನಿಷ್ಠ ಮಿತಿಗೆ ಇಳಿಯಬೇಕು. ವಿದೇಶೀ ಸಹಾಯಕರ ಆವಶ್ಯಕತೆಯು ಸ್ವಲ್ಪ ಹೆಚ್ಚಾಗಿಯೇ ಇರುವುದು ಆದರೆ ವೃತ್ತಿವಿಜ್ಞಾನದ ಅರಿವಿಲ್ಲದ ಪೌರ ಆಡಳಿತಗಾರರು ಬೇಕಾಗಿಲ್ಲ ಎಂದು ಊಹಿಸುತ್ತೇನೆ ಭಾರತದಲ್ಲಿ ಈ ತೆರನಾದ ಜನಗಳಿಗೆ ಬಾರಡಿಯಿರುವುದಿಲ್ಲ

ಭಾರತೀಯ ಉದಾರವಾದಿಗಳೂ ತತ್ಸದೃಶ ಪಕ್ಷಗಳೂ ಇಂಡಿಯಾ ಸರಕಾರವನ್ನು ಕುರಿತ ಬ್ರಿಟಿಷ್ ಕಲ್ಪನವಿಜ್ಞಾನವನ್ನು ಹೇಗೆ ಸ್ವೀಕರಿಸಿರುವರೆಂಬುದನ್ನು ನಾನು ಹಿಂದೆಯೇ ಹೇಳಿದ್ದೇನೆ ಇದು ನೌಕರಿಗಳ ಸಂಬಂಧದಲ್ಲಿ ವಿಶೇಷ ಗಮನಾರ್ಹವಾಗಿದೆ ಏಕೆಂದರೆ ಅವರ ಬೊಬ್ಬೆಯು 'ಭಾರತೀಕರಣ'ಕ್ಕಾಗಿ, ನೌಕರಿಗಳನ್ನೂ ರಾಜ್ಯವ್ಯವಸ್ಥಾ ಶಿಲ್ಪವನ್ನೂ ಕುರಿತ ರೀತಿ ನೀತಿಗಳ ಅನುಕೂಲಾಗ್ರ ವ್ಯತ್ಯಾಸಗಳಿಗಲ್ಲ ಸಗ್ಗಲಸಾಧ್ಯವಾದ ಮುಖ್ಯ ಪ್ರಶ್ನೆಯಿದು, ಏಕೆಂದರೆ ಭಾರತೀಯ ಸ್ವಾತಂತ್ರ್ಯವು ಬ್ರಿಟಿಷ್ ಸೈನ್ಯಶ್ರೇಣಿ ಮತ್ತು ನೌಕರಿಗಳ ವೈದೇಗತದೊಂದಿಗೆ ಮಾತ್ರವಲ್ಲದೆ ಅವುಗಳನ್ನು ಪ್ರೇರಿಸಿದ ಅಧಿಕಾರಿವಾದಪ್ರವೃತ್ತಿಯು ಹೊರವಡಣೆ ಮತ್ತು ಸಂಬಳಗಳು ಮತ್ತು ಹಕ್ಕುಬಾಧ್ಯತೆಗಳ ಭೇದಾಭೇದಗಳ ನೇರ್ಪಾಟು, ಇವುಗಳೊಂದಿಗೂ ಕಟ್ಟಿಹಾಕಲ್ಪಟ್ಟಿದೆ ರಾಜ್ಯಾಂಗ ವ್ಯವಸ್ಥಾರಚನೆಯು ಈ ದಿನಗಳಲ್ಲಿ ವಿಶೇಷ ರಕ್ಷಣೆಗಳನ್ನು ಕುರಿತ ಮಾತು ಅತಿಯಾಗಿದೆ ಈ ವಿಶೇಷ ರಕ್ಷಣೆಗಳು ಭಾರತದ ಯೋಗಕ್ಷೇಮದ ಸಲುವಾಗಿದ್ದರೆ, ಇತರ ವಿಷಯಗಳ ಮಧ್ಯೇ, ಐ ಸಿ ಎಸ್ ಮತ್ತು ತತ್ಸದೃಶ ನೌಕರಿಗಳು, ಇಂದಿನ ಅವುಗಳ ರೂಪದಲ್ಲಿಯೂ ಅವು ಪಡೆದಿರುವ ಅಧಿಕಾರ ಮತ್ತು ಹಕ್ಕುಬಾಧ್ಯತೆಗಳೊಡನೆಯೂ ಅಸ್ತಿತ್ವವನ್ನು ಕಳೆದುಕೊಳ್ಳಬೇಕೆಂದೂ ಅವಕ್ಕೂ ಹೊಸ ರಾಜ್ಯಾಂಗರಚನೆಗೂ ಯಾವ ಸಂಬಂಧವೂ ಇಲ್ಲವೆಂದೂ ಅವರು ಶಾಸನ ಮಾಡಬೇಕು

ಇನ್ನೂ ರಹಸ್ಯವಾದ ಮತ್ತು ಅತಿ ಘೋರವಾದವೆಂದರೆ ಡಿಫೆನ್ಸ್ ನೌಕರಿಗಳೆಂದೆನಿಸಿಕೊಂಡವು ನಾವು ಅವುಗಳನ್ನು ಕುರಿತು ಟೀಕಿಸಬಾರದು ನಾವು ಅವುಗಳನ್ನು ಕುರಿತು ಏನನ್ನೂ ಹೇಳಬಾರದು, ಏಕೆಂದರೆ ಅಂಥ ವಿಷಯಗಳ ಬಗ್ಗೆ ನಮಗೆ ಏನು ತಾನೆ ಗೊತ್ತು? ಗೊಣಗುಟ್ಟದೆ ನಾವು ಕಾಸು ಕೊಡಲೇ ಬೇಕು, ಅತಿ ಹೆಚ್ಚಾಗಿ ಕೊಡಬೇಕು ಸ್ವಲ್ಪಕಾಲದ ಹಿಂದೆ, ೧೯೩೪ ರ ಸೆಪ್ಟೆಂಬರಿನಲ್ಲಿ ಭಾರತದ ಸೈನ್ಯಾಧಿಪತಿ (ಕಮ್ಯಾಂಡರ್-ಇನ್-ಛೀಫ್) ಗಳಾದ ಸರ್ ಫಿಲಿಪ್ ಚೆಟ್ವೋಡರು ಸಿಮ್ಲಾದಲ್ಲಿ ಕೌನ್ಸಿಲ್ ಆಫ್ ಸ್ಟೇಟ್‌ನಲ್ಲಿ ಭಾಷಣ ಮಾಡುತ್ತ, ಖಾರವಾದ ಸೈನಿಕ ಭಾಷೆಯಲ್ಲಿ, ನಿಮ್ಮ ಕೆಲಸವನ್ನು ನೀವು ಗಮನಿಸಿರಿ, ನನ್ನ ಕೆಲಸದಲ್ಲಿ ತಲೆ ಹಾಕಬೇಡಿ, ಎಂದು ಭಾರತೀಯ ರಾಜಕಾರಣ ಪಟುಗಳಿಗೆ ಬುದ್ಧಿವಾದ ಹೇಳಿದರು ಯಾವುದೋ ಒಂದು ಗೊತ್ತುವಳಿಯ ತಿದ್ದುಪಡಿಯನ್ನು ಸೂಚಿಸಿದ ಸದಸ್ಯರನ್ನು ಕುರಿತು ಅವರು ಹೀಗೆ ಹೇಳಿದರು "ಯಾರು ತಮ್ಮ ಸಾಮ್ರಾಜ್ಯವನ್ನು ಖಡ್ಗಪ್ರಯೋಗದಿಂದ ಸಂಪಾದಿಸಿ ಅದನ್ನು ಖಡ್ಗಬಲದಿಂದಲೇ ಆಗಿನಿಂದ ಉಳಿಸಿಕೊಂಡಿರುವರೋ ಆ ಯುದ್ಧಾನುಭವಿಗಳೂ ಯುದ್ಧಪ್ರವೀಣರೂ ಆದ ಬ್ರಿಟಿಷ್ ಜನಾಂಗವನ್ನು, ಯುದ್ಧಾನುಭವದಿಂದ ಅವರು ಪಡೆದುಕೊಂಡಿರುವ ಯುದ್ಧಜ್ಞಾನದ ಸಮ್ಮುಖದಲ್ಲಿ, ಪೀರಸ್ಥ ವಿಮರ್ಶಕರು ಹೊರಳಿಸಿಬಿಡಬಹುದು ಎಂದು ಆತನೂ ಆತನ ಸ್ನೇಹಿತರೂ ತಿಳಿದುಕೊಂಡಿರುವರೇ ?" ಅವರು ಇನ್ನೂ ಅನೇಕ ಸ್ವಾರಸ್ಯವಾದ ಟೀಕೆಗಳನ್ನು ಮಾಡಿದರು.



ಜವಹರಲಾಲರು ಸಾರ್ವಜನಿಕ ಸಭೆಯೊಂದರಲ್ಲಿ
ಭಾಷಣ ಮಾಡುತ್ತಿರುವುದು

ಆ ಕ್ಷಣದ ಆವೇಶದಲ್ಲಿ ಅವರು ಹೀಗೆ ಮಾತನಾಡಿದರೆಂದು ನಾವು ಎಲ್ಲಿ ತಿಳಿದು ಕೊಳ್ಳುವೆವೋ ಎಂದು ಅವರು ತಮ್ಮ ಭಾಷಣವನ್ನು ಎಚ್ಚರಿಕೆಯಿಂದ ಬರೆದು ಕೊಂಡಿದ್ದರೆಂದೂ ಕೈಬರೆಹದ ಪ್ರತಿಯೊಂದರಿಂದ ಅವರು ಓದಿ ಹೇಳಿದರೆಂದೂ ನಮಗೆ ತಿಳಿಸಲಾಯಿತು

ಸೈನ್ಯಾಧಿಪತಿಗಳೊಂದಿಗೆ ಸೈನಿಕ ವಿಷಯಗಳನ್ನು ಕುರಿತು ವಾದಿಸು ವುದೆಂದರೆ ಅದು ತಲೆಹರಟೆಯೇ ಆದರೂ ಪ್ರಾಯಃ ಸೀರಸ್ಟ ವಿಮರ್ಶಕನೂ ಸಹ ಕೆಲವು ತರ್ಕಣೆಗಳನ್ನು ಮಾಡಲು ಅನುಕೂಡಬಹುದು ಸಾಮ್ರಾಜ್ಯವನ್ನು ಖಡ್ಗ ಬಲದಿಂದ ಉಳಿಸಿಕೊಂಡಿರುವವರ ಮತ್ತು ಯಾರ ತಲೆಯ ಮೇಲೆ ಈ ಹೊಳೆಯುವ ಶಸ್ತ್ರವು ತೂಗಾಡುತ್ತಿದೆಯೋ ಅವರ ಯೋಗಕ್ಷೇಮಗಳು ಭಿನ್ನವಾಗಿರುವುವು ಎಂದು ಕಲ್ಪಿಸಿಕೊಳ್ಳಬಹುದು ಭಾರತೀಯ ಸೈನ್ಯವೊಂದು ಭಾರತೀಯ ಯೋಗಕ್ಷೇಮಗಳಿ ಗಾಗಿ ದುಡಿಯುವಂತಾಗಲಿ ಅಥವಾ ಸಾಮ್ರಾಜಿಕ ಯೋಗಕ್ಷೇಮಗಳಿಗಾಗಿ ದುಡಿಯು ವಂತಾಗಲಿ ಮಾಡಲು ಸಾಧ್ಯ ಈ ಎರಡೂ ಭಿನ್ನವಾಗಿರಬಹುದು, ಅಥವಾ ಪರಸ್ಪರ ವಿರೋಧಗಳಾಗಿ ಸಹ ಇರಬಹುದು ಮಹಾ ಯುದ್ಧದ ಅನುಭವಗಳಾದ ಮೇಲೆ ಮಹಾ ಸೇನಾಪತಿಗಳು ತಮ್ಮ ಕೆಲಸದಲ್ಲಿ ಇತರರು ಸ್ವಲ್ಪವೂ ತಲಹಾಕಕೂಡ ದೆಂದು ಹೇಳುವ ಹಕ್ಕಿನಮಾತಿಗೆ ಬೆಲೆಕೊಡಬಹುದೇ ಎಂದು ರಾಜಕಾರಣಪಟುವೊ ಬ್ಬನೂ ಸೀರಸ್ಟ ವಿಮರ್ಶಕನೊಬ್ಬನೂ ಸೋಜಿಗಪಡಬಹುದು ಆಗ ಅವರಿಗೆ ಬಹುತ ರವಾಗಿ ಸ್ವತಂತ್ರವಾಗಿದ್ದ ಕ್ಷೇತ್ರವಿದ್ದಿತು ಎಲ್ಲ ವಿಧವಾದ ಗಣನೆಗಳಿಂದಲೂ ಅವರು ಪ್ರತಿಯೊಂದು ಸೈನ್ಯದಲ್ಲಿಯೂ ಬಹುತರವಾಗಿ ಎಲ್ಲವನ್ನೂ ಭಯಂಕರ ಅವ್ಯವಸ್ಥೆಗೆ ಈಡುಮಾಡಿದರು--ಬ್ರಿಟಿಷ್, ಫ್ರೆಂಚ್, ಜರ್ಮನ್, ಆಸ್ಟ್ರಿಯನ್, ಇಟಾಲಿಯನ್, ರಷ್ಯನ್ ಪ್ರಸಿದ್ಧ ಬ್ರಿಟಿಷ್ ಸೈನಿಕ ಚರಿತ್ರಕಾರರೂ, ವ್ಯೂಹತಂತ್ರ ಪ್ರವೀಣರೂ ಆದ ಕ್ಯಾಪ್ಟನ್ ಲಿಡ್ಡೆಲ್ ಹಾರ್ಟ್ ಅವರು ತಮ್ಮ 'ಮಹಾಯುದ್ಧದ ಇತಿಹಾಸ'ದಲ್ಲಿ ಹೀಗೆನ್ನುತ್ತಾರೆ ಯುದ್ಧದ ಯಾವುದೋ ಒಂದು ಮಜಲಲ್ಲಿ ಬ್ರಿಟಿಷ್ ಸೈನಿಕರು ಶತ್ರುಗಳೊಂದಿಗೆ ಹೋರಾಡುತ್ತಿದ್ದಾಗ ಬ್ರಿಟಿಷ್ ಜನರಲ್ಲರೂ ಒಬ್ಬರೊಬ್ಬರ ಮೇಲೆ ಹೋರಾಡುತ್ತಿದ್ದರು ರಾಷ್ಟ್ರೀಯ ಘೋರ ವಿಪತ್ತೂ ಅವರಲ್ಲಿ ಆಲೋಚನೆಯ ಅಥವಾ ಪ್ರಯತ್ನದ ಐಕ್ಯತೆಯನ್ನು ಹುಟ್ಟಿಸುವುದಿಲ್ಲ ಮಹಾ ಯುದ್ಧವು "ಪೂಜನೀಯ ವ್ಯಕ್ತಿ ಗಳಲ್ಲಿನ ನಮ್ಮ ನಂಬಿಕೆಯನ್ನೂ ಮಹಾ ವ್ಯಕ್ತಿಗಳ ಎರಕವು ಸಾಧಾರಣ ವ್ಯಕ್ತಿಗಳ ಎರ ಕದಿಂದ ಭಿನ್ನವೆಂಬ ನಮ್ಮ ವೀರ ಪೂಜಾತ್ಮಕವಾದ ನಂಬಿಕೆಯನ್ನೂ ಪುಡಿಪುಡಿಮಾ ಡಿದೆ ಮುಂದಾಳುಗಳು ಈಗಲೂ ಆವಶ್ಯಕ, ಪ್ರಾಯಃ ಹಿಂದಿಗಿಂತ ಈಗ ಇನ್ನೂ ಹೆಚ್ಚು ಆವಶ್ಯಕ ಆದರೆ ಅವರ ಸಾಮಾನ್ಯ ಮಾನವೀಯತೆಯು ನಮ್ಮ ಜಾಗೃತವಾದ ಅರಿವಿಗೆ ಬಂದಿರುವುದು, ಅವರಿಂದ ಬಹಳ ನಿರೀಕ್ಷಿಸುವುದಕ್ಕೂ ಅಥವಾ ಅವರಲ್ಲಿ ಅತಿಯಾಗಿ ನಂಬುಗೆಯಿಡುವುದಕ್ಕೂ ಕೋಟೆಯಾಗಿದ "

ಪ್ರಧಾನ ರಾಜಕಾರಣ ಪಟುಗಳಾದ ಮಿ|| ಡಿ ಲಾಯ್ಡ್ ಜಾರ್ಜ್‌ರವರು ತಮ್ಮ 'ಮಹಾ ಯುದ್ಧದ ನೆನಪುಗಳು' ಎಂಬ ಗ್ರಂಥದಲ್ಲಿ ಸೈನ್ಯಾಧಿಪತಿಗಳೂ ನೌಕಾಧಿಪತಿಗಳೂ ಮಹಾ ಯುದ್ಧದಲ್ಲಿ ಮೆರೆದ ನ್ಯೂನಾತಿರಿಕ್ತಗಳ ಮತ್ತು ಮಾಡಿದ ದೊಡ್ಡ ತಪ್ಪುಗಳ—ಲಕ್ಷೋಪ ಲಕ್ಷ ಜನರ ಜೀವಗಳನ್ನು ಆಹುತಿಗೊಂಡ—ಭಯಂಕರ ಚಿತ್ರಗಳನ್ನು ಚಿತ್ರಿಸಿದ್ದಾರೆ ಇಂಗ್ಲೆಂಡ್ ಮತ್ತು ಆಕೆಯ ಮಿತ್ರರಾಜ್ಯಗಳು ಯುದ್ಧವನ್ನೇನೋ ಗೆದ್ದರು ಆದರೆ ಅದು "ನೆತ್ತರಿನಲ್ಲಿ ಮುಳುಗಿ ಬೀಳುತ್ತ ಏಳುತ್ತ ಗೆಲುವಿನ ಕಡೆಗೆ ಸಾಗಿದುದು" ಶ್ರೇಷ್ಠ ಅಧಿಕಾರಿಗಳು ಜನಗಳನ್ನೂ ಸನ್ನಿವೇಶಗಳನ್ನೂ ತಿಳಿಗೇಡಿತನದಿಂದಲೂ ದಡ್ಡತನದಿಂದಲೂ ನಡೆಸಿದುದರಿಂದ ಇಂಗ್ಲೆಂಡನ್ನು ವಿನಾಶದ ಅಂಚಿಗೆ ತಂದಿಟ್ಟುಬಿಟ್ಟರು, ಆಕೆಯೂ ಆಕೆಯ ಮಿತ್ರರಾಜ್ಯಗಳೂ ಬಹುತರವಾಗಿ ಅವರ ಶತ್ರುಗಳ ಆತ್ಯಾಶ್ಚರ್ಯಕರ ಅವಿವೇಕದಿಂದ ಉಳಿದುಕೊಂಡರು ಹೀಗೆಂದು ಬ್ರಿಟನ್ನಿನ ಯುದ್ಧಕಾಲದ ಮಹಾ ಮುಖ್ಯ ಮಂತ್ರಿಗಳು ಬರೆಯುತ್ತಾರೆ ಲಾರ್ಡ್ ಜೆಲಿಕೋ(ನೌಕಾ ಸೇನಾಧಿಪತಿಗಳು)ರವರ ತಲೆಯೊಳಕ್ಕೆ ಕಲ್ಪನೆಗಳನ್ನು ತುಂಬಬೇಕಾಗಿ ಬಂದಾಗ, ವಿಶೇಷವಾಗಿ ಒಂದು ಅಂಗರಕ್ಷಕ ವ್ಯವಸ್ಥೆಯನ್ನು ಕುರಿತ ಕಲ್ಪನೆಗಳನ್ನು ತುಂಬಬೇಕಾಗಿ ಬಂದಾಗ ಹೇಗೆ ತಾವು ಶಸ್ತ್ರ ಚಿಕಿತ್ಸೆಗಳನ್ನು ಮಾಡಬೇಕಾಗಿ ಬಂದಿತೆಂಬುದನ್ನು ವಿವರಿಸುತ್ತಾರೆ ಅವರ ಭಾವನೆಯ ಪ್ರಕಾರ ಫ್ರೆಂಚ್ ಮಾರ್ಷಲ್ ಜಾಫ್ರೆರವರ ಮುಖ್ಯ ಸದ್ಗುಣವೆಂದರೆ ಒಂದು ಶಕ್ತಿಯ ಭಾವನೆಯನ್ನು ಪ್ರೇರಿಸುವಂತಹ ಛಲಯುಕ್ತ ಮುಖಮುದ್ರೆ "ಕೋಟಲೆಗೊಳಗಾದ ಜನಗಳು ಜಂಜಡಕ್ಕೀಡಾದಾಗ ಉಪಜ್ಞೆಯಿಂದ ಹುಡುಕುವುದು ಅದನ್ನೇ" ಬುದ್ಧಿ ಶಕ್ತಿಯ ಪೀಠವು ಗಲ್ಲದಲ್ಲಿದೆಯೆಂಬ ತಪ್ಪೆಣಿಕೆಯನ್ನವರು ಮಾಡುತ್ತಾರೆ"

ಆದರೆ ಮಿ|| ಲಾಯ್ಡ್ ಜಾರ್ಜರ ಪ್ರಮುಖ ಆಪಾದನೆಯು ಬ್ರಿಟಿಷ್ ಹೈಕಮಾಂಡಿನ ಮೇಲೆಯೇ, ಸೈನ್ಯಾಧಿಪತಿ ಫೀಲ್ಡ್ ಮಾರ್ಷಲ್ ಹೈಗ್‌ರವರ ಮೇಲೆ ಲಾರ್ಡ್ ಹೈಗ್‌ರ ಬೃಹತ್ಪ್ರತಿಷ್ಠೆಯೂ ಮತ್ತು ರಾಜಕಾರಣ ಪಟುಗಳ ಮತ್ತು ಇತರರ ಮಾತುಗಳನ್ನು ಕೇಳಲು ಮಾಡಿದ ನಿರಾಕರಣೆಯೂ ಹೇಗೆ ಬ್ರಿಟಿಷ್ ಮಂತ್ರಿಮಂಡಲದಿಂದಲೇ ಮುಖ್ಯಾಂಶಗಳನ್ನು ಬಚ್ಚಿಡುವಂತೆ ಮಾಡಿ, ಫ್ರಾನ್ಸಿನಲ್ಲಿದ್ದ ಬ್ರಿಟಿಷ್ ಸೈನ್ಯವನ್ನು ಅತ್ಯಪಾಯಾವಸ್ಥೆಗೆ ಹೇಗೆ ಕರದೊಯ್ಯಿತೆಂಬುದನ್ನೂ ಅವರು ಸಿದ್ಧಾಂತಿಸುತ್ತಾರೆ ಅಪಜಯವು ಸನ್ನಿಹಿತವಾದಾಗಲೂ ಸಹ ಆತನು ಅನೇಕ ತಿಂಗಳುಗಳ ಕಾಲ ಪಾಸ್ ಷಂಡೇಲ್ ಮತ್ತು ಕಾಂಬ್ರೆಗಳ ಘೋರವಾದ ಕೆಸರಿನಲ್ಲಿ ತಮ್ಮ ವಿವೇಚನೆಯಿಲ್ಲದ ಪ್ರಸ್ಥಾನವನ್ನು ನಡೆಸಿದರು ಹದಿನೇಳು ಸಾವಿರ ಅಧಿಕಾರಿಗಳು ಸತ್ತು ಅಥವಾ ಸಾಯುತ್ತ ಬಿದ್ದಿದ್ದರು, ನಾಲ್ಕು ಲಕ್ಷ ವೀರರಾದ ಸೈನಿಕರು ನಷ್ಟವಾದರು 'ಅಜ್ಞಾತ ಸೈನಿಕ'ನಿಗೆ, ಅವನು ಸತ್ತುಹೋದ ಮೇಲೆ ಇಂದು ಗೌರವವು ದೊರೆಯುತ್ತಿರುವುದು ಒಳ್ಳೆಯದೆ, ಆದರೆ ಅವನ ಬಾಳು ಅಗ್ಗವಾಗಿದ್ದು, ಅವನು ಬದುಕಿದ್ದಾಗ, ಅವನ ಯೋಗಕ್ಷೇಮವನ್ನು ವಿಚಾರಿಸುವವರೇ ಇರಲಿಲ್ಲ

ಇತರ ಎಲ್ಲ ಜನಗಳಂತೆ ರಾಜಕಾರಣ ಪಟುಗಳೂ ಸಹ, ಅನೇಕ ವೇಳೆ ತಪ್ಪು ಮಾಡುತ್ತಾರೆ ಆದರೆ ಪ್ರಜಾಸತ್ತಾತ್ಮಕ ರಾಜ ಪುರುಷರು ಘಟನೆಗಳು ಮತ್ತು ಜನಗಳ ವಿಷಯದಲ್ಲಿ ಶೀಘ್ರವೇದಿಗಳಾಗಿಯೂ ಮಾರ್ದನಿಗೊಡುವವರಾಗಿಯೂ ಇರಲೇಬೇಕು ಮತ್ತು ಅವರು ಸಾಧಾರಣವಾಗಿ ತಮ್ಮ ತಪ್ಪುಗಳನ್ನು ಬಗೆಗೊಂಡು ಅವುಗಳನ್ನು ತಿದ್ದಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಾರೆ ಸೈನಿಕನಾದರೋ ಭಿನ್ನವಾದ ವಾತಾವರಣದಲ್ಲಿ ಬೆಳೆಯುತ್ತಾನೆ ಅಲ್ಲಿ ಅಧಿಕಾರವು ಆಳುತ್ತದೆ, ವಿಮರ್ಶೆಯು ಸಹಿಸಲ್ಪಡುವುದಿಲ್ಲ ಆದುದರಿಂದ ಆತನು ಇತರರ ಬುದ್ಧಿವಾದಗಳನ್ನು ಕುರಿತು ಕುಪಿತನಾಗುತ್ತಾನೆ ಮತ್ತು ತಪ್ಪುಮಾಡಿದಾಗ ಆತನು ಸಮಗ್ರವಾಗಿ ತಪ್ಪುಮಾಡಿ, ತಪ್ಪು ಮಾಡುತ್ತಲೇ ಹೋಗುತ್ತಾನೆ ಆತನಿಗೆ ಗಲ್ಲವು, ಮನಸ್ಸು ಅಥವಾ ಮೆದುಳಿಗಿಂತ ಹೆಚ್ಚು ಮುಖ್ಯವಾದುದು ಭಾರತದಲ್ಲಿ ನಮಗೆ ಒಂದು ಮಿಶ್ರವಾದ ಮಾದರಿಯನ್ನು ಉತ್ಪತ್ತಿ ಮಾಡಿರುವುದರ ಅನುಕೂಲ್ಯವಿದೆ ಏಕೆಂದರೆ ಪೌರ ಆಡಳಿತವೇ ಒಂದು ಅಧಿಕಾರ ಮತ್ತು ಆತ್ಮಪರ್ಯಾಪ್ತಿಗಳಿಗಿಂತ ಕೂಡಿದ ಅರೆಸೈನಿಕ ವಾತಾವರಣದಲ್ಲಿ ಬೆಳೆದು ಬಾಳುತ್ತದೆ ಆದುದರಿಂದ ಅದು ಹೆಚ್ಚಾಗಿ ಸೈನಿಕನ ಗಲ್ಲ ಮತ್ತು ಇತರ ಸದ್ಗುಣಗಳನ್ನು ಪಡೆದಿದೆ

ಸೈನ್ಯದ 'ಭಾರತೀಕರಣ'ದ ಕಾರ್ಯ ವಿಧಾನವು ಮುನ್ನಡೆಯುತ್ತಿದೆಯೆಂದೂ ಇನ್ನು ಮೂವತ್ತು ಅಥವಾ ಅದಕ್ಕಿಂತ ಹೆಚ್ಚು ವರ್ಷಗಳಲ್ಲಿ ಒಬ್ಬ ಭಾರತೀಯ ಜನರಲ್ ಸಹ ಭಾರತೀಯ ರಂಗದಮೇಲೆ ಕಾಣಿಸಿಕೊಳ್ಳಬಹುದೆಂದೂ ನಮಗೆ ಹೇಳುತ್ತಾರೆ ಇನ್ನು ನೂರು ವರ್ಷಗಳಿಗಿಂತ ಹೆಚ್ಚಿನ ಕಾಲದಲ್ಲಿ ಭಾರತೀಕರಣದ ಕಾರ್ಯವಿಧಾನವು ಸಾಕಷ್ಟು ಪ್ರಗತಿಹೊಂದಿರಬಹುದು, ಎನ್ನಬಹುದು. ಸಂದು ಕಟ್ಟೋಂದರ ಸಮಯದಲ್ಲಿ ಒಂದೆರಡು ವರ್ಷಗಳಲ್ಲಿ ಇಂಗ್ಲೆಂಡು ಹೇಗೆ ಇಪ್ಪತ್ತು ಲಕ್ಷ ಮಂದಿಯ ಮಹಾ ಸೈನ್ಯವೊಂದನ್ನು ಕಟ್ಟಿತು, ಎಂಬುದನ್ನು ಕುರಿತು ಆಶ್ಚರ್ಯ ಪಡುವುದು ಹೆಚ್ಚಲ್ಲ ಈ ಕೆಲಸವು ನಮಗೆ ಬುದ್ಧಿ ಹೇಳುವವರ ಕೈಗೆ ಬಿದ್ದಿದ್ದರೆ ಪ್ರಾಯಃ ಅದು ಇನ್ನೂ ಹೆಚ್ಚಾದ ಜಾಗರೂಕತೆಯಿಂದಲೂ ಸಾವಧಾನವಾಗಿಯೂ ನಡೆಯುತ್ತಿತ್ತು ಈ ಸುಸಜ್ಜಿತವಾಗಿ ಶಿಕ್ಷಿತವಾದ ಸೈನ್ಯವು ಯುದ್ಧಕ್ಕೆ ಸಿದ್ಧವಾಗುವುದಕ್ಕಿಂತ ಬಹಳ ಮುಂಚೆಯೇ ಯುದ್ಧವು ಮುಗಿದು ಹೋಗಿಬಿಡುತ್ತಿತ್ತೆಂಬುದೂ ಒಂದು ಸಾಧ್ಯತೆಯಿದೆ ರಷ್ಯನ್ ಸೋವಿಯಟ್ ಸೈನ್ಯಗಳು ಬಹುತರವಾಗಿ ಶೂನ್ಯತೆಯಿಂದ ಬೆಳೆದು ಬಂದು, ಅನೇಕಾನೇಕ ಶತ್ರುಗಳನ್ನೆದುರಿಸಿ ವಿಜಯಿಗಳಾಗಿ ಇಂದು ಇಡೀ ಜಗತ್ತಿನ ಅತಿ ದಕ್ಷ ಸಮರ ಯಂತ್ರಗಳಲ್ಲೊಂದಾಗಿರುವುದನ್ನು ಕುರಿತೂ ಯೋಚಿಸಬಹುದು ತೋರಿದಂತೆ ಅವರಿಗೆ ಬುದ್ಧಿ ಹೇಳಿ ಸಲಹೆಕೊಡಲು "ಯುದ್ಧಾನುಭವಿ ಮತ್ತು ಯುದ್ಧಪ್ರವೀಣ" ರಾದ ಜನರಲ್‌ಗಳನ್ನು ಅವರು ಪಡೆದಿರಲಿಲ್ಲ

ಈಗ ಡೆಹ್ರಾ ಡೂನ್‌ನಲ್ಲಿ ನಮಗೊಂದು ಸೈನಿಕ ವಿಶ್ವವಿದ್ಯಾನಿಲಯವಿದೆ ಅಲ್ಲಿ ಉತ್ತಮವರ್ಗದ ಯುದ್ಧವಿದ್ಯಾರ್ಥಿಗಳು ಸೈನ್ಯಾಧಿಕಾರಿಗಳು ಶಿಕ್ಷಣಪಡೆಯುತ್ತಿದ್ದಾರೆ. ಕವಾತು ಮಾಡುವಾಗ ಅವರು ಬಹಳ ಚುರುಕಾಗಿದ್ದಾರೆಂದು ಹೇಳುತ್ತಾರೆ, ಅವರು ನಿಸ್ಸಂದೇಹವಾಗಿಯೂ ಶ್ಲಾಘನೀಯವಾದ ಅಧಿಕಾರಿಗಳಾಗುತ್ತಾರೆ ಯುದ್ಧ ವಿಜ್ಞಾನದ ಶಿಕ್ಷಣ ಸಹಿತವಲ್ಲದಿದ್ದರೆ ಈ ಶಿಕ್ಷಣದಿಂದ ಏನು ಪ್ರಯೋಜನ ಎಂದು ನಾನು ಕೆಲವುವೇಳೆ ಸೋಜಿಗಪಡುತ್ತೇನೆ ಇಂದು ಕಾಲ್ಬಲ ಮತ್ತು ಕುದುರೆ ಬಲಗಳು ರೋಮನ್ ಫಲ್ಯಾಂಕ್ಸ್* ನಷ್ಟು ಪ್ರಯೋಜಕ ಆಕಾಶಯುದ್ಧ, ಗ್ಯಾಸ್ ಬಾಂಬುಗಳ, ಟ್ಯಾಂಕುಗಳ ಮತ್ತು ಶಕ್ತಿಯುತ ಫಿರಂಗಿಗಳ ಕಾಲದಲ್ಲಿ ಬಂದೂಕು, ಬಿಲ್ಲುಬಾಣಗಳಿಗಿಂತ ಸ್ವಲ್ಪ ಉಪಯುಕ್ತವಾದುದು ಈ ಸಂಗತಿಯನ್ನು ಅವರ ಶಿಕ್ಷಕರೂ ಬೋಧಕರೂ ಖಂಡಿತವಾಗಿಯೂ ಅರಿತುಕೊಂಡಿದ್ದಾರೆ

ಭಾರತದಲ್ಲಿನ ಬ್ರಿಟಿಷ್ ಆಳ್ವಿಕೆಯ ಚರಿತೆಯು ಏನಾಗಿದೆ? ಅದರ ವಾರಡಿಗಳು ನಮ್ಮ ದೌರ್ಬಲ್ಯಗಳ ಪರಿಣಾಮಗಳು ಮಾತ್ರವಾಗಿರುವಾಗ ಅವುಗಳ ಬಗ್ಗೆ ಗೊಣಗುಟ್ಟುವುದಕ್ಕೆ ನಾವು ಯಾರು? ವ್ಯತ್ಯಾಸದ ನದಿಯೊಡನೆ ಸಂಪರ್ಕವನ್ನು ಕಳೆದುಕೊಂಡು ಹಿಮ್ಮರಳಿದ ನೀರಿನಲ್ಲಿ ನಿಂತು ಸ್ವವಿಚಾರ ಮಗ್ನರಾಗಿಯೂ ಸ್ವಸಂತೃಪ್ತರಾಗಿಯೂ ಬಿಟ್ಟು ಉಷ್ಟ್ರಪಕ್ಷಿ ಸದೃಶವಾಗಿ, ಇತರ ಕಡೆಗಳಲ್ಲಿ ನಡೆಯುತ್ತಿರುವುದನ್ನು ಉಪೇಕ್ಷಿಸುವುದೆಂದರೆ ನಮ್ಮ ವಿನಾಶಕ್ಕೆ ನಾವೇ ಕಾರಣರಾಗುತ್ತೇವೆ ಜಗತ್ತಿನ ನೂತನ ಪ್ರೇರಣೆಯ ತರಂಗದ ತುದಿಯಮೇಲೆ ಕುಳಿತು ಬ್ರಿಟಿಷರು ನಮ್ಮಲ್ಲಿಗೆ ಬಂದರು ಅವರು ಪ್ರತಿನಿಧಿಸಿದ್ದ ಪ್ರಬಲವಾದ ಐತಿಹಾಸಿಕ ಶಕ್ತಿಗಳನ್ನು ಅವರೇ ಬಗೆಗೊಂಡಿರಲಿಲ್ಲ ನಮ್ಮನ್ನು ಬುಡಮುಟ್ಟ ಕಿತ್ತುಹಾಕಿ, ದಿಕ್ಕುದಿಕ್ಕಿಗೆ ಚೆಂಡಾಡುವ ಚಕ್ರವಾತವನ್ನು ಕುರಿತು ದೂರೋಣವೆ ಅಥವಾ ನಮ್ಮನ್ನು ನಡುಗಿಸಿಬಿಡುವ ಕೊರೆಯುವ ಗಾಳಿಯನ್ನು ದೂರೋಣವೆ? ಭೂತವನ್ನೂ ಅದರ ಜಗಳಗಳನ್ನೂ ಮರೆತುಬಿಡೋಣ, ಭವಿಷ್ಯತ್ತನ್ನು ಎದುರಿಸೋಣ ಬ್ರಿಟಿಷರು ತಂದ ಒಂದು ಕೊಡುಗೆ—ವಿಜ್ಞಾನದ ಮತ್ತು ಅದರ ಸಮೃದ್ಧ ಫಲದ ಕೊಡುಗೆಗೆ—ಗಾಗಿ ನಾವು ಅವರಿಗೆ ಕೃತಜ್ಞರಾಗಿರಬೇಕು ಆದರೆ ದೇಶದಲ್ಲಿನ ವಿಚ್ಛೇದಕ, ತಿಳಿವಿನ ಹಗೆತನದ, ಪ್ರತೀಕಾರಕ, ಕೋಮುವಾರಿನ ಮತ್ತು ಅನುಗವಾದಿ ಅಂಶಗಳಿಗೆ ಉತ್ತೇಜನವನ್ನು ಕೊಡಲು ಭಾರತದಲ್ಲಿನ ಬ್ರಿಟಿಷ್ ಸರಕಾರವು ಮಾಡಿದ ಪ್ರಯತ್ನಗಳನ್ನು ಮರೆಯುವುದಾಗಲಿ, ಸಮಚಿತ್ತತೆಯಿಂದ ಅವಲೋಕಿಸುವುದಾಗಲಿ ಕಷ್ಟವಾಗಿದೆ ಪ್ರಾಯಃ ಅದು ನಮ್ಮನ್ನು ಕುರಿತ ಆವಶ್ಯಕವಾದ ಪರೀಕ್ಷೆಯೂ ಅಭಿಯೋಗವೂ ಆಗಿದೆ ಭಾರತವು ಪುನರ್ಜನ್ಮವನ್ನು ತಾಳುವ

* ಇದು ಒಂದು ಗ್ರೀಕ್‌ಸೈನ್ಯವ್ಯೂಹರಚನಾ ವಿಧಾನ ಇದನ್ನು ರೋಮನರು ಆಮೇಲೆ ಅನುಸರಿಸಿ ತಮ್ಮದಾಗಿ ಮಾಡಿಕೊಂಡರು

ಮುನ್ನ, ಅದು ಪುಟವಿಡುವ ಮತ್ತು ಹದವಮಾಡುವ, ಮತ್ತು ದುರ್ಬಲರನ್ನೂ ಅಶುದ್ಧರನ್ನೂ ಕೀಳರನ್ನೂ ಸುಟ್ಟು ಬೂದಿಮಾಡುವ ಜ್ವಾಲೆಯಲ್ಲಿ ಅದು ಪುನಃ ಪುನಃ ನುಗ್ಗಬೇಕಾಗುತ್ತದ

## ೫೫

# ನ್ಯಾಯವಿಧ್ಯುಕ್ತ ವಿವಾಹ ಮತ್ತು ಲಿಪಿಸಮಸ್ಯೆ

೧೯೩೩ ರ ಸೆಪ್ಟೆಂಬರ್ ತಿಂಗಳ ಮಧ್ಯಭಾಗದಲ್ಲಿ ಪುಣೆ ಮತ್ತು ಬೊಂಬಾಯಿಗಳಲ್ಲಿ ಸುಮಾರು ಒಂದು ವಾರವನ್ನು ಕಳೆದು ನಾನು ಲಕ್ನೋಗೆ ಹಿಂತಿರುಗಿದೆ ಆಗಲೂ ನನ್ನ ತಾಯಿ ಆಸ್ಪತ್ರೆಯಲ್ಲಿದ್ದಳು , ದಿನೇ ದಿನೇ ಗುಣಮುಖಳಾಗುತ್ತಿದ್ದಳು ಕಮಲಳು ಕೂಡ ಆಗ ಲಕ್ನೋದಲ್ಲೇ ಇದ್ದು, ತನ್ನ ದೇಹಸ್ಥಿತಿ ಅಷ್ಟು ಚೆನ್ನಾಗಿಲ್ಲದಿದ್ದರೂ ಆಕೆಯ ಶುಶ್ರೂಷೆಯನ್ನು ಮಾಡುತ್ತಿದ್ದಳು ಪ್ರತಿ ವಾರಾಂತ್ಯದಲ್ಲಿಯೂ ನನ್ನ ಸಹೋದರಿಯರು ಅಲಹಾಬಾದಿನಿಂದ ಬರುತ್ತಿದ್ದರು ನಾನು ಲಕ್ನೋದಲ್ಲಿ ಎರಡು ಮೂರು ವಾರಗಳಿದ್ದೆ ಅಲಹಾಬಾದಿನಲ್ಲಿ ನನಗೆ ಸಿಕ್ಕಬಹುದಾದುದಕ್ಕಿಂತ ಹೆಚ್ಚು ವಿರಾಮ ಅಲ್ಲಿ ಸಿಕ್ಕುತ್ತಿತ್ತು. ದಿನಕ್ಕೆರಡು ಸಲ ಆಸ್ಪತ್ರೆಗೆ ಹೋಗಿ ಬರುವುದೇ ನನ್ನ ಮುಖ್ಯ ಕಲಸವಾಗಿತ್ತು ವಿರಾಮಕಾಲದಲ್ಲಿ ನಾನು ಕೆಲವು ಪತ್ರಿಕೆಗಳಿಗೆ ಲೇಖನಗಳನ್ನು ಬರೆಯಲಾರಂಭಿಸಿದೆ ಈ ಬರವಣಿಗೆಗಳು ದೇಶದ ಎಲ್ಲಾ ಪತ್ರಿಕೆಗಳಲ್ಲಿಯೂ ವಿಪುಲವಾಗಿ ಪ್ರಕಟವಾದುವು "ಭಾರತದ ಗಮ್ಯವೇನು ?" ಎಂಬ ಅಭಿಧಾನದಿಂದ ಭಾರತದ ಪರಿಸ್ಥಿತಿಗೆ ಸಂಬಂಧಿಸಿದಂತೆ ಜಗತ್ತಿನ ವಿಚಾರಗಳನ್ನು ನಾನು ಪರಿಶೀಲಿಸಿ ಬರೆದ ಒಂದು ಲೇಖನಮಾಲೆಯು ಜನರ ಗಮನವನ್ನು ಹೆಚ್ಚಾಗಿ ಸೆಳೆಯಿತು ಟೆಹ್ರಾನ್ ಮತ್ತು ಕಾಬೂಲ್‌ಗಳಲ್ಲಿ ನನ್ನ ಈ ಬರವಣಿಗೆಗಳು ಪರ್ಷಿಯನ್ ಭಾಷೆಗೆ ಕೂಡ ತರ್ಜುಮೆ ಮಾಡಲ್ಪಟ್ಟುವೆಂಬ ವಿಚಾರವು ಆಮೇಲೆ ನನಗೆ ತಿಳಿಯಿತು ಇತ್ತೀಚಿನ ಬೆಳವಣಿಗೆಗಳ ಮತ್ತು ಆಧುನಿಕ ಪಾಶ್ಚಾತ್ಯ ಆಲೋಚನೆಗಳ ಸಂಪರ್ಕವನ್ನು ಇಟ್ಟುಕೊಂಡಿರುವವರಿಗೆ ನನ್ನ ಈ ಲೇಖನಗಳಲ್ಲಿ ನೂತನವಾದುದಾಗಲೀ ಸ್ವತಂತ್ರವಾದುದಾಗಲೀ ಯಾವುದೂ ಇರಲಿಲ್ಲ ಆದರೆ ಭಾರತದಲ್ಲಾದರೋ ನಮ್ಮ ಜನರು ತಮ್ಮ ಸ್ವಂತ ಕಷ್ಟಗಳಲ್ಲಿ ಬಹಳ ಮಗ್ನರಾಗಿದ್ದುದರಿಂದ ಬೇರೆ ಕಡೆಗಳಲ್ಲಿ ಏನಾಗುತ್ತಿದೆಯೆಂಬುದನ್ನು ಅವರು ಅರಿಯಲಾರದವರಾಗಿದ್ದರು ನಮ್ಮ ಜನರು ನನ್ನ ಈ ಲೇಖನಗಳಿಗೆ ಕೊಟ್ಟ ಸ್ವಾಗತದಿಂದಲೂ ಹಾಗೂ ಇತರ ಅನೇಕ ಸೂಚನೆಗಳಿಂದಲೂ ಅವರು ವಿಶಾಲದೃಷ್ಟಿಕ್ಷೇಪವನ್ನು ಬೆಳೆಯಿಸಿಕೊಳ್ಳುತ್ತಿದ್ದಾರೆಂಬುದು ವ್ಯಕ್ತವಾಯಿತು.

ಆಸ್ಪತ್ರೆಯಲ್ಲಿರುವುದು ನಮ್ಮ ತಾಯಿಗೆ ಬಹಳ ಬೇಜಾರಾಗುತ್ತ ಬಂದುದರಿಂದ ನಾವು ಆಕೆಯನ್ನು ಪುನಃ ಅಲಹಾಬಾದಿಗೆ ಕರೆದೊಯ್ಯಬೇಕೆಂದು ನಿರ್ಧರಿಸಿದೆವು ಆಗತಾನೇ ಗೊತ್ತಾಗಿದ್ದ ನನ್ನ ಸಹೋದರಿ ಕೃಷ್ಣಳ ವಿವಾಹ ನಿಶ್ಚಿತಾರ್ಥವು ಇದಕ್ಕೆ

ಒಂದು ಕಾರಣವಾಗಿತ್ತು. ಹಠಾತ್ತಾಗಿ ನಾನು ಮತ್ತೆ ಸೆರೆಮನೆಗೆ ನೆಳೆದೊಯ್ಯಲ್ಪಡುವ ಮುನ್ನ, ಈ ಮದುವೆಯನ್ನು ಜಾಗ್ರತೆಯಾಗಿ ನಡೆಯಿಸಬೇಕೆಂಬ ಇಷ್ಟವು ನಮ್ಮೆಲ್ಲರಿಗೂ ಇತ್ತು. ಶಾಸನ ಭಂಗ ಚಳವಳಿಯು ಇನ್ನೂ ಕಾಂಗ್ರೆಸ್ಸಿನ ಮುಖ್ಯ ಕಾರ್ಯಕ್ರಮದಲ್ಲಿ ಸೇರಿದ್ದುದರಿಂದಲೂ ಕಾಂಗ್ರೆಸ್ಸೂ ಇತರ ಹತ್ತು ಇಪ್ಪತ್ತು ಸಂಸ್ಥೆಗಳೂ ಅಕ್ರಮಕೂಟಗಳೆಂದು ಪರಿಗಣಿಸಲ್ಪಟ್ಟಿದ್ದುದರಿಂದಲೂ ನಾನೆಷ್ಟು ಕಾಲದವರೆಗೆ ಸ್ವತಂತ್ರವಾಗಿ ಹೊರಗೆ ಓಡಾಡಲು, ಅವಕಾಶ ಸಿಕ್ಕುತ್ತಿತ್ತೆಂಬುದು ನನಗೇ ಗೊತ್ತಿರಲಿಲ್ಲ

ಮದುವೆಯು ಅಲಹಾಬಾದಿನಲ್ಲಿ ಅಕ್ಟೋಬರ್ ತಿಂಗಳ ಮೂರನೆಯ ವಾರದಲ್ಲಿ ನಡೆಯಬೇಕೆಂದು ನಿಷ್ಕರ್ಷೆಮಾಡಿದೆವು ಇದು ನ್ಯಾಯವಿಧ್ಯುಕ್ತವಾಗಿ ನಡೆಯಬೇಕಾಗಿತ್ತು. ಈ ವಿಷಯದಲ್ಲಿ ನಮ್ಮ ವಾತೇನೂ ಇಲ್ಲದಿದ್ದರೂ ನನಗೆ ಈ ವಿಷಯವು ಸಂತೋಷವನ್ನುಂಟು ಮಾಡಿತು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಜಾತಿಗಳಿಗೆ ಸೇರಿದ ಎರಡು ಭಿನ್ನವರ್ಗದವರಲ್ಲಿ ಈ ಮದುವೆ ನಡೆಯಬೇಕಾಗಿತ್ತು, ಈಗಿನ ಬ್ರಿಟಿಷ್ ಇಂಡಿಯನ್ ನ್ಯಾಯಶಾಸ್ತ್ರದ ರೀತ್ಯಾ ಇಂಥಾ ಮದುವೆಗೆ ಯಾವ ಧರ್ಮಸಂಬಂಧವಾದ ಕಾರ್ಯಕಲಾಪವೂ ಶಾಸ್ತ್ರಬದ್ಧವಾಗಿರಲಿಲ್ಲ ಅದೃಷ್ಟವಶಾತ್ ಆಗತಾನೇ ಜಾರಿಗೆ ಬಂದಿದ್ದ ನ್ಯಾಯವಿಧ್ಯುಕ್ತ ವಿವಾಹ ಶಾಸನವೊಂದು ನಮಗೆ ನೆರವಾಯಿತು ಇಂಥ ಕಾನೂನುಗಳು ಎರಡಿದ್ದುವು ಯಾವುದರ ರೀತ್ಯಾ ನನ್ನ ಸಹೋದರಿಯ ವಿವಾಹ ನೆರವೇರಿತೋ ಆ ಎರಡನೆಯ ಕಾನೂನು ಹಿಂದೂಗಳಿಗೂ ಬೌದ್ಧರು, ಜೈನರು, ಸಿಕ್ಕರು ಮುಂತಾದ ಹತ್ತಿರದ ಸಂಬಂಧವುಳ್ಳ ಮತಸ್ಥರಿಗೂ ಅನ್ವಯಿಸಿತ್ತು ಆದರೆ ಹುಟ್ಟಿನಿಂದಾಗಲೀ ಮತಾಂತರದಿಂದಾಗಲೀ ವಿವಾಹದಲ್ಲಿ ಭಾಗಿಗಳಾದವರು ಈ ಮತಗಳಲ್ಲಿ ಒಂದಕ್ಕಾದರೂ ಸಂಬಂಧಪಡದವರಾಗಿದ್ದರೆ ಎರಡನೆಯ ಕಾನೂನು ಅಂಥ ವಿವಾಹಕ್ಕೆ ಅನ್ವಯಿಸುವುದಿಲ್ಲ, ಮೊದಲನೆಯ ನ್ಯಾಯವಿಧ್ಯುಕ್ತ ವಿವಾಹವನ್ನೇ ಆಶ್ರಯಿಸಬೇಕು ಈ ಪ್ರಥಮ ಕಾನೂನಿನ ರೀತ್ಯಾ ವಿವಾಹದಲ್ಲಿ ಭಾಗಿಗಳಾಗುವ ಎರಡುಕಡೆಯವರೂ ಉಳಿದ ಎಲ್ಲ ಪ್ರಮುಖ ಧರ್ಮಗಳನ್ನೂ ನಿರಾಕರಿಸಬೇಕು, ಅಥವಾ ತಾವು ಈ ಧರ್ಮಗಳಲ್ಲಿ ಯಾವುದಕ್ಕೂ ಸೇರಿದವರಲ್ಲವೆಂಬ ಒಂದು ಹೇಳಿಕೆಯನ್ನು ಕೊಡಬೇಕು ಸಂಪೂರ್ಣವಾಗಿ ಅನಗತ್ಯವಾಗಿರುವ ಈ ಧರ್ಮ ನಿರಾಕರಣವು ಒಂದು ದೊಡ್ಡ ಪೀಡೆ. ಮತಶ್ರದ್ಧೆಯನ್ನು ಹೊಂದದಿರುವ ಅನೇಕ ಮಂದಿ ಕೂಡ ಈ ಹೇಳಿಕೆಯನ್ನು ಆಕ್ಷೇಪಿಸಿ, ತನ್ಮೂಲಕ ಈ ಕಾನೂನನ್ನು ಉಪಯೋಗಿಸಿಕೊಳ್ಳದವರಾಗುತ್ತಾರೆ ಅಂತರ್ಜಾತೀಯ ವಿವಾಹಗಳಿಗೆ ಸಹಾಯಕವಾಗುವ ಎಲ್ಲ ವ್ಯತ್ಯಾಸಗಳನ್ನೂ ಅನೇಕ ಧರ್ಮಗಳ ವೈದಿಕ ಪ್ರವೃತ್ತಿಯುಳ್ಳವರು ವಿರೋಧಿಸುತ್ತಾರೆ ಇದರ ಫಲಿತಾಂಶವೇನೆಂದರೆ, ಜನಗಳು ಧರ್ಮ ನಿರಾಕರಣದ ಹೇಳಿಕೆಯನ್ನು ಕೊಡುವುದಕ್ಕೋ ಅಥವಾ ನ್ಯಾಯಬದ್ಧರಾಗಲು ಸ್ಪಷ್ಟವಾದ ಮೇಲುಮೇಲಿನ ಮತಾಂತರವನ್ನು ಹೊಂದುವುದಕ್ಕೋ ಅವರು ಅವರನ್ನು ದೂಡುತ್ತಾರೆ.

ಅಂತರ್ಜಾತೀಯ ವಿವಾಹಗಳಿಗೆ ಉತ್ತೇಜನ ಕೊಡಬೇಕೆಂದು ನನ್ನ ಅಭಿಪ್ರಾಯ ಆದರೆ ಇದಕ್ಕೆ ಉತ್ತೇಜನ ದೊರೆಯಲಿ, ದೊರೆಯದಿರಲಿ, ಎಲ್ಲ ಧರ್ಮಾನುಯಾಯಿಗಳಿಗೂ ಅನ್ವಯಿಸುವಂತಹ, ಧರ್ಮನಿರಾಕರಣೆಯನ್ನಾಗಲೀ ಮತಾಂತರವನ್ನಾಗಲೀ ತಳೆಯದೆ ಮದುವೆಯಾಗಲನುಕೂಲಿಸುವಂತಹ, ಒಂದು ಸಾಧಾರಣ ನ್ಯಾಯವಿಧ್ಯುಕ್ತ ವಿವಾಹ ಶಾಸನವು ಅತ್ಯಗತ್ಯವಾಗಿದೆ

ನನ್ನ ಸಹೋದರಿಯ ಮದುವೆಯಲ್ಲಿ ಯಾವ ಆಡಂಬರವೂ ಇರಲಿಲ್ಲ; ಅದು ಬಹು ಸರಳವಾದ ಪ್ರಸಂಗ ಭಾರತೀಯ ವಿವಾಹಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಆಡಂಬರವನ್ನು ನಾನು ಹೇಸುತ್ತೇನೆ ನಮ್ಮ ತಾಯಿಯ ಅಸ್ವಸ್ಥತೆಯ ಕಾರಣದಿಂದಲೂ ಶಾಸನ ಭಂಗ ಚಳವಳಿಯು ಇನ್ನೂ ನಡೆಯುತ್ತಲಿದ್ದು ನಮ್ಮ ಗೆಳೆಯರನೇಕರು ಸೆರಮನೆಯಲ್ಲಿದ್ದುದರಿಂದಲೂ ವಿವಾಹದಲ್ಲಿ ಯಾವ ಡಾಂಭಿಕತನವನ್ನು ಮರೆಯುವುದೂ ಶುದ್ಧ ಅಸಂಗತವಾಗಿತ್ತು ಕೇವಲ ಕೆಲವೇ ಮಂದಿ ನೆಂಟರೂ ಸ್ಥಳೀಯ ಮಿತ್ರರೂ ಆಹ್ವಾನಿತರಾಗಿದ್ದರು ನಮ್ಮ ತಂದೆಯ ಹಳೆಯ ಗೆಳೆಯರನೇಕರಿಗೆ ಅಸಮಾಧಾನವಾಯಿತು ಏಕೆಂದರೆ, ನಾನು ಉದ್ದೇಶಪೂರ್ವಕವಾಗಿ ಅವರನ್ನು ಕಡೆಗಣಿಸಿದನೆಂದು ಅವರು ಭಾವಿಸಿದರು

ಮದುವೆಗಾಗಿ ನಾವು ಕಳುಹಿಸಿದ ಚಿಕ್ಕ ಲಗ್ನ ಪತ್ರಿಕೆಯು ಹಿಂದೂಸ್ತಾನಿ ಭಾಷೆಯಲ್ಲಿ ಲ್ಯಾಟಿನ್ ಲಿಪಿಯಲ್ಲಿ ಬರಯಲ್ಪಟ್ಟಿತ್ತು ಇಂಥ ಆಹ್ವಾನ ಪತ್ರಗಳು ಯಾವಾಗಲೂ ನಾಗರಿ ಅಥವಾ ಪರ್ಷಿಯನ್ ಲಿಪಿಯಲ್ಲಿ ಬರೆಯಲ್ಪಡುತ್ತಿದ್ದುದರಿಂದಲೂ ಹಿಂದೂಸ್ತಾನಿ ಭಾಷೆಯನ್ನು ಸೈನ್ಯ ಮತ್ತು ಮಿಷನರಿ ಗುಂಪುಗಳಲ್ಲುಳಿದು ಲ್ಯಾಟಿನ್ ಲಿಪಿಯಲ್ಲಿ ಬರೆಯುವುದು ಬಹುತರವಾಗಿ ಅಜ್ಞಾತವಾಗಿದ್ದುದರಿಂದಲೂ ನಾವು ಹೀಗೆ ಮಾಡಿದುದು ಒಂದು ಹೊಸ ಮಾರ್ಪಾಟನ್ನುಂಟುಮಾಡಿದಂತಾಯಿತು ಪ್ರಯೋಗಾತ್ಮಕವಾಗಿ ನಾನು ಈ ಲ್ಯಾಟಿನ್ ಲಿಪಿಯನ್ನು ಉಪಯೋಗಿಸಿದೆ, ಮತ್ತು ನಾನಾ ಜನದಲ್ಲಿ ಇದು ಯಾವ ಪರಿಣಾಮವನ್ನುಂಟುಮಾಡುವುದೆಂಬುದನ್ನು ನಾನು ನೋಡಬಯಸಿದೆ ಅನನುಕೂಲವಾದ ಒಂದು ಬೆರಕೆಯ ಸ್ವಾಗತವು ಇದಕ್ಕೆ ಸಿಕ್ಕಿತು, ಆಹ್ವಾನಿತರು ಬಹಳ ಕಡಿಮೆ, ಇದು ಬಹುಮಂದಿಯ ಕೈಸೇರಿದ್ದಿದ್ದರೆ ಪ್ರತಿಕ್ರಿಯೆಯು ಇನ್ನೂ ಹೆಚ್ಚು ಅಹಿತವಾಗಿರುತ್ತಿತ್ತು ನಾನು ಮಾಡಿದುದನ್ನು ಗಾಂಧಿಜಿಯವರು ಒಪ್ಪಲಿಲ್ಲ

ಲ್ಯಾಟಿನ್ ಲಿಪಿಯು ಬಹಳ ಕಾಲದಿಂದ ನನ್ನನ್ನು ಆಕರ್ಷಿಸಿದ್ದರೂ ನಾನದಕ್ಕೆ ಮಾರುವೋದುದೇ ನಾನು ಅದನ್ನು ಉಪಯೋಗಿಸಿದುದಕ್ಕೆ ಕಾರಣವಲ್ಲ ತುರ್ಕಿ ಮತ್ತು ಮಧ್ಯ ಏಷ್ಯಾಗಳಲ್ಲಿ ಇದಕ್ಕೆ, ದೊರೆತ ಯಶಸ್ಸು ನನ್ನ ಮನಸ್ಸಿನ ಮೇಲೆ ಪರಿಣಾಮವನ್ನುಂಟು ಮಾಡಿತ್ತು, ಮತ್ತು ಇದರ ಪರವಾಗಿದ್ದ ಸ್ವತಸ್ಸಿದ್ಧ ವಾದ

ಗಳು ತೂಕವಾಗಿದ್ದುವು ಆದರೂ ನನಗೆ ನಂಬಿಕೆಯುಂಟಾಗಿರಲಿಲ್ಲ ಹಾಗೆ ನನಗೆ ನಂಬಿಕೆಯುಂಟಾಗಿದ್ದರೂ ಇಂದಿನ ಭಾರತದಲ್ಲಿ ಇದನ್ನು ಅನುಷ್ಠಾನಕ್ಕೆ ತರುವ ಯದೃಚ್ಛೆಯು ಕಿಂಚಿತ್ತಾದರೂ ಇಲ್ಲವೆಂಬುದನ್ನು ನಾನು ಚೆನ್ನಾಗಿ ಅರಿತಿದ್ದೆ ರಾಷ್ಟ್ರೀಯತಾವಾದಿಗಳು, ಮತಶ್ರದ್ಧೆಯುಳ್ಳವರು, ಹಿಂದುಗಳು, ಮುಸ್ಲಿಮರು, ಹಳಬರು ಮತ್ತು ಹೊಸಬರು ಎಲ್ಲರೂ ಇದನ್ನು ಕಟುವಾಗಿ ಪ್ರತಿಭಟಿಸುವ ಸಂದರ್ಭ ವಿತ್ತು ಈ ಪ್ರತಿಭಟನೆಯು ಕೇವಲ ರಾಗವನ್ನವಲಂಬಿಸಿದುದಲ್ಲವೆಂದು ನನಗೆ ತೋರುತ್ತದೆ ಪೂರ್ವ ವೈಭವ ಸಂಪನ್ನವಾದ ಯಾವ ಭಾಷೆಗೇ ಆಗಲಿ ಲಿಪಿ ಯನ್ನು ವ್ಯತ್ಯಾಸಗೊಳಿಸುವುದು ಬಹು ಮುಖ್ಯವಾದ ವ್ಯತ್ಯಾಸ, ಏಕೆಂದರೆ ಲಿಪಿಯು ಸಾಹಿತ್ಯದ ನಿಕಟಾಂಶವಾಗಿದೆ. ಲಿಪಿಯನ್ನು ವ್ಯತ್ಯಾಸಗೊಳಿಸಿದರಾಯಿತು, ಭಿನ್ನ ಪದ-ಚಿತ್ರಗಳೇಳುವುವು ಹಿಂದಿನ ಸಾಹಿತ್ಯಕ್ಕೂ ಇಂದಿನ ಸಾಹಿತ್ಯಕ್ಕೂ ಮಧ್ಯೆ ಏರಿಹೋಗಲರಿದಾದ ಒಂದು ತಡೆಯಿದ್ದು, ಮೊದಲನೆಯದು ಸತ್ತ ಒಂದು ವಿದೇಶಿ ಭಾಷೆಯಾಗಿ ಪರಿಣಮಿಸುವುದು ಕಾಪಾಡಲು ಯೋಗ್ಯವಾದ ಸಾಹಿತ್ಯವು ಎಲ್ಲಿ ಲ್ಲವೋ ಅಲ್ಲಿ ಈ ಅಪಾಯಸಂಭವವನ್ನು ಎದುರುಗೊಳ್ಳಬಹುದು ಭಾರತದಲ್ಲಿ ಈ ವ್ಯತ್ಯಾಸವು ಸಾಧ್ಯವೇ ಇಲ್ಲವೆಂದು ನನಗ ತೋರುತ್ತದೆ, ಏಕೆಂದರೆ, ನಮ್ಮ ಸಾಹಿ ತ್ಯವು ಸಂಪದ್ಯುಕ್ತವಾಗಿಯೂ ಬೆಲೆಯುಳ್ಳದಾಗಿಯೂ ಇರುವುದಲ್ಲದೆ ಅದು ನಮ್ಮ ಇತಿ ಹಾಸದೊಡನೆಯೂ ಆಲೋಚನೆಯೊಡನೆಯೂ ಬೆರತು ನಮ್ಮ ಜನಸಾಮಾನ್ಯದ ಬಾಳಿನೊಡನೆ ನಿಕಟಸಂಬಂಧವನ್ನು ಹೊಂದಿದೆ ಇಂಥ ವ್ಯತ್ಯಾಸವೊಂದನ್ನು ಬಲವಂತ ವಾಗಿ ತರುವುದೆಂದರ ಬದುಕಿರುವಂತೆಯೇ ಕಠೋರವಾದ ಅಂಗವಿಚ್ಛೇದನೆ ಮಾಡಿ ದಂತಾಗುವುದು, ಮತ್ತು ಸರ್ವಜನ ಶಿಕ್ಷಣವನ್ನು ಕುರಿತ ನಮ್ಮ ಪ್ರಗತಿಯನ್ನು ಹಿಮ್ಮೆಟ್ಟಿಸುವುದು

ಆದರ ಇಂದು ಭಾರತದಲ್ಲಿ ಈ ಪ್ರಶ್ನೆಯು ಪ್ರೌಢವಾದ ಅರ್ಹವಾದ ಪ್ರಶ್ನೆ ಕೂಡ ಆಗಿಲ್ಲ ಸಂಸ್ಕೃತದ ಪುತ್ರೀಭಾಷಗಳಾದ ಹಿಂದಿ, ಬಂಗಾಳಿ, ಮರಾಠಿ ಮತ್ತು ಗುಜರಾತಿಗಳಿಗಲ್ಲ ಒಂದೇ ಸಾಮಾನ್ಯ ಲಿಪಿಯನ್ನು ಅನುಷ್ಠಾನಕ್ಕ ತಂದುಕೊಳ್ಳುವು ದೊಂದೇ ಲಿಪಿ ಸುಧಾರಣೆಯಲ್ಲಿ ನಮಗಿರುವ ಮುಂದಿನ ಹೆಜ್ಜೆಯೆಂದು ನನಗೆ ತೋರು ತ್ತದೆ ಅಲ್ಲದೆ, ಈ ಭಾಷೆಗಳ ಲಿಪಿಗಳು ಸಾಮಾನ್ಯವಾಗಿ ಒಂದೇ ಮೂಲವನ್ನು ಹೊಂದಿರುವುದರಿಂದಲೂ, ಒಂದಕ್ಕೊಂದಕ್ಕ ಬಹಳ ವ್ಯತ್ಯಾಸವನ್ನು ತಾಳದಿರುವುದ ರಿಂದಲೂ ಒಂದು ಸಮಾನ ನಿಯಮವನ್ನು ಅನುಸರಿಸುವುದು ಕಷ್ಟಸಾಧ್ಯವಲ್ಲ ಇದು ಈ ನಾಲ್ಕು ದೊಡ್ಡ ಪುತ್ರೀ ಭಾಷೆಗಳನ್ನೂ ತುಂಬ ಹತ್ತಿರಕ್ಕೆ ತರುತ್ತದ

ನಮ್ಮ ಆಂಗ್ಲೇಯ ಆಳರಸರು ಭಾರತದ ಬಗ್ಗೆ ಇಡೀ ಜಗತ್ತಿನಲ್ಲೆಲ್ಲ ಎಡೆಬಿಡದೆ ಪ್ರಚಾರ ಮಾಡಿದ ದಂತಕತೆಗಳಲ್ಲಿ ಒಂದೆಂದರ ಭಾರತದಲ್ಲಿ ಹಲವು ನೂರು ಭಾಷೆಗಳಿವೆ ಯೆಂಬುದು—ಸರಿಯಾದ ಸಂಖ್ಯೆ ನನಗೆ ನೆನಪಿಲ್ಲ ಋಜುವಾತಿಗೆ ಬೇಕಾದರೆ ಗಣತಿ

ಯಿದೆ ಜೀವಾವಧಿ ಈ ದೇಶದಲ್ಲೇ ಇದ್ದರೂ ಕೂಡ ಬಹಳ ಕೆಲವೇ ಮಂದಿ ಆಂಗ್ಲರಿಗೆ ಈ ನೂರಾರು ಭಾಷೆಗಳಲ್ಲಿ ಕೇವಲ ಒಂದು ಭಾಷೆ ಮಾತ್ರ ಸಾಮಾನ್ಯವಾದ ರೀತಿಯಲ್ಲಿ ಗೊತ್ತಿರುತ್ತದೆಯೆಂಬುದು ಆಶ್ಚರ್ಯಕರವಾದ ಸಂಗತಿಯಾಗಿದೆ. ಅವರು ಈ ಭಾಷೆಗಳನ್ನೆಲ್ಲಾ ಒಟ್ಟಿಗೆ ಸೇರಿಸಿ 'ವರ್ನ್ಯಾಕ್ಯುಲರ್', ಗುಲಾಮರ ಭಾಷೆ ಎಂದು ಬಿಡುತ್ತಾರೆ, (ಇದು ಲ್ಯಾಟಿನ್ನಿನ 'ವರ್ನಾ', ದೇಶೀಯ ದಾಸ ಎಂಬುದರಿಂದ ಹುಟ್ಟಿದುದು), ನಮ್ಮವರನೇಕರು, ನಿಜಾರ್ಥವನ್ನರಿಯದೆ, ಈ ಸಾಂಕೇತಿಕ ನಾಮಧೇಯವನ್ನು ಒಪ್ಪಿಕೊಂಡಿರುತ್ತಾರೆ. ಭಾಷೆಯನ್ನು ಸರಿಯಾಗಿ ಕಲಿತುಕೊಳ್ಳುವ ಶ್ರಮವನ್ನು ವಹಿಸದೆ ಆಂಗ್ಲರು ಭಾರತದಲ್ಲಿ ಹೇಗೆ ಜೀವಮಾನವನ್ನು ಕಳೆಯುತ್ತಾರೆಂಬುದು ಆಶ್ಚರ್ಯಕರವಾದುದು. ಅವರು ತಮ್ಮ 'ಖಾನ್‌ಸಾಮಾಗಳ' ಮತ್ತು 'ಆಯಾಗಳ' ಸಹಾಯದಿಂದ ಕಲಿತುಕೊಂಡಿರುವ ಒಂದು ವಿಚಿತ್ರತರವಾದ ಕರುಡುಮುರುಡು ಭಾಷೆಯನ್ನು, ಒಂದು ಬಗೆಯ ಬಂದೂಬಾರದ ಬೆರಕೆಯ ಹಿಂದೂಸ್ಥಾನಿಯನ್ನು ಸೃಷ್ಟಿಸಿಕೊಂಡು, ಅದನ್ನು ಸರಿಯಾದ ಭಾಷೆಯೆಂದೇ ತಿಳಿದುಕೊಂಡು ಉಪಯೋಗಿಸುತ್ತಾರೆ. ಭಾರತೀಯ ಜೀವನದ ಬಗ್ಗೆ ತಮ್ಮ ಕೈಕೆಳಗಿನವರಿಂದಲೂ ಸ್ತುತಿಪಾಠಕರಿಂದಲೂ ವಿಷಯಗಳನ್ನು ಸಂಗ್ರಹಿಸುವಂತೆ, ಹಿಂದೂಸ್ತಾನಿಯನ್ನು ಕುರಿತ ಭಾವನೆಗಳನ್ನು ಅವರು ತಮ್ಮ ಮನೆಯಾಳುಗಳಿಂದ ಸಂಗ್ರಹಿಸುತ್ತಾರೆ, ಈ ಆಳುಗಳು, ತಮ್ಮ ಸಾಹೇಬರುಗಳಿಗೆ ಏನೂ ಅರ್ಥವಾಗುವುದಿಲ್ಲವೆಂಬ ಭಯದಿಂದ ಈ ಹರಕುಮುರುಕು ಭಾಷೆಯಲ್ಲೇ ಮಾತನಾಡುತ್ತಾರೆ. ಹಿಂದೂಸ್ತಾನಿಯೂ ಇತರ ಭಾರತೀಯ ಭಾಷೆಗಳೂ ಉತ್ತಮ ಸಾಹಿತ್ಯ ಗುಣವನ್ನು ಹೊಂದಿ, ವಿಶಾಲವಾಙ್ಮಯಗಳುಳ್ಳವುಗಳಾಗಿರುವುವೆಂಬ ಸಂಗತಿಯನ್ನು ಆಂಗ್ಲರು ಶುದ್ಧಾಂಗವಾಗಿ ತಿಳಿಯದವರಂತೆ ಕಾಣುತ್ತಾರೆ.

ಭಾರತದಲ್ಲಿ ಇನ್ನೂರರಿಂದ ಮುನ್ನೂರು ಭಾಷೆಗಳಿವೆಯೆಂದು ಗಣತಿಯು ನಮಗೆ ತಿಳಿಸಿದರೆ ಜರ್ಮನಿಯಲ್ಲೂ ಐವತ್ತು ಅರುವತ್ತು ಭಾಷೆಗಳಿವೆಯೆಂಬುದನ್ನೂ ಅದು ತಿಳಿಸುತ್ತದೆ. ಜರ್ಮನಿಯಲ್ಲಿ ಒಕ್ಕಟ್ಟಿಲ್ಲದಿರುವುದಕ್ಕೆ ಅಥವಾ ಪರಸ್ಪರ ವೈಷಮ್ಯವಿರುವುದಕ್ಕೆ ಇದೇ ಕಾರಣವೆಂದು ಯಾರೂ ರುಜುವಾತಾಗಿ ಇಟ್ಟಂತೆ ನನಗೆ ಜ್ಞಾಪಕವಿಲ್ಲ. ವಸ್ತುತಃ ಗಣತಿಯೊಂದು ಎಲ್ಲ ಬಗೆಯ ಸಣ್ಣಪುಟ್ಟ ಭಾವಗಳನ್ನೂ, ಕಲವು ವೇಳೆ ಕೆಲವು ಸಾವಿರ ಮಂದಿ ಮಾತ್ರವೇ ಮಾತನಾಡುವ ಭಾಷೆಗಳನ್ನೂ ಹೇಳುತ್ತದೆ, ಶಾಸ್ತ್ರೀಯೋದ್ದೇಶದಿಂದ ಬಹು ಸಮಯಗಳಲ್ಲಿ ಒಂದೇ ಭಾಷೆಯ ಬೇರೆ ಬೇರೆ ರೂಪಗಳನ್ನು ಭಿನ್ನಭಾಷೆಗಳಾಗಿಯೇ ವರ್ಗೀಕರಿಸುತ್ತದೆ. ವೈಶಾಲ್ಯದ ದೃಷ್ಟಿಯಿಂದ ನೋಡಿದರೆ ಭಾರತದಲ್ಲಿ ಕೇವಲ ಅಲ್ಪಸಂಖ್ಯೆಯ ಭಾಷೆಗಳಿರುವುದು ಆಶ್ಚರ್ಯವನ್ನುಂಟುಮಾಡುತ್ತದೆ. ಈ ವೈಶಾಲ್ಯವನ್ನು ಯೂರೋಪಿನ ಇದೇ ವೈಶಾಲ್ಯಕ್ಕೆ ಹೋಲಿಸಿದರೆ ಭಾರತದ ಭಾಷೆಗಳ ಪರಸ್ಪರ ಸಂಬಂಧವು ಯರೋಪಿಗಿಂತ ಹೆಚ್ಚಾಗಿದೆ. ಆದರೆ ಸರ್ವವ್ಯಾಪಿಯಾದ ನಿರಕ್ಷರತೆಯಿಂದ ಭಾಷೆಗಳಲ್ಲಿ ಸಮಾನ ಪ್ರಮಾಣಗಳು ಬೆಳೆಯಲಾಗದೆ ಪ್ರಾಂತಭಾಷಾರೂಪಗಳು ಹುಟ್ಟಿಕೊಂಡಿವೆ. ಭಾರತದ ಪ್ರಮುಖ ಭಾಷೆಗ

ಳೆಂದರೆ, (ಬರ್ಮಾದೇಶದ ಹೊರತಾಗಿ) ಹಿಂದೂಸ್ತಾನಿ (ಹಿಂದಿ ಮತ್ತು ಉರ್ದುಗಳೆಂಬ ಎರಡು ಪ್ರಭೇದಗಳನ್ನೊಳಗೊಂಡು), ಬಂಗಾಳಿ, ಗುಜರಾತಿ, ಮರಾಠಿ ತಮಿಳು, ತೆಲುಗು, ಮಲೆಯಾಳ ಮತ್ತು ಕನ್ನಡ ಅಸ್ಸಾಮೀ, ಒರಿಯಾ, ಸಿಂಧಿ, ಪುಷ್ಟು, ಮತ್ತು ಪಂಜಾಬಿ ಇವುಗಳನ್ನೂ ಸೇರಿಸಿದರ, ಕೆಲವು ಬೆಟ್ಟಗಾಡುಗಳನ್ನುಳಿದು, ಭಾರತವೆಲ್ಲಾ ಸೇರಿದಂತಾಗುತ್ತದೆ ಇವುಗಳಲ್ಲಿ ಉತ್ತರ, ಮಧ್ಯ, ಮತ್ತು ಪಶ್ಚಿಮ ಭಾರತಗಳನ್ನು ಆವರಿಸಿರುವ ಇಂಡೊ–ಆರ್ಯನ್ ಭಾಷೆಗಳು ಪರಸ್ಪರ ನಿಕಟವಾದ ಸಂಬಂಧವನ್ನು ಹೊಂದಿವೆ, ದಕ್ಷಿಣದ ದ್ರಾವಿಡಭಾಷೆಗಳು ಭಿನ್ನರೀತಿಯವಾದರೂ ಕೂಡ ಬಹಳ ಮಟ್ಟಿಗೆ ಸಂಸ್ಕೃತದ ಪ್ರಭಾವವನ್ನು ಹೊಂದಿ ವಿಪುಲವಾಗಿ ಸಂಸ್ಕೃತ ಪದಗಳಿಂದ ತುಂಬಿವೆ

ಮೇಲೆ ವಿಶದೀಕರಿಸಿದ ಎಂಟು ಪ್ರಮುಖಭಾಷೆಗಳೂ, ಪ್ರಾಚೀನವೂ ಬೆಲೆಬಾಳತಕ್ಕವೂ ಆದ ಸಾಹಿತ್ಯಗಳನ್ನೊಳಗೊಂಡಿವೆ, ಮತ್ತು ಇವುಗಳಲ್ಲಿ ಪ್ರತಿಯೊಂದೂ ನಿಷ್ಕೃಷ್ಟವಾದ ವಿಶಾಲ ಪ್ರಾಂತಗಳಲ್ಲಿ ಬಳಕೆಯ ಭಾಷೆಯಾಗಿದೆ ಹೀಗೆ ಒಂದು ಭಾಷೆಯನ್ನು ಮಾತನಾಡುವ ಜನಸಂಖ್ಯೆಯ ದೃಷ್ಟಿಕೋನದಿಂದ ಈ ಭಾಷೆಗಳು ಜಗತ್ತಿನ ಪ್ರಮುಖ ಭಾಷಗಳಲ್ಲಿ ಸೇರಿವೆ ಐದು ಕೋಟಿ ಮಂದಿ ಬಂಗಾಳಿಯನ್ನು ಮಾತಾಡುತ್ತಾರ ಹಿಂದೂಸ್ತಾನಿಯ ವಿಷಯದಲ್ಲಾದರೋ, ಅದರ ಅನೇಕ ವ್ಯತ್ಯಾಸಗಳೊಡನೆ, ನಾನು ಭಾವಿಸುವಂತೆ (ನನ್ನಲ್ಲಿ ಈಗ ಖಚಿತವಾದ ಅಂಕಿಗಳಿಲ್ಲ) ಭಾರತದಲ್ಲಿ ಹದಿನಾಲ್ಕು ಕೋಟಿ ಜನ ಅದನ್ನು ಉಪಯೋಗಿಸುತ್ತಿದ್ದಾರೆ, ಮತ್ತು ನಾಡಿನಲ್ಲೆಲ್ಲಾ ಬಹು ಸಂಖ್ಯಾತರಾದ ಇತರರೂ ಇದನ್ನು ಅಂಶತಃ ಅರಿತಿದ್ದಾರ * ಇಂಥ ಭಾಷೆಗೆ ಸ್ವಾಭಾವಿಕವಾಗಿ ಬಹು ದೊಡ್ಡ ಭವಿಷ್ಯತ್ತಿದೆ ಇದು ಸಂಸ್ಕೃತ ಭಾಷೆಯ ಗಟ್ಟಿಗಡತವಾದ ತಳಪಾಯದ ಮೇಲೆ ನಿಂತಿರುವುದಲ್ಲದೆ ಪರ್ಷಿಯನ್ ಭಾಷೆಯೊಡನೆ ನಿಕಟ ಸಂಬಂಧವನ್ನು ಹೊಂದಿದೆ ಹೀಗೆ ಈ ಭಾಷೆಯು ಎರಡು ಸಂಪದ್ಯುಕ್ತ ಉತ್ಪತ್ತಿ ಕೇಂದ್ರಗಳಿಂದ ಜೀವರಸಾಸ್ವಾದನೆಮಾಡಿಕೊಳ್ಳಬಹುದಾಗಿದೆ ಕೆಲವು ವರ್ಷಗಳಿಂದೀಚೆಗೆ ಇಂಗ್ಲಿಷ್‌ನಿಂದಲೂ ಇದು ರಸವನ್ನು ತುಂಬಿಕೊಂಡಿದೆ ಹಿಂದೂಸ್ಥಾನಿಯು ವಿದೇಶಿ ಭಾಷೆಯೆಂದು ಪರಿಗಣಿತವಾಗಿರುವುದು ದಕ್ಷಿಣದ ದ್ರಾವಿಡದೇಶವೊಂದರಲ್ಲೇ, ಆದರೆ ಅಲ್ಲಿಯ ಜನರು ಇದನ್ನು ಕಲಿತುಕೊಳ್ಳಲು ಬಹಳ ಶ್ರಮಿಸುತ್ತಿದ್ದಾರೆ ಈಗ್ಗೆ ಎರಡು ವರ್ಷಗಳ ಹಿಂದೆ (೧೯೩೨ರಲ್ಲಿ) ದಕ್ಷಿಣ ದೇಶದಲ್ಲಿ ಹಿಂದೀಭಾಷೆಯನ್ನು ಕಲಿಸುವ ಕಾರ್ಯವನ್ನು ಕೈಗೊಂಡಿದ್ದ ಖಾಸಗಿಯಾದ ಸ್ವಪ್ರೇರಿತ ಸಂಘ

* ಹಿಂದೂಸ್ಥಾನಿಯ ಪರವಾಗಿ ಮಾತನಾಡತಕ್ಕವರು ಈ ಕೆಳಗೆಕಂಡ ಸಂಖ್ಯಾವಿವರಗಳನ್ನು ಕೊಟ್ಟಿದ್ದಾರೆ ಈ ಸಂಖ್ಯೆಗಳು ೧೯೩೧ ರ ಗಣತಿಯ ಅಥವಾ ಹಿಂದಿನ ೧೯೨೧ ರ ಗಣತಿಯನ್ನು ಅವಲಂಬಿಸಿ ಸೂಚಿಸಲ್ಪಟ್ಟವೆಯೋ ಏನೋ ನನಗೆ ತಿಳಿಯದು ಈ ಸಂಖ್ಯಾವಿವರಗಳು ೧೯೨೧ನ್ನು ಕುರಿತವಾಗಿವೆಯೆಂದು ನಾನು ಭಾವಿಸುತ್ತೇನೆ, ಮತ್ತು ಇಂದಿನ ಸಂಖ್ಯೆಗಳನ್ನು ಪರಿಗಣಿಸಿದರೆ ಪ್ರತಿಯೊಂದು ಭಾಗದಲ್ಲೂ ಏರನ್ನು ಸೂಚಿಸುತ್ತವೆ

ವೊಂದರ ಕೆಲವು ಅಂಕಿಗಳನ್ನು ನಾನು ನೋಡಿದೆ ಈ ಸಂಘವು ಸ್ಥಾಪಿತವಾದ ಮೇಲೆ ಎಂದರೆ ಕಳೆದ ಹದಿನಾಲ್ಕು ವರ್ಗಗಳಲ್ಲಿ ಈ ಸಂಘದ ಸತತವಾದ ಪ್ರಯತ್ನದಿಂದ ಮದ್ರಾಸ್ ಆಧಿಪತ್ಯವೊಂದರಲ್ಲೇ ೫,೫೦,೦೦೦ ಮಂದಿ ಹಿಂದಿಯನ್ನು ಕಲಿತುಕೊಂಡಿದ್ದಾರೆಂದು ವ್ಯಕ್ತವಾಗಿದೆ ಸರಕಾರದಿಂದ ಯಾವ ನೆರವನ್ನೂ ಪಡೆಯದ ಒಂದು ಸ್ವಪ್ರೇರಿತ ಪ್ರಯತ್ನದ ದೃಷ್ಟಿಯಿಂದ ಈ ಕಾರ್ಯವು ಅದ್ಭುತವಾದುದು, ಮತ್ತು ತಾವೇ ಸ್ವಂತವಾಗಿ ಹಿಂದಿಯನ್ನು ಕಲಿತುಕೊಳ್ಳುವ ಜನರಲ್ಲನೇಕರು ತಾವೇ ಭಾಷಾ ಕಾರ್ಯದಲ್ಲಿ ಪ್ರಚಾರಕರಾಗುತ್ತಾರೆ

ಹಿಂದೂಸ್ಥಾನಿಯು ಭಾರತದ ಸಾಮಾನ್ಯ ಭಾಷೆಯಾಗುವುದೆಂಬುದರಲ್ಲಿ ನನಗಾವ ಸಂದೇಹವೂ ಇಲ್ಲ ಇಷ್ಟೇಕೆ, ಇಂದು ಇದು ವಾಸ್ತವವಾಗಿ ಸಾಮಾನ್ಯ ವ್ಯವಹಾರಗಳಲ್ಲಿ ಉಪಯೋಗಿಸಲ್ಪಡುತ್ತಿದೆ ನಾಗರಿ ಅಥವಾ ಪರ್ಷಿಯನ್ ಎಂದು ಲಿಪಿ ಸಂಬಂಧವಾದ ಅವಿವೇಕಪೂರಿತದ ಜಿಜ್ಞಾಸಗಳಿಂದಲೂ ಮತ್ತು ಅತಿಯಾಗಿ ಸಂಸ್ಕೃತವಾಗಿಸಿಯೋ ಇಲ್ಲವೇ ಅತಿಯಾಗಿ ಪರ್ಷಿಯನ್ನಾಗಿಸಿಯೋ ಭಾಷೆಯನ್ನು ಉಪಯೋಗಿಸಬೇಕೆಂದಿರುವ ಎರಡು ಪಂಗಡದ ಜನಗಳ ತಪ್ಪುದಾರಿಯನ್ನು ಹಿಡಿದ ಪ್ರಯತ್ನಗಳಿಂದಲೂ ಅದರ ಪ್ರಗತಿಗೆ ಅಡ್ಡಿಯುಂಟಾಗುತ್ತಿದೆ ಈ ಲಿಪಿಜಂಜಡದಿಂದ ಪಾರಾಗಲು ಬೇರೆ ಮಾರ್ಗವೇ ಇಲ್ಲ ಏಕೆಂದರ ಈ ವಿಷಯವು ತುಂಬಾ ಕಾವನ್ನೂ ಉದ್ರೇಕವನ್ನೂ ಕೆರಳಿಸುತ್ತದೆ ಎರಡು ಮಾರ್ಗಗಳನ್ನೂ ಅಧಿಕಾರಯುತವಾಗಿ ಹಿಡಿದು, ಇವೆರಡನ್ನೂ ಉಪಯೋಗಿಸುವಂತೆ ಜನಕ್ಕೆ ಅವಕಾಶಕೊಡುವುದೊಂದೇ ಪರಿಹಾರ ಭಾಷಾ ಸಂಬಂಧವಾದ ತೀವ್ರ ಮನೋವೃತ್ತಿಗಳನ್ನು ನಿರುತ್ತೇಜನಗೊಳಿಸುವ ಪ್ರಯತ್ನ ನಡೆಯಬೇಕಾಗಿರುವುದಲ್ಲದೆ ಈಗ ಬಳಕೆಯಲ್ಲಿರುವ ಮಾತಿನ ಭಾಷೆಯ

| ಭಾಷೆ | ಕೋಟಿ |
|---|---|
| ಹಿಂದೂಸ್ಥಾನಿ (ಪಶ್ಚಿಮದ ಹಿಂದಿ, ಪಂಜಾಬಿ ಮತ್ತು ರಾಜಾಸ್ಥಾನಿಗಳ ಸಹಿತ) | ೧೩ ೯೩ |
| ಬಂಗಾಳಿ | ೫ ೯೩ |
| ತೆಲುಗು | ೨ ೩೬ |
| ಮರಾಠಿ | ೧ ೮೮ |
| ತಮಿಳು | ೧ ೮೮ |
| ಕನ್ನಡ | ೧ ೦೩ |
| ಒರಿಯ | ೧ ೦೧ |
| ಗುಜರಾತಿ | ೦ ೯೬ |
| ಒಟ್ಟು | ೨೬ ೯೮ |

ಪುಶ್ತು, ಅಸ್ಸಾಮಿ ಮತ್ತು ಭಾಷಾ ದೃಷ್ಟಿಯಿಂದಲೂ ಪ್ರಾಂತ ದೃಷ್ಟಿಯಿಂದಲೂ ಕೇವಲ ಪ್ರತ್ಯೇಕವಾದ ಬರ್ಮಾ ಮುಂತಾದ ಭಾಷೆಗಳನ್ನು ಈ ಪಟ್ಟಿಯಲ್ಲಿ ಬಿಡಲಾಗಿದೆ.

ಆಧಾರದ ಮೇಲೆ ಒಂದು ಮಧ್ಯಮ ತರಗತಿಯ ಸಾಹಿತ್ಯದ ಭಾಷೆಯನ್ನು ಬೆಳೆಯಿಸ ಬೇಕಾಗಿದೆ ಜನಜಂಗುಳಿಯ ವಿದ್ಯಾಭ್ಯಾಸದಿಂದ ಇದು ಅನಿವಾರ್ಯವಾಗಿ ಒದಗತಕ್ಕ ದ್ದಾಗಿದೆ ಸಾಹಿತ್ಯದ ಅಭಿರುಚಿ ಮತ್ತು ಶೈಲಿಗಳ ಪರವಾಗಿ ಮಾತನಾಡತಕ್ಕವ ರೆಂದು ಭಾವಿಸಲ್ಪಟ್ಟಿರುವ ಅಲ್ಪಸಂಖ್ಯಾತರಾದ ಮಧ್ಯಮ ತರಗತಿಯ ಕೆಲವು ಜನರ ಗುಂಪುಗಳು ಪ್ರತಿಯೊಂದೂ ತನ್ನ ತನ್ನ ರೀತಿಯಲ್ಲಿ ಬಹಳ ಸಂಕುಚಿತ ಮನಸ್ಸನ್ನು ಹೊಂದಿವೆಯಲ್ಲದೆ ಪೂರ್ವ ಸಂಪ್ರದಾಯಕ್ಕೆ ಕಟ್ಟುಬಿದ್ದವಾಗಿಯೂ ಇವೆ ಇವು ಜೀವವಿಲ್ಲದ ಪ್ರಾಚೀನ ಸ್ವರೂಪಗಳನ್ನು ನೆಮ್ಮಿಕೊಂಡಿವೆ, ಮತ್ತು ಸ್ವಂತ ಜನ ಸಮುದಾಯದೊಡನೆಯೂ ವಿಶ್ವಸಾಹಿತ್ಯದೊಡನೆಯೂ ಸಂಪರ್ಕವನ್ನೇ ಪಡೆದಿಲ್ಲ

ಭಾರತದ ಇತರ ಪ್ರಮುಖ ಭಾಷೆಗಳಾದ—ಬಂಗಾಳಿ, ಗುಜರಾತಿ, ಮರಾಠಿ ಒರಿಯ ಮತ್ತು ದಕ್ಷಿಣದ ದ್ರಾವಿಡ ಭಾಷೆಗಳ ನಿರಂತರವಾದ ಉಪಯೋಗ ಮತ್ತು ಸಂಪದಭ್ಯುದಯದೊಂದಿಗೆ ಹಿಂದೂಸ್ಥಾನಿಯ ಬೆಳವಣಿಗೆ ಮತ್ತು ವ್ಯಾಪನೆಗಳು ಘರ್ಷಣೆ ಮಾಡಕೂಡದು ಮತ್ತು ಮಾಡುವುದಿಲ್ಲ ಈ ಭಾಷೆಗಳಲ್ಲಿ ಕೆಲವಂತೂ ಈಗಾಗಲೇ ಹಿಂದೂಸ್ಥಾನಿಗಿಂತ ಬಹಳಮಟ್ಟಿಗೆ ಹೆಚ್ಚು ಜಾಗೃತವಾಗಿ ಮೇಲಾದ ಬೌದ್ಧಿಕ ಚಟುವಟಿಕೆಯನ್ನು ಹೊಂದಿವೆ ಈ ಭಾಷೆಗಳು ಆಯಾ ಪ್ರಾಂತಗಳಲ್ಲಿ ವಿದ್ಯಾಭ್ಯಾಸ ಮತ್ತು ಇತರ ಕಾರ್ಯಗಳಿಗಾಗಿ ಸರಕಾರಿ ಭಾಷೆಗಳಾಗಿರಬೇಕು ಇವು ಗಳ ಮೂಲಕವೇ ಜನಜಂಗುಳಿಯಲ್ಲಿ ವಿದ್ಯಾಭ್ಯಾಸ ಮತ್ತು ಸಂಸ್ಕೃತಿಗಳನ್ನು ಜಾಗ್ರತೆ ಯಾಗಿ ಹರಡಲು ಸಾಧ್ಯ

ಇಂಗ್ಲಿಷು ಭಾರತದ ಸಾಮಾನ್ಯ ಭಾಷೆಯಾಗಬಹುದೆಂದು ಕೆಲವರ ಭಾವನೆ. ಎಲ್ಲೋ ಸ್ವಲ್ಪ ಮಂದಿ ಮೇಲ್ತರಗತಿಯ ಕಲಿತವರನ್ನು ಬಿಟ್ಟರೆ, ಉಳಿದವರಿಗೆ ಇದು ಅನ್ವಯಿಸುವುದೆಂಬುದು ನನಗೆ ವಿಕಟ ವಿಚಿತ್ರ ಕಲ್ಪನೆಯಾಗಿದೆ ಜಂಗುಳಿಶಿಕ್ಷಣ ಮತ್ತು ಸಂಸ್ಕೃತಿಯ ಸಮಸ್ಯೆಗೆ ಇದು ಸಂಬಂಧಿಸಿಲ್ಲ ಈಗ ಸ್ವಲ್ಪಮಟ್ಟಿಗೆ ಇರುವಂತೆ, ಇಂಗ್ಲಿಷ್ ಭಾಷೆಯು, ಪಾರಿಭಾಷಿಕ, ವೈಜ್ಞಾನಿಕ ಮತ್ತು ವಾಣಿಜ್ಯ ವ್ಯವಹಾರ ಗಳಿಗೂ ವಿಶೇಷತರವಾಗಿ ಅಂತರರಾಷ್ಟ್ರೀಯ ಸಂಪರ್ಕಗಳನ್ನಿಟ್ಟುಕೊಳ್ಳುವುದಕ್ಕೂ ಬಹುಮಟ್ಟಿಗೆ ಸಾಧಕವಾದರೂ ಆಗಬಹುದು ಜಗತ್ತಿನ ಭಾವನೆಗಳು ಮತ್ತು ಚಲನ ವಲನಗಳ ಸಂಪರ್ಕವನ್ನಿಟ್ಟುಕೊಂಡಿರುವುದಕ್ಕೆ ನಮ್ಮಲ್ಲನೇಕರು ವಿದೇಶೀ ಭಾಷೆ ಗಳನ್ನು ಕಲಿತುಕೊಳ್ಳಬೇಕಾದುದು ಅಗತ್ಯ ಇಂಗ್ಲಿಷ್ ಭಾಷೆಯ ಜೊತೆಗೆ ಫ್ರೆಂಚ್, ಜರ್ಮನ್, ರಷ್ಯನ್, ಸ್ಪ್ಯಾನಿಷ್, ಇಟ್ಯಾಲಿಯನ್ ಮುಂತಾದ ಇತರ ಭಾಷೆಗಳನ್ನು ಕಲಿತುಕೊಳ್ಳುವುದನ್ನೂ ನಮ್ಮ ವಿಶ್ವವಿದ್ಯಾನಿಲಯಗಳು ಪ್ರೋತ್ಸಾಹಿಸಬೇಕೆಂದು ನನ್ನ ಬಯಕೆ ಎಂದರೆ ಇಂಗ್ಲಿಷ್ ಭಾಷೆಯನ್ನು ನಿರಾಕರಿಸಬೇಕೆಂದು ಅರ್ಥವಲ್ಲ. ಆದರೆ ಜಗತ್ತನ್ನು ಸಮತೂಕದ ಒಂದು ದೃಷ್ಟಿಯಿಂದ ನೋಡಬೇಕಾದರೆ ನಾವು ಇಂಗ್ಲಿಷ್ ಕನ್ನಡಕವೊಂದನ್ನೇ ಧರಿಸುವ ಅಭ್ಯಾಸವನ್ನಿಟ್ಟುಕೊಳ್ಳಬಾರದು.

ಈ ಒಂದು ಮುಖ್ಯ ಮತ್ತು ಕಲ್ಪನವಿಜ್ಞಾನಕ್ಕೆ ವಿಶೇಷ ಗಮನಕೊಟ್ಟು ನಾವು ಈಗಾಗಲೇ ನಮ್ಮ ಮಾನಸಿಕ ದೃಷ್ಟಿಕ್ಷೇಪದಲ್ಲಿ ಸಮತೂಕಕೆಟ್ಟವರಾಗಿದ್ದೇವೆ, ಮತ್ತು ನಮ್ಮ ರಾಷ್ಟ್ರೀಯತಾವಾದಿಗಳಲ್ಲಿ ಉಗ್ರವಾದಿಗಳಾದ ಹಲವರೂ ಕೂಡ ಭಾರತಕ್ಕೆ ಸಂಬಂಧಪಟ್ಟ ಈ ಬ್ರಿಟಿಷ್ ದೃಷ್ಟಿಕ್ಷೇಪದಿಂದ ತಾವೆಷ್ಟುಮಟ್ಟಿಗೆ ಅದುಮಿಕಿಷ್ಕಿಂಧಿಸಲ್ಪಟ್ಟಿದ್ದಾರೆಂಬುದನ್ನು ಅರಿಯಲಾರದವರಾಗಿದ್ದಾರೆ

ಇತರ ವಿದೇಶಿ ಭಾಷೆಗಳಿಗೆ ನಾವು ಎಷ್ಟೇ ಉತ್ತೇಜನವಿತ್ತರೂ ಬಾಹ್ಯ ಜಗತ್ತಿನೊಡನೆ ನಮ್ಮ ಸಂಬಂಧವನ್ನಿಟ್ಟುಕೊಳ್ಳಲು ಇಂಗ್ಲಿಷ್ ಭಾಷೆ ಮುಖ್ಯತಂತುವಾಗಿಯೇ ಇರತಕ್ಕದ್ದಾಗಿದೆ ಹಾಗೆ ಇರಬೇಕಾದದ್ದೆ ಇಂಗ್ಲಿಷನ್ನು ಕಲಿತುಕೊಳ್ಳಲು ನಾವು ಕಳೆದ ಎಷ್ಟೋ ತಲೆಮಾರುಗಳಿಂದ ಪ್ರಯತ್ನಿಸುತ್ತಿದ್ದೇವೆ, ಮತ್ತು ಈ ಪ್ರಯತ್ನದಲ್ಲಿ ನಾವು ಬಹುಮಟ್ಟಿಗೆ ಗೆಲುವನ್ನೂ ಪಡೆದಿದ್ದೇವೆ ನಮ್ಮ ಈ ದೀರ್ಘ ಶಿಕ್ಷಣದ ಫಲವನ್ನು ಪೂರ್ತಿಯಾಗಿ ಉಪಯೋಗಿಸಿಕೊಳ್ಳದೆ, ಈಗ ಇದನ್ನು ತೊಡೆದುಹಾಕಿಬಿಡುವುದು ತುಂಬಾ ತಪ್ಪು ಇಂಗ್ಲಿಷ್ ಭಾಷೆಯು ಇಂದು ಬಹಳ ವಿಸ್ತಾರವಾಗಿ ಹರಡಿದೆಯೆಂದೂ ಜಗತ್ತಿನ ಪ್ರಮುಖ ಭಾಷೆಯಾಗಿದೆಯೆಂದೂ ನಿಸ್ಸಂದೇಹವಾಗಿ ಹೇಳಬಹುದು, ಮತ್ತು ಇತರ ಭಾಷೆಗಳಿಗಿಂತ ಹೆಚ್ಚಾದ ಪ್ರಾಧಾನ್ಯವನ್ನೂ ಪ್ರಸಾರವನ್ನೂ ಪಡೆಯುತ್ತಿದೆ 'ಅಮೇರಿಕನ್' ಇದರ ಸ್ಥಾನವನ್ನು ಆಕ್ರಮಿಸಿಕೊಳ್ಳುವವರಗೂ ಈ ಇಂಗ್ಲಿಷ್ ಭಾಷೆಯು ಅಂತರರಾಷ್ಟ್ರೀಯ ಸಂಪರ್ಕವನ್ನು ಹೆಚ್ಚುಹೆಚ್ಚಾಗಿ ಕಲ್ಪಿಸುವ ಒಂದು ಸಾಧನವಾಗಿ, ರೇಡಿಯೋ ಮತ್ತು ಬ್ರಾಡ್‌ಕ್ಯಾಸ್ಟಿಂಗ್‌ಗಳ ಪ್ರಧಾನಾಂಗವಾಗಿರಬಹುದಾಗಿದೆ ಆದ್ದರಿಂದ ಇಂಗ್ಲಿಷ್ ಭಾಷಾಜ್ಞಾನ ಪ್ರಚಾರವನ್ನು ನಾವು ಕೈಗೊಳ್ಳಬೇಕು. ಈ ಭಾಷೆಯನ್ನು ಎಷ್ಟು ಚೆನ್ನಾಗಿ ಕಲಿತುಕೊಳ್ಳುವುದಕ್ಕೆ ಸಾಧ್ಯವಾದರೆ ಅಷ್ಟು ಚೆನ್ನಾಗಿ ಕಲಿತುಕೊಳ್ಳಬೇಕಾದುದು ಅಗತ್ಯ, ಆದರೆ ನಮ್ಮಲ್ಲಿ ಅನೇಕರು ಈಗ ಮಾಡುತ್ತಿರುವಂತೆ, ಇಂಗ್ಲಿಷಿನ ನವುರಾದ ಭಾಗವನ್ನು ಕಂಡು ಮನಮೆಚ್ಚುವ ಕಾಲಹರಣದ ಮತ್ತು ವೃಥಾಶ್ರಮದ ಕೆಲಸಕ್ಕೆ ಬಗೆಗೂಡುವುದು ಪ್ರಯೋಜನಕಾರಿಯೆಂದು ನನಗೆ ತೋರುವುದಿಲ್ಲ. ವ್ಯಕ್ತಿಗಳು ಮಾತ್ರ ಈ ಕೆಲಸವನ್ನು ಮಾಡಬಹುದು, ಆದರೆ ಇತರರಿಗೆ ಈ ಕೆಲಸವನ್ನು ಮೇಲ್ಪಂಕ್ತಿಯಾಗಿಡತಕ್ಕದ್ದು ಜನದ ಮೇಲೆ ವೃಥಾ ಹೊರೆಯನ್ನು ಹೊರಿಸಿ ಇತರ ದಿಕ್ಕುಗಳಲ್ಲಿ ಅವರು ಮುಂದುವರಿಯುತ್ತಿರುವುದನ್ನು ತಡೆದಂತಾಗುತ್ತದೆ

'ಬೇಸಿಕ್ ಇಂಗ್ಲಿಷ್' ನಿಂದ ನಾನು ಇತ್ತೀಚಿಗೆ ಬಹುಮಟ್ಟಿಗೆ ಆಕರ್ಷಿತನಾಗಿದ್ದೇನೆ. ಇಂಗ್ಲಿಷನ್ನು ಹೀಗೆ ಸುಲಭಮಾಡುವುದರಿಂದ ಮಹಾ ಭವಿಷ್ಯವನ್ನು ಕಾಣಬಹುದಾಗಿದೆ. ಸ್ಟ್ಯಾಂಡರ್ಡ್ ಇಂಗ್ಲಿಷ್ ಭಾಷೆಯನ್ನು ಕಲಿಸಿಕೊಡುವ ಹವ್ಯಾಸವನ್ನು ಬಿಟ್ಟು ಈ ಬೇಸಿಕ್ ಇಂಗ್ಲಿಷನ್ನು ದೇಶೋವಿಶಾಲವಾಗಿ ಕಲಿಸುವ ಕೆಲಸವನ್ನು

ಕೈಗೊಳ್ಳುವುದು ಅಪೇಕ್ಷಣೀಯವಾಗಿದೆ ಸ್ಟ್ಯಾಂಡರ್ಡ್ ಇಂಗ್ಲಿಷನ್ನು ಆ ಶಾಖೆಯಲ್ಲಿ ಕೆಲಸಮಾಡುವವರಿಗೂ ವಿದ್ಯಾರ್ಥಿಗಳಿಗೂ ಬಿಟ್ಟುಬಿಡುವುದು ಲೇಸು

ಇಂಗ್ಲೀಷಿನಿಂದಲೂ ಇತರ ವಿದೇಶಿ ಭಾಷೆಗಳಿಂದಲೂ ಅನೇಕ ಶಬ್ದಗಳನ್ನು ತಂದುಕೊಂಡು, ಹಿಂದೂಸ್ತಾನೀ ಭಾಷೆಯು ಜೀವ ತುಂಬಿಕೊಳ್ಳಬೇಕೆಂದು ವ್ಯಕ್ತಿತಃ ನಾನು ಉತ್ತೇಜನಕೊಡಬಯಸುತ್ತೇನೆ ಆಧುನಿಕ ಪದಪ್ರಯೋಗಗಳು ನಮ್ಮಲ್ಲಿಲ್ಲ ವಾದುದರಿಂದ ಇದು ಅಗತ್ಯ, ನೂತನವೂ ಕ್ಲಿಷ್ಟವೂ ಆದ ಶಬ್ದಗಳನ್ನು ಸಂಸ್ಕೃತ, ಪರ್ಷಿಯನ್ ಅಥವಾ ಅರಾಬಿಕ್ ಭಾಷೆಗಳಿಂದ ತಂದುಕೊಳ್ಳುವುದಕ್ಕೆ ಪ್ರತಿಯಾಗಿ ಬಳಕೆಯಲ್ಲಿರುವ ಪದಗಳನ್ನೇ ಪ್ರಯೋಗಿಸುವುದು ಶ್ರೇಯಸ್ಕರ ಭಾಷಾವಿಷಯದಲ್ಲಿ ಪರಿಶುದ್ಧ ಭಾವನೆಗಳನ್ನುಳ್ಳವರು ಭಾಷೆಯಲ್ಲಿ ವಿದೇಶಿ ಪದಗಳ ಪ್ರಯೋಗವನ್ನು ಆಕ್ಷೇಪಿಸುತ್ತಾರ, ಆದರೆ ಈ ವಿಷಯದಲ್ಲಿ ಅವರು ದೊಡ್ಡ ತಪ್ಪನ್ನು ಮಾಡುತ್ತಾರೆಂದು ನನ್ನ ಭಾವನೆ ಏಕೆಂದರೆ, ನಮ್ಮ ಭಾಷೆಯನ್ನು ಸಂಪದ್ಯುಕ್ತವನ್ನಾಗಿ ಮಾಡಬೇಕಾದರೆ, ಅದನ್ನು ಮಿದುಗೊಳಿಸಿ ವಿದೇಶಿಯ ಭಾಷೆಗಳ ಮಾತುಗಳನ್ನೂ ಭಾವನೆಗಳನ್ನೂ ಅದು ಮೈಗೂಡಿಸಿಕೊಳ್ಳುವಂತೆ ಮಾಡುವುದೇ ಸರಿಯಾದ ಮಾರ್ಗವಾಗಿದೆ

ನನ್ನ ತಂಗಿಯ ಮದುವೆಯಾದ ಕೂಡಲೇ ನಾನು ಹಳೆಯ ಗೆಳೆಯ ಮತ್ತು ಸಹೋದ್ಯೋಗಿ ಶಿವಪ್ರಸಾದ ಗುಪ್ತರನ್ನು ನೋಡಲು ಕಾಶಿಗ ಹೋಗಬೇಕಾಗಿ ಬಂದಿತು ಅವರು ಒಂದು ವರ್ಷಕ್ಕಿಂತ ಹೆಚ್ಚಾಗಿ ರೋಗದಿಂದ ಮಲಗಿದ್ದರು ಅವರಿಗೆ ಹಠಾತ್ತಾಗಿ ಪಕ್ಷವಾತ ಹೊಡೆದಾಗ ಅವರು ಲಕ್ನೋ ನೆರೆಮನೆಯಲ್ಲಿದ್ದು, ಆಗಿನಿಂದಲೂ ಬಹು ಸಾವಕಾಶವಾಗಿ ಚೇತರಿಸಿಕೊಳ್ಳುತ್ತಿದ್ದರು ನಾನು ಕಾಶಿಯಲ್ಲಿದ್ದಾಗ್ಗೆ ಒಂದು ಪುಟ್ಟ ಹಿಂದೀ ಸಾಹಿತ್ಯ ಸಂಘವು ನನಗೊಂದು ಮಾನಪತ್ರವನ್ನರ್ಪಿಸಿತು, ಸಂಘದ ಸದಸ್ಯರೊಡನೆ ನಾನು ಲೋಕಾಭಿರಾಮವಾಗಿ ಮಾತುಕತೆಯಾಡಿದ ನನಗೆ ಹೆಚ್ಚಾಗಿ ಗೊತ್ತಿಲ್ಲದ ವಿಷಯಗಳನ್ನು ಕುರಿತು ಪ್ರವೀಣರೊಡನೆ ಮಾತನಾಡಲು ಹಿಂತೆಗೆಯುತ್ತೇನೆಂದು ಹೇಳಿದೆ, ಆದರೂ ನಾನವರಿಗೆ ಕೆಲವು ಸಲಹೆಗಳನ್ನಿತ್ತೆ ಹಿಂದೀ ಬರವಣಿಗೆಯಲ್ಲಿ, ವಾಡಿಕೆಯಲ್ಲಿ ಬಂದಿರತಕ್ಕ ಹೆಣೆದುಕೊಂಡ, ಆಲಂಕಾರಿಕವಾದ, ಕ್ಲಿಷ್ಟ ಸಂಸ್ಕೃತಪದಪ್ರಪೂರ್ಣವಾದ, ಕೃತಕವಾದ ಮತ್ತು ಪ್ರಾಚೀನ ನಿಯಮಬದ್ಧ ಭಾಷೆಯನ್ನು ನಾನು ವಿಮರ್ಶಿಸಿ ಮಾತನಾಡಿದೆ. ಆಯ್ದ ಕೇವಲ ಕೆಲವೇ ಮಂದಿಯನ್ನು ಉದ್ದೇಶಿಸಲರ್ಹವಾದ ಈ ಒಡ್ಡೋಲಗದ ಭಾಷೆಯು ಪರಿತ್ಯಜಿಸಲ್ಪಡಬೇಕೆಂದೂ ಹಿಂದೀ ಲೇಖಕರು ಜನಸಾಮಾನ್ಯರು ಅರ್ಥಮಾಡಿಕೊಳ್ಳುವ ಭಾಷೆಯಲ್ಲಿ ಜನಜುಂಗುಳಿಗಾಗಿಯೇ ಬರೆಯಬೇಕೆಂದೂ ಸಲಹೆಕೊಡುವ ಧೈರ್ಯವನ್ನು ಮಾಡಿದೆ ಜನಸಮುದಾಯ ಸಂಪರ್ಕಗಳು ಭಾಷೆಗೆ ಒಂದು ಹೊಸ ಜೀವವನ್ನೂ ನಿಷ್ಕೃಹತೆಯನ್ನೂ ಕೊಡುವುದು, ಮತ್ತು ಲೇಖಕರು ತಾವಾಗಿಯೇ ಜನಸಾಮಾನ್ಯದ ರಾಗಾತ್ಮಕ ಚೈತನ್ಯದ ಸ್ವಲ್ಪವನ್ನು ಬಗೆಗೊಂಡು ಇನ್ನೂ ಒಳ್ಳೆಯ ಕೆಲ

ಸವನ್ನು ಮಾಡುವರು ಹಿಂದೀ ಗ್ರಂಥಕರ್ತರು ಪಾಶ್ಚಾತ್ಯ ಆಲೋಚನೆಗಳಿಗೂ ವಾಙ್ಮಯಕ್ಕೂ ಹೆಚ್ಚು ಗಮನಕೊಟ್ಟರೆ ಅದರಿಂದ ಅವರು ಬಹಳ ಉಪಯೋಗಪಡೆಯ ಬಹುದು, ಐರೋಪ್ಯ ಭಾಷೆಗಳಲ್ಲಿಯ ಪ್ರೌಢಗ್ರಂಥಗಳಿಂದಲೂ ಹಾಗೂ ಆಧುನಿಕ ಭಾವನೆಗಳನ್ನು ಕುರಿತು ವಿಚಾರಮಾಡತಕ್ಕ ಗ್ರಂಥಗಳಿಂದಲೂ ಭಾಷಾಂತರಗಳನ್ನು ಮಾಡುವುದು ಅಪೇಕ್ಷಣೀಯವಾಗಿದೆ, ಎಂದು ನಾನು ಸೂಚಿಸಿದೆ ಆಧುನಿಕ ಬಂಗಾಳಿ, ಗುಜರಾತಿ, ಮತ್ತು ಮರಾಠಿ ಭಾಷೆಗಳು ಈ ವಿಷಯಗಳಲ್ಲಿ ಆಧುನಿಕ ಹಿಂದಿಗಿಂತ ಸ್ವಲ್ಪ ಮುಂದುವರಿದಿರುವುದೆಂದೂ ಬಂಗಾಳಿಯಲ್ಲಿ ಇತ್ತೀಚಿಗೆ ಹಿಂದಿಗಿಂತ ಹೆಚ್ಚಾದ ಕ್ರಿಯಾತ್ಮಕವಾದ ಕೆಲಸವು ಮಾಡಲ್ಪಟ್ಟಿರುವುದೆಂದೂ ನಾನು ಹೇಳಿದೆ

ಈಯೆಲ್ಲ ವಿಷಯಗಳ ಬಗ್ಗೆ ನಾವು ಸ್ನೇಹಪರವಾಗಿ ಮಾತನಾಡಿದೆವು, ಆಮೇಲೆ ನಾನು ಅಲ್ಲಿಂದ ಹೊರಟು ಬಂದುಬಿಟ್ಟೆ ನನ್ನ ಈ ಅಭಿಪ್ರಾಯಗಳು ಪತ್ರಿಕೆಗಳಿಗೆ ಕಳುಹಿಸಲ್ಪಡುವುವೆಂಬ ಭಾವನೆ ನನಗಿರಲಿಲ್ಲ ಆದರೆ ಆಗ ಅಲ್ಲಿದ್ದ ಯಾರೋ ಒಬ್ಬರು ನನ್ನ ಮಾತನ್ನೆಲ್ಲ ಹಿಂದೀ ಪತ್ರಿಕೆಗಳಿಗೆ ಕಳುಹಿಸಿಕೊಟ್ಟಿದ್ದರು

ಹಿಂದೀ ಪತ್ರಿಕಾ ಪ್ರಪಂಚದಲ್ಲಿ ಆಮೇಲೆ ನನಗೆ ವಿರೋಧವಾಗಿ ದೊಡ್ಡ ಗುಲ್ಲೆದ್ದುಬಿಟ್ಟಿತು ನಾನು ಹಿಂದಿಯನ್ನು ವಿಮರ್ಶಿಸಿ, ಅನನುಕೂಲವಾದ ರೀತಿಯಲ್ಲಿ ಅದನ್ನು ಬಂಗಾಳಿ, ಗುಜರಾತಿ, ಮತ್ತು ಮರಾಠಿಗಳಿಗೆ ಹೋಲಿಸಿದೆನೆಂಬ ಪ್ರತಿಭಟನೆಯ ಕೂಗು ಎದ್ದಿತು ನಾನು ತಿಳಿಯದ ಮನುಷ್ಯನೆಂದು—ಈ ವಿಷಯದಲ್ಲಿ ನಾನು ನಿಜವಾಗಿಯೂ ತಿಳಿಯದವನಾಗಿಯೇ ಇದ್ದೆ—ಬರೆವಣಿಗೆಗಳಲ್ಲಿ ಸೂಚಿಸಲ್ಪಟ್ಟಿದ್ದಲ್ಲದೆ, ನನ್ನನ್ನು ಅದುಮಿ ಕೆಳಗೆಡಹಲು ಹಲವು ನಿಷ್ಠುರವಾದ ಮಾತುಗಳೂ ಪ್ರಯೋಗಿಸಲ್ಪಟ್ಟವು ಈ ಭಿನ್ನಾಭಿಪ್ರಾಯದ ಜಿಜ್ಞಾಸೆಯ ಸರಣಿಯನ್ನು ಹಿಡಿದು ಹೋಗಲು ನನಗೆ ಅವಕಾಶವಿರಲಿಲ್ಲ, ನಾನು ಮತ್ತೆ ಸೆರೆಮನೆಯನ್ನು ಸೇರುವವರೆಗೂ ಈ ಚರ್ಚೆ ಅನೇಕ ತಿಂಗಳವರೆಗೆ ನಡೆಯಿತೆಂದು ಕೇಳಿದೆ

ಈ ಪ್ರಸಕ್ತಿಯಿಂದ ಒಂದು ಅಂಶವು ಬೆಳಕಿಗೆ ಬಂದಿತು ಹಿಂದೀ ಸಾಹಿತಿಗಳ ಮತ್ತು ಪತ್ರಿಕೋದ್ಯೋಗಿಗಳ ಅಸಾಧಾರಣವಾದ ಸೂಕ್ಷ್ಮವೇದಿತ್ವವನ್ನೂ ಅವರಿಗೆ ಒಳ್ಳೆಯದನ್ನು ಬಯಸಿದವನೊಬ್ಬನು ಮಂಡಿಸಿದ ಸಣ್ಣ ನಿಸ್ಪೃಹ ವಿಮರ್ಶೆಯನ್ನು ತಡೆದುಕೊಳ್ಳಲು ಅವರು ಹೇಗೆ ನಿರಾಕರಿಸಿದರೆಂಬುದನ್ನೂ ಇದು ವ್ಯಕ್ತಪಡಿಸಿತು ಸ್ವೈಚ್ಛಾನುಸಂಧಾನವು ನಿಜವಾಗಿಯೂ ನೆಲೆಸಿತ್ತು ಆತ್ಮವಿಮರ್ಶೆಯ ಸುಳುವೇ ಇರಲಿಲ್ಲ, ವಿಮರ್ಶೆಯ ಮಾನದಂಡಗಳು ಕೀಳಾಗಿದ್ದುವು ವೈಯಕ್ತಿಕ ದುರುದ್ದೇಶಗಳಿವೆಯೆಂದು ಲೇಖಕನೂ ವಿಮರ್ಶಕನೂ ಒಬ್ಬರೊಡನೊಬ್ಬರು ಭಿನ್ನ ಭಾವನೆಯುಳ್ಳವರಾಗಿ ಪರಸ್ಪರ ಬೈದಾಡುವುದು ಸ್ವಾಭಾವಿಕವೇ ಆಗಿತ್ತು ಈ ಸಂಬಂಧವಾದ ಇಡೀ ದೃಷ್ಟಿಕ್ಷೇಪವು ಸಂಕುಚಿತವೂ ಮಧ್ಯಶ್ರೇಣಿಯದೂ ಮಿತ

ವ್ಯಾಪ್ತಿಯುಳ್ಳದ್ದೂ ಆಗಿತ್ತು , ಪತ್ರಿಕೋದ್ಯೋಗಿಗಳೂ ಗ್ರಂಥಕರ್ತೃಗಳೂ ವಿಶಾಲವಾದ ಜನಸಾಮಾನ್ಯವನ್ನೂ ಅದರ ಯೋಗಕ್ಷೇಮಗಳನ್ನೂ ಉಪೇಕ್ಷಿಸಿ ಕೇವಲ ತಮತಮಗೂ, ಒಂದು ಸಣ್ಣ ಗುಂಪಿಗೂ ಬರೆಯುವವರಂತೆ ಕಾಣುತ್ತಿದ್ದರು ಕಾರ್ಯಕ್ಷೇತ್ರವು ಇಷ್ಟು ದೊಡ್ಡದಾಗಿ, ಆಕರ್ಷಣೀಯವಾಗಿರುವಾಗ ಈ ಪ್ರಕರಣವು ಮಹಾ ಪಶ್ಚಾತ್ತಾಪಕರವೂ ಶಕ್ತಿಯ ಅಪವ್ಯಯವೂ ಆದುದೆಂದು ನನಗೆ ತೋರಿತು

ಹಿಂದೀ ಸಾಹಿತ್ಯವು ಗತವೈಭವನ್ನುಳ್ಳದ್ದಾಗಿದೆ, ಆದರೆ ಆ ಗತವೈಭವದ ಆಶ್ರಯದಿಂದಲೇ ಅದು ಎಂದೆಂದಿಗೂ ಜೀವಿಸಲಾರದು ಅದಕ್ಕೆ ಮಹತ್ತರವಾದ ಭವಿಷ್ಯವಿದೆಯೆಂದೂ ಹಿಂದೀ ಪತ್ರಿಕೋದ್ಯಮವು ನಾಡಿನಲ್ಲಿ ಒಂದು ಮಹಾಶಕ್ತಿಯಾಗುವುದೆಂದೂ ನನಗೆ ಭರವಸೆಯಿದೆ ಆದರೆ ಅದು ಸಂಕುಚಿತ ಸಂಪ್ರದಾಯಗಳನ್ನು ಒದರಿಬಿಟ್ಟು ಜನಜಂಗುಳಿಗಾಗಿಯೇ ಬರೆಯಲು ಧೈರ್ಯದಿಂದ ನಿಂತ ಹೊರತು ಇವೆರಡೂ ಹೆಚ್ಚಾಗಿ ಮುನ್ನಡೆಯಲಾರವು

## ೫೬

# ಕೋಮುವಾರು ಭಾವನೆ ಮತ್ತು ಪ್ರತೀಕಾರ

ನನ್ನ ತಂಗಿಯ ಮದುವೆಯು ನೆರವೇರಿದ ಕಾಲದ ಸರಿಸುಮಾರಿಗೆ ವಿಟ್ಠಲ ಭಾಯ್ ಜೆ ಪಟೇಲರು ಯೂರೋಪಿನಲ್ಲಿ ಮೃತರಾದರೆಂಬ ಸಮಾಚಾರವು ತಿಳಿದು ಬಂದಿತು ಅವರು ಬಹಳ ಕಾಲದಿಂದ ಅಸ್ವಸ್ಥರಾಗಿದ್ದರು, ಅವರ ಈ ಅನಾರೋಗ್ಯದ ಕಾರಣದಿಂದಲೇ ಭಾರತದಲ್ಲಿ ಅವರನ್ನು ಸೆರೆಮನೆಯಿಂದ ಬಿಡುಗಡೆ ಮಾಡಿದ್ದುದು ಅವರ ನಿಧನವು ಒಂದು ದುಃಖಕರವಾದ ಘಟನೆ, ನಮ್ಮ ಹೋರಾಟಗಳ ನಡುವೆ ಹಳೆಯ ಹುಲಿಗಳಾಗಿದ್ದ ನಮ್ಮ ಮುಂದಾಳುಗಳು ಒಬ್ಬರಾದ ಮೇಲೆ ಒಬ್ಬರಂತೆ ನಮ್ಮನ್ನು ಹೀಗೆ ಅಗಲಿಹೋಗುವರೆಂಬ ವಿಷಯವು ಬಹಳ ನಿರುತ್ಸಾಹಜನಕವಾಗಿತ್ತು ಪ್ರಶಂಸಾತ್ಮಕವಾದ ಅನೇಕ ಮಾತುಗಳು ವಿಟ್ಠಲಭಾಯ್‌ಯವರ ಬಗ್ಗೆ ಹೇಳಲ್ಪಟ್ಟುವು, ಇವುಗಳಲ್ಲ ಮುಕ್ಕಾಲುವಾಲು ಮಾತೆಲ್ಲ ಅವರ ಪಾರ್ಲಿಮೆಂಟರಿ ದಕ್ಷತೆಯನ್ನೂ ಭಾರತ ಶಾಸನ ಸಭೆಯ ಅಧ್ಯಕ್ಷರಾಗಿ ಅವರು ಗಳಿಸಿದ್ದ ಕೀರ್ತಿಯನ್ನೂ ಒತ್ತಿ ಪ್ರಶಂಸಿಸುವಂತಹುವಾಗಿದ್ದುವು ಇದು ಸಂಪೂರ್ಣ ವಾಸ್ತವಾಂಶವಾದರೂ ಮತ್ತೆ ಮತ್ತೆ ಅವರನ್ನು ಹೀಗೆ ಹೊಗಳಿ ಹೇಳುವ ಮಾತು ನನ್ನನ್ನು ರೇಗಿಸಿತು ಭಾರತದಲ್ಲಿ ಉತ್ತಮ ಪಾರ್ಲಿಮೆಂಟೇರಿಯನ್ನರಿಗಾಗಲಿ ಅಥವಾ ದಕ್ಷತೆಯಿಂದ ಅಧ್ಯಕ್ಷಸ್ಥಾನವನ್ನು ಅಲಂಕರಿಸುವ ಜನರಿಗಾಗಲಿ ವಾರಡಿ ಬಂದಿತ್ತೆ? ವಕೀಲಿ ಶಿಕ್ಷಣವನ್ನು ಪಡೆದಿದ್ದ ನಮಗೆ ಒಗ್ಗುವಂತಹುದಾಗಿದ್ದುದು ಅದೊಂದೇ ಕೆಲಸ ವಿಟ್ಠಲಭಾಯ್‌ಯವರು ಇದಕ್ಕಿಂತ ತುಂಬ ಹೆಚ್ಚಿನ ಯೋಗ್ಯತೆಯುಳ್ಳವರಾಗಿದ್ದರು—ಅವರು ಭಾರತದ ಸ್ವಾತಂತ್ರ್ಯಕ್ಕಾಗಿ ಹಿಮ್ಮೆಟ್ಟದೆ ಹೋರಾಡುವ ಪಟುಭಟರಾಗಿದ್ದರು

ನವೆಂಬರ್ ತಿಂಗಳಿನಲ್ಲಿ ಕಾಶಿಗೆ ಹೋಗಿದ್ದಾಗ್ಗೆ ಹಿಂದೂ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳನ್ನುದ್ದೇಶಿಸಿ ಭಾಷಣ ಮಾಡಲು ನಾನು ಆಹ್ವಾನಿತನಾಗಿದ್ದೆ ಈ ಆಹ್ವಾನವನ್ನು ನಾನು ಸಂತೋಷದಿಂದ ಅಂಗೀಕರಿಸಿ, ವಿಶ್ವವಿದ್ಯಾನಿಲಯದ ಸ್ಥಾಪನಪತಿಗಳಾದ ಪಂಡಿತ ಮದನ ಮೋಹನ ಮಾಳವೀಯರು ಅಧ್ಯಕ್ಷತೆ ವಹಿಸಿದ್ದ ಒಂದು ದೊಡ್ಡ ಸಭೆಯಲ್ಲಿ ಭಾಷಣ ಮಾಡಿದೆ ಭಾಷಣಕಾಲದಲ್ಲಿ ಕೋಮುವಾರು ವಿಷಯವನ್ನು ಕುರಿತು ನಾನು ಬಹಳ ಹೇಳುವುದಿತ್ತು, ನಾನು ಅದನ್ನೂ ಮುಖ್ಯವಾಗಿ ಹಿಂದೂ ಮಹಾಸಭೆಯ ಚಳವಳಿಗಳನ್ನೂ ಕಟುವಾದ ಭಾಷೆಯಲ್ಲಿ ಖಂಡಿಸಿ ಮಾತನಾಡಿದೆ. ಹೀಗೆ ಮೇಲೆ ಬೀಳಬೇಕೆಂದು ನಾನು ಮುಂದಾಗಿ ಆಲೋಚಿಸಿರಲಿಲ್ಲ ಆದರೆ ಬಹುದಿನಗಳಿಂದೀಚೆಗೆ ಎಲ್ಲ ಪಂಗಡಗಳಲ್ಲಿಯ ಕೋಮುವಾರು ಭಾವನೆಗಳ

ನ್ನುಳ್ಳವರು ನಡೆಸುತ್ತಿದ್ದ ಬಹುಮುಖವಾದ ಪ್ರತೀಕಾರಕ ಪ್ರಯತ್ನಗಳನ್ನು ಕಂಡು ನನ್ನ ಮನಸ್ಸು ತುಂಬ ರೋಸಿಹೋಗಿತ್ತು ಭಾಷಣದಲ್ಲಿ ವಿಷಯವನ್ನು ಅವಧಾರಣ ಮಾಡುತ್ತ ಹೋದಂತೆಲ್ಲ ನನ್ನ ಮನಸ್ಸಿನಲ್ಲಿದ್ದ ಈ ಕಟುಭಾವನೆಯು ಸ್ವಲ್ಪ ಹೊರ ಹೊಮ್ಮಿತು ಹಿಂದೂಗಳಲ್ಲಿ ಕೋಮುವಾರು ಭಾವನೆಗಳನ್ನುಳ್ಳವರ ಪ್ರತೀಕಾರಕ ಸ್ವಭಾವದ ಬಗ್ಗೆ ನಾನು ವಿಚಾರ ಮಾಡಿ ಒತ್ತಿ ಮಾತನಾಡಿದೆ, ಏಕೆಂದರೆ ಹಿಂದೂ ಸಭಿಕರ ಮುಂದೆ ನಾನು ಮುಸ್ಲಿಮರನ್ನು ಖಂಡಿಸಿ ಮಾತನಾಡುವ ಪ್ರಮೇಯವಿರಲಿಲ್ಲ ಬಹುಕಾಲದಿಂದ ಹಿಂದೂ ಮಹಾಸಭೆಯ ಆಧಾರಸ್ತಂಭಗಳಲ್ಲೊಬ್ಬರಾಗಿರುವ ಮಾಳವೀಯಜಿಯವರು ಅಧ್ಯಕ್ಷತೆ ವಹಿಸಿದ್ದ ಈ ಸಭೆಯಲ್ಲಿ ಹಿಂದೂ ಮಹಾ ಸಭೆಯನ್ನು ಖಂಡಿಸಿ ಮಾತನಾಡುವುದು ಉತ್ತಮಾಭಿರುಚಿಯಲ್ಲವೆಂದು ಆಗ ನನಗೆ ಹೊಳೆಯಲಿಲ್ಲ ಮಹಾ ಸಭೆಯೊಡನೆ ಹತ್ತಿರದ ಸಂಬಂಧವನ್ನು ಅವರು ಇತ್ತೀಚೆಗೆ ಇಟ್ಟುಕೊಂಡಿರಲಿಲ್ಲವಾದುದರಿಂದಲೂ ಹೊಸದಾಗಿ ಬಂದು ಸೇರಿದ್ದ ಹಿಂದೂ ಮಹಾಸಭೆಯ ಧೂರ್ತವರ್ತನದ ಮುಂದಾಳುಗಳು ಮಾಳವೀಯಜಿಯವರನ್ನು ಹಿಂದೂ ಮಹಾ ಸಭೆಯಿಂದ ಇನ್ನೇನು ಹೊರದೂಡಿದ್ದಂತೆ ತೋರಿದುದರಿಂದಲೂ ಆ ಸಮಯದಲ್ಲಿ ಈ ವಿಚಾರವು ನನಗೆ ಹೊಳೆಯಲಿಲ್ಲ ಅವರು ಮಹಾ ಸಭೆಯ ಪ್ರಮುಖ ಪ್ರಚೋದಕರಲ್ಲೊಬ್ಬರಾಗಿದ್ದವರಗೂ ಅದು ಕೋಮುವಾರು ಭಾವನಾಪೂರಿತವಾಗಿದ್ದರೂ ರಾಜಕೀಯವಾಗಿ ಪ್ರತೀಕಾರಕವಾಗಿರಲಿಲ್ಲ ಆದರೆ ಇತ್ತೀಚೆಗೆ ಈ ಹೊಸ ಬೆಳವಣಿಗೆಯು ಬಹಳ ಸ್ಪಷ್ಟವಾಗಿ ಕಂಡುಬಂದಿದೆ ಮಾಳವೀಯಜಿಯವರು ಇದರೊಡನಾವ ಸಂಬಂಧವನ್ನೂ ಇಟ್ಟುಕೊಂಡಿರಲಾರರೆಂದೂ ಇದಕ್ಕೆ ಅವರು ಸಮ್ಮತಿಸಿರಲಾರರೆಂದೂ ನಾನು ದೃಢವಾಗಿ ಮನಗಂಡೆ. ಆದರೂ ಅವರ ಆಹ್ವಾನವನ್ನು ನಾನು ಅತಿಯಾಗಿ ಉಪಯೋಗಿಸಿಕೊಂಡು ಅವರನ್ನು ಇಕ್ಕಟ್ಟಿಗೆ ಒಳಪಡಿಸುವಂತೆ ಮಾತನಾಡಿದುದು ಸರಿಯಲ್ಲವೆಂದು ನಾನು ಆಮೇಲೆ ತಿಳಿದುಕೊಂಡೆ ಇದಕ್ಕಾಗಿ ನಾನು ವಿಷಾದಿಸಿದೆ

ಒಂದು ತಿಳಿಗೇಡಿತನದ ತಪ್ಪಿಗೆ ಪಕ್ಕಾದುದಕ್ಕಾಗಿಯೂ ನಾನು ವಿಷಾದಿಸಿದೆ ಅಜ್ಮೀರ್‌ನಲ್ಲಿಯ ಒಂದು ಹಿಂದೂ ಯುವಜನ ಸಂಘವು ಈಚೆಗೆ ಅನುಮೋದಿಸಿತೆಂದು ಹೇಳಲ್ಪಟ್ಟ ಒಂದು ಠರಾವಿನ ಪ್ರತಿಯನ್ನು ನಮಗೆ ಯಾರೋ ಅಂಚೆಯಲ್ಲಿ ಕಳುಹಿಸಿದರು. ಈ ಠರಾವು ತುಂಬ ಆಕ್ಷೇಪಕರವಾಗಿದ್ದುದರಿಂದ ನನ್ನ ಕಾಶಿ ಭಾಷಣದಲ್ಲಿ ಇದನ್ನು ಕುರಿತು ಪ್ರಸ್ತಾಪಿಸಿದೆ ವಾಸ್ತವವಾಗಿ ಯಾವ ಸಂಸ್ಥೆಯೂ ಈ ತೆರನಾದ ಠರಾವನ್ನು ಒಪ್ಪಿ ನಿರ್ಧರಿಸಿರಲಿಲ್ಲ, ಹೀಗಾಗಿ ನಾವು ಒಂದು ಮೋಸಕ್ಕೆ ತುತ್ತಾದೆವು

ಪತ್ರಿಕೆಗಳಲ್ಲಿ ಸಂಕ್ಷೇಪವಾಗಿ ವರದಿಮಾಡಲ್ಪಟ್ಟ ನನ್ನ ಕಾಶಿ ಭಾಷಣವು ದೊಡ್ಡ ಗುಲ್ಲೆಬ್ಬಿಸಿಬಿಟ್ಟಿತು ಇಂಥ ಗಲಭೆಗಳು ನನಗೆ ಒಗ್ಗಿಹೋಗಿದ್ದರೂ ಹಿಂದೂ ಮಹಾ ಸಭೆಯ ಮುಖಂಡರ ಉಗ್ರವಾದ ಪ್ರತಿಭಟನೆಯನ್ನು ಕಂಡು ನಾನು ಬಹಳ

ಆಶ್ಚರ್ಯಚಕಿತನಾದ. ಈ ಪ್ರತಿಭಟನೆಗಳೆಲ್ಲ ಬಹುಮಟ್ಟಿಗೆ ವೈಯಕ್ತಿಕವಾಗಿದ್ದು ಎಲ್ಲೋ ಒಂದೊಂದು ವೇಳೆ ಮುಖ್ಯ ವಿಷಯಕ್ಕೆ ಸಂಬಂಧಿಸಿದುವಾಗಿದ್ದುವು. ಇವು ಮನಸ್ಸಿಗೆ ಬಂದಂತೆ ಹೆಚ್ಚಿಹೋದುವು. ಈ ವಿಷಯವಾಗಿ ನನ್ನ ಅಭಿಪ್ರಾಯವನ್ನು ತಿಳಿಸುವ ಅವಕಾಶ ನನಗೆ ಸಿಕ್ಕಿತಲ್ಲಾ ಎಂದು ನಾನು ಸಂತೋಷಿಸಿದೆ. ನಾನು ಸೆರೆಮನೆಯಲ್ಲಿದ್ದಾಗ ಕೂಡ ಕಳೆದ ಅನೇಕ ತಿಂಗಳುಗಳಿಂದೀಚೆಗೆ ಇದು ನನ್ನಲ್ಲಿ ತುಂಬಿ ತುಂಬುತ್ತ ಬಂದಿತ್ತು, ಆದರೆ ಇದನ್ನು ಹೇಗೆ ಹಿಡಿದು ಕೆಲಸಮಾಡ ಬೇಕೆಂಬುದು ನನಗೆ ತಿಳಿಯದಾಗಿತ್ತು. ಅದು ವರಟೆಗಳ ಗೂಡಾಗಿತ್ತು, ಅದರ ವಿಷಯವು ನನಗೆ ಚೆನ್ನಾಗಿ ತಿಳಿದಿದ್ದರೂ ಕೀಳು ಬೈಗುಳದಲ್ಲಿ ಕೊನೆಗಾಣುವ ಚರ್ಚೆಗಳಲ್ಲಿ ತೊಡಗುವುದು ಹಿತಕರವಾದ ಕೆಲಸವಾಗಿರಲಿಲ್ಲ. ಆದರೆ ಈಗ ನನಗೆ ಬೇರೆ ದಾರಿಯೇ ಇರಲಿಲ್ಲ. ಹಿಂದೂ ಮತ್ತು ಮುಸ್ಲಿಂ ಕೋಮುವಾರು ಭಾವನೆಯನ್ನು ಕುರಿತು ವಿವೇಚನಾಯುಕ್ತವೆಂದು ನಾನು ಭಾವಿಸಿದ ಒಂದು ಲೇಖನವನ್ನು ಬರೆದೆ. ಎರಡು ಪ್ರಸಕ್ತಿಗಳಲ್ಲೂ ಈ ಕೋಮುವಾರು ಭಾವನೆಯು ಯಥಾರ್ಥವಾಗಿ ಸಹ ಇಲ್ಲವೆಂದೂ ಇದು ಕೋಮುವಾರು ಮೊಗವಾಡದ ಹಿಂದಿರುವ ಕೇವಲ ರಾಜಕೀಯ ಮತ್ತು ಸಾಮಾಜಿಕ ಪ್ರತೀಕಾರಕಗಳೆಂದೂ ನಾನು ಈ ಲೇಖನದಲ್ಲಿ ವಿವರಿಸಿದೆ. ನಾನು ಸೆರೆಮನೆಯಲ್ಲಿದ್ದಾಗ ಕೂಡಿಟ್ಟಿದ್ದ, ಕೋಮುವಾರು ಮುಖಂಡರುಗಳ ಅನೇಕಾನೇಕ ಹೇಳಿಕೆಗಳನ್ನೂ ಭಾಷಣಗಳನ್ನೂ ಒಳಗೊಂಡ ವೃತ್ತಪತ್ರಿಕೆಗಳ ಚಿಲ್ಲರ ಕತ್ತರಿಕೆಗಳು ನನ್ನ ಬಳಿಯಿದ್ದುವು. ಬರವಣಿಗೆಗೆ ನನ್ನಲ್ಲಿ ಹೇರಳವಾಗಿ ಸಾಮಗ್ರಿಯಿದ್ದುದರಿಂದ ಅದಷ್ಟನ್ನೂ ಒಂದು ವಾರ್ತಾಪತ್ರಿಕೆಯ ಲೇಖನದಲ್ಲಿ ಹೇಗೆ ಅಡಕಮಾಡಬೇಕೆಂಬುದೇ ನನಗೆ ಕಷ್ಟವಾಯಿತು.

ನನ್ನ ಈ ಲೇಖನವು ಭಾರತೀಯ ವೃತ್ತಪತ್ರಿಕೆಗಳಲ್ಲೆಲ್ಲ ವಿಶೇಷವಾಗಿ ಪ್ರಚುರವಾಯಿತು. ಆದರ ಹಿಂದೂ ಮತ್ತು ಮುಸ್ಲಿಂ ಕೋಮುವಾರು ಭಾವನಾನ್ವಿತರನ್ನು ಕುರಿತ ವಿಷಯವು ನನ್ನ ಲೇಖನದಲ್ಲಿ ತುಂಬಿಹೋಗಿದ್ದರೂ ಕೂಡ ಎರಡು ಕಡೆಯವರೂ ನನ್ನ ಲೇಖನಕ್ಕೆ ಉತ್ತರವೀಯಲಿಲ್ಲವೆಂಬುದು ಆಶ್ಚರ್ಯಕರವಾದುದು. ತುಂಬ ಘೋರವಾದ ಮತ್ತು ಬಗೆಬಗೆಯ ಮಾತಿನಲ್ಲಿ ನನ್ನನ್ನು ಖಂಡಿಸಿದ್ದ ಹಿಂದೂ ಮಹಾಸಭೆಯ ಮುಂದಾಳುಗಳು ತೆಪ್ಪಗಾದರು. ಮುಸ್ಲಿಂ ಪಕ್ಷದಿಂದಲಾದರೋ ಸರ್ ಮಹಮದ್ ಇಕ್ಬಲ್‌ರವರು ದ್ವಿತೀಯ ಚಕ್ರಗೋಷ್ಠಿಯ ಬಗ್ಗೆ ನಾನು ಹೇಳಿದ್ದ ಒಂದೆರಡು ಮಾತನ್ನು ಸರಿಪಡಿಸುವುದಕ್ಕೆ ಪ್ರಯತ್ನಿಸಿದರೇ ವಿನಾ ನನ್ನ ವಾದದ ವಿಚಾರವಾಗಿ ಅವರಾವ ಮಾತನ್ನೂ ಹೇಳಲಿಲ್ಲ. ಇವರಿಗೆ ಪ್ರತ್ಯುತ್ತರವಾಗಿ ನಾನು ಬರೆದ ಒಂದು ಬರವಣಿಗೆಯಲ್ಲಿ ಕಾನ್‌ಸ್ಟಿಟ್ಯುಯೆಂಟ್ ಅಸೆಂಬ್ಲಿಯೊಂದೇ ರಾಜಕೀಯ ಮತ್ತು ಕೋಮುವಾರು ಸಮಸ್ಯೆಗಳನ್ನು ನಿರ್ಧರಿಸತಕ್ಕದ್ದಾಗಿದೆಯೆಂದು ಸೂಚಿಸಿದೆ. ಇದಾದಮೇಲೆ ಕೋಮುವಾರು ಭಾವನೆಯನ್ನು ಕುರಿತು ನಾನು ಇನ್ನೂ ಒಂದೋ ಎರಡೋ ಲೇಖನಗಳನ್ನು ಬರೆದೆ. ಈ ಲೇಖನಗಳಿಗೆಲ್ಲ ಸಿಕ್ಕಿದ ಒಳ್ಳೆಯ ಸ್ವಾಗತದಿಂದ ಮಾತ್ರವಲ್ಲವೆ,

ಸ್ವತಂತ್ರವಾಗಿ ಆಲೋಚನೆ ಮಾಡಲು ಯತ್ನಿಸಿದವರ ಮೇಲೆಲ್ಲ ಅವು ಉಂಟುಮಾಡಿದ ಪರಿಣಾಮದಿಂದಲೂ ನಾನು ಎದೆಗೊಂಡೆ. ಕೋಮುವಾರು ಭಾವನೆಯ ಬುಡದಲ್ಲಿ ಅಡಗಿದ್ದ ಬಲವಾದ ರಾಗೋದ್ರೇಕಗಳನ್ನು ನಾನು, ಪಂಪುಬಿಟ್ಟು ಓಡಿಸಿಬಿಡಬಲ್ಲವನಾಗಿದ್ದೆನೆಂದು ನಿಜವಾಗಿಯೂ ಭಾವಿಸಿರಲಿಲ್ಲ. ಕೋಮುವಾರು ಮುಂದಾಳುಗಳು ಭಾರತದಲ್ಲೂ ಇಂಗ್ಲೆಂಡಿನಲ್ಲೂ ಕಟುವಾದ ಪ್ರತೀಕಾರಕ ಅಂಶಗಳ ಬೀಗರೆಂಬುದನ್ನೂ ವಾಸ್ತವವಾಗಿ ರಾಜಕೀಯ ಮತ್ತು ಅದಕ್ಕಿಂತ ಹೆಚ್ಚಾಗಿ ಸಾಮಾಜಿಕ ಪ್ರಗತಿಗೆ ಅಡ್ಡಿಯಾಗಿದ್ದಾರೆಂಬುದನ್ನೂ ತೋರಿಸುವುದೇ ನನ್ನ ಉದ್ದೇಶವಾಗಿತ್ತು. ಇವರ ಬೇಡಿಕೆಗಳಿಗೂ ಜನಜಂಗುಳಿಗೂ ಯಾವ ಬಗೆಯ ಸಂಬಂಧವೂ ಇರಲಿಲ್ಲ. ಮೇಲಿನ ಕೆಲವು ಸಣ್ಣ ಗುಂಪುಗಳ ಅಭ್ಯುದಯಕ್ಕಾಗಿ ಮಾತ್ರವೇ ಇವು ಸಾಧಕವಾಗಿದ್ದುವು. ಈ ಬಗ್ಗೆ ನನ್ನ ಕೆಲಸವನ್ನು ಮುಂದುವರಿಸಬೇಕೆಂದು ಆಲೋಚನೆ ಮಾಡುತ್ತಿರುವಾಗಲೇ ನನ್ನನ್ನು ಮತ್ತೆ ಸೆರಮನೆಯು ಕರೆದೊಯ್ದುಬಿಟ್ಟಿತು. ಹಿಂದೂ–ಮುಸ್ಲಿಂ ಒಕ್ಕಟ್ಟು ಅಗತ್ಯವೆಂಬ ಅಡಿಗಡಿಗೆ ಪುನರುಕ್ತವಾದ ನಮ್ಮ ಅರಿಕೆಯು ನಿಸ್ಸಂದೇಹವಾಗಿ ಪ್ರಯೋಜನಕಾರಿಯಾಗಿದ್ದರೂ ಅನೈಕಮತ್ಯದ ಕಾರಣವನ್ನರಿಯಲು ಯಾವುದಾದರೊಂದು ಬಗೆಯ ಪ್ರಯತ್ನವು ನಡೆಯದಿದ್ದರೆ, ಅರಿಕೆಯು ಬಹಳ ಟೊಳ್ಳೆಂದು ನನಗೆ ತೋರಿತು. ಐಂದ್ರಜಾಲಿಕ ಮಂತ್ರವೊಂದರ ಮೇಲಿಂದ ಮೇಲಿನ ಪುನರುಚ್ಚಾರಣೆಯಿಂದ ಐಕ್ಯತೆಯು ಹೇಗೋ ಅಂತೂ ಕೊನೆಗೆ ಹುಟ್ಟಿಯೇ ಹುಟ್ಟುವುದೆಂದು ಕೆಲವರು ಭಾವಿಸಿರುವಂತೆ ತೋರುತ್ತದೆ.

೧೮೫೭ ರ ದಂಗೆಯಿಂದೀಚೆಗೆ ಕೋಮುವಾರು ಸಮಸ್ಯೆಗೆ ಸಂಬಂಧಿಸಿರುವ ಬ್ರಿಟಿಷ್ ನೀತಿಯನ್ನು ಪರಿಶೀಲಿಸುವುದು ಸ್ವಾರಸ್ಯಕರವಾದ ವಿಷಯ. ಹಿಂದೂಗಳೂ ಮುಸ್ಲಿಮರೂ ಒಟ್ಟುಗೂಡಿ ಕೆಲಸಮಾಡುವುದನ್ನು ತಡೆಯುವುದಲ್ಲದೆ ಒಂದು ಕೋಮಿನವರಮೇಲೆ ಇನ್ನೊಂದು ಕೋಮಿನವರನ್ನು ಎತ್ತಿಕಟ್ಟುವುದೇ ಈ ನೀತಿಯ ಮೂಲಭೂತವೂ ಅನಿವಾರ್ಯವೂ ಆದ ಲಕ್ಷಣವಾಗಿದೆ. ೧೮೫೭ ನೆಯ ಇಸವಿಯ ತರುವಾಯ ಬ್ರಿಟಿಷರು ಹಿಂದೂಗಳಿಗಿಂತ ಹೆಚ್ಚಾಗಿ ಮುಸ್ಲಿಮರನ್ನು ಅದುಮಿಟ್ಟರು. ಮುಸ್ಲಿಮರು ಹೆಚ್ಚು ಧೂರ್ತವರ್ತನೆಯುಳ್ಳವರೂ, ಸ್ವಮತಾಭಿಮಾನ ಪ್ರೇರಣೆಯಿಂದ ಕೈಮಾಡುವವರೂ ಭಾರತದಲ್ಲಿನ ಇತ್ತೀಚಿನ ತಮ್ಮ ಆಳ್ವಿಕೆಯ ನೆನಪನ್ನು ಚೆನ್ನಾಗಿ ಉಳ್ಳವರೂ, ಆದಕಾರಣವೇ ತುಂಬ ಕೆಡುಕರೂ ಆಗಿದ್ದಾರೆಂದು ಅವರು ಅವರನ್ನು ಭಾವಿಸಿದರು. ಮುಸ್ಲಿಮರೂ ಕೂಡ ಹೊಸ ವಿದ್ಯಾಭ್ಯಾಸ ಪದ್ಧತಿಗೆ ದೂರವಾಗಿದ್ದುಬಿಟ್ಟರು. ಅವರಿಗೆ ಸರಕಾರೀ ನೌಕರಿಗಳೇ ಇರಲಿಲ್ಲ. ಇದೆಲ್ಲ ಅವರನ್ನು ಸಂದೇಹಪಡುವಂತೆ ಮಾಡಿತು. ಹಿಂದುಗಳಾದರೋ ಇಂಗ್ಲಿಷ್ ಭಾಷೆಯನ್ನು ಕಲಿತುಕೊಂಡು ಗುಮಾಸ್ತಗಿರಿಗಳಿಗೆ ಒಗ್ಗಿಕೊಂಡು ಹೆಚ್ಚು ಸಾಧುಗಳಂತೆ ಕಂಡುಬಂದರು.

ಹೊಸ ರಾಷ್ಟ್ರೀಯತಾವಾದವು ಇಂಗ್ಲಿಷ್ ಮಾತನಾಡುವ ಮೇಲ್ತರಗತಿಯ ಜನದಿಂದ ಪ್ರಾರಂಭವಾಯಿತು ಮತ್ತು ಇದು ಸಹಜವಾಗಿ ಹಿಂದೂಗಳಿಗೇ

ವಿರೋಧಿಸಲಾಗಿತ್ತು. ಏಕೆಂದರೆ ವಿದ್ಯಾಭ್ಯಾಸ ದೃಷ್ಟಿಯಿಂದ ಮುಸ್ಲಿಮರು ಬಹಳ ಹಿಂದುಳಿದಿದ್ದರು. ಈ ರಾಷ್ಟ್ರೀಯತಾವಾದವು ಅತಿ ಮೃದುವಾದ ಮತ್ತು ಅತಿ ಅಲ್ಪವಾದ ಧ್ವನಿಯಲ್ಲಿ ಉಕ್ತಿಗೊಂಡಿತು. ಆದರೂ ಸರಕಾರವು ಇದನ್ನು ಸಹಿಸಲಿಲ್ಲ, ಅದಕ್ಕಾಗಿ ಅವರು ಮುಸ್ಲಿಮರನ್ನು ಹೆಚ್ಚಾಗಿ ಪ್ರೋತ್ಸಾಹಿಸಿ, ಈ ಹೊಸ ರಾಷ್ಟ್ರೀಯತಾವಾದದ ವೇದಿಕೆಯಿಂದ ಅವರನ್ನು ದೂರವಾಗಿಡಬೇಕೆಂದು ನಿರ್ಧರಿಸಿದರು. ಮುಸ್ಲಿಮರನ್ನು ಕುರಿತಮಟ್ಟಿಗೆ ಇಂಗ್ಲಿಷ್ ವಿದ್ಯಾಭ್ಯಾಸದ ನಿರಾಕರಣೆಯೇ ಅಗ್ರೇ ಸಾಕಷ್ಟು ತಡೆಯಾಗಿತ್ತು. ಆದರ ಕ್ರಮೇಣ ಈ ಅವಸ್ಥೆಯು ಹೋಗುತ್ತಲೇ ಇತ್ತು. ಬ್ರಿಟಿಷರು ಮುಂಗಾಣ್ಕೆಯಿಂದ ಭವಿಷ್ಯತ್ತಿಗಾವುದು ಅಗತ್ಯವೋ ಅದನ್ನು ಸಿದ್ಧಗೊಳಿಸಿದರು. ಈ ಕೆಲಸದಲ್ಲಿ ಅವರಿಗೆ ಪ್ರಸಿದ್ಧ ಪುರುಷರಾದ ಸರ್ ಸಯ್ಯದ್ ಅಹಮದ್ ಖಾನ್‌ರವರ ಸಹಾಯವು ದೊರೆಯಿತು.

ತಮ್ಮ ಕೋಮಿನವರ ಹಿಂದುಳಿದ ಪರಿಸ್ಥಿತಿಯನ್ನು ಅದರಲ್ಲೂ ವಿಶೇಷವಾಗಿ ವಿದ್ಯಾಭ್ಯಾಸದಲ್ಲಿ ಹಿಂದುಳಿದ ಪರಿಸ್ಥಿತಿಯನ್ನು ಕಂಡು ಸರ್ ಸಯ್ಯದ್‌ರವರು ವಿಷಾದಗೊಂಡಿದ್ದರು, ಬ್ರಿಟಿಷ್ ಸರಕಾರದ ಕಣ್ಣುಗಳಲ್ಲಿ ಅದಕ್ಕಿದ್ದ ಅಪ್ರಸನ್ನತೆಯೂ ಪ್ರಭಾವರಾಹಿತ್ಯವೂ ಸರ್ ಸಯ್ಯದ್‌ರನ್ನು ಚಿಂತೆಗೀಡುಮಾಡಿದುವು. ತಮ್ಮ ಸಮಕಾಲೀನರನೇಕರಂತೆ ಅವರೂ ಬ್ರಿಟಿಷರನ್ನು ಬಹಳವಾಗಿ ಮೆಚ್ಚುತ್ತಿದ್ದರು ಮತ್ತು ಒಂದು ಸಲ ಯೂರೋಪಿಗೆ ಅವರಿತ್ತ ಭೇಟಿಯು ಅವರ ಮೇಲೆ ತುಂಬ ಪ್ರಬಲವಾದ ಪರಿಣಾಮವನ್ನುಂಟು ಮಾಡಿದಂತೆ ಕಾಣುತ್ತದೆ. ಯೂರೋಪು, ಅದರಲ್ಲೂ ಮುಖ್ಯವಾಗಿ ಪಶ್ಚಿಮ ಯೂರೋಪು ೧೯ ನೆಯ ಶತಮಾನದ ಉತ್ತರಾರ್ಧಕಾಲದಲ್ಲಿ ನಾಗರಿಕತೆಯ ಪರಮಾವಧಿಗೇರಿತ್ತು. ಯೂರೋಪು, ಜಗತ್ತಿನ ಯಾವ ರಾಷ್ಟ್ರವೂ ಆಕರಿಸದ ರಾಣಿಯಾಗಿದ್ದಳು, ಆಕೆಗೆ ಮಹತ್ವವನ್ನು ಕೊಟ್ಟಿದ್ದ ಎಲ್ಲ ಸದ್ಗುಣಗಳೂ ಪ್ರಕಾಶವಾಗಿದ್ದುವು. ಮೇಲ್ತರಗತಿಗಳ ಪಿತ್ರಾರ್ಜನೆಗಳು ಸುರಕ್ಷಿತವಾಗಿದ್ದುವು, ಜೊತೆಗೆ ವಿಜಯಿಯಾಗಬಹುದಾದ ಆಕರಣೆಯ ಭಯವು ಇರಲೇ ಇಲ್ಲ. ಬೆಳೆಯುತ್ತಿದ್ದ ಉದಾರವಾದದ ಮತ್ತು ತಾವು ಅತ್ಯುನ್ನತ ಪದವಿಗೆ ಏರುವರೆಂಬ ದೃಢವಾದ ನಂಬಿಕೆಯಿದ್ದ ಯುಗವದು. ಆದ್ದರಿಂದ ಅಲ್ಲಿಗೆ ಹೋದ ಭಾರತೀಯರು ಈ ಭವ್ಯ ಪರಿಸ್ಥಿತಿಯ ದೃಶ್ಯಕ್ಕೆ ಮಾರುಹೋದುದರಲ್ಲಿ ಆಶ್ಚರ್ಯವೇನೂ ಇಲ್ಲ. ಆರಂಭದಲ್ಲಿ ಹೆಚ್ಚಾಗಿ ಹಿಂದೂಗಳೇ ಅಲ್ಲಿಗೆ ಹೋದರು, ಹೋದವರೆಲ್ಲ ಯೂರೋಪ್ ಮತ್ತು ಇಂಗ್ಲೆಂಡುಗಳನ್ನು ಮೆಚ್ಚುವವರಾಗಿ ಹಿಂತಿರುಗಿದರು. ಆದರೆ ಕ್ರಮೇಣ ಅಲ್ಲಿಯ ಈ ಹೊಳಪು ಥಳುಕುಗಳು ಅವರಿಗೆ ಅಭ್ಯಾಸವಾಗಿ ಹೋದುದರಿಂದ ಮೊದಲು ಅವರು ಪಟ್ಟ ಆಶ್ಚರ್ಯವು ತಾನಾಗಿಯೇ ಮಾಸಿಹೋಯಿತು. ಆದರೆ ಸರ್ ಸಯ್ಯದ್‌ರವರಲ್ಲುಂಟಾದ ಆ ಪ್ರಥಮಾಶ್ಚರ್ಯವೂ ಚಿತ್ತಾಕರ್ಷಣೆಯೂ ಬಹುಮಟ್ಟಿಗೆ ಪರಿಸ್ಫುಟವಾಗಿವೆ. ೧೮೬೯ ನೆಯ ಇಸವಿಯಲ್ಲಿ ಅವರು ಇಂಗ್ಲೆಂಡಿಗೆ ಹೋದಾಗ್ಗೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿ ಸ್ವದೇಶಕ್ಕೆ ಪತ್ರಗಳನ್ನು ಬರೆದರು. ಇಂಥ ಒಂದು

ಪತ್ರದಲ್ಲಿ ಅವರು ಹೀಗೆ ಹೇಳಿರುತ್ತಾರೆ " ಭಾರತದಲ್ಲಿರುವ ಇಂಗ್ಲಿಷರ ಅವಿನಯ, ಮತ್ತು ನ ಡಿಗರನ್ನು ಮೃಗಗಳಂತೆಯೂ ಮಾಂಕರಿಸಲು ಸಹ ಕೀಳಾದವರಂತೆಯೂ ನೋಡುವುದು, ಇವುಗಳಿಗಾಗಿ ನಾನು ಅವರನ್ನು ಕ್ಷಮಿಸುವುದಿಲ್ಲ ನಮ್ಮನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿರುವುದರಿಂದ ಅವರು ಹೀಗೆ ಮಾಡುತ್ತಾರೆಂದು ನನ್ನ ಭಾವನೆ ಅಲ್ಲದೆ ನಮ್ಮ ವಿಷಯದಲ್ಲಿ ಅವರ ಈ ಅಭಿಪ್ರಾಯವು ತುಂಬ ತಪ್ಪಿಲ್ಲವೆಂದೂ ನಾನು ಒಪ್ಪಿಕೊಳ್ಳಬೇಕಾಗಿದೆ ಇಂಗ್ಲಿಷರನ್ನು ಹೊಗಳದೆಯೇ ನಾನು ವಾಸ್ತವವಾಗಿಯೂ ಹೀಗೆ ಹೇಳಬಲ್ಲೆ, ಭಾರತೀಯರಲ್ಲಿ ಮೇಲ್ತರಗತಿಯವರು ಮತ್ತು ಕೀಳ್ತರಗತಿಯವರು, ದೊಡ್ಡ ವ್ಯಾಪಾರಿಗಳು ಮತ್ತು ಚಿಲ್ಲರ ಅಂಗಡಿಗಳ ವರ್ತಕರು, ವಿದ್ಯಾವಂತರು ಮತ್ತು ಅನಕ್ಷರಸ್ಥರು, ಇವರನ್ನು ವಿದ್ಯಾಭ್ಯಾಸ, ನಡೆನುಡಿ, ಪ್ರಾಮಾಣಿಕತೆ, ಈ ಗುಣಗಳಲ್ಲಿ, ಆಂಗ್ಲರೊಡನೆ ಹೋಲಿಸಿದರೆ ಒಂದು ಕ್ಷುದ್ರ ಮೃಗವನ್ನು ಶಕ್ತನೂ ಸುಂದರನೂ ಆದ ಮಾನವನಿಗೆ ಹೋಲಿಸಿದಂತಾಗುವುದು ಭಾರತದಲ್ಲಿರುವ ನಾವು ಮಂಕು ಪ್ರಾಣಿಗಳೆಂದು ಆಂಗ್ಲರು ನಂಬುವುದಕ್ಕೆ ಕಾರಣವಿದೆ ನಾನು ನೋಡಿರುವುದು, ನಿತ್ಯವೂ ಕಂಡಿರುವುದು ಭಾರತೀಯನೊಬ್ಬನ ಕಲ್ಪನೆಗೆ ಸಂಪೂರ್ಣವಾಗಿ ಮೀರಿದುದಾಗಿದೆ ಮಾನವನಲ್ಲಿರಬೇಕಾದ ಆತ್ಮಿಕ ಮತ್ತು ಲೌಕಿಕ ಸದಂಶಗಳನ್ನೆಲ್ಲ ಸರ್ವಶಕ್ತ ಭಗವಂತನು ಯೂರೋಪಿಗೆ, ಮುಖ್ಯವಾಗಿ ಇಂಗ್ಲೆಂಡಿಗೆ ದಯಪಾಲಿಸಿದ್ದಾನೆ "*

ಬ್ರಿಟಿಷರನ್ನೂ ಯೂರೋಪನ್ನೂ ಇದಕ್ಕಿಂತ ಹೆಚ್ಚಾಗಿ ಯಾವನೂ ಹೊಗಳಲಾರನು ಸರ್ ಸಯ್ಯದ್‌ರವರು ಅತ್ಯದ್ಭುತವಾದ ಪ್ರಭಾವಕ್ಕೀಡಾದರೆಂಬುದು ಸ್ವತಃ ವ್ಯಕ್ತವಾಗುತ್ತದೆ ಸುಪ್ತಾವಸ್ಥೆಯಿಂದ ತಮ್ಮ ಜನವನ್ನು ಹೊಡೆದೆಬ್ಬಿಸಿ, ಅವರು ಮುಂದಡಿಯಿಡುವಂತೆ ಮಾಡುವುದಕ್ಕೂ ಕೂಡ, ಪ್ರಾಯಃ ಅವರು ಇಂಥ ಕಟುವಾದ ಭಾಷೆಯನ್ನು ಉಪಯೋಗಿಸಿ, ಬಿರುಸಾದ ಭಿನ್ನೋಪಮೆಗಳನ್ನು ಕೊಟ್ಟಿರಬೇಕು ಈ ಮುಂದಡಿಯು ಪಾಶ್ಚಾತ್ಯ ವಿದ್ಯಾಭ್ಯಾಸದ ದಿಕ್ಕಿನಲ್ಲಿಯೇ ಇಡಲ್ಪಡಬೇಕೆಂದೂ ಈ ವಿದ್ಯಾಭ್ಯಾಸವಿಲ್ಲದಿದ್ದರೆ ತಮ್ಮ ಕೋಮಿನವರು ಹೆಚ್ಚು ಹೆಚ್ಚಾಗಿ ಹಿಂದುಳಿದುಬಿಡುವರೆಂದೂ ದುರ್ಬಲರಾಗಿಬಿಡುವರೆಂದೂ ಅವರು ಋಜುಪಡಿಸಿಕೊಂಡಿದ್ದರು ಇಂಗ್ಲಿಷ್ ವಿದ್ಯಾಭ್ಯಾಸವೆಂದರೆ, ಸರಕಾರಿ ನೌಕರಿಗಳು, ಸ್ಥಾನಭದ್ರತೆ, ಪ್ರಭಾವ, ಗೌರವ. ಆದುದರಿಂದ ತಮ್ಮ ಕೋಮಿನವರನ್ನು ತಮ್ಮ ಆಲೋಚನಾ ವಿಧಾನಕ್ಕೆ ಒಲಿಸಿಕೊಳ್ಳಲು ಯತ್ನಿಸುತ್ತ ಈ ವಿದ್ಯಾಭ್ಯಾಸಕ್ಕೆ ತಮ್ಮ ಸರ್ವಶಕ್ತಿಯನ್ನೂ ಉಪಯೋಗಿಸಿದರು ಗುರಿಗೆಡಿಸುವ ಅಥವಾ ಬಗೆಯನ್ನು ತಿರುಗಿಸುವ ಇತರ ಹವ್ಯಾಸಗಳು ಅವರಿಗೆ ಬೇಕಾಗಿಯೇ ಇರಲಿಲ್ಲ ಮುಸ್ಲಿಮರ ಆಜಗರ ಸ್ವಭಾವವನ್ನೂ

---

* ಈ ಅವತರಣವನ್ನು ಹ್ಯಾನ್ಸ್ ಕಾನ್ ಅವರ "ಪೂರ್ವ ದೇಶಗಳಲ್ಲಿ ರಾಷ್ಟ್ರೀಯತಾವಾದದ ಇತಿಹಾಸ" ಎಂಬುದರಿಂದ ಉದ್ಧರಿಸಲಾಗಿದೆ.

ಮನಸ್ತಾಪವನ್ನೂ ನಿವಾರಿಸುವುದು ಸಾಕಷ್ಟು ಕಷ್ಟಸಾಧ್ಯವಾದ ಕೆಲಸವಾಗಿತ್ತು. ಹಿಂದೂ ಮಧ್ಯಶ್ರೇಣಿಯಿಂದ ಆರಂಭಿಸಲ್ಪಟ್ಟ ಹೊಸ ರಾಷ್ಟ್ರೀಯತಾವಾದದ ಅಂಕುರಗಳು ಈ ತೆರನಾದ, ಬಗೆಯನ್ನು ತಿರುಗಿಸುವ ಹವ್ಯಾಸವೊಂದಾಗಿ ಅವರಿಗೆ ಕಂಡಿತು. ಆದುದರಿಂದ ಅವರು ಅದನ್ನು ವಿರೋಧಿಸಿದರು. ಪಾಶ್ಚಾತ್ಯ ವಿದ್ಯಾಭ್ಯಾಸದಲ್ಲಿ ಅರ್ಧ ಶತಮಾನದಷ್ಟು ಮುಂದಿದ್ದ ಹಿಂದೂಗಳು ಸರಕಾರವನ್ನು ವಿಮರ್ಶೆ ಮಾಡುವಂತಹ ಈ ವೇದಿಕೆಯಲ್ಲಿ ತೊಡಗುವುದು ಸಾಧ್ಯವಾಗಿತ್ತು. ಆದರೆ ಅವರು ತಮ್ಮ ವಿದ್ಯಾಭ್ಯಾಸ ಕಾರ್ಯಗಳಲ್ಲಿ ಸರಕಾರದ ಪೂರ್ಣ ಸಹಕಾರವನ್ನು ನೆಚ್ಚಿಕೊಂಡಿದ್ದುದರಿಂದ ಅಕಾಲಿಕವಾದ ಯಾವ ಕೆಲಸದಿಂದಲೂ ಇದಕ್ಕೆ ಅಪಾಯ ತರುವಂತೆ ಮಾಡುತ್ತಿರಲಿಲ್ಲ. ಆದ್ದರಿಂದಲೇ ಅವರು ಶೈಶವಾವಸ್ಥೆಯಲ್ಲಿದ್ದ ರಾಷ್ಟ್ರೀಯ ಕಾಂಗ್ರೆಸ್ ಸಭೆಯಿಂದ ಪರಾಙ್ಮುಖರಾದರು. ಈ ನಿಸ್ಪೃಷ್ಟ ಮನೋಭಾವಕ್ಕೆ ಉತ್ತೇಜನವೀಯಲು ಬ್ರಿಟಿಷ್ ಸರಕಾರವು ತವಕಗೊಂಡಿದ್ದರು.

ಮುಸ್ಲಿಮರಿಗೆ ಇತರ ಹವ್ಯಾಸಗಳಿಲ್ಲದ ಪಾಶ್ಚಾತ್ಯ ಶಿಕ್ಷಣವನ್ನು ಮಾತ್ರ ಕೊಡಿಸಬೇಕೆಂಬ ಸರ್ ಸಯ್ಯದ್‌ರವರ ನಿರ್ಧಾರವು ಸರಿಯೆಂಬುದರಲ್ಲಿ ಸಂದೇಹವಿಲ್ಲ. ಇದಿಲ್ಲದ, ಭಾರತದ ಹೊಸಬಗೆಯ ರಾಷ್ಟ್ರೀಯತಾವಾದದ ಶ್ರೇಯೋಭಿವೃದ್ಧಿ ಕಾರ್ಯದಲ್ಲಿ ಮುಸ್ಲಿಮರು ಪರಿಣಾಮಕಾರಿಯಾದ ಪಾತ್ರವನ್ನು ವಹಿಸುವುದು ಸಾಧ್ಯವಾಗುತ್ತಿರಲಿಲ್ಲ. ಮತ್ತು, ಅವರಿಗಿಂತ ಉತ್ತಮವಾದ ವಿದ್ಯಾಭ್ಯಾಸವನ್ನು ಪಡೆದಿದ್ದ ಮತ್ತು ಅವರಿಗಿಂತ ಬಹಳ ಪ್ರಬಲವಾದ ಆರ್ಥಿಕ ಅವಸ್ಥಾನದಲ್ಲಿದ್ದ ಹಿಂದೂಗಳ ತಾಳಕ್ಕೆ ಮುಸ್ಲಿಮರು ಕುಣಿಯಬೇಕಾದ ಗತಿಯೊದಗುತ್ತಲೇ ಇತ್ತು. ಈ ಮಧ್ಯ ಶ್ರೇಣಿಯ ರಾಷ್ಟ್ರೀಯ ಚಳವಳಿಗೆ ಮುಸ್ಲಿಮರು ಐತಿಹಾಸಿಕವಾಗಿಯಾಗಲಿ, ಕಲ್ಪನವೈಜ್ಞಾನಿಕವಾಗಿಯಾಗಲಿ ಹದವಾಗಿರಲಿಲ್ಲ. ಏಕೆಂದರೆ ಹಿಂದೂಗಳಂತೆ ಅವರು ಈ ಮಧ್ಯಶ್ರೇಣಿ ಅಂಶವನ್ನೇ ಬೆಳೆಸಿಕೊಂಡಿರಲಿಲ್ಲ. ಆದ್ದರಿಂದ ತೋರಿಕೆಗೆ ಮಿತವಾಗಿದ್ದರೂ ಸರ್ ಸಯ್ಯದ್‌ರವರ ಚಲನವಲನಗಳು ನೇರವಾಗಿ ಕ್ರಾಂತಿಪಥಗಾಮಿಯಾಗಿದ್ದುವು. ಮುನ್ನಡೆಯುತ್ತಿದ್ದ ಹಿಂದೂ ಮಧ್ಯಮತರಗತಿಯವರು ಐರೋಪ್ಯ ಉದಾರವಾದಿಗಳ ದೃಷ್ಟಿಕೋನದಿಂದ ಆಲೋಚಿಸಲು ಆರಂಭಿಸಿದ್ದಾಗ ಮುಸ್ಲಿಮರು ಇನ್ನೂ ಪ್ರಜಾಸತ್ತಾವಿರೋಧಿಯಾದ ಜಮೀನ್‌ದಾರಿ ಪದ್ಧತಿಯ ಕಲ್ಪನವಿಜ್ಞಾನದ ಬೊಂತೆಯನ್ನು ಹೊದೆದುಕೊಂಡಿದ್ದರು. ಎರಡು ಗುಂಪಿನವರೂ ಸಮಗ್ರವಾಗಿ ಬ್ರಿಟಿಷ್ ಆಳ್ವಿಕೆಯನ್ನು ಆಶ್ರಯಿಸಿ ಸಮಗ್ರವಾಗಿ ಮಿತಭಾವನೆಯುಳ್ಳವರಾಗಿದ್ದರು. ಸರ್ ಸಯ್ಯದ್‌ರವರ ಮಿತವಾದವು ಜಮೀನ್‌ದಾರಿ ವರ್ಗಕ್ಕೆ ಸೇರಿದ ಒಕ್ಕೈಯಷ್ಟು ಮಂದಿ ಮುಸ್ಲಿಮರ ಮಿತವಾದವಾಗಿತ್ತು. ಹಿಂದೂಗಳ ಮಿತವಾದವು ಎಚ್ಚರಿಕೆಯುಳ್ಳ ಉದ್ಯೋಗಸ್ಥನ ಅಥವಾ ಕೈಗಾರಿಕೆಗೂ ಬಂಡವಾಳ ಹಾಕುವುದಕ್ಕೂ ದಾರಿಯೊಂದನ್ನು ಹುಡುಕುವ ವ್ಯಾಪಾರೋದ್ಯಮಿಯ ಮಿತವಾದವಾಗಿತ್ತು. ಈ

ಹಿಂದೂ ರಾಜಕಾರಣಪಟುಗಳು ಇಂಗ್ಲಿಷ್ ಉದಾರವಾದದ ಜ್ಯೋತಿಗಳ ಕಡೆಗೇ—ಗ್ಲಾಡ್‌ಸ್ಟನ್, ಬ್ರೈಟ್ ಮೊದಲಾದವರ—ನೋಡಿದರು ಮುಸ್ಲಿಮರು ಹೀಗೆ ಮಾಡಿದರೇ ಎಂದು ನನಗೆ ಸಂದೇಹ ಬಹುಶಃ ಅವರು ಇಂಗ್ಲೆಂಡಿನ ಟೋರಿಗಳನ್ನೂ ಜಮೀನ್‌ದಾರಿ ವರ್ಗದವರನ್ನೂ ಮೆಚ್ಚಿರಬೇಕೆಂದು ಕಾಣುತ್ತದೆ ಗ್ಲಾಡ್‌ಸ್ಟನ್ನರಂತು ಅವರಿಗೆ ಅಸಹ್ಯತೆಯನ್ನುಂಟುಮಾಡುವ ವ್ಯಕ್ತಿಯಾಗಿದ್ದರು, ಏಕೆಂದರೆ ಅವರು ಪದೇಪದೇ ತುರ್ಕಿಯನ್ನೂ ಆರ್ಮೀನಿಯನ್ ಕೊಲೆಗಳನ್ನೂ ಖಂಡಿಸುತ್ತಿದ್ದರು ಡಿಸ್ರೇಲಿಯವರು ತುರ್ಕಿಯ ಬಗ್ಗೆ ಹೆಚ್ಚು ಸ್ನೇಹಭಾವವನ್ನುಳ್ಳವರಾಗಿ ಕಂಡು ಬಂದುದರಿಂದ—ಇಂಥ ವಿಷಯಗಳಲ್ಲಿ ಶ್ರದ್ಧೆ ವಹಿಸಿದ್ದ ಒಕ್ಕೈಯಷ್ಟು ಮಂದಿ ಮಾತ್ರ—ಸ್ವಲ್ಪ ಮಟ್ಟಿಗೆ ಅವರ ಬಗ್ಗೆ ಪಕ್ಷಪಾತವುಳ್ಳವರಾಗಿದ್ದರು

ಸರ್ ಸಯ್ಯದ್ ಅಹಮದ್ ಖಾನರವರ ಭಾಷಣಗಳಲ್ಲಿ ಕಲವನ್ನು ಓದಿದರೆ ಇಂದು ಅವು ವಿಚಿತ್ರವಾಗಿ ಕಾಣುತ್ತವೆ ೧೮೮೭ ನೆಯ ಡಿಸೆಂಬರ್ ತಿಂಗಳಿನಲ್ಲಿ ಲಕ್ನೋದಲ್ಲಿ ಅವರು ಮಾಡಿದ ಭಾಷಣವೊಂದರಲ್ಲಿ, ಆಗತಾನೇ ವಾರ್ಷಿಕಾಧಿವೇಶನಗಳನ್ನು ನಡೆಯಿಸುತ್ತಿದ್ದ ರಾಷ್ಟ್ರೀಯ ಕಾಂಗ್ರೆಸ್ ಸಭೆಯ ಕೇವಲ ಮಿತವಾದ ಬೇಡಿಕೆಗಳನ್ನು ಕೂಡ ಅವರು ಟೀಕಿಸಿ, ಖಂಡಿಸಿದಂತೆ ಕಾಣುತ್ತದೆ. ಸರ್ ಸಯ್ಯದ್‌ರವರು ಹೀಗೆ ಹೇಳಿದರು " ಸರಕಾರವು ಆಫ್ಘಾನಿಸ್ತಾನದೊಡನೆ ಕಾಳಗ ಮಾಡಿದರ ಅಥವಾ ಬರ್ಮಾದೇಶವನ್ನು ಜಯಿಸಿದರೆ, ಸರಕಾರದ ಆ ಕಾರ್ಯನೀತಿಯನ್ನು ಟೀಕಿಸುವುದು ನಮ್ಮ ಕೆಲಸವಲ್ಲ, ಶಾಸನಗಳನ್ನು ಮಾಡಲು ಸರಕಾರವು ಒಂದು ಕೌನ್ಸಿಲನ್ನು ಏರ್ಪಡಿಸಿರುತ್ತದೆ ಈ ಕೌನ್ಸಿಲ್ಲಿಗೆ ಸರಕಾರವು ಎಲ್ಲ ಪ್ರಾಂತಗಳಿಂದಲೂ ಆಡಳಿತದ ಕ್ರಮ ಮತ್ತು ಜನರ ಪರಿಸ್ಥಿತಿಗಳನ್ನು ಬಹಳ ಚೆನ್ನಾಗಿ ಬಲ್ಲ ಅಧಿಕಾರಿಗಳನ್ನೂ ಸಮಾಜದಲ್ಲಿ ಪ್ರತಿಷ್ಠಿತವಾದ ಸ್ಥಾನಗಳಲ್ಲಿರತಕ್ಕ ಮತ್ತು ಆ ಸಭೆಯಲ್ಲಿ ಸದಸ್ಯರಾಗಿರಲು ಅರ್ಹರಾಗಿರತಕ್ಕ ಕೆಲವು ಪ್ರಮುಖ ಪುರುಷರನ್ನೂ ಚುನಾಯಿಸಿಕೊಳ್ಳುತ್ತದೆ ಕೆಲವರು ಕೇಳಬಹುದು—ವ್ಯಕ್ತಿಸಾಮರ್ಥ್ಯವನ್ನು ಬಿಟ್ಟು ಸಮಾಜದಲ್ಲಿನ ಅವರ ಪ್ರತಿಷ್ಠಿತ ಸ್ಥಾನವನ್ನೇ ನೋಡಿ ಏಕೆ ಅವರನ್ನು ಆರಿಸಿಕೊಳ್ಳಬೇಕು? ನಾನು ಕೇಳುತ್ತೇನೆ—ಯಾವನೋ ಕೀಳಾದ ಅಥವಾ ಯಃಕಶ್ಚಿತ ವಂಶಸ್ಥನೊಬ್ಬನು ಬಿ ಎ ಅಥವಾ ಎಂ ಎ ಪದವೀಧರನ ಗಿದ್ದು ಆವಶ್ಯಕವಾದ ಸಾಮರ್ಥ್ಯವನ್ನು ಹೊಂದಿದ್ದ ಮಾತ್ರಕ್ಕೆ ನಮ್ಮೆಲ್ಲರಮೇಲ್ಪಟ್ಟ ಅಧಿಕಾರದಲ್ಲಿದ್ದು ನಮ್ಮ ಜೀವನಗಳ ಮೇಲೂ ಆಸ್ತಿಪಾಸ್ತಿಗಳ ಮೇಲೂ ಪರಿಣಾಮವನ್ನುಂಟುಮಾಡುವಂತಹ ಶಾಸನಗಳನ್ನು ವಿಧಿಸುವ ಶಕ್ತಿಯುಳ್ಳವನಾಗಿರುವುದನ್ನು ನಮ್ಮ ಶ್ರೀಮಂತರು ಸಹಿಸುವರೆ? ಎಂದಿಗೂ ಇಲ್ಲ! ಸದ್ವಂಶಸ್ಥನನ್ನಲ್ಲದೆ ಇತರರನ್ನು ವೈಸ್‌ರಾಯ್‌ರು ತಮ್ಮ ಸಹೋದ್ಯೋಗಿಯನ್ನಾಗಿ ಮಾಡಿಕೊಂಡು, ತಮ್ಮ ಸಹೋದರನಂತೆ ಕಂಡು ತಾವು ಡ್ಯೂಕ್ಸ್, ಅರ್ಲ್ಸ್ ಮೊದಲಾದ ಮಹಾಮಹಾ ಪ್ರಭೃತಿಗಳೊಡನೆ ಸಹಪಂಕ್ತಿ

ಭೋಜನ ಮಾಡುವ ಸಂತೋಷಕೂಟಗಳಿಗೆ ಆಹ್ವಾನಿಸುವುದು ಸಾಧ್ಯವೇ ಇಲ್ಲ ಶಾಸನವಿಧಿಯಲ್ಲಿ ಸರಕಾರವು ತಾನು ಕೈಗೊಂಡಿರುವ ಕ್ರಮದಲ್ಲಿ ಜನಾಭಿಪ್ರಾಯಕ್ಕೆ ಬೆಲೆಗೊಡದೆ ಕಲಸವಮಾಡುವುದೆಂದು ನಾವು ಹೇಳಬಹುದೆ? ಶಾಸನ ರಚನೆಯಲ್ಲಿ ನಮಗಾವ ಹಕ್ಕೂ ಇಲ್ಲವೆಂದು ನಾವು ಹೇಳಬಹುದೆ? ಖಂಡಿತವಾಗಿಯೂ ಕೂಡದು"*

ಭಾರತದಲ್ಲಿ 'ಇಸ್ಲಾಂ ಪ್ರಜಾಸತ್ತೆ' ಯ ಪ್ರತಿನಿಧಿಯೂ ಮುಂದಾಳೂ ಹೀಗೆ ಮಾತ ನಾಡಿದರು! ಆಯೋಧ್ಯೆಯ ತಾಲ್ಲೂಕುದಾರರಾಗಲಿ, ಇಲ್ಲವೇ ಆಗ್ರಾ ಪ್ರಾಂತ, ಬಿಹಾರ್, ಅಥವಾ ಬಂಗಾಳಗಳ ಭೂಸ್ವಾಮಿಗಳಾಗಲಿ ಈ ಸರಣಿಯಲ್ಲಿ ಇಂದು ಮಾತ ನಾಡಲು ಧೈರ್ಯಮಾಡುವರೇ ಎಂಬುದು ಸಂದೇಹಕರ ಆದರೂ ಸರ್ ಸಯ್ಯದ್ ರವರು ಇದರಲ್ಲಿ ವೈಶಿಷ್ಟ್ಯವನ್ನು ಸರ್ವಥಾ ಹೊಂದಿದವರಾಗಿರಲಿಲ್ಲ ಅನೇಕ ಕಾಂಗ್ರೆಸ್ ಭಾಷಗಳೂ ಇದೇ ರೀತಿಯಲ್ಲಿ ಇಂದು ನಮಗೆ ವಿಚಿತ್ರವಾಗಿ ಕಾಣುತ್ತವೆ ಆದರೆ ಆಗಿನ ಹಿಂದೂ—ಮುಸ್ಲಿಂ ಸಮಸ್ಯೆಯ ರಾಜಕೀಯ ಮತ್ತು ಆರ್ಥಿಕ ಮುಖ ಗಳು ಹೀಗಿದ್ದಿತೆಂದು ಸ್ಫುಟವಾಗಿ ತೋರುತ್ತದ ಆಗತಾನೇ ಅಭಿವೃದ್ಧಿಗೆ ಬರುತ್ತಿದ್ದ ಮತ್ತು ಆರ್ಥಿಕವಾಗಿ ಉತ್ತಮೋಪಪತ್ತಿಯಿಂದ ಕೂಡಿದ್ದ ಮಧ್ಯಮ ತರಗತಿಯು (ಹಿಂದೂ) ಸ್ವಲ್ಪಮಟ್ಟಿಗೆ ಜಮೀನ್ದಾರಿ ಪದ್ಧತಿಯ ನೆಲದೊಡೆಯ (ಮುಸ್ಲಿಂ) ವರ್ಗ ದವರಿಂದ ತಡೆಯಲ್ಪಟ್ಟಿತ್ತು ಹಿಂದೂ ನೆಲದೂಡೆಯರು ಅನೇಕ ವೇಳೆ ಅವರ ಮಧ್ಯಶ್ರೇಣಿಯವರೊಂದಿಗೆ ನಿಕಟಸಂಪರ್ಕವನ್ನು ಹೊಂದಿದ್ದರು, ಮತ್ತು ಹೀಗೆ ತಟಸ್ಥರಾಗಿದ್ದರು ಇಲ್ಲವೇ ಅವರಿಂದ ಅನೇಕ ವೇಳೆ ಪ್ರಭಾವಿತವಾದ ಮಧ್ಯಮ ತರ ಗತಿಯ ಬೇಡಿಕೆಗಳ ಬಗ್ಗೆ ಸಹಾನುಭೂತಿಯುಳ್ಳವರಾಗಿದ್ದರು ಬ್ರಿಟಿಷರು ಯಾವಾ ಗಿನಂತೆಯೇ ಜಮೀನ್‌ದಾರಿ ಅಂಶಗಳ ಪಕ್ಷಪಾತಿಗಳಾಗಿದ್ದರು ಎರಡು ಕಡೆಗಳಲ್ಲಿಯೂ ಜನಜಂಗುಳಿಯೂ ಕೆಳಮಧ್ಯಮ ತರಗತಿಗಳೂ ಚಿತ್ರದಲ್ಲಿರಲೇ ಇಲ್ಲ

ಸರ್ ಸಯ್ಯದ್‌ರವರ ಅಧಿಕರಿಸುವ ಮತ್ತು ಶಕ್ತಿಯುತವಾದ ವ್ಯಕ್ತಿಮಹತ್ವವು ಭಾರತೀಯ ಮುಸ್ಲಿಮರ ಮೇಲೆ ತನ್ನ ಪ್ರಭಾವಮುದ್ರೆಯನ್ನೊತ್ತಿತು ಮತ್ತು ಅಲಿಘರ್ ಕಾಲೇಜು ಅವರ ಆಶೆಗಳು ಮತ್ತು ಆಕಾಂಕ್ಷೆಗಳ ಪ್ರತ್ಯಕ್ಷ ಲಾಂಛನವಾ ಯಿತು ಸಂಕ್ರಮಣ ಕಾಲಾವಧಿಯಲ್ಲಿ ಪ್ರಗತಿವಿಶಿಷ್ಟವಾದ ಪ್ರೇರಣೆಯು ಬೇಗ ತನ್ನ ಪಾತ್ರವನ್ನು ತಾನು ನಿರ್ವಹಿಸಬಹುದು ಮತ್ತು ಕಾರ್ಯಗತಿಗೆ ಒಂದು ತಡೆಯಾಗಿ ಪರಿಣಮಿಸಬಹುದು ಭಾರತೀಯ ಉದಾರವಾದಿಗಳು ಇದಕ್ಕೊಂದು ಪ್ರತ್ಯಕ್ಷ ನಿದ ರ್ಶನ. ಹಳೆಯ ಕಾಂಗ್ರೆಸ್ ಸಂಪ್ರದಾಯವಾದ ನಿಜವಾದ ಬಾಧ್ಯಸ್ಥರು ತಾವೇ ಎಂದೂ ಇತ್ತೀಚಿನವರಾದ ನಾವು ಕರೆಯದೆ ಬಂದು ಪರಕಾರ್ಯಪ್ರವೇಶಮಾಡಿದವರೆಂದೂ ಅವರು ಅನೇಕವೇಳೆ ನಮಗೆ ಜ್ಞಾಪಕ ಕೊಡುತ್ತಾರೆ ಬಹು ವಾಸ್ತವವೇ ಹೌದು.

* ಹ್ಯಾನ್ಸ್ ಕಾನ್‌ರವರ 'ಪೂರ್ವದೇಶಗಳಲ್ಲಿ ರಾಷ್ಟ್ರೀಯತಾವಾದದ ಇತಿಹಾಸ" ಎಂಬುದ ರಿಂದ ಉದ್ಧರಿಸಲಾಗಿದೆ

ಆದರೆ ಜಗತ್ತು ವ್ಯತ್ಯಸ್ತವಾಗುವುದೆಂಬುದನ್ನೂ ಹಳೆಯ ಕಾಂಗ್ರೆಸ್ ಸಂಪ್ರದಾಯವು ಗತವರ್ಷದ ಹಿಮವರ್ಷದೊಡನೆ ಅಚ್ಚಳಿದು ಕೇವಲ ಒಂದು ನೆನಪುಮಾತ್ರವಾಗಿ ಉಳಿದಿದೆಯೆಂಬುದನ್ನೂ ಅವರು ಮರೆಯುತ್ತಾರೆ ಆದರಂತೆಯೇ ಸರ್ ಸಯ್ಯದ್ ರವರ ಸಂದೇಶವು ಅದು ಬಂದ ಕಾಲದಲ್ಲಿ ಸಮಯೋಚಿತವಾಗಿಯೂ ಆಗತ್ಯ ವಾಗಿಯೂ ಇತ್ತು, ಆದರೆ ಈ ತತ್ವವೇ ಪ್ರಗತಿಗಾಮಿ ಕೋಮೊಂದರ ಪಕ್ವವಾದ ಆದರ್ಶವಾಗಿರಲು ಸಾಧ್ಯವಿಲ್ಲವಾಗಿತ್ತು ಅವರು ಒಂದು ತಲೆಮಾರಿನಷ್ಟು ಆಮೇಲೆ ಜೀವಿಸಿದ್ದಿದ್ದರೆ ತಮ್ಮ ಈ ಸಂದೇಶಕ್ಕೆ ಅವರೇ ಬೇರೊಂದು ಸ್ಥಾನ ನಿರ್ದೇಶವನ್ನು ಅಳವಡಿಸುತ್ತಿದ್ದರೆಂಬುದು ಸಾಧ್ಯ ಅಥವಾ ಇತರ ಮುಖಂಡರು ಇವರ ಹಳೆಯ ಸಂದೇಶವನ್ನು ಪುನರ್ವ್ಯಾಖ್ಯಾನ ಮಾಡಿ ವ್ಯತ್ಯಾಸಹೊಂದುತ್ತಿದ್ದ ಪರಿಸ್ಥಿತಿಗಳಿಗೆ ಅದನ್ನು ಸಂಪ್ರಯೋಗಿಸುತ್ತಿದ್ದರು ಆದರೆ ಸರ್ ಸಯ್ಯದ್‌ರವರಿಗೆ ಲಭಿಸಿದ ಯಶಸ್ಸು, ಮತ್ತು ಅವರ ಸ್ಮರಣೆಗೆ ಅಂಟಿಕೊಂಡಿದ್ದ ಭಕ್ತಿ, ಇವುಗಳೇ ಇತರರು ಈ ಹಳೆಯ ನಂಬಿಕೆಯಿಂದ ಬಿಟ್ಟು ಹೋಗುವುದನ್ನು ಕಷ್ಟವಾಗುವಂತೆ ಮಾಡಿದುವು, ದುರದೃಷ್ಟವಶಾತ್, ಭಾರತದ ಮುಸ್ಲಿಮರಲ್ಲಿ ಹೊಸದಾರಿಯೊಂದನ್ನು ಬೆರಳಿಟ್ಟು ತೋರಿಸುವಂತಹ ಅಸಾಧಾರಣ ದಕ್ಷಪುರುಷರಿಗೆ ಬಾರದೆ ಬಂದಿತ್ತು. ಅಲಿಘರ್ ಕಾಲೇಜು ಬಹಳ ಶ್ಲಾಘ್ಯವಾದ ಕೆಲಸವನ್ನು ಮಾಡಿ, ಯೋಗ್ಯತೆಯುಳ್ಳ ಹಲವು ಜನರನ್ನು ತಯಾರುಮಾಡಿ, ಕಲಿತ ಮುಸ್ಲಿಂ ವರ್ಗದ ಇಡೀ ಪ್ರಕೃತಿಸ್ವಭಾವವನ್ನೇ ಮಾರ್ಪಡಿಸಿತು, ಆದರೂ ತಾನು ರಚಿತವಾಗಿ ಪ್ರತಿಷ್ಠಿಸಲ್ಪಟ್ಟಿದ್ದ ಚೌಕಟ್ಟನ್ನು ಮೀರಿ ಹೊರಬರಲು ಅದಕ್ಕೆ ಸಂಪೂರ್ಣವಾಗಿ ಸಾಧ್ಯವಾಗಲಿಲ್ಲ—ಜಮೀನ್‌ದಾರಿ ಭಾವನೆಯೊಂದು ಅದನ್ನು ಆಳುತ್ತಿತ್ತು, ಮತ್ತು ಸಾಮಾನ್ಯ ವಿದ್ಯಾರ್ಥಿಯ ಮಹತ್ವಾಕಾಂಕ್ಷೆಯ ಗುರಿಯು ಸರಕಾರೀ ನೌಕರಿಯಾಗಿತ್ತು ಸಾಹಸ ಪ್ರಯತ್ನಗಳ ಕೆಚ್ಚೆದೆಯ ಆಶೆಯಾಗಲಿ, ನಕ್ಷತ್ರಗಳ ಅನ್ವೇಷಣೆಯಾಗಲಿ ಆತನಿಗೆ ಬೇಕಾಗಿರಲಿಲ್ಲ ಡೆಪ್ಯುಟಿ ಕಲೆಕ್ಟರ್‌ಗಿರಿಯೊಂದು ಸಿಕ್ಕಿದರೆ ಸಾಕು, ಆತನು ಸಂತೃಪ್ತನಾಗುತ್ತಿದ್ದನು ಇಸ್ಲಾಮಿನ ಮಹಾ ಪ್ರಜಾಸತ್ತೆಯಲ್ಲಿ ತಾನೂ ಒಬ್ಬನೆಂಬ ಪರಿಜ್ಞಾನವು ಅವನ ಅಭಿಮಾನಕ್ಕೆ ಆಶ್ವಾಸನವನ್ನುಂಟುಮಾಡುತ್ತಿತ್ತು, ಮತ್ತು ಈ ಭ್ರಾತೃಭಾವಕ್ಕೆ ಸಾಕ್ಷೀಭೂತನಾಗಿ ಅವನು, ತನ್ನ ತಲೆಯ ಮೇಲೆ, ತುರ್ಕಿದೇಶದವರೇ ಅತ್ಯಲ್ಪ ಕಾಲದಲ್ಲಿ ಸಂಪೂರ್ಣವಾಗಿ ತಿರಸ್ಕರಿಸಲಿದ್ದ ಟರ್ಕಿಷ್ ಫೆಜ್ ಎಂಬ ಹೆಸರಿನ ಕೆಂಪು ಬಣ್ಣದ ಟೋಪಿಯನ್ನೂ ಒಯ್ಯಾರದಿಂದ ಏರಿಸುತ್ತಿದ್ದನು ಸೋದರ ಮುಸ್ಲಿಮರೊಡನೆ ಉಂಡು ಪ್ರಾರ್ಥನೆಮಾಡುವ ಅವಕಾಶವನ್ನು ಕೊಟ್ಟ ಪ್ರಜಾಸತ್ತೆಯನ್ನು ಕುರಿತು ತನಗಿರುವ ಅನ್ಯಹಸ್ತಾಂತರಪಡಿಸಲಾಗದ ವಿಷಯದಲ್ಲಿ ತಾನು ಭರವಸೆಗೊಂಡು, ಭಾರತದಲ್ಲಿ ರಾಜಕೀಯ ಪ್ರಜಾಸತ್ತೆಯ ಅಸ್ತಿತ್ವ ಅಥವಾ ನಾಸ್ತಿತ್ವಗಳನ್ನು ಕುರಿತು ಆಗಚಾಟಲುಪಡುತ್ತಲೇ ಇರಲಿಲ್ಲ

ಈ ಸಂಕುಚಿತ ದೃಷ್ಟಿಕ್ಷೇಪವೂ ಸರಕಾರೀ ಹುದ್ದೆಗಳಿಗಾಗಿ ಅತ್ಯಾಶೆಯೂ ಅಲಿಘರ್ ಮತ್ತು ಬೇರೆ ಕಡೆಗಳ ಮುಸ್ಲಿಂ ವಿದ್ಯಾರ್ಥಿಗಳಿಗೆ ಮಾತ್ರವೇ ಇರಲಿಲ್ಲ, ಸ್ವಭಾವತಃ ಸಾಹಸಶೀಲರಲ್ಲದ ಹಿಂದೂ ವಿದ್ಯಾರ್ಥಿಗಳಲ್ಲೂ ಕೂಡ ಇದು ಅಷ್ಟೇ ವ್ಯಕ್ತವಾಗಿತ್ತು ಆದರೆ ಸನ್ನಿವೇಶಗಳು ಈ ವಿದ್ಯಾರ್ಥಿಗಳಲ್ಲನೇಕರನ್ನು ತುಳಿದ ದಾರಿಯಿಂದ ಬಲಾತ್ಕಾರವಾಗಿ ಹೊರಹಾಕಿತು ವಿದ್ಯಾರ್ಥಿಗಳ ಸಂಖ್ಯೆಯಾದರೋ ತುಂಬ ಹೆಚ್ಚಾಗಿತ್ತು, ಎಲ್ಲರಿಗೂ ಸಾಕಾಗುವಷ್ಟು ಜಂಬರಗಳಿರಲಿಲ್ಲ ಆದುದರಿಂದ ಅವರು, ರಾಷ್ಟ್ರೀಯ ಚಳವಳಿಗಳ ಅಂಗದಂಡಿಯಾದ ಸಾಮಾಜಿಕ ಅಂತಸ್ತಿನಲ್ಲಿ ಕೆಳಗಿಳಿದ ಧೀಮಂತ ವರ್ಗದವರಾದರು

ಸರ್ ಸಯ್ಯದ್ ಅಹಮದ್ ಖಾನ್‌ರವರ ರಾಜಕೀಯ ಸಂದೇಶದ ಉಳುಕು ಹಿಡಿಸುವ ಪರಿಣಾಮದಿಂದ ಭಾರತೀಯ ಮುಸ್ಲಿಮರು ಇನ್ನೂ ಚೇತರಿಸಿಕೊಂಡಿರಲಿಲ್ಲ ಇಪ್ಪತ್ತನೆಯ ಶತಮಾನದ ಆರಂಭವರ್ಷಗಳ ಘಟನೆಗಳು, ಆಗ್ಗೆ ಬೊಬ್ಬೆಯಿಡುತ್ತಲೂ ಮೇಲೆ ಬೀಳುತ್ತಲೂ ಇದ್ದ ರಾಷ್ಟ್ರೀಯ ಚಳವಳಿ ಮತ್ತು ಮುಸ್ಲಿಮರ ನಡುವೆ ಇದ್ದ ಬಿರುಕನ್ನು ಬ್ರಿಟಿಷ್ ಸರಕಾರವು ದೊಡ್ಡದು ಮಾಡುವುದಕ್ಕೆ ಸಹಾಯ ಮಾಡಿದುವು ೧೯೧೦ ರಲ್ಲಿ ಸರ್ ವ್ಯಾಲೆಂಟೈನ್ ಚಿರೋಲ್‌ರವರು ತಮ್ಮ 'ಇಂಡಿಯನ್ ಅನ್‌ರೆಸ್ಟ್' (ಭಾರತದ ಅಶಾಂತಿ) ಎಂಬ ಗ್ರಂಥದಲ್ಲಿ ಹೀಗೆ ಬರೆದಿರುತ್ತಾರೆ "ಒಟ್ಟಿನಲ್ಲಿ ಭಾರತದ ಮಹಮದೀಯರು ತಮ್ಮ ಯೋಗಕ್ಷೇಮ ಮತ್ತು ವಾಂಛೆಗಳನ್ನು ಬ್ರಿಟಿಷ್ ಆಳ್ವಿಕೆಯ ಭದ್ರತೆ ಮತ್ತು ಶಾಶ್ವತತೆಗಳೊಡನೆ ಹಿಂದೆಂದೂ ಇಷ್ಟು ಮಟ್ಟಿಗೆ ಒಂದುಗೂಡಿಸಿರಲಿಲ್ಲವೆಂದು ಧೈರ್ಯವಾಗಿ ಒತ್ತಿ ಹೇಳಬಹುದು" ರಾಜಕೀಯ ಭವಿಷ್ಯ ಹೇಳುವುದು ಅಪಾಯಕರ. ಸರ್ ವ್ಯಾಲೆಂಟೈನ್‌ರವರು ಹೀಗೆ ಬರೆದು ಐದು ವರ್ಷಗಳಾಗುವಷ್ಟರಲ್ಲೇ ಕಲಿತ ಮುಸ್ಲಿಮರು ತಮ್ಮನ್ನು ಹಿಂದಕ್ಕೆ ಹಿಡಿದು ನಿಲ್ಲಿಸಿದ್ದ ಬಂಧನಗಳನ್ನು ಕಿತ್ತೊಗೆದು ಕಾಂಗ್ರೆಸ್ಸಿನ ಜೊತೆಗೆ ಬಂದು ಸಾಲುಗಟ್ಟಿ ನಿಲ್ಲಲು ಬಹಳವಾಗಿ ಪ್ರಯತ್ನಿಸುತ್ತಿದ್ದರು ಆಮೇಲೆ ಹತ್ತು ವರ್ಷಗಳ ಅವಧಿಯಲ್ಲೇ ಭಾರತೀಯ ಮುಸ್ಲಿಮರು ಕಾಂಗ್ರೆಸ್ಸಿಗಿಂತ ಮುಂದ ನಡೆದು ಅದಕ್ಕ ವಾಸ್ತವವಾಗಿ ತಾವೇ ಮಾರ್ಗದರ್ಶಿಗಳಾದಂತೆ ಕಂಡುಬರುತ್ತಿತ್ತು ಆದರೆ ಈ ಹತ್ತುವರ್ಷಗಳೂ ಮಹಾ ಘಟನೆಗಳಿಂದ ಕೂಡಿದ ವರ್ಷಗಳು, ಮಹಾಯುದ್ಧವು ಈ ಮಧ್ಯೆ ಸಂಭವಿಸಿ, ಜರ್ಝರಿತವಾದ ಜಗತ್ತನ್ನು ಮೃತಪತ್ರದತ್ತವಾದ ಆಸ್ತಿಯನ್ನಾಗಿ ಕೊಟ್ಟು ಹೊರಟುಹೋಯಿತು

ಆದರೂ ಸರ್ ವ್ಯಾಲೆಂಟೈನ್‌ರವರು ಆ ನಿರ್ಧಾರಕ್ಕೆ ಬರುವುದಕ್ಕೆ ಮೇಲ್ನೋಟದ ಕಾರಣಗಳು ಬೇಕಾದಷ್ಟಿದ್ದುವು ಆಗಾ ಖಾನರು ಮುಸ್ಲಿಮರ ಮುಖಂಡರಾಗಿ ರಂಗಕ್ಕೆ ಬಂದಿದ್ದರು ಇದರಿಂದಲೇ ಮುಸ್ಲಿಮರು ಇನ್ನೂ ತಮ್ಮ ಜಮೀನ್‌ದಾರಿ ಸಂಪ್ರದಾಯಗಳನ್ನು ನೆಮ್ಮಿದ್ದರೆಂದು ಗೊತ್ತಾಯಿತು, ಏಕೆಂದರೆ ಆಗಾ ಖಾನರು ಮಧ್ಯಶ್ರೇಣಿಯ ನಾಯಕರಲ್ಲ ಅವರು ಅತ್ಯಂತ ಐಶ್ವರ್ಯ ಸಂಪನ್ನರಾದ ರಾಜ

ಕುಮಾರರಾಗಿದ್ದುದಲ್ಲದೆ ಒಂದು ಮುಸ್ಲಿಂ ಪಂಥದ ಧರ್ಮಗುರುವೂ ಆಗಿದ್ದರು ಬ್ರಿಟಿಷ್ ಆಡಳಿತ ವರ್ಗದವರೊಡನೆ ಅವರು ಹತ್ತಿರದ ಸಂಬಂಧಗಳನ್ನು ಬೆಳೆಸಿಕೊಂಡಿದ್ದುದರಿಂದ ಬ್ರಿಟಿಷ್ ದೃಷ್ಟಿಯಲ್ಲಿ ಅವರೇ ಸತ್ಕಾರಯೋಗ್ಯರಾದ ವ್ಯಕ್ತಿಯಾಗಿದ್ದರು ಅವರು ವಿಶಾಲವಾದ ಸಂಸ್ಕೃತಿಯನ್ನು ಪಡೆದಿದ್ದುದಲ್ಲದೆ ಧನಾಢ್ಯನಾದ ಆಂಗ್ಲಭೂಸ್ವಾಮಿಯಂತೆಯೂ ಕ್ರೀಡಾವಿನೋದಾಸಕ್ತನಂತೆಯೂ ಬಹುಕಾಲ ಯೂರೋಪಿನಲ್ಲೇ ಜೀವನ ನಡೆಸಿದರು ಹೀಗಿದ್ದುದರಿಂದ ಆಗಾ ಖಾನರು ಕೋಮುವಾರು ಅಥವಾ ಪಂಥಗಳ ಸಂಬಂಧಪಟ್ಟ ವಿಚಾರದಲ್ಲಿ ವೈಯಕ್ತಿಕವಾಗಿ ಸಂಕುಚಿತಮನಸ್ಕರಾಗಿರಲೇ ಇಲ್ಲ ಆಗಾ ಖಾನರ ಮುಸ್ಲಿಂ ನಾಯಕತ್ವವೆಂದರೆ, ಮುಸ್ಲಿಂ ಜಮೀನ್ದಾರಿ ವರ್ಗದವರೂ ಆಗತಾನೇ ಪ್ರಬಲಿಸುತ್ತಿದ್ದ ಮಧ್ಯಶ್ರೇಣಿಯವರೂ ಬ್ರಿಟಿಷ್ ಸರಕಾರದೊಡನೆ ಸಾಲುಗಟ್ಟಿ ನಿಲ್ಲುವುದೆಂದಾಯಿತು ಕೋಮುವಾರು ಸಮಸ್ಯೆಯು ವಾಸ್ತವವಾಗಿಯೂ ಗೌಣವಾಗಿದ್ದು ಮುಖ್ಯವಾದ ಗೊತ್ತುಗುರಿಯು ಯೋಗಕ್ಷೇಮಕ್ಕಾಗಿ ಸ್ಪಷ್ಟವಾಗಿ ಅವಧಾರಣೆ ಮಾಡಲ್ಪಡುತ್ತಿತ್ತು "ಬ್ರಿಟಿಷ್ ಆಡಳಿತದ ಭದ್ರತೆಗೂ ಅಕಳಂಕ ರಾಜಭಕ್ತಿಯುತವಾದ ಮಹಮದೀಯ ಅಲ್ಪಸಂಖ್ಯಾತರ ಯೋಗಕ್ಷೇಮಗಳಿಗೂ ಸಮಾನವಾಗಿ ಅಪಾಯಕರವಾಗಿರುವ, ಹಿಂದೂ ಬಹುಸಂಖ್ಯಾತರ ಪ್ರಾಭವಕ್ಕೆ ದಾರಿಮಾಡಿಕೊಡುವ ರಾಜಕೀಯ ರಿಯಾಯಿತಿಗಳು ಅವಸರದಲ್ಲಿ ಹಿಂದೂಗಳಿಗೆ ಎಲ್ಲಿಯಾದರೂ ಕೊಡಲ್ಪಡಲಾದೀತು, ಎಂದು ಬಂಗಾಳದ ವಿಭಜನೆಯಿಂದ ಹುಟ್ಟಿ ಬೆಳೆದ ರಾಜಕೀಯ ಪರಿಸ್ಥಿತಿಯನ್ನು ಕುರಿತು ಮಹಮದೀಯ ದೃಷ್ಟಿಯನ್ನು" ಆಗಾ ಖಾನರು ಆಗಿನ ವೈಸ್‌ರಾಯ್‌ರಾದ ಲಾರ್ಡ್ ಮಿಂಟೋರವರ ಮನಸ್ಸಿನ ಮೇಲೆ ಅಚ್ಚೊತ್ತಿದರೆಂದು ಸರ್ ವ್ಯಾಲೆಂಟೈನ್ ಷಿರೋಲ್‌ರವರು ನಮಗೆ ಹೇಳುತ್ತಾರೆ

ಆದರೆ ಬ್ರಿಟಿಷ್ ಸರಕಾರದೊಂದಿನ ಈ ಮೇಲುಮೇಲಿನ ಸಾಲುಕಟ್ಟುವಿಕೆಯ ಹಿಂದೆ ಇತರ ಶಕ್ತಿಗಳು ಕೆಲಸ ಮಾಡುತ್ತಿದ್ದುವು ಹೊಸ ಮುಸ್ಲಿಂ ಮಧ್ಯಶ್ರೇಣಿಯು ಪ್ರಕೃತ ಪರಿಸ್ಥಿತಿಗಳ ಬಗ್ಗೆ ಅನಿವಾರ್ಯವಾಗಿ ಹೆಚ್ಚುಹೆಚ್ಚು ಅತೃಪ್ತಿಯುಳ್ಳವರಾಗುತ್ತಿದ್ದು ರಾಷ್ಟ್ರೀಯ ಚಳವಳಿಯ ಕಡೆಗೆ ನೆಳೆಯಲ್ಪಡುತ್ತಿದ್ದರು ಆಗಾ ಖಾನರೇ ಇದನ್ನು ಗಮನಿಸಿ ಲಾಕ್ಷಣಿಕವಾದ ಭಾಷೆಯಲ್ಲಿ ಬ್ರಿಟಿಷರಿಗೆ ಎಚ್ಚರಿಕೆ ಕೊಡಬೇಕಾಯಿತು ಹಿಂದೂ ಮುಸ್ಲಿಮರನ್ನು ಬೇರೆಮಾಡುವ ಈ ನೀತಿಯನ್ನು ತೊರೆಯಬೇಕೆಂದೂ ಉಭಯಪಕ್ಷಗಳಲ್ಲೂ ಮಿತಭಾವನೆಯುಳ್ಳವರನ್ನು ಒಟ್ಟಾಗಿ ಸಮಾನವಾದೊಂದು ಪಾಳೆಯದಲ್ಲಿ ಕೂಡಿಸಿ ತನ್ಮೂಲಕ, ಹಿಂದೂ ಮುಸ್ಲಿಮರನ್ನೊಳಗೊಂಡಿದ್ದ ತರುಣಭಾರತದ ಆಮೂಲಾಗ್ರ ವ್ಯತ್ಯಾಸಗಳನ್ನು ಗುರಿಯಾಗುಳ್ಳ ಮನೋವೃತ್ತಿಗಳಿಗೆ ಸರಿತೂಗುವಂತೆ ಮಾಡಬೇಕು, ಎಂದು ಅವರು ೧೯೧೪ನೆಯ ಜನವರಿಯಲ್ಲಿ (ಘೋರ ಯುದ್ಧವಾಗಲು ಬಹಳ ಹಿಂದೆಯೇ) 'ಎಡಿನ್‌ಬರ್ಗ್ ರೆವ್ಯೂ' ನಲ್ಲಿ ಬರೆದು ಸರಕಾರಕ್ಕೆ ಸಲಹೆಯನ್ನಿತ್ತರು ಇದರಿಂದ ಮುಸ್ಲಿಮರಿಗೆ ಸಂಬಂಧಪಟ್ಟ ಕೋಮುವಾರು

ಯೋಗಕ್ಷೇಮಕ್ಕಿಂತ ಭಾರತದಲ್ಲಿನ ರಾಜಕೀಯ ವ್ಯತ್ಯಾಸವನ್ನು ತಡೆಯುವುದರಲ್ಲಿ ಅವರು ಹೆಚ್ಚು ಶ್ರದ್ಧಾಳುಗಳಾಗಿದ್ದರೆಂಬುದು ಸ್ವತಸ್ಸಿದ್ಧವಾಗಿತ್ತು

ಆದರೆ ಆಗಾ ಖಾನರಾಗಲೀ ಅಥವಾ ಬ್ರಿಟಿಷ್ ಸರಕಾರವಾಗಲೀ ರಾಷ್ಟ್ರೀಯತಾವಾದದ ಕಡೆಗೆ ಅನಿವಾರ್ಯವಾಗಿ ಜಾರುತ್ತಿದ್ದ ಮುಸ್ಲಿಂ ಮಧ್ಯ ಶ್ರೇಣಿಯನ್ನು ತಡೆಯಲಾಗಲಿಲ್ಲ ಈ ಕಾರ್ಯವನ್ನು ಮಹಾ ಯುದ್ಧವು ತೀವ್ರ ಗತಿಯಿಂದ ಹೆಚ್ಚಿಸಿತು ಮತ್ತು ಹೊಸಹೊಸ ಮುಖಂಡರು ಮುಂದೆ ಬಂದಂತೆಲ್ಲ ಆಗಾ ಖಾನರು ಹಿನ್ನೆಲೆಗೆ ಹೋಗುತ್ತಿರುವಂತೆ ಕಂಡುಬಂದರು ಅಲಿಘರ್ ಕಾಲೇಜಿನ ಪ್ರಕೃತಿಸ್ವಭಾವವು ಕೂಡ ವ್ಯತ್ಯಾಸವಾಯಿತು ಹೊಸ ಮುಖಂಡರಲ್ಲಿ ಬಹಳ ಚೈತನ್ಯಯುಕ್ತರಾದವರೆಂದರೆ ಆಲಿ ಸಹೋದರರು, ಇಬ್ಬರೂ ಅಲಿಘರಿನಲ್ಲಿ ಶಿಕ್ಷಣಪಡೆದವರು ಡಾ॥ ಎಂ ಎ ಅನ್ಸಾರಿ, ಮೌಲಾನಾ ಅಬುಲ್ ಕಲಾಂ ಅಜಾದ್, ಮತ್ತು ಮಧ್ಯಶ್ರೇಣಿಯ ಮುಖಂಡರನೇಕರು ಮುಸ್ಲಿಮರ ರಾಜಕೀಯ ವಿಷಯಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸತೊಡಗಿದರು ಅಂತೆಯೇ ಮಿ॥ ಎಂ ಎ ಜಿನ್ನಾರವರು ಸ್ವಲ್ಪ ಹೆಚ್ಚಾದ ಮಿತ ದೃಷ್ಟಿಯಿಂದ ಕಾರ್ಯೋನ್ಮುಖರಾದರು ಗಾಂಧಿಜಿಯವರು ಈ ಮುಖಂಡರಲ್ಲಿ ಬಹು ಮಂದಿಯನ್ನೂ (ಮಿ॥ ಜಿನ್ನಾರವರನ್ನಲ್ಲ) ಅನೇಕ ಮುಸ್ಲಿಮರನ್ನೂ ತಮ್ಮ ಅಸಹಕಾರ ಚಳವಳಿಗೆ ಒಂದೇ ಪಟ್ಟಿಗೆ ಸೆಳೆದುಕೊಂಡುಬಿಟ್ಟರು ಇವರೆಲ್ಲರೂ ೧೯೧೯–೨೩ ರ ಘಟನೆಗಳಲ್ಲಿ ಪ್ರಮುಖ ಪಾತ್ರಗಳನ್ನು ವಹಿಸಿದರು

ಅನಂತರ ಪ್ರತೀಕಾರಕಾರ್ಯವು ಆರಂಭವಾಯಿತು ಹಿಂದೂ ಮತ್ತು ಮುಸ್ಲಿಂ ವರ್ಗಗಳಲ್ಲಿನ ಕೋಮುವಾರು ಮತ್ತು ನಿಮ್ನವರ್ಗಗಳ ಅಂಶಗಳು ತಮ್ಮ ಬಲಾತ್ಕಾರವಾದ ಏಕಾಂತ ಸ್ಥಳಗಳಿಂದ ಹೊರಹೊಮ್ಮಲಾರಂಭಿಸಿದುವು ಇದು ನಿಧಾನವಾದ ಕಾರ್ಯವಿಧಾನವಾದರೂ ಅವಿಚ್ಛಿನ್ನವಾಗಿ ನಡೆಯುತ್ತಲಿತ್ತು ಮುಖ್ಯವಾಗಿ ಕೋಮುವಾರು ಮುಲುಕಿನ ಕಾರಣದಿಂದಲೇ ಹಿಂದೂ ಮಹಾಸಭೆಯು ಮೊದಲನೆಯ ಬಾರಿ ಸ್ವಲ್ಪ ಪ್ರಾಮುಖ್ಯತೆಗೇರಿತು ಆದರೆ ರಾಜಕೀಯವಾಗಿ ಅದು ಕಾಂಗ್ರೆಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನು ಮಾಡಲಿಲ್ಲ ಮುಸ್ಲಿಂ ಜನಜಂಗುಳಿಯಲ್ಲಿ ತಮ್ಮ ಹಳೆಯ ಘನತೆಯನ್ನು ಮತ್ತೆ ಪಡೆದುಕೊಳ್ಳುವುದರಲ್ಲಿ ಮುಸ್ಲಿಂ ಕೋಮುವಾರು ಸಂಘಗಳು ಯಶಸ್ವಿಯಾದುವು ಅದೇ ರೀತಿಯಾಗಿ ಮುಸ್ಲಿಂ ನಾಯಕರ ಶಕ್ತಿವಿಶಿಷ್ಟವಾದ ಗುಂಪೊಂದು ಕೊನೆಯವರೆಗೂ ಕಾಂಗ್ರೆಸ್ಸಿನೊಡನೆಯೇ ನಿಂತಿತು ಈ ಮಧ್ಯೆ ಬ್ರಿಟಿಷ್ ಸರಕಾರವು ರಾಜಕೀಯವಾಗಿ ಪ್ರತೀಕಾರಿಗಳಾದ ಮುಸ್ಲಿಂ ಕೋಮುವಾರು ಮುಖಂಡರಿಗೆ ಸಾಧ್ಯವಾದಷ್ಟೂ ಉತ್ತೇಜನವನ್ನು ಕೊಟ್ಟಿತು ಈ ಪ್ರತೀಕಾರಗಳ ವಿಜಯವನ್ನು ನೋಡಿ ಹಿಂದೂ ಮಹಾಸಭೆಯು ತಾನೂ ಅವರೊಡನೆ ಪ್ರತೀಕಾರದಲ್ಲಿ ಸ್ಪರ್ಧಿಸಲಾರಂಭಿಸಿತು ಈ ಕಾರ್ಯದಿಂದ ಸರಕಾರದ ಕೃಪೆಯನ್ನು ಪಡೆಯಬೇಕೆಂಬುದೇ ಅದರ ಉದ್ದೇಶ, ಮಹಾಸಭೆಯಲ್ಲಿದ್ದ ಅನೇಕ ಪ್ರಗತಿಗಾಮಿ ಅಂಶಗಳಲ್ಲನೇಕರು ಹೊರದೂಡಲ್ಪಟ್ಟರು,

ಅಥವಾ ತಾವೇ ತಮ್ಮ ಇಷ್ಟಾನುಸಾರವಾಗಿ ಬಿಟ್ಟು ಹೊರಟುಹೋದರು ಮಹಾ ಸಭೆಯು ಹೆಚ್ಚುಹೆಚ್ಚಾಗಿ ಮೇಲ್ಮಧ್ಯಮ ತರಗತಿಯ ಕಡೆಗೂ, ವಿಶೇಷವಾಗಿ ಲೇವಾದೇವಿ ಮಾಡುವ ವರ್ಗದ ಕಡೆಗೂ ವಾಲಿತು

ಶಾಸನ ಸಭೆಗಳಲ್ಲಿ ಸದಸ್ಯಸ್ಥಾನಗಳ ಶೇಕಡಾವಾರು ಸಂಖ್ಯಾಬಲದ ಬಗ್ಗೆ ಅವಿಶ್ರಾಂತವಾಗಿ ವಾದಿಸುತ್ತಿದ್ದ ಉಭಯ ಪಕ್ಷಗಳ ಕೋಮುವಾರು ರಾಜಕಾರಣ ಪಟುಗಳೂ ಸರಕಾರವನ್ನು ಕುರಿತ ಪ್ರಭಾವಸ್ಫೂರ್ತಿಯಿಂದ ಪೂರೆಯುವ ಉದಾರಾಶ್ರಯದ ದೃಷ್ಟಿಯಿಂದ ಮಾತ್ರ ಆಲೋಚಿಸುತ್ತಿದ್ದುದು ಕಲಿತ ಮಧ್ಯಮ ತರಗತಿಯವರಿಗೆ ಜಂಬರಗಳನ್ನು ದೊರಕಿಸಲು ನಡೆದ ಹೋರಾಟವದು ಎಲ್ಲರಿಗೂ ಬೇಕಾದಷ್ಟು ಜಂಬರಗಳು ಸಿಕ್ಕುತ್ತಿರಲಿಲ್ಲ ಆದ್ದರಿಂದ ಹಿಂದೂ ಮತ್ತು ಮುಸ್ಲಿಂ ಕೋಮುವಾರು ವಾದಿಗಳು ಅವುಗಳ ವಿಷಯದಲ್ಲಿ ಕಚ್ಚಾಡುತ್ತಿದ್ದರು ಇದರಲ್ಲಿ ಹಿಂದೂ ಕೋಮುವಾರುವಾದಿಗಳು ಸ್ವರಕ್ಷಣಾರ್ಥಿಗಳಾಗಿಯೇ ಇದ್ದರು ಏಕೆಂದರೆ ಇದ್ದ ಜಂಬರಗಳ ಬಹುಭಾಗವು ಅವರ ಕೈಯಲ್ಲೇ ಇತ್ತು ಮುಸ್ಲಿಮರು ಯಾವಾಗಲೂ ಹೆಚ್ಚು ಹೆಚ್ಚಾಗಿ ಜಂಬರಗಳು ಬೇಕೆನ್ನುತ್ತಲೇ ಇದ್ದರು ಜಂಬರಗಳಿಗಾಗಿ ನಡೆದ ಈ ಹೋರಾಟದ ಹಿಂದೆ ಇದಕ್ಕಿಂತ ಇನ್ನೂ ಬಹಳ ಮುಖ್ಯವಾದ ಸ್ಪರ್ಧೆಯು ನಡೆದಿತ್ತು ಇದು ಕೋಮುವಾರು ಭಾವನೆಯೇ ಆಗದೆ ಇದ್ದು ಕೋಮುವಾರು ಸಮಸ್ಯೆಯ ಮೇಲೆ ಪ್ರಭಾವವನ್ನು ಬೀರಿತು ಒಟ್ಟಿನಲ್ಲಿ ಪಂಜಾಬ್, ಸಿಂಧ್ ಮತ್ತು ಬಂಗಾಳದಲ್ಲಿದ್ದ ಹಿಂದೂಗಳು ಧನಾಢ್ಯರಾಗಿಯೂ, ಸಾಲಕೊಡುವವರಾಗಿಯೂ, ಪಟ್ಟಣಿಗರಾಗಿಯೂ ಇದ್ದರು ಇದೇ ಪ್ರಾಂತಗಳಲ್ಲಿದ್ದ ಮುಸ್ಲಿಮರಾದರೋ ಬಡವರಾಗಿ, ಸಾಲತೆಗೆದುಕೊಳ್ಳುವವರಾಗಿ, ಗ್ರಾಮಾಂತರವಾಸಿಗಳಾಗಿದ್ದರು ಆದ್ದರಿಂದ ಬಹು ಸಂದರ್ಭಗಳಲ್ಲಿ ಈ ಎರಡು ಪಕ್ಷಗಳವರಿಗೆ ನಡೆಯುತ್ತಿದ್ದ ಘರ್ಷಣೆಯು ಆರ್ಥಿಕದ್ದಾಗಿತ್ತು ಆದರೆ ಇದಕ್ಕೆ ಯಾವಾಗಲೂ ಕೋಮುಬೇಸಾಯಗಾರರ ಋಣವಾರು ಬಣ್ಣವನ್ನೇ ಬಳಿಯಲಾಗಿದೆ ಗ್ರಾಮಾಂತರಗಳ, ಮುಖ್ಯವಾಗಿ ಪಂಜಾಬಿನ ಭಾರವನ್ನು ಕಡಮೆಮಾಡಬೇಕೆಂಬ ಪ್ರಾಂತೀಯ ಮಸೂದೆಗಳ ಮೇಲಿನ ಚರ್ಚೆಗಳಲ್ಲಿ ಇತ್ತೀಚೆಗೆ ಈ ಅಂಶವು ಎದ್ದು ಕಂಡುಬರುತ್ತಿದೆ ಹಿಂದೂ ಮಹಾ ಸಭೆಯ ಪ್ರತಿನಿಧಿಗಳು ಈ ಮಸೂದೆಗಳನ್ನು ಏಕಪ್ರಕಾರವಾಗಿ ವಿರೋಧಿಸಿ ಲೇವಾದೇವಿ ಮಾಡುವವರೊಡನೆ ಪಕ್ಷವಹಿಸಿದ್ದಾರೆ

ಹಿಂದೂ ಮಹಾಸಭೆಯು ಮುಸ್ಲಿಂಕೋಮುವಾರು ಭಾವನೆಯನ್ನು ಕುರಿತು ಟೀಕಿಸುವಾಗಲೆಲ್ಲ ತನ್ನ ಅಕಳಂಕ ರಾಷ್ಟ್ರೀಯತಾವಾದವನ್ನು ಒತ್ತಿ ಹೇಳಿಕೊಳ್ಳುತ್ತಲೇ ಇದೆ ಮುಸ್ಲಿಂ ಸಂಸ್ಥೆಗಳು ತಾವು ಅಸಾಧಾರಣ ಕೋಮುವಾರುವಾದಿಗಳೆಂಬುದನ್ನು ಮೆರೆದಿವೆಯೆಂಬುದು ಪ್ರತಿಯೊಬ್ಬರಿಗೂ ಚೆನ್ನಾಗಿ ಗೊತ್ತು ಮಹಾ ಸಭೆಯ ಕೋಮುವಾರು ಭಾವನೆಯು ಅಷ್ಟು ಪ್ರಕಟವಾಗಿಲ್ಲ ಏಕೆಂದರೆ, ಅದು

ರಾಷ್ಟ್ರೀಯತಾವಾದವೆಂಬ ಗೊಂಗಡಿಯನ್ನು ತೊಟ್ಟು ವೇಷಕಟ್ಟಿದೆ ಮೇಲ್ತರಗತಿಯ ಹಿಂದೂಗಳ ಸ್ಥಿತಿಸೌಕರ್ಯಗಳಿಗೆ ಹಾನಿಯುಂಟುಮಾಡುವಂತಹ ರಾಷ್ಟ್ರೀಯ ಅಥವಾ ಪ್ರಜಾಸತ್ತಾತ್ಮಕ ಪರಿಹಾರೋಪಾಯಗಳು ಒದಗಿ ಬಂದಾಗಲೇ ನಿಜವಾದ ಪರೀಕ್ಷೆಯು ನಡೆಯುತ್ತದೆ ಈ ಪರೀಕ್ಷೆಯಲ್ಲಿ ಹಿಂದೂ ಮಹಾಸಭೆಯು ಮೇಲಿಂದ ಮೇಲೆ ಸೋತಿದೆ ಬಹು ಸಂಖ್ಯಾತವಾದ ಜನಜಂಗುಳಿಯ ಉಚಿತಾಭಿಪ್ರಾಯಕ್ಕೆ ವಿರೋಧವಾಗಿ, ಅಲ್ಪಸಂಖ್ಯಾತರಾದವರ ಆರ್ಥಿಕ ಹಿತದೃಷ್ಟಿಯಿಂದ ಅವರು ಸಿಂಧ್ ಪ್ರಾಂತದ ಪೃಥಕ್ಕರಣವನ್ನು ಏಕಪ್ರಕಾರವಾಗಿ ವಿರೋಧಿಸಿರುತ್ತಾರೆ

ಮುಸ್ಲಿಂ ಮತ್ತು ಹಿಂದೂ ಕೋಮುವಾರುವಾದಿಗಳ ರಾಷ್ಟ್ರೀಯತಾವಾದ ವಿರೋಧಭಾವ ಮತ್ತು ಪ್ರತೀಕಾರಗಳ ಅತ್ಯದ್ಭುತ ಪ್ರದರ್ಶನವು ಚಕ್ರ ಗೋಷ್ಠಿಗಳಲ್ಲಿ ನಡೆಯಿತು ಪಕ್ಕಾ ಕೋಮುವಾರುವಾದಿಗಳಾದ ಮುಸ್ಲಿಮರನ್ನೇ ನೇಮಿಸಬೇಕೆಂದು ಬ್ರಿಟಿಷ್ ಸರಕಾರವು ಒತ್ತಿ ಒತ್ತಿ ಹೇಳುತ್ತಿತ್ತು ಈ ಮುಸ್ಲಿಮರು ಆಗಾ ಖಾನರ ನಾಯಕತ್ವದಲ್ಲಿ, ತೀವ್ರ ಪ್ರತೀಕಾರಿಗಳಾದ, ಮತ್ತು ಭಾರತದ ದೃಷ್ಟಿಯಿಂದ ಮಾತ್ರವಲ್ಲದೆ ಎಲ್ಲ ಪ್ರಗತಿಗಾಮಿ ಪಂಗಡಗಳ ದೃಷ್ಟಿಯಿಂದಲೂ ಬ್ರಿಟಿಷ್ ಸಾರ್ವಜನಿಕ ಜೀವನದ ಅತ್ಯಪಾಯಕರವಾದ ಅಂಶಗಳ ಬೀಗರಾಗಿಯೇ ಬಿಟ್ಟರು ಆಗಾ ಖಾನರೂ ಅವರ ಗುಂಪೂ ಲಾರ್ಡ್ ಲಾಯಿಡ್‌ರ ಮತ್ತು ಅವರ ಪಕ್ಷದ ನಿಕಟಸಂಬಂಧವನ್ನು ಬೆಳೆಸಿದುದು ಆಶ್ಚರ್ಯಕರವಾದುದು ಇವರೆಲ್ಲರೂ ಸೇರಿ ಒಂದು ಹೆಜ್ಜೆ ಮುಂದಿಟ್ಟು ಚಕ್ರ ಗೋಷ್ಠಿಯಲ್ಲಿ ಐರೋಪ್ಯ ಸಂಘದ ಪ್ರತಿನಿಧಿಗಳೊಡನೆಯೂ ಇತರರೊಡನೆಯೂ ಒಪ್ಪಂದ ಮಾಡಿಕೊಂಡರು ಇದು ತುಂಬ ವಿಷಾದಕರ ಏಕೆಂದರೆ ಭಾರತದಲ್ಲಿರುವ ಈ ಸಂಘವು ಭಾರತೀಯ ಸ್ವಾತಂತ್ರ್ಯದ ತೀರ ಸಗ್ಗದ ಮತ್ತು ಅತಿ ಹೆಚ್ಚಾಗಿ ಮೇಲೆ ಬೀಳುವ ವಿರೋಧಿಯಾಗಿತ್ತು ಮತ್ತು ಆಗಿಯೂ ಇದೆ

ಮುಖ್ಯವಾಗಿ ಪಂಜಾಬಿನಲ್ಲಿ ಬ್ರಿಟಿಷ್ ಯೋಗಕ್ಷೇಮಗಳಿಗೆ ರಕ್ಷಣೆಗಳಾದ ಸ್ವಾತಂತ್ರ್ಯದ ಮೇಲಿನ ಎಲ್ಲ ವಿಧವಾದ ಅಂಕೆಗಳನ್ನು ಬೇಡಿ ತನ್ಮೂಲಕ ಹಿಂದೂ ಮಹಾಸಭೆಯ ಪ್ರತಿನಿಧಿಗಳೂ ಇದಕ್ಕೆ ಮಾರುತ್ತರವಿತ್ತರು ಬ್ರಿಟಿಷ್ ಸರಕಾರಕ್ಕೆ ಸಹಕಾರವೀಯುವುದರಲ್ಲಿ ಮುಸ್ಲಿಮರನ್ನು ಹಿಂದೆ ಹಾಕಬೇಕೆಂದು ಪ್ರಯತ್ನಿಸಿ ಯಾವ ಲಾಭವನ್ನೂ ಹೊಂದದೆ ತಮ್ಮ ಪಕ್ಷದ ಧ್ಯೇಯವನ್ನು ಅಧಃಪತನಕ್ಕೀಡಾಗಿಸಿ ಸ್ವಾತಂತ್ರ್ಯ ಧ್ಯೇಯವನ್ನು ಬಿಟ್ಟುಕೊಟ್ಟರು ಮುಸ್ಲಿಮರು ಸ್ವಲ್ಪ ಘನತೆಯಿಂದಲಾದರೂ ಮಾತನಾಡಿದ್ದರು ಹಿಂದೂ ಕೋಮುವಾರುವಾದಿಗಳಿಗೆ ಈ ಯೋಗ್ಯತೆ ಸಹ ಇರಲಿಲ್ಲ

ಉಭಯ ಪಕ್ಷಗಳಲ್ಲೂ ಈ ಕೋಮುವಾರು ನಾಯಕರು ಹೇಗೆ ಒಂದು ಸಣ್ಣ ಮೇಲ್ತರಗತಿಯ ಪ್ರತೀಕಾರ ಪಂಗಡವನ್ನು ಪ್ರತಿನಿಧಿಸುವರೆಂಬುದೂ ಮತ್ತು ಹೇಗೆ

ಇವರು ಸ್ವಾರ್ಥಸಾಧನೆಗಾಗಿ ಜನಜಂಗುಳಿಯ ತೀವ್ರ ಮತೀಯ ರಾಗೋದ್ರೇಕಗಳನ್ನು ಉಪಯೋಗಿಸಿಕೊಂಡು ಅವರನ್ನು ಸುಲಿಯುವರೆಂಬುದೂ ಅತಿ ಮುಖ್ಯವಾದ ಸತ್ಯಾಂಶವೆಂದು ನನಗೆ ತೋರುವುದು ಸಮಸ್ಯೆಗಳ ಪರಿಗಣನೆಯನ್ನು ತಪ್ಪಿಸಿಕೊಳ್ಳಲು ಮತ್ತು ಅದನ್ನು ತುಳಿದುಹಾಕಲು ಉಭಯ ಪಕ್ಷಗಳೂ ಪ್ರತಿಯೊಂದು ಪ್ರಯತ್ನವನ್ನೂ ಮಾಡುತ್ತಿವೆ ಈ ಸಮಸ್ಯೆಗಳನ್ನು ಇನ್ನು ಅದುಮಿಡಲಾಗದ ಕಾಲವು ಸದ್ಯದಲ್ಲೇ ಬರುತ್ತದೆ. ಆಗ, ಇಪ್ಪತ್ತು ವರ್ಷಗಳ ಹಿಂದೆ ಆಗಾ ಖಾನರು, ಮಿತವಾದಿಗಳು ಒಂದು ಸಮಾನವಾದ ಪಾಳಿಯದಲ್ಲಿ ಆಮೂಲಾಗ್ರ ವ್ಯತ್ಯಾಸಗಳನ್ನು ಗುರಿಯಾಗುಳ್ಳ ಪ್ರವೃತ್ತಿಗಳಿಗೆದುರಾಗಿ ಒಟ್ಟುಗೂಡಬೇಕೆಂದು ಕೊಟ್ಟ ಎಚ್ಚರಿಕೆಯ ಮಾತನ್ನೇ ಉಭಯ ಪಕ್ಷಗಳ ಕೋಮುವಾರು ನಾಯಕರೂ ನಿಸ್ಸಂದೇಹವಾಗಿ ಪ್ರತಿಧ್ವನಿಸುತ್ತಾರೆ ಇದು ಈಗಲೇ ಸ್ವಲ್ಪ ಮಟ್ಟಿಗೆ ಕಂಡುಬರುತ್ತಿದೆ ಹೇಗೆಂದರೆ, ಹಿಂದೂ–ಮುಸ್ಲಿಂ ಕೋಮುವಾರುವಾದಿಗಳು ಸಾರ್ವಜನಿಕವಾಗಿ ಒಬ್ಬರೊಡನೊಬ್ಬರು ಎಷ್ಟೇ ಕಚ್ಚಾಡಿದರೂ ಶಾಸನ ಸಭೆಯಲ್ಲೂ ಇತರ ಕಡೆಗಳಲ್ಲೂ ಒಟ್ಟಾಗಿ ಸಹಕರಿಸಿ ಪ್ರತೀಕಾರಕ ಮಸೂದೆಗಳನ್ನು ಅಂಗೀಕರಿಸಲು ಸರಕಾರಕ್ಕೆ ಸಹಾಯಕರಾಗುತ್ತಾರೆ ಈ ಮೂವರನ್ನು ಒಟ್ಟಾಗಿ ಕೂಡಿಸಿದುದರಲ್ಲಿ ಒಟ್ಟಾವಾ ಒಪ್ಪಂದವೂ ಒಂದು ಕೊಂಡಿ

ಈ ಮಧ್ಯೆ ಕನ್ಸರ್ವೆಟಿವ್ ಪಕ್ಷದ ತೀವ್ರ ಬಲಮಗ್ಗುಲಿನವರೊಂದಿಗೆ ಆಗಾ ಖಾನರ ಸಾಹಚರ್ಯವು ನಡೆಯುತ್ತಲೇ ಇದೆಯೆಂಬುದನ್ನು ಗಮನಿಸುವುದು ಸ್ವಾರಸ್ಯವಾಗಿದೆ ೧೯೩೪ ರ ಅಕ್ಟೋಬರಿನಲ್ಲಿ ಬ್ರಿಟಿಷ್ ನೇವಿ ಲೀಗಿನ ಒಂದು ಔತಣದಲ್ಲಿ ಆಗಾ ಖಾನರು ಗೌರವನೀಯ ಅತಿಥಿಗಳಾಗಿ ಹಾಜರಿದ್ದರು ಲಾರ್ಡ್ ಲಾಯಿಡ್ ರವರು ಅಧ್ಯಕ್ಷತೆ ವಹಿಸಿದ್ದರು ಬ್ರಿಸ್ಟಲ್‌ನಲ್ಲಿ ನಡೆದ ಕನ್ಸರ್ವೆಟಿವ್ ಸಮ್ಮೇಳನದಲ್ಲಿ ಬ್ರಿಟಿಷ್ ನೌಕಾದಳವನ್ನು ಇನ್ನೂ ಹೆಚ್ಚು ಬಲಪಡಿಸುವುದಕ್ಕಾಗಿ ಲಾರ್ಡ್ ಲಾಯಿಡ್ ರವರು ಮಂಡಿಸಿದ್ದ ಸಲಹೆಗಳನ್ನೇ ಆಗಾ ಖಾನರು ಎದೆಯಾರ ಸಮರ್ಥಿಸಿ ಮಾತನಾಡಿದರು ಹೀಗೆ, ಬ್ರಿಟಿಷ್ ಶಸ್ತ್ರಾಸ್ತ್ರ ಬಲವನ್ನು ಪ್ರಬಲಪಡಿಸುವುದರಲ್ಲಿ ಮಿ॥ ಬಾಲ್ಡ್‌ವಿನ್ ಅಥವಾ ‘ರಾಷ್ಟ್ರೀಯ’ ಸರಕಾರಕ್ಕಿಂತ ಕೂಡ ಮುಂದೆ ಹೋಗುವಷ್ಟು, ಭಾರತೀಯಮುಖಂಡರೊಬ್ಬರು ಸಾಮ್ರಾಜಿಕ ರಕ್ಷಣೆ ಮತ್ತು ಇಂಗ್ಲೆಂಡಿನ ಯೋಗಕ್ಷೇಮದ ವಿಷಯದಲ್ಲಿ ತವಕಗೊಂಡಿದ್ದರು ನಿಜವಾಗಿಯೂ ಇವಲ್ಲ ಶಾಂತಿ ರಕ್ಷಣೆಗೋಸ್ಕರವೇ

ಮುಂದಿನ ತಿಂಗಳು, ಎಂದರೆ ೧೯೩೪ ನೆಯ ನವೆಂಬರ್‌ನಲ್ಲಿ, ಒಂದು ಚಲಚ್ಚಿತ್ರವು ಖಾಸಗಿಯಾಗಿ ಲಂಡನ್ನಿನಲ್ಲಿ ಪ್ರದರ್ಶಿಸಲ್ಪಟ್ಟಿತೆಂದೂ, “ಮುಸ್ಲಿಂ ಜಗತ್ತನ್ನು ಬ್ರಿಟಿಷ್ ಚಕ್ರಾಧಿಪತ್ಯದೊಡನೆ ಚಿರಮೈತ್ರಿಯಲ್ಲಿ ಕೂಡಿಸುವುದೇ” ಇದರ ಉದ್ದೇಶವೆಂದೂ ಒಂದು ವರದಿ ಹೊರಬಿತ್ತು ಈ ಸಂದರ್ಭದಲ್ಲಿ ಆಗಾ ಖಾನರೂ ಲಾರ್ಡ್ ಲಾಯಿಡ್‌ರೂ ಗೌರವನೀಯ ಅತಿಥಿಗಳಾಗಿ ಹೋಗಿದ್ದರೆಂಬ ಸಮಾಚಾರವು ನಮಗೆ ತಿಳಿಯಿತು. ನಮ್ಮ ರಾಷ್ಟ್ರೀಯ ರಾಜಕಾರಣದಲ್ಲಿ ಸರ್ ತೇಜ್‌ಬಹಾದುರ್

ಸಪ್ರೂ ಮತ್ತು ಶ್ರೀ || ಎಂ ಆರ್ ಜಯಕರ್‌ರವರುಗಳು ಇರುವಂತೆಯೇ ಸಾಮ್ರಾಜಿಕ ವಿಚಾರಗಳಲ್ಲಿ ಆಗಾ ಖಾನರೂ ಲಾರ್ಡ್ ಲಾಯಿಡ್‌ರೂ ಏಕಹೃದಯ ನ್ಯಾಯದಿಂದ ಬಿಡಿಸಲಾರದಷ್ಟು ಮಟ್ಟಿಗೆ ಒಂದಾಗಿದ್ದಾರೆಂದು ತೋರುವುದು ಭಾರತಕ್ಕೆ ಬಹಳ ರಿಯಾಯಿತಿಗಳನ್ನು ತೋರಿಸಿದರೆಂಬ ' ರಾಷ್ಟ್ರೀಯ ' ಸರಕಾರದ ಮತ್ತು ಕನ್ಸರ್ವೆಟಿವ್ ನಾಯಕತ್ವದ ಆರೋಪಿತ ದೌರ್ಬಲ್ಯದ ಮೇಲೆ ಲಾರ್ಡ್ ಲಾಯಿಡ್‌ರು ಕಟುವಾದ ಮತ್ತು ಎಡೆಬಿಡದ ಅಭಿಯೋಗವನ್ನು ನಡೆಸಿದರು ಇವರಿಬ್ಬರೂ ಹೀಗೆ ಮೇಲಿಂದ ಮೇಲೆ ಒಬ್ಬರೊಡನೊಬ್ಬರು ವ್ಯವಹಾರ ನಡೆಸುತ್ತಿದ್ದುದು ಈ ತಿಂಗಳುಗಳಲ್ಲಿಯೇ ಎಂಬುದು ಗಮನಾರ್ಹವಾದುದು *

ಇತ್ತೀಚೆಗೆ ಮುಸ್ಲಿಂ ಕೋಮುವಾರು ಮುಖಂಡರ ಭಾಷಣಗಳಲ್ಲೂ ಹೇಳಿಕೆಗಳಲ್ಲೂ ಸ್ವಾರಸ್ಯಕರವಾದ ಬೆಳವಣಿಗೆಯೊಂದು ಕಂಡುಬರುತ್ತಿದೆ ಇದಕ್ಕೆ ನಿಜವಾದ ಬೆಲೆಯಿಲ್ಲ ಹಾಗೆ ಇದಕ್ಕೆ ಬೆಲೆಯಿದೆಯೆಂದು ಜನರು ಭಾವಿಸುತ್ತಾರೆಯೆ ಎಂದು ನನಗೆ ಸಂದೇಹ ಹೇಗಾದರೂ ಕೋಮುವಾರು ಮನೋಗತಿಯ ಚಿಹ್ನೆಯನ್ನು ಅದು ಎತ್ತಿ ತೋರಿಸುವುದಾಗಿದೆಯಲ್ಲದೆ ಅದಕ್ಕೆ ಅತಿಶಯವಾದ ಪ್ರಾಮುಖ್ಯತೆಯೂ ಕೊಡಲ್ಪಟ್ಟಿದೆ. ಭಾರತದಲ್ಲಿರುವ ' ಮುಸ್ಲಿಂ ಜನಪದ ' ' ಮುಸ್ಲಿಂ ಸಂಸ್ಕೃತಿ, ' ಹಿಂದೂ ಮತ್ತು ಮುಸ್ಲಿಂ ' ಸಂಸ್ಕೃತಿ ' ಗಳ ಪರಸ್ಪರ ಸಂಪೂರ್ಣ ಅಸಮಂಜಸತೆ, ಇವುಗಳ ವಿಚಾರವಾಗಿ ಕೆಲವು ಮಾತುಗಳು ಒತ್ತಿ ಹೇಳಲ್ಪಟ್ಟಿವೆ ಇದರಿಂದ ಸಂಗ್ರಹಿಸಬಹುದಾದ ಅನಿವಾರ್ಯವಾದ ಅನುಮಾನವೇನೆಂದರೆ (ಅಷ್ಟು ಒರಟಾದ ಭಾಷೆಯಲ್ಲಿ ಹೇಳಲ್ಪಡದಿದ್ದರೂ ಕೂಡ) ಎರಡು ' ಸಂಸ್ಕೃತಿ ' ಗಳನ್ನೂ ತಕ್ಕಡಿಯಲ್ಲಿ ಹಾಕಿ ಹಿಡಿದು ಅವುಗಳಿಗೆ ಮಧ್ಯಸ್ಥಿಕೆ ನಿಲ್ಲಲು ಬ್ರಿಟಿಷರು ಎಂದೆಂದಿಗೂ ಭಾರತದಲ್ಲೇ ನೆಲೆಸಬೇಕೆಂದು ಅರ್ಥವಾಗುತ್ತದೆ

ಕೆಲವು ಹಿಂದೂ ಕೋಮುವಾರು ಮುಖಂಡರು ಇದೇ ಧಾಟಿಯಲ್ಲಿ ಆಲೋಚಿಸುತ್ತಾರೆ ಆದರೆ ಈ ವ್ಯತ್ಯಾಸದೊಡನೆ ಬಹು ಸಂಖ್ಯಾತರಾಗಿರುವ ತಮ್ಮವರ ' ಸಂಸ್ಕೃತಿ 'ಯೇ ಕಾಲಕ್ರಮೇಣದಲ್ಲಿ ಪ್ರಾಭವ ಪಡೆಯುವುದೆಂಬುದು ಅವರ ನಂಬಿಕೆ

ಹಿಂದೂ ಮತ್ತು ಮುಸ್ಲಿಂ ' ಸಂಸ್ಕೃತಿಗಳು ' ಮತ್ತು ' ಮುಸ್ಲಿಂ ಜನಪದ '—ಈ ಪದಗಳು ಗತೇತಿಹಾಸದ ಹೃದಯಾಕರ್ಷಕವಾದ ಕಲ್ಪನಾ ಪಥಗಳನ್ನೂ ವರ್ತಮಾನ ಭವಿಷ್ಯತ್ಕಾಲಗಳ ಕಾಂಕ್ಷಿತ ಚಿತ್ರಗಳನ್ನೂ ಹೇಗೆ ದೃಗ್ಗೋಚರಪಡಿಸುತ್ತವೆ! ಭಾರತದಲ್ಲಿರುವ ಮುಸ್ಲಿಂ ಜನಪದವು—ಜನಪದದಲ್ಲೊಂದು ಜನಪದ, ಒಟ್ಟಿಗೆ ಸಹ ಇಲ್ಲದೆ, ಮಂಪರಮಂಪರವಾಗಿ, ಅಲ್ಲಿ ಇಲ್ಲಿ ಹರಡಿಹೋಗಿ, ಅನಿಶ್ಚಿತವಾಗಿದೆ. ರಾಜಕೀಯವಾಗಿ

* ಇತ್ತೀಚೆಗೆ ಈ ತೀವ್ರ ಪ್ರತೀಕಾರಕ ಅಂಶಗಳನ್ನು ಬೆಸೆದು ಐಕ್ಯತೆಯನ್ನು ಘೋಷಿಸಲು ಕೆಲವು ಬ್ರಿಟಿಷ್ ರಾಜಮಾನ್ಯರ ಮತ್ತು ಭಾರತೀಯ ಮುಸ್ಲಿಮರ ಒಂದು ಸಂಘವು ಏರ್ಪಟ್ಟಿದೆ.

ಈ ಭಾವನೆಯು ಅವಿವೇಕ, ಆರ್ಥಿಕವಾಗಿ ವಿಕಟ ವಿಚಿತ್ರ, ಗಣನೆಗೆ ಕೂಡ ಅನರ್ಹವಾದುದು ಆದರೂ ಇದರ ಮರೆಯಲ್ಲಡಗಿರುವ ಮನೋಗತವನ್ನು ನಾವು ಅರಿತುಕೊಳ್ಳಲು ಅದು ಸಹಾಯಕವಾಗಿದೆ ಇಂಥ ಬಿಡಿಬಿಡಿಯಾದ, ಮತ್ತು ಬೆರಕೆಮಾಡಲ ಸದಳವಾದ 'ಜನಪದ'ಗಳು ಮಧ್ಯ ಯುಗದಲ್ಲೂ ಅನಂತರದಲ್ಲೂ ಒಟ್ಟಿಗೆ ಬಾಳಿದುವು. ಒಟ್ಟೋಮಾನ್ ಸುಲ್ತಾನರ ಕಾಲದ ಮೊದಲ ದಿನಗಳಲ್ಲಿ ಕಾನ್‌ಸ್ಟಾಂಟಿನೋಪಲ್‌ನಲ್ಲಿ ಇಂಥ ಪ್ರತಿಯೊಂದು 'ಜನಪದ'ವೂ ಬೇರೆಬೇರೆಯಾಗಿಯೇ ಬಾಳುತ್ತ ಒಂದು ಪ್ರಮಾಣದ ಸ್ವಯಮಾಧಿವತ್ಯವನ್ನು ಪಡೆದಿದ್ದುವು—ಲ್ಯಾಟಿನ್ ಕ್ರೈಸ್ತರು, ಆರ್ಥೋಡಾಕ್ಸ್ ಕ್ರೈಸ್ತರು, ಯೆಹೂದ್ಯರು ಮುಂತಾದವರೆಲ್ಲ ಸ್ವದೇಶೇತರ ಭಾವನೆಯ ಆರಂಭವಿದು ಇದೇ, ಇತ್ತೀಚಿನ ಕಾಲದಲ್ಲಿ ಅನೇಕ ಪೌರ್ವಾತ್ಯ ರಾಷ್ಟ್ರಗಳಿಗೆ ಸಿಂಹಸ್ವಪ್ನಪ್ರಾಯವಾಗಿ ಪರಿಣಮಿಸಿತು ಆದ್ದರಿಂದ 'ಮುಸ್ಲಿಂ ಜನಪದ'ದ ವಿಚಾರವಾಗಿ ಮಾತನಾಡುವುದೆಂದರೆ ಜನಾಂಗವೇ ಇಲ್ಲ, ಆದರ ಧಾರ್ಮಿಕ ಬಾಂಧವ್ಯವೊಂದಿದೆ, ಎಂದು, ಆಧುನಿಕ ದೃಷ್ಟಿಯನ್ನನುಸರಿಸಿದ ಯಾವ ಜನಪದವನ್ನೂ ಬೆಳೆಯಲು ಅವಕಾಶಕೊಡಕೂಡದು, ಎಂದು, ಆಧುನಿಕ ನಾಗರಿಕತೆಯನ್ನು ತ್ಯಜಿಸಿ ನಾವೆಲ್ಲರೂ ಮಧ್ಯಯುಗದ ದಾರಿಯನ್ನು ಹಿಡಿದು ಹಿಂದಕ್ಕೆ ಹೋಗಬೇಕು, ಎಂದು, ನಿರಂಕುಶ ಪ್ರಭುತ್ವವಾಗಲೀ ಇಲ್ಲವೇ ವಿದೇಶೀ ಪ್ರಭುತ್ವವಾಗಲೀ ಇರಬೇಕು ಎಂದು, ಕೊನೆಯದಾಗಿ, ಒಂದು ರಾಗೋದ್ರಿಕ್ತ ಮನಃಪರಿಸ್ಥಿತಿ ಮತ್ತು ಸತ್ಯಪರಿಸ್ಥಿತಿಗಳನ್ನು ಅದರಲ್ಲಿಯೂ ವಿಶೇಷವಾಗಿ ಆರ್ಥಿಕ ಸತ್ಯಪರಿಸ್ಥಿತಿಗಳನ್ನು ತಿಳಿದಾಗಲಿ ತಿಳಿಯದೆಯಾಗಲಿ ಎದುರಿಸದೆ ಇದ್ದುಬಿಡಬೇಕೆಂಬ ಇಷ್ಟ, ಎಂದು ಹೊರತಾಗಿ ಬೇರೆ ಏನೇನೂ ಇಲ್ಲ ರಾಗೋದ್ರೇಕಗಳು ತರ್ಕವನ್ನು ತಲೆಕೆಳಗು ಮಾಡಬಲ್ಲವು ತೋರಿಕೆಗೆ ಮಾತ್ರ ಅವು ಅಷ್ಟು ವಿವೇಚನಾರಹಿತವಾಗಿ ಕಾಣುತ್ತವೆಯೆಂದ ಮಾತ್ರಕ್ಕೆ ನಾವು ಅವುಗಳನ್ನು ಕಡೆಗಣಿಸಲಾಗುವುದಿಲ್ಲ ಆದರೆ 'ಮುಸ್ಲಿಂ ಜನಪದ'ದ ಈ ಭಾವನೆಯು ಕೇವಲ ಕೆಲವು ಕಲ್ಪನಾಶಕ್ತಿಗಳ ಭ್ರಾಂತಿಕಲ್ಪನೆ ಪತ್ರಿಕೆಗಳು ಈ ವಿಷಯವಾಗಿ ಬೇಕಾದಷ್ಟು ಪ್ರಕಟಣೆಯನ್ನು ಮಾಡದೆ ಇದ್ದಿದ್ದರೆ ಯಾರೂ ಇದರ ಸಮಾಚಾರವನ್ನೇ ಕೇಳುತ್ತಿರಲಿಲ್ಲ ಬಹುಮಂದಿ ಇದನ್ನು ನಂಬಿದ್ದರೂ ಕೂಡ ಸತ್ಯ ಪರಿಸ್ಥಿತಿಯ ಸ್ಪರ್ಶನಮಾತ್ರದಿಂದ ಅದು ಮಾಯವಾಗುವುದು

ಹಿಂದೂ ಮತ್ತು ಮುಸ್ಲಿಂ 'ಸಂಸ್ಕೃತಿ'ಯ ಭಾವನೆಗಳೂ ಹೀಗೆಯೇ, ರಾಷ್ಟ್ರೀಯ ಸಂಸ್ಕೃತಿಗಳ ಕಾಲವೂ ಬೇಗ ಬೇಗ ಮುಗಿದು ಹೋಗುತ್ತಿದೆ, ಮತ್ತು ಜಗತ್ತು ಒಂದೇ ಸಾಂಸ್ಕೃತಿಕ ಅಂಗವಾಗುತ್ತಿದೆ ಜನಪದಗಳು ತಮಗೆ ವಿಲಕ್ಷಣವಾಗಿರುವ ಬಹ್ವಂಶವನ್ನು ದೀರ್ಘಕಾಲ ಉಳಿಸಿಕೊಳ್ಳಬಹುದು ಮತ್ತು ಉಳಿಸಿಕೊಳ್ಳುತ್ತವೆ—ಭಾಷೆ, ಅಭ್ಯಾಸಗಳು, ಆಲೋಚನಾ ವಿಧಾನ, ಇತ್ಯಾದಿ—ಆದರೆ ಯಂತ್ರಯುಗವೂ ವಿಜ್ಞಾನವೂ, ಶೀಘ್ರಪ್ರಯಾಣ, ವಿಶ್ವವಿಚಾರಗಳನ್ನು ನಿರಂತರವಾಗಿ ಒದಗಿ

ಸುಪಿಕೆ, ರೇಡಿಯೋ, ಸಿನಿಮ, ಇತ್ಯಾದಿಗಳೊಡನೆ ಅವುಗಳನ್ನು ಹೆಚ್ಚು ಹೆಚ್ಚಾಗಿ ಸಮರೂಪಿಗಳಾಗಿ ಮಾಡುತ್ತವೆ ಈ ಅನಿವಾರ್ಯಗತಿಗೆ ವಿರುದ್ಧವಾಗಿ ಯಾರೊಬ್ಬನೂ ಹೋರಾಡಲಾರ ಆಧುನಿಕ ನಾಗರಿಕತೆಯನ್ನು ಛಿನ್ನಭಿನ್ನ ಮಾಡುವ ವಿಶ್ವವಿನಾಶವೊಂದು ಮಾತ್ರ ಅದನ್ನು ವಾಸ್ತವವಾಗಿಯೂ ತಡೆಯಬಹುದು ಜೀವನವನ್ನು ಕುರಿತ ಹಿಂದೂ ಮತ್ತು ಮುಸ್ಲಿಂ ಸಾಂಪ್ರದಾಯಿಕ ವೇದಾಂತಗಳಲ್ಲಿ ನಿಜವಾಗಿ ಅನೇಕ ಭಿನ್ನತೆಗಳಿವೆ ಆದರೆ ಈ ಭಿನ್ನತೆಗಳು, ಜೀವನವನ್ನು ಕುರಿತ ಆಧುನಿಕ ವೈಜ್ಞಾನಿಕ ಮತ್ತು ಕೈಗಾರಿಕಾಭಿವೃದ್ಧಿವಾದದ ದೃಷ್ಟಿಕ್ಷೇಪದೊಡನೆ ಅವುಗಳನ್ನು ಹೋಲಿರುವಾಗ ಸ್ಪಷ್ಟವಾಗಿಯೇ ಇಲ್ಲ, ಏಕೆಂದರೆ ಎರಡನೆಯ ಮತ್ತು ಮೊದಲನೆಯ ದೃಷ್ಟಿಗಳ ಮಧ್ಯೇ ವಿಶಾಲವಾದ ಕಮರಿಯಿದೆ ಇಂದು ಭಾರತದಲ್ಲಿ ನಿಜವಾದ ಹೋರಾಟವು ಹಿಂದೂ ಸಂಸ್ಕೃತಿ ಮತ್ತು ಮುಸ್ಲಿಂ ಸಂಸ್ಕೃತಿಗಳದಲ್ಲ, ಆದರೆ ಇವೆರಡಕ್ಕೆ ಮತ್ತು ಜಯಿಸುವ ಆಧುನಿಕ ನಾಗರಿಕತೆಯ ವೈಜ್ಞಾನಿಕ ಸಂಸ್ಕೃತಿಗೆ 'ಮುಸ್ಲಿಂ ಸಂಸ್ಕೃತಿ'ಯನ್ನು, ಅದು ಏನಾದರೂ ಆಗಲಿ, ಉಳಿಸಿಕೊಳ್ಳಬೇಕೆಂಬ ಆಶೆಯುಳ್ಳವರು, ಹಿಂದೂ ಸಂಸ್ಕೃತಿಯನ್ನು ಕುರಿತು ಅಗಚಾಟಲು ಪಡಕೂಡದು, ಆದರೆ ಪಶ್ಚಿಮದ ರಾಕ್ಷಸನನ್ನು ತಡೆಯಬೇಕು ಆಧುನಿಕ ವೈಜ್ಞಾನಿಕ ಮತ್ತು ಕೈಗಾರಿಕಾಭಿವೃದ್ಧಿವಾದಿ ನಾಗರಿಕತೆಗೆ ವಿರುದ್ಧವಾಗಿ ನಡೆವ ಹಿಂದು ಮತ್ತು ಮುಸ್ಲಿಂ ಪ್ರಯತ್ನಗಳೆಲ್ಲ ವಿಫಲವಾಗುವುವೆಂಬುದರಲ್ಲಿ ಆತ್ಮೀಯವಾಗಿ ನನಗೆ ಸಂದೇಹವೇ ಇಲ್ಲ, ಮತ್ತು ನಾನು ಈ ವಿಫಲತೆಯನ್ನು ಯಾವ ಪರಿತಾಪವೂ ಇಲ್ಲದೆ ನಿರೀಕ್ಷಿಸುವೆನು, ರೈಲ್ವೆಗಳ ಮತ್ತು ತತ್ಸದೃಶ ವಸ್ತುಗಳು ಇಲ್ಲಿಗೆ ಬಂದಾಗ ನಾವು ತಿಳಿಯದೆಯೇ ಮತ್ತು ಪ್ರೇರಣೆಯಿಲ್ಲದೆಯೇ ಆಯ್ಕೆಯನ್ನು ಮಾಡಿದೆವು ಸರ್ ಸಯ್ಯದ್ ಅಹಮದ್ ಖಾನ್‌ರವರು ಅಲಿಘರ್ ಕಾಲೇಜನ್ನು ಸ್ಥಾಪಿಸಿದಾಗ ಭಾರತೀಯ ಮುಸ್ಲಿಮರ ಪರವಾಗಿ ತಮ್ಮ ಆಯ್ಕೆಯನ್ನು ಮಾಡಿದರು ಆದರ ಮುಳುಗುವ ಮನುಷ್ಯನು ತನ್ನನ್ನು ಬದುಕಿಸಬಲ್ಲ ಯಾವುದಾದರೊಂದನ್ನು ಹಿಡಿದುಕೊಳ್ಳುವ ಆಯ್ಕೆಯಂತಹುದಲ್ಲದೆ, ನಮಗಾರಿಗೂ ಈ ವಿಷಯದಲ್ಲಿ ನಿಜವಾಗಿ ಬೇರೆ ಆಯ್ಕೆಯೂ ಇರಲಿಲ್ಲ

ಹಾಗಾದರೆ ಈ 'ಮುಸ್ಲಿಂ ಸಂಸ್ಕೃತಿ' ಏನು? ಅದು, ಅರಬರು, ಪಾರಸಿಕರು, ತುರ್ಕಿಯವರು, ಮುಂತಾದವರ ಮಹಾಕಾರ್ಯಗಳ ಒಂದು ವಿಧದ ಜನಾಂಗಿಕ ಸ್ಮರಣೆಯೇ? ಅಥವಾ ಭಾಷೆಯೆ? ಅಥವಾ ಕಲೆ ಮತ್ತು ಸಂಗೀತವೆ? ಅಥವಾ ಪದ್ಧತಿಗಳೆ? ಯಾರೂ ಇಂದಿನ ಮುಸ್ಲಿಂ ಕಲೆ ಅಥವಾ ಮುಸ್ಲಿಂ ಸಂಗೀತವನ್ನು ಕುರಿತು ಅನ್ವಯ ಮಾಡಿದುದರ ಜ್ಞಾಪಕ ನನಗಿಲ್ಲ ಭಾರತದಲ್ಲಿ ಮುಸ್ಲಿಮರ ಆಲೋಚನೆಯ ಮೇಲೆ ಪ್ರಭಾವವನ್ನು ಬೀರಿರುವ ಎರಡು ಭಾಷೆಗಳೆಂದರೆ ಅರಬ್ಬಿ ಮತ್ತು ಪರ್ಷಿಯನ್, ಅದರಲ್ಲಿಯೂ ವಿಶೇಷವಾಗಿ ಎರಡನೆಯದು ಆದರೆ ಪರ್ಷಿಯನ್ನಿನ ಪ್ರಭಾವದಲ್ಲಿ ಧರ್ಮದ ನೋಂಕಿಲ್ಲ ಪರ್ಷಿಯನ್ ಭಾಷೆಯೂ ಮತ್ತು ಅನೇಕ ಪರ್ಷಿ

ಯನ್ ಪದ್ಧತಿ ಮತ್ತು ಸಂಪ್ರದಾಯಗಳೂ ಸಾವಿರಾರು ವರ್ಷಗಳಿಂದ ಭಾರತಕ್ಕೆ ಬಂದು ಉತ್ತರ ಹಿಂದೂಸ್ಥಾನದಲ್ಲೆಲ್ಲ ಪ್ರಬಲವಾಗಿ ತಮ್ಮ ಪ್ರಭಾವ ಮುದ್ರೆಯನ್ನೊತ್ತಿದುವು ನೆರೆಹೊರೆಯವರಿಗೆ ತನ್ನ ಭಾಷೆಯನ್ನೂ ಸಂಸ್ಕೃತಿಯನ್ನೂ ಕಳುಹಿಸುತ್ತ ಪರ್ಷಿಯವು ಪೂರ್ವದೇಶಗಳ ಫ್ರಾನ್ಸ್ ಆಗಿತ್ತು ಭಾರತದಲ್ಲಿ ನಮಗೆಲ್ಲರಿಗೂ ಅದು ಸಮಾನವಾದ ಮತ್ತು ಅಮೂಲ್ಯವಾದ ಸ್ವಾಮ್ಯ

ಇಸ್ಲಾಮಿಕ್ ಜನಾಂಗಗಳ ಮತ್ತು ದೇಶಗಳ ಗತಸಿದ್ಧಿಗಳಲ್ಲಿನ ಹೆಮ್ಮೆಯು ಪ್ರಾಯಶಃ ಅತ್ಯಂತ ಪ್ರಬಲವಾದ ಇಸ್ಲಾಮಿಕ್ ಬಂಧನಗಳಲ್ಲೊಂದಾಗಿದೆ ವಿವಿಧ ಜನಾಂಗಗಳ ಈ ಘನವಾದ ಚರಿತೆಗಾಗಿ ಮುಸ್ಲಿಮರನ್ನು ಯಾರಾದರೂ ಕರುಬುವರೆ ? ಅದನ್ನವರು ಜ್ಞಾಪಿಸಿಕೊಂಡು ಪೋಷಿಸುವವರೆಗೆ ಯಾರೂ ಅವರಿಂದ ಅದನ್ನು ಕಸಿದುಕೊಳ್ಳಲಾರರು ವಾಸ್ತವವಾಗಿಯೂ ಈ ಗತಚರಿತೆಯು ಬಹುಮಟ್ಟಿಗೆ ನಮ್ಮೆಲ್ಲರ ಸಮಾನ ಸ್ವಾಮ್ಯವಾಗಿದೆ, ಏಕೆಂದರೆ ಪ್ರಾಯಶಃ ಯೂರೋಪಿನ ಮೇಲ್ಮೆಯ ಳಿಕೆಗೆ ವಿರುದ್ಧವಾಗಿ ನಮ್ಮನ್ನು ಒಂದುಗೂಡಿಸುವ ಸಮಾನ ಬಂಧನವೊಂದೆಂದು ಏಷ್ಯದವರಾದ ನಾವು ಆಲೋಚಿಸುವೆವು ಯಾವಾಗ ಯಾವಾಗ ನಾನು ಸ್ಪೈನಿನಲ್ಲಿ ಅಥವಾ ಧರ್ಮಯುದ್ಧದಲ್ಲಿ ಅರಬರ ಸಂಘರ್ಷಣೆಗಳನ್ನು ಕುರಿತು ಓದಿದ್ದೇನೋ ಆಗಲೆಲ್ಲ ನನ್ನ ಸಹಾನುಭೂತಿಗಳು ಸದಾ ಅವರೊಂದಿಗೇ ಇವೆ ನಾನು ನಿಷ್ಪಕ್ಷಪಾತಿಯಾಗಿಯೂ ಬಾಹ್ಯಾರ್ಥಿಯಾಗಿಯೂ ಇರಲು ಪ್ರಯತ್ನಿಸುತ್ತೇನೆ ಆದರೆ, ಹಾಗೆ ಪ್ರಯತ್ನಪಡುವೆನಾದರೂ, ಏಷ್ಯದ ಜನತೆಯನ್ನು ಕುರಿತ ಆಸ್ಥೆಯ ಪ್ರಶ್ನೆಯು ಒದಗಿದಾಗ ನನ್ನ ಒಳಗಿರುವ ಏಷ್ಯದವನು ನನ್ನ ನಿರ್ಣಯದ ಮೇಲೆ ಪ್ರಭಾವ ಮುದ್ರೆಯನ್ನೊತ್ತುತ್ತಾನೆ.

ಈ ' ಮುಸ್ಲಿಂ ಸಂಸ್ಕೃತಿ 'ಯೇನೆಂಬುದನ್ನು ಅರಿಯಲು ನಾನು ಬಹಳ ಕಷ್ಟಪಟ್ಟಿದ್ದೇನೆ, ಆದರೆ ನಾನು ಯಶಸ್ವಿಯಾಗಲಿಲ್ಲವೆಂದು ಒಪ್ಪಿಕೊಳ್ಳುತ್ತೇನೆ ಉತ್ತರ ಭಾರತದಲ್ಲಿ ಪರ್ಷಿಯನ್ ಭಾಷೆ ಮತ್ತು ಸಂಪ್ರದಾಯಗಳಿಂದ ಪ್ರಭಾವ ಸ್ಫೂರ್ತಿತರಾದ ಪುಟ್ಟ ಒಕ್ಕೂಟಯಷ್ಟು ಮಂದಿ ಮಧ್ಯಮ ತರಗತಿಯ ಮುಸ್ಲಿಮರನ್ನೂ ಹಿಂದೂಗಳನ್ನೂ ನೋಡಿದ್ದೇನೆ ಧೋತಿಯನ್ನು ಧರಿಸುವುದು, ಹಿಂಜುಟ್ಟಿನ ಗಂಟನ್ನಿಟ್ಟುಕೊಂಡಿರುವುದು, ಬೇರೊಂದು ಬಗೆಯ ಲೋಟ, ಇವು ಹಿಂದೂ ಸಂವಾದಿ ಪದ್ಧತಿಗಳಾಗಿರುವಂತೆಯೇ ಜನಜಂಗುಳಿಯ ಕಡೆಗೆ ತಿರುಗಿದಾಗ ' ಮುಸ್ಲಿಂ ಸಂಸ್ಕೃತಿ 'ಯ ಅತ್ಯಂತ ಸ್ಪಷ್ಟವಾದ ಸಂಕೇತಗಳು ಇವೆಂದು ತೋರುತ್ತವೆ ಬಹಳ ಉದ್ದವಾಗಿಯೂ ಇರದ, ಬಹಳ ಗಿಡ್ಡಾಗಿಯೂ ಇರದ, ಒಂದು ಬಗೆಯ ವೈಶಿಷ್ಟ್ಯದಿಂದ ಕೂಡಿದ ಮಾದರಿಯ ಪೈಜಾಮುಗಳು, ಮೀಸೆಯನ್ನು ಒಂದು ವಿಶಿಷ್ಟ ರೀತಿಯಲ್ಲಿ ಬೋಳಿಸುವುದು ಅಥವಾ ಕತ್ತರಿಸಿಕೊಳ್ಳುವುದು ಆದರೆ ಗಡ್ಡವನ್ನು ಬೆಳೆಯಬಿಡುವುದು

ಮತ್ತು ಒಂದು ವಿಶೇಷ ರೀತಿಯ ಮೂತಿಯುಳ್ಳ ಲೋಟ ವಾಸ್ತವವಾಗಿಯೂ ಈ ವ್ಯತ್ಯಾಸಗಳೂ ಕೂಡ ಬಹುತರವಾಗಿ ನಗರಗಳಿಗೆ ಸಂಬಂಧಪಟ್ಟವು ಮತ್ತು ಅವು ಮಾಯವಾಗಲು ಹವಣಿಸುವುವು ಮುಸ್ಲಿಂ ಬೇಸಾಯಗಾರಜಂಗುಳಿ ಮತ್ತು ಕೈಗಾರಿಕೆ ಕೂಲಿಗಾರರನ್ನು ಹಿಂದುವಿನಿಂದ ಬೇರೆಮಾಡಿ ಪತ್ತೆಮಾಡಲು ಸಾಧ್ಯವಿಲ್ಲ ಅಲಿಘರು ಫೆಜ್‌ನೊಡನೆ ಕೆಂಪು ಟರ್ಕಿಷ್ ಟೋಪಿಯನ್ನು [ಟರ್ಕಿಯೇ ಬೇಡವೆಂದು ದೂರೀಕರಿಸಿದ್ದರೂ ಅದಕ್ಕೆ ಟರ್ಕಿಷ್ ಎಂದು ಹೆಸರಿಟ್ಟಿದ್ದಾರೆ) ಇನ್ನೂ ಧರಿಸಬಯಸುತ್ತಿದ್ದರೂ ಕಲಿತ ಮುಸ್ಲಿಂ ವರ್ಗಕ್ಕೆ ಗಡ್ಡದ ಲೀಲೆಯಿಲ್ಲ ಮುಸ್ಲಿಂ ಹೆಂಗಸರು ಸೀರೆಯನ್ನುಡಲು ಪ್ರಾರಂಭಿಸಿದ್ದಾರೆ ಮತ್ತು ನಿಧಾನವಾಗಿಯಾದರೂ 'ಪರ್ದಾ' ದಿಂದ ಹೊರಬರುತ್ತಿದ್ದಾರೆ ನನ್ನ ಸ್ವಂತ ಅಭಿರುಚಿಗಳು ಆ ಕೆಲವು ಪದ್ಧತಿಗಳೊಡನೆ ಸಮರಸವಾಗುವುದಿಲ್ಲ ಮತ್ತು ಗಡ್ಡಗಳನ್ನಾಗಲಿ, ಮೀಸೆಗಳನ್ನಾಗಲಿ ಅಥವಾ ತಲೆಗಂಟುಗಳನ್ನಾಗಲಿ ನಾನು ಮೆಚ್ಚುವುದಿಲ್ಲ. ಆದರೆ ಕಾಬೂಲಿನಲ್ಲಿ ಅಮಾನುಲ್ಲಾರವರು ಗಡ್ಡಗಳ ಬಗ್ಗೆ ತೀವ್ರ ರೀತಿಯಲ್ಲಿ ವ್ಯವಹರಿಸಿದಾಗ ನನಗೆ ಆನಂದವಾಯಿತೆಂದು ಒಪ್ಪಿಕೊಳ್ಳಬೇಕಾಗಿದೆಯಾದರೂ ನಾನು ನನ್ನ ಅಭಿರುಚಿಯ ನಿಯಮಗಳನ್ನು ಇತರರ ಮೇಲೆ ಬಲಾತ್ಕಾರದಿಂದ ಹೊರಿಸಲು ಇಷ್ಟಪಡುವುದಿಲ್ಲ

ಸದಾ ಹಿಂದಕ್ಕೇ ನೋಡುತ್ತಿರುವ, ಪಟ್ಟನಿಂದ ನುಣ್ಚಿಕೊಂಡು ಹೋಗುತ್ತಿರುವ ವಸ್ತುಗಳನ್ನೇ ಸದಾ ಹಿಡಿದುಕೊಳ್ಳುತ್ತಿರುವ ಆ ಹಿಂದೂ ಮತ್ತು ಮುಸ್ಲಿಮರದು ಅಸಾಮಾನ್ಯವಾದ ಕರುಣಾದ್ರ್ಯ ದೃಶ್ಯವಾಗಿದೆ, ಎಂದು ನಾನು ಹೇಳಲೇಬೇಕು ನಾನು ಗತವೈಭವವನ್ನು ಖಂಡಿಸುವುದಕ್ಕಾಗಲಿ ಅಥವಾ ನಿರಾಕರಿಸುವುದಕ್ಕಾಗಲಿ ಇಷ್ಟಪಡುವುದಿಲ್ಲ, ಏಕೆಂದರೆ ನಮ್ಮ ಗತವೈಭವದಲ್ಲಿ ಅನುಪಮ ಸುಂದರವಾದುದು ಅಷ್ಟು ಹೆಚ್ಚಾಗಿದೆ ಅದು ಚಿರಕಾಲ ಬಾಳುವುದೆಂಬುದರಲ್ಲಿ ನನಗೆ ಸಂದೇಹವಿಲ್ಲ ಆದರೆ ಈ ಜನಗಳು ಆ ಸುಂದರವಾಗಿರುವುದನ್ನು ಹಿಡಿದುಕೊಳ್ಳದೆ ಅಮೂಲ್ಯವಲ್ಲದುದನ್ನೂ ಅನೇಕವೇಳೆ ಅಪಾಯಕರವಾದುದನ್ನೂ ಹಿಡಿದುಕೊಳ್ಳುವರು

ಈಚಿನ ವರ್ಷಗಳಲ್ಲಿ ಭಾರತೀಯ ಮುಸ್ಲಿಮರು ಬಾರಿಬಾರಿಗೂ ಧಕ್ಕೆಗಳನ್ನು ಅನುಭವಿಸಿದ್ದಾರೆ, ಅವರ ಆಳದಲ್ಲಿ ರಕ್ಷಿತವಾದ ಭಾವನೆಗಳನೇಕವು ನುಚ್ಚುನೂರಾಗಿವೆ ೧೯೨೦ ರಲ್ಲಿ ಭಾರತವು ಯಾವುದಕ್ಕಾಗಿ ಕೆಚ್ಚಿನ ಕಾಳಗವನ್ನು ಕೊಟ್ಟಿತೋ ಆ ಖಿಲಾಫತ್ತನ್ನು ಇಸ್ಲಾಮಿನ ಜಗಜಟ್ಟಿಯಾದ ತುರ್ಕಿಯು ಮುಕ್ತಾಯ ಮಾಡಿರುವುದಲ್ಲದೆ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತ ಧರ್ಮದಿಂದ ದೂರ ಹೋಗಿದೆ ತುರ್ಕಿಯ ಹೊಸ ರಾಜ್ಯಾಂಗ ವ್ಯವಸ್ಥೆಯಲ್ಲಿ, ತುರ್ಕಿಯು ಮುಸ್ಲಿಂ ರಾಷ್ಟ್ರವೆಂದು ಕಲವೊಂದರಲ್ಲಿ ಹೇಳಲಾಗಿತ್ತು, ಆದರೆ ಎಲ್ಲಿಯಾದರೂ ಅಪಾರ್ಥವಾದೀತೆಂದು, ಕೆಮಾಲ್ ಪಾಷಾರವರು ೧೯೨೭ ರಲ್ಲಿ ಹೀಗೆ ಹೇಳಿದರು: "ರಾಜ್ಯಾಂಗ ವ್ಯವಸ್ಥೆಯಲ್ಲಿ ತುರ್ಕಿಯು ಒಂದು ಮುಸ್ಲಿಂ ರಾಷ್ಟ್ರವೆಂದು ಹೇಳಿರುವುದು, ಮೊಟ್ಟಮೊದಲಮುಗದಲ್ಲಿಯೇ ತೊಡೆದು

ಹಾಕಲ್ಪಡುವ ಹಣೆಯಬರಹವನ್ನುಳ್ಳ (ಆತ್ಮಧ್ರೀಯ ಘಾತಕವಾದ) ಇತ್ಯರ್ಥ" ಆಮೇಲೆ ಮುಂದೆ ಈ ಸುಳುವಿಗೆ ತಕ್ಕಂತೆಯೇ ಅವರು ಕಾರ್ಯ ನಡೆಸಿದರೆಂದು ನನ್ನ ನಂಬಿಕೆ ಈಜಿಪ್ಟು, ಹೆಚ್ಚು ಜಾಗರೂಕತೆಯಿಂದಲಾದರೂ, ಅದೇ ದಾರಿಯಲ್ಲಿ ನಡೆಯುತ್ತ ತನ್ನ ರಾಜಕಾರಣವನ್ನು ಸಂಪೂರ್ಣ ಧರ್ಮದೂರವಾಗಿಟ್ಟುಕೊಂಡಿದೆ ಹೆಚ್ಚು ಹಿಂದೆ ಬಿದ್ದಿರುವ ಅರಬ್ಬೀದೇಶದ ಹೊರತಾಗಿ ಹೀಗೆಯೇ ಅರಬ್ಬಿ ರಾಷ್ಟ್ರಗಳೂ. ಪರ್ಶಿಯವು ತನ್ನ ಸಾಂಸ್ಕೃತಿಕ ಸ್ಫೂರ್ತಿಗಾಗಿ ಇಸ್ಲಾಂ ಪೂರ್ವ ದಿನಗಳ ಕಡೆಗೆ ಹಿನ್ನೋಡುತ್ತಿದೆ ಪ್ರತಿಯೊಂದು ಕಡೆಯಲ್ಲೂ ಧರ್ಮವು ಹಿನ್ನೆಲೆಗೆ ಸರಿಯುವುದು, ಮತ್ತು ರಾಷ್ಟ್ರೀಯತಾವಾದವು ಆಕ್ರಮಿಸುವ ವಸ್ತ್ರಧಾರಿಯಾಗಿ ವ್ಯಕ್ತದೋರುವುದು, ಮತ್ತು ರಾಷ್ಟ್ರೀಯತಾವಾದದ ಹಿಂದೆ ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಗಳಿಂದ ಮಾತನಾಡುವ ಇತರ 'ವಾದ'ಗಳು, 'ಮುಸ್ಲಿಂ ಜನಪದ' ಮತ್ತು 'ಮುಸ್ಲಿಂ ಸಂಸ್ಕೃತಿ' ಗಳೆಲ್ಲಿ ? ಉತ್ತರ ಭಾರತದಲ್ಲಿ ಮಾತ್ರ, ಭವಿಷ್ಯತ್ತಿನಲ್ಲಿ, ಬ್ರಿಟಿಷರ ದಯಾಪರ ಪ್ರಭುತ್ವದಿಂದ ಕೃಪಾಪೋಷಿತವಾಗಿ ಆನಂದಪಡುತ್ತಿರುವ ಅವಸ್ಥೆಯಲ್ಲಿ ಅವನ್ನು ನೋಡಬೇಕೆ?

ರಾಜಕಾರಣದ ರಚನಾಂಶಗಳನ್ನು ಕುರಿತು ವ್ಯಕ್ತಿಯು ವಿಶಾಲವಾದ ದೃಷ್ಟಿಯನ್ನಿಟ್ಟುಕೊಳ್ಳುವುದೇ ಪ್ರಗತಿಯಾದರೆ, ನಮ್ಮ ಕೋಮುವಾರುವಾದಿಗಳೂ ಹಾಗೂ ನಮ್ಮ ಸರಕಾರವೂ ಬೇಕೆಂದಯೂ ಒಂದೇ ಸಮನಾಗಿಯೂ ಇದರ ವಿಪರ್ಯಾಸವನ್ನು -ಈ ದೃಷ್ಟಿಯನ್ನು ಸಂಕುಚಿತಮಾಡುವುದನ್ನು– ಗುರಿಯಾಗಿಟ್ಟುಕೊಂಡಿದ್ದಾರೆ

## ೫೭

# ತಪ್ಪಿಸಿಕೊಳ್ಳಲರಿದಾದ ಸಮಸ್ಯೆ

ನನ್ನ ಪುನರ್ಬಂಧನ ಮತ್ತು ಶಿಕ್ಷೆಯ ಸಂಭವವು ಸದಾ ನನ್ನ ಮೇಲೆ ತೂಗಿತ್ತು. ಆರ್ಡಿನೆನ್ಸುಗಳು ಮತ್ತು ತತ್ಸದೃಶವಾದವುಗಳಿಂದ ನಾಡು ಆಳಲ್ಪಡುತ್ತಿದ್ದಾಗ ಮತ್ತು ಸ್ವಯಂ ಕಾಂಗ್ರೆಸ್ಸೇ ಅಕ್ರಮಕೂಟವಾಗಿದ್ದಾಗ ಅದು ವಾಸ್ತವವಾಗಿಯೂ ಸಂಭವವೊಂದಕ್ಕಿಂತ ಹೆಚ್ಚಾದುದಾಗಿತ್ತು. ಬ್ರಿಟಿಷ್ ಸರಕಾರವು ರಚಿತವಾಗಿದ್ದಂತೆ, ಹಾಗೂ ನಾನು ರಚಿತವಾಗಿದ್ದಂತೆ, ನನ್ನ ದಮನವು ಅನಿವಾರ್ಯವೆಂದು ತೋರಿತು. ಈ ನಿತ್ಯಪ್ರಚಲಿತ ಪ್ರತ್ಯಾಶೆಯು ನನ್ನ ಕಾರ್ಯದ ಮೇಲೆ ಪ್ರಭಾವಶಾಲಿಯಾಯಿತು. ಯಾವುದಕ್ಕೂ ನಾನು ನಿಷ್ಕೃಷ್ಟವಾಗಿ ತೀರ್ಮಾನಿಸಿಕೊಂಡಿರಲಾರದೆ ಹೋಗಿ, ಆದಷ್ಟು ಬೇಗಬೇಗನೆ ಕೃತಕೃತ್ಯನಾಗಬೇಕೆಂದು ಆತುರನಾಗಿದ್ದೆ.

ಆದರೂ ಬಂಧನವನ್ನು ಸ್ವಾಗತಿಸಲು ನನಗೆ ಇಷ್ಟವಿರಲಿಲ್ಲ, ಮತ್ತು ಬಹಳ ಮಟ್ಟಿಗೆ ನಾನು ಅದಕ್ಕೆ ಕರೆದೊಯ್ಯಬಹುದಾದ ಚಟುವಟಿಕೆಗಳಿಂದ ದೂರವಾಗಿದ್ದೆ. ಪ್ರಾಂತದಲ್ಲಿಯೂ ಹೊರಗೂ ಅನೇಕ ಸ್ಥಳಗಳಿಂದ ಪ್ರವಾಸವನ್ನು ಕೈಗೊಳ್ಳಬೇಕೆಂದು ನನಗೆ ಆಹ್ವಾನಗಳು ಬಂದುವು. ಅಂಥ ಯಾವ ಭಾಷಣ ಪ್ರವಾಸವೆಂದರೂ ಇದ್ದಕ್ಕಿದ್ದಂತೆಯೇ ಕೊನೆಗಾಣುವ ಉಗ್ರ ಪ್ರಸ್ಥಾನ ಮಾತ್ರವಾಗುವುದರಿಂದ ನಾನು ಅವನ್ನು ನಿರಾಕರಿಸಿದೆ. ಆಗ ನನಗೆ ಮಧ್ಯ ಮಾರ್ಗದ ಯಾವ ಮಂಟಪ ಸ್ಥಳವೂ ಇರಲಿಲ್ಲ. ಬೇರೆ ಯಾವುದಾದರೂ ವಿಷಯವನ್ನು ಕುರಿತು – ಗಾಂಧಿಜಿಯವರೊಡನೆಯೂ ಕಾರ್ಯನಿರ್ವಾಹಕ ಸಮಿತಿಯ ಸದಸ್ಯರೊಡನೆಯೂ ಸಮಾಲೋಚಿಸುವ ಸಲುವಾಗಿ—ಯಾವುದಾದರೂ ಒಂದು ಸ್ಥಳಕ್ಕೆ ಭೇಟಿಯನ್ನಿತ್ತಾಗ ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡುತ್ತಿದ್ದೆ, ಮತ್ತು ಎದೆಬಿಚ್ಚಿ ಮಾತನಾಡುತ್ತಿದ್ದೆ. ಜಬ್ಬಲ್ಪುರದಲ್ಲಿ ದೊಡ್ಡ ನೆರವಿಯೊಂದೂ ವಿಜೃಂಭಣೆಯಿಂದ ಕೂಡಿದ ಮೆರವಣಿಗೆಯೊಂದೂ ನಡೆದುವು, ದೆಹಲಿಯಲ್ಲಿ ನಾನು ನೋಡಿದ್ದ ಸಭೆಗಳಲ್ಲೆಲ್ಲಾ ಅತ್ಯಂತ ದೊಡ್ಡದೊಂದು ಸಭೆಯು ಕೂಡಿತ್ತು. ಈ ಸಭೆಗಳ ವಿಜಯುವೇ, ವಾಸ್ತವವಾಗಿಯೂ, ಸರಕಾರವು ಅವುಗಳ ಅನೇಕ ಬಾರಿಯ ಕೂಟವನ್ನು ಸಹಿಸುವುದಿಲ್ಲವೆಂಬುದನ್ನು ಸ್ಪಷ್ಟಪಡಿಸಿತು. ದೆಹಲಿಯಲ್ಲಿ, ಸಭೆ ಮುಗಿದ ಮೇಲೆ, ನನ್ನ ಅತ್ಯಾಸನ್ನ ಬಂಧನದ ಬಹಳ ತೀವ್ರವಾದ ವದಂತಿಯು ಹರಡಿತ್ತು, ಆದರೆ ನಾನು ಬದುಕಿಕೊಂಡು, ದಾರಿಯಲ್ಲಿ ಅಲಿಘರ್‌ನಲ್ಲಿ ಮುಸ್ಲಿಂ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಭಾಷಣ ಮಾಡುವುದಕ್ಕಾಗಿ ಇಳಿದು, ಆಮೇಲೆ ಅಲಹಾಬಾದಿಗೆ ಹಿಂತಿರುಗಿದೆ.

ಸರಕಾರವು ಎಲ್ಲ ಪರಿಣಾಮಕಾರಿ ರಾಜಕೀಯ ಕಾರ್ಯವನ್ನೂ ಮುರಿಯಲು ಪ್ರಯತ್ನಿಸುತ್ತಿದ್ದಾಗ ರಾಜಕೀಯೇತರ ಸಾರ್ವಜನಿಕ ಕಾರ್ಯಕಲಾಪಗಳಲ್ಲಿ ಭಾಗವಹಿಸುವ ಭಾವನೆಯನ್ನು ನಾನು ಹೇಸಿದೆ ಅಂಥ ಕಾರ್ಯವನ್ನು ಬಿಟ್ಟು ಮರೆಯನ್ನು ಸೇರಲು, ಅತ್ಯಂತ ಜಡವಾದ ಕಾರ್ಯಕಲಾಪಗಳಲ್ಲಿ ತೊಡಗಿ – ಅವು ಅವುಗಳ ಮಟ್ಟಿಗೇ ಅಪೇಕ್ಷಣೀಯವಾದರೂ ಚಳವಳಿಗೂ ಅವಕ್ಕೂ ಯಾವ ಸಂಬಂಧವೂ ಇರಲಿಲ್ಲ– ಉಜ್ಜುಗಿಸುವ ತೀವ್ರ ಪ್ರವೃತ್ತಿಯೊಂದನ್ನು ನಾನು ಕಾಂಗ್ರೆಸ್ಸಿನವರಲ್ಲಿ ಕಂಡೆ. ಈ ಪ್ರವೃತ್ತಿಯು ಸಹಜವಾಗಿತ್ತು, ಆದರೆ ಆ ಸಮಯದಲ್ಲಿ ಅದನ್ನು ಪ್ರೋತ್ಸಾಹಿಸಕೂಡ ದೆಂದುಕೊಂಡೆ

೧೯೩೩ ರ ಅಕ್ಟೋಬರಿನ ಮಧ್ಯದಲ್ಲಿ ಪರಿಸ್ಥಿತಿಯನ್ನು ವಿವೇಚಿಸಲೂ ಮುಂದಿನ ಕಾರ್ಯಗಳನ್ನು ನಿರ್ಣಯಿಸಲೂ ಸ ಪ್ರಾ ಕಾಂಗ್ರೆಸ್ ಕಾರ್ಯಕರ್ತರ ಸಭೆಗಳನ್ನು ಸೇರಿಸಿದೆವು ಪ್ರಾಂತ ಕಾಂಗ್ರೆಸ್ ಸಮಿತಿಯು ಅಕ್ರಮಕೂಟವಾಗಿತ್ತು ಸುಮ್ಮನೆ ಶಾಸನವನ್ನು ತಿರಸ್ಕರಿಸುವುದಲ್ಲವೆ, ಸಭೆಸೇರುವುದೇ ನಮ್ಮ ಉದ್ದೇಶವಾಗಿದ್ದುದರಿಂದ, ನಾವು ಯಥಾಚಾರದಿಂದ ಈ ಸಮಿತಿಯನ್ನು ನೆರೆಯಿಸಲಿಲ್ಲ ಆದರ, ಸೆರೆಮನೆಯ ಹೊರಗಿದ್ದ ಅದರ ಸದಸ್ಯರೆಲ್ಲರನ್ನೂ, ಹಾಗೂ ಆಯ್ದ ಕೆಲವು ಕಾರ್ಯಕರ್ತರನ್ನೂ ಒಂದು ಅಸಾಂಪ್ರತ ಸಮ್ಮೇಳನಕ್ಕೆ ಬರಬೇಕೆಂದು ಆಹ್ವಾನಿಸಿದೆವು ಅವು ಖಾಸಗಿ ಕೂಟಗಳಾದರೂ ನಮ್ಮ ಸಭೆಗಳಲ್ಲಿ ಯಾವ ಗುಟ್ಟೂ ಇರಲಿಲ್ಲ, ಮತ್ತು ಸರಕಾರವು ತಲೆಹಾಕುವುದೇ ಇಲ್ಲವೇ ಎಂಬುದನ್ನು ನಾವು ಕೊನೆಯಕ್ಷಣದವರೆಗೆ ತಿಳಿದಿರಲಿಲ್ಲ ಈ ಸಭೆಗಳಲ್ಲಿ ನಾವು ಪ್ರಪಂಚ ವಿದ್ಯಮಾನಗಳಿಗೆ ಬಹಳ ಹೆಚ್ಚಾದ ಗಮನವನ್ನು ಕೊಟ್ಟೆವು–ದೊಡ್ಡ ಧಾರಣೆವಾಸಿಯ ಇಳಿತ, ನಾಜಿಸಂ, ಕಮ್ಯೂನಿಸಂ, ಇತ್ಯಾದಿ. ಇತರ ಸ್ಥಳಗಳಲ್ಲಿ ಏನು ನಡೆಯುತ್ತಿತ್ತೆಂಬುದಕ್ಕೆ ಭಾರತೀಯ ಸಂಗ್ರಾಮದ ಸಂಬಂಧವನ್ನು ನಮ್ಮ ಒಡನಾಡಿಗಳು ನೋಡಬೇಕೆಂದು ನಾವು ಬಯಸಿದೆವು ಕೊನೆಗೆ ಸಮ್ಮೇಳನವು ನಮ್ಮ ಗೊತ್ತುಗುರಿಯನ್ನು ಸ್ಪಷ್ಟಪಡಿಸುವ ಸಮತಾವಾದಾತ್ಮಕ ನಿರ್ಣಯವೊಂದನ್ನು ಅನುಮೋದಿಸಿ, ಶಾಸನಭಂಗವನ್ನು ಹಿಂತೆಗೆದುದಕ್ಕೆ ವಿರುದ್ಧವಾಗಿ ತನ್ನ ಅಭಿಮತವನ್ನಿತ್ತಿತು ದೇಶೋವಿಶಾಲ ಶಾಸನಭಂಗದ ಯಾವ ಯದೃಚ್ಛೆಯೂ ಇರಲಿಲ್ಲವೆಂಬುದನ್ನು ಪ್ರತಿಯೊಬ್ಬರೂ ಅರಿತಿದ್ದರು, ಮತ್ತು ವೈಯಕ್ತಿಕ ಶಾಸನ ಭಂಗವು ಕೂಡ ಬೇಗ ಕೊನೆಗಾಣುವ ಇಲ್ಲವೆ ಬಹಳ ಮಿತವ್ಯಾಪ್ತ ಪರಿಣಾಮದಲ್ಲಿ ಸಾಗುವ ಸಂಭವವಿತ್ತು ನಮ್ಮ ದೃಷ್ಟಿಯಿಂದ ಅದನ್ನು ಹಿಂತೆಗೆಯಲಿ ತೆಗೆಯದಿರಲಿ, ಅದು ಹೆಚ್ಚು ವ್ಯತ್ಯಾಸಮಾಡುತ್ತಿರಲಿಲ್ಲ ಏಕೆಂದರ ಸರಕಾರದ ಪ್ರಸ್ಥಾನವೂ ಆರ್ಡಿನೆನ್ಸ್ ಶಾಸನಗಳೂ ನಡೆಯುತ್ತಲೇ ಇದ್ದುವು ಆದುದರಿಂದ ಇತರ ಯಾವುದಕ್ಕಿಂತ ಹೆಚ್ಚಾಗಿ ಭಂಗಿಯೊಂದನ್ನು ಬೀರುವುದಕ್ಕಾಗಿ, ನಾವು ಸಾಂಪ್ರದಾಯಿಕ ಶಾಸನಭಂಗವನ್ನು ಮುಂದುವರಿಸಲು ನಿರ್ಧರಿಸಿದೆವು, ಆದರೆ ಪರಿಣಾಮದಲ್ಲಿ, ನಮ್ಮ ಕಾರ್ಯಕರ್ತರಿಗೆ ನಾವು ಕೊಟ್ಟ ಆಜ್ಞಾಪೂರ್ವಕ ಸೂಚನೆಗಳೆಂದರೆ, ಅವರು ನಡೆಗೆಟ್ಟು ದಸ್ತಗಿರಿ

ಯನ್ನು ಬರವಾಡಿಕೊಳ್ಳದಿರಲೆಂಬುದು ಅವರು ತಮ್ಮ ಯಥಾವಸ್ಥಿತ ಕಾರ್ಯಗಳಲ್ಲಿ ತೊಡಗಿರಬೇಕಾಗಿತ್ತು, ಮತ್ತು ಆಗ ದಸ್ತಗಿರಿಯು ಬಂದರೆ ಅದನ್ನು ಸೌಜನ್ಯದಿಂದ ಸ್ವೀಕರಿಸಬೇಕಾಗಿತ್ತು ಮುಖ್ಯವಾಗಿ ಅವರು ಗ್ರಾಮಾಂತರ ಕ್ಷೇತ್ರಗಳ ಸಂಪರ್ಕ ವನ್ನು ಪುನರುಜ್ಜೀವನಗೊಳಿಸಿಕೊಳ್ಳಬೇಕೆಂದೂ, ಗುತ್ತಿಗೆಯ ಉತ್ತಾರ ಮತ್ತು ಸರ ಕಾರದ ನಿಗ್ರಹಗಳ ಪರಿಣಾಮವಾಗಿ ಉಂಟಾದ ಬೇಸಾಯಗಾರಜಂಗುಳಿಯ ಪರಿಸ್ಥಿತಿ ಗಳನ್ನು ಕಂಡುಹಿಡಿಯಬೇಕೆಂದೂ ಆಜ್ಞಪ್ತರಾದರು ಗುತ್ತಿಗೆ—ಇಲ್ಲ ಚಳವಳಿಯ ಪ್ರಶ್ನೆಯು ಆಗ ಇರಲಿಲ್ಲ ಪುಣೆಯ ಸಮ್ಮೇಳನವಾದ ಮೇಲೆ ಇದು ಸಾಂಪ್ರದಾಯಿ ಕವಾಗಿ ಹಿಂತೆಗೆಯಲ್ಪಟ್ಟಿತ್ತು ಮತ್ತು ವಿದ್ಯಮಾನಗಳಿದ್ದಂತೆ ಅದನ್ನು ಪುನರುಜ್ಜೀ ವನಗೊಳಿಸಲಸಾಧ್ಯವಾಗಿತ್ತು ಎಂಬುದು ಸ್ವತಸ್ಸಿದ್ಧವಾಗಿತ್ತು.

ಈ ಕಾರ್ಯಕ್ರಮವು ಅದರಲ್ಲಿ ಸ್ಪಷ್ಟವಾದ ಯಾವ ಆಕ್ರಮವೂ ಇಲ್ಲದೆ ಸೌಮ್ಯವೂ ಅಬಾಧಕವೂ ಆಗಿತ್ತು, ಆದರೂ ಅದು ಬಂಧನಗಳಿಗೆ ಕರೆದೊಯ್ಯುವುದೆಂದು ನಾವು ತಿಳಿದಿದ್ದೆವು ನಮ್ಮ ಕಾರ್ಯಕರ್ತರು ಹಳ್ಳಿಗಳಿಗೆ ಹೋದಕೂಡಲೆ ಅವರು ದಸ್ತಗಿರಿ ಮಾಡಲ್ಪಟ್ಟು ತೀರ ಅನ್ಯಾಯವಾಗಿಯೇ, ಗುತ್ತಿಗೆ—ಇಲ್ಲ ಚಳವಳಿಯನ್ನು ಬೋಧಿಸು ತ್ತಿದ್ದರೆಂದು [ಇದು ಆರ್ಡಿನನ್ಸ್ ಶಾಸನಗಳ ಪ್ರಕಾರ ಅಪರಾಧವೊಂದಾಗಿ ಮಾಡಲ್ಪ ಟ್ಟಿತ್ತು) ಅಪಾದಿತರಾಗಿ ಶಿಕ್ಷಿಸಲ್ಪಡುತ್ತಿದ್ದರು. ನನ್ನ ಒಡನಾಡಿಗಳನೇಕರ ಬಂಧನ ವಾದ ಮೇಲೆ ನಾನು ಈ ಗ್ರಾಮಾಂತರ ಕ್ಷೇತ್ರಗಳಿಗೆ ಹೋಗಬೇಕೆಂಬ ಆಶೆಯಿಂದ ಕೂಡಿದ್ದೆ, ಆದರೆ ಇತರ ಕಾರ್ಯಕಲಾಪಗಳು ನನ್ನ ಅವಧಾನವನ್ನು ಸಳೆದಿದ್ದು ನನ್ನ ಪ್ರವಾಸವನ್ನು ಕಾಲಾತೀತವಾದಷ್ಟುರವರೆಗೆ ಮುಂದೆ ಹಾಕಿಬಿಟ್ಟೆ

ಈ ತಿಂಗಳುಗಳಲ್ಲಿ ಅಖಿಲ ಭಾರತ ವಿದ್ಯಮಾನವನ್ನು ವಿವೇಚಿಸಲು ಕಾರ್ಯನಿ ರ್ವಾಹಕ ಸಮಿತಿಯ ಸದಸ್ಯರು ಎರಡು ಬಾರಿ ಒಟ್ಟಿಗೆ ಸಭೆ ಸೇರಿದರು ಸ್ವಯಂ ಸಮಿತಿಯೇ ಕಾರ್ಯನಿರ್ವಹಣ ಮಾಡುತ್ತಿರಲಿಲ್ಲ ಅದು ಅಕ್ರಮಕೂಟವಾಗಿದ್ದುದು ಇದಕ್ಕೆ ಅಷ್ಟೊಂದು ಕಾರಣವಲ್ಲ, ಆದರೆ ಪುಣೆಯಲ್ಲಿ ಗಾಂಧಿಜಿಯವರ ಉಪದೇಶ ದಂತೆ ಎಲ್ಲ ಕಾಂಗ್ರೆಸ್ ಸಮಿತಿಗಳೂ ಕಛೇರಿಗಳೂ ತಾತ್ಕಾಲಿಕವಾಗಿ ನಿಲ್ಲಿಸಲ್ಪಟ್ಟಿ ದ್ದುದು ಸೆರೆಮನೆಯಿಂದ ಹೊರಬಂದ ಮೇಲೆ ನಾನಾದರೋ ವಿಚಿತ್ರ ಅವಸ್ಥಾನ ದಲ್ಲಿದ್ದೆ, ಏಕೆಂದರೆ ನಾನು ಆತ್ಮನಿರಾಕರಣೆಯ ಈ ಆಡಿನೆನ್ಸನ್ನು ಅನುಮೋದಿ ಸಲು ತಿರಸ್ಕರಿಸಿ, ನನ್ನನ್ನು ಕಾಂಗ್ರೆಸ್ಸಿನ ಸಾಮಾನ್ಯ ಕಾರ್ಯದರ್ಶಿಯೆಂದು ಕರೆದುಕೊ ಳ್ಳುತ್ತಲೇ ಇದ್ದೆ ಆದರೆ ನಾನು ಕೆಲಸಮಾಡುತ್ತಿದ್ದುದು ಗಾಳಿಯಲ್ಲಿ, ಯಾವ ಉಚಿತ ವಾದ ಕಛೇರಿಯೂ ಇರಲಿಲ್ಲ, ಸಿಬ್ಬಂದಿಯಿರಲಿಲ್ಲ, ಹಂಗಾಮಿ ಅಧ್ಯಕ್ಷರಿರಲಿಲ್ಲ ಪರ್ಯಾ ಲೋಚನೆಗಾಗಿ ಗಾಂಧಿಜಿಯವರ ನೆರವಿದ್ದರೂ, ಅವರು ಈ ಸಲ ಹರಿಜನ ಸೇವೆಯನ್ನು ಕುರಿತ ಬಹುಪರಿಣಾಮಕಾರಿಯಾದ ಅಖಿಲ ಭಾರತ ಪ್ರವಾಸವೊಂದರಲ್ಲಿ ಬಿಡುವಿಲ್ಲದೆ

ತೊಡಗಿದ್ದರು ಅವರ ಪ್ರವಾಸಕಾಲದಲ್ಲಿ ನಾವು ಅವರನ್ನು ಜಬ್ಬಲ್ಪುರ ಮತ್ತು ದೆಹಲಿಗಳಲ್ಲಿ ನೋಡಲು ಅವಕಾಶವಾಗಿ ಕಾರ್ಯನಿರ್ವಾಹಕ ಸಮಿತಿಯ ಪರ್ಯಾಲೋಚನೆಗಳನ್ನು ನಡೆಸಿದೆವು ವಿವಿಧ ಸದಸ್ಯರಲ್ಲಿದ್ದ ಪರಸ್ಪರ ಭಿನ್ನತೆಗಳನ್ನು ಅವು ಸ್ಪಷ್ಟವಾಗಿ ಹೊರಗೆಡಹಲು ಅನುಕೂಲ ಮಾಡಿದುವು ತಪ್ಪಿಸಿಕೊಳ್ಳಲರಿದಾದ ಸಮಸ್ಯೆಯೊಂದು ಹುಟ್ಟಿಕೊಂಡು ಅದರಿಂದ ಬಿಡುಗಡೆ ಹೊಂದುವ ಸರ್ವಸಮ್ಮತವಾದ ಮಾರ್ಗೋಪಾಯವಿರಲಿಲ್ಲ ಶಾಸನ ಭಂಗವನ್ನು ಹಿಂತೆಗೆಯಬೇಕೆಂದು ಇಚ್ಛಿಸಿದವರು ಮತ್ತು ಇದಕ್ಕೆ ವಿರುದ್ಧವಾಗಿದ್ದವರು, ಇವರಿವರ ಮಧ್ಯೇ ಗಾಂಧಿಜಿಯವರು ತೀರ್ಮಾನಿಸುವುದಕ್ಕಾಗಿ ನಿಂತರು ಎರಡನೆಯ ಪಕ್ಷಕ್ಕೆ ಅವರು ಒಪ್ಪಿದ್ದುದರಿಂದ ವಿದ್ಯಮಾನಗಳು ಹಿಂದಿನಂತೆಯೇ ಸಾಗಿದುವು

ಶಾಸನ ಸಭೆಗಳಿಗೆ ಪ್ರವೇಶ ಮಾಡುವುದಕ್ಕಾಗಿ ಕಾಂಗ್ರೆಸ್ಸಿನ ಪರವಾಗಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಪ್ರಶ್ನೆಯನ್ನು, ಕಾರ್ಯನಿರ್ವಾಹಕ ಸಮಿತಿಗೆ ಸದ್ಯದಲ್ಲಿ ಈ ವಿಷಯದಲ್ಲಿ ಹೆಚ್ಚಾಗಿ ಆಸಕ್ತಿಯಿರದಿದ್ದರೂ, ಕೆಲವು ವೇಳೆ ಕಾಂಗ್ರೆಸ್ಸಿನವರು ಚರ್ಚಿಸುತ್ತಿದ್ದರು ಅದು ಹುಟ್ಟಿರಲಿಲ್ಲ, ಸ್ವತಸಿದ್ಧವಾಗಿ ಅದು ಅಕಾಲಿಕವಾಗಿತ್ತು. ಕಡೆಯ ಪಕ್ಷ ಇನ್ನೂ ಎರಡು ಇಲ್ಲವೇ ಮೂರು ವರ್ಷಗಳವರೆಗೆ 'ಸುಧಾರಣೆಗಳು' ರೂಪಗೊಳ್ಳುವ ಸಂಭವವಿರಲಿಲ್ಲ ಮತ್ತು ಕೇಂದ್ರ ಶಾಸನ ಸಭೆಗೆ ಚುನಾವಣೆ ನಡೆವ ಸೂಚನೆಯು ಆಗ ಬಂದಿರಲಿಲ್ಲ ನನಗಂತೂ ಸ್ವಕೀಯವಾಗಿ, ಚುನಾವಣೆಗಳಲ್ಲಿ ಸ್ಪರ್ಧಿಸಲು ಯಾವ ತಾತ್ವಿಕ ಅಭ್ಯಂತರವೂ ಇರಲಿಲ್ಲ ಸಮಯವೊದಗಿದಾಗ ಕಾಂಗ್ರೆಸ್ಸು ಅವುಗಳನ್ನು ಸ್ಪರ್ಧಿಸಬೇಕೆಂದು ನಾನು ದೃಢವಾಗಿ ಮನಗಂಡಿದ್ದೆ ಆದರೆ ಆಗ ಈ ಪ್ರಶ್ನೆಯನ್ನೆತ್ತುವುದೆಂದರೆ ಅವಧಾನವನ್ನು ಹೊರಳಿಸುವುದು ಮಾತ್ರವಾಗಿತ್ತು ನಮ್ಮ ಹೋರಾಟದ ಮುನ್ನಡೆಯು ನಮ್ಮ ಮುಂದಿದ್ದ ವಾದಾಂಶಗಳನ್ನು ಸ್ಪಷ್ಟಪಡಿಸುವುದೆಂದೂ, ಆತ್ಮಘಾತಕ್ಕೆ ಕಾರಣವಾಗುವ ಅಂಶಗಳು ವಿದ್ಯಮಾನವನ್ನು ಅಧಿಕರಿಸುವುದನ್ನು ತಡೆಯುವುವೆಂದೂ ನಾನು ಆಶಿಸಿದೆ

ಏತನ್ಮಧ್ಯೇ ನಾನು ಪತ್ರಿಕೆಗಳಿಗೆ ಲೇಖನಗಳನ್ನೂ ಹೇಳಿಕೆಗಳನ್ನೂ ಕಳುಹಿಸುತ್ತಲೇ ಹೋದೆ ಸ್ವಲ್ಪಮಟ್ಟಿಗೆ ನಾನು ನನ್ನ ಬರವಣಿಗೆಗಳ ಕಾವನ್ನು ಇಳಿಸಬೇಕಾಗಿ ಬಂದಿತು, ಏಕೆಂದರೆ ಪ್ರಕಟಣೆಯ ಸಲುವಾಗಿ ಅವು ಬರೆಯಲ್ಪಟ್ಟಿದ್ದುವು, ಮತ್ತು ಪತ್ರಿಕಾ ಬಹಿಷ್ಕಾರ ಮತ್ತು ಅನೇಕ ಶಾಸನಗಳ ಕಬಂಧ ಬಾಹುಗಳು ಬಹುದೂರದವರೆಗೆ ಬೀಸುತ್ತಿದ್ದುವು ನಾನು ಒಂದು ವೇಳೆ ಅಪಾಯಗಳಿಗೆ ಸಿದ್ಧನಾಗಿದ್ದರೂ, ಮುದ್ರಕರು, ಪ್ರಕಾಶಕರು ಮತ್ತು ಸಂಪಾದಕರು ಸಿದ್ಧರಾಗಿರಲಿಲ್ಲ ಒಟ್ಟಿನಲ್ಲಿ ವೃತ್ತ ಪತ್ರಿಕೆಗಳು ನನಗೆ ಒಳ್ಳೆಯವಾಗಿದ್ದು, ನನಗೆ ಅನುಕೂಲವಾಗಿ ಅನೇಕ ಅಂಶಗಳನ್ನು ಮುಂದಿಟ್ಟುವು ಆದರೆ ಸದಾ ಅಲ್ಲ. ಕೆಲವು ವೇಳೆ ಹೇಳಿಕೆಗಳೂ ಲೇಖನ ಭಾಗಗಳೂ ನಿರೋಧಿಸಲ್ಪಟ್ಟುವು, ಮತ್ತು ಒಮ್ಮೆ, ಯಾವುದಕ್ಕೆ ನಾನು

ಬಹಳವಾಗಿ ಶ್ರಮಿಸಿದ್ದೆನೋ ಆ ಇಡೀ ದೀರ್ಘ ಲೇಖನವೊಂದು, ಪ್ರಕಟಣೆಯ ಬೆಳ ಕನ್ನು ಕಾಣಲೇ ಇಲ್ಲ ೧೯೩೪ ರ ಜನವರಿಯಲ್ಲಿ ನಾನು ಕಲ್ಕತ್ತೆಯಲ್ಲಿದ್ದಾಗ, ಪ್ರಮುಖ ದೈನಿಕ ಪತ್ರಿಕೆಗಳಲ್ಲೊಂದರ ಸಂಪಾದಕರು ನನ್ನನ್ನು ನೋಡಬಂದರು ನನ್ನ ಹೇಳಿಕೆಗಳಲ್ಲೊಂದನ್ನು ತಾವು ಕಲ್ಕತ್ತೆಯ ಎಲ್ಲ ಪತ್ರಿಕೆಗಳ ಪ್ರಮುಖ ಸಂಪಾದಕರಿಗೆ ಅವರ ಅಭಿಪ್ರಾಯಾರ್ಥವಾಗಿ ಕಳುಹಿಸಿದುದಾಗಿಯೂ ಮತ್ತು ಪ್ರಮುಖ ಸಂಪಾದಕರು ಅದನ್ನು ಒಪ್ಪಲಿಲ್ಲವಾದುದರಿಂದ ಅದು ಪ್ರಕಟಗೊಳ್ಳಲಿಲ್ಲವೆಂದೂ ನನಗೆ ಹೇಳಿದರು ಕಲ್ಕತ್ತೆಯ ಸರಕಾರಿ ಪತ್ರಿಕ-ಆಕ್ಷೇಪಕರೇ ಆ ಪ್ರಮುಖ ಸಂಪಾದಕರು.

ನನ್ನ ಕೆಲವು ಪತ್ರಿಕಾ ಭೇಟಿಗಳು ಮತ್ತು ಹೇಳಿಕೆಗಳಲ್ಲಿ ನಾನು ಕೆಲವು ಗೋಷ್ಠಿಗಳು ಮತ್ತು ವ್ಯಕ್ತಿಗಳನ್ನು ಕಟುವಾಗಿ ಟೀಕಿಸುವ ಸಾಹಸ ಮಾಡಿದೆ ಇದು ಖಂಡನೆಗೆ ಒಳಗಾಯಿತು ಏಕೆಂದರೆ, ಕಾಂಗ್ರೆಸ್ಸು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳುವ ಅಪಾಯ ಸಂಭವವಿಲ್ಲದೆಯೇ ಅದನ್ನು ತಾಗಬಹುದೆಂದು ಗಾಂಧಿಜಿಯವರು ಹರಡಲು ಸಹಾಯ ಮಾಡಿದ್ದ ಭಾವನೆಯು ಇದಕ್ಕೆ ಅಂಶತಃ ಕಾರಣ ಸ್ವಯಂ ಗಾಂಧಿಜಿಯವರೇ ಇದರ ಆದರ್ಶವನ್ನು ಸ್ಥಾಪಿಸಿದ್ದರು, ಮತ್ತು ಕೆಲವು ಸಮಯಗಳಲ್ಲಿ ಹೀಗಲ್ಲದಿದ್ದರೂ ವಿವಿಧ ಪರಿಮಾಣಗಳಲ್ಲಿ ಕಾಂಗ್ರೆಸ್ಸಿನವರು ಅವರ ಮುಂದಾಳುತನವನ್ನು ಹಿಂಬಾಲಿಸಿದ್ದರು ಸಾಮಾನ್ಯವಾಗಿ ನಾವು ಅಸ್ಪಷ್ಟವೂ ಭಾವಿಕವೂ ಆದ ವಾಕ್ಯಾಂಗಗಳನ್ನು ಪಟ್ಟಾಗಿ ಹಿಡಿದಿದ್ದೆವು , ಇದು, ನಮ್ಮ ವಿಮರ್ಶಕರು ಅವರ ತಪ್ಪು ವಿವೇಚನೆ ಮತ್ತು ಅಮಗವಾದಿ ತಂತ್ರಗಳನ್ನುಪ್ರಯೋಗಿಸಿ ತಪ್ಪಿಸಿಕೊಂಡು ಹೋಗುವ ಅವಕಾಶವನ್ನು ಕೊಟ್ಟಿತು ಎರಡು ಕಡೆಗಳಲ್ಲಿಯೂ ನೈಜ ವಾದಾಂಶಗಳನ್ನು ದೂರ ವಿಡಲಾಯಿತು , ಫ್ಯಾಸಿಸಂ ಪ್ರಬಲಿಸಿರುವ ಕಡೆಗಳಲ್ಲಿ ಹೊರತು, ಪಾಶ್ಚಿಮಾತ್ಯ ದೇಶಗಳಲ್ಲಿ ನಡೆಯುವಂತೆ, ಪ್ರಾಸಂಗಿಕ ನಿವಾರಣೆ ಮತ್ತು ಹೊಡೆತಗಳಿಂದ ಕೂಡಿದ ಪ್ರಾಮಾಣಿಕ ಚರ್ಚೆಯು ನಡೆಯಲೇ ಇಲ್ಲ

ಯಾರ ಸಲಹೆಗೆ ನಾನು ಬೆಲೆ ಕೊಟ್ಟಿದ್ದೆನೋ ಆ ಮಿತ್ರರೊಬ್ಬರು ನನಗೆ ಪತ್ರ ಬರೆದು, ಅದರಲ್ಲಿ ನಾನು ಪತ್ರಿಕೆಗಳಿಗೆ ಕೊಟ್ಟ ಕೆಲವು ಹೇಳಿಕೆಗಳ ಕಸುವನ್ನು ಕಂಡು ತಾವು ಸ್ವಲ್ಪ ಆಶ್ಚರ್ಯಚಕಿತರಾದುದಾಗಿಯೂ—ನಾನು 'ಕಿರಿಕಿರಿಗೊಂಡ ಬೆಕ್ಕಿನಂತಾ'ಗುತ್ತಿದ್ದೇನೆಂದೂ ಹೇಳಿದರು ಇದು ನನ್ನ ಆಶೆಗಳ 'ಭಂಗ'ದ ಪರಿಣಾಮವೆ ? ನಾನು ಸಂದೇಹಗ್ರಸ್ತನಾದೆ ಅಂಶತಃ ಇದು ಸತ್ಯವಾಗಿತ್ತು, ಏಕೆಂದರೆ ರಾಷ್ಟ್ರೀಯವಾಗಿ ನಾವೆಲ್ಲರೂ ಹತಾಶೆಯಿಂದ ಬಾಧೆಪಡುತ್ತೇವೆ ವೈಯಕ್ತಿಕವಾಗಿ ಕೂಡ ಅದು ಸ್ವಲ್ಪಮಟ್ಟಿಗೆ ನಿಜವಾಗಿರಬೇಕು ಆದರೂ ನನಗೆ ತದ್ಭಾವನೆಯ ಅರಿವುಂಟಾಗಲಿಲ್ಲ, ಏಕೆಂದರೆ ನಿಗ್ರಹದ ಅಥವಾ ಸೋಲಿನ ಅನುಭವವು ಆತ್ಮೀಯವಾಗಿ ನನಗುಂಟಾಗಿರಲಿಲ್ಲ ಗಾಂಧಿಜಿಯವರು ನನ್ನ ದೃಷ್ಟಿಪಥಕ್ಕೆ ರಾಜಕೀಯವಾಗಿ ದರ್ಶನವಿತ್ತುರಭ್ಯ, ನಾನು ಅವರಿಂದ ಕನಿಷ್ಠಪಕ್ಷ ಒಂದನ್ನಾದರೂ ಕಲಿತೆ

ನನ್ನಲ್ಲಿರುವ ಕಲ್ಪನೆಗಳನ್ನು ಪರಿಣಾಮ ಭೀತಿಯಿಂದ ಅಣಗಿಸದಿರುವುದು ಆ ಅಭ್ಯಾಸವು—ಅದನ್ನು ರಾಜಕೀಯ ಕ್ಷೇತ್ರದಲ್ಲಿ ಅನುಸರಿಸಿದುದರಿಂದ (ಇತರ ಕ್ಷೇತ್ರಗಳಲ್ಲಿ ಅದನ್ನು ಅನುಸರಿಸುವುದು ಹೆಚ್ಚು ಕಷ್ಟಕರವೂ ಅಪಾಯಕರವೂ ಆದುದು)—ನನ್ನನ್ನು ಕಷ್ಟದಲ್ಲಿ ಸಿಕ್ಕಿಸಿದೆ, ಆದರೆ ಅದು ಜೊತೆಯಲ್ಲಿ ನನಗೆ ಬಹಳ ಸಂತೃಪ್ತಿಯನ್ನೂ ನೀಡಿದೆ ಎದೆಯ ನಿಜವಾದ ಕಹಿಯಿಂದಲೂ ತೀವ್ರ ವಿಧಗಳ ಹತಾಶೆಗಳಿಂದಲೂ ನಾವು ತಪ್ಪಿಸಿಕೊಂಡುದು ಈ ಕಾರಣದಿಂದಲೇ ಎಂದು ನನಗೆ ತೋರುತ್ತದೆ ಬಹುಸಂಖ್ಯಾತ ಜನರು ಪ್ರೀತಿಯಿಂದ ನಮ್ಮನ್ನು ಕಾಣುವರೆಂಬ ಅನುಭವವೂ ಬಹಳ ಆಶ್ವಾಸನದಾಯಕವಾಗಿದೆ ಹಾಗೂ ಸೋಲು ಮತ್ತು ಹತಾಶೆಗಳಿಗೆ ಅದು ಸತ್ವಯುತವಾದ ಕಟ್ಟುಮದ್ದಾಗಿದೆ ಸಂವೇದನೆಗಳಲ್ಲೆಲ್ಲಾ ಅತ್ಯಂತ ಭಯಾನಕವಾದುದೆಂದರೆ, ಇತರರಿಂದ ಮರೆಯಲ್ಪಟ್ಟು ಉಂಡಿಗನಾಗಿರುವುದೆಂದು ನನ್ನ ಭಾವನೆ

ಹೀಗಿದ್ದರೂ, ಈ ಅಲೌಕಿಕವೂ ದುಃಖಭಾಜನವೂ ಆದ ಪ್ರಪಂಚದಲ್ಲಿ ಒಬ್ಬನು ಹತಾಶೆಯ ಸಂವೇದನೆಯಿಂದ ಪಾರಾಗುವುದು ಹೇಗೆ? ಪ್ರತಿಯೊಂದೂ ತಪ್ಪಿ ನಡೆಯುವುದೆಂಬುದು ಎಷ್ಟು ವೇಳೆ ತಾನೆ ನಮಗೆ ಗೋಚರಿಸಿದಂತಿದೆ, ಮತ್ತು ನಾವು ಮುನ್ನುಗ್ಗಿದರೂ ಕೂಡ, ನಮ್ಮ ಸುತ್ತಣ ಮಾನವ ಸಾಮಗ್ರಿಯ ಯೋಗ್ಯತೆಯನ್ನು ಕಂಡಾಗ ಶಂಕೆಗಳು ನಮ್ಮನ್ನು ಮುತ್ತುತ್ತವೆ ಬಗೆಬಗೆಯ ಘಟನೆಗಳ ಮತ್ತು ಬೆಳವಣಿಗೆಗಳ ಮೇಲೂ ಮತ್ತು ವ್ಯಕ್ತಿಗಳ ಮತ್ತು ಗೋಷ್ಠಿಗಳ ಮೇಲೂ ಸಹ ನಾನು ಕೋಪವನ್ನೂ ಜುಗುಪ್ಸೆಯನ್ನೂ ಕಾರಿದ್ದೇನೆಂದು ಅಳುಕುತ್ತೇನೆ ಸತ್ವಯುಕ್ತವಾದ ಸಮಸ್ಯೆಗಳು ವ್ಯಕ್ತಿಯೊಬ್ಬನ ರೊಕ್ಕದ ಬೊಕ್ಕಣಕ್ಕೆ ಅಥವಾ ಆತನು ಆಶೆಯಿಂದ ಬೆಳೆಸಿಕೊಂಡಿರುವ ದುರ್ನಿರ್ಣಯಗಳಿಗೆ ಏಟು ಕೊಡುವುದೆಂದು ಅವುಗಳನ್ನು ಉಪೇಕ್ಷಿಸುವ ಮತ್ತು ಅವುಗಳನ್ನು ಕುರಿತು ಪ್ರಸ್ತಾಪಿಸುವುದು ಅನುಚಿತವೆಂದು ಪರಿಗಣಿಸುವ, ಜೀವನವನ್ನು ಕುರಿತ ಸ್ವಾಗತ ಮಂದಿರದ ಮನೋಭಾವವನ್ನು ಈಚೆಗೆ ಹೆಚ್ಚುಹೆಚ್ಚಾಗಿ ಹೇಸಲು ಪ್ರಾರಂಭಿಸಿದ್ದೇನೆ ಎಲ್ಲ ಖಂಡನೆ ಮತ್ತು ಹತಾಶೆ ಮತ್ತು 'ಬೆಕ್ಕುತನ'ಗಳಿದ್ದರೂ, ನಾನು ನನ್ನನ್ನು ನೋಡಿಯೂ ಇತರರ ತಪ್ಪುಗಳನ್ನು ಕಂಡೂ ಅಣಕವಾಡುವ ಪ್ರತಿಭೆಯನ್ನು ಇನ್ನೂ ಕಳೆದುಕೊಂಡಿಲ್ಲ

ಕರುಣಾಳು ಭಗವಂತನಲ್ಲಿ ಜನರ ನಂಬಿಕೆಯನ್ನು ಕುರಿತು ನಾನು ಕೆಲವು ವೇಳೆ ಅತ್ಯಾಶ್ಚರ್ಯಪಟ್ಟಿದ್ದೇನೆ ಧಕ್ಕೆಯ ಮೇಲೆ ಧಕ್ಕೆಯು ಬಡಿದರೂ ಅದು ಹೇಗೆ ಉಳಿದುಕೊಳ್ಳುವುದು, ಮತ್ತು ಕೇವಲ ನಾಶವೂ ಖಂಡನೆಯೂ ಹೇಗೆ ಆ ನಂಬಿಕೆಯ ನ್ಯಾಯಪರತ್ವದ ಒರೆಗಲ್ಲುಗಳೆಂದು ಪರಿಗಣಿಸಲ್ಪಡುವುದು ಗೆರಾರ್ಡ್ ಹಾಪ್‌ಕಿನ್ಸ್‌ರವರ ಆ ಲಲಿತ ಪಾದಗಳು ಅನೇಕ ಹೃದಯಗಳಲ್ಲಿ ಪ್ರತಿಧ್ವನಿತವಾಗುವುವು

"ನಿಕ್ಕುವಂ ಧರ್ಮದೇವತೆ ನೀನು, ದೇವ, ನಾನ್
ನಿನ್ನಲ್ಲಿ ಎದುರಾಡೆ, ಆದೊಡಂ, ಅಯ್ಯ, ನಾನ್

ನ್ಯಾಯುವನ್ ಬೇಡುವೆನು ಪಾಪಿಗಳ ಕೈಯೇಕೆ
ಮೇಲಿಹುದು ? ನಾನೇನಗೈಯ್ದೊಡಂ ಬನ್ನಮಾ
ಗುವುದೇಕೆ ? ನೀನೆನ್ನ ಹಗೆಯಿರಲು, ಓ, ಗೆಳೆಯ,
ಎನ್ನ ಸೋಲಿಸಿ ಭಂಜಿಪುದಕಿಂತ ಮಿಗಿಲಾಗಿ
ಕೇಡನೀನೆಂತು ಮಾಡುವೆಯೋ, ಶಂಕಿಪೆನು.
ಬಿಡುವಿನಲಿ ತವಸೇವೆಯಲಿ ಬಾಳನರೆಯುತಿಹ
ಎನಗಿಂತ ಹೆಚ್ಚಾಗಿ ಕಾಮನಾ ಕುಡುಕರುಂ
ದಾಸರುಂ ಏಳಿಗೆಯೆನ್ನೈದುವರೇ "

ಪ್ರಗತಿಯಲ್ಲಿ, ಧ್ಯೇಯವೊಂದರಲ್ಲಿ, ಆದರ್ಶಗಳಲ್ಲಿ, ಮಾನವೀಯ ಒಳ್ಳಿನಲ್ಲಿ ಮತ್ತು ಮಾನವೀಯ ಅದೃಷ್ಟದಲ್ಲಿ ನಂಬಿಕೆಗಳು—ಇವು ಭಗವಂತನಲ್ಲಿಡುವ ನಂಬಿಕೆಯೊಂದಿಗೆ ನಂಟತನವನ್ನು ಪಡೆದಿಲ್ಲವೆ ? ನಾವು ಅವನ್ನು ವಿವೇಚನೆ ಮತ್ತು ತರ್ಕಗಳಿಂದ ಸಮರ್ಥಿಸಲು ಹೊರಟರೆ, ಕೂಡಲೇ ನಾವು ಕಷ್ಟಗಳಲ್ಲಿ ಸಿಕ್ಕಿಕೊಳ್ಳುವೆವು. ಆದರೆ ನಮ್ಮಲ್ಲಿರುವ ಯಾವುದೋ ಒಂದು ಇದು, ಆಶೆ ಮತ್ತು ನಂಬಿಕೆಗಳನ್ನು ಹಿಡಿದುಕೊಳ್ಳುವುದು, ಏಕೆಂದರೆ ಅವನ್ನು ವಿನಾಕರಿಸಿದರೆ, ಬಾಳು ಓಯೆಸಿಸ್ (ಸಸ್ಯ ಮತ್ತು ಜಲಾಶಯ)ರಹಿತವಾದ ಮರುಭೂಮಿಯಾಗುವುದು

ನನ್ನ ಸಮತಾವಾದ ಪ್ರಚಾರದ ಪರಿಣಾಮವು ಕಾರ್ಯನಿರ್ವಾಹಕ ಸಮಿತಿಯ ನನ್ನ ಕೆಲವು ಸಹೋದ್ಯೋಗಿಗಳನ್ನು ಕೂಡ ತಬ್ಬಿಬ್ಬುಮಾಡಿತು ಈ ಪ್ರಚಾರವನ್ನು ನಡೆಸುತ್ತಿದ್ದ ಅನೇಕ ವರ್ಷಗಳಲ್ಲಿ ಅವರು ಮಾಡಿದಂತೆ, ಅಭ್ಯಂತರವಿಲ್ಲದೆ ನನ್ನನ್ನು ಕುರಿತು ಸಹನೆಯಿಂದಿರುತ್ತಿದ್ದರು, ಆದರೆ ನಾನು ಸ್ವಲ್ಪ ಮಟ್ಟಿಗೆ, ನಾಡಿನಲ್ಲಿದ್ದ ಸ್ವಾರ್ಥಗಳನ್ನು ಪ್ರತಿಭಟಿಸಿ ಬೆದರಿಸಿದ್ದೆ, ಮತ್ತು ನನ್ನ ಕಾರ್ಯಕಲಾಪಗಳು ಇನ್ನುಮುಂದೆ ಎಷ್ಟು ಮಾತ್ರವೂ ನಿರ್ಬಾಧಕವೆಂದು ಹೇಳಿಕೊಳ್ಳುವ ಹಾಗಿರಲಿಲ್ಲ ನನ್ನ ಸಹೋದ್ಯೋಗಿಗಳಲ್ಲಿ ಕೆಲವರು ಸಮತಾವಾದಿಗಳಲ್ಲವೆಂಬುದನ್ನು ನಾನು ಅರಿತಿದ್ದೆ, ಆದರೆ, ಕಾಂಗ್ರೆಸ್ಸನ್ನು ದಾಕ್ಷಿಣ್ಯಕ್ಕೆ ಸಿಕ್ಕಿಸದೆ, ನಾನು ಕಾಂಗ್ರೆಸ್ ಕಾರ್ಯನಿರ್ವಾಹಕ ಸಮಿತಿಯ ಸದಸ್ಯನೊಬ್ಬನಾಗಿದ್ದು ಸಮತಾವಾದ ಪ್ರಚಾರ್ಯವನ್ನು ನಡೆಸಿಕೊಂಡು ಹೋಗಲು ಸಂಪೂರ್ಣ ಸ್ವಾತಂತ್ರ್ಯವನ್ನು ಹೊಂದಿದ್ದೆನೆಂದು ನಾನು ಸದಾ ಭಾವಿಸಿದೆ ನಾನು ಆ ಸ್ವಾತಂತ್ರ್ಯವನ್ನು ಹೊಂದಿದ್ದೇನೆಂಬುದನ್ನು ಕಾರ್ಯನಿರ್ವಾಹಕ ಸಮಿತಿಯ ಕೆಲವು ಸದಸ್ಯರು ಮನಗಾಣಲಿಲ್ಲವೆಂಬ ಅರಿವು ನನಗೆ ಆಶ್ಚರ್ಯವನ್ನುಂಟುಮಾಡಿತು ನಾನು ಅವರನ್ನು ಮಿಥ್ಯಾವಸ್ಥಾನದಲ್ಲಿಡುತ್ತಿದ್ದೆ ಅವರು ಅದನ್ನು ಕುರಿತು ಜಿಗುಪ್ಸೆಪಟ್ಟರು ಆದರೆ ನಾನೇನು ಮಾಡಬೇಕಾಗಿತ್ತು ? ನನ್ನ ಕಾರ್ಯದ ಅತ್ಯಂತ ಮುಖ್ಯಭಾಗವೆಂದು ಪರಿಗಣಿಸಿದ್ದುದನ್ನು ನಾನು ಬಿಡುತ್ತಿರಲಿಲ್ಲ ಇಬ್ಬರಿಗೂ ಘರ್ಷಣೆಯೊದಗಿದ್ದಲ್ಲಿ ನಾನು ಸಮಿತಿಯಿಂದ ರಾಜೀನಾಮೆಯನ್ನು ಇತ್ತೀ

ಹೊರಬರುತ್ತಿದ್ದೆ. ಆದರೆ ಸಮಿತಿಯು ಅಕ್ರಮಕೂಟವಾಗಿದ್ದಾಗ ಮತ್ತು ಸರಿಯಾಗಿ ಕೆಲಸ ಕೂಡ ಮಾಡದೆ ಇದ್ದಾಗ ನಾನು ರಾಜೀನಾಮೆ ಕೊಡುವುದು ಹೇಗೆ?

ಮುಂದೆ ಪುನಃ ನಾನು ಈ ಕಷ್ಟವನ್ನು ಎದುರಿಸಬೇಕಾಯಿತು. ಅದು ಡಿಸೆಂಬರಿನ ಅಂತ್ಯಭಾಗದಲ್ಲಿ, ಎಂದು ತೋರುತ್ತದೆ. ಆಗ ಗಾಂಧಿಜಿಯವರು ಮದರಾಸಿನಿಂದ ನನಗೊಂದು ಪತ್ರವನ್ನು ಬರೆದರು. ಅವರು ಕೊಟ್ಟಿದ್ದ ಪತ್ರಿಕಾಭೇಟಿಯ ಸುದ್ದಿಯನ್ನೊಳಗೊಂಡ 'ಮದರಾಸ್ ಮೆಯ್ಲಿ'ನ ಕತ್ತರಿಕೆಯೊಂದನ್ನು ಕಳುಹಿಸಿದರು. ಭೇಟಿಕಾರನು ನನ್ನ ವಿಷಯವನ್ನು ಕುರಿತು ಅವರಲ್ಲಿ ಪ್ರಶ್ನೆ ಮಾಡಿದ್ದನು, ಮತ್ತು ಅವರು ನನ್ನ ಚಟುವಟಿಕೆಗಳಿಗಾಗಿ ಕ್ಷಮಾಪಣೆಯನ್ನು ವ್ಯಕ್ತಪಡಿಸಿ, ನನ್ನ ನೇರ್ಪಿನಲ್ಲಿ ಅವರಿಗಿರುವ ನಂಬಿಕೆಗೆ ಉಕ್ತಿಗೊಟ್ಟರು. ಈ ನೂತನ ಮಾರ್ಗಗಳ ಸಲುವಾಗಿ ನಾನು ಕಾಂಗ್ರೆಸ್ಸನ್ನು ದಾಕ್ಷಿಣ್ಯ ಬಂಧನಕ್ಕೆ ಒಳಗು ಮಾಡಲಿಲ್ಲ. ನನ್ನನ್ನು ಕುರಿತ ಈ ಅನ್ವಯಕ್ಕಾಗಿ ನಾನು ಅಷ್ಟು ವಿಶೇಷವಾಗಿ ಇಷ್ಟಪಡಲಿಲ್ಲ, ಆದರೆ ನನ್ನನ್ನು ಹೆಚ್ಚಾಗಿ ತಲೆಕೆಳಗು ಮಾಡಿದುದೆಂದರೆ, ಭೇಟಿಯಲ್ಲಿ ಆಮೇಲಾಮೇಲೆ, ಗಾಂಧಿಜಿಯವರು ಮಹಾ ಜಮೀರ್ನ್ದಾರಿ ಪದ್ಧತಿಯನ್ನು ಸಮರ್ಥಿಸಿದುದು. ಗ್ರಾಮಾಂತರ ಮತ್ತು ರಾಷ್ಟ್ರೀಯ ಮಿತವ್ಯಯದ ಅತ್ಯಂತ ಅಪೇಕ್ಷಣೀಯ ಭಾಗವಿದೆಂದು ಅವರು ಯೋಚಿಸಿದಂತೆ ತೋರಿತು. ಇಂದು ದೊಡ್ಡ ಜಮೀನ್ದಾರಿಗಳೂ ತಾಲ್ಲೂಕುಗಳೂ ಕೇವಲ ಅಲ್ಪ ಸಂಖ್ಯೆಯ ಸಮರ್ಥಕರನ್ನು ಪಡೆದಿರುವುದರಿಂದ, ಇದು ನನಗೆ ಮಹದಾಶ್ಚರ್ಯವನ್ನುಂಟು ಮಾಡಿತು. ಇಡೀ ಪ್ರಪಂಚದಲ್ಲೆಲ್ಲ ಅವು ಒಡೆದು ಚೂರು ಚೂರುಗಳಾಗಿವೆ, ಮತ್ತು ಭಾರತದಲ್ಲಿ ಕೂಡಾ ಅವು ದೀರ್ಘಕಾಲ ಉಳಿದಿರಲಾರವೆಂಬುದಾಗಿ ಅನೇಕ ಜನರು ಅರಿತುಕೊಂಡಿದ್ದಾರೆ. ತಾಲ್ಲೂಕುದಾರರೂ ಜಮೀನ್ದಾರರೂ ಕೂಡಾ, ತಕ್ಕಷ್ಟು ಪರಿಹಾರ ದ್ರವ್ಯ ದೊರೆತರೆ, ಆ ಪದ್ಧತಿಯ ಕೊನೆಗಾಣ್ಕೆಯನ್ನು ಸ್ವಾಗತಿಸುವರು.* ಆ ಪದ್ಧತಿಯು ವಾಸ್ತವವಾಗಿಯೂ ತನ್ನ ಭಾರದಿಂದಲೇ ತಾನು ಮುಳುಗುತ್ತಿದೆ. ಆದರೂ ಗಾಂಧಿಜಿಯವರು ಅದಕ್ಕೆ ಪಕ್ಷಪಾತದಿಂದಿದ್ದು ನಿಧಿ ನಿರ್ವಾಹಕತೆ ಮುಂತಾದುವನ್ನು ಕುರಿತು ಮಾತನಾಡಿದರು. ಅವರ ದೃಷ್ಟಿಕ್ಷೇಪವು ನನ್ನ ದೃಷ್ಟಿಕ್ಷೇಪದಿಂದ ಎಷ್ಟು ಹೆಚ್ಚು ಭಿನ್ನವಾಗಿತ್ತು ಎಂದು ನಾನು ಪುನಃ ಆಲೋಚಿಸಿದೆ, ಮತ್ತು ಇನ್ನು ಮುಂದೆ ಅವರೊಡನೆ ಎಷ್ಟು ಮಟ್ಟಿಗೆ

---

* ಶ್ರೀ|| ಪಿ ಯನ್ ಠಾಕೂರ್, ಅಖಿಲ ಬಂಗಾಳ ಜಮೀನ್ದಾರರ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷ, ಅವರು ಡಿಸೆಂಬರ್ ೨೩, ೧೯೩೪ ರಲ್ಲಿ ತಮ್ಮ ಭಾಷಣದಲ್ಲಿ ಹೀಗೆ ಹೇಳಿದರು. "ಐರ್ಲೆಂಡಿನಲ್ಲಿ ಮಾಡಿರುವಂತೆ, ಜಮೀನ್ದಾರರಿಗೆ ತಕ್ಕ ಪರಿಹಾರ ದ್ರವ್ಯವನ್ನು ಕೊಟ್ಟಮೇಲೆ ಅವರೆಲ್ಲರ ಜಮೀನುಗಳನ್ನು ರಾಷ್ಟ್ರೀಕರಣ ಮಾಡುವ ದಿನ ಬಂದರೆ ನಾನು ಆತ್ಮೀಯವಾಗಿ ದುಃಖಪಡುವುದಿಲ್ಲ." ಶಾಶ್ವತ ಮುಗುವಳಿಯಲ್ಲಿರುವ ಬಂಗಾಳದ ಜಮೀನ್ದಾರರು ಅಶಾಶ್ವತವಾದ ಮುಗುವಳಿಯ ಜಮೀನ್ದಾರರಿಗಿಂತ ಉತ್ತಮ ಸ್ಥಿತಿಯಲ್ಲಿದ್ದಾರೆ. ಶ್ರೀ|| ಪಿ ಎನ್ ಠಾಕೂರರ ರಾಷ್ಟ್ರೀಕರಣವನ್ನು ಕುರಿತ ಭಾವನೆಗಳು ಅಸ್ಫುಟವಾದುವೆಂದು ತೋರುತ್ತದೆ.

ಸಹಕರಿಸಬಹುದೆಂಬುದಾಗಿ ಶಂಕಿಸಿದೆ ಕಾರ್ಯನಿರ್ವಾಹಕ ಸಮಿತಿಯಲ್ಲಿ ನಾನು ಮುಂದೆಯೂ ಇರಬೇಕೇ? ಸದ್ಯಕ್ಕೆ ಆಗ ಗತ್ಯಂತರವಿರಲಿಲ್ಲ, ಮತ್ತು ಕೆಲವು ವಾರಗಳಾದಮೇಲೆ, ನಾನು ತುರಂಗಕ್ಕೆ ಹಿಂತಿರುಗಿದುದರಿಂದ ಆ ಪ್ರಶ್ನೆಯು ಅಸಂಬದ್ಧವಾಯಿತು

ನನ್ನ ಮನೆವಾಳ್ತೆಯ ಸಂಗತಿಗಳು ನನ್ನ ಬಹುಕಾಲವನ್ನು ವ್ಯಯಮಾಡಿತು ನನ್ನ ತಾಯಿಯ ಆರೋಗ್ಯವು ಬಹಳ ನಿಧಾನವಾಗಿ ಉತ್ತಮವಾಗುತ್ತ ಬಂದಿತು ಆಕೆಯು ಇನ್ನೂ ಹಾಸಿಗೆ ಹಿಡಿದಿದ್ದಳು, ಆದರೆ ಕಳವಳಪಡಬೇಕಾದ ಘಟ್ಟವನ್ನು ಆಕೆ ಮೀರಿದ್ದಂತೆ ತೋರಿತು ನಿಡುಗಾಲ ಉಪೇಕ್ಷಿಸಲ್ಪಟ್ಟದ್ದು ಅವ್ಯವಸ್ಥೆಯಲ್ಲಿದ್ದ ನನ್ನ ಭಾಂಡಾರಿಕ ವಿಷಯಗಳ ಕಡೆಗೆ ನಾನು ತಿರುಗಿದೆ ನಮಗೆ ಸಾಧ್ಯವಿದ್ದುದಕ್ಕಿಂತ ಹೆಚ್ಚಾಗಿಯೇ ನಾವು ವೆಚ್ಚಮಾಡುತ್ತಿದ್ದೆವು, ಮತ್ತು ನಮ್ಮ ವೆಚ್ಚವನ್ನು ಕಡಿಮೆ ಮಾಡುವ ಸ್ಫುಟವಾದ ಮಾರ್ಗವಾವುದೂ ಇದ್ದಂತೆ ತೋರಲಿಲ್ಲ ಇದ್ದುದರಲ್ಲಿಯೇ ತೃಪ್ತಿಪಟ್ಟು ಕಾಲಕ್ಷೇಪಮಾಡಲು ನನಗೆ ವಿಶೇಷವಾಗಿ ಹಂಬಲವಿರಲಿಲ್ಲ ನನ್ನಲ್ಲಿ ಹಣವೇ ಇಲ್ಲವಾಗುತ್ತಿದ್ದ ವೇಳೆಯನ್ನು ನಾನು ಬಹುವಾಗಿ ನಿರೀಕ್ಷಿಸಿದೆ ಆಧುನಿಕ ಪ್ರಪಂಚದಲ್ಲಿ ಹಣವೂ ಆಸ್ತಿಯೂ ಸಾಕಷ್ಟು ಉಪಯುಕ್ತವಾದವು, ಆದರೆ ದೀರ್ಘ ಪ್ರಯಾಣ ಹೊರಡಬೇಕೆಂಬ ಆಶೆಯಿರುವವನಿಗೆ ಅವು ಅನೇಕವೇಳೆ ಹೊರೆಯಾಗುವುವು ಅಪಾಯ ಕಷ್ಟಸಂಭವಗಳುಳ್ಳ ಉದ್ಯಮಗಳಲ್ಲಿ ಹಣವಂತ ಜನರು ಪಾತ್ರವಹಿಸುವುದಕ್ಕೆ ಬಹಳ ಕಷ್ಟವಾಗುವುದು, ತಮ್ಮ ಸರಕುಗಳು ಮತ್ತು ಚರಸೊತ್ತುಗಳನ್ನು ಎಲ್ಲಿ ಕಳೆದುಕೊಳ್ಳಬೇಕಾಗುವುದೋ ಎಂದು ಸದಾ ಅವರು ಭಯಪಡುವರು ಸರಕಾರವು ತನಗೆ ಮನಬಂದಾಗ ಹಣವನ್ನು ಅಥವಾ ಆಸ್ತಿಗಳನ್ನು ಸ್ವಾಧೀನಪಡಿಸಿಕೊಳ್ಳುವ ಇಲ್ಲವೇ ಜಫ್ತಿಯನ್ನು ಕೂಡ ಮಾಡುವ ಹಾಗಿದ್ದರೆ ಅವುಗಳಿಂದೇನು? ಆದುದರಿಂದ ನಾನು ನನ್ನಲ್ಲಿದ್ದ ಅತ್ಯಲ್ಪವನ್ನೂ ತೊಲಗಿಸಿಬಿಡಲು ವಿಶೇಷವಾಗಿ ಬಯಸಿದೆ ನಮ್ಮ ಆವಶ್ಯಕತೆಗಳು ಬಹು ಕಡಿಮೆಯಾಗಿದ್ದುವು, ಮತ್ತು ಸಾಕಷ್ಟು ಸಂಪಾದಿಸುವ ಸಾಮರ್ಥ್ಯವು ನನಗಿದೆಯೆಂಬ ಭರವಸೆಯನ್ನು ತಳೆದೆ. ನನ್ನ ತಾಯಿಯು ತನ್ನ ಜೀವನದ ಸಂಜೆಯಲ್ಲಿ ಅಸೌಕರ್ಯಗಳಿಂದ ಅಥವಾ ಜೀವನದ ಪ್ರಮಾಣದ ಗಮನಾರ್ಹವಾದ ಇಳಿತದಿಂದ ವಾಡುಪಡಬಾರದೆಂಬುದೇ ನನ್ನ ಮುಖ್ಯವಾದ ಕಳವಳವಾಗಿತ್ತು ನನ್ನ ಮಗಳ ವಿದ್ಯಾಭ್ಯಾಸಕ್ಕೆ ಯಾವ ಅಡಚಣೆಯೂ ಬರಬಾರದೆಂಬ ಕಳವಳದಿಂದಲೂ ಕೂಡಿದ್ದೆ, ಇದು ನನ್ನ ಆಲೋಚನೆಯಂತೆ ಯೂರೋಪಿನಲ್ಲಿ ವಸತಿಮಾಡಬೇಕಾದುದನ್ನು ಒಳಗೊಂಡಿತ್ತು ಇದನ್ನು ಬಿಟ್ಟರೆ, ನನ್ನ ಹೆಂಡತಿಗಾಗಲಿ ನನಗಾಗಲಿ ಹಣದ ವಿಷಯದಲ್ಲಿ ಯಾವ ವಿಶೇಷ ಆವಶ್ಯಕತೆಯೂ ಇರಲಿಲ್ಲ. ಅಥವಾ ಅದರ ದಿಟವಾದ ಕೊರತೆಗೆ ಅಭ್ಯಾಸವಾಗದೆ ಇದ್ದುದರಿಂದ, ನಾವು ಹಾಗೆಂದುಕೊಂಡೆವು. ನಮ್ಮಲ್ಲಿ ಹಣದ ಕೊರತೆಯುಂಟಾದ ಸಮಯಬಂದಾಗ, ನಾವು ಅದನ್ನು

ಕುರಿತು ಸಂತೋಷದಿಂದಿರುವುದಿಲ್ಲವೆಂದು ನನಗೆ ಭರವಸೆಯಿದೆ ನಾನು ನಡೆಸಿಕೊಂಡು ಬಂದಿರುವ ದುಂದುಗಾರಿಕೆಯೊಂದನ್ನು ತೊರೆಯಲು ಕಷ್ಟವಾಗಿರುವುದು, ಇದಾವುದೆಂದರೆ ಗ್ರಂಥಗಳನ್ನು ಕೊಂಡುಕೊಳ್ಳುವುದು

ತಕ್ಷಣದ ಭಾಂಡಾರಿಕ ಪರಿಸ್ಥಿತಿಯನ್ನು ಮೇಲ್ಪಡಿಸಲೋಸುಗ ನಾವು, ನನ್ನ ಹೆಂಡತಿಯ ಆಭರಣಗಳನ್ನೂ ನಮ್ಮ ಸ್ವಾಧೀನದಲ್ಲಿದ್ದ ಬೆಳ್ಳಿ ಪಾತ್ರೆ ಮತ್ತು ತದಿತರ ಪದಾರ್ಥಗಳನ್ನು ಹಾಗೂ ಮನೆಯಲ್ಲಿದ್ದ ಚಿಲ್ಲರೆ ಸರಕುಗಳ ಗಾಡಿಗಾಡಿಗಳನ್ನೂ ಮಾರಿಬಿಡಬೇಕೆಂದು ನಿರ್ಧರಿಸಿದೆವು ಕಮಲಳು ತನ್ನ ಆಭರಣಗಳನ್ನು ತ್ಯಜಿಸುವ ವಿಚಾರಕ್ಕೆ ಇಷ್ಟಪಡಲಿಲ್ಲ. ಆಕೆಯಾದರೋ ಅವುಗಳಲ್ಲಿ ಯಾವುದನ್ನೂ ಹತ್ತಾರು ವರ್ಷಗಳಿಂದ ತೊಟ್ಟುಕೊಂಡಿರಲೇ ಇಲ್ಲ, ಅವು ಬ್ಯಾಂಕಿನಲ್ಲಿ ಬಿದ್ದಿದ್ದುವು ಆದರೆ ಅವನ್ನು ನಮ್ಮ ಮಗಳಿಗೆ ಕೊಡಬೇಕೆಂದು ಆಕೆ ನಿರೀಕ್ಷಿಸಿದ್ದಳು

೧೯೩೪ ರ ಜನವರಿ ಅಲಹಾಬಾದ್ ಜಿಲ್ಲೆಯ ಹಳ್ಳಿಗಳಲ್ಲಿ ನಿಷ್ಕಪಟವಾಗಿ ನಿಯೋಗಿಸಲ್ಪಟ್ಟಿದ್ದರೂ ನಮ್ಮ ಕಾರ್ಯಕರ್ತರ ಸತತವಾದ ದಸ್ತಗಿರಿಗಳು, ನಾವೂ ಅವರ ಮೇಲ್ಪಜ್ತಿಯನ್ನನುಸರಿಸಿ ಹಳ್ಳಿಗಳಿಗೆ ಬೇಟಿ ಕೊಡಬೇಕೆಂದು ಬೇಡಿದಂತೆ ತೋರಿದುವು ಸ ಪ್ರಾ ಪ್ರಾಂತ ಕಾಂಗ್ರೆಸ್ ಸಮಿತಿಯ ನಮ್ಮ ಬಹಳ ಪರಿಣಾಮಕಾರಿ ಕಾರ್ಯದರ್ಶಿಗಳಾದ ರಫಿ ಅಹ್ಮದ್ ಕಿಡ್ವಾಯಿಯವರು ಕೂಡ ಬಂಧನದಲ್ಲಿದ್ದರು ಜನವರಿ ೨೬–ಸ್ವಾತಂತ್ರ್ಯ ದಿನಾಚರಣೆಯು–ಬಳಿಸಾರುತ್ತಿದ್ದು ಅದನ್ನು ಉಪೇಕ್ಷಿಸಲಾಗದಿತ್ತು ಆರ್ಡಿನೆನ್ಸುಗಳೂ ನಿರೋಧಗಳೂ ಇದ್ದರೂ ೧೯೩೦ ರಿಂದ ನಾಡಿನ ನಾನಾ ಭಾಗಗಳಲ್ಲಿ ಅದು ಕ್ರಮವಾಗಿ ಆಚರಿಸಲ್ಪಡುತ್ತಿತ್ತು ಆದರೆ ಮುಂದಾಳಾಗಿ ಚೂಣಿಯಲ್ಲಿ ನಡೆವವರಾರು ? ಆ ಮುಂದಾಳುತನವು ಯಾವುದು ? ಅಖಿಲ ಭಾರತ ಕಾಂಗ್ರೆಸ್ಸಿನ ಅಧಿಕಾರಿಯೊಬ್ಬನ-ಗಿ, ಶಾಸ್ತ್ರಕ್ಕಾದರೂ ಕೂಡ, ನನ್ನ ಹೊರತು ಯಾರೂ ಕೆಲಸ ಮಾಡುತ್ತಿರಲಿಲ್ಲ ನಾನು ಕೆಲವು ಗೆಳೆಯರಲ್ಲಿ ಸಮಾಲೋಚಿಸಿದ, ಎಲ್ಲರೂ ಏನಾದರೊಂದು ಇದನ್ನು ಮಾಡಬೇಕೆಂದು ಒಪ್ಪಿಕೊಂಡರು, ಆದರೆ ಈ ಇದು ಏನೆಂಬುದನ್ನು ಕುರಿತು ಯಾವ ಒಪ್ಪಿಗೆಯೂ ಆಗಲಿಲ್ಲ ಗುಂಪು ಗುಂಪುಗಳಲ್ಲಿಯ ದಸ್ತಗಿರಿಗಳಿಗೆ ಕರೆದೊಯ್ಯುವ ಯಾವ ಕಾರ್ಯವನ್ನು ಮಾಡಲೂ ತಪ್ಪಿಸಿಕೊಳ್ಳುವ ಸಾಮಾನ್ಯ ಮನೋಗತಿಯನ್ನು ನಾನು ಕಂಡೆ ಕಡೆಗೆ ನಾನು, ಸ್ವಾತಂತ್ರ್ಯ ದಿನದ ತಕ್ಕ ಆಚರಣೆಗಾಗಿ ಒಂದು ಸಂಕ್ಷಿಪ್ತ ಬಿನ್ನಹವನ್ನು ಪ್ರಕಟಿಸಿದೆ, ಆಚರಣೆಯ ವಿಧಾನವನ್ನು ಆಯಾ ಸ್ಥಳೀಯ ಕ್ಷೇತ್ರವೇ ನಿರ್ಣಯಿಸತಕ್ಕದ್ದು ಅಲಹಾಬಾದಿನಲ್ಲಿ ನಾವು ಇಡೀ ಜಿಲ್ಲೆಯಲ್ಲೆಲ್ಲ ಸಾಕಷ್ಟು ವಿಸ್ತಾರವಾದ ಉತ್ಸವವೊಂದನ್ನು ಏರ್ಪಡಿಸಿದೆವು

ಈ ಸ್ವಾತಂತ್ರ್ಯ ದಿನಾಚರಣೆಯ ವ್ಯವಸ್ಥಾಪಕರನ್ನು ಅಂದೇ ದಸ್ತಗಿರಿ ಮಾಡುವರೆಂದು ನಾವು ಭಾವಿಸಿದ್ದೆವು ಪುನಃ ನಾನು ಸೆರೆಮನೆಗೆ ಹೋಗುವ

ಮೊದಲು ಬಂಗಾಳಕ್ಕೆ ಭೇಟಿ ಕೊಡಬೇಕೆಂದು ಬಯಸಿದೆ ಅಲ್ಲಿ ನನ್ನ ಹಳೆಯ ಸಹೋದ್ಯೋಗಿಗಳನ್ನು ಸಂಧಿಸುವ ಬಯಕೆಯೇ ಇದಕ್ಕೆ ಅಂಶತಃ ಕಾರಣ, ಆದರೆ ವಾಸ್ತವವಾಗಿಯೂ ಅದು, ಕಳೆದ ಐದು ವರ್ಷಗಳಿಂದ ಅಸಾಮಾನ್ಯ ಬಾಧಾನುಭವ ವನ್ನು ಹೊಂದಿದ ಬಂಗಾಳದ ಜನತೆಗೆ ಕಾಣಿಕೆಯ ರೂಪದ ಭಂಗಿಯೊಂದಾಗಿತ್ತು. ನಾನು ಅವರಿಗೆ ಯಾವ ಉಪಕಾರವನ್ನೂ ಮಾಡಲಾರ ಎಂಬುದನ್ನು ಚೆನ್ನಾಗಿ ತಿಳಿ ದಿದ್ದ ಸಹಾನುಭೂತಿ ಮತ್ತು ಸೋದರಭಾವಗಳು ದೂರ ಹೋಗಲಿಲ್ಲ, ಆದರೂ ಅವು ಬಹಳ ಸ್ವಾಗತನೀಯವಾಗಿದ್ದುವು, ಮತ್ತು ಬಂಗಾಳದ ವಿವಿಕ್ತತ್ವದ ಭಾವನೆ ಯಿಂದ, ಆಕೆಯ ಕಷ್ಟಕಾಲದಲ್ಲಿ ಉಳಿದ ಭಾರತವು ತನ್ನನ್ನು ಕೈ ಬಿಟ್ಟುಬಿಟ್ಟಿತೆಂಬ ಭಾವನೆಯಿಂದ, ವಿಶೇಷವಾಗಿ ಸಂಕಟಪಡುತ್ತಿದ್ದಳು. ಈ ಸಂವೇದನೆಯು ಸಮರ್ಥ ನೀಯವಾದುದಾಗಿರಲಿಲ್ಲ ಆದರೆ ಆ ಭಾವನೆಯೇನೋ ಇದ್ದೇ ಇತ್ತು

ಕಮಲಳ ವೈದ್ಯ ಚಿಕಿತ್ಸೆಯನ್ನು ಕುರಿತು ನಮ್ಮ ವೈದ್ಯರೊಡನೆ ಮಾತನಾಡಲು ಸಹ ನಾನು ಕಲ್ಕತ್ತೆಗೆ ಹೋಗಬೇಕಾಗಿತ್ತು ಆಕೆಯ ಆರೋಗ್ಯವು ಬಹಳಮಟ್ಟಿಗೆ ಅಸಮರ್ಪಕವಾಗಿತ್ತು ಆದರೆ ನಾವಿಬ್ಬರೂ ಇದನ್ನು ಸ್ವಲ್ಪಮಟ್ಟಿಗೆ ಉಪೇಕ್ಷಿಸಲೂ ಮತ್ತು ಕಲ್ಕತ್ತೆಯಲ್ಲೋ ಅಥವಾ ಬೇರೊಂದೆಡೆಯಲ್ಲೋ ನಿಡುಗಾಲ ನಿಲ್ಲಬೇಕಾಗಿ ಒರ ಬಹುದಾದ್ದನ್ನೊಳಗೊಂಡ ವೈದ್ಯಚಿಕಿತ್ಸೆಯೊಂದನ್ನು ಮುಂದೆ ಹಾಕಲೂ ಪ್ರಯತ್ನ ಪಟ್ಟಿದ್ದೆವು ಸೆರೆಮನೆಯ ಹೊರಗಣ ನನ್ನ ಸಂಕ್ಷಿಪ್ತ ಅವಧಿಯಲ್ಲಿ ಸಾಧ್ಯವಾದ ಮಟ್ಟಿಗೂ ನಾವಿಬ್ಬರೂ ಒಟ್ಟಾಗಿ ಇರಲು ಪ್ರಯತ್ನಿಸಿದೆವು. ನಾನು ಸೆರೆಮನೆಗೆ ಹಿಂತಿರುಗಿದ ಮೇಲೆ ಆಕೆಗೆ ವೈದ್ಯರ ಸಲಹೆಗೂ ವೈದ್ಯ ಚಿಕಿತ್ಸೆಗಳಿಗೂ ಬೇಕಾದಷ್ಟು ಹೊತ್ತು ಇರುವುದೆಂದು ಯೋಚಿಸಿದೆ ಆದರೆ ಈಗ ದಸ್ತಗಿರಿಯು ಬಹಳ ಹತ್ತಿರ ವಿದ್ದಂತೆ ತೋರಿದುದರಿಂದ ಈ ಚಿಕಿತ್ಸೆಗೆ ಸಂಬಂಧಪಟ್ಟ ಮಾತುಕತೆಗಳನ್ನು ಕಲ್ಕತ್ತೆ ಯಲ್ಲಿ ನನ್ನ ಇರವೆಯಲ್ಲಾದರೂ ನಡೆಸಲು ನಿರ್ಧರಿಸಿದೆ, ಉಳಿದುದಕ್ಕೆ ಆಮೇಲೆ ಲಕ್ಷ್ಯಕೊಡಬಹುದಾಗಿತ್ತು

ಆದುದರಿಂದ ಜನವರಿ ೧೫ ನೆಯ ತಾರೀಖು ಕಲ್ಕತ್ತೆಗೆ ಹೋಗಬೇಕೆಂದು ಕಮಲಳೂ ನಾನೂ ನಿಷ್ಕರ್ಷಿಸಿದೆವು ನಮ್ಮ ಸ್ವಾತಂತ್ರ್ಯ ದಿನಾಚರಣೆಗಳ ಸಭೆಗ ಳಿಗೆ ಸಕಾಲಕ್ಕೆ ಹಿಂತಿರುಗಿ ಬರಲು ಇಚ್ಛಿಸಿದ್ದೆವು

೫೮

# ಭೂಕಂಪ

೧೯೩೪ ರ ಜನವರಿ ೧೫ ನೆಯ ಮಧ್ಯಾಹ್ನ ಅಲಹಾಬಾದಿನಲ್ಲಿ ನಮ್ಮ ಮನೆಯ ಕೈಸಾಲೆಯಲ್ಲಿ ಬೇಸಾಯಗಾರರ ಗುಂಪೊಂದನ್ನು ಕುರಿತು ಭಾಷಣಮಾಡುತ್ತ ನಿಂತಿದ್ದೆ ವಾರ್ಷಿಕ ಮಾಘ ಮೇಳವು ಮೊದಲಾಗಿತ್ತು, ಮತ್ತು ದಿನವೆಲ್ಲ ನೋಟಕರ ಗುಂಪುಗಳು ಬಂದು ಹೋಗುತ್ತಿದ್ದುವು ಇದ್ದಕ್ಕಿದ್ದಂತೆಯೇ ನಾನು ಅಸ್ಥಿರನಾಗಿ ನನ್ನ ಹವಣು ನೋಡಿಕೊಳ್ಳಲಾರದೆಹೋದೆ ಹತ್ತಿರವಿದ್ದ ಕಂಬವನ್ನು ಬಲವಾಗಿ ಹಿಡಿದುಕೊಂಡೆ ಬಾಗಿಲುಗಳು ಢಮಾರೆಂದು ಬಡಿದುಕೊಳ್ಳಲಾರಂಭಿಸಿದುವು ಮೇಲ್ಛಾವಣಿಯಿಂದ ಹೆಂಚುಗಳು ಜಾರಿಬೀಳುತ್ತಿದ್ದ ಪಕ್ಕದ ಸ್ವರಾಜ್ಯ ಭವನದಿಂದ ಗುಡುಗಾಟದ ಮೊಳಗು ಕೇಳಿಸಿತು ಭೂಕಂಪಗಳಿಗೆ ಒಗ್ಗಿಬಾರದಿದ್ದುದರಿಂದ, ಏನು ನಡೆಯುತ್ತಿತ್ತೆಂಬುವನ್ನು ಮೊದಮೊದಲು ನಾನು ತಿಳಿಯಲಿಲ್ಲ, ಆದರೆ ಕೂಡಲೆ ಅದರ ಅರಿವುಂಟಾಯಿತು ಈ ನೂತನ ಅನುಭವವನ್ನು ಕುರಿತು ನನ್ನಲ್ಲಿ ಸೋಜಿಗವೂ ಕುತೂಹಲವೂ ಉಂಟಾಯಿತು ಮತ್ತು ಬೇಸಾಯಗಾರರನ್ನು ಕುರಿತ ನನ್ನ ಮಾತನ್ನು ಮುಂದುವರಿಸಿ, ಅವರಿಗೆ ಭೂಕಂಪದ ವಿಷಯವನ್ನೊರೆಯಲು ಮೊದಲಿಟ್ಟೆ ನಾನು ಕಟ್ಟಡವನ್ನು ಬಿಟ್ಟೋಡಬೇಕೆಂದು ನನ್ನ ಮುದಿ ದೊಡ್ಡಮ್ಮ ಸ್ವಲ್ಪ ದೂರದಿಂದ ಕೂಗಿಕೊಂಡಳು. ಆ ಉಪಾಯವು ಅವಿವೇಕವೆಂದು ನನಗೆ ಹೊಳೆಯಿತು ಭೂಕಂಪವನ್ನು ನಾನು ಗಹನವೆಂದು ಭಾವಿಸಲಿಲ್ಲ, ಮತ್ತು ಹೇಗಾದರೂ, ಮಹಡಿಯ ಮೇಲೆ ಹಾಸಿಗೆ ಹಿಡಿದು ಮಲಗಿದ್ದ ತಾಯಿಯನ್ನೂ, ಅದೇ ಮಹಡಿಯ ಮೇಲೆ ಪ್ರಾಯಶಃ ಗಂಟುಮೂಟೆ ಕಟ್ಟುತ್ತಿದ್ದ ಹೆಂಡತಿಯನ್ನೂ ಬಿಟ್ಟು ಆತ್ಮರಕ್ಷಣೆಗಾಗಿ ಓಡಿಹೋಗುತ್ತಿರಲಿಲ್ಲ ಸಾಕಷ್ಟು ದೀರ್ಘಕಾಲವೆಂದು ತೋರುವವರೆಗೆ ಅದುರಾಟಗಳು ಮುಂದುವರಿಯುತ್ತಿದ್ದು ನಿಂತುಹೋದುವು ಅವು ಕೆಲವು ನಿಮಿಷಗಳವರೆಗೆ ಸಂಭಾಷಣೆಗೆ ಸಾಮಗ್ರಿಯನ್ನಿತ್ತು, ಬಹುತರವಾಗಿ ಕೂಡಲೇ ಮರೆಯಲ್ಪಟ್ಟುವು ಈ ಎರಡು ಅಥವಾ ಮೂರು ನಿಮಿಷಗಳು ಬಿಹಾರ್ ಮತ್ತು ಇತರ ಕಡೆಗಳಲ್ಲಿನ ಲಕ್ಷಾಂತರ ಜನತೆಗೆ ಏನು ಮಾಡಿದುವೆಂಬುದನ್ನು ಆಗ ನಾವು ಅರಿಯೆವು ಅಥವಾ ನಮಗೆ ಊಹಿಸಲಸಾಧ್ಯವಾಗಿತ್ತು

ಆ ಸಾಯಂಕಾಲ ಕಮಲಳೂ ನಾನೂ ಕಲ್ಕತ್ತೆಗೆ ಪಯಣಮಾಡಿದೆವು. ನಮಗೆ ತಿಳಿಯದೆಯೇ ನಾವು ರೈಲುಗಾಡಿಯಲ್ಲಿ ಆ ರಾತ್ರಿ ದಕ್ಷಿಣ ಭೂಕಂಪಿತ ಕ್ಷೇತ್ರದಲ್ಲಿಯೇ ಕರೆದೊಯ್ಯಲ್ಪಟ್ಟೆವು ಮಾರನೆಯ ದಿನ ಕಲ್ಕತ್ತೆಯಲ್ಲಿ ಭೂಪ್ರಳಯದ

ಸುದ್ದಿಯು ಎಳ್ಳಿನಷ್ಟಿತ್ತು. ಆದರ ಮರುದಿನ ತುಂಡು ಸುದ್ದಿಗಳು ಬರಲಾರಂಭಿಸಿದುವು. ಮೂರನೆಯ ದಿನ ಮಹಾ ವಿನಾಶದ ಅಸ್ಪಷ್ಟ ಭಾವನೆಯನ್ನು ಪಡೆಯಲು ಮೊದಲಾಯಿತು.

ನಾವು ನಮ್ಮ ಕಲ್ಕತ್ತೆಯ ಕಾರ್ಯಕ್ರಮದಲ್ಲಿ ಮಗ್ನರಾದೆವು. ಪುನಃಪುನಃ ನೋಡಬೇಕಾದ ವೈದ್ಯರುಗಳು ಅನೇಕ ಮಂದಿಯಿದ್ದರು. ಒಂದು ಅಥವಾ ಎರಡು ತಿಂಗಳುಗಳಾದ ಮೇಲೆ ಕಮಲಳು ಚಿಕಿತ್ಸೆಗಾಗಿ ಕಲ್ಕತ್ತೆಗೆ ಬರಬೇಕೆಂದು ಕೊನೆಯ ತೀರ್ಮಾನವಾಯಿತು. ನಿಡುಗಾಲ ನಾವು ಭೇಟಿಯಾಗದಿದ್ದ ಕಾಂಗ್ರೆಸ್ ಸಹೋದ್ಯೋಗಿಗಳೂ ಸ್ನೇಹಿತರೂ ಇದ್ದರು. ಕುಗ್ಗಿಸುವ ಭಯಂಕರ ಭಾವನೆಯೊಂದು ಇಡೀ ಕಾಲವೇ ನನ್ನಲ್ಲಿತ್ತು. ಏನನ್ನು ಮಾಡಿದರೂ ಎಲ್ಲಿ ಕಷ್ಟ ಪ್ರಾಪ್ತಿಯಾಗುವುದೋ ಎಂದು ಜನರು ಯಾವ ಕೆಲಸವನ್ನು ಮಾಡಲೂ ಭಯಪಡುತ್ತಿದ್ದಂತಿತ್ತು. ಅವರು ಬಹಳ ಕಷ್ಟವನ್ನು ಅನುಭವಿಸಿದ್ದರು. ಭಾರತದ ಇತರ ಭಾಗಗಳಲ್ಲೆಲ್ಲಿಯೂ ಇಲ್ಲದಷ್ಟು ಹೆಚ್ಚಾಗಿ ಪತ್ರಿಕೆಗಳು ಜಾಗರೂಕತೆಯಿಂದಿದ್ದುವು. ಭಾರತದ ಇತರ ಕಡೆಗಳಲ್ಲಿನಂತೆಯೇ, ಭವಿಷ್ಯತ್ತನ್ನು ಕುರಿತ ಸಂದೇಹವೂ ಕಂಗಡಿಕೆಯೂ ಇದ್ದುವು. ಪರಿಣಾಮಕಾರಿಯಾದ ರಾಜಕೀಯ ಕಾರ್ಯಕಲಾಪವನ್ನು ತಡೆಗಟ್ಟಿದುದು ನಿಜವಾಗಿಯೂ ಈ ಸಂದೇಹವೇ ಹೊರತು ಅಷ್ಟಾಗಿ ಭಯವಲ್ಲ. ಫ್ಯಾಸಿಸ್ಟ್ ಮನೋಗತಿಗಳು ಸ್ಪಷ್ಟವಾಗಿದ್ದುವು, ಹಾಗೂ ಸಮತಾವಾದಿ ಮತ್ತು ಕಮ್ಯೂನಿಸ್ಟ್ ಮನೋಗತಿಗಳು—ಎಲ್ಲವೂ ಮುಂಪರ ಮುಂಪರವಾಗಿದ್ದು ಒಂದರೊಳಕ್ಕೊಂದು ನುಗ್ಗಾಡುತ್ತಿದ್ದುವು. ಈ ಗುಂಪುಗಳ ನಡುವೆ ಸ್ಫುಟವಾದ ಮತ್ತು ಖಚಿತವಾದ ಗೆರೆಗಳನ್ನೆಳೆಯುವುದು ಕಷ್ಟವಾಗಿತ್ತು. ಅಧಿಕಾರ ಕೇಂದ್ರಗಳಲ್ಲಿ ಬಹಳ ಹೆಚ್ಚಾದ ಗಮನವನ್ನೂ ಪ್ರಕಟಣೆಯನ್ನೂ ಪಡೆಯುತ್ತಿದ್ದ ಭಯೋತ್ಪಾದಕ ಚಳವಳಿಯನ್ನು ಕುರಿತು ಹೆಚ್ಚನ್ನು ತಿಳಿಯಲು ನನಗೆ ವ್ಯವಧಾನವಾಗಲಿ ಅವಕಾಶವಾಗಲಿ ಇರಲಿಲ್ಲ. ನಾನು ತಿಳಿದುಕೊಂಡಮಟ್ಟಿಗೆ, ಅದರಲ್ಲಿ ಯಾವ ರಾಜಕೀಯ ಅರ್ಥ ನಿಷ್ಪತ್ತಿಯೂ ಇರಲಿಲ್ಲ. ಭಯೋತ್ಪಾದಕ ಗುಂಪುಗಳ ಹಳೆಯ ಸದಸ್ಯರು ಇನ್ನು ಅದರಲ್ಲಿ ಯಾವ ನಂಬಿಕೆಯನ್ನೂ ಇಟ್ಟಿರಲಿಲ್ಲ. ಭಿನ್ನದೃಷ್ಟಿ ಕೋನಗಳಿಂದ ಅವರು ಆಲೋಚಿಸಲು ಆರಂಭಿಸಿದ್ದರು. ಹೇಗಾದರೂ, ಬಂಗಾಳದಲ್ಲಿ ಸರಕಾರದ ಕಾರ್ಯವನ್ನು ಕುರಿತ ಖಂಡನೆಯು, ಅಲ್ಲಲ್ಲಿ ವ್ಯಕ್ತಿಗಳು ಸ್ವಚ್ಛಂದವರ್ತಿಗಳಾಗಿ ಒಂದು ವಿಧವಾದ ದುರಂತ ವ್ಯಾಜ್ಯದಲ್ಲಿ ತೊಡಗುವಂತೆ ಮಾಡಿತು. ವಾಸ್ತವವಾಗಿಯೂ, ಇರ್ಕಡೆಗಳಲ್ಲಿಯೂ ದುರಂತ ವ್ಯಾಜ್ಯದ ಈ ಕಲ್ಪನೆಯು ಅಧಿಕರಿಸಿದ್ದಂತೆ ತೋರಿತು. ವ್ಯಕ್ತಿಗತ ಭಯೋತ್ಪಾದಕರ ಕಡೆಯಂತೂ ಇದು ಸಾಕಷ್ಟು ಸ್ಪಷ್ಟವಾಗಿತ್ತು. ಸರಕಾರದ ಕಡೆಯೂ ಕೂಡ ಈ ನಿಷ್ಕೃಷ್ಟ ಮನೋಭಾವವು, ಸಮಾಧಾನವಾಗಿ ಪ್ರತಿ—ಸಾಮಾಜಿಕ ಪ್ರಸಕ್ತಿಯೊಡನೆ ಹೊಡೆದಾಡಿ ಅದನ್ನು ನಿಗ್ರಹಿಸುವುದಕ್ಕಿಂತ ಹೆಚ್ಚಾಗಿ

ಪ್ರಾಸಂಗಿಕ ಪ್ರತೀಕಾರಗಳೊಡನೆ ದುರಂತ ವ್ಯಾಜ್ಯವನ್ನು ನಡೆಸಿಕೊಂಡುಹೋಗು ವುದಾಗಿತ್ತು ಭಯೋತ್ಪಾದಕ ಕ್ರಿಯೆಗಳನ್ನು ಎದುರಿಸಬೇಕಾಗುವ ಯಾವ ಸರಕಾರ ವಾದರೂ ಅವುಗಳೊಡನೆ ಸಂಘರ್ಷಿಸಿ ನಿಗ್ರಹಿಸಿಯೇ ತೀರುವುದು ಆದರೆ ಸರಕಾರ ವೊಂದರಲ್ಲಿ, ಅಪರಾಧಿ ಮತ್ತು ನಿರಪರಾಧಿಗಳನ್ನು (ವಿಶೇಷವಾಗಿ ಬಹು ಸಂಖ್ಯಾತ ರಾಗಿಯೇ ಇರುವ ಇವರನ್ನು) ಕುರಿತು ಒಂದೇ ರೀತಿಯಲ್ಲಿ ವಿವೇಕ ಶೂನ್ಯತೆಯಿಂದ ಸಂಪ್ರಯೋಗಿಸುವ ಅತಿ ವರ್ತನೆಯು ಕಾರ್ಯಕ್ಕಿಂತ ಗಂಭೀರವಾದ ಅಂಕೆಯೇ ಹೆಚ್ಚು ಉಚಿತವಾದುದು ಅಂಥ ತರ್ಜನೆಯೊಂದರ ಎದುರಿನಲ್ಲಿ ಪ್ರಶಾಂತವಾಗಿಯೂ ಶಾಂತ ವಾಗಿಯೂ ಇರುವುದು ಪ್ರಾಯಶಃ ಸುಲಭವಲ್ಲ ಭಯೋತ್ಪಾದಕ ಕ್ರಿಯೆಗಳು ವಿರಳವಾ ಗುತ್ತಿದ್ದುವು ಆದರೆ ಅವುಗಳ ಸಂಭವದ ಸಾಧ್ಯತೆಯು ಸದಾ ಇದ್ದೇ ಇತ್ತು ಮತ್ತು ಅವುಗಳೊಡನೆ ವ್ಯವಹರಿಸಬೇಕಾದವರ ಮನಶ್ಶಾಂತಿಯನ್ನು ತಲೆಕೆಳಗು ಮಾಡಲು ಇದು ಸಾಕಾಗಿತ್ತು ಸ್ಪಷ್ಟವಾಗಿರುವಂತೆ, ಅಂಥ ಕ್ರಿಯೆಗಳು, ರೋಗವೊಂದಲ್ಲ ಆದರೆ ರೋಗದ ಚಿಹ್ನೆಗಳು , ರೋಗಕ್ಕೆ ಚಿಕಿತ್ಸೆ ಮಾಡದೆ ರೋಗದ ಚಿಹ್ನೆಗಳಿಗೆ ಚಿಕಿತ್ಸೆ ಮಾಡುವುದು ವ್ಯರ್ಥ

ಭಯೋತ್ಪಾದಕರೊಡನೆ ವ್ಯವಹಾರಗಳನ್ನುಳ್ಳವರೆಂದು ಹೇಳಲಾಗಿರುವ ಅನೇಕ ಯುವ ಸ್ತ್ರೀಪುರುಷರು ವಾಸ್ತವವಾಗಿಯೂ ಗುಪ್ತಕಾರ್ಯದ ಮಾಯಾಜಾಲದಿಂದ ಆಕ ರ್ಷಿಸಲ್ಪಡುವರೆಂಬುದಾಗಿ ನಾನು ನಂಬುತ್ತೇನೆ ಸಾಹಸಪ್ರಿಯವಾದ ಮಾದರಿಯ ಯುವಕರಿಗೆ ಗುಟ್ಟು ಮತ್ತು ಅಪಾಯಕ್ಕೆದೆಗೊಡುವುದು, ಸದಾ ಮನಸ್ಸಿಗೆ ರಂಜಿಸು ತ್ತವೆ , ಈ ಎಲ್ಲ ಬೊಬ್ಬೆಗಳ ವಿಷಯವೇನೆಂಬುದನ್ನೂ ತೆರೆಯ ಹಿಂದಿರುವ ಆ ಪುರುಷ ರಾರೆಂಬುದನ್ನೂ, ಹುಡುಕಿನೋಡಿ ತಿಳಿಯಬೇಕೆಂಬ ಆಶೆ ಪತ್ತೆದಾರಿ ಕತೆಯ ಕರೆ ಯದು ಈ ಜನರಿಗೆ ಯಾವುದನ್ನೂ ಮಾಡಬೇಕೆಂಬ ಉದ್ದೇಶವಿಲ್ಲ, ಭಯೋತ್ಪಾ ದಕ ಕಾರ್ಯವೊಂದನ್ನು ಮಾಡಬೇಕೆಂಬುದಂತೂ ಇಲ್ಲವೇ ಇಲ್ಲ , ಆದರೆ ಪೊಲೀಸರ ಕಣ್ಣಿನಲ್ಲಿ, ಗುಮಾನಿ ಆಸಾಮಿಗಳೊಂದಿಗೆ ಅವರ ಕೇವಲ ಸಹಚರ್ಯವೇ ಅವರನ್ನು ಕೂಡ ಗುಮಾನಿ ಆಸಾಮಿಗಳನ್ನಾಗಿ ಮಾಡಲು ಸಾಕು ಅತ್ಯಲ್ಪಕಾಲದಲ್ಲಿಯೇ ಅವರು ಡಿಟೆನ್ಯೂಗಳ ಶ್ರೇಣಿಯಲ್ಲಿ ಅಥವಾ ಇನ್ನೂ ಕೇಡಾದ ದುರದೃಷ್ಟವು ಕಾದಿರ ದಿದ್ದರೆ, ದಿಗ್ಬಂಧನ ಶಿಬಿರಗಳಲ್ಲಿ ಸೇರಿಬಿಡುವ ಸಂಭವವಿದೆ

ಭಾರತದಲ್ಲಿ ಬ್ರಿಟಿಷ್ ಆಳ್ವಿಕೆಯ ಅಭಿಮಾನಾಸ್ಪದ ಕಾರ್ಯಸಿದ್ಧಿಗಳಲ್ಲಿ ನ್ಯಾಯ ಮತ್ತು ಶಿಸ್ತುಗಳು ಸೇರಿವೆಯೆಂದು ನಮಗೆ ಹೇಳಲಾಗಿದೆ ನನ್ನ ಸ್ವಂತ ಉಪಜ್ಞೆ ಗಳಾದರೂ ಸಂಪೂರ್ಣವಾಗಿ ಅವುಗಳ ಪರವಾಗಿಯೇ ಇವೆ ನನಗೆ ಬಾಳಿನಲ್ಲಿ ಶಿಸ್ತಿಯು ಮೆಚ್ಚು , ಮತ್ತು ಅನಾಯಕತೆ, ಅವ್ಯವಸ್ಥೆ ಮತ್ತು ಅದಕ್ಷತೆಗಳನ್ನು ಹೇಸು ವೆನು ಆದರೆ ಕಟುವಾದ ಅನುಭವವು, ಅಧಿಪತ್ಯಗಳೂ ಸರಕಾರಗಳೂ ಪ್ರಜೆಗಳ

ಮೇಲೆ ಹೊರಿಸುವ ನ್ಯಾಯ ಮತ್ತು ಶಿಸ್ತುಗಳ ಬೆಲೆಯನ್ನು ನಾನು ಹೇಸುವಂತೆ ಮಾಡಿದೆ ಕೆಲವು ವೇಳೆ ಅವಕ್ಕೊಬ್ಬನು ಕೊಡುವ ಬೆಲೆಯು ಬಹಳ ಹೆಚ್ಚಾದುದು, ನ್ಯಾಯವೆಂದರೆ ಪ್ರಬಲವಾದ ಸ್ವಾರ್ಥವುಳ್ಳ ಪಕ್ಷವೊಂದರ ಚಿತ್ತ, ಹಾಗೂ ಶಿಸ್ತಿಯೆಂದರೆ ಸರ್ವವ್ಯಾಪಿಯಾದ ಭಯದ ಪ್ರತಿಬಿಂಬ ಕೆಲವು ವೇಳೆ ವಾಸ್ತವವಾಗಿಯೂ 'ನ್ಯಾಯ ಮತ್ತು ಶಿಸ್ತಿ'ಗಳು ಹೆಚ್ಚಾಗಿ ನ್ಯಾಯ ಮತ್ತು ಶಿಸ್ತಿಗಳ ಇಲ್ಲವೆಯೆಂದು ಯಥಾ ಯುಕ್ತವಾಗಿ ಹೇಳಬಹುದು ವಿಶಾಲವ್ಯಾಪ್ತ ಭಯವನ್ನು ಬುನಾದಿಯಾಗುಳ್ಳ ಯಾವ ಸಿದ್ಧಿಯಾದರೂ ಅಪೇಕ್ಷಣೀಯವೇ ಅಲ್ಲ, ಮತ್ತು 'ಶಿಸ್ತಿ'ಯು ಸರಕಾರದ ಜೋರಾವರಿ ಯಂತ್ರದ ಆದಾರದ ಮೇಲಿದೆ, ಮತ್ತು ಅದರ ಜೊತೆಯಿಲ್ಲದೆ ಅದು ಬದುಕಿರಲಾರದು, ಪೌರ ಪ್ರಭುತ್ವಕ್ಕಿಂತ ಹೆಚ್ಚಾಗಿ ಅದು ಸೈನಿಕ ಭೋಗ್ಯಾಧಿಕಾರದಂತಿದೆ ಕಲ್ಹಣ ಕವಿಯ ನಾವಿರ ವರ್ಷಗಳ ಹಿಂದಿನ 'ರಾಜತರಂಗಿಣಿ' ಎಂಬ ಕಾಶ್ಮೀರಿ ಐತಿಹಾಸಿಕ ಮಹಾಕಾವ್ಯದಲ್ಲಿ, ನ್ಯಾಯ ಮತ್ತು ಶಿಸ್ತಿಗಳ ಅರ್ಥದಲ್ಲಿ ಪುನಃ ಪುನಃ ಉಪಯೋಗಿಸಲ್ಪಟ್ಟ ವಾಕ್ಯಾಂಗವನ್ನು ಓದಿದ್ದೇನೆ ರಾಜನ ಮತ್ತು ಸರಕಾರದ ಕರ್ತವ್ಯವೆಂದರೆ, ಧರ್ಮ ಮತ್ತು ಅಭಯಗಳನ್ನು ಕಾಪಾಡುವುದು ನ್ಯಾಯವು ಕೇವಲ ನ್ಯಾಯಕ್ಕಿಂತ ಒಂದು ವಿಧದಲ್ಲಿ ಹೆಚ್ಚಾಗಿತ್ತು ಶಿಸ್ತಿಯೆಂದರೆ ಪ್ರಜೆಗಳ ನಿರ್ಭೀತಿ ಭಯಗ್ರಸ್ತರಾದ ಪ್ರಜೆಗಳ ಮೇಲೆ 'ಶಿಸ್ತಿ'ಯನ್ನು ಬಲಾತ್ಕಾರದಿಂದ ಹೊರಿಸುವುದಕ್ಕಿಂತ ನಿರ್ಭೀತಿಯನ್ನು ಉಪದೇಶ ಮಾಡುವ ಭಾವನೆಯು ಎಷ್ಟು ಹೆಚ್ಚಾಗಿ ಅಪೇಕ್ಷಣೀಯವಾದುದು!

ಕಲ್ಕತ್ತೆಯಲ್ಲಿ ನಾವು ಮೂರೂವರೆ ದಿನಗಳಿದ್ದೆವು ಮತ್ತು ಈ ಅವಧಿಯಲ್ಲಿ ನಾನು ಮೂರು ಸಾರ್ವಜನಿಕ ಸಭೆಗಳಲ್ಲಿ ಭಾಷಣ ಮಾಡಿದೆ ಹಿಂದಿನಂತೆಯೇ ನಾನು ಕಲ್ಕತ್ತೆಯಲ್ಲಿ ಭಯೋತ್ಪಾದಕ ಕ್ರಿಯೆಗಳಿಗೆ ವಿರುದ್ಧವಾಗಿ ವಾದಿಸಿ ಖಂಡಿಸಿದೆ, ಬಳಿಕ ಬಂಗಾಳದಲ್ಲಿ ಸರಕಾರವು ಕೈಗೊಂಡಿದ್ದ ಕಾರ್ಯ ರೀತಿನೀತಿಗಳನ್ನು ಕುರಿತು ಪ್ರಸ್ತಾಪಿಸಿದೆ ಆ ಪ್ರಾಂತದಲ್ಲಿ ನಡೆದ ಪ್ರಸಕ್ತಿಗಳನ್ನು ಕುರಿತ ವಿಷಯ ವರದಿಗಳಿಂದ ಬಹಳ ಕದಲಿದವನಾಗಿದ್ದುದರಿಂದ ನಾನು ತುಂಬೆದೆಯಾರ ಮಾತನಾಡಿದೆ ಇಡೀ ಪ್ರಜಾ ಕೋಟಿಗಳನ್ನು ಕುರಿತ ವಿವೇಚನರಹಿತ ನಿಗ್ರಹದಿಂದ ಮಾನವ ಗೌರವದ ಮೇಲೆ ನಡೆದ ಅತ್ಯಾಚಾರವೇ ನನ್ನನ್ನು ಬಹಳವಾಗಿ ನೋಯಿಸಿತು ಈ ಮಾನವ ಸಮಸ್ಯೆಯ ಮುಂದೆ ರಾಜಕೀಯ ಸಮಸ್ಯೆಯು, ಅದು ಅವಸರದ್ದಾಗಿದ್ದರೂ ದ್ವಿತೀಯ ಸ್ಥಾನವನ್ನು ಪಡೆಯಿತು ಈ ನನ್ನ ಮೂರು ಭಾಷಣಗಳು ಮುಂದಿನ ನನ್ನ ವಿಚಾರಣೆಯಲ್ಲಿ ಮೂರು ಅಂಶಗಳಾಗಿ ಭಾವಿಸಲ್ಪಡುವಂತಾದುವು ಮತ್ತು ನನ್ನ ಇಂದಿನ ಶಿಕ್ಷಾವಧಿಗೆ ಅವೇ ಕಾರಣ

ಕಲ್ಕತ್ತೆಯಿಂದ ನಾವು ಕವಿ ರವೀಂದ್ರನಾಥ ಠಾಕೂರರನ್ನು ಸಂದರ್ಶಿಸಲು ಶಾಂತಿನಿಕೇತನಕ್ಕೆ ಹೋದೆವು ಅವರನ್ನು ಸಂದರ್ಶಿಸುವುದು ಸದಾ ಆನಂದಕರ

ವಾಗಿತ್ತು, ಮತ್ತು ಅಷ್ಟು ಹತ್ತಿರಕ್ಕೆ ಬಂದು ಅವರನ್ನು ನೋಡುವ ಅವಕಾಶವನ್ನು ತ್ಯಜಿಸಲು ನಾವು ಇಷ್ಟಪಡಲಿಲ್ಲ ಹಿಂದೆ ಎರಡು ಬಾರಿ ನಾನು ಶಾಂತಿನಿಕೇತನಕ್ಕೆ ಹೋಗಿದ್ದೆ ಕಮಲಳಿಗೆ ಅದೇ ಪ್ರಥಮ ಸಂದರ್ಶನ ನಾವು ನಮ್ಮ ಮಗಳನ್ನು ಅಲ್ಲಿಗೆ ಕಳುಹಿಸಬೇಕೆಂದು ಆಲೋಚಿಸುತ್ತಿದ್ದುದರಿಂದ ಆಕೆಯು ಆ ಸ್ಥಳವನ್ನು ನೋಡಬೇಕೆಂದೇ ಬಂದಿದ್ದಳು ಸ್ವಲ್ಪ ಕಾಲದಲ್ಲಿಯೇ ಇಂದಿರಳು ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ಕುಳಿತುಕೊಳ್ಳಲಿದ್ದಳು ಮತ್ತು ಅವಳ ಮುಂದಿನ ವಿದ್ಯಾಭ್ಯಾಸದ ಸಮಸ್ಯೆಯು ನಮ್ಮನ್ನು ಕಾಡುತ್ತಿತ್ತು. ಅವಳು ಶುದ್ಧ ಅಧಿಕಾರಿಕ ಅಥವಾ ಅರ್ಧ ಅಧಿಕಾರಿಕ ವಿಶ್ವ ವಿದ್ಯಾನಿಲಯಗಳನ್ನು ಪ್ರವೇಶಿಸುವುದಕ್ಕೆ ನಾನು ಸಂಪೂರ್ಣವಾಗಿ ವಿರುದ್ಧವಾಗಿದ್ದೆ, ಏಕೆಂದರೆ ನಾನವನ್ನು ದ್ವೇಷಿಸುತ್ತಿದ್ದೆ ಅವುಗಳನ್ನು ಬಳಸಿಕೊಂಡಿರುವ ಇಡೀ ಆವರಣವು ಅಧಿಕಾರಯುತವಾದುದು, ಕುಗ್ಗಿಸುವಂಥದು ಮತ್ತು ಪ್ರಭುಶಕ್ತಿಪೂರ್ಣವಾದದು. ಹಿಂದೆ ಅವು ನಿಸ್ಸಂದೇಹವಾಗಿಯೂ ಉತ್ತಮ ಸ್ತ್ರೀಪುರುಷರನ್ನು ತಯಾರಿಸಿವೆ, ಮುಂದೆಯೂ ಹಾಗೆ ಮಾಡುವುವು ಆದರೆ ತಾರುಣ್ಯದ ನವುರಾದ ಉಪಜ್ಞೆಗಳನ್ನು ಅದುಮಿ ಸಾಯಿಸುವುವೆಂಬ ಆಪಾದನೆಯಿಂದ ವಿಶ್ವವಿದ್ಯಾನಿಲಯಗಳನ್ನು ಈ ಕೆಲವು ಹೊರತುಗಳು ಕಾಪಾಡಲಾರವು ಶಾಂತಿನಿಕೇತನವು ಈ ಮೃತ ಹಸ್ತದಿಂದ ಮುಕ್ತಿ ಯನ್ನು ತೋರಿತು, ಆದುದರಿಂದ, ಅದು ಇತರ ವಿಶ್ವವಿದ್ಯಾನಿಲಯಗಳಷ್ಟು ಆಧುನಿಕ ವಾಗಿಯೂ ಉತ್ತಮೋಪಪತ್ತಿಯಿಂದ ಕೂಡಿಯೂ ಇಲ್ಲದಿದ್ದರೂ ಅಲ್ಲಿಗೇ ಕಳುಹಿಸ ಬೇಕೆಂದು ನಿರ್ಧರಿಸಿದೆವು.

ಹಿಂತಿರುವಾಗ ದಾರಿಯಲ್ಲಿ ನಾವು ಭೂಕಂಪ ಸಹಾಯ ಸಮಸ್ಯೆಯನ್ನು ಕುರಿತು ರಾಜೇಂದ್ರ ಬಾಬುರವರೊಡನೆ ಚರ್ಚಿಸಲು ಪಾಟ್ನದಲ್ಲಿ ತಂಗಿದೆವು ಅವರು ಆಗತಾನೆ ಸೆರೆಮನೆಯಿಂದ ಬಿಡುಗಡೆ ಮಾಡಲ್ಪಟ್ಟಿದ್ದರು ಮತ್ತು ಅನಿವಾರ್ಯವಾಗಿ, ಖಾಸಗಿ ಸಹಾಯ ಕಾರ್ಯದಲ್ಲಿ ಮುಂದಾಳುತನವನ್ನು ವಹಿಸಿಕೊಂಡಿದ್ದರು ನಮ್ಮ ಆಗಮ ನವು ಅನಿರೀಕ್ಷಿತವಾಗಿತ್ತು, ಏಕೆಂದರೆ ನಮ್ಮ ತಂತಿಗಳಾವುವೂ ತಲುಪಿರಲಿಲ್ಲ ನಾವು ಇಳಿದುಕೊಳ್ಳಬೇಕೆಂದಿದ್ದ ಕಮಲಳ ಸೋದರನ ಮನೆಯು—ಎರಡಂತಸ್ತುಗಳ ದೊಡ್ಡ ಇಟ್ಟಿಗೆ ಕಟ್ಟಡವು ಮುರಿದು ಬಿದ್ದಿತ್ತು ಆದುದರಿಂದ, ಅನೇಕರಂತೆ ನಾವೂ ಬಯ ಲಲ್ಲಿ ತಂಗಿದೆವು

ಮಾರನೆಯ ದಿನ ನಾವು ಮುಜಫರ್ ಪುರಕ್ಕೆ ಭೇಟಿಯಿತ್ತೆವು ಭೂಕಂಪಾ ನಂತರ ಸರಿಯಾಗಿ ಏಳು ದಿನಗಳಾಗಿದ್ದುವು ಕೆಲವು ಪ್ರಮುಖ ಬೀದಿಗಳಲ್ಲಿನದನ್ನು ಹೊರತು ಹಾಳುಮಣ್ಣಿನ್ನೆತ್ತಲು ಅದುವರೆಗೂ ಯಾವ ಪ್ರಯತ್ನವೂ ನಡೆದಿರಲಿಲ್ಲ. ಆ ಬೀದಿಗಳನ್ನು ಶುದ್ಧ ಮಾಡುತ್ತಿದ್ದ ಹಾಗೆಲ್ಲ ಹೆಣಗಳು ಕಾಣಿಸಿಕೊಳ್ಳುತ್ತಿದ್ದುವು ಅವುಗಳಲ್ಲಿ ಕೆಲವು, ಬೀಳುವ ಗೋಡೆಯನ್ನೋ ಇಲ್ಲವೇ ಮೇಲ್ಛಾವಣಿಯನ್ನೋ ತಪ್ಪಿಸಿ ಕೊಳ್ಳಲು ಪ್ರಯತ್ನಿಸುತ್ತಿದ್ದುವೋ ಎಂಬಂತೆ ವಿಚಿತ್ರ ಭಾವಭಂಗಿಗಳನ್ನು ಪ್ರದರ್ಶಿಸು

ತ್ತಿದ್ದುವು ಹಾಳುಬೀಡು ಮಹಾ ಘೋರ ದೃಶ್ಯವಾಗಿತ್ತು ಅಳಿದುಳಿದವರು ಧೃತಿನಾಶಕ ಅನುಭವಗಳಿಂದ ಸಂಪೂರ್ಣವಾಗಿ ಉಡುಗಿ ಭಯ ಭ್ರಾಂತರಾದರು.

ಅಲಹಾಬಾದಿಗೆ ಹಿಂತಿರುಗಿದ ಮೇಲೆ, ನಿಧಿ ಮತ್ತು ಸರಕುಗಳ ಸಂಗ್ರಹಗಳು ಕೂಡಲೇ ಸಂಘಟಿಸಲ್ಪಟ್ಟುವು, ಮತ್ತು ನಾವೆಲ್ಲರೂ, ಕಾಂಗ್ರೆಸ್ಸಿನವರಾಗಲಿ ಇಲ್ಲವೇ ಕಾಂಗ್ರೆಸ್ಸೇತರರಾಗಲಿ ಇದನ್ನು ಶ್ರದ್ಧೆಯಿಂದ ಕೈಗೊಂಡೆವು ಭೂಕಂಪದ ಕಾರಣ ದಿಂದ ಸ್ವಾತಂತ್ರ್ಯ ದಿನಾಚರಣೆಯು ನಿಲ್ಲಿಸಲ್ಪಡಬೇಕೆಂದು ನಮ್ಮ ಸಹೋದ್ಯೋಗಿ ಗಳಲ್ಲಿ ಕೆಲವರು ಅಭಿಪ್ರಾಯಪಟ್ಟರು ಆದರೆ ಭೂಕಂಪವೊಂದು ನಮ್ಮ ಕಾರ್ಯಕ್ರಮಕ್ಕೆ ಏಕೆ ಅಡ್ಡವಾಗಬೇಕೆಂದು ಇತರ ಸಹೋದ್ಯೋಗಿಗಳೂ ನಾನೂ ತಿಳಿಯದಾದೆವು. ಆದುದರಿಂದ ಜನವರಿ ೨೬ರಲ್ಲಿ ಅಲಹಾಬಾದ್ ಜಿಲ್ಲೆಯ ಹಳ್ಳಿಗಳಲ್ಲಿ ಅನೇಕ ಸಭೆ ಗಳೂ ನಗರದಲ್ಲೊಂದು ಸಭೆಯೂ ನಡೆದು ನಾವು ನಿರೀಕ್ಷಿಸಿದ್ದುದಕ್ಕಿಂತ ಹೆಚ್ಚಾದ ವಿಜಯವನ್ನು ಪಡೆದೆವು ಅನೇಕರು ಪೋಲೀಸ್ ಪ್ರತಿಬಂಧಕವನ್ನೂ ದಸ್ತಗಿರಿ ಗಳನ್ನೂ ನಿರೀಕ್ಷಿಸಿದರು, ಮತ್ತು ಅಪ್ರಮುಖ ಪ್ರಮಾಣದಲ್ಲಿ ಕೊಂಚ ಪ್ರತಿಬಂಧಕ ವೇನೋ ಇತ್ತು, ಆದರೆ ನಮಗೆ ಮಹದಾಶ್ಚರ್ಯವಾಗುವಂತೆ ಸಭಾನಂತರ ನಾವು ಉಳಿದುಕೊಂಡೆವು ನಮ್ಮ ಕೆಲವು ಹಳ್ಳಿಗಳಲ್ಲಿಯೂ ಇತರ ಕೆಲವು ಪಟ್ಟಣಗಳ ಲ್ಲಿಯೂ ದಸ್ತಗಿರಿಗಳು ನಡೆದುವು.

ಬಿಹಾರಿನಿಂದ ಹಿಂತಿರುಗಿದ ಕೂಡಲೇ ನಾನು ಭೂಕಂಪವನ್ನು ಕುರಿತು ಒಂದು ಹೇಳಿಕೆಯನ್ನು ಕೊಟ್ಟು ನಿಧಿಗಾಗಿ ಬಿನ್ನವಿಸಿಕೊಂಡೆ ಈ ಹೇಳಿಕೆಯಲ್ಲಿ ನಾನು, ಭೂಕಂಪಾನಂತರ ಮೊದಲ ಕೆಲವು ದಿನಗಳಲ್ಲಿ ಬಿಹಾರ್ ಸರಕಾರವು ತೋರಿದ ಜಡತೆ ಯನ್ನು ಟೀಕಿಸಿದೆ ಭೂಕಂಪಿತ ಕ್ಷೇತ್ರಗಳಲ್ಲಿನ ಅಧಿಕಾರಿಗಳನ್ನು ಟೀಕಿಸುವುದು ನನ್ನ ಉದ್ದೇಶವಾಗಿರಲಿಲ್ಲ ಏಕೆಂದರೆ, ಅತ್ಯಂತ ಧೃತಿವಂತರನ್ನೂ ಉಡುಗಿಸಿಬಿಡು ತ್ತಿದ್ದ ಬಹಳ ಕಷ್ಟತರವಾದ ಸನ್ನಿವೇಶದದಲ್ಲವರು ಕೆಲಸ ಮಾಡಬೇಕಾಗಿತ್ತು, ಮತ್ತು ನನ್ನ ಕೆಲವು ಮಾತುಗಳು ಈ ವ್ಯಾಖ್ಯಾನಕ್ಕೆ ಎಡೆಗೊಡಬಲ್ಲವಾಗಿದ್ದುದರಿಂದ ನಾನು ವಿಷಾದಿಸಿದೆ. ಆದರೆ ಬಿಹಾರ್ ಸರಕಾರದ ಮುಖ್ಯ ರಾಣ್ಯವು ಮೊದಲಿನಲ್ಲಿ, ಅದರಲ್ಲಿಯೂ ವಿಶೇಷವಾಗಿ ಯಾವುದರಿಂದ ಪ್ರಾಣಗಳನ್ನು ಕಾಪಾಡಬಹುದಾಗಿತ್ತೋ ಆ ಭೂರಾಶಿಯ ತೆಗೆತದ ಕೆಲಸದಲ್ಲಿ ಮಹಾ ದಕ್ಷತೆಯನ್ನು ತೋರಿಸಲಿಲ್ಲವೆಂಬ ಕಟು ಭಾವನೆಯು ನನ್ನಲ್ಲಿ ಎದ್ದಿತ್ತು ಮಾಂಘೀರ್ ನಗರದಲ್ಲಿಯೇ ಸಾವಿರಾರು ಮಂದಿ ಸತ್ತು ಹೋದರು. ಕೆಲವು ಮೈಲಿಗಳ ದೂರದಲ್ಲಿ ಜಮಾಲ್‌ಪುರವಿದ್ದಿತು ಅಲ್ಲಿ ಸಾವಿರಾರು ಮಂದಿ ರೈಲ್ವೆ ಕೆಲಸಗಾರರು ವಾಸಿಸುತ್ತಿದ್ದರು ಅಪಕಂಟಕವು ಸಂಭವಿಸಿದ ಕೆಲವು ಗಂಟೆಗಳಲ್ಲಿಯೇ ಅವರನ್ನೆಲ್ಲ ಸಹಾಯಕ್ಕಾಗಿ ಕರೆತರಬಹುದಾಗಿತ್ತು. ಆದರೂ ನಾನು ಮೂರು ವಾರಗಳಾದ ಮೇಲೆ ಯಾರೂ ಮುಟ್ಟದೆ ಅಲ್ಲಿ ಇನ್ನೂ ಬಿದ್ದಿದ್ದ ಭೀಮಾಕಾರದ ಭಗ್ನಾವಶೇಷಗಳ ರಾಶಿಯನ್ನು ಕಂಡೆ. ಬದುಕಿದ್ದ ಜನರನ್ನು ಹನ್ನೆರಡು ದಿನಗಳಾದ

ಮೇಲೆ ಸಹ ಅಗೆದು ತೆಗೆದರು ಆಸ್ತಿಪಾಸ್ತಿಗಳ ರಕ್ಷಣೆಗಾಗಿ ಸರಕಾರದವರು ಕೂಡಲೆ ಏರ್ಪಾಡುಗಳನ್ನು ಮಾಡಿದ್ದರು. ಆದರೆ ಹುಗಿದು ಹೋಗಿದ್ದ ಜನರನ್ನು ಮೇಲಕ್ಕೆ ತೆಗೆದು ಬದುಕಿಸುವ ಪ್ರಯತ್ನದಲ್ಲಿ ಅವರು ಅಷ್ಟೊಂದು ಚಟುವಟಿಕೆಯನ್ನು ವಹಿಸಿರ ಲಿಲ್ಲ ಈ ಪ್ರದೇಶಗಳ ಪೌರಸಭೆಗಳೂ ಕೆಲಸಮಾಡುತ್ತಿರಲಿಲ್ಲ

ನನ್ನ ವಿಮರ್ಶೆಯು ಸಮರ್ಥನೀಯವಾಗಿತ್ತೆಂದು ತೋರುತ್ತದೆ, ಭೂಕಂಪಕ್ಕೀ ಡಾದ ಪ್ರದೇಶಗಳಲ್ಲಿನ ಬಹುಮಂದಿ ನನ್ನಂತೆಯೇ ಅಭಿಪ್ರಾಯಪಟ್ಟರೆಂಬ ವಿಷಯ ವನ್ನು ನಾನು ಆಮೇಲೆ ತಿಳಿದೆ ಹೇಗಾದರೂ, ಅದು ಸಮರ್ಥನೀಯವಾದುದಾಗಿ ರಲಿ ಇಲ್ಲದಿರಲಿ, ಅದು ಪ್ರಾಮಾಣಿಕತೆಯಿಂದ ಮಾಡಲ್ಪಟ್ಟಿತ್ತು, ಸರಕಾರವನ್ನು ದೂಷಿಸಬೇಕೆಂದಲ್ಲ, ಚಟುವಟಿಕೆಯ ಕಾರ್ಯವನ್ನು ಕೈಗೊಳ್ಳುವಂತೆ ಮಾಡುವುದಕ್ಕೆ ಅವರು ಬುದ್ಧಿಪೂರ್ವಕವಾಗಿಯೇ ಹೀಗೆ ಮಾಡಿದರು, ಹೀಗೆ ಮಾಡಲಿಲ್ಲ ಎಂಬ ಪಾಪ ವನ್ನು ಅವರ ತಲೆಯ ಮೇಲೆ ಯಾರೂ ಹೊರಿಸಲಿಲ್ಲ ಅದೊಂದು ಅತಿ ನೂತನ ವಾದ ಕವಿದು ಕುಗ್ಗಿಸುವ ಸನ್ನಿವೇಶ, ತಪ್ಪುಗಳನ್ನು ಕ್ಷಮಿಸಲೇಬೇಕು ಬಿಹಾರಿನ ಸರಕಾರವು, ನನಗೆ ತಿಳಿದಮಟ್ಟಿಗೆ (ಏಕೆಂದರೆ ನಾನು ಸೆರೆಮನೆಯಲ್ಲಿದ್ದೇನೆ) ಭೂಕಂಪದ ಹಾವಳಿಯನ್ನು ಸರಿಪಡಿಸುವುದಕ್ಕೋಸ್ಕರ ಆಮೇಲೆ ಚೈತನ್ಯಯುಕ್ತ ಚಟುವಟಿಕೆ ಯಿಂದಲೂ ದಕ್ಷತೆಯಿಂದಲೂ ಕೆಲಸಮಾಡಿತು

ಆದರೆ ನನ್ನ ವಿಮರ್ಶೆಯು ಸಿಡಿಮಿಡಿಗುಟ್ಟಿಸಿತು ಕೆಲವೇ ದಿನಗಳಾದ ಮೇಲೆ, ಬಿಹಾರಿನ ಜನರು ಒಂದು ವಿಧವಾದ ಪ್ರತಿಸ್ಫೋಟನ ರೂಪದಲ್ಲಿ, ಸರಕಾರದ ಪರವಾದ ಸಾಮಾನ್ಯ ಸಾಕ್ಷ್ಯದೊಡನೆ ಹೊರಬಂದರು ಭೂಕಂಪವೂ ಅದರ ಅಗ ತ್ಯದ ಬೇಡಿಕಗಳೂ ಬಹಳ ಮಟ್ಟಿಗೆ ಅಪ್ರಧಾನವಿಷಯವಾಗಿಬಿಟ್ಟವು ಸರಕಾರವು ಟೀಕಿಸಲ್ಪಟ್ಟಿತ್ತೆಂಬುದೂ ಅದು ಅದರ ಭಕ್ತಿಯುತ ಪ್ರಜೆಗಳಿಂದ ರಕ್ಷಿತವಾಗ ಬೇಕೆಂಬುದೂ ಹೆಚ್ಚು ಮುಖ್ಯವಾಗಿಬಿಟ್ಟಿತ್ತು ಇದು ಭಾರತದಲ್ಲಿನ ವಿಶಾಲ ವ್ಯಾಪ್ತ ಅದ್ಭುತವೊಂದರ ಸ್ವಾರಸ್ಯಕರ ನಿದರ್ಶನವೊಂದಾಗಿತ್ತು– ಪಾಶ್ಚಾತ್ಯ ದೇಶಗಳಲ್ಲಿ ಸರ್ವಸಾಮಾನ್ಯ ವಿಷಯವಾದ, ಸರಕಾರವನ್ನು ಕುರಿತ ವಿಮರ್ಶೆಯ ವಿಷಯದಲ್ಲಿ ಅಸಿಷ್ಟು ವಿಮರ್ಶೆಯನ್ನು ಸಹಿಸಲಾರದ ಸೈನಿಕ ಮನೋವೃತ್ತಿಯದು ರಾಜನಂತೆ ಬ್ರಿಟಿಷ್ ಸರಕಾರವೂ ಅದರ ಸಕಲ ಶ್ರೇಷ್ಠ ಅಧಿಕಾರಿಗಳೂ ತಪ್ಪೇ ಮಾಡಲಾರರು ಅಂಥ ಯಾವುದಾದರೊಂದು ವಿಷಯವನ್ನು ಕುರಿತು ಸೂಚಿಸುವುದೂ ರಾಜದ್ರೋಹ

ನಿರ್ದಯಾತ್ಮಕ ಸರಕಾರವನ್ನು ಅಥವಾ ಅಪರಾಜತ್ವವನ್ನು ಕುರಿತ ಆಕ್ಷೇಪಣೆ ಗಿಂತ ಬಹಳ ಹೆಚ್ಚಾಗಿ ಅದಕ್ಷತೆ ಮತ್ತು ಅಯೋಗ್ಯತೆಗಳ ದೋಷಾರೋಪಣೆಯಿಂದ ಸಿಡಿಮಿಡಿಗುಟ್ಟುವುದು ಅದರ ವಿಚಿತ್ರವಾದ ಅಂಶ ಮೊದಲನೆಯ ಆಕ್ಷೇಪಣೆಯು ಅದನ್ನು ಮಾಡುವ ವ್ಯಕ್ತಿಯನ್ನು ಸೆರೆಮನೆಗೆ ಹಾಕಬಹುದು ಆದರೆ ಸರಕಾರವು

ಅದಕ್ಕೆ ಒಗ್ಗಿಕೊಂಡಿದೆ ಮತ್ತು ಅದನ್ನು ನಿಜವಾಗಿಯೂ ಲೆಕ್ಕಿಸುವುದೇ ಇಲ್ಲ ಕಡೆಗೆ, ಒಂದು ರೀತಿಯಲ್ಲಿ, ಅದು ಸಾಮ್ರಾಜಿಕ ಜನಾಂಗಕ್ಕರ್ಪಿಸಿದ ಉಪಚಾರೋಕ್ತಿಯೆಂದು ಭಾವಿಸಲ್ಪಡಬಹುದು ಆದರೆ ಅದಕ್ಷರೆಂದೂ ನರವಿಲ್ಲದವರೆಂದೂ ಕರೆದರೆ ನೋವುಂಟಾಗುವುದು ಏಕೆಂದರೆ ಇದು ಅವರ ಆತ್ಮ ಪ್ರಶಂಸೆಯ ಬೇರಿಗೆ ಪೆಟ್ಟುಡುವುದು, ಅದು ಭಾರತದಲ್ಲಿನ ಆಂಗ್ಲ ಅಧಿಕಾರಿಗಳ ಪಟ್ಟಾಭಿಷಿಕ್ತ ಭ್ರಾಂತಿಗಳಲ್ಲಿ ವಿಕ್ಷೋಭೆಯನ್ನೆಬ್ಬಿಸುವುದು ತನ್ನ ಮೇಲಿನ ನಾ-ಕ್ರೈಸ್ತ ನಡವಳಿಕೆಯೆಂಬ ದೋಷಾರೋಪಣೆಯನ್ನು ಸೌಮ್ಯತೆಯಿಂದ ಸಹಿಸುವ ಆದರೆ ಯಾರೋ ಒಬ್ಬನು ತನ್ನನ್ನು ಎಬಡನೆಂದೂ ಅಯೋಗ್ಯನೆಂದೂ ಕರೆದಾಗ ಸಿಡಿಮಿಡಿಗುಟ್ಟಿ ಮುಯ್ಯಿಮಾತಾಡುವ ಅಂಗ್ಲಿಕನ್ ಬಿಷಪ್‌ರಂತೆ ಅವರಿದ್ದಾರೆ

ಬ್ರಿಟಿಷ್ ಪ್ರಭಾವದ ಹೊರವಡಣೆ ಅಥವಾ ಕಡಿಮೆ ಮಾಳ್ಕೆಯನ್ನೊಳಗೊಳ್ಳುವ, ಭಾರತದಲ್ಲಿನ ಸರಕಾರದ ವ್ಯತ್ಯಾಸದಿಂದ ಇನ್ನೂ ಹೆಚ್ಚು ಕೆಟ್ಟದಾದ ಮತ್ತು ಅದಕ್ಷವಾದ ಸರಕಾರವು ಫಲಿತವಾಗುವುದು, ಎಂಬ ಸಾಮಾನ್ಯ ನಂಬಿಕೆಯು ಆಂಗ್ಲೇಯರಲ್ಲಿದ್ದು, ಅದು ನಿರ್ವಿವಾದ ಸೂತ್ರವೋ ಏನೋ ಎಂಬಂತೆ ಪದೇ ಪದೇ ಒತ್ತಿ ಹೇಳಲಾಗಿದ ಈ ನಂಬಿಕೆಯನ್ನಿಟ್ಟುಕೊಂಡು, ಆದರೆ ತಮ್ಮ ಉತ್ಸಾಹದಲ್ಲಿ ಉದಾರಿಗಳಾಗಿ, ತೀವ್ರವ್ಯತ್ಯಾಸವಾದಿಗಳೂ ಪ್ರಗತಿಪರ ಅಭಿಪ್ರಾಯಗಳನ್ನುಳ್ಳ ಆಂಗ್ಲೇಯರೂ, ಸ್ವತಂತ್ರ ಸರಕಾರಕ್ಕೆ ಉತ್ತಮ ಸರಕಾರವು ಎಂದೆಂದಿಗೂ ಪ್ರತಿಚ್ಛಂದವಲ್ಲವೆಂದೂ ಮತ್ತು ಭಾರತೀಯರು ಹಾಳಾಗಬಯಸಿದರೆ, ಹಾಗಾಗಲು ಅವರಿಗೆ ಅನುಮತಿ ಕೊಡಬೇಕೆಂದೂ ವಾದಿಸುವರು ಬ್ರಿಟಿಷ್ ಪ್ರಭಾವವು ಹೊರವಡಿಸಲ್ಪಟ್ಟಾಗ ಭಾರತಕ್ಕೆ ಏನಾಗುವುದೆಂಬುದನ್ನು ನಾನು ಹೇಳಲಾರೆ ಬ್ರಿಟಿಷರು ಹೇಗೆ ಮೈದೆಗೆಯುವರು ಮತ್ತು ಆಗ ಭಾರತವನ್ನು ಯಾರು ಅಂಕೆಯಲ್ಲಿಟ್ಟಿರುವರು ಮುಂತಾಗಿ ಇತರ ಅನೇಕಾನೇಕ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪರ್ಯಾಲೋಚನೆಗಳನ್ನು ಅದು ಹೆಚ್ಚಾಗಿ ಅವಲಂಬಿಸುವುದು ಹೆಚ್ಚು ಅದಕ್ಷವಾದ ಮತ್ತು ಸಾಮಾನ್ಯವಾಗಿ ಇಂದು ನಾವು ಹೊಂದಬಹುದಾದ ಅವಸ್ಥೆಗಿಂತ ಕೆಟ್ಟದಾದ, ಏಕೆಂದರೆ ಅದು ಇಂದಿನ ಪದ್ಧತಿಯ ಯಾವ ಗುಣಗಳನ್ನೂ ಹೊಂದಿರದೆ ಎಲ್ಲ ಅವಗುಣಗಳನ್ನೂ ಹೊಂದಿರುವುದು, ಮತ್ತು ಬ್ರಿಟಿಷರ ಸಹಾಯದಿಂದ ಸ್ಥಾಪಿಸಲ್ಪಡುವ ಪರಿಸ್ಥಿತಿಯೊಂದನ್ನು ನಾನು ಕಲ್ಪಿಸಿಕೊಳ್ಳಬಲ್ಲೆ ಭಾರತೀಯರ ದೃಷ್ಟಿಕೋನದಿಂದ, ಇಂದು ನಮಗಾವ ವ್ಯವಸ್ಥೆಯಿದೆಯೋ ಅದಕ್ಕಿಂತ ಹೆಚ್ಚು ದಕ್ಷವೂ ಹೆಚ್ಚು ಕಲ್ಯಾಣಕಾರಕವೂ ಆದ ಬೇರೊಂದು ಪರಿಸ್ಥಿತಿಯನ್ನು ನಾನು ಇನ್ನೂ ಬೇಗ ಕಲ್ಪಿಸಿಕೊಳ್ಳಬಲ್ಲೆ ಸರಕಾರದ ಜೋರಾವರಿಯಂತ್ರವು ಅಷ್ಟು ದಕ್ಷವಾಗಿರದೆ ಬರಬಹುದು, ಆಡಳಿತ ಯಂತ್ರವು ಅಷ್ಟು ಹೊಳೆಯದೆ ಇರಬಹುದು, ಆದರೆ ಉತ್ಪತ್ತಿ ಮತ್ತು ಉಪಭೋಗಗಳಲ್ಲಿಯೂ ಮತ್ತು ಜನಜಂಗುಳಿಯ ಭೌತ, ಆತ್ಮಿಕ ಮತ್ತು ಸಾಂಸ್ಕೃತಿಕ

ಪ್ರಮಾಣಗಳನ್ನು ಉನ್ನತಪಡಿಸುವ ಕಾರ್ಯಚಟುವಟಿಕೆಗಳಲ್ಲಿಯೂ ಮಹತ್ತರ ದಕ್ಷತೆ ಯಿರುವುದು. ಸ್ವತಂತ್ರ ಸರಕಾರವು ಯಾವ ನಾಡಿಗಾದರೂ ಲೇಸೆಂದು ನನ್ನ ನಂಬಿಕೆ ಆದರೆ ಸ್ವತಂತ್ರ ಸರಕಾರಕ್ಕಾಗಿ ನಿಜವಾದ ಒಳ್ಳೆಯ ಸರಕಾರವನ್ನು ಬಲಿಕೊಡಬೇಕಾಗಿ ಬಂದರೆ ಅದನ್ನು ಕೂಡ ಒಪ್ಪಲು ನಾನು ಸಿದ್ಧನಾಗಿಲ್ಲ ಸ್ವತಂತ್ರ ಸರಕಾರವು ತನ್ನ ಅಸ್ತಿತ್ವವನ್ನು ಸಮರ್ಥಿಸಿಕೊಳ್ಳಬೇಕಾದರೆ ಅದು ಮುಖ್ಯವಾಗಿ ಜನಜಂಗುಳಿಯ ಲೇಸಿಗಾಗಿಯೇ ಉಳಿಯಬೇಕು ಅದಕ್ಕಾಗಿಯೇ ನಾನು, ಭಾರತದಲ್ಲಿನ ಬ್ರಿಟಿಷ್ ಸರಕಾರವು, ಹಿಂದೆ ಅದರ ಹಕ್ಕುಗಳು ಏನಾದರೂ ಇದ್ದಿರಲಿ, ಇಂದು ಜನಜಂಗುಳಿಗೆ ಉತ್ತಮ ಸರಕಾರವನ್ನು ಒದಗಿಸುವುದರಲ್ಲಿಯೂ ಆ ಜಂಗುಳಿಯ ಪ್ರಮಾಣಗಳನ್ನು ಮೇಲೆತ್ತುವುದರಲ್ಲಿಯೂ ಅಸಮರ್ಥವಾಗಿದೆಯೆಂದು ನಂಬುವ ಕಾರಣದಿಂದ, ಅದು ಇದ್ದಂತೆ, ಭಾರತದಲ್ಲಿ ಅದರ ಪ್ರಯೋಜಕತೆಯನ್ನು ನೀಗಿಕೊಂಡು ಬಿಟ್ಟು ಬದುಕಬೇಕಾದ ಕಾಲಕ್ಕಿಂತ ಹೆಚ್ಚು ಬದುಕಿದೆ ಎಂದು ಭಾವಿಸುತ್ತೇನೆ ಜನಜಂಗುಳಿಗೆ ಉತ್ತಮ ಸರಕಾರ ಮತ್ತು ಮೇಲಂತಸ್ತಿನ ಬಾಳು, ಕೈಗಾರಿಕೆಯ ಮತ್ತು ಸಂಸ್ಕೃತಿಯ ಪ್ರಗತಿ, ಮತ್ತು ವಿದೇಶಿ ಸಾಮ್ರಾಜಿಕ ಪ್ರಭುತ್ವವು ಸದಾ ತನ್ನೊಂದಿಗೆ ತರುವ ಭಯ ಮತ್ತು ನಿಗ್ರಹದ ವಾತಾವರಣದ ನಿವಾರಣೆ, ಇವುಗಳ ವಾಗ್ದಾನವೇ ಭಾರತೀಯ ಸ್ವಾತಂತ್ರ್ಯಕ್ಕೆ ನಿಜವಾದ ಸಮರ್ಥನೆಯಾಗಿದೆ. ಬ್ರಿಟಿಷ್ ಸರಕಾರ ಮತ್ತು ಐ ಸಿ ಎಸ್ ಗಳು, ತಮ್ಮ ಚಿತ್ತವನ್ನು ಭಾರತದ ಮೇಲೆ ಬಲಾತ್ಕಾರವಾಗಿ ಒತ್ತುವಷ್ಟು ಪ್ರಬಲವಾಗಿರಬಹುದಾದರೂ, ಅವುಗಳ ಬುನಾದಿಗಳೂ ಊಹೆಗಳೂ ಸರ್ವಸ್ವವಾಗಿ ತಪ್ಪಾಗಿರುವುದರಿಂದ ಮತ್ತು ಅವು ನಿಜತ್ವದೊಂದಿನ ಸಂಪರ್ಕವನ್ನು ಕಳೆದುಕೊಂಡಿರುವುದರಿಂದ, ಇಂದಿನ ಭಾರತದ ಸಮಸ್ಯೆಗಳನ್ನು ಬಗೆಹರಿಸುವಷ್ಟು ದಕ್ಷವಾಗಿಲ್ಲ ಅಥವಾ ಅರ್ಹವಾಗಿಲ್ಲ ಭಾವಿ ಸಮಸ್ಯೆಗಳನ್ನು ಬಗೆಹರಿಸಲಂತೂ ಇನ್ನೂ ಹೆಚ್ಚು ಅಸಮರ್ಥವಾಗಿರುವುವು ಸಾಕಷ್ಟು ಅರ್ಹವಲ್ಲದ ಅಥವಾ ಅಳಿಯುತ್ತಿರುವ ವ್ಯವಸ್ಥೆಯನ್ನು ಪ್ರತಿನಿಧಿಸುವ ಸರಕಾರವೊಂದಾಗಲಿ ಇಲ್ಲವೇ ಪ್ರಭುತ್ವ ವರ್ಗವಾಗಲಿ ತನ್ನ ಚಿತ್ತವನ್ನು ಬಲಾತ್ಕಾರವಾಗಿ ಒತ್ತುತ್ತಲೇ ಹೋಗಲಾರದು

ನಾನು ಭೂಕಂಪದಿಂದ ಬಾಧಿತವಾದ ಕ್ಷೇತ್ರಗಳಿಗೆ ಹೋಗಿ ಅಲ್ಲಿ ಕೈಗೊಳ್ಳಲ್ಪಟ್ಟ ಸಹಾಯ ಕಾರ್ಯವಿಧಾನಗಳನ್ನು ಕುರಿತು ವರದಿ ಮಾಡಬೇಕೆಂದು ಅಲಹಾಬಾದ್ ಭೂಕಂಪ ಸಹಾಯ ಸಮಿತಿಯು ನನ್ನನ್ನು ನಿಯೋಜಿಸಿದರು ಕೂಡಲೇ ನಾನು ಒಬ್ಬನೇ ಹೋದೆ , ಹತ್ತು ದಿನಗಳವರೆಗೆ ನಾನು ಹರಿದು ಹಂಚಿಹೋದ ಹಾಳು ಬೀಡುಗಳಲ್ಲಿ ಅಲೆದಾಡಿದೆ ಬಹಳ ಪ್ರಯಾಸವನ್ನು ಕೊಟ್ಟ ಪ್ರವಾಸವದು, ಮತ್ತು ಆ ದಿನಗಳಲ್ಲಿ ರಾತ್ರಿಯ ಹೊತ್ತು ನಾನು ಸ್ವಲ್ಪವೂ ನಿದ್ರೆಮಾಡಲಿಲ್ಲ ಬೆಳಗ್ಗೆ ೫ ಘಂಟೆಯಿಂದ ಮಧ್ಯ ರಾತ್ರಿಯವರೆಗೂ ನಾವು ಬಿರುಕುಬಿದ್ದು ನಿರಿಕೆಯಾಗಿದ್ದ ರಸ್ತೆಗಳ ಮೇಲೆ ಮೋಟಾರಿನಲ್ಲಿ ಪಯಣಮಾಡುತ್ತ, ಸೇತುವೆಗಳು ಕುಸಿದು ಬಿದ್ದ

ಮತ್ತು ನೆಲದ ಮಟ್ಟವು ಮಾರ್ಪಟ್ಟು ರಸ್ತೆಗಳು ನೀರಿನಲ್ಲಿ ಮುಳುಗಿದ್ದ ಸ್ಥಳಗಳಲ್ಲಿ ಸಣ್ಣ ದೋಣಿಗಳಲ್ಲಿ ಪಯಣ ಮಾಡುತ್ತ ಎಡೆಬಿಡದೆ ಅಲೆದಾಡಿದೆವು ವಿಶಾಲವಾದ ಹಾಳುಕೊಂಪೆಗಳಿಂದ ಕೂಡಿ, ಹರಿದುಹೋದ ಮತ್ತು ಕೆಲವು ವೇಳೆ ರಾಕ್ಷಸ ಹಸ್ತದಿಂದಲೋ ಎಂಬಂತೆ ತಿರುಮುರಿಗೆ ಹಾಕಲ್ಪಟ್ಟ ಅಥವಾ ಮನೆಗಳ ಇರ್ಕಡೆಗಳಲ್ಲಿಯೂ ಕಂಬದ ಪೀಠಕ್ಕಿಂತ ಬಹಳ ಎತ್ತರವಾಗಿ ಬಿಟ್ಟಿದ್ದ ರಸ್ತೆಗಳಿಂದ ಕೂಡಿ ನಗರಗಳು ಸಾಕಷ್ಟು ಹೃದಯಂಗಮವಾಗಿದ್ದುವು ಈ ರಸ್ತೆಗಳಲ್ಲಿನ ದೊಡ್ಡ ಬಿರುಕುಗಳಿಂದ ನೀರೂ ಮರಳೂ ಮೇಲಕ್ಕೆ ಹೊಮ್ಮಿ ಹರಿದು ಜನರನ್ನೂ ದನಕರುಗಳನ್ನೂ ಹೊಡೆದುಕೊಂಡುಹೋದವು ಈ ನಗರಗಳಿಗಿಂತ ಹೆಚ್ಚಾಗಿ, ಉತ್ತರ ಬಿಹಾರಿನ ಬಯಲುಗಳು—ಬಿಹಾರಿನ ಉಪವನವೆಂದು ಹೆಸರಾಗಿದ್ದುವು—ಹಾವಳಿಯ ಮತ್ತು ಅಳಿವಿನ ಮುದ್ರೆಯನ್ನು ಧರಿಸಿದ್ದುವು ಮೈಲಿ ಮೈಲಿಗಳ ಮರಳು, ವಿಸ್ತಾರವಾಗಿ ನಿಂತ ನೀರು, ದೊಡ್ಡ ಬಿರುಕುಗಳು ಮತ್ತು ನೀರೂ ಮರಳೂ ಬಂದಿದ್ದ ಅಸಂಖ್ಯಾತವಾದ ಸಣ್ಣ ಸಣ್ಣ ಬಟ್ಟಲು ಬಾಯಿಗಳು ಈ ಕ್ಷೇತ್ರದ ಮೇಲೆ ವಿಮಾನದಲ್ಲಿ ಹೋದ ಕೆಲವು ಬ್ರಿಟಿಷ್ ಅಧಿಕಾರಿಗಳು, ಅದು ಮಹಾ ಯುದ್ಧ ಕಾಲದಲ್ಲಿ ಮತ್ತು ಆಮೇಲೆ ಗೋಚರಿಸಿದ ಉತ್ತರ ಫ್ರಾನ್ಸಿನ ರಣ ಕ್ಷೇತ್ರಗಳಂತಿತ್ತು ಎಂದು ಹೇಳಿದರು

ಅದೊಂದು ಭಯಂಕರವಾದ ಅನುಭವವಾಗಿರಬೇಕು ಭೂಕಂಪವು ಪ್ರಬಲವಾದ ಪಕ್ಕಪಕ್ಕದ ಅಲುಗಾಟಗಳಿಂದ ಆರಂಭವಾಗಿ ನಿಂತಿದ್ದ ಪ್ರತಿಯೊಬ್ಬನನ್ನೂ ಕೆಳಕ್ಕುರುಳಿಸಿತು ಆಮೇಲೆ ಕೆಳಗಿಂದ ಮೇಲಿನ ಅಲುಗಾಟವು ಆರಂಭವಾಯಿತು ಫಿರಂಗಿಗಳ ಸುರಿಮಳೆಯ ಅಥವಾ ಆಕಾಶದಲ್ಲಿನ ನೂರು ವಿಮಾನಗಳ ಶಬ್ದ ಸದೃಶವಾದ ಅಪ್ರಾಕೃತ ಗುಡುಗಾಟವೂ ಘೋಷ ಪ್ರತಿಘೋಷವೂ ನಡೆಯಿತು ಲೆಕ್ಕವಿಲ್ಲದಷ್ಟು ಸ್ಥಳಗಳಲ್ಲಿ ಭೂಮಿಯು ಬಿಟ್ಟಿದ್ದ ಬಿರುಕುಗಳ ಮೂಲಕ ನೀರು ಹೊರನುಗ್ಗಿ ಹತ್ತು ಹನ್ನೆರಡು ಅಡಿಗಳ ಎತ್ತರದವರೆಗೆ ಚಿಮ್ಮಿತು ಪ್ರಾಯಃ ಇವೆಲ್ಲವೂ ಮೂರು ನಿಮಿಷಗಳಲ್ಲಿಯೋ, ಅದಕ್ಕಿಂತ ಸ್ವಲ್ಪ ಹೆಚ್ಚಾದ ಕಾಲದಷ್ಟರಲ್ಲಿಯೋ ನಡೆದುಹೋಯಿತು ಆಮೇಲೆ ಅದು ನಿಂತುಹೋಯಿತು ಆದರೂ ಆ ಮೂರು ನಿಮಿಷಗಳು ಸಾಕಷ್ಟು ಭಯಂಕರವಾಗಿದ್ದುವು ಇದನ್ನು ನೋಡಿದ ಅನೇಕರು ಇದನ್ನೇ ಪ್ರಳಯವೆಂದುಕೊಂಡುದು ಆಶ್ಚರ್ಯವಲ್ಲ ಪಟ್ಟಣಗಳಲ್ಲಿ ಬೀಳುತ್ತಿರುವ ಮನೆಗಳ ಶಬ್ದ, ನುಗ್ಗುತ್ತಿರುವ ನೀರುಗಳು, ಮತ್ತು ಕೆಲವು ಗಜಗಳ ದೂರ ಸಹ ನೋಡಲು ಅಸಾಧ್ಯವಾಗಿಸಿದ್ದ ಧೂಳೀಪೂರ್ಣ ವಾತಾವರಣ ಗ್ರಾಮಾಂತರಗಳಲ್ಲಿ ಹೆಚ್ಚು ಧೂಳು ತುಂಬಿಕೊಂಡಿರದೆ ಇನ್ನು ಸ್ವಲ್ಪ ದೂರ ಮುಂದೆ ನೋಡಬಹುದಾಗಿತ್ತು ಆದರೆ ಪ್ರಶಾಂತ ನೇತ್ರಯುಕ್ತವಾದ ಯಾವ ನೋಟಗಾರರೂ ಇರಲಿಲ್ಲ ಉಳಿದುಕೊಂಡವರು ಚಪ್ಪಟೆಯಾಗಿ ನೆಲದ ಮೇಲೆ ಮಲಗಿದರು, ಇಲ್ಲವೇ ಭಯದ ನೋವಿನಲ್ಲಿ ಉರುಳಾಡಿದರು

ಭೂಕಂಪವಾದ ಹತ್ತು ದಿನಗಳಾದ ಮೇಲೆ (ಮುಜಫರ್‌ಪುರದಲ್ಲಿ ಎಂದು ತೋರುತ್ತದೆ) ಹನ್ನೆರಡು ವರ್ಷಗಳ ಪುಟ್ಟ ಹುಡುಗನೊಬ್ಬನು ಜೀವಂತನಾಗಿ ಹೊರ ತೆಗೆಯಲ್ಪಟ್ಟನು. ಅವನಿಗೆ ಮಹದಾಶ್ಚರ್ಯವಾಗಿಬಿಟ್ಟಿತ್ತು. ಬೀಳುವ ಸರಕುಗಳಿಂದ ಕೆಳಕ್ಕುರುಳಿಸಲ್ಪಟ್ಟು ಸೆರೆ ಸಿಕ್ಕಿದಾಗಿನಿಂದ ಪ್ರಳಯವಾಗಿಬಿಟ್ಟಿತ್ತೆಂದೂ ತಾನೊಬ್ಬನು ಮಾತ್ರ ಉಳಿದುಕೊಂಡನೆಂದೂ ಅವನು ಭಾವಿಸಿಕೊಂಡಿದ್ದನು.

ಮುಜಫರ್‌ಪುರದಲ್ಲಿಯೂ ಸಹ ಭೂಕಂಪವಾಗುತ್ತಿದ್ದಾಗ ಸುತ್ತುಮುತ್ತಲೂ ಮನೆಗಳು ಕುಸಿದು ಬೀಳುತ್ತಿದ್ದು ನೂರಾರು ಮಂದಿ ಸಾಯುತ್ತಿದ್ದಾಗ ಒಂದು ಹೆಣ್ಣು ಮಗುವು ಹುಟ್ಟಿತು. ಅನನುಭವಿಗಳಾದ ಯುವ ಮಾತಾಪಿತೃಗಳು ಏನುಮಾಡಬೇಕೆಂದು ತಿಳಿಯದೆ ಸಂಕಟದಿಂದ ಹುಚ್ಚುಹಿಡಿದಂತಾಗಿದ್ದರು. ಅಂತು ಹೇಗೋ ತಾಯಿಯೂ ಮಗುವೂ ಉಳಿದುಕೊಂಡು ಚೆನ್ನಾಗಿದ್ದರೆಂದು ನನಗೆ ಆಮೇಲೆ ತಿಳಿಯಿತು. ಭೂಕಂಪದ ಗೌರವಾರ್ಥವಾಗಿ ಮಗುವಿಗೆ 'ಕಂಪ ದೇವಿ' ಎಂದು ಹೆಸರಿಡಲಾಯಿತು.

ಮಾಂಘಿರ್ ನಗರವು ನಮ್ಮ ಪ್ರವಾಸದ ಕೊನೆಯದಾಗಿತ್ತು. ನಾವು ಬೇಕಾದಷ್ಟು ಕಡೆಗಳಲ್ಲಿ ಅಲೆದು ಇನ್ನೇನು ನೇಪಾಳದ ಗಡಿಯ ಬಳಿಗೂ ಸಹ ಹೋಗಿದ್ದೆವು. ಎದೆಯಲ್ಲಿ ಬಹಳವಾಗಿ ನೋವನ್ನುಂಟುಮಾಡುವ ಅನೇಕ ದೃಶ್ಯಗಳನ್ನು ನೋಡಿದ್ದೆವು. ವಿಶಾಲಪರಿಮಾಣದ ಭಗ್ನ ಪ್ರದೇಶಗಳೂ ವಿನಾಶವೂ ನಮಗೆ ಅಭ್ಯಾಸವಾಗಿಬಿಟ್ಟಿತ್ತು. ಆದರೂ ನಾವು ಮಾಂಘಿರನ್ನೂ ಆ ಸಂಪದ್ಯುಕ್ತ ನಗರದ ಸಮಗ್ರ ವಿನಾಶವನ್ನೂ ಕಂಡಾಗ ಆ ದೃಶ್ಯದ ಭಯಾನಕದಿಂದ ಉಸಿರುಕಟ್ಟಿದವರಂತಾಗಿ ನಡುಗಿ ಹೋದೆವು. ಆ ಅತಿಭಯಂಕರ ದೃಶ್ಯವನ್ನು ನಾನು ಎಂದಿಗೂ ಮರೆಯುವಂತಿಲ್ಲ. ಇಡೀ ಕಂಪಿತ ಪ್ರದೇಶಗಳ ನಗರಗಳು ಮತ್ತು ಹಳ್ಳಿಗಳಲ್ಲಿನ ನಿವಾಸಿಗಳಲ್ಲಿ ಸ್ವಸಹಾಯದ ನೋಯಿಸುವಂತಹ ಇಲ್ಲದೆಯಿದ್ದಿತು. ನಗರಗಳಲ್ಲಿನ ಮಧ್ಯಮ ತರಗತಿಯವರು ಈ ದೃಷ್ಟಿಯಿಂದ ಅತ್ಯಂತ ತಪ್ಪಿತಸ್ಥರು. ಸರಕಾರದವರೋ ಇಲ್ಲವೇ ಖಾಸಗಿ ಸಹಾಯ ಸಂಘಗಳೋ ಕಾರ್ಯಾರಂಭಮಾಡಿ ಅವರಿಗೆ ಸಹಾಯ ಮಾಡಬೇಕೆಂದು ಕಾದುಕೊಂಡಿದ್ದರು. ಕೆಲಸಮಾಡುವುದಕ್ಕೆಂದು ಮುಂದೆ ಬಂದ ಇತರರು ಇತರರನ್ನು ಹಾಗೆ ಮಾಡು, ಹೀಗೆ ಮಾಡು ಎಂದು ಹೇಳುವುದೇ ಕೆಲಸವೆಂದುಕೊಂಡರು. ಭೂಕಂಪದ ಭಯಾನಕವು ಕೊಂಡುಬಂದ ಧೃತಿನಾಶವು ಈ ನಿಸ್ಸಹಾಯತೆಯ ಭಾವನೆಗೆ ಅಂಶತಃ ನಿಸ್ಸಂದೇಹವಾಗಿಯೂ ಕಾರಣ. ಅದು ಬರಬರುತ್ತ ಕಡಿಮೆಯಾಗಿರಬೇಕು.

ಬಿಹಾರಿನಿಂದ ಮತ್ತು ಇತರ ಪ್ರಾಂತಗಳಿಂದ ನುಗ್ಗಿ ಬಂದ ಅನೇಕ ಮಂದಿ ಸಹಾಯಕರ ಚೈತನ್ಯ ಮತ್ತು ಸಾಮರ್ಥ್ಯಗಳಿಗೂ ಈ ಭಾವನೆಗೂ ಅಜಗಜಾಂತರವಿತ್ತು.

ಈ ತರುಣತರುಣಿಯರ ದಕ್ಷ ಸಹಾಯದ ಉತ್ಸಾಹವನ್ನು ನೋಡುವುದು ಒಂದು ಅದ್ಭುತವಾಗಿತ್ತು. ಅಲ್ಲದೆ ಅನೇಕಾನೇಕ ಬೇರೆಬೇರೆ ಸಹಾಯಕ ಸಂಸ್ಥೆಗಳು ಕೆಲಸಮಾಡುತ್ತಿದ್ದರೂ ಅವವುಗಳಲ್ಲಿಯೇ ಬೇಕಾದಷ್ಟು ಪರಸ್ಪರ ಸಹಕಾರವಿತ್ತು

ಅಗೆಯಲು ಮತ್ತು ಹಾಳು ಬಿದ್ದುದನ್ನು ತೆಗೆದುಹಾಕಲು ಬೇಕಾಗಿದ್ದ ಸ್ವಸಹಾಯ ಚಳವಳಿಗೆ ಒಂದು ಉತ್ತೇಜನವನ್ನು ಕೊಡಲು ಮಾಂಘೀರ್‌ನಲ್ಲಿ ನಾನೊಂದು ನಾಟಕೀಯ ಭಂಗಿಯನ್ನು ಬೀರಿದೆ ಸ್ವಲ್ಪ ಹಿಂದುಮುಂದು ನೋಡಿಯೇ ಹಾಗೆ ಮಾಡಿದೆ. ಆದರೆ ಅದು ವಿಜಯಿಯಾಯಿತು. ಸಹಾಯಕ ಸಂಸ್ಥೆಗಳ ಎಲ್ಲ ಮುಂದಾಳುಗಳೂ ಗುದ್ದಲಿಗಳನ್ನೂ ಮಂಕರಿಗಳನ್ನೂ ತೆಗೆದುಕೊಂಡು ಹೋಗಿ ದಿನವೆಲ್ಲ ಚೆನ್ನಾಗಿ ಅಗೆದು ಹಾಕಿದರು. ಒಂದು ಸಣ್ಣ ಹೆಣ್ಣು ಮಗುವಿನ ಹೆಣವನ್ನು ಹೊರಕ್ಕೆ ತೆಗೆದೆವು. ನಾನು ಆ ದಿನವೇ ಮಾಂಘೀರನ್ನು ಬಿಟ್ಟೆ ಆದರೆ ಅಗೆತವು ನಡೆಯುತ್ತಲೇ ಹೋಗಿ ಅನೇಕ ಸ್ಥಳೀಯರೂ ಆ ಕೆಲಸವನ್ನು ಕೈಗೊಂಡರು ಇದರಿಂದ ಬಹಳಮಟ್ಟಿಗೆ ಪ್ರಯೋಜನವಾಯಿತು

ಖಾಸಗಿ ಸಹಾಯ ಸಂಸ್ಥೆಗಳಲ್ಲೆಲ್ಲ ರಾಜೇಂದ್ರ ಪ್ರಸಾದರು ಮುಂದಾಳುಗಳಾಗಿದ್ದ ಕೇಂದ್ರ ಸಹಾಯ ಸಮಿತಿಯೇ ಅತ್ಯಂತ ಮುಖ್ಯವಾಗಿತ್ತು ಇದು ಶುದ್ಧ ಕಾಂಗ್ರೆಸ್ ಸಂಘಟಣೆಯೇ ಅಲ್ಲ, ಮತ್ತು ಅನೇಕ ಗೋಷ್ಠಿಗಳನ್ನೂ ದಾನಿಗಳನ್ನೂ ಪ್ರತಿನಿಧಿಸುತ್ತ ಅದು ಅಖಿಲ ಭಾರತ ಸಂಸ್ಥೆಯಾಗಿ ಬೆಳೆಯಿತು ಆದರೂ ಕಾಂಗ್ರೆಸ್ ಸಂಸ್ಥೆಯನ್ನು ಗ್ರಾಮಾಂತರಗಳಲ್ಲಿ ತನ್ನ ನೆರಕ್ಕಾಗಿ ಹೊಂದಿದ್ದುದರ ಮಹಾನುಕೂಲ್ಯವನ್ನದು ಹೊಂದಿತ್ತು ಗುಜರಾತ್ ಮತ್ತು ಸಂಯುಕ್ತ ಪ್ರಾಂತಗಳ ಕೆಲವು ಜಿಲ್ಲೆಗಳ ಹೊರತು ಭಾರತದಲ್ಲಿ ಮತ್ತಾವ ಪ್ರಾಂತದಲ್ಲೂ ಕಾಂಗ್ರೆಸ್ ಕಾರ್ಯಕರ್ತರು ಬೇಸಾಯಗಾರರೊಂದಿಗೆ ಇದಕ್ಕಿಂತ ಹೆಚ್ಚು ಸಂಪರ್ಕವನ್ನಿಟ್ಟುಕೊಂಡಿರಲಿಲ್ಲ ವಾಸ್ತವವಾಗಿಯೂ ಕೆಲಸಗಾರರು ಬಹುತರವಾಗಿ ಬೇಸಾಯಗಾರಜಂಗುಳಿಯಿಂದಲೇ ಬಂದರು, ಬಿಹಾರು ಭಾರತದ ಪ್ರಮುಖ ಬೇಸಾಯಗಾರ ಪ್ರಾಂತವಾಗಿದೆ ಮತ್ತು ಅದರ ಮಧ್ಯಮ ತರಗತಿಗಳು ಕೂಡ ಬೇಸಾಯಗಾರಜಂಗುಳಿಯೊಂದಿಗೆ ನಿಕಟ ಬಾಂಧವ್ಯವನ್ನಿಟ್ಟುಕೊಂಡಿದ್ದಾರೆ ನಾನು ಕಾಂಗ್ರೆಸ್ ಕಾರ್ಯದರ್ಶಿಯಾಗಿದ್ದಾಗ, ಕೆಲವು ವೇಳೆ ಬಿಹಾರ್ ಪ್ರಾಂತೀಯ ಕಾಂಗ್ರೆಸ್ ಸಮಿತಿಯ ಕಛೇರಿಯನ್ನು ಮೇಲ್ವಿಚಾರಣೆ ಮಾಡಲು ಹೋಗಿ, ನಾನು ಪರಿಗಣಿಸಿದಂತೆ. ಕಛೇರಿಯನ್ನು ನಡೆಸಿಕೊಂಡು ಹೋಗುವ ಅವರ ಅದಕ್ಷತೆ ಮತ್ತು ಸಾಮಾನ್ಯ ಜಾಡ್ಯವನ್ನು ಕಟುಭಾಷೆಯಲ್ಲಿ ಟೀಕೆಮಾಡುತ್ತಿದ್ದೆ ನಿಂತುಕೊಳ್ಳುವುದಕ್ಕಿಂತ ಕುಳಿತುಕೊಳ್ಳುವ, ಕುಳಿತುಕೊಳ್ಳುವುದಕ್ಕಿಂತ ಮಲಗಿಕೊಳ್ಳುವ ಮನಃಪ್ರವೃತ್ತಿಯಿತ್ತು. ನಾನು ನೋಡಿದ್ದ ಕಛೇರಿಗಳಲ್ಲೆಲ್ಲ ಅದು ಬಹಳ ಬಡವಾಗಿತ್ತು, ಏಕೆಂದರೆ ಸಾಮಾನ್ಯವಾದ ಅನೇಕ ಕಛೇರಿ ಸಲಕರಣೆಗಳಿಲ್ಲದೆಯೇ ಅವರು ಕೆಲಸವನ್ನು ನಡೆಸಿಕೊಂಡು ಹೋಗುತ್ತಿದ್ದರು.

ಇಷ್ಟಾದರೂ, ಕಛೇರಿಯನ್ನು ಕುರಿತ ನನ್ನ ಟೀಕೆಯಿದ್ದರೂ, ಆ ಪ್ರಾಂತವು ಕಾಂಗ್ರೆಸ್ಸಿನ ದೃಷ್ಟಿಕೋನದಿಂದ ನಾಡಿನ ಅತ್ಯಂತ ಶ್ರದ್ಧಾಳು ಮತ್ತು ಭಕ್ತಿಯುತವಾದವುಗಳಲ್ಲೊಂದೆಂದು ನಾನು ಚೆನ್ನಾಗಿ ಅರಿತಿದ್ದೆ ಅಲ್ಲಿ ಕಾಂಗ್ರೆಸ್ಸು ಯಾವ ಆಡಂಬರವನ್ನೂ ಮೆರೆಯಲಿಲ್ಲ, ಆದರೆ ಬೇಸಾಯಗಾರಜಂಗುಳಿಯ ಗಟ್ಟಿಯಾದ ಬೆಂಬಲವನ್ನು ಹೊಂದಿತ್ತು ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನಗಳಲ್ಲಿ ಸಹ ಬಿಹಾರಿನ ಸದಸ್ಯರು ಯಾವ ವಿಷಯವನ್ನು ಕುರಿತಾದರೂ ಮೇಲ್ಬೀಳುವ ಮನೋಭಾವವನ್ನು ಅತಿ ವಿರಳವಾಗಿ ಮೆರೆಯುತ್ತಿದ್ದರು ತಾವು ಅಲ್ಲಿರುವುದನ್ನು ಕಂಡುಕೊಂಡು ಸ್ವಲ್ಪ ಆಶ್ಚರ್ಯಗೊಂಡಂತೆ ಸಹ ತೋರುತ್ತಿದ್ದರು ಆದರೆ ಎರಡು ಶಾಸನ ಭಂಗ ಚಳವಳಿಗಳಲ್ಲಿಯೂ ಬಿಹಾರು ಅತ್ಯುತ್ಕೃಷ್ಟವಾದ ಚರಿತೆಯನ್ನು ಮೆರೆಯಿತು ಆಮೇಲೆ ನಡೆದ ವೈಯಕ್ತಿಕ ಶಾಸನ ಭಂಗ ಚಳವಳಿಯನ್ನು ಸಹ ಅದು ಚೆನ್ನಾಗಿಯೇ ನಡೆಸಿತು

ಬೇಸಾಯಗಾರಜಂಗುಳಿಯನ್ನು ಮುಟ್ಟುವುದಕ್ಕೆ ಕೇಂದ್ರ ಸಹಾಯ ಸಮಿತಿಯು ಈ ಉತ್ತಮ ಸಂಘಟನೆಯನ್ನು ಉಪಯೋಗಿಸಿಕೊಂಡಿತು ಗ್ರಾಮಾಂತರಗಳಲ್ಲಿ ಬೇರೆ ಯಾವ ಸಂಘವಾದರೂ ಸರಕಾರವು ಕೂಡ ಇಷ್ಟು ಸಹಾಯಕವಾಗಿರಲು ಸಾಧ್ಯವಿರಲಿಲ್ಲ ನಿಸ್ಸಂದೇಹವಾಗಿಯೂ ಬಿಹಾರಿನ ಪ್ರಮುಖ ನಾಯಕರಾದ ರಾಜೇಂದ್ರ ಬಾಬುಗಳು ಕೇಂದ್ರ ಸಹಾಯ ಸಮಿತಿಯ ಮತ್ತು ಬಿಹಾರ್ ಕಾಂಗ್ರೆಸ್ ಸಂಸ್ಥೆಯ ಸೂತ್ರಗಳನ್ನು ಹಿಡಿದಿದ್ದರು ಬೇಸಾಯಗಾರನಂತೆ ತೋರ್ಕೆಗೊಡುತ್ತ, ಬಿಹಾರಿನ ಮಾದರಿಯ ನಾಡುಮಗನಾಗಿದ್ದು, ಅವರ ಚತುರುಕಾದ ನಿಸ್ಪೃಹವಾದ ಕಣ್ಣುಗಳನ್ನೂ ಶ್ರದ್ಧಾಯುಕ್ತ ದೃಷ್ಟಿಯನ್ನೂ ಕಂಡುಕೊಳ್ಳುವವರೆಗೆ ಮೊದಲ ನೋಟಕರ ಮೇಲೆ ಅವರು ಪ್ರಭಾವಮುದ್ರೆಯನ್ನೊತ್ತುವಂತಹವರಲ್ಲ ಆ ಕಣ್ಣುಗಳನ್ನಾಗಲಿ, ಆ ನೋಟವನ್ನಾಗಲಿ ಮರೆಯುವಂತಿಲ್ಲ ಏಕೆಂದರೆ ಅವುಗಳ ಮೂಲಕ ಸತ್ಯವು ಹೊರನೋಡುತ್ತದೆ ಮತ್ತು ಅವುಗಳನ್ನು ನಂಬದಿರಲು ಸಾಧ್ಯವಿಲ್ಲ. ಪ್ರಾಯಃ ಅವರ ದೃಷ್ಟಿಕ್ಷೇಪವು ಸ್ವಲ್ಪ ಮಿತವಾಗಿದ್ದು, ಬೇಸಾಯಗಾರಸದೃಶರಾಗಿದ್ದ ಅವರು ಆಧುನಿಕ ಪ್ರಪಂಚ ದೃಷ್ಟಿಕೋನದಿಂದ ಸ್ವಲ್ಪಮಟ್ಟಿಗೆ ಸರಳಮನಸ್ಕರೂ ನೈಜ ಸ್ವಭಾವದವರೂ ಆಗಿರಬಹುದು ಆದರೆ ಅವರ ಪ್ರಮುಖ ದಕ್ಷತೆ, ಅವರ ಪರಿಪೂರ್ಣ ಸಚೂಟತನ, ಅವರ ಚೈತನ್ಯ ಮತ್ತು ಭಾರತೀಯ ಸ್ವಾತಂತ್ರ್ಯ ಧ್ಯೇಯಕ್ಕೆ ಅವರಲ್ಲಿರುವ ಅಚಲ ಶ್ರದ್ಧೆ, ಇವುಗಳಿಂದ ಅವರು ತಮ್ಮ ಪ್ರಾಂತದಲ್ಲಿ ಮಾತ್ರವಲ್ಲದೆ ಇಡೀ ಭಾರತದಲ್ಲೆಲ್ಲ ಜನತೆಯ ಪ್ರೇಮಕ್ಕೆ ಪಾತ್ರರಾಗಿದ್ದಾರೆ. ಬಿಹಾರಿನಲ್ಲಿ ರಾಜೇಂದ್ರ ಬಾಬುಗಳು ಪಡೆದಿರುವ ಆ ಸರ್ವತ್ರವಾಗಿ ಅಂಗೀಕೃತವಾಗಿರುವ ನಾಯಕತ್ವದ ಪ್ರತಿಷ್ಠೆಯನ್ನು ಬೇರೆ ಯಾವನೊಬ್ಬನೂ ಭಾರತದ ಯಾವ ಪ್ರಾಂತದಲ್ಲಿಯೂ ಅಂತೆಯೇ ಪಡೆದಿಲ್ಲ ಗಾಂಧಿಜಿಯವರ

ನಿಜವಾದ ಸಂದೇಶವನ್ನು ಬೇರೆ ಯಾರಾದರೂ, ಒಂದು ವೇಳೆ ಅಂಥವರಿದ್ದರೆ, ಇವರಿಗಿಂತ ಹೆಚ್ಚು ಆಮೂಲಾಗ್ರವಾಗಿ ಆಸ್ವಾದಿಸಿದ್ದಾರೆಂದು ಹೇಳುವುದು ಕಷ್ಟ

ಬಿಹಾರಿನಲ್ಲಿ ಸಹಾಯ ಕಾರ್ಯದ ಮುಂದಾಳುತನಕ್ಕೆ ಈ ತೆರನಾದ ವ್ಯಕ್ತಿಯೊಬ್ಬರು ದೊರೆತುದು ಅದೃಷ್ಟವೇ ಇಡೀ ಭಾರತದ ಎಲ್ಲ ಕಡೆಗಳಿಂದಲೂ ಬೇಕಾದಷ್ಟು ಹಣವನ್ನು ಸೆಳೆದುದು ಅವರಲ್ಲಿ ಜನತೆಗಿದ್ದ ವಿಶ್ವಾಸವೇ ಅನಾರೋಗ್ಯದಿಂದಿದ್ದರೂ ಅವರು ಸಹಾಯ ಕಾರ್ಯದಲ್ಲಿ ಮಗ್ನರಾದರು ತಮ್ಮ ಶಕ್ತಿಗೆ ಅತಿಯಾಗಿ ಮಿತಿಮೀರಿ ಕೆಲಸ ಮಾಡಿದರು ಸಕಂದರೆ ಅವರು ಎಲ್ಲ ವಿಧವಾದ ಕಾರ್ಯಕಲಾಪಗಳ ಕೇಂದ್ರವಾದರು, ಎಲ್ಲರೂ ಸಲಹೆಗಾಗಿ ಅವರ ಕಡೆಗೆ ತಿರುಗಿದ್ದರು

ನಾನು ಭೂಕಂಪಿತ ಪ್ರದೇಶಗಳಲ್ಲಿ ಪ್ರವಾಸ ಮಾಡುತ್ತಿದ್ದಾಗಲೋ ಅಥವಾ ಅದಕ್ಕಿಂತ ಸ್ವಲ್ಪವೇ ಮುಂಚೆಯೋ ಅಸ್ಪೃಶ್ಯತೆಯ ಪಾಪಕ್ಕಾಗಿ ಭೂಕಂಪವು ಒಂದು ಶಿಕ್ಷೆಯಾಗಿತ್ತೆಂದು ಹೊರಬಿದ್ದ ಗಾಂಧಿಜಿಯವರ ಹೇಳಿಕೆಯನ್ನು ಓದಿದಾಗ ನನಗೆ ದೊಡ್ಡದೊಂದು ಧಕ್ಕೆ ಬಡಿಯಿತು ಇದು ಚಿತ್ತ ಭ್ರಮಣವನ್ನುಂಟು ಮಾಡುವ ವ್ಯಾಖ್ಯಾನವಾಗಿತ್ತು, ಮತ್ತು ಅದಕ್ಕೆ ರವೀಂದ್ರನಾಥ ಠಾಕೂರರು ಕೊಟ್ಟ ಉತ್ತರವನ್ನು ನಾನು ಸ್ವಾಗತಿಸಿ ಸಂಪೂರ್ಣವಾಗಿ ಅಂಗೀಕರಿಸಿದೆ ವೈಜ್ಞಾನಿಕ ದೃಷ್ಟಿಕ್ಷೇಪಕ್ಕೆ ಇದಕ್ಕಿಂತ ವಿರೋಧವಾದುದು ಬೇರೆ ಯಾವುದಾದರೂ ಇದೆಯೋ ಎಂದು ಯೋಚಿಸುವುದು ಕಷ್ಟವಾಗಿದೆ ರಾಗೋದ್ರಿಕ್ತ ಪರಿಸ್ಥಿತಿಗಳು ಮತ್ತು ಆತ್ಮಿಕ ಪ್ರಸಕ್ತಿಗಳು ಭೌತಿಕ ಸಾಮಗ್ರಿಯ ಮೇಲೆ ಉಂಟುಮಾಡುವ ಪರಿಣಾಮದ ವಿಚಾರವನ್ನು ಕುರಿತು ವ್ಯಾಪ ಇಂದು ವಿಜ್ಞಾನವೂ ಸಹ ಸಂಪೂರ್ಣವಾಗಿ ಅಸಾಧ್ಯವೆಂದು ಹರಸಿದ್ಧಾಂತವನ್ನು ಮಾಡಲಾರದ ಮಾನಸಿಕ ಧಕ್ಕೆಯೊಂದರ ಪರಿಣಾಮವಾಗಿ ವ್ಯಕ್ತಿಯೊಬ್ಬನಿಗೆ ಅಜೀರ್ಣವೋ ಅಥವಾ ಅದಕಿಂತ ಕೆಟ್ಟದಾವುದಾದರೊಂದು ವ್ಯಾಧಿಯೋ ಉಂಟಾಗಬಹುದು ಆದರೆ ಒಂದು ಮಾನವ ಸಂಪ್ರದಾಯ ಅಥವಾ ದೌರ್ಬಲ್ಯವು ಭೂಮಿಯ ಹೊರಮೈಯ ಓಡಾಟದಲ್ಲಿ ತನ್ನ ಪ್ರತಿಕ್ರಿಯೆಗಳನ್ನು ಪ್ರೇರಿಸುತ್ತದೆ, ಎಂದು ಸೂಚಿಸುವುದು ದಿಗ್ಭ್ರಮೆ ಹಿಡಿಸುವ ವಿಷಯ ಪಾಪ, ದೈವದ ರೋಷ ಮತ್ತು ವಿಶ್ವಪ್ರಸಕ್ತಿಗಳಲ್ಲಿ ಮಾನವನಿಗಿರುವ ಸಾಪೇಕ್ಷಕ ಪ್ರಾಮುಖ್ಯತೆ–ಈ ಕಲ್ಪನೆಗಳು ಯೂರೋಪಿನಲ್ಲಿ 'ಇನ್‌ಕ್ವಿಸಿಷನ್ನು' ಏಳಿಗೆಯಲ್ಲಿದ್ದು ಗಿಯೋರ್ಡಾನೋ ಬ್ರೂನೋನನ್ನು ಆತನ ವೈಜ್ಞಾನಿಕ ಅಮಾರ್ಗಕ್ಕಾಗಿ ಸುಟ್ಟು ಅನೇಕ ಯಕ್ಷಿಣಿಯರನ್ನು ಯೂಪಕ್ಕೆ ಕಟ್ಟಿದ ಕೆಲವು ಶತಮಾನಗಳ ಹಿಂದಣ ಕಾಲಕ್ಕೆ ಕರೆದೊಯ್ಯುತ್ತವೆ! ಹದಿನೆಂಟನೆಯ ಶತಮಾನದಲ್ಲಿಯೂ ಕೂಡ ಅಮೆರಿಕದಲ್ಲಿ ಬಾಸ್ಟನ್ನಿನ ಪ್ರಮುಖ ಪಾದ್ರಿಗಳು ಮಸ್ಸಾಚುಸೆಟ್ಸ್‌ನಲ್ಲಿ ನಡೆದ ಭೂಕಂಪಗಳಿಗೆ, ಸಿಡಿಲು ಕಂಬಿಗಳನ್ನು ಮನೆಗಳಿಗೆ ಹಾಕಿದುದರಿಂದುಂಟಾದ ಧರ್ಮಲೋಪವೇ ಕಾರಣವೆಂದು ಹೇಳಿದರು.

ಈ ಭೂಕಂಪವು ಪಾಪಕ್ಕಾಗಿ ತಕ್ಕ ದೈವಿಕ ಶಾಸ್ತಿಯಾದರೆ ನಮ್ಮ ಯಾವ ಪಾಪಕ್ಕಾಗಿ ನಾವು ಶಿಕ್ಷಿತರಾಗುತ್ತಿರುವುವೆಂಬುದನ್ನು ಹೇಗೆ ಕಂಡುಹಿಡಿಯಬೇಕು ?-ಏಕೆಂದರೆ, ಅಕಟಾ ! ನಾವು ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕಾದ ಅನೇಕ ಪಾಪಗಳಿವೆ ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಅತಿ ಇಷ್ಟವಾದ ವ್ಯಾಖ್ಯಾನವನ್ನು ಮಂಡಿಸ ಬಹುದು ಪರಕೀಯ ಅಧಿಕರಣಕ್ಕೆ ನಾವು ಸಗ್ಗಿದ್ದುದಕ್ಕಾಗಿಯೋ ಅಥವಾ ಅನ್ಯಾಯ ವಾದ ಸಾಮಾಜಿಕ ವ್ಯವಸ್ಥೆಯೊಂದನ್ನು ನಿರ್ವಹಿಸದೆ ಸ್ವೀಕರಿಸಿಕೊಂಡು ಇದ್ದುಬಿಟ್ಟು ದಕ್ಕಾಗಿಯೋ ನಾವು ಶಿಕ್ಷಿತರಾಗಿರಬಹುದು ಅತಿವಿಶಾಲವಾದ ಜಹಗೀರಿಗಳ ಮಾಲಿಕ ರಾದ ದರ್ಭಾಂಗ ಮಹಾರಾಜರು, ಭೂಕಂಪದಿಂದ ಭಾಂಡಾರಿಕವಾಗಿ ನರಳಿದವರಲ್ಲಿ ಅತಿಮುಖ್ಯರೊಬ್ಬರು ಆದುದರಿಂದ ಭೂಕಂಪವು ಜಮೀನ್ದಾರಿ ಪ್ರಪನ್ನೆಯನ್ನು ಕುರಿತ ನ್ಯಾಯನಿರ್ಧಾರವೆಂದಂದೂ ಹೇಳಬಹುದು ದಕ್ಷಿಣಭಾರತದ ಜನತೆಯ ಆಸ್ಪೃಶ್ಯತಾ ಪಾಪಕ್ಕಾಗಿ ಹೆಚ್ಚು ಕಡಿಮೆ ಅಕಳಂಕರಾದ ಬಿಹಾರಿನ ಜನತೆಯನ್ನು ಪ್ರತ್ಯಾಮ್ನಾಯವಾಗಿ ನರಳುವಂತೆ ಮಾಡಿತೆಂದು ಹೇಳುವುದಕ್ಕಿಂತ ಇದು ಹೆಚ್ಚು ಸತ್ಯವೆಂದು ಕಾಣುವುದು ಅಸ್ಪೃಶ್ಯತಾ ಭೂಮಿಗೇ ಏಕ ಭೂಕಂಪವು ಭೇಟಿಕೊಡ ಲಿಲ್ಲ? ಅಥವಾ ಈ ವಿನಾಶವು ಶಾಸನ ಭಂಗಕ್ಕೆ ದೈವೀಕೃತವಾದ ಶಿಕ್ಷೆಯೆಂದು ಬ್ರಿಟಿಷ್ ಸರಕಾರವು ಅದನ್ನು ಕರೆಯಬಹುದು ಏಕೆಂದರೆ ಪ್ರಾಸ್ತವವಾಗಿ ಭೂಕಂಪದಿಂದ ಅತಿ ಯಾಗಿ ನರಳಿದ ಉತ್ತರ ಬಿಹಾರವು ಸ್ವಾತಂತ್ರ್ಯ ಚಳವಳಿಯಲ್ಲಿ ಪ್ರಮುಖಪಾತ್ರ ವನ್ನು ವಹಿಸಿತ್ತು

ಎಲ್ಲೆಕೊಲ್ಲಿಗಳಿಲ್ಲವೆ ಈ ವಿಧದಲ್ಲಿ ನಾವು ಗುಣಿಸುತ್ತಲೇ ಹೋಗುವೆವು ಆಮೇಲೆ ನ್ಯಾಯವಾಗಿಯೇ ಈ ಪ್ರಶ್ನೆಯು ಹುಟ್ಟುವುದು ವಿಧಿಯು ಕಾರಕಲಾಪ ಗಳಲ್ಲಿ ನಾವು ಏಕೆ ತಲೆಹಾಕಬೇಕು ಅಥವಾ ಅದರ ದೈವೀಶಾಸನಗಳ ಪರಿಣಾಮ ಗಳನ್ನು ನಮ್ಮ ಮಾನವೀಯ ಪ್ರಯತ್ನಗಳಿಂದ ಕಡಿಮೆಮಾಡಲು ಏಕೆ ಪ್ರಯತ್ನಿಸ ಬೇಕು ಹಾಗೆಯೇ ವಿಧಿಯು ಈ ಕ್ರೂರವಾದ ಅಣಕದಿಂದ ನಮ್ಮನ್ನು ಏಕ ಪೀಡಿಸುತ್ತಿದೆ ಎಂದು ನಾವು ಆಶ್ಚರ್ಯಪಡಲು ಆರಂಭಿಸುತ್ತೇವೆ ನಮ್ಮ ತುಂಬ ಅರಕೆಗಳನ್ನು ತುಂಬಿ ನಮ್ಮನ್ನು ಹುಟ್ಟಿಸಿ, ನಮ್ಮ ಸುತ್ತಲೂ ಬಲೆಗಳನ್ನು ನೆಯ್ದು, ಹಳ್ಳಗಳನ್ನು ತೋಡಿ, ರೋಗಿತೆಯಿಂದ ಕೂಡಿದ ಕ್ರೂರವಾದ ಪ್ರಪಂಚವನ್ನು ಸೃಷ್ಟಿಸಿ, ಹುಲಿಯನ್ನೂ ಕುರಿಮರಿಯನ್ನೂ ಹುಟ್ಟಿಸಿ, ಆಮೇಲೆ ನಮ್ಮನ್ನು ಬಲಿ ಹಾಕುವುದು

" ಚುಕ್ಕಿಗಳು ತಮ್ಮಯಾ ಈಟಿಗಳ ಕಳಗೆಸೆದು
ಸಗ್ಗದಲಿ ತಮ್ಮಯಾ ಕಂಬನಿಯನೆರೆದಾಗ,
ತನ್ನ ಕೃತಿಯಂ ನೋಡಿ ನಗುವ ಕೆಚ್ಚೇನವಗೆ?
ನಿನ್ನ ಮಾಡುವ ಕೆಚ್ಚೆ ಕುರಿಮರಿಯಮಾಡಿದಗೆ ? "

ಪಾಟ್ಣದಲ್ಲಿ ನಾನು ಕಳೆದ ಕೊನೆಯ ರಾತ್ರಿ, ವಿವಿಧ ಪ್ರಾಂತಗಳಿಂದ ಸಹಾಯ ಕಾರ್ಯಕ್ಕಾಗಿ ತಮ್ಮ ಸೇವೆಯನ್ನು ಸಲ್ಲಿಸಲು ಮುಂದೆ ಬಂದು ಒಂದುಗೂಡಿದ್ದ ಅನೇಕ ಸ್ನೇಹಿತರೊಂದಿಗೂ ಸಂಗಡಿಗರೊಂದಿಗೂ ಬಹಳ ಹೊತ್ತಿನವರೆಗೂ ಎದ್ದು ಕುಳಿತಿದ್ದೆ. ಸ. ಪ್ರಾ ಚೆನ್ನಾಗಿ ಪ್ರತಿನಿಧಿತವಾಗಿದ್ದು ನಮ್ಮ ಆಯ್ದ ಕೆಲವು ಮಂದಿ ಅಲ್ಲಿದ್ದರು. ನಮ್ಮನ್ನು ಅಂಡಲೆಯುತ್ತಿದ್ದ ಸಮಸ್ಯೆಯೊಂದನ್ನು ನಾವು ಚರ್ಚಿಸಿದೆವು ಭೂಕಂಪ ಸಹಾಯ ಕಾರ್ಯದಲ್ಲಿ ನಾವು ಎಷ್ಟರಮಟ್ಟಿಗೆ ಮಗ್ನರಾಗಲು ಅವಕಾಶ ಕೊಡಬೇಕು? ಹಾಗೆಂದರೆ ಕನಿಷ್ಠಪಕ್ಷ ಅಷ್ಟರಮಟ್ಟಿಗಾದರೂ ರಾಜಕೀಯ ಕಾರ್ಯಕಲಾಪಗಳಿಂದ ವೈದೆಗೆದಂತೆ ಸಹಾಯ ಕಾರ್ಯವು ಬಹಳ ಕಠಿಣವಾಗಿತ್ತು, ಮತ್ತು ನಾವು ಅದನ್ನು ಆರಾಮವಾಗಿ ಕೈಗೊಳ್ಳಲು ಸಾಧ್ಯವಿರಲಿಲ್ಲ ಅದರಲ್ಲಿಯೇ ಮಗ್ನರಾಗುವುದೆಂದರೆ ಕಾರ್ಯಚಟುವಟಿಕೆಯಿಂದ ಕೂಡಿದ ರಾಜಕೀಯ ಪ್ರಪಂಚದಲ್ಲಿ ಒಂದು ದೀರ್ಘಾವಧಿಯ ಇಲ್ಲವೆ ಅದು ರಾಜಕೀಯವಾಗಿ ನಮ್ಮ ಪ್ರಾಂತದ ಮೇಲೆ ಕೆಟ್ಟ ಪರಿಣಾಮವನ್ನು ಖಂಡಿತವಾಗಿಯೂ ಉಂಟುಮಾಡುತ್ತಿತ್ತು ಕಾಂಗ್ರೆಸ್ಸಿನ ಹಟ್ಟಿಯಲ್ಲಿ ಬೇಕಾದಷ್ಟು ಮಂದಿಯಿದ್ದರೂ ವ್ಯತ್ಯಾಸವನ್ನುಂಟುಮಾಡಲು ಶಕ್ತರಾಗಿದ್ದ ಜನಗಳ ಸಂಖ್ಯೆಯು ಮಿತಿಯಾಗಿದ್ದು ಅವರನ್ನು ಇತರ ಕೆಲಸಗಳಿಗೆ ಕಳುಹಿಸುವುದು ಬಹು ಕಷ್ಟವಾಗಿತ್ತು ಆದರೂ ಭೂಕಂಪದ ಕರೆಯನ್ನು ಉಪೇಕ್ಷಿಸಲು ಸಾಧ್ಯವಿರಲಿಲ್ಲ ನಾನಾದರೋ ಸಂಪೂರ್ಣವಾಗಿ ಸಹಾಯ ಕಾರ್ಯದಲ್ಲಿ ಮಗ್ನನಾಗುವ ಯಾವ ಉದ್ದೇಶವನ್ನೂ ಇಟ್ಟು ಕೊಂಡಿರಲಿಲ್ಲ. ಅದಕ್ಕೆ ಜನಗಳ ವಾರಡಿ ಬರುವುದಿಲ್ಲವೆಂದು ಭಾವಿಸಿದೆ. ಇನ್ನೂ ಹೆಚ್ಚು ಅಪಾಯಕರವಾದ ಕಾರ್ಯಕಲಾಪಗಳಲ್ಲಿ ತೊಡಗಲು ಅತಿ ಸ್ವಲ್ಪವೇ ಜನರಿದ್ದರು

ಹೀಗೆ ನಾವು ರಾತ್ರಿ ಬಹಳ ಹೊತ್ತು ಮಾತನಾಡುತ್ತಿದ್ದೆವು ಕಳೆದ ಸ್ವಾತಂತ್ರ್ಯ ದಿನಾಚರಣೆಯನ್ನು ಕುರಿತು ಚರ್ಚಿಸುತ್ತ ಹೇಗೆ ನಮ್ಮ ಸಹೋದ್ಯೋಗಿಗಳು ಕೆಲವರು ದಸ್ತಗಿರಿ ಮಾಡಲ್ಪಟ್ಟಿದ್ದರೆಂದೂ ಹೇಗೆ ನಾವು ತಪ್ಪಿಸಿಕೊಂಡಿದ್ದೆವೆಂದೂ ಮಾತನಾಡಿಕೊಳ್ಳುತ್ತಿದ್ದೆವು ಸಂಪೂರ್ಣ ಸುರಕ್ಷಿತವಾಗಿ ಹೇಗೆ ಯುದ್ಧಾಸಕ್ತ ರಾಜಕಾರಣವನ್ನು ನಡೆಸಬಹುದೆಂಬ ಗುಟ್ಟನ್ನು ನಾನು ಕಂಡು ಹಿಡಿದಿದ್ದೆನೆಂದು ನಗುನಗುತ್ತ ಅವರಿಗೆ ಹೇಳಿದೆ

ಫೆಬ್ರವರಿ ೧೧ ನೆಯ ತಾರೀಖು ನಾನು ಅಲಹಾಬಾದಿಗೆ ಹಿಂತಿರುಗಿದೆ ಪ್ರವಾಸದ ಪರಿಣಾಮವಾಗಿ ನನಗೆ ಅತಿಯಾಗಿ ಆಯಾಸವಾಗಿತ್ತು ಹತ್ತು ದಿನಗಳವರೆಗೆ ವಿರಾಮವೇ ಇಲ್ಲದೆ ದುಡಿದುದರಿಂದ ಹೆಣದಂತಾಗಿದ್ದೆ ಮನೆಯವರು ನನ್ನ ಸ್ವರೂಪವನ್ನು ಕಂಡು ಬೆಚ್ಚಿಬಿದ್ದರು ಅಲಹಾಬಾದಿನ ಸಹಾಯ ಸಮಿತಿಗಾಗಿ ನನ್ನ ಪ್ರವಾಸದ ವರದಿಯನ್ನು ಬರೆಯಲಾರಂಭಿಸಲು ಪ್ರಯತ್ನಿಸಿದೆ ಆದರೆ ನಿದ್ದೆಯು ನನ್ನನ್ನು ಮುಳುಗಿಸಿ ಬಿಟ್ಟಿತು. ಮುಂದಿನ ಇಪ್ಪತ್ತನಾಲ್ಕು ಘಂಟೆಗಳಲ್ಲಿ ಕನಿಷ್ಠ ಪಕ್ಷ ಹನ್ನೆರಡು ಘಂಟೆಗಳನ್ನಾದರೂ ನಿದ್ರೆಯಲ್ಲಿಯೇ ಕಳೆದೆ

ಮೂರನೆಯ ದಿನ ಮಧ್ಯಾಹ್ನ, ಬಹಳ ಹೊತ್ತಾದ ಮೇಲೆ ನಾನೂ ಕಮಲಳೂ ಚಹವನ್ನು ಕುಡಿದು ಮುಗಿಸಿದ್ದಾಗ ಪುರುಷೋತ್ತಮದಾಸ್ ಟಂಡನ್‌ರವರು ಆಗತಾನೆ ಬಂದಿದ್ದರು ನಾವು ಕೈಸಾಲೆಯಲ್ಲಿ ನಿಂತುಕೊಂಡಿದ್ದಂತೆಯೇ ಮೋಟಾರೊಂದು ಬಂದಿತು ಪೋಲೀಸ್ ಅಧಿಕಾರಿಯೊಬ್ಬರು ಕೆಳಗಿಳಿದರು ನನ್ನ ಕಾಲವು ಸನ್ನಿಹಿತವಾಗಿತ್ತೆಂದು ನಾನು ಕೂಡಲೇ ತಿಳಿದುಕೊಂಡೆ ನಾನು ಅವರ ಬಳಿ ಹೋಗಿ, "ಬಹುತ್ ದಿನ್ಸೊಸೆ ಆಪ್ ಕಾ ಇನ್ತಜಾರ್ ಥಾ"—"ನಾನು ತಮಗಾಗಿ ಬಹಳ ದಿನಗಳಿಂದ ಕಾದುಕೊಂಡಿದ್ದೇನೆ," ಎಂದು ಹೇಳಿದೆ ಅವರು ಸ್ವಲ್ಪ ಪಶ್ಚಾತ್ತಾಪ ವನ್ನು ಸೂಚಿಸಿ, ತಮ್ಮದೇನೂ ತಪ್ಪಿಲ್ಲವೆಂದು ಹೇಳಿದರು. ವಾರಂಟು ಕಲ್ಕತ್ತೆಯದು

ಐದು ತಿಂಗಳು ಹದಿಮೂರು ದಿನಗಳು ನಾನು ಹೊರಗೆ ಇದ್ದ ಈಗ ಪುನಃ ಅವರೋಧ ಮತ್ತು ಏಕಾಂತವಾಸಗಳನ್ನು ಸೇರಿದ್ದೆ ಆದರೆ ನಿಜವಾಗಿ ಹೊರೆಯನ್ನು ಹೊರುವುದು ನನ್ನದಾಗಿರಲಿಲ್ಲ ಎಂದಿನಂತೆಯೇ ಅದನ್ನು ಸ್ತ್ರೀ ಜನರೇ ಹೊರಬೇಕಾಗಿತ್ತು—ನರಳುತ್ತಿದ್ದ ನನ್ನ ತಾಯಿ, ನನ್ನ ಹೆಂಡತಿ, ನನ್ನ ತಂಗಿ

೫೯

# ಆಲಿಪುರದ ಸೆರೆಮನೆ

" ಏನಿದೀಗಾಗಲೇ ಚಣವದನು ಬಿಟ್ಟನಿತು
ಗೆಂಟಾಗಿಹೆನ್ ? ಎಕ್ಕದಾ ದೂದಿವೊಲ್ ಎಳೆಗಾಳಿ
ಸುಳಿದತ್ತ, ಮುಂದುಮುಂದಕೆ ಸಾಗಲೇ
ಬೇಕೇನು ಕೆಳೆಯ ಚುಕ್ಕಿಯ ನೆರಂ ಇಲ್ಲದೆಯೆ ? "

ರಾಬರ್ಟ್ ಬ್ರೌನಿಂಗ್

ಆ ರಾತ್ರಿಯೇ ನನ್ನನ್ನು ಕಲ್ಕತ್ತೆಗೆ ಕರೆದೊಯ್ದರು ಹೌರಾ ಸ್ಟೇಷನ್ನಿನಿಂದ ಒಂದು ದೊಡ್ಡ ಕರಿಯ ಮೋಟಾರು ನನ್ನನ್ನು ಲಾಲ್ ಬಜಾರ್ ಪೊಲೀಸ್ ಠಾಣೆಗೆ ಕೊಂಡುಹೋಯಿತು ಕಲ್ಕತ್ತಾ ಪೊಲೀಸಿನ ಈ ಮುಖ್ಯ ಠಾಣ್ಯಾದ ಬಗ್ಗೆ ನಾನು ಬೇಕಾದಷ್ಟು ಓದಿದ್ದೆ, ಮತ್ತು ಕುತೂಹಲದಿಂದ ಸುತ್ತಲೂ ನೋಡಿದೆ ಉತ್ತರ ಭಾರತದಲ್ಲಿ ಮತ್ತೆ ಯಾವ ಪೊಲೀಸ್ ಮುಖ್ಯ ಠಾಣ್ಯದಲ್ಲಿ ಇದ್ದುದಕ್ಕಿಂತಲೂ ಬಹಳ ಹೆಚ್ಚುಮಂದಿ ಇಲ್ಲಿ ಯೂರೋಪಿಯನ್ ಸಾರ್ಜೆಂಟರೂ ಇನ್ಸ್ಪೆಕ್ಟರುಗಳೂ ಇದ್ದರು. ಕಾನ್ಸ್ಟೇಬಲ್‌ಗಳು ಬಹುತರವಾಗಿ ಎಲ್ಲರೂ ಬಿಹಾರಿನ ಅಥವಾ ಸಂಯುಕ್ತ ಪ್ರಾಂತ್ಯದ ಪೂರ್ವ ಜಿಲ್ಲೆಗಳ ಕಡೆಯವರಂತೆ ಕಾಣಿಸಿತು ನಾನು ನ್ಯಾಯಾಸ್ಥಾನಕ್ಕೂ ಅಲ್ಲಿಂದ ಹಿಂದಕ್ಕೂ ಅಥವಾ ಒಂದು ಸೆರೆಮನೆಯಿಂದ ಮತ್ತೊಂದು ಸೆರೆಮನೆಗೂ ದೊಡ್ಡದೊಂದು ಸೆರೆಮನೆಯ ಲಾರಿಯಲ್ಲಿ ಮಾಡಿದ ಅನೇಕ ಪ್ರಯಾಣಗಳಲ್ಲಿ ಈ ಕಾನ್ಸ್ಟೇಬಲ್‌ಗಳಲ್ಲಿ ಅನೇಕರು ನನ್ನ ಜೊತೆಯಲ್ಲಿ ಸಾಮಾನ್ಯವಾಗಿ ಬರುತ್ತಿದ್ದರು ಅವರು ಸಂಪೂರ್ಣವಾಗಿ ವಿಷಾದದಿಂದ ಕೂಡಿದಂತೆಯೂ, ತಮ್ಮ ಜಂಬರವನ್ನು ಹೇಸುತ್ತಿದ್ದಂತೆಯೂ ಮತ್ತು ಸ್ಪಷ್ಟವಾಗಿ ನನಗಾಗಿ ಸಹಾನುಭೂತಿ ತೋರುವಂತೆಯೂ ಕಾಣುತ್ತಿದ್ದರು. ಕೆಲವು ವೇಳೆ ಅವರ ಕಣ್ಣುಗಳು ಹನಿಗೂಡಿ ಹೊಳೆಯುತ್ತಿದ್ದುವು

ಪ್ರಾರಂಭದಲ್ಲಿ ನನ್ನನ್ನು ಪ್ರೆಸಿಡೆನ್ಸಿ ಸೆರೆಮನೆಯಲ್ಲಿ ಇಟ್ಟಿದ್ದರು ಅಲ್ಲಿಂದ ವಿಚಾರಣೆಗೆ ಛೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರ ನ್ಯಾಯಾಸ್ಥಾನಕ್ಕೆ ಕರೆದುಕೊಂಡು ಹೋದರು ಇದು ಹೊಸ ಅನುಭವವಾಗಿದ್ದಿತು ಕೋರ್ಟ್-ರೂಂ ಮತ್ತು ಕಟ್ಟಡಗಳು ನ್ಯಾಯಾಸ್ಥಾನದಂತೆ ಕಾಣುವುದಕ್ಕಿಂತ ಹೆಚ್ಚಾಗಿ ಮುತ್ತಲ್ಪಟ್ಟ ದುರ್ಗದಂತೆ ತೋರುತ್ತಿದ್ದಿತು ಕೆಲವು ವೃತ್ತಪತ್ರಿಕೆಗಳವರು ಮತ್ತು ಎಂದಿನ ವಕೀಲರು ಹೊರತು ಹೊರಗಿನವರಾರಿಗೂ ನ್ಯಾಯಾಸ್ಥಾನದ ಸಮೀಪಕ್ಕೆ ಕೂಡ ಬರಲು ಅವಕಾಶವಿರಲಿಲ್ಲ ಅನೇಕ ಪೊಲೀಸರು ಹಾಜರಿದ್ದರು ಈ ಏರ್ಪಾಡುಗಳೆಲ್ಲಾ ನನಗಾಗಿ ಮಾಡಲ್ಪಟ್ಟವು

ಗಳಲ್ಲವೆಂಬುದು ಸ್ಪಷ್ಟವಾಗಿದ್ದಿತು ಅಲ್ಲಿಯ ದಿನಚರಿಯದು ಕೋರ್ಟ್–ರೂಮಿಗೆ ನನ್ನನ್ನು ಕರೆದೊಯ್ದಾಗ ಮೇಲುಗಡೆಯೂ ಎರಡು ಕಡೆಗಳಲ್ಲೂ ತಂತಿಗಳ ಬಲೆಯಿಂದ ಮುಚ್ಚಲ್ಪಟ್ಟಿದ್ದ ಒಂದು ಉದ್ದವಾದ ಕೈಸಾಲೆಯಲ್ಲಿ ಹೋಗಬೇಕಾಯಿತು. ಬೋನಿನ ಮೂಲಕ ಹೋದಂತೆ ತೋರುತ್ತಿದ್ದಿತು ಅಪರಾಧಿಯು ನಿಲ್ಲುವ ಸ್ಥಾನವು ನ್ಯಾಯಾಧಿಪತಿಯ ಸ್ಥಾನದಿಂದ ದೂರವಾಗಿದ್ದಿತು ಕೋರ್ಟ್–ರೂಮು ಪೋಲೀಸಿನವರಿಂದಲೂ ಕರಿಯ ಅಂಗಿಗಳನ್ನೂ ಗೌನುಗಳನ್ನೂ ಧರಿಸಿದ್ದ ವಕೀಲರಿಂದಲೂ ತುಂಬಿದ್ದಿತು

ನನಗೆ ನ್ಯಾಯಸ್ಥಾನ ವಿಚಾರಣೆಗಳು ಸಾಕಷ್ಟು ಅಭ್ಯಾಸವಾಗಿದ್ದಿತು ನನ್ನ ಹಿಂದಲ ಅನೇಕ ವಿಚಾರಣೆಗಳು ಸೆರೆಮನೆಯ ಆವರಣದಲ್ಲೇ ನಡೆದಿದ್ದುವು. ಆದರೆ ಆವಾಗಲೆಲ್ಲಾ ಸ್ನೇಹಿತರೂ ಬಂಧುಗಳೂ ಗುರುತು ಕಂಡವರೂ ಯಾರಾದರೂ ಇದ್ದೇ ಇರುತ್ತಿದ್ದರು, ಇಡೀ ವಾತಾವರಣ ಸನ್ನಿವೇಶವು ಸ್ವಲ್ಪ ಸುಲಭವಾಗಿತ್ತು ಸಾಧಾರಣವಾಗಿ ಪೋಲೀಸರು ಹಿನ್ನೆಲೆಯಲ್ಲಿಯೇ ಇರುತ್ತಿದ್ದರು, ಬೋನಿನ ತರಹದ ಕಟ್ಟಡಗಳು ಯಾವುವೂ ಇದ್ದಿರಲಿಲ್ಲ ಆದರೆ ಇಲ್ಲಿ ಬಹಳ ಬೇರೆಯಾಗಿತ್ತು ನಾನು ಆ ಪರಕೀಯ ಮತ್ತು ಅಪರಿಚಿತ ಮುಖಗಳನ್ನು ದಿಟ್ಟಿಸಿ ನೋಡುತ್ತಿದ್ದೆ ಅವರಿಗೂ ನನಗೂ ಯಾವುದರಲ್ಲಿಯೂ ಸಂಬಂಧವಿರಲಿಲ್ಲ ಆ ಗುಂಪು ಆಕರ್ಷಿಸುವಂಥದಾಗಿರಲಿಲ್ಲ ಗೌನುಗಳನ್ನು ತೊಟ್ಟಿರತಕ್ಕ ವಕೀಲರು ಒಟ್ಟಾಗಿರುವಾಗ ನೋಡುವುದಕ್ಕೆ ಸುಂದರರಾಗಿ ಕಾಣುವುದಿಲ್ಲ, ಪೋಲೀಸ್ ಕೋರ್ಟಿನ ವಕೀಲರು ವಿಶೇಷವಾಗಿ ಒಂದು ಬಗೆಯ ಮನೋರಂಜಕವಲ್ಲದ ಮುಖಮುದ್ರೆಯನ್ನು ಬೆಳೆಯಿಸಿಕೊಳ್ಳುವಂತೆ ತೋರುತ್ತದೆ. ಕೊನೆಗೆ, ಆ ಕರಿಯ ಉಡುಪುಗಳ ಮಧ್ಯದಲ್ಲಿ ಪರಿಚಿತವಾದ ವಕೀಲರೊಬ್ಬರ ಮುಖವನ್ನು ಹೇಗೋ ನಾನು ಗುರುತಿಸಿದೆ. ಆದರೆ ಆ ಗುಂಪಿನಲ್ಲಿ ಅವರು ಎಲ್ಲಿಯೋ ಸೇರಿಹೋಗಿಬಿಟ್ಟರು

ವಿಚಾರಣೆ ಪ್ರಾರಂಭವಾಗುವುದಕ್ಕೆ ಮುಂಚೆ ನಾನು ಹೊರಗಡೆಯ ಮೊಗಸಾಲೆಯಲ್ಲಿ ಕುಳಿತ್ತಿದ್ದಾಗ ಸಹ ನಾನು ಒಂಟಿಯಾಗಿದ್ದಂತೆಯೂ ವಿವಿಕ್ತನಾಗಿದ್ದಂತೆಯೂ ನನಗೆ ತೋರಿತು ನನ್ನ ನಾಡಿಯ ಗತಿಯು ಸ್ವಲ್ಪಮಟ್ಟಿಗೆ ಹೆಚ್ಚಿರಬೇಕು ನಾನು ಸಾಮಾನ್ಯವಾಗಿ ನನ್ನ ಹಿಂದಿನ ವಿಚಾರಣೆಗಳ ಕಾಲಗಳಲ್ಲಿ ಇದ್ದಷ್ಟು ಆಂತರಿಕ ಸಮಾಧಾನದಿಂದ ಇರಲಿಲ್ಲ ವಿಚಾರಣೆಗಳ ಮತ್ತು ಶಿಕ್ಷೆಗಳ ಅಷ್ಟೊಂದು ಅನುಭವವನ್ನು ಪಡೆದಿದ್ದ ನನ್ನಲ್ಲಿಯೇ ಆ ಸನ್ನಿವೇಶವು ಅಸಾಮಾನ್ಯವಾದ ಪ್ರತೀಕಾರನನ್ನು ಎಬ್ಬಿಸುವಾಗ ಯುವಕರೂ ಅನನುಭವಿಗಳೂ ಆದ ಜನಗಳು ಆ ಮುಲುಕನ್ನು ಇನ್ನೆಷ್ಟುಮಟ್ಟಿಗೆ ಹೆಚ್ಚಾಗಿ ಅನುಭವಿಸಬೇಕು, ಎಂಬುದು ನನಗೆ ಹೊಳೆಯಿತು

ವಿಚಾರಣೆಯ ಸ್ಥಾನದಲ್ಲಿಯೇ ನನ್ನ ಮನಃಸಂಸ್ಥಿತಿಯು ಉತ್ತಮಗೊಂಡಿತು ಎಂದಿನಂತೆ ನಾನು ಪ್ರತಿವಾದಿಸದೆ ಸಂಕ್ಷಿಪ್ತ ಹೇಳಿಕೆಯೊಂದನ್ನು ಓದಿದೆ. ಮಾರ

ನೆಯದಿನ ಫೆಬ್ರವರಿ ೧೬ ರಲ್ಲಿ ನನಗೆ ಎರಡು ವರ್ಷಗಳ ಸಜ ವಿಧಿಸಲ್ಪಟ್ಟಿತು ನನ್ನ ಕಾರಾಗೃಹವಾಸದ ಏಳನೆಯ ಅವಧಿಯು ಪ್ರಾರಂಭವಾಯಿತು

ನಾನು ಸೆರೆಮನೆಯ ಹೊರಗಡೆ ಇದ್ದ ಐದೂವರೆ ತಿಂಗಳನ್ನು ಸ್ವಲ್ಪ ಸಂತೃಪ್ತಿಯಿಂದಲೇ ಸ್ಮರಿಸಿದ ಕಾಲವನ್ನು ಚೆನ್ನಾಗಿಯೇ ಉಪಯೋಗಿಸಿ ಕೆಲವು ಉಪಯುಕ್ತವಾದ ಕೆಲಸಗಳನ್ನು ಮಾಡಿ ಮುಗಿಸಿದ್ದೆ ನಮ್ಮ ತಾಯಿಯು ಆರೋಗ್ಯದ ಕಡೆಗೆ ಹೊರಳಿ ಸದ್ಯದ ಅಪಾಯದಿಂದ ದೂರವಾಗಿದ್ದಳು ನನ್ನ ತಂಗಿ ಕೃಷ್ಣಾ ಮದುವೆಯಾಗಿದ್ದಳು ನನ್ನ ಮಗಳ ಮುಂದಣ ವಿದ್ಯಾಭ್ಯಾಸದ ಏರ್ಪಾಡಾಗಿತ್ತು ನನ್ನ ಕೆಲವು ಸಾಂಸಾರಿಕ ಮತ್ತು ಆರ್ಥಿಕ ಸಿಕ್ಕುಗಳನ್ನೆಲ್ಲಾ ಸರಿಪಡಿಸಿದ್ದೆ ಅನೇಕ ದಿನಗಳಿಂದ ನಾನು ಉದಾಸೀನ ಮಾಡಿದ್ದ ಅನೇಕ ಸ್ವಂತ ವಿಚಾರಗಳನ್ನು ಕುರಿತು ಮಾಡಬೇಕಾದುದೆಲ್ಲವನ್ನೂ ಮಾಡಿದ್ದೆ ಸಾರ್ವಜನಿಕ ಪ್ರಸಂಗಗಳಲ್ಲಿ, ಆಗ ಯಾರೂ ಹೆಚ್ಚು ಕೈಯಾಡಲು ಅಸಾಧ್ಯವಾಗಿತ್ತೆಂಬುದನ್ನು ನಾನು ತಿಳಿದಿದ್ದೆ ಕಾಂಗ್ರೆಸ್ಸಿನ ಮನೋಭಾವವನ್ನು ಸ್ವಲ್ಪಮಟ್ಟಿಗೆ ಗಟ್ಟಿಮಾಡುವ ಮತ್ತು ಅದನ್ನು ಸ್ವಲ್ಪಮಟ್ಟಿಗೆ ಸಾಮಾಜಿಕ ಮತ್ತು ಆರ್ಥಿಕ ಯೋಚನೆಗಳ ಕಡೆಗೆ ತಿರುಗಿಸುವ ಕಾರ್ಯದಲ್ಲಿ ನಾನು ಕಿಂಚಿತ್ಸಹಾಯವನ್ನಾದರೂ ಮಾಡಿದ್ದೆ ಗಾಂಧಿಜಿಯವರೊಂದಿಗೆ ನಾನು ನಡೆಸಿದ ಪುಣೆಯ ಪತ್ರವ್ಯವಹಾರ ಮತ್ತು ಆಮೇಲೆ ಪತ್ರಿಕೆಗಳಲ್ಲಿ ಬಂದ ನನ್ನ ಲೇಖನಗಳು ವ್ಯತ್ಯಾಸವೊಂದನ್ನುಂಟುಮಾಡಿದ್ದವು ಕೋಮುವಾರು ಪ್ರಶ್ನೆಗಳನ್ನು ಕುರಿತ ನನ್ನ ಲೇಖನಗಳೂ ಸ್ವಲ್ಪ ಒಳ್ಳೆಯ ಪರಿಣಾಮವನ್ನುಂಟು ಮಾಡಿದ್ದುವು. ಇದರ ಜೊತೆಗೆ, ನಾನು ಎರಡು ವರುಷಗಳು ಕಳೆದ ಮೇಲೆ ಗಾಂಧಿಜಿಯವರನ್ನೂ ಇತರ ಸ್ನೇಹಿತರನ್ನೂ ಸಂಗಡಿಗರನ್ನೂ ಪುನಃ ಕಂಡಿದ್ದೆ, ಮತ್ತು ಮುಂದಿನ ಕಾಲಾವಧಿಯವರೆಗೆ ಉತ್ಸಾಹ ಮತ್ತು ರಾಗ ಚೈತನ್ಯಗಳನ್ನು ತುಂಬಿಕೊಂಡಿದ್ದೆ

ನನ್ನ ಬಗೆಯನ್ನು ಕತ್ತಲಾಗಿಸಲು ಒಂದು ನೆರಳು ಮಾತ್ರ ಉಳಿದುಕೊಂಡಿತ್ತು— ಕಮಲಳ ಅನಾರೋಗ್ಯ ಆಕೆಯು ಎಷ್ಟು ಹೆಚ್ಚಾಗಿ ರೋಗಪೀಡಿತಳಾಗಿದ್ದಳೆಂಬುದರ ಅರಿವು ಆಗ ನನಗೆ ಇರಲಿಲ್ಲ ಏಕೆಂದರೆ, ಹಾಸಿಗೆ ಹಿಡಿಯುವುದು ಅನಿವಾರ್ಯವಾಗುವವರೆಗೆ ದುಡಿಯುತ್ತಲೇ ಹೋಗುವುದು ಆಕೆಯ ಸ್ವಭಾವ ಆದರೆ ನಾನು ಅಗಚಾಟಲುಪಟ್ಟೆ. ನಾನು ಈಗ ಸೆರೆಮನೆಯಲ್ಲಿದ್ದುದರಿಂದ ಆಕೆಯು ತನ್ನ ಚಿಕಿತ್ಸೆಯ ಕಾರ್ಯದಲ್ಲಿ ಚೆನ್ನಾಗಿ ತೊಡಗಲು ಯಾವ ಅಡ್ಡಿಯೂ ಇರುವುದಿಲ್ಲವೆಂದು ಆಶಿಪಟ್ಟೆ ನಾನು ಸೆರೆಮನೆಯಿಂದ ಹೊರಗೆ ಇದ್ದಾಗ ನನ್ನನ್ನು ಹೆಚ್ಚುಕಾಲ ಬಿಟ್ಟಿರಲು ಆಕೆಯು ಇಷ್ಟಪಡುತ್ತಿರಲಿಲ್ಲವಾದುದರಿಂದ ಹಾಗೆ ಮಾಡಲು ಆಗ ಇನ್ನೂ ಹೆಚ್ಚು ಕಷ್ಟವಾಗಿರುತ್ತಿತ್ತು

ನಾನು ಮತ್ತೊಂದರ ಬಗ್ಗೆ ಪರಿತಾಪಪಟ್ಟೆ ಒಂದು ಸಲವಾದರೂ ನಾನು ಅಲಹಾಬಾದ್ ಜಿಲ್ಲೆಯ ಗ್ರಾಮಾಂತರ ಕ್ಷೇತ್ರಗಳಿಗೆ ಭೇಟಿಕೊಡಲಿಲ್ಲವಲ್ಲ ಎಂದು ವಿಷಾದ

ಪಟ್ಟಿ ಆ ಜಿಲ್ಲೆಯಲ್ಲಿ ನಮ್ಮ ಆಜ್ಞಾಪೂರ್ವಕ ಸೂಚನೆಗಳಿಗನುಸಾರವಾಗಿ ಕಾರ್ಯವನ್ನು ನಡೆಸಿದುದಕ್ಕೋಸ್ಕರ ನನ್ನ ತರುಣ ಸಹೋದ್ಯೋಗಿಗಳಲ್ಲನೇಕರು ಮೊನ್ನೆ ಮೊನ್ನೆ ತಾನೆ ದಸ್ತಗಿರಿ ಮಾಡಲ್ಪಟ್ಟಿದ್ದರು ಆ ಜಿಲ್ಲೆಯಲ್ಲಿ ಅವರನ್ನು ಅನುಸರಿಸದೆ ಇರುವುದು, ಅವರ ವಿಷಯದಲ್ಲಿ ಬಹುತರವಾಗಿ ದ್ರೋಹಬಗೆದಂತೆ ಎಂದು ತೋರಿತು

ಮತ್ತೆ ಅದೇ ಕರಿಯ ಮೋಟಾರು ಗಾಡಿಯು ನನ್ನನ್ನು ಸೆರೆಮನೆಗೆ ಕೊಂಡು ಹೋಯಿತು. ದಾರಿಯಲ್ಲಿ, 'ಮೆಷಿನ್ ಗನ್,' 'ಆರ್ಮರ್ಡ್ ಕಾರ್,' ಇತ್ಯಾದಿಗಳ ಸಮೇತವಾಗಿ ನಡೆಯುತ್ತಿದ್ದ ಅನೇಕ ಸೈನಿಕರನ್ನು ಹಾಯ್ದು ಹೋದೆವು ಸೆರೆಯ ಗಾಡಿಯ ಸಣ್ಣ ಕಿಂಡಿಯಿಂದ ನಾನು ಅವರನ್ನು ಇಣಿಕಿ ನೋಡಿದೆ ಆರ್ಮರ್ಡ್ ಕಾರುಗಳೂ ಮತ್ತು 'ಟ್ಯಾಂಕು'ಗಳೂ ಎಷ್ಟು ಕುರೂಪಿಗಳು ಅವುಗಳು ನನಗೆ ಇತಿಹಾಸ ಪೂರ್ವಕಾಲದ ಪೆಡಂಭೂತಗಳ–ಡಿನೋಜಾರ್ ಮುಂತಾದುವುಗಳ ನೆನಪು ಮಾಡಿದುವು

ನನ್ನನ್ನು ಪ್ರೆಸಿಡೆನ್ಸಿ ಸೆರೆಮನೆಯಿಂದ ಆಲಿಪುರದ ಕೇಂದ್ರ ಸೆರೆಮನೆಗೆ ವರ್ಗಾಯಿಸಿದರು ಅಲ್ಲಿ ಹತ್ತು ಅಡಿ ಉದ್ದವೂ ಒಂಭತ್ತು ಅಡಿ ಅಗಲವೂ ಇದ್ದ ಒಂದು ಸಣ್ಣ ಓವರಿಯನ್ನು ನನಗೆ ಕೊಟ್ಟರು ಅದರ ಮುಂದೆ ಒಂದು ಕೈಸಾಲೆಯೂ ಪುಟ್ಟ ಅಂಗಳವೂ ಇದ್ದುವು ಅಂಗಳದ ಸುತ್ತಲೂ ಇದ್ದ ಗೋಡೆಯು ತಗ್ಗಾಗಿತ್ತು, ಸುಮಾರು ೭ ಅಡಿ ಎತ್ತರವಿದ್ದಿರಬಹುದು ಅದರ ಆಚೆ ನೋಡಿದಾಗ ವಿಚಿತ್ರವಾದ ದೃಶ್ಯವು ನನ್ನ ಕಣ್ಣಿಗೆ ಬಿದ್ದಿತು ಎಲ್ಲ ವಿಧವಾದ ಕಟ್ಟಡಗಳು– ಒಂದು ಅಂತಸ್ತು, ಎರಡು ಅಂತಸ್ತು, ದುಂಡು, ಚಚ್ಚೌಕ, ಚಿತ್ರವಿಚಿತ್ರವಾದ ಮೇಲ್ಮಾವಣಿಗಳು– ಸುತ್ತಲೂ ಒಂದರ ಮೇಲೆ ಒಂದರಂತೆ ಎದ್ದಿದ್ದುವು ಆ ಕಟ್ಟಡಗಳೆಲ್ಲಾ ಒಂದಾದ ಮೇಲೆ ಒಂದರಂತೆ, ಅಂತೂ ಇದ್ದ ಎಲ್ಲ ಸ್ಥಳವನ್ನು ಉಪಯೋಗಿಸಲು ಹೇಗೆ ಹೇಗೋ ಕಟ್ಟಲ್ಪಟ್ಟಿದ್ದಂತೆ ತೋರುತ್ತಿದ್ದುವು ಅದು ಒಂದು ಚಿತ್ರದ ಒಗಟಿಯಂತೆಯೋ ಅಥವಾ ಪೂರ್ವಸಂಪ್ರದಾಯದ ನಿಯಮಗಳನ್ನು ಕಿತ್ತೊಗೆದ ಕಲಾವಿದನೊಬ್ಬನು ವಿಕಟ ವಿಚಿತ್ರವೊಂದನ್ನು ನಿರ್ಮಿಸುವ ಪ್ರಯತ್ನದಂತೆಯೋ ತೋರುತ್ತಿದ್ದಿತು ಆದರೂ ಆ ಕಟ್ಟಡಗಳನ್ನೆಲ್ಲಾ ವ್ಯವಸ್ಥೆಯ ಪ್ರಕಾರ ಒಂದು ಕ್ರಮದಲ್ಲಿ ಕಟ್ಟಿದ್ದರೆಂದೂ ಅವುಗಳ ಮಧ್ಯದಲ್ಲಿ ಒಂದು ಗೋಪುರವಿದ್ದಿತೆಂದೂ (ಕ್ರೈಸ್ತ ಬಂದಿಗಳ ಉಪಯೋಗಕ್ಕಾಗಿ ಇದ್ದ ಚರ್ಚ್ ಅದು) ಆ ಚರ್ಚನ್ನು ಕೇಂದ್ರವಾಗಿಟ್ಟುಕೊಂಡು ಅಲ್ಲಿಂದ ಹೊರಹೊರಟ ರೇಖೆಗಳ ಪ್ರಕಾರ ಕಟ್ಟಡಗಳು ಕಟ್ಟಲ್ಪಟ್ಟಿದ್ದುವೆಂದೂ ನನಗೆ ಹೇಳಲಾಯಿತು ನಗರದ ಸೆರೆಮನೆಯಾದುದರಿಂದಲೂ, ಸ್ಥಳವು ಮಿತವಾಗಿದ್ದುದರಿಂದಲೂ ಇದ್ದ ಎಲ್ಲಾ ಸ್ಥಳವನ್ನೂ ಉಪಯೋಗಿಸಿಕೊಳ್ಳಬೇಕಾಗಿತ್ತು

ವಿಕಟವಿಚಿತ್ರ ಕಟ್ಟಡಗಳಂತೆ ತೋರುತ್ತಿದ್ದ ಅವುಗಳ ಮೊದಲನೆಯ ನೋಟದ ಪರಿಣಾಮದಿಂದ ನಾನು ಚೇತರಿಸಿಕೊಳ್ಳುತ್ತಿದ್ದಂತೆಯೇ ಭಯಂಕರವಾದ ದೃಶ್ಯವಿ

ನ್ನೊಂದು ನನಗೆ ಗೋಚರಿಸಿತು ಸರಿಯಾಗಿ ನನ್ನ ಅಂಗಳದ ಮುಂದುಗಡೆ, ಎರಡು ದೊಡ್ಡ ಹೊಗೆಯು ಕೊಳವೆಗಳು ಕಪ್ಪಾದ ದಪ್ಪವಾದ ಧೂಮಪ್ರವಾಹವನ್ನು ಹೊರಕ್ಕೆ ಉಗುಳುತ್ತಿದ್ದುವು ಕೆಲವು ವೇಳೆ ಗಾಳಿಯು ಆ ಹೊಗೆಯನ್ನು ನನ್ನ ಕಡೆಗೆ ಬೀಸಿದಾಗ ಬಹುತರವಾಗಿ ಉಸಿರುಕಟ್ಟಿದಂತೆ ಆಗುತ್ತಿತ್ತು ಅವು ಸೆರೆಮನೆಯ ಅಡಿಗೆಮನೆಗಳ ಹೊಗೆ ಕೊಳವೆಗಳು ಆ ಮೇಲೆ ನಾನು ಸೆರೆಮನೆಯ ಸೂಪರಿಂಟೆಂಡೆಂಟರಿಗೆ, ವಿಷಗಾಳಿಯ ಮುತ್ತಿಗೆಯನ್ನು ಎದುರಿಸಲು ಮೊಗವಾಡವನ್ನು ಒದಗಿಸಬೇಕೆಂದು ಸೂಚಿಸಿದ

ಕಾರಾಗೃಹವಾಸವು ಅನುಕೂಲವಾಗಿ ಆರಂಭವಾಗಲಿಲ್ಲ ಆಲಿಪುರ್ ಸೆರೆಮನೆಯ ಕೆಂಪು ಇಟ್ಟಿಗೆ ಕಟ್ಟಡಗಳ ವ್ಯತ್ಯಸ್ತವಾಗದ ನೋಟ ಮತ್ತು ಅಡಿಗೆಮನೆಗಳ ಹೊಗೆ ಕೊಳವೆಗಳಿಂದ ಬರುವ ಹೊಗೆಯನ್ನು ಕುಡಿಯುವ ಪ್ರತ್ಯಾಶೆ—ಇವುಗಳಿಂದ ಭವಿಷ್ಯವು ಆಕರ್ಷಣೀಯವಾಗಿರಲಿಲ್ಲ ನನ್ನ ಅಂಗಳದಲ್ಲಿ ಮರಗಳಾಗಲಿ ಹಸುರಾಗಲಿ ಇರಲಿಲ್ಲ ನೆಲಕ್ಕೆಲ್ಲಾ ಅಚ್ಚುಕಟ್ಟಾಗಿ ಗಾರೆ ಹಾಕಿದ್ದಿತು ದಿನವೂ ಅದರ ಮೇಲೆ ಬಂದು ಕೂರುತ್ತಿದ್ದ ಹೊಗೆಯ ಹೊರತಾಗಿ ಅದು ಶುಭ್ರವಾಗಿದ್ದಿತು ಅಂಗಳವು ಬೋಳು ಬೋಳಾಗಿಯೂ ಕುಗ್ಗಿಸುವ ಪರಿಣಾಮವುಳ್ಳದ್ದಾಗಿಯೂ ಇದ್ದಿತು ನೆರೆಯ ಅಂಗಳಗಳಲ್ಲಿದ್ದ ಒಂದೆರಡು ಮರಗಳ ತುದಿಯು ಮಾತ್ರ ನನಗೆ ಕಾಣುತ್ತಿದ್ದಿತು ನಾನು ಅಲ್ಲಿಗೆ ಬಂದಾಗ ಅವುಗಳಲ್ಲಿ ಎಲೆಯಾಗಲಿ ಹೂವಾಗಲಿ ಇರಲಿಲ್ಲ ಆದರೆ ಕ್ರಮವಾಗಿ, ರಹಸ್ಯಪೂರ್ಣವಾದ ವ್ಯತ್ಯಾಸವು ಅವುಗಳಲ್ಲುಂಟಾಯಿತು ಅವುಗಳ ಕೊಂಬೆಗಳ ಮೇಲಿನಿಂದೆಲ್ಲಾ ಸಣ್ಣ ಸಣ್ಣ ಹಸುರು ಚಿಗುರುಗಳು ಇಣಿಕ ನೋಡಲಾರಂಭಿಸಿದ್ದುವು ಕುಡಿಗಳಿಂದ ಎಲೆಗಳು ಹೊರಬರುತ್ತಿದ್ದುವು ಅವು ಬೇಗ ಬೇಗ ಬೆಳೆದು ಕೊಂಬೆಗಳ ಬತ್ತಲೆತನವನ್ನು ತಮ್ಮ ಮನೋಹರವಾದ ಹಸುರಿನಿಂದ ಮುಚ್ಚಿದುವು ಆ ಇಂಪಾದ ವ್ಯತ್ಯಾಸವು, ಆಲಿಪುರ್ ಸೆರೆಮನೆಯೂ ಕೂಡ ಚೆಲುವಾಗಿಯೂ ಉಲ್ಲಾಸಕರವಾಗಿಯೂ ಕಾಣುವಂತೆ ಮಾಡಿತು

ಅವುಗಳ ಪೈಕಿ ಒಂದು ಮರದಲ್ಲಿ ಒಂದು ಹದ್ದಿನ ಗೂಡು ಇದ್ದಿತು ಅದನ್ನು ಕುರಿತು ನಾನು ಕುತೂಹಲಭರಿತನಾಗಿದ್ದು, ಅದನ್ನು ಅನೇಕ ವೇಳೆ ನೋಡುತ್ತಿದ್ದೆ ಮರಿಗಳು ಬೆಳೆಯುತ್ತ ತಮ್ಮ ಕಸುಬಿನ ತಂತ್ರಗಳನ್ನೆಲ್ಲಾ ಕಲಿಯುತ್ತಿದ್ದುವು ಕೆಲವು ವೇಳೆ ಅವು ಅತಿ ವೇಗವಾಗಿ ಕೆಳಕ್ಕೆ ಹಾರಿ, ಗುರಿಯಿಟ್ಟಂತೆ ಬಂದಿಗಳ ಕೈಯಿಂದ, ಬಾಯಿಂದ ಕೂಡ ರೊಟ್ಟಿಯ ಚೂರನ್ನು ಹಾರಿಸಿಕೊಂಡು ಹೋಗುತ್ತಿದ್ದವು.

ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ (ಹೆಚ್ಚು ಕಡಿಮೆ) ನಮ್ಮನ್ನು ನಮ್ಮ ಕೋಣೆಗಳಲ್ಲಿ ಕೂಡಿ ಬೀಗ ಹಾಕಿರುತ್ತಿದ್ದರು ಆ ಚಳಿಗಾಲದ ಸಾಗದಿದ್ದ ರಾತ್ರಿಗಳನ್ನು ಕಳೆಯುವುದು ಬಹಳ ಕಷ್ಟವಾಗುತ್ತಿದ್ದಿತು. ಗಂಟೆ ಗಂಟೆಗಳ ಕಾಲ ಓದಿ ಓದಿ ಅಥವಾ ಬರೆದು ಬರೆದು ಬೇಜಾರಾದ ಮೇಲೆ, ನಾನು ಆ ಸಣ್ಣ ಕೋಣೆಯಲ್ಲಿ

ನಾಲ್ಕೈದು ಹೆಜ್ಜೆಗಳಷ್ಟು ಹಿಂದಕ್ಕೂ ಮುಂದಕ್ಕೂ ನಡೆದಾಡುತ್ತಿದ್ದೆ. ಮೃಗಾಲಯದಲ್ಲಿ ಕರಡಿಗಳು ತಮ್ಮ ಬೋನಿನಲ್ಲಿ ಹಿಂದಕ್ಕೂ ಮುಂದಕ್ಕೂ ಹೆಜ್ಜೆ ಹಾಕುವುದು ನನಗೆ ಜ್ಞಾಪಕಕ್ಕೆ ಬರುತ್ತಿದ್ದಿತು ಕೆಲವು ವೇಳೆ ನನಗೆ ವಿಶೇಷವಾಗಿ ಬೇಸರಿಕೆಯಾದಾಗ ನಾನು ನನಗೆ ಇಷ್ಟವಾಗಿದ್ದ ಔಷಧವನ್ನು—ಶೀರ್ಷಾಸನವನ್ನು ಹಾಕುತ್ತಿದ್ದ

ರಾತ್ರಿಯ ಮೊದಲ ಭಾಗವು ಸಾಧಾರಣವಾಗಿ ಶಾಂತವಾಗಿರುತ್ತಿದ್ದಿತು ಪಟ್ಟಣದ ಸದ್ದುಗಳು ತೇಲಿ ಬರುತ್ತಿದ್ದುವು—ಟ್ರ್ಯಾಂ ಗಾಡಿಯ ಸದ್ದು, ಗ್ರಾಮಾಪೋನು ಅಥವಾ ದೂರದಲ್ಲಿ ಯಾರಾದರೂ ಹಾಡುತ್ತಿದ್ದ ಸಂಗೀತ, ದೂರದಿಂದ ಬರುತ್ತಿದ್ದ ಈ ಮಂಪರಮಂಪರವಾದ ಸಂಗೀತವು ಕೇಳುವುದಕ್ಕೆ ಹಿತಕರವಾಗಿತ್ತು ಆದರ ರಾತ್ರಿಯಲ್ಲಿ ಹೆಚ್ಚು ಶಾಂತಿ ದೊರೆಯುತ್ತಿರಲಿಲ್ಲ ಸೆರೆಯ ಕಾವಲುಗಾರರು ಹಿಂದಕ್ಕೂ ಮುಂದಕ್ಕೂ ತಿರುಗಾಡುತ್ತಿದ್ದರು ಪ್ರತಿಯೊಂದು ಗಂಟೆಯೂ ಯಾವುದಾದರೊಂದು ರೀತಿಯ ಮೇಲ್ವಿಚಾರಣೆಯು ಇರುತ್ತಲೇ ಇದ್ದಿತು ನಾವು ಯಾರೂ ತಪ್ಪಿಸಿ ಕೊಂಡು ಹೋಗಿರಲಿಲ್ಲವೆಂಬುದನ್ನು ದೃಢಪಡಿಸಿಕೊಳ್ಳುವುದಕ್ಕಾಗಿ ಒಬ್ಬ ಅಧಿಕಾ ರಿಯು ಒಂದು ಲಾಂದ್ರದೊಂದಿಗೆ ಬರುತ್ತಿದ್ದ ಪ್ರತಿದಿನವೂ ಬೆಳಿಗ್ಗೆ ೩ ಗಂಟೆಗೆ, ಅಲ್ಲ ರಾತ್ರಿಯಲ್ಲೇ ಉಜ್ಜುವ ಮತ್ತು ತಿಕ್ಕುವ ಭಯಂಕರವಾದ ಗಲಭೆಯು ಆರಂಭ ವಾಗುತ್ತಿತ್ತು ಅಡಿಗೆಮನೆಗಳು ತಮ್ಮ ಕೆಲಸವನ್ನು ಪ್ರಾರಂಭಿಸಿದ್ದುವು

ಪ್ರೆಸಿಡೆನ್ಸಿ ಸೆರೆಮನೆಯಲ್ಲಿದ್ದಂತೆ ಆಲಿಪುರ್ ಸೆರೆಮನೆಯಲ್ಲೂ ಗುಮಾಸ್ತರು, ಅಧಿಕಾರಿಗಳು, ಕಾವಲುಗಾರರು ಮತ್ತು ವಾರ್ಡರ್‌ಗಳು ಬೇಕಾದಷ್ಟು ಮಂದಿ ಇದ್ದರು ಈ ಎರಡು ಸೆರೆಮನೆಗಳೂ ನೈನಿ ಸೆರೆಮನೆಯಲ್ಲಿದ್ದಷ್ಟೆ, ಎಂದರೆ ಸುಮಾರು ೨೨೦೦—೨೩೦೦ ಜನರನ್ನು ಒಳಗೊಂಡಿದ್ದುವು ಆದರ ಅಧಿಕಾರಿ ವರ್ಗವು ನೈನಿ ಸೆರೆಮನೆಯ ಎರಡರಷ್ಟಕ್ಕಿಂತ ಹೆಚ್ಚಾಗಿತ್ತು ಅನೇಕ ಯೂರೋಪಿಯನ್ ವಾರ್ಡ ರುಗಳೂ, ನಿವೃತ್ತ ಸೈನ್ಯಾಧಿಕಾರಿಗಳೂ ಇದ್ದರು ಸಂಯುಕ್ತ ಪ್ರಾಂತಗಳಿಗಿಂತ, ಕಲ್ಕತ್ತೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯವು ಹೆಚ್ಚು ವೆಚ್ಚದೊಂದಿಗೂ ಹೆಚ್ಚು ಬಿಕ್ಕಟ್ಟಿ ನಿಂದಲೂ ಕೆಲಸಮಾಡುತ್ತಿದ್ದಿತೆಂಬುದು ಸ್ಪಷ್ಟವಾಗಿದ್ದಿತು ಸಾಮ್ರಾಜ್ಯದ ಶಕ್ತಿಯ ಅನವರತವಾದ ನೆನಪು, ಕುರುಹು ಎಂದರೆ ಉತ್ತುಂಗ ಅಧಿಕಾರಿಗಳು ಬಂದಿಗಳ ಹತ್ತಿರಕ್ಕೆ ಬಂದಾಗ, ಅವರು ಕೂಗ ಬೇಕಾಗಿದ್ದ ಕೂಗು--“ ಸರ್ಕಾರ್ ಸಲಾಂ ” ಒಂದು ವಿಧವಾದ ಅಂಗವಿಕ್ಷೇಪದೊಂದಿಗೆ ಈ ಕೂಗನ್ನು ರಾಗವಾಗಿ ಎಳೆಯ ಬೇಕಾಗಿದ್ದಿತು ಸೆರೆಯಾಳುಗಳು ನಿತ್ಯವೂ ಅನೇಕ ಸಲ ಅದರಲ್ಲೂ ಸೂಪರಿಂಟಿಂ ಡೆಂಟರು ಆ ಕಡೆಯಿಂದ ಹೋಗುತ್ತಿದ್ದಾಗ ಕೂಗುತ್ತಿದ್ದ ಈ ಕೂಗು ನನಗೆ ನನ್ನ ಅಂಗಳಕ್ಕೆ ಕೇಳುತ್ತಿದ್ದಿತು ನನ್ನ ಅಂಗಳದ ಏಳು ಅಡಿಯ ಗೋಡೆಯ ಆಚೆ, ನಡೆಯುತ್ತಿದ್ದ ಸೂಪರಿಂಟಿಂಡೆಂಟರ ತಲೆಯ ಮೇಲೆ ದೊಡ್ಡ ಸಾಮ್ರಾಜ್ಯ ಛತ್ರದ ಮೇಲುಭಾಗವು ಮಾತ್ರ ಕಾಣುತ್ತಿದ್ದಿತು

ಈ ಅಸಾಧಾರಣವಾದ ಕೂಗು— ಸರ್ಕಾರ್ ಸಲಾಂ— ಮತ್ತು ಅದರೊಡನೆ ನಡೆಯಬೇಕಾಗಿದ್ದ ಅಂಗವಿಕ್ಷೇಪಗಳೂ ಪ್ರಾಚೀನ ಕಾಲಗಳ ಅವಶೇಷಗಳೇ ಎಂದು ಸೋಜಿಗಪಟ್ಟೆ, ಅಥವಾ ಅವು ಸ್ಫೂರ್ತಿವಂತನಾದ ಯಾವನೋ ಒಬ್ಬ ಇಂಗ್ಲಿಷ್ ಅಧಿಕಾರಿಯ ಸೃಷ್ಟಿಯೋ ? ನನಗೆ ತಿಳಿಯದು ಆದರೆ ಅದು ಆಂಗ್ಲೇಯ ಸೃಷ್ಟಿ ಎಂದು ನಾನು ಊಹಿಸುತ್ತೇನೆ ಅದರಲ್ಲಿ ಮಾದರಿಯ ಆಂಗ್ಲೊ–ಇಂಡಿಯನ್ ಧ್ವನಿ ಇದೆ ಅದೃಷ್ಟವಶದಿಂದ ಈ ಕೂಗು ಸ ಪ್ರಾ ಗಳಲ್ಲಿಯೂ ಅಥವಾ ಪ್ರಾಯಃ ಬಂಗಾಳಾ ಅಸ್ಸಾಂಗಳನ್ನುಳಿದು ಮತ್ತೆಲ್ಲಿಯೂ ಇಲ್ಲ 'ಸರ್ಕಾರ್'ದ ಶಕ್ತಿಗೆ ಬಲಾತ್ಕಾರವಾಗಿ ಈ ರೀತಿ ಸಲಾಂ ಮಾಡಿಸುತ್ತಿದ್ದುದು ಕೀಳ್ಪಡಿಸುವುದಾಗಿ ನನಗೆ ತೋರಿತು ಆಲಿಪುರದಲ್ಲಿ ಉತ್ತಮವಾದ ಒಂದು ವ್ಯತ್ಯಾಸವನ್ನು ಕಂಡು ನನಗೆ ಸಂತೋಷವಾಯಿತು ಸಾಮಾನ್ಯ ಬಂದಿಗಳಿಗೆ ಕೊಡುತ್ತಿದ್ದ ಆಹಾರವು ಸ ಪ್ರಾ ಸೆರೆಯ ಆಹಾರಕ್ಕಿಂದ ಉತ್ತಮವಾಗಿತ್ತು ಸೆರೆಯ ಆಹಾರದ ವಿಚಾರದಲ್ಲಿ, ಉಳಿದ ಪ್ರಾಂತಗಳೊಂದಿಗೆ ಸ ಪ್ರಾ ಗಳನ್ನು ಅನುಕೂಲವಾಗಿ ಹೋಲಿಸಲಾಗುವುದಿಲ್ಲ

ಸಂಕ್ಷಿಪ್ತವಾದ ಚಳಿಗಾಲವು ಬಹಳ ಬೇಗ ಓಡಿಹೋಯಿತು ವಸಂತಕಾಲವು ನಾಗಾಲೋಟದಿಂದ ಓಡುತ್ತಾ ಹೋಯಿತು ಬೇಸಿಗೆ ಪ್ರಾರಂಭವಾಯಿತು ದಿನೇದಿನೇ ಸೆಕೆಯೇರಿತು. ನನಗೆ ಯಾವಾಗಲೂ ಕಲ್ಕತ್ತೆಯ ಹವ ಇಷ್ಟವಾಗಿರಲಿಲ್ಲ ಅಲ್ಲಿ ಸ್ವಲ್ಪ ದಿನವಿದ್ದರೂ ಅದು ನನ್ನನ್ನು ಮಂಕಾಗಿ ಉತ್ಸಾಹರಹಿತನನ್ನಾಗಿ ಮಾಡುತ್ತಿದ್ದಿತು ಸೆರೆಮನೆಯಲ್ಲಿ ಸ್ವಾಭಾವಿಕವಾಗಿಯೇ ಪರಿಸ್ಥಿತಿಗಳು ಇನ್ನೂ ಬಹಳಮಟ್ಟಿಗೆ ಹೀನವಾಗಿದ್ದುವು ದಿವಸಗಳು ಕಳೆದಂತೆಲ್ಲಾ ನನ್ನ ಸ್ಥಿತಿಯೇನೂ ಉತ್ತಮವಾಗಲಿಲ್ಲ.ವ್ಯಾಯಾಮಕ್ಕಾಗಿ ಸ್ಥಳದ ಅಭಾವ, ನಿತ್ಯ ಸೆರೆಮನೆಯ ಕೋಣೆಯಲ್ಲಿ ಅನೇಕ ಗಂಟೆಗಳ ಕಾಲ ಬಂಧನ, ಇವುಗಳು ಆ ವಾತಾವರಣದಲ್ಲಿ ನನ್ನ ಆರೋಗ್ಯವನ್ನು ಸ್ವಲ್ಪಮಟ್ಟಿಗೆ ಪ್ರಾಯಃ ಕೆಡಿಸಿದುವು ನನ್ನ ತೂಕವು ವೇಗವಾಗಿ ಕಡಮೆಯಾಗತೊಡಗಿತು ಬೀಗಗಳು, ಅಗಳಿಗಳು, ಅಡ್ಡಪಟ್ಟಿಗಳು, ಗೋಡೆಗಳು, ಇವುಗಳನ್ನೆಲ್ಲಾ ಕಂಡರೆ ನನಗೆ ಎಷ್ಟು ದ್ವೇಷವುಂಟಾಯಿತು !

ಆಲಿಪುರದಲ್ಲಿ ಒಂದು ತಿಂಗಳು ಇದ್ದಮೇಲೆ, ಹೊರಗಡೆಯ ನನ್ನ ಅಂಗಳದಲ್ಲಿ ಸ್ವಲ್ಪ ವ್ಯಾಯಾಮವನ್ನು ತೆಗೆದುಕೊಳ್ಳಲು ನನಗೆ ಅವಕಾಶ ಕೊಡಲಾಯಿತು ಇದೊಂದು ಹಿತಕರವಾದ ವ್ಯತ್ಯಾಸವಾಗಿತ್ತು ಮುಖ್ಯವಾದ ಹೊರಗೋಡೆಯ ಪಕ್ಕದಲ್ಲಿ ಬೆಳಗ್ಗೆ ಸಾಯಂಕಾಲ ತಿರುಗಾಡಲು ನನಗೆ ಅವಕಾಶವಿದ್ದಿತು ನಿಧಾನವಾಗಿ ಆಲಿಪುರ್ ಸೆರೆ ಮನೆಗೂ ಕಲ್ಕತ್ತೆಯ ಹವಕ್ಕೂ ನಾನು ಒಗ್ಗಿಕೊಂಡೆ ಹೊಗೆ ಮತ್ತು ಭಯಂಕರವಾದ ಶಬ್ದದಿಂದ ಕೂಡಿದ ಅಡಿಗೆಮನೆಯೂ ತಕ್ಕಮಟ್ಟಿಗೆ ಸಹಿಸಬಹುದಾದ ಉಪದ್ರವವಾಯಿತು. ಇತರ ವಿಚಾರಗಳೂ, ಇತರ ತಾಪತ್ರಯಗಳೂ ನನ್ನ ಮನಸ್ಸನ್ನು ತುಂಬಿದ್ದುವು. ಹೊರಗಡೆಯಿಂದ ಬಂದ ಸಮಾಚಾರವು ಹಿತಕರವಾಗಿರಲಿಲ್ಲ

೬೦

# ಪೂರ್ವ ಮತ್ತು ಪಶ್ಚಿಮ ದೇಶಗಳಲ್ಲಿ ಪ್ರಜಾಸತ್ತೆ

ಆಲಿಪುರ್‌ನಲ್ಲಿ, ನನಗೆ ಶಿಕ್ಷೆಯಾದ ಮೇಲೆ ಒಂದು ದೈನಿಕ ಪತ್ರಿಕೆಯನ್ನಾದರೂ ನನಗೆ ಒದಗಿಸದೆ ಇದ್ದುದನ್ನು ಕಂಡು ಆಶ್ಚರ್ಯವಾಯಿತು ವಿಚಾರಣಾ ಕಾಲದ ಬಂದಿಯಾಗಿದ್ದಾಗ ನನಗೆ ಕಲ್ಕತ್ತೆಯ 'ಸ್ಟೇಟ್ಸ್‌ಮನ್' ದೈನಿಕ ಪತ್ರಿಕೆಯು ಕೊಡಲ್ಪಡುತ್ತಿದ್ದಿತು, ಆದರ ನನ್ನ ವಿಚಾರಣೆ ಮುಗಿದ ಮೇಲೆ ಇದು ನಿಲ್ಲಿಸಲ್ಪಟ್ಟಿತು ಸ ಪ್ರಾ. ಗಳಲ್ಲಿ ೧೯೩೨ ರಿಂದ, ಎ ತರಗತಿಯ ಅಥವಾ ಮೊದಲನೆ ಡಿವಿಜನ್ ಬಂದಿಗಳಿಗೆ (ಸರಕಾರವೇ ಆರಿಸಿದ) ಒಂದು ದೈನಿಕ ಪತ್ರಿಕೆಯನ್ನು ಕೊಡುತ್ತಿದ್ದರು ಇನ್ನೂ ಇತರ ಅನೇಕ ಪ್ರಾಂತಗಳಲ್ಲಿಯೂ ಹೀಗೆಯೇ ಇದ್ದಿತು. ಇದೇ ನಿಯಮವು ಬಂಗಾಳದಲ್ಲಿಯೂ ಅನ್ವಯಿಸಲ್ಪಡುವುದೆಂದು ನಾನು ನಂಬಿದ್ದೆ ಆದರೂ ದೈನಿಕ ಪತ್ರಿಕೆಯ ಬದಲು ನನಗೆ 'ಸ್ಟೇಟ್ಸ್‌ಮನ್' ವಾರಪತ್ರಿಕೆಯು ಬರುತ್ತಿದ್ದಿತು ಇದು ಇಂಗ್ಲೆಂಡಿಗೆ ಹಿಂತಿರುಗಿ ನೆಲೆಸಿದ್ದ ನಿವೃತ್ತ ಇಂಗ್ಲಿಷ್ ಅಧಿಕಾರಿಗಳಿಗೋ ವ್ಯಾಪಾರಿಗಳಿಗೋ ಉದ್ದೇಶಿಸಲ್ಪಟ್ಟ ಪತ್ರಿಕೆಯೆಂಬುದು ಸ್ಪಷ್ಟವಾಗಿದ್ದಿತು ಅವರಿಗೆ ಸ್ವಾರಸ್ಯವಾಗಿರಬಹುದಾದ ಸಂಕ್ಷಿಪ್ತ ಭಾರತೀಯ ಸಮಾಚಾರಗಳನ್ನು ಅದು ಒಳಗೊಂಡಿತ್ತು ವಿದೇಶೀ ಬಾತ್ಮಿಯಾವುದೂ ಅದರಲ್ಲಿ ಇರುತ್ತಿರಲಿಲ್ಲ, ನಾನು ಅದರ ಏಳಿಯನ್ನು ನಿಕಟವಾಗಿ ಹಿಂಬಾಲಿಸುತ್ತಿದ್ದುದರಿಂದ ಅದನ್ನು ಬಹಳವಾಗಿ ಕಳೆದುಕೊಂಡಂತಾಯಿತು ಅದೃಷ್ಟವಶದಿಂದ ನನಗೆ, 'ಮ್ಯಾಂಚೆಸ್ಟರ್ ಗಾರ್ಡಿಯನ್' ವಾರಪತ್ರಿಕೆಯನ್ನು ಓದಲು ಅವಕಾಶ ಕೊಟ್ಟಿದ್ದರು, ಮತ್ತು ಇದು ಯೂರೋಪ್ ಮತ್ತು ಅಂತರರಾಷ್ಟ್ರೀಯ ವಿಷಯಗಳನ್ನು ಕುರಿತ ನನ್ನ ಸಂಪರ್ಕವನ್ನು ಉಳಿಸಿತು

ಫೆಬ್ರುವರಿಯಲ್ಲಿ, ನನ್ನ ಬಂಧನವೂ ವಿಚಾರಣೆಯೂ ಮತ್ತು ಯೂರೋಪಿನ ಭಯಂಕರವಾದ ಸಂಘರ್ಷಣೆಗಳೂ ಮೇಲುಬ್ಬರಗಳೂ ಸಂಧಿಸಿದುವು ಫ್ರಾನ್ಸಿನಲ್ಲಿ ಅಂತಸ್ತಾಪವಿದ್ದಿತು ತತ್ಫಲವಾಗಿ ಫ್ಯಾಸಿಸ್ಟ್ ದೊಂಬಿಯೂ 'ರಾಷ್ಟ್ರೀಯ' ಸರಕಾರದ ರಚನೆಯೂ ಆದುವು; ಅದಕ್ಕಿಂತ ಕೆಟ್ಟದ್ದೆಂದರೆ, ಛಾನ್ಸೆಲರ್ ಡಾಲ್ಫಸರು ಆಸ್ಟ್ರಿಯದಲ್ಲಿ ಕೆಲಸಗಾರರನ್ನು ಗುಂಡಿನಿಂದ ಕೊಂದುಕೆಡವುತ್ತ, ಅಲ್ಲಿ ಸಾಮಾಜಿಕ ಪ್ರಜಾಸತ್ತೆಯ ದೊಡ್ಡ ಕಟ್ಟಡವನ್ನೇ ಉರುಳಿಸುತ್ತಿದ್ದರು ಆಸ್ಟ್ರಿಯನ್ ರಕ್ತಪಾತದ ವಾರ್ತೆಯು ನನ್ನನ್ನು ಬಹಳವಾಗಿ ಕುಗ್ಗಿಸಿತು ಈ ಪ್ರಪಂಚವು ಅದೆಷ್ಟು ಘೋರವಾದುದು, ಕ್ರೂರವಾದುದು, ಹಾಗೂ ಮಾನವನು ತನ್ನ ಸ್ವಾರ್ಥಗಳನ್ನು ಸಂರಕ್ಷಿಸಿ

ಕೊಳ್ಳುವಾಗ ಅದೆಷ್ಟು ಅನಾಗರಿಕನು ! ಇಡೀ ಯೂರೋಪಿನಲ್ಲೂ ಅಮೆರಿಕದಲ್ಲೂ ಫ್ಯಾಸಿಸಂ ಪ್ರಬಲವಾಗುತ್ತಿದ್ದಂತೆ ತೋರಿತು ಹಿಟ್ಲರರು ಜರ್ಮನಿಯಲ್ಲಿ ಸರ್ವಾಧಿಕಾರಕ್ಕೇರಿದಾಗ, ಅವರು ಜರ್ಮನಿಯ ಆರ್ಥಿಕ ಜಂಜಡಗಳಿಗೆ ಯಾವ ಪರಿಹಾರವನ್ನೂ ನೀಡುತ್ತಿರಲಿಲ್ಲವಾದ್ದರಿಂದ ಅವರ ಆಳ್ವಿಕೆಯು ನಿಡುಗಾಲ ಉಳಿಯದೆಂದು ನಾನು ಭಾವಿಸಿದ್ದೆ ಹಾಗೆಯೇ ಫ್ಯಾಸಿಸಂ ಎಲ್ಲೆಲ್ಲೂ ಹರಡುತ್ತಿದ್ದಾಗ ಪ್ರತೀಕಾರದ ಕೊನೆಗಾಣ್ಕೆಯನ್ನದು ಪ್ರತಿನಿಧಿಸಿತೆಂದು ಸಮಾಧಾನಪಟ್ಟುಕೊಂಡೆ ಅದಾದಮೇಲೆ ಬಂಧವಿಮೋಚನೆಯಾಗಲೇಬೇಕು ಆದರ ನನ್ನ ಆಶೆಯಿಂದಲೇ ನನ್ನ ಆಲೋಚನೆಯು ಆವಿರ್ಭವಿಸಲಿಲ್ಲವೇ ಎಂದು ನಾನು ಶಂಕಿಸಿದೆ ಈ ಫ್ಯಾಸಿಸ್ಟ್ ಅಲೆಯು ಅಷ್ಟು ಸುಲಭವಾಗಿ ಅಥವಾ ಶೀಘ್ರವಾಗಿ ಮೈದೆಗೆಯುವುದು ಅಷ್ಟು ಸ್ವತಸ್ಸಿದ್ಧವೇ ? ಒಂದು ವೇಳೆ ಸನ್ನಿವೇಶಗಳು ಫ್ಯಾಸಿಸ್ಟ್ ಸರ್ವಾಧಿಕಾರಗಳಿಗೆ ಅಸಹನೀಯವಾಗುವಂತಾದರೂ, ಅವು ಸೋಲಿಗೊಳಗಾಗುವುದಕ್ಕೆ ಪ್ರತಿಯಾಗಿ ತಮ್ಮ ದೇಶಗಳನ್ನು ವಿನಾಶಕ ಯುದ್ಧಭೂಮಿಗೆ ದೂಡುವುದಿಲ್ಲವೇ ? ಅಂಥ ಸಂಗ್ರಾಮವೊಂದರ ಪರಿಣಾಮವೇನು ?

ಏತನ್ಮಧ್ಯೆ, ನಾನಾ ವಿಧಗಳ ಮತ್ತು ರೂಪಗಳ ಫ್ಯಾಸಿಸಂ ಹರಡಿತು ನೂತನ 'ಪ್ರಾಮಾಣಿಕ ಜನರ ಪ್ರಜಾಧಿಪತ್ಯ' ವಾದ ಮತ್ತು ಯಾವುದನ್ನು ಯಾರೋ ಒಬ್ಬರು ಸರಕಾರಗಳ ಪ್ರತ್ಯಕ್ಷ 'ಮ್ಯಾಂಚೆಸ್ಟರ್ ಗಾರ್ಡಿಯನ್ನು' ಎಂದು ಕರೆದರೋ ಆ ಸ್ಪಿರಿಟು ಬಹಳ ಹಿಂದಕ್ಕೆ ಸರಿದು ಪ್ರತೀಕಾರದ ಆಳಕ್ಕೆ ಬಿದ್ದಿತ್ತು ಅದರ ಪ್ರಾಮಾಣಿಕರಾದ ಉದಾರವಾದಿ ಮುಂದಾಳುಗಳ ನವುರು ಮಾತುಗಳೆಲ್ಲವೂ ಅದು ಕಳಕ್ಕೆ ಜಾರುವುದನ್ನು ನಿಲ್ಲಿಸಿರಲಿಲ್ಲ ಎಲ್ಲೆಲ್ಲೂ ಉದಾರವಾದವು ಆಧುನಿಕ ಪರಿಸ್ಥಿತಿಗಳನ್ನು ಎದುರಿಸುವುದರಲ್ಲಿ ಸಂಪೂರ್ಣ ಅದಕ್ಷತೆಯನ್ನು ತೋರಿಸಿತು ಅದು ಪದಗಳಿಗೂ ವಾಕ್ಯಗಳಿಗೂ ಅಂಟಿಕೊಂಡು, ಅವು ಕರ್ಮದ ಸ್ಥಾನದಲ್ಲಿ ವಂದಿಸಬಹುದು ಎಂದುಕೊಂಡಿತು ಸಂದುಕಟ್ಟೊಂದು ಬಂದಾಗ, ಮುಗಿದುಹೋದ ಫಿಲ್ಮಿನ ಕೊನೆಯ ತುದಿಯಂತೆ ಅದು ಸುಮ್ಮನೆ ಮಾಯವಾಯಿತು

ಆಸ್ಟ್ರಿಯನ್ ರುದ್ರ ಪ್ರಕರಣವನ್ನು ಕುರಿತ 'ಮ್ಯಾಂಚೆಸ್ಟರ್ ಗಾರ್ಡಿಯನ್'ನ ಪ್ರಧಾನ ಲೇಖನಗಳನ್ನು ನಾನು ಕುತೂಹಲದಿಂದಲೂ ಮೆಚ್ಚಿಗೆಯಿಂದಲೂ ಓದಿದೆ. "ಈ ರಕ್ತಮಯ ಸಂಗ್ರಾಮದಿಂದ ಎಂತಹ ಆಸ್ಟ್ರಿಯವು ಹೊರಬೀಳುವುದು ? ರೈಫಲ್ ಮತ್ತು ಮೆಷಿನ್‌ಗನ್ ಸಮೇತವಾದ ಯೂರೋಪಿನ ತೀವ್ರ ಪ್ರತೀಕಾರಕ ಪಕ್ಷವೊಂದರಿಂದ ಆಳಲ್ಪಡುವ ಆಸ್ಟ್ರಿಯ" "ಆದರೆ ಇಂಗ್ಲೆಂಡು ಸ್ವಾತಂತ್ರ್ಯ ಧ್ಯೇಯಕ್ಕಾಗಿ ನಿಲ್ಲುವುದಾದರ, ಅದರ ಮುಖ್ಯ ಮಹಾ ಮಂತ್ರಿಗಳು ಏಕ ಬಾಯಿ ಮುಚ್ಚಿಕೊಂಡಿದ್ದಾರೆ ? ಸರ್ವಾಧಿಕಾರಗಳನ್ನು ಕುರಿತ ಅವರ ಕೈವಾರಗಳನ್ನು ನಾವು ಕೇಳಿದ್ದೇವೆ, ಅವು ಹೇಗೆ 'ರಾಷ್ಟ್ರವೊಂದರ ಆತ್ಮವನ್ನು ಬದುಕುವಂತೆ ಮಾಡುವುವು' ಮತ್ತು 'ಹೊಸ ಕಣಸನ್ನು ಮತ್ತು ನವಚೈತನ್ಯವನ್ನು ಅನುಗ್ರಹಿಸುವುವು'

ಎಂಬುದಾಗಿ ಅವರು ಹೇಳುವುದನ್ನು ನಾವು ಕೇಳಿದ್ದೇವೆ ಆದರೆ ಇಂಗ್ಲೆಂಡಿನ ಮುಖ್ಯ ಮಹಾ ಮಂತ್ರಿಗಳೊಬ್ಬರು, ಯಾವ ರಾಷ್ಟ್ರದಲ್ಲೇ ಆಗಲಿ, ಅನೇಕವೇಳೆ ದೇಹವನ್ನು ಕೊಲ್ಲುವ ಆದರೆ ಇನ್ನೂ ಬಹಳ ಹೆಚ್ಚು ವೇಳೆ ಆತ್ಮವನ್ನು ಭೀಕರವಾಗಿ ಕೊಲ್ಲುವ ಅಪರಾಜತ್ವಗಳನ್ನು ಕುರಿತು ಏನನ್ನಾದರೂ ಹೇಳುವುದು ಆವಶ್ಯಕ

ಹಾಗಾದರೆ 'ಮ್ಯಾಂಚೆಸ್ಟರ್ ಗಾರ್ಡಿಯನ್' ಪತ್ರಿಕೆಯು ಸ್ವಾತಂತ್ರ್ಯಧ್ಯೇಯಕ್ಕಾಗಿ ನಿಲ್ಲುವುದಾದರೆ, ಭಾರತದಲ್ಲಿ ಸ್ವಾತಂತ್ರ್ಯವು ನಿಗ್ರಹಿಸಲ್ಪಟ್ಟಿರುವಾಗ ಅದು ಏಕೆ ಬಾಯಿ ಮುಚ್ಚಿಕೊಂಡಿದೆ? ನಾವು ಕೂಡ ದೈಹಿಕ ಯಾತನೆಯನ್ನು ಮಾತ್ರವಲ್ಲದೆ ಆತ್ಮದ ಇನ್ನೂ ಹೆಚ್ಚು ತೀವ್ರವಾದ ಅಗ್ನಿ ಪರೀಕ್ಷೆಯನ್ನೂ ಅನುಭವಿಸಿದ್ದೇವೆ

"ಆಸ್ಟ್ರಿಯನ್ ಪ್ರಜಾಸತ್ತೆಯು ಹೋರಾಡುತ್ತಲೇ ತನ್ನ ಅಮರವಾದ ವೈಭವಕ್ಕೆ ನಾಗಿದ್ದರೂ, ಅದು ನಾಶವಾಗಿದೆ, ಮತ್ತು ಭಾವೀ ವರ್ಷಗಳಲ್ಲಿ ಒಂದು ದಿನ ಐರೋಪ್ಯ ಸ್ವಾತಂತ್ರ್ಯ ಧ್ಯೇಯವನ್ನು ಪುನಃ ಪ್ರಚೋದಿಸಬಹುದಾದ ಇತಿಕಥೆಯೊಂದನ್ನು ಹೀಗೆ ಸೃಷ್ಟಿಸಿದೆ"

"ಅಸ್ವತಂತ್ರವಾದ ಯೂರೋಪು ಉಸಿರಾಡದೆ ಇದೆ, ಆರೋಗ್ಯಕರ ಶಕ್ತಿಗಳ ಪ್ರವಾಹವಾಗಲಿ, ಪ್ರತಿ ಪ್ರವಾಹವಾಗಲಿ ಇಲ್ಲ, ಕ್ರಮಕ್ರಮವಾದ ಶ್ವಾಸಬಂಧನಕ್ಕೆ ಪ್ರಾರಂಭವಾಗಿದೆ, ಮತ್ತು ಪ್ರಚಂಡವಾದ ವಿಲಿವಿಲಿಯಾಗಲಿ ಅಥವಾ ಆಂತರಿಕ ರೋಗವಿಕಾರ ಮತ್ತು ಗುದ್ದಾಟವಾಗಲಿ ಬಳಿಸಾರುತ್ತಿರುವ ಮಾನಸಿಕ ಮೂರ್ಛೆ ವಿಶೇಷವನ್ನು ನಿವಾರಿಸಬಲ್ಲದು ರ್ಹೈನ್‌ನಿಂದ ಯೂರಲ್‌ಗಳವರೆಗೆ ಯೂರೋಪು ಒಂದು ಮಹಾ ಕಾರಾಗೃಹವಾಗಿದೆ."

ಬಗೆಯನ್ನು ಕದಡುವ ಈ ವಚನಗಳು ನನ್ನ ಹೃದಯದಲ್ಲಿ ಪ್ರತಿಧ್ವನಿತವಾದುವು ಆದರೆ ಭಾರತದ ವಿಷಯವೇನು ಎಂದು ಅರಿಯದಾದೆ 'ಮ್ಯಾಂಚೆಸ್ಟರ್ ಗಾರ್ಡಿಯನ್' ಆಗಲಿ ಅಥವಾ ಇಂಗ್ಲೆಂಡಿನಲ್ಲಿ ನಿಸ್ಸಂದೇಹವಾಗಿಯೂ ಇರತಕ್ಕ ಇತರ ಅನೇಕ ಸ್ವಾತಂತ್ರ್ಯ ಪ್ರೇಮಿಗಳಾಗಲಿ ನಮ್ಮ ಪಂಜರದ ವಿಚಾರದಲ್ಲಿ ಅಷ್ಟು ಉಪೇಕ್ಷೆಯಿಂದ ಇರಲು ಹೇಗೆ ತಾನೆ ಸಾಧ್ಯ? ಇತರ ಕಡೆಯಲ್ಲಿ, ಅಷ್ಟು ಉತ್ಸಾಹದಿಂದ ಅವರು ಯಾವುದನ್ನು ಖಂಡಿಸುತ್ತಾರೋ ಅದನ್ನು ಇಲ್ಲಿ ಅವರು ಹೇಗೆ ಕಾಣದೆ ಇರಬಲ್ಲರು? ಹತ್ತೊಂಬತ್ತನೆಯ ಶತಮಾನದ ಪರಂಪರೆಯಲ್ಲಿ ಶಿಕ್ಷಿತರಾದ, ಸಾವಧಾನ ಪ್ರವೃತ್ತಿಯುಳ್ಳ, ಮಾತಿನಲ್ಲಿ ಬಹಳ ಹಿಡತವುಳ್ಳ ಮಹಾ ಆಂಗ್ಲೇಯ ಉದಾರವಾದಿ ನಾಯಕರು ಇಪ್ಪತ್ತು ವರುಷಗಳಷ್ಟು ಹಿಂದೆ, ಮಹಾ ಯುದ್ಧಕ್ಕೆ ಸ್ವಲ್ಪವೇ ಮುಂಚೆ ಈ ರೀತಿ ಹೇಳಿದರು "ಶಾಸನವನ್ನು ನಿಗ್ರಹಿಸುವ ಪಾಶವೀ ಬಲದ ರುದ್ರವಿಜಯವನ್ನು ನೋಡುವ ಮೂಕ ಸಾಕ್ಷಿಗಳಾಗಿರುವುದಕ್ಕಿಂತ ಬಹಳ ಮುಂಚೆಯೇ ಈ ನಮ್ಮ ರಾಷ್ಟ್ರವನ್ನು ಇತಿಹಾಸದ ಪುಟದಿಂದ ತೊಡೆದೇಬಿಡುವುದನ್ನು ನಾನು ನೋಡಬಯಸು

ತ್ತೇನೆ " ವಾಗ್ವೈಭವದಿಂದ ಚಿತ್ರಿತವಾದ ಧೀರವಾದ ಆಲೋಚನೆ, ಮತ್ತು ಇಂಗ್ಲೆಂಡಿನ ಯುವಕರು ಲಕ್ಷಾಂತರ ಸಂಖ್ಯೆಗಳಲ್ಲಿ ಅದನ್ನು ಪ್ರತಿಪಾದಿಸಲು ಹೊರಟರು, ಆದರೆ ಮಿ॥ ಆಸ್ಕ್ವಿತ್‌ರವರ ಹೇಳಿಕೆಗೆ ಸಮಾನವಾದುದನ್ನು ಭಾರತೀಯನೊಬ್ಬನು ಕೊಡುವ ಸಾಹಸಮಾಡಿದರೆ ಅವನ ಗತಿಯೇನು ?

ರಾಷ್ಟ್ರೀಯ ಮನಶ್ಶಾಸ್ತ್ರವು ಒಂದು ತೊಡಕುತೊಡಕಾದ ವಿಷಯ ನಾವು ಎಷ್ಟು ನ್ಯಾಯಪರರೆಂದೂ ನಿಷ್ಪಕ್ಷಪಾತಿಗಳೆಂದೂ ನಮ್ಮಲ್ಲನೇಕರು ಭಾವಿಸಿಕೊಳ್ಳುತ್ತೇವೆ ಯಾವಾಗಲೂ ತಪ್ಪು ಬೇರೊಬ್ಬನದು, ಬೇರೊಂದು ರಾಷ್ಟ್ರದ್ದು ನಮ್ಮ ಮನಸ್ಸಿನ ಹಿಂದೆ, ಎಲ್ಲೋ ಒಂದು ಕಡೆ, ನಾವು ಇತರರಂತೆ ಅಲ್ಲವೆಂದು ನಮಗೆ ನಂಬಿಕೆಯಾಗಿ ಹೋಗಿದೆ, ನಮಗೂ ಅವರಿಗೂ ಇರುವ ವ್ಯತ್ಯಾಸವೊಂದನ್ನು ನಾವು ಅವಧಾರಣೆ ಮಾಡದಂತೆ ನಮ್ಮನ್ನು ನಮ್ಮ ಕಲಿತ ಒಳ್ಳೆಡತೆಯು ಸಾಮಾನ್ಯವಾಗಿ ತಡೆಯುವುದು ಮತ್ತು ನಾವು ಇತರ ರಾಷ್ಟ್ರಗಳನ್ನು ಅಂಕೆಯಲ್ಲಿಡುವ ಸಾಮ್ರಾಜಿಕ ಜನಾಂಗವಾಗುವಷ್ಟು ಅದೃಷ್ಟಶಾಲಿಗಳಾಗಿದ್ದರೆ, ಸಾಧ್ಯವಾದ ಎಲ್ಲ ಪ್ರಪಂಚಗಳಲ್ಲಿಯೂ ಅತ್ಯುತ್ತಮವಾದ ಈ ಪ್ರಪಂಚದಲ್ಲಿ ಎಲ್ಲವೂ ಶ್ರೇಯಸ್ಸಿಗಾಗಿ, ಎಂದೂ ಮತ್ತು ವ್ಯತ್ಯಾಸಕ್ಕಾಗಿ ಯಾರು ಚಳವಳಿ ನಡೆಸುವರೋ ಅವರು ಸ್ವಾರ್ಥಸಾಧಕರು, ಅಥವಾ ಮರುಳಿನಿಂದ ಹುಚ್ಚರು, ನಮ್ಮಿಂದ ಪಡೆದ ಲಾಭಗಳನ್ನು ಸ್ಮರಿಸದ ಕೃತಘ್ನರು, ಎಂದೂ ನಂಬಿಕೊಳ್ಳುವುದು ಕಷ್ಟವಲ್ಲ

ಬ್ರಿಟಿಷರು ಸಂಕುಚಿತ ದೃಷ್ಟಿಯನ್ನುಳ್ಳ ಜನಾಂಗ ಗೆಲುವಿನ ಮತ್ತು ಏಳಿಗೆಯ ನಿಡುಗಾಲದ ಕ್ರಮಾಗತಿಯು, ಅವರನ್ನು ಇತರರು ತಮಗಿಂತ ಕೀಳಾದವರೆಂದು ಕಾಣುವಂತೆ ಮಾಡಿವೆ ಏಕೆಂದರೆ ಅವರಿಗೆ, ಯಾರೋ ಒಬ್ಬರು ಹೇಳಿರುವಂತೆ, " ನೀಗ್ರೋ ಜನಾಂಗವು ಕ್ಯಾಲೈ ಪಟ್ಟಣದಿಂದ ಆರಂಭವಾಗುತ್ತದೆ " ಆದರೆ ಅದು ತೀರ ಸಾಮಾನ್ಯವಾದ ಸೂತ್ರ ಬ್ರಿಟಿಷ್ ಮೇಲ್ತರಗತಿಯ ಅಭಿಪ್ರಾಯದಲ್ಲಿ ಜಗತ್ತನ್ನು ಪ್ರಾಯಃ ಹೀಗೆ ವಿಭಾಗಿಸಬಹುದು (೧) ಬ್ರಿಟನ್–ದೀರ್ಘವಾದ ಶೂನ್ಯತೆ, ಆಮೇಲೆ (೨) ಬ್ರಿಟಿಷ್ ಡೊಮಿನಿಯನ್‌ಗಳು (ಬಿಳಿಯ ಜನಸಂಖ್ಯೆ ಮಾತ್ರ), ಮತ್ತು ಅಮೆರಿಕಾ (ಆಂಗ್ಲೋ–ಸಾಗ್ಸನರು ಮಾತ್ರ,–ಡ್ಯಾಗೋಗಳು, ವಾಪ್‌ಗಳು ಇತ್ಯಾದಿ ಮಿಶ್ರಜನಾಂಗ ಸಂಭೂತರಲ್ಲ), (೩) ಪಶ್ಚಿಮ ಯೂರೋಪು, (೪) ಯೂರೋಪಿನ ಉಳಿದ ಭಾಗಗಳು, (೫) ದಕ್ಷಿಣ ಅಮೆರಿಕಾ (ಲ್ಯಾಟಿನ್ ಜನಾಂಗಗಳು), ದೀರ್ಘವಾದ ಶೂನ್ಯತೆ, ಆಮೇಲೆ (೬) ಏಷ್ಯ ಮತ್ತು ಆಫ್ರಿಕಗಳ ಕಂದು ಬಣ್ಣದ, ಹಳದಿಯ ಮತ್ತು ಕರಿಯ ಜನಾಂಗಗಳು–ಹೆಚ್ಚು ಕಡಿಮೆ ಎಲ್ಲರನ್ನೂ ಒಟ್ಟಾಗಿ ಸೇರಿಸಿ

ಈ ಕೊನೆಯ ತರಗತಿಗಳಲ್ಲಿರುವ ನಾವು, ನಮ್ಮ ಆಡಳಿತಗಾರರು ನಾಸಿಸುತ್ತಿರುವ ಔನ್ನತ್ಯಗಳಿಂದ ಎಷ್ಟು ದೂರದಲ್ಲಿದ್ದೇವೆ! ನಮ್ಮ ಕಡೆ ಅವರು ನೋಡಿ

ದಾಗ ಅವರ ದೃಷ್ಟಿಯು ಮಂಕಾಗುವುದರಲ್ಲೂ, ನಾವು ಪ್ರಜಾಸತ್ತೆ ಮತ್ತು ಸ್ವಾತಂತ್ರ್ಯಗಳ ವಿಷಯವಾಗಿ ಮಾತನಾಡಿ ಅವರನ್ನು ಸಿಡಿಮಿಡಿಗುಟ್ಟಿಸುವುದರಲ್ಲೂ ಏನು ಆಶ್ಚರ್ಯ? ಆ ಪದಗಳು ನಮ್ಮ ಉಪಯೋಗಕ್ಕಾಗಿ ರಚಿತವಾಗಿರಲಿಲ್ಲ. ಭಾರತದಲ್ಲಿ ದೂರದ ಮುಬ್ಬಾದ ಭವಿಷ್ಯದಲ್ಲಿ ಕೂಡ, ಪ್ರಜಾಸತ್ತಾತ್ಮಕ ಸಂಸ್ಥೆಗಳ ಇರ್ಮೆಯನ್ನು ತಾವು ಕಲ್ಪಿಸಿಕೊಳ್ಳುವುದು ಅಸಾಧ್ಯವೆಂದು ಉಗ್ಗಡಿಸಿದವರು ದೊಡ್ಡ ಉದಾರವಾದಿ ರಾಜಕಾರಣಪಟುವಾದ ಜಾನ್ ಮಾರ್ಲೆಯವರೇ ಅಲ್ಲವೇ? ಕೆನಡದ ಪಶುರೋಮಕವಚದಂತೆ—ಭಾರತದ ವಾತಾವರಣಕ್ಕೆ ಪ್ರಜಾಸತ್ತೆಯು ಹಾಳತವಾಗಿರಲಿಲ್ಲ. ಅನಂತರ ಬ್ರಿಟನ್ನಿನ ಕೂಲಿಗಾರರ ಪಕ್ಷದವರು, ಸಮತಾವಾದ ಪತಾಕಧಾರಿ ನಾಯಕರು, ಬ್ರಿಟನ್ನಿನ ತುಳಿಯಲ್ಪಟ್ಟವರ ಪ್ರತಿನಿಧಿಗಳು, ತಮ್ಮ ಗೆಲುವಿನ ಸುಗ್ಗಿಯ ಹಿಗ್ಗಿನಲ್ಲಿ ನಮಗೆ ೧೯೨೪ರಲ್ಲಿ ಬಂಗಾಳದ ಆರ್ಡಿನೆನ್ಸುಗಳ ಪುನರುಜ್ಜೀವನದ ಪ್ರಸಾದವನ್ನು ಕೊಟ್ಟರು. ಅವರು ಎರಡನೆಯ ಸಲ ಆಳಿದಾಗ ನಮ್ಮ ಗತಿಯು ಇನ್ನೂ ಹಾಳಾಯಿತು. ನಮಗೆ ಕೆಟ್ಟದನ್ನು ಮಾಡಬೇಕೆಂಬ ದುರುದ್ದೇಶವು ಅವರಾರಿಗೂ ಮನಸ್ಸಿನಲ್ಲಿರಲಿಲ್ಲವೆಂದು ನನಗೆ ನಂಬಿಕೆಯಿದೆ. ಅವರು ಅತ್ಯುತ್ತಮ ವೇದಿಕೆಯ ವಿಧಾನದಲ್ಲಿ ನಮ್ಮನ್ನು ಕುರಿತು ಭಾಷಣ ಮಾಡುವಾಗ—'ನಮ್ಮ ಕಟ್ಟೊಕ್ಕಲ್ತ್ರಿಯ ಸೋದರರೇ'—ತಮ್ಮ ಸದ್ಗುಣವನ್ನು ಅರಿತುಕೊಂಡ ಉಬ್ಬನ್ನು ಅವರು ಅನುಭವಿಸುತ್ತಾರೆ. ಆದರೆ ಅವರ ಅಭಿಪ್ರಾಯದಲ್ಲಿ ನಾವು ಅವರಂತೆ ಇಲ್ಲ. ನಾವು ಬೇರೆ ಅಳತೆಗೋಲುಗಳಿಂದಲೇ ಅಳೆಯಲ್ಪಡಬೇಕು. ಭಾಷಾ ಸಂಸ್ಕೃತಿಗಳ ಭಿನ್ನತೆಗಳ ಕಾರಣದಿಂದ ಫ್ರೆಂಚನೂ ಆಂಗ್ಲೇಯನೂ ಇಬ್ಬರೂ ಒಂದೇ ತೆರನಾಗಿ ಯೋಚಿಸುವುದು ಕಷ್ಟ, ಹೀಗಿರುವಾಗ ಆಂಗ್ಲೇಯನಿಗೂ ಏಷ್ಯದವನಿಗೂ ಇರತಕ್ಕ ವ್ಯತ್ಯಾಸವು ಎಷ್ಟು ಹೆಚ್ಚು ವಿಶಾಲವಾಗಿರಬೇಕು?

ಮೊನ್ನೆಮೊನ್ನೆ ಹೌಸ್ ಆಫ್ ಲಾರ್ಡ್ಸಿನಲ್ಲಿ ಭಾರತೀಯ ರಾಜ್ಯಾಂಗ ಸುಧಾರಣಾ ಸಮಸ್ಯೆಯನ್ನು ಕುರಿತ ಚರ್ಚೆಯು ನಡೆಯಿತು. ಘನವಂತರಾದ ಲಾರ್ಡುಗಳು ಅನೇಕ ಜ್ಞಾನಪ್ರದ ಭಾಷಣಗಳನ್ನು ಮಾಡಿದರು. ಆ ಭಾಷಣಗಳ ಪೈಕಿ, ಹಿಂದೆ ಭಾರತದಲ್ಲಿ ಪ್ರಾಂತೀಯ ಗವರ್ನರ್‌ರೂ ಕೆಲವು ಕಾಲ ಹಂಗಾಮಿ ವೈಸ್‌ರಾಯ್‌ರೂ ಆಗಿದ್ದ ಲಾರ್ಡ್ ಲಿಟ್ಟನರು ಮಾಡಿದ ಭಾಷಣವೊಂದು. ಅವರು ಉದಾರವಾದಿ ಮತ್ತು ಸಹಾನುಭೂತಿಯುಕ್ತ ಗವರ್ನರ್ ಎಂದು ಅನೇಕವೇಳೆ ಹೇಳಲಾಗಿದೆ. ಅವರು "ಇಂಡಿಯಾ ಸರಕಾರವು ಒಟ್ಟಿನಲ್ಲಿ ಕಾಂಗ್ರೆಸ್ಸಿನ ರಾಜಕಾರಣಪಟುಗಳಿಗಿಂತ ಬಹಳ ಹೆಚ್ಚಾಗಿಯೇ ಭಾರತದ ಪ್ರತಿನಿಧಿ. ಇಂಡಿಯಾ ಸರಕಾರವು ಅಧಿಕಾರಿಗಳು, ಸೈನ್ಯ, ಪೊಲೀಸು, ದೇಶೀಯ ಸಂಸ್ಥಾನಾಧೀಶರು, ಸೈನ್ಯಾಂಗಗಳು ಮತ್ತು ಹಿಂದೂ ಮತ್ತು ಮುಸಲ್ಮಾನರು ಇವರೆಲ್ಲರ ಪರವಾಗಿಯೂ ಮಾತನಾಡಲು ಸಮರ್ಥವಾಗಿದ್ದಿತು. ಕಾಂಗ್ರೆಸ್ ರಾಜಕಾರಣ ಪಟುಗಳಿಗಾದರೋ ಭಾರತದ ಒಂದು

ದೊಡ್ಡ ಪಕ್ಷದ ಪರವಾಗಿ ಕೂಡ ಮಾತನಾಡುವ ಯೋಗ್ಯತೆಯಿರಲಿಲ್ಲ," ಎಂದು ಹೇಳಿರುವುದಾಗಿ ವರದಿಯಿದೆ.* ಅವರ ಅಭಿಪ್ರಾಯವನ್ನು ಚೆನ್ನಾಗಿ ಸ್ಪಷ್ಟಪಡಿಸುವುದಕ್ಕಾಗಿ ಅವರು ಹೀಗೆ ವಿವರಿಸಿದರು "ಭಾರತೀಯರ ಅಭಿಪ್ರಾಯವೆಂದು ನಾನು ಹೇಳುವಾಗ ನಾನು, ಯಾರ ಸಹಕಾರವನ್ನು ಆಶ್ರಯಿಸಬೇಕಾಗಿತ್ತೋ ಮತ್ತು ಭಾವಿ ಗವರ್ನರ್‌ಗಳೂ ಮತ್ತು ವೈಸ್‌ರಾಯ್‌ಗಳೂ ಯಾರ ಸಹಕಾರವನ್ನು ಆಶ್ರಯಿಸಬೇಕಾಗುವುದೋ ಅವರನ್ನು ಮನಸ್ಸಿನಲ್ಲಿಟ್ಟುಕೊಂಡು ಮಾತನಾಡುತ್ತಿದ್ದೇನೆ"

ಈ ಭಾಷಣದಿಂದ ಎರಡು ಸ್ವಾರಸ್ಯವಾದ ಅಂಶಗಳು ಹೊರಬೀಳುತ್ತವೆ ಲೆಕ್ಕಕ್ಕೆ ಬರುವ ಭಾರತವೆಂದರೆ, ಬ್ರಿಟಿಷರಿಗೆ ಸಹಾಯಮಾಡುವವರು, ಮತ್ತು ಇಂಡಿಯದ ಬ್ರಿಟಿಷ್ ಸರಕಾರವು ಅತ್ಯಂತ ಪ್ರಾತಿನಿಧಿಕವಾದ ಸಂಸ್ಥೆ, ಆದುದರಿಂದ, ದೇಶದಲ್ಲಿನ ಅತ್ಯಂತ ಪ್ರಜಾಸತ್ತಾತ್ಮಕವಾದ ಸಂಸ್ಥೆ ಈ ವಾದವನ್ನು ಘನಗಂಭೀರವಾಗಿ ಮಂಡಿಸುವುದೆಂದರೆ ಸುಯೆಸ್ ಕಾಲುವೆಯನ್ನು ದಾಟಿದ ಮೇಲೆ ಇಂಗ್ಲಿಷ್ ಪದಗಳ ಅರ್ಥಗಳು ವ್ಯತ್ಯಸ್ತವಾಗುವುವೆಂದು ಈ ವಾದ ಸರಣಿಯಲ್ಲಿ ಮುಂದಿನ ಸ್ಪಷ್ಟವಾದ ಹೆಜ್ಜೆಯೆಂದು ನಿರಂಕುಶ ಆಡಳಿತವೇ ಅತ್ಯಂತ ಪ್ರಾತಿನಿಧಿಕವೂ ಪ್ರಜಾಸತ್ತಾತ್ಮಕವೂ ಆದ ರೂಪ, ಏಕೆಂದರೆ ಪ್ರಭುವು ಪ್ರತಿಯೊಬ್ಬ ಪ್ರಜೆಯನ್ನೂ ಪ್ರತಿನಿಧಿಸುತ್ತಾನೆ ಎಂದರೆ ನಾವು "ಪೃಥ್ವೀಪತಿಯು ದೇವಾಂಶ ಸಂಭೂತನು, ಅವನ ಬಾಧ್ಯತೆಗಳನ್ನು ಕುರಿತು ಆಕರಿಸುವನಲ್ಲ," ಎಂಬ ತತ್ವಕ್ಕೆ ಹಿಂತಿರುಗುತ್ತೇವೆ

ವಾಸ್ತವವಾಗಿಯೂ ಶುದ್ಧ ನಿರಂಕುಶ ಪ್ರಭುತ್ವವು ಕೂಡ ಈಚೆಗೆ ಪ್ರಸಿದ್ಧ ಸಮರ್ಥಕರೊಬ್ಬರನ್ನು ಹೊಂದಿದೆ ಇಂಡಿಯನ್ ಸಿವಿಲ್ ಸರ್ವಿಸ್ಸಿನ ಭೂಷಣಪ್ರಾಯರಾದ ಸರ್ ಮ್ಯಾಲ್ ಕಂ ಹೈಲಿಯುಯವರು ಸಂಯುಕ್ತ ಪ್ರಾಂತಗಳ ಗವರ್ನರ್ ವಾಣಿಯಿಂದ ೧೯೩೪ ನಯು ನವಂಬರ್ ೫ ನೆಯ ತೇದಿ ಕಾಶಿಯಲ್ಲಿ ಭಾಷಣಮಾಡುತ್ತ ದೇಶೀಯ ಸಂಸ್ಥಾನಗಳಲ್ಲಿ ನಿರಂಕುಶ ಪ್ರಭುತ್ವವಿರಬೇಕೆಂದು ವಾದಿಸಿದರು ಈ ಬುದ್ಧಿವಾದವನ್ನು ಕೊಡಬೇಕಾಗಿಯೇ ಇಲ್ಲ ಏಕೆಂದರೆ ಯಾವ ದೇಶೀಯ ಸಂಸ್ಥಾನವೂ ತನ್ನ ಸ್ವಂತ ಇಚ್ಛೆಯಿಂದ ನಿರಂಕುಶ ಪ್ರಭುತ್ವವನ್ನು ಬಿಟ್ಟುಬಿಡುವ ಸಂಭವವಿಲ್ಲ ಯೂರೋಪಿನಲ್ಲಿ ಪ್ರಜಾಸತ್ತೆಯು ವಿಫಲವಾಗುತ್ತಿರುವುದೆಂಬ ನೆಪದಿಂದ ಈ ನಿರಂಕುಶ ಪ್ರಭುತ್ವವನ್ನು ಕಾಪಾಡುವ ಪ್ರಯತ್ನವು ಸ್ವಾರಸ್ಯಕರವಾದ ಬೆಳವಣಿಗೆಯೊಂದು ಮೈಸೂರು ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲರು, "ಎಲ್ಲೆಲ್ಲೂ ಪಾರ್ಲಿಮೆಂಟರಿ ಪ್ರಜಾಸತ್ತೆಯು ಅಪಜಯ ಹೊಂದುತ್ತಿರುವಾಗ ಆಮೂಲಾಗ್ರ ಸುಧಾರಣೆಗಳನ್ನು ಕುರಿತ ವಾದ ನಡೆಯುತ್ತಿರುವುದಕ್ಕಾಗಿ ಆಶ್ಚರ್ಯವನ್ನು" ವ್ಯಕ್ತಪಡಿಸಿದ್ದಾರೆ "ನಮ್ಮ ಪ್ರಚಲಿತ ರಾಜ್ಯಾಂಗರಚನೆಯು ಸರ್ವವ್ಯಾವಹಾರಿಕೋದ್ದೇಶಗಳ ಮಟ್ಟಿಗೆ ಸಾಕಷ್ಟು ಪ್ರಜಾಸತ್ತಾತ್ಮಕವಾಗಿದೆಯೆಂದು ಸಂಸ್ಥಾನದ ಅಂತರಾತ್ಮವು

* ಹೌಸ್ ಆಫ್ ಲಾರ್ಡ್ಸ್, ಡಿಸೆಂಬರ್ ೧೭, ೧೯೩೪

ತಿಳಿದಿದೆಯೆಂದು ನನ್ನ ದೃಢವಾದ ನಂಬಿಕೆ" * ಮೈಸೂರಿನ 'ಅಂತರಾತ್ಮವು,' ಊಹೆಗೆ ಸಿಕ್ಕುವಂತೆ, ಅಲ್ಲಿಯ ಪ್ರಭುಗಳ ಮತ್ತು ಅವರ ದಿವಾನರ ತತ್ವಶಾಸ್ತ್ರೀಯವಾದ ಅಮೂರ್ತಭಾವನೆಯೊಂದಾಗಿದೆ ಸದ್ಯದಲ್ಲಿ ಮೈಸೂರಿನಲ್ಲಿ ಪ್ರಾಬಲ್ಯದಲ್ಲಿರುವ ಪ್ರಜಾಸತ್ತೆಯನ್ನು ನಿರಂಕುಶ ಪ್ರಭುತ್ವದಿಂದ ವ್ಯಕ್ತೀಕರಿಸಿ ಭೇದಕಾಣಲಸಾಧ್ಯ

ಪ್ರಜಾಸತ್ತೆಯು ಭಾರತಕ್ಕೆ ಹಾಳತವಾಗಿರದಿದ್ದರೆ ಹಾಗೆಯೇ ಈಜಿಪ್ಟಿಗೂ ಹಾಳತವಾಗವುದಿಲ್ಲ ಕೈರೋವಿನಿಂದ ಬಂದ ಒಂದು ದೀರ್ಘವಾದ ವರದಿಯನ್ನು 'ಸ್ಟೇಟ್ಸ್‌ಮನ್' ಪತ್ರಿಕೆಯಲ್ಲಿ ನಾನು ಈಗತಾನೆ ಓದಿದೆ † (ಈಗ ಇಲ್ಲಿ ನನಗೆ ಆ ಪತ್ರಿಕೆಯನ್ನು ಕೂಡುತ್ತಿದ್ದಾರ) ಅದರಲ್ಲಿ ಮುಖ್ಯ ಮಹಾ ಮಂತ್ರಿ ನೆಸ್ಸಿಂ ಪಾಷಾರವರು "ಹೊಸದೊಂದು ರಾಜ್ಯಾಂಗ ರಚನೆಯ ಪರಿಷ್ಕರಣಕ್ಕಾಗಿ ಒಂದು ರಾಷ್ಟ್ರೀಯ ಸಮ್ಮೇಳನವನ್ನು ಕೂಡಿಸುವುದಕ್ಕಾಗಿಯೋ ಅಥವಾ ಕಾನ್ಸ್‌ಟಿಟ್ಯುಯೆಂಟ್ ಅಸೆಂಬ್ಲಿಯೊಂದಕ್ಕಾಗಿ ಚುನಾವಣೆಗಳನ್ನು ನಡೆಸುವುದಕ್ಕಾಗಿಯೋ ತಾನು ರಾಜಕೀಯ ಪಂಗಡಗಳು ಅದರಲ್ಲಿಯೂ ವಿಶೇಷವಾಗಿ ವ್ಯಾಫ್ಡ್ ಪಕ್ಷವು ಸಹಕರಿಸುವಂತೆ ಮಾಡುವ ಆಶೆ ತನಗಿದೆ ಎಂಬುದಾಗಿ ಹೊರಗೆಡಹಿದ ಪ್ರಕಟಣೆಯು ಉತ್ತರವಾದಿತ್ವ ಪುನಃ ಪ್ರವೃತ್ತಿಯುಳ್ಳ ಪಕ್ಷಗಳಲ್ಲಿ ಬೇಕಾದಷ್ಟು ಭೀತಿಯನ್ನುಂಟುಮಾಡಿದ ಕೊನೆಗೆ, ಹೀಗೆಂದರೆ ಜನಪ್ರಿಯವಾದ ಪ್ರಜಾಸತ್ತಾತ್ಮಕ ಸರಕಾರದ ಆಡಳಿತಕ್ಕೆ ಹಿಂತಿರುಗಿ ಸ್ಥಾಪಿಸಿದಂತೆ ಗತ ಚರಿತ್ರೆಯು ತೋರಿಸುವಂತೆ ಇದು ಈಜಿಪ್ಟಿಗೆ ಯಾವಾಗಲೂ ವಿನಾಶಕಾರಿಯಾದುದಾಗಿದ ಏಕೆಂದರೆ ಹಿಂದೆ ಯಾವಾಗಲೂ ಅದು ಜನಬೊಂಬುಳಿಯ ಅತಿ ನೀಚ ರಾಗಾವೇಶಗಳನ್ನು ತುಚ್ಛ ರೀತಿಯಲ್ಲಿ ಪೋಷಿಸಿದೆ ಈಜಿಪ್ಟಿನ ರಾಜಕಾರಣದ ಮತ್ತು ಜನಗಳ ಅಂತಃಪ್ರವೃತ್ತಿಯು ಸ್ವಲ್ಪವನ್ನಾದರೂ ತಿಳಿದಿರುವ ಯಾರೂ ಚುನಾವಣೆಗಳು ವ್ಯಾಫ್ಡ್ ಪಕ್ಷದವರನ್ನು ಬಹು ಸಂಖ್ಯೆಗಳಲ್ಲಿ ಅಸೆಂಬ್ಲಿಗೆ ಪುನಃ ಆರಿಸಿ ಕಳುಹಿಸುವುದರಲ್ಲಿ ಫಲಗೊಳ್ಳುವುದು ಎಂಬುದನ್ನು ಕುರಿತು ಕ್ಷಣ ಮಾತ್ರವೂ ಸಂದೇಹಪಡುವುದಿಲ್ಲ ಈ ಕಾರ್ಯಕ್ರಮವನ್ನು ತಡೆಗಟ್ಟಲು ಏನಾದರೂ ಒಂದನ್ನು ಮಾಡದಿದ್ದರೆ, ಸ್ವಲ್ಪ ಕಾಲದಲ್ಲಿಯೇ ಪುನಃ ಒಂದು ಅತಿ—ಪ್ರಜಾಸತ್ತಾತ್ಮಕ ವಿದೇಶಿ—ವಿರೋಧಿ ಕ್ರಾಂತಿಕಾರಕ ಪ್ರಭುತ್ವವು ನಮ್ಮ ಮೇಲೆ ಕುಳಿತುಕೊಳ್ಳುತ್ತದೆ"

"ವ್ಯಾಫ್ಡ್ ಪಕ್ಷಕ್ಕೆ ಸರಿತೂಗುವುದಕ್ಕೋಸ್ಕರ" ಚುನಾವಣೆಗಳು ಆಡಳಿತದ ಒತ್ತಡದಿಂದ "ನಡೆಸಲ್ಪಡಬೇಕು" ಎಂದು ಸೂಚನೆಯಿದೆ ಆದರೆ ದುರದೃಷ್ಟವಶಾತ್ ಮುಖ್ಯ ಮಹಾ ಮಂತ್ರಿಗಳಿಗೆ "ಅತಿಯಾದ ನ್ಯಾಯಬದ್ಧ ಪ್ರವೃತ್ತಿ"ಯಿರುವು

---

* ಮೈಸೂರು ಜೂನ್ ೨೧, ೧೯೩೪ 'ವಿರೋಧಾಭಾಸಗಳು' ಎಂಬ ಅಧ್ಯಾಯದಲ್ಲಿ ಏತತ್ಸಂಬಂಧವಾದ ಟಿಪ್ಪಣಿಯನ್ನು ನೋಡಿ

† ಡಿಸೆಂಬರ್ ೧೯, ೧೯೩೪

ದರಿಂದ ಅವರು ಇಂಥದಾವುದನ್ನೂ ಮಾಡಲಾರರು ಇನ್ನು ಉಳಿದಿರುವ ಒಂದೇ ದಾರಿಯೆಂದರೆ, ಶ್ವೇತ ಭವನವು ತಲೆಹಾಕಿ, ಈ ವಿಧವಾದ "ಆಡಳಿತದ ಪುನರಾಗಮನವನ್ನು ಅದು ಸ್ಥಿರಿಸುವುದಿಲ್ಲವೆಂದು ತಿಳಿಸುವುದು"

ಶ್ವೇತ ಭವನವು ಯಾವ ಕಾರ್ಯಕ್ರಮವನ್ನು ಕೈಕೊಳ್ಳುವುದೋ ಯಾವ ಕಾರ್ಯಕ್ರಮವನ್ನು ಕೈಕೊಳ್ಳದಿರುವುದೋ ಅಥವಾ ಈಜಿಪ್ಟಿನಲ್ಲಿ ಏನಾಗುವುದೋ ನಾನು ಹೇಳಲಾರೆ * ಆದರೆ ಸ್ವಾತಂತ್ರ್ಯ ಪ್ರೇಮಿಯಂತೆ ತೋರುವ ಆಂಗ್ಲೇಯನೊಬ್ಬನು ಮಂಡಿಸಿರುವ ಈ ವಾದವು ಈಜಿಪ್ಟಿನ ಮತ್ತು ಭಾರತದ ಪರಿಸ್ಥಿತಿಯ ತೊಡಕುಗಳಲ್ಲಿ ಕೆಲವನ್ನು ಸ್ವಲ್ಪಮಟ್ಟಿಗೆ ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ 'ಸ್ಟೇಟ್ಸ್‌ಮನ್' ಪತ್ರಿಕೆಯು ತನ್ನ ಪ್ರಧಾನಲೇಖನದಲ್ಲಿ ಹೇಳುವಂತೆ, "ಯಾವ ವಿಧವಾದ ಜೀವನಕ್ರಮ ಮತ್ತು ನಿಷ್ಕೃಷ್ಟ ಮನೋಭಾವಗಳಿಂದ ಪ್ರಜಾಸತ್ತೆಯು ಬೆಳವಣಿಗೆ ಹೊಂದುವುದೋ ಅವೂ ಸಾಮಾನ್ಯ ಈಜಿಪ್ಷಿಯನ್ ಮತದಾರನ ಜೀವನಕ್ರಮ ಮತ್ತು ನಿಷ್ಕೃಷ್ಟ ಮನೋಭಾವಗಳೂ ಸಮಶ್ರುತಿಗಳಲ್ಲ ಇದೇ ಮೂಲ ಅರಿಷ್ಟ" ಸಂಸ್ಕೃತಿಯ ಅಭಾವಕ್ಕೆ ಮುಂದೆ ನಿದರ್ಶನ ಕೊಡಲಾಗಿದೆ, "ಈ ಯೂರೋಪಿನಲ್ಲಿ, ಅತ್ಯನೇಕ ಪಕ್ಷಗಳ ಇರ್ಮೆಯಿಂದ ಪ್ರಜಾಸತ್ತೆಗಳು ಅನೇಕ ವೇಳೆ ಮುರಿದುಬಿದ್ದಿವೆ, ಈಜಿಪ್ಟಿನಲ್ಲಿ ಏಕಮಾತ್ರ ಪಕ್ಷವಾದ ವ್ಯಾಫ್ಡಿನ ಇರ್ಮೆಯೇ ತೊಂದರೆಗೆ ಕಾರಣವಾಗಿವೆ"

ಭಾರತದಲ್ಲಿ ನಮ್ಮ ಕೋಮುವಾರು ವರ್ಗಗಳು ನಮ್ಮ ಪ್ರಜಾಸತ್ತಾತ್ಮಕ ಪ್ರಗತಿಗೆ ಪ್ರತಿಬಂಧಕವಾಗಿರುವುವು, ಎಂದು ನಮಗೆ ಹೇಳುತ್ತಾರೆ ಆದುದರಿಂದ ಪ್ರತಿವಾದಿಸಲಸಾಧ್ಯವಾದ ತರ್ಕದ ಪ್ರಕಾರ ಆ ವರ್ಗಗಳ ಇರವು ಶಾಶ್ವತಗೊಳಿಸಲ್ಪಡುತ್ತದೆ. ನಾವು ಸಾಕಷ್ಟು ಐಕ್ಯತೆಯನ್ನು ಪಡೆದಿಲ್ಲವೆಂದೂ ಹೇಳುತ್ತಾರ ಈಜಿಪ್ಟಿನಲ್ಲಿ ಕೋಮುವಾರು ಪಂಗಡಗಳಿಲ್ಲ, ಮತ್ತು ಅತಿಸಮಗ್ರ ರಾಜಕೀಯ ಐಕ್ಯತೆಯು ನೆಲೆಸಿದೆಯಂತೆ ಇಷ್ಟಾದರೂ ಈ ಐಕ್ಯತೆಯೇ ಪ್ರಜಾಸತ್ತೆಗೂ ಸ್ವಾತಂತ್ರ್ಯಕ್ಕೂ ಪ್ರತಿಬಂಧಕವಾಗಿಬಿಡುತ್ತದೆ! ಸತ್ಯವಾಗಿಯೂ ಪ್ರಜಾಸತ್ತೆಯ ಹಾದಿಯು ನೇರವಾಗಿಯೂ ಇಕ್ಕಟ್ಟಾಗಿಯೂ ಇದೆ ಪೌರ್ವಾತ್ಯ ರಾಜ್ಯವೊಂದಕ್ಕೆ ಪ್ರಜಾಸತ್ತೆಯೆಂದರೆ ಒಂದೇ ಒಂದು ಮಾತ್ರವೆಂದು ತೋರುತ್ತದೆ ಸಾಮ್ರಾಜಿಕ ಪ್ರಭುಶಕ್ತಿಯ ಆಜ್ಞೆಗಳನ್ನು ನಡೆಸುವುದು ಮತ್ತು ಅದರ ಸ್ವಾರ್ಥಗಳಾವುದರ ಸುದ್ದಿಗೂ ಹೋಗದಿರುವುದು ಈ ನಿಯಮವನ್ನು ಅಂಕೆಯಾಗಿಟ್ಟುಕೊಂಡರೆ ಪ್ರಜಾಸತ್ತಾತ್ಮಕ ಸ್ವಾತಂತ್ರ್ಯವು ನಿರ್ಬಾಧಿತವಾಗಿ ಬೆಳೆಯುತ್ತಾ ಹೋಗಬಹುದು.

---

* ನವೆಂಬರ್ ೧೯೩೫ ರಲ್ಲಿ, ಈಜಿಪ್ಟಿನ ಬ್ರಿಟಿಷ್ ಆಕ್ರಮಣಕ್ಕೆ ವಿರೋಧವಾಗಿ ವಿಶಾಲ ವ್ಯಾಪ್ತ ರಾಜಕೀಯ ದಂಗೆಗಳಾದುವು

## ೬೧

# ಭಗ್ನ ಹೃದಯ

"ಎನ್ನ ತಲೆಯೊರಗಿಸಲು ಕಡಿದಾಗಿ ಆಶಿಪೆನು
ಹುಲ್ಲಿಲ್ಲಿ ತಂಪಾಗಿ ಸವಿಗಂಪು ಬೀರುವುದೂ
ತಾಯೆ, ಕನಸುಗಳೆಲ್ಲ ಸರಿದೋಡಿ ಹೋಗಿಹವು
ನಿನ್ನಡಿಯ ಬಳಿಯಿರುವ ಬಸವಳಿದ ಕಂದನಿಂ"

ಏಪ್ರಿಲ್ ಬಂದಿತು ಆಲಿಪುರದ ಸೆರೆಮನೆಯ ನನ್ನ ಕೋಣೆಗೆ ಹೊರಗಡೆಯ ಸುದ್ದಿಗಳು ಬಂದವು ಅವು ಅಹಿತವಾಗಿಯೂ ಗೊಂದಲವೆಬ್ಬಿಸುವುವಾಗಿಯೂ ಇದ್ದವು. ಒಂದು ದಿನ ಸೆರೆಮನೆಯ ಸೂಪರಿಂಟೆಂಡೆಂಟರು, ಮಿ|| ಗಾಂಧಿಯು ಶಾಸನ ಭಂಗವನ್ನು ನಿಲ್ಲಿಸಿದ್ದರೆಂದು ಹೇಳಿದರು ನನಗೆ ತಿಳಿದುದು ಅಷ್ಟೇ ಸುದ್ದಿಯನ್ನು ಕೇಳಿ ನನಗೆ ಸಂತೋಷವಾಗಲಿಲ್ಲ ಇಷ್ಟು ವರ್ಷಗಳ ಕಾಲ ನನ್ನ ಜೀವಕ್ಕೆ ಹೊಂದಿಕೊಂಡಿದ್ದ ಮತ್ತು ಜೀವನದಲ್ಲಿ ಮುಖ್ಯವಾಗಿದ್ದ ವಿಷಯವು ಕೊನೆಗಂಡುದರಿಂದ ನನಗೆ ದುಃಖವುಂಟಾಯಿತು ಆದರೂ ಕೊನೆಯು ಬರಲೇಬೇಕಾಗಿದ್ದಿತೆಂದು ನಾನು ಸಕಾರಣವಾಗಿಯೇ ಯೋಚಿಸಿದ್ದೆ ನನ್ನ ಹೃದಯದಲ್ಲಿ, ಸದ್ಯಕ್ಕಾದರೂ ಶಾಸನ ಭಂಗವು ನಿಲ್ಲಿಸಲ್ಪಡುವುದೆಂಬ ಯೋಚನೆ ಇದ್ದೇ ಇದ್ದಿತು ವ್ಯಕ್ತಿಗಳು, ಬಹಳ ಕಾಲದವರೆಗೆ, ಫಲಗಳ ಕಡೆಗೆ ಲಕ್ಷ್ಯವನ್ನು ಕೊಡದೆ ಶಾಸನ ಭಂಗವನ್ನು ಆಚರಿಸುತ್ತಲೇ ಇರಬಹುದು ಆದರ ರಾಷ್ಟ್ರೀಯ ಸಂಸ್ಥೆಗಳು ಹಾಗೆ ಮಾಡಲು ಆಗುವುದಿಲ್ಲ ಗಾಂಧಿಜಿಯವರು ದೇಶದ ಮತ್ತು ಕಾಂಗ್ರೆಸ್ಸಿನವರ ಮನೋಭಾವವನ್ನು ಕಾರ್ಯರೂಪಕ್ಕೆ ತಂದಿದ್ದರೆಂಬುದರಲ್ಲಿ ನನಗೆ ಸಂದೇಹವಿರಲಿಲ್ಲ ಆ ಹೊಸ ಪರಿಸ್ಥಿತಿಯು ನನಗೆ ಅಹಿತವಾಗಿ ಕಂಡರೂ ಅದರೊಂದಿಗೆ ಒಂದಾಗಲು ನಾನು ಪ್ರಯತ್ನಪಟ್ಟೆ

ಶಾಸನ ಸಭೆಗಳನ್ನು ಪ್ರವೇಶಿಸಬೇಕೆಂದು ಹಳೆಯ ಸ್ವರಾಜ್ಯ ಪಕ್ಷದ ಪುನರ್ನಿರ್ಮಾಣವಾಗುವುದೆಂಬ ಸುದ್ದಿಯೂ ನನಗೆ ಸ್ವಲ್ಪ ಸ್ವಲ್ಪ ತಿಳಿಯಿತು ಅದೂ

ಕೂಡ ಅನಿವಾರ್ಯವೇ ಆಗಿದ್ದಿತು ಕಾಂಗ್ರೆಸ್ಸು ಮುಂದಲ ಚುನಾವಣೆಗಳಲ್ಲಿ ಭಾಗ ವಹಿಸದೆ ಇರಕೂಡದೆಂಬುದು ನನ್ನಲ್ಲಿ ಬಹುಕಾಲದಿಂದ ಇದ್ದ ಅಭಿಪ್ರಾಯ ನಾನು ಐದು ತಿಂಗಳು ಸೆರೆಮನೆಯಿಂದ ಹೊರಗಡೆ ಇದ್ದಾಗ ಈ ಮನೋಭಾವವನ್ನು ಜನರಲ್ಲಿ ತಗ್ಗಿಸಲು ಪ್ರಯತ್ನಪಟ್ಟಿದ್ದೆ ಏಕೆಂದರ ಅಷ್ಟು ಬೇಗ ಜನರ ಲಕ್ಷ್ಯವನ್ನು ಪ್ರತ್ಯಕ್ಷ ವಾದ ಕಾರ್ಯಕ್ರಮದಿಂದಲೂ, ಕಾಂಗ್ರೆಸ್ಸಿನ ಕೆಲಸಗಾರರಲ್ಲಿ ಉದ್ಭವಿಸುತ್ತಿದ್ದ ಸಾಮಾ ಜಿಕ ವ್ಯತ್ಯಾಸಗಳ ಕಲ್ಪನೆಗಳಿಂದಲೂ ಬೇರೆ ಕಡೆ ತಿರುಗಿಸುವುದು ನನಗೆ ಇಷ್ಟ ವಿರಲಿಲ್ಲ ಈ ಚಳವಳಿಯ ಪರಮಾವಧಿಯು ಎಷ್ಟು ಕಾಲ ಹೆಚ್ಚಾದರೆ, ಈ ಭಾವ ಗಳು ಸಾರ್ವಜನಿಕರಲ್ಲಿ ಅಷ್ಟು ಹೆಚ್ಚಾಗಿ ಪ್ರಸಾರವಾಗುವುದೆಂದೂ, ಕಲಿತವರಿಗೆ ನಮ್ಮ ರಾಜಕೀಯ ಮತ್ತು ಆರ್ಥಿಕ ಸನ್ನಿವೇಶದ ಹಿಂದಣ ಅರ್ಥವು ಸ್ಪಷ್ಟವಾಗಿ ತಿಳಿಯುವುದೆಂದೂ ನಾನು ಯೋಚಿಸಿದ್ದೆ ಲೆನಿನ್ ಎಲ್ಲೋ ಹೇಳಿರುವಂತೆ "ಪ್ರತಿ ಯೊಂದು ರಾಜಕೀಯ ಸಂದುಕಟ್ಟೂ ಪ್ರಯೋಜನಕರವಾದುದು ಏಕೆಂದರೆ ಅದ ರಿಂದ, ಮುಚ್ಚಿದುದೆಲ್ಲಾ ಹೊರಕ್ಕೆ ಬರುತ್ತದೆ ರಾಜತಂತ್ರದ ಎಲ್ಲಾ ಶಕ್ತಿಗಳನ್ನೂ ಅದು ಪ್ರಕಾಶಕ್ಕೆ ತರುತ್ತದೆ ಅದು ಸುಳ್ಳನ್ನೂ, ಥಳಕಿನ ಮಾತು ಕಟ್ಟುಕಥೆಗಳನ್ನೂ ಅವುಗಳ ನಿಜವಾದ ಬಣ್ಣದಲ್ಲಿ ತೋರಿಸುತ್ತದೆ ವಸ್ತುಸ್ಥಿತಿಯನ್ನು ಪ್ರಕಾಶಗೊಳಿಸಿ, ನಿಜವನ್ನು ಜನರು ನೋಡುವಂತೆ ಬಲಾತ್ಕರಿಸುತ್ತದೆ" ಈ ಘಟನಾವಿಧಾನವು ಕಾಂಗ್ರೆಸ್ಸನ್ನು ಸ್ಪಷ್ಟವಾಗಿ ಆಲೋಚನೆ ಮಾಡತಕ್ಕ ಬಿಗಿಯಾದ ಮತ್ತು ನಿರ್ದಿಷ್ಟ ವಾದ ಗುರಿಯುಳ್ಳ ಸಂಸ್ಥೆಯನ್ನಾಗಿ ಮಾಡುವುದೆಂದು ನಾನು ಯೋಚಿಸಿದ್ದೆ ಪ್ರಾಯಃ ಅದರ ಕೆಲವು ದುರ್ಬಲತರ ಅಂಶಗಳು ಜಗುಳಿ ಹೋಗಬಹುದು ಹಾಗಾಗಿದ್ದರೆ ಏನೂ ನಷ್ಟವಾಗುತ್ತಿರಲಿಲ್ಲ ಮತ್ತು ಈ ಪ್ರತ್ಯಕ್ಷ ಕಾರ್ಯಕ್ರಮವನ್ನು ನಿಲ್ಲಿಸಿ, ರಚನಾತ್ಮಕ ಮತ್ತು ನ್ಯಾಯಸಮ್ಮತ ರೀತಿನೀತಿಗಳನ್ನು ಹಿಡಿಯುವ ಕಾಲ ಬಂದಾಗ ಮುಂದುವರಿದಿದ್ದ ಕಾಂಗ್ರೆಸ್ ಚಟುವಟಿಕೆಯು ಪಕ್ಷದವರು ಅದರ ಮೂಲಕವೂ, ಕಾಂಗ್ರೆಸ್ಸಿನ ಪರಮೋದ್ದೇಶದ ವಿಶಾಲದೃಷ್ಟಿ ಕೋನದ ಪ್ರಕಾರ ಪ್ರಯೋಗಿಸುವರೆಂದು ನಾನು ನಂಬಿದ್ದೆ.

ಆ ಕಾಲವು ಬಂದಿದ್ದಿತು ಆದರೆ ಆಗ ಶಾಸನ ಭಂಗದ ಅಂಗದಂಡಿಯಾ ಗಿದ್ದದವರು, ಹಿಂದುಹಿಂದಕ್ಕೆ ಹೋಗಲು ಪ್ರಾರಂಭಿಸಿದ್ದುದನ್ನು, ಆ ಚಳವಳಿ ಯಲ್ಲಿ ಭಾಗವನ್ನೇ ತೆಗೆದುಕೊಳ್ಳದೆ ಇದ್ದ ಇತರರು ಮುಂದ ಬಂದು ಆಡಳಿತದ ಸೂತ್ರಗಳನ್ನು ಕೈಯಲ್ಲಿ ಹಿಡಿದುಕೊಂಡುದನ್ನು, ಕಂಡು ನನಗೆ ಬಹಳ ಬೇಸರ ಕೆಯಾಯಿತು

ಕೆಲವು ದಿನಗಳನಂತರ ಸ್ಟೇಟ್ಸ್‌ಮನ್ ವಾರಪತ್ರಿಕೆಯು ಬಂದಿತು ಗಾಂಧಿ ಜಿಯವರು ಶಾಸನ ಭಂಗವನ್ನು ನಿಲ್ಲಿಸಿದ ಕಾಲದಲ್ಲಿ ಕೊಟ್ಟ ಹೇಳಿಕೆ ಆದರಲ್ಲಿ ಇದ್ದಿತು

ಅದನ್ನು ಓದಿದಂತೆಲ್ಲ ನನಗೆ ಆಶ್ಚರ್ಯವೂ ನಿರಾಶೆಯೂ ಉಂಟಾದವು ಮತ್ತೆ ಮತ್ತೆ ನಾನು ಅದನ್ನು ಓದಿದಂತೆಲ್ಲ ಕಾಯಿದೆ ಭಂಗವೂ ಇನ್ನಿತರ ಸಂಗತಿಗಳೂ ನನ್ನ ಮನಸ್ಸನ್ನು ಬಿಟ್ಟು ಓಡಿಹೋದವು ಆ ಸ್ಥಾನದಲ್ಲಿ ಹೊಸ ಸಂಶಯಗಳೂ ಒಳತೋಟಿಗಳೂ ಬಂದು ತುಂಬಿಕೊಂಡವು ಗಾಂಧಿಜಿಯವರು ಹೀಗೆ ಬರೆದಿದ್ದರು "ನಾನು ಆಶ್ರಮದ ನಿವಾಸಿಗಳೊಂದಿಗೆ ಕೈಕೊಂಡ ಶ್ರದ್ಧಾಯುತವಾದ ಸಂಭಾಷಣೆಯಿಂದ ಈ ಹೇಳಿಕೆಗೆ ಮುಖ್ಯ ಸ್ಫೂರ್ತಿಯು ಲಭಿಸಿತು ಅದಕ್ಕಿಂತ ಹೆಚ್ಚಾಗಿ, ಸೆರೆಮನೆಯಲ್ಲಿ ನಿಯಮಕ್ಕೆ ಅನುಸರವಾಗಿ ಕೆಲಸ ಮಾಡುವುದರ ಬದಲು ತನ್ನ ಸ್ವಂತ ಕೆಲಸದಲ್ಲಿ ಆಸಕ್ತನಾಗಲು ಇಷ್ಟವನ್ನು ತೋರಿದ ನನ್ನ ಹಳೆಯ ಸ್ನೇಹಿತನ ವಿಚಾರವನ್ನು ತಿಳಿದುದರಿಂದ, ಸೆರೆಮನೆಯ ಕೆಲಸಗಳನ್ನು ಮಾಡದೆ ಸ್ವಂತ ಕೆಲಸಗಳನ್ನು ಮಾಡಿಕೊಳ್ಳುವುದು ಸತ್ಯಾಗ್ರಹಕ್ಕೆ ವಿರುದ್ಧವಾದುದು ನನ್ನ ಪ್ರೀತಿಪಾತ್ರನಾದ ಆ ಸ್ನೇಹಿತನ ದೋಷಕ್ಕಿಂತ ಹೆಚ್ಚಾಗಿ, ಇದರಿಂದ ನನ್ನ ದೋಷವು ನನ್ನ ಕಣ್ಣುಮುಂದೆ ನಿಂತಿತು ಆ ಸ್ನೇಹಿತನು ತನ್ನ ಈ ದೌರ್ಬಲ್ಯವು ನನಗೆ ಗೊತ್ತಿರಬಹುದೆಂದು ಹೇಳಿದನು ನಾನು ಕುರುಡನಾಗಿದ್ದೆ ದೇಶದ ಮುಖಂಡನಲ್ಲಿ ಕುರುಡುತನವು ದೊಡ್ಡದೊಂದು ಕುಂದು ಈ ಕಾಯಿದೆ ಭಂಗದ ಪ್ರತಿನಿಧಿಯು ನಾನೊಬ್ಬನೆ, ಎಂಬುದು ನನಗೆ ತಕ್ಷಣ ತಿಳಿಯಿತು '

ಸ್ನೇಹಿತನ ಆ "ಕುಂದು" ಬಹಳ ಸಣ್ಣ ವಿಚಾರವಾಗಿದ್ದಿತು ನಾನೇ ಎಷ್ಟೋ ಸಲ ಆ ತಪ್ಪನ್ನು ಮಾಡಿದ್ದೇನೆ ಅದರಿಂದ ನನಗೆ ಸ್ವಲ್ಪವೂ ಪಶ್ಚಾತ್ತಾಪವಾಗಿಲ್ಲ ಆ ಕುಂದು ಬಹಳ ದೊಡ್ಡದೆಂದೇ ಇಟ್ಟುಕೊಳ್ಳೋಣ ಆದರೂ ಪ್ರತ್ಯಕ್ಷವಾಗಿ ಸಾವಿರಾರು ಜನರಿಗೂ ಅಪ್ರತ್ಯಕ್ಷವಾಗಿ ಅನೇಕ ಲಕ್ಷ ಜನರಿಗೂ ಸಂಬಂಧಪಟ್ಟ ಅಗಾಧವಾದ ರಾಷ್ಟ್ರೀಯ ಚಳವಳಿಯನ್ನು, ಒಬ್ಬ ವ್ಯಕ್ತಿಯ ತಪ್ಪಿಗಾಗಿ ನಿಲ್ಲಿಸಿಬಿಡುವುದು ನ್ಯಾಯವೆ? ನನಗೆ ಇದು ರಾಕ್ಷಸೀ ಪ್ರಮೇಯವಾಗಿಯೂ ಅನೀತಿಯ ಕೆಲಸವಾಗಿಯೂ ತೋರಿತು ಸತ್ಯಾಗ್ರಹವು ಯಾವುದು, ಸತ್ಯಾಗ್ರಹವು ಯಾವುದಲ್ಲ, ಎಂಬುದು ನನಗೆ ತಿಳಿದಿದೆಯೆಂದು ನಾನು ಹೇಳಿಕೊಳ್ಳುವುದಿಲ್ಲ ಆದರೆ ನನ್ನ ಅಲ್ಪ ತಿಳವಳಿಕೆಯ ಮಟ್ಟಿಗೆ ನಾನು ಕೆಲವು ನಡತೆಯ ತತ್ವಗಳನ್ನು ಆಚರಿಸಲು ಪ್ರಯತ್ನಿಸಿದ್ದೇನೆ ಗಾಂಧಿಜಿಯವರ ವಾಙ್ಮೂಲದಿಂದ ಆ ತತ್ವಗಳೆಲ್ಲಾ ತಲೆಕೆಳಗಾಗಿ ಹೋದುವು ಗಾಂಧಿಜಿಯವರು ಸಾಧಾರಣವಾಗಿ ಉಪಜ್ಞೆಯಿಂದ ನಡೆಯುತ್ತಾರೆಂಬುದು ನನಗೆ ಗೊತ್ತಿದ್ದಿತು ('ಒಳಧ್ವನಿ' ಅಥವಾ ಪ್ರಾರ್ಥನೆಗೆ ಉತ್ತರ ಎಂಬುದಕ್ಕಿಂತ ಉಪಜ್ಞೆ ಎಂದು ಕರೆಯುವುದು ನನಗೆ ಇಷ್ಟ) ಮತ್ತು ಅನೇಕ ಸಲ ಆ ಉಪಜ್ಞೆಯೇ ಸರಿಯಾಗುತ್ತದೆ. ಸಾರ್ವಜನಿಕ ಮನೋಭಾವವನ್ನು ತಿಳಿದು, ಸಕಾಲದಲ್ಲಿ ಅದರಂತೆ ನಡೆಯಲು ತಮ್ಮಲ್ಲಿ ಎಂತಹ ಸ್ವಾಭಾವಿಕವಾದ, ಆಶ್ಚರ್ಯಕರವಾದ ಜಾಣ್ಮೆಯಿದೆಯೆಂಬುದನ್ನು ಅವರು ತೋರಿಸಿದ್ದಾರೆ. ತಾವು ಮಾಡಿದ ಕೆಲಸವನ್ನು ಸಮರ್ಥಿಸಲು ಅನಂತರ ಅವರು ಸಾಮಾ

ನ್ಯವಾಗಿ, ಅನೇಕ ಕಾರಣಗಳನ್ನು ಕೊಡುತ್ತಾರೆ ಆದರೆ ಆವುಗಳಿಂದ ಅಷ್ಟೇನೂ ಉಪ ಕಾರವಾಗುವುದಿಲ್ಲ ಮುಂದಾಳಾದವನು ಅಥವಾ ಕಾರಣಪುರುಷನು ಯಾವಾಗಲೂ ಸಂದು ಕಟ್ಟೊಂದು ಒದಗಿದಾಗ ಮೊದಲು ಉಪಜ್ಞೆಯಿಂದ ಕೆಲಸಮಾಡುತ್ತಾನೆ ಅನಂತರ ತನ್ನ ಕೆಲಸಗಳಿಗೆ ಕಾರಣಗಳನ್ನು ಯೋಚಿಸುತ್ತಾನೆ ಗಾಂಧಿಜಿಯವರು ಶಾಸನಭಂಗ ವನ್ನು ನಿಲ್ಲಿಸಿದುದು ಸರಿಯಾದುದೆಂದು ನನಗೆ ನಂಬಿಕೆಯಾಗಿದ್ದಿತು ಆದರೆ ಅದಕ್ಕೆ ಅವರು ಕೊಟ್ಟ ಕಾರಣಗಳಿಂದ ಬುದ್ಧಿಶಕ್ತಿಗೇ ಅಪಮಾನಮಾಡಿದಂತೆಯೂ, ರಾಷ್ಟ್ರ ಚಳವಳಿಯ ನಾಯಕನೊಬ್ಬನಿಗೆ ಬಹಳ ವಿಚಿತ್ರವಾದ ನಡೆವಳಿಕೆಯಾಗಿಯೂ ಕಂಡಿತು ತನ್ನ ಆಶ್ರಮದ ನಿವಾಸಿಗಳನ್ನು ಬೇಕಾದ ರೀತಿಯಲ್ಲಿ ಇಟ್ಟುಕೊಂಡಿರಲು ಅವರಿಗೆ ಅಧಿಕಾರವಿದ್ದಿತು ಆ ನಿವಾಸಿಗಳು ಎಲ್ಲಾ ಬಗೆಯಾದ ವಾಗ್ದಾನಗಳನ್ನೂ ಕೊಟ್ಟು, ಒಂದು ತರದ ಆಡಳಿತವನ್ನು ಒಪ್ಪಿಕೊಂಡಿದ್ದರು ಆದರೆ ಕಾಂಗ್ರೆಸ್ಸು ಹಾಗೆ ಮಾಡಿರ ಲಿಲ್ಲ ನಾನು ಹಾಗೆ ಮಾಡಿರಲಿಲ್ಲ ನನ್ನ ಮನಸ್ಸಿಗೆ ಆ ಕಾರಣಗಳು ಕಾರ್ಯಪ್ರಪಂಚ ದಿಂದ ಹೊರಗಾದವುಗಳಂತೆ ತೋರಿದವು ಅದರಲ್ಲಿ ನನಗೆ ಉತ್ಸಾಹವಿರಲಿಲ್ಲ ಅಂತಹ ಕಾರಣಕ್ಕಾಗಿ ನಾವು ಏಕೆ ಒಂದುಕಡೆಯಿಂದ ಮತ್ತೊಂದು ಕಡೆಗೆ ಎಸೆಯಲ್ಪಡಬೇಕು? ಈ ತಳಹದಿಯ ಮೇಲೆ ರಾಜಕೀಯ ಚಳವಳಿಯನ್ನು ನಡೆಸುವುದು ಸಾಧ್ಯವೆ? ನನಗೆ ತಿಳಿದಮಟ್ಟಿಗೆ (ಸ್ವಲ್ಪಮಟ್ಟಿಗೆಂದೇ ಒಪ್ಪುತ್ತೇನೆ) ಸತ್ಯಾಗ್ರಹದ ನೈತಿಕ ಮುಖವನ್ನು ನಾನು ಇಷ್ಟದಿಂದ ಒಪ್ಪಿಕೊಂಡಿದ್ದೆ ಅದರ ಮೂಲಭೂತ ಮುಖವು ನನ್ನ ಮನಸ್ಸಿಗೆ ಹಿಡಿಯಿತು. ರಾಜಕಾರಣವು ಅದರಿಂದ ಉನ್ನತಿಗೂ ಮಹತ್ವಕ್ಕೂ ಏರುತ್ತಿದ್ದಂತೆ ತೋರಿದ್ದಿತು ಸಿದ್ಧಿಯು ಎಲ್ಲಾ ಬಗೆಯ ಸಾಧನೆಗಳನ್ನೂ ಸರಿ ಎನ್ನುವುದಿಲ್ಲವೆಂಬುದನ್ನೂ ಒಪ್ಪಿಕೊಳ್ಳಲು ನಾನು ಸಿದ್ಧನಾಗಿದ್ದೆ ಆದರೆ ಈ ಹೊಸ ಬೆಳವಣಿಗೆಯು ಅಥವಾ ವ್ಯಾಖ್ಯಾನವು ಬಹಳ ವಿಶಾಲವಾಗಿತ್ತು ಅದನ್ನು ಕಂಡು ನನಗೆ ಭಯವಾಯಿತು

ಗಾಂಧಿಜಿಯವರ ವಾಙ್ಮೂಲವು ನನಗೆ ಹೆಚ್ಚಾದ ಭಯವನ್ನೂ ನಿರುತ್ಸಾಹವನ್ನೂ ಉಂಟುಮಾಡಿತು ಕೊನೆಯಲ್ಲಿ ಅವರು ಕಾಂಗ್ರೆಸ್ ಸೇವಕರಿಗೆ ಈ ರೀತಿಯಾದ ಸಲಹೆಯನ್ನು ಕೊಟ್ಟಿದ್ದರು "ನೀವು ಸ್ವಂತ ಇಚ್ಛೆಯ ದಾರಿದ್ರ್ಯ ಮತ್ತು ಸ್ವಾರ್ಥ ತ್ಯಾಗದ ಸೌಂದರ್ಯವನ್ನೂ ಅರಿತು, ಆ ಕಲೆಯನ್ನು ಕಲಿಯಬೇಕು ರಾಷ್ಟ್ರದ ಬೆಳವಣಿಗೆಗೆ ಸಾಧಕಗಳಾದ, ಕೈನೂಲು ಮತ್ತು ಕೈಮಗ್ಗದ ಕೆಲಸಗಳಲ್ಲೂ ಖಾದಿಯನ್ನು ಧರಿಸುವುದರಲ್ಲೂ ಅವರು ನಿರತರಾಗಬೇಕು ಪರಿಶುದ್ಧವಾದ ರೀತಿಯಲ್ಲಿ ಜೀವನವನ್ನು ನಡೆಸಿಕೊಂಡುಬರಬೇಕು ಎಲ್ಲಾ ದೃಷ್ಟಿಯಿಂದಲೂ ಅಸ್ಪೃಶ್ಯತೆಯನ್ನು ನಿವಾರಿಸಬೇಕು ಕುಡಿಯುತ್ತಿರುವವರ ಜೊತೆ ಸೇರಿ ಅವರಿಗೆ ಸಾಧ್ಯವಾದಷ್ಟು ಭೋಧಿಸಿ ಪಾನ ನಿರೋಧವನ್ನು ಹರಡುವುದಲ್ಲದೆ, ನೀವೂ ಎಲ್ಲಾ ಮಾದಕದ್ರವಸೇವನೆಯನ್ನು ಬಿಟ್ಟುಬಿಡಬೇಕು. ಇವುಗಳು ಕೆಲಸಗಾರರಿಗೆ,

ಬಡತನದ ಜೀವನವನ್ನು ಒದಗಿಸುತ್ತವೆ ಬಡತನದ ಜೀವನವು ಬೇಡವ ದವರು, ಹೆಚ್ಚಿಗೆ ಸಂಪಾದಿಸಬೇಕಾದರೆ, ಇನ್ನೂ ವ್ಯವಸ್ಥೆಯಾಗದಿರುವ ರಾಷ್ಟ್ರಕ್ಕೆ, ಹಿತಕರವಾದ ಕೈಗಾರಿಕೆಗಳನ್ನು ಕೈಕೊಳ್ಳಬೇಕು ”

ಇದು ನಾವು ಅನುಸರಿಸಬೇಕಾದ ರಾಜಕೀಯ ಕಾರ್ಯಕ್ರಮವಾಗಿದ್ದಿತು ಗಾಂಧಿಜಿಯವರಿಗೂ ನನಗೂ ಮಧ್ಯೆ ವಿಶಾಲವಾದ ಬಯಲು ಪ್ರವೇಶವಿದ್ದಂತೆ ತೋರಿತು ನನ್ನನ್ನು ಅವರೊಂದಿಗೆ ಬಹುದಿನದಿಂದ ಬಾಧಿಸಿದ ಕಟ್ಟುಗಳು ಕಿತ್ತುಹೋದಂತೆ ನನಗೆ ತೋರಿ, ಈ ಟಿಯು ಇರಿತನಂಥ ನೋವಾಯಿತು ಅನೇಕ ದಿನಗಳಿಂದ ನನ್ನ ಮನಸ್ಸಿನಲ್ಲಿ ಒಳತೋಟಿ ನಡೆಯುತ್ತಾ ಇದ್ದಿತು ಗಾಂಧಿಜಿಯವರು ಮಾಡಿದ್ದರಲ್ಲ ನೇಕವನ್ನು ನಾನು ತಿಳಿದಿರಲಿಲ್ಲ ಅಥವಾ ಅವುಗಳನ್ನು ನಾನು ಮೆಚ್ಚಿರಲಿಲ್ಲ ಅವರ ಉಪವಾಸಗಳು, ಕಾಯಿದೆ ಭಂಗದ ಕದನವು ನಡೆಯುತ್ತಿರುವಾಗ, ಅವರ ಜೊತೆಗಾರರು ಅದರ ಹಿಡಿತದಲ್ಲಿದ್ದಾಗ, ಅವರು ಅದನ್ನು ಬಿಟ್ಟು ಇತರ ವಿಷಯಗಳಿಗೆ ಮನಸ್ಸನ್ನು ಕೊಟ್ಟಿದ್ದು, ತಾವು ಸೆರೆಮನೆಯಿಂದ ಹೊರಗಡೆ ಇದ್ದರೂ ಕಾಯಿದೆ ಭಂಗದಲ್ಲಿ ಭಾಗವಹಿಸಲು ಆಗದಂತೆ ಮಾಡಿಕೊಂಡಿದ್ದ ಅವರ ವಿಚಿತ್ರವಾದ ಬಂಧನಗಳು, ಹಿಂದಲ ಕೆಲಸವು ಮುಗಿಯುವುದಕ್ಕೆ ಮುಂಚೆ, ಅನೇಕ ಗಳಿಯರ ಜೊತೆಯಲ್ಲಿ ತೆಗೆದುಕೊಂಡಿದ್ದ ಆ ಕೆಲಸ, ಆ ಪ್ರತಿಜ್ಞೆ ಇವುಗಳನ್ನೆಲ್ಲಾ ಹಿಂದಕ್ಕೆ ಹಾಕಿ ಅವರು ಹೊಸ ವಾಗ್ದಾನಗಳನ್ನು ತೆಗೆದುಕೊಂಡುದು ಇವುಗಳೆಲ್ಲಾ ನನ್ನನ್ನು ಬಹಳ ನಿರುತ್ಸಾಹಿಯನ್ನಾಗಿ ಮಾಡಿದ್ದವು. ನಾನು ಸೆರೆಮನೆಯಿಂದ ಹೊರಗೆ ಇದ್ದ ಸ್ವಲ್ಪ ಕಾಲದಲ್ಲಿ ಇವೇ ಮೊದಲಾದ ಇತರ ಅನೇಕ ಭಿನ್ನತೆಗಳು ನನಗೂ ಅವರಿಗೂ ತೋರಿದುವು ನನ್ನ ಮತ್ತು ಅವರಲ್ಲಿ ಪ್ರಾವೃತ್ತಿಕ ವ್ಯತ್ಯಾಸಗಳಿದ್ದುವೆಂದು ಗಾಂಧಿಜಿಯವರು ಹೇಳಿದ್ದರು ಆದರೆ ನಮ್ಮ ವ್ಯತ್ಯಾಸಗಳು ಬರಿಯ ಪ್ರಾವೃತ್ತಿಕ ವ್ಯತ್ಯಾಸಗಳಲ್ಲ ವೆಂದೂ, ಅನೇಕ ಸ್ಪಷ್ಟವಾದ ವಿಚಾರಗಳಲ್ಲಿ ನನ್ನ ಅಭಿಪ್ರಾಯಗಳು ಅವರ ಅಭಿಪ್ರಾಯಗಳಿಗೆ ತೀರ ವಿರುದ್ಧವಾಗಿದ್ದುವೆಂದೂ ನನಗೆ ಮುಂದಟ್ಟಾಯಿತು ಆದರೂ ಕೂಡ, ಹಿಂದೆ ನಾನು ಆ ವ್ಯತ್ಯಾಸಗಳನ್ನು ಕಾಂಗ್ರೆಸ್ಸು ಸಾಧಿಸಬೇಕೆಂದು ಪ್ರಯತ್ನಿಸುತ್ತಿದ್ದ ಕಾರ್ಯಕ್ರಮಗಳ ಭಕ್ತನಾಗಿ ಸಾಧ್ಯವಾದಷ್ಟು ಅದುಮಿದ್ದೆ ನನ್ನ ಮುಂದಾಳುಗಳಿಗೂ ಜೊತೆಗಾರರಿಗೂ ಬದ್ಧನಾಗಿರಲು ನಾನು ಪ್ರಯತ್ನಪಟ್ಟೆ ಏಕೆಂದರೆ ನನ್ನ ಧ್ಯೇಯಕ್ಕೆ ನಾನು ದಾಸನಾಗಿರುವುದು ನನ್ನ ಮನೋಭಾವಗಳಲ್ಲಿ ಮುಖ್ಯವಾದುದು ನನ್ನ ಈ ನಂಬಿಕೆಯಿಂದ ನಾನು ದೂರಕ್ಕೆ ಎಳೆಯಲ್ಪಡುತ್ತಿದ್ದಾಗ ನಾನು ನನ್ನೊಂದಿಗೇ ಎಷ್ಟೋ ಸಲ ಕಾದಾಡಿದೆ ಹೇಗೂ ನನ್ನಲ್ಲಿ ರಾಜಿಯುಂಟಾಯಿತು ನಾನು ಮಾಡಿದ್ದು ತಪ್ಪು ಏಕೆಂದರೆ ಆ ಬಲವನ್ನು ಬಿಡುವುದು ಯಾರಿಗೂ ಒಳ್ಳೆಯದಲ್ಲ ಆದರೆ ಧ್ಯೇಯಗಳ ಹೊಡೆದಾಟದಲ್ಲಿ, ನಾನು ಒಮ್ಮನಸ್ಸಿನಿಂದ ನನ್ನ ಜೊತೆಗಾರರೊಂದಿಗೆ ಸೇರಿಕೊಂಡೆ. ಸಮರದ ಗದ್ದಲದಲ್ಲಿ ಸಣ್ಣ ವ್ಯತ್ಯಾಸಗಳು ಮಾಯವಾಗಿ

ವಸ್ತು ಸ್ಥಿತಿಯು ನನ್ನ ಜತೆಗಾರರನ್ನು ನನ್ನ ಅಭಿಪ್ರಾಯದಂತೆ ತಿರುಗಿಸಬಹುದೆಂದು ನನಗೆ ನಂಬಿಕೆಯಿದ್ದಿತು.

ಆದರೆ ಈಗ ಇದ್ದಕ್ಕಿದ್ದಂತೆ ಆ ಆಲಿಪುರ್ ಸೆರೆಮನೆಯಲ್ಲಿ ನಾನು ಒಬ್ಬಂಟಿಗನಾದಂತೆ ನನಗೆ ಭಾಸವಾಯಿತು. ಜೀವನವು ಬಹಳ ಬೇಸರಿಕೆ ಮತ್ತು ನಿರಾಶೆಯ ಕಾಡಾದಂತೆ ತೋರಿತು. ಅನೇಕ ಕಷ್ಟತರವಾದ ಪಾಠಗಳನ್ನು ನಾನು ಕಲಿತಿದ್ದೆ. ಆದರೆ, ಈಗ ನನ್ನ ಎದುರಿಗೆ ನಿಂತ ಪಾಠವು ಕಷ್ಟತಮವಾಗಿದ್ದಿತು. ಅದೇನೆಂದರೆ ಮುಖ್ಯವಾದ ವಿಚಾರಗಳಲ್ಲಿ ನಾವು ಯಾರನ್ನೂ ಅವಲಂಬಿಸುವಂತೆ ಇಲ್ಲ. ಪ್ರತಿಯೊಬ್ಬನೂ ತನ್ನ ಜೀವನ ಯಾತ್ರೆಯನ್ನು ತಾನೇ ಒಂಟಿಯಾಗಿ ಸಾಗಿಸಬೇಕು. ಇತರರನ್ನು ಅವಲಂಬಿಸುವುದು ನಮ್ಮ ಹೃದಯವನ್ನು ಭೇದಿಸುವಂತೆ, ಆವರಿಗೆ ಆಹ್ವಾನವನ್ನು ಕೊಟ್ಟಂತೆ.

ನನ್ನಲ್ಲಿ ತುಂಬಿಕೊಂಡಿದ್ದ ಸಿಟ್ಟಿನ ಸ್ವಲ್ಪ ಭಾಗವು ಮತ ಮತ್ತು ಮತೀಯ ದೃಷ್ಟಿಯ ಕಡೆಗೆ ತಿರುಗಿತು. ಆಲೋಚನೆಗಳನ್ನು ಶುದ್ಧವಾಗಿಡುವುದಕ್ಕೂ, ಏಕಾಗ್ರತೆಯಿಂದ ಕೆಲಸಮಾಡುವುದಕ್ಕೂ ಇದು ಎಂತಹ ಶತ್ರು ಎಂದುಕೊಂಡೆ ನಾನು. ಏಕೆಂದರೆ ಮತವು ರಾಗ ಮತ್ತು ಆವೇಶನೆಗಳನ್ನು ಅವಲಂಬಿಸಿಲ್ಲವೆ? ಅದು ದೈವಿಕವಾದುದೆಂದು ಊಹಿಸೋಣ. ಆದರೆ ನಿಜವಾದ ದೈವಿಕ ವಸ್ತುಗಳಿಗೂ ಅದಕ್ಕೂ ಎಷ್ಟೊಂದು ವ್ಯತ್ಯಾಸವಿದೆ! ಮತ್ತಾವುದೋ ಪ್ರಪಂಚದ ದೃಷ್ಟಿಯಲ್ಲಿ ಯೋಚಿಸುತ್ತಿದ್ದ ಅದಕ್ಕೆ, ಮನುಷ್ಯರ ಮಟ್ಟದ ವಿಷಯಗಳು, ಸಾಮಾಜಿಕ ನ್ಯಾಯಸತ್ಯ ಇವುಗಳ ಅಭಿಪ್ರಾಯವೇ ಇರಲಿಲ್ಲ. ವಿಚಾರಗಳನ್ನು ಮೊದಲೇ ಊಹಿಸಿಕೊಂಡು, ಅದು ಉದ್ದೇಶಪೂರ್ವಕವಾಗಿ ಸತ್ಯಕ್ಕೆ ಕಣ್ಣನ್ನು ಮುಚ್ಚಿತು. ಸತ್ಯವು ನನಗೆ ಸರಿ ಬರಲಾರದೆಂಬ ಭಯವು ಅದಕ್ಕೆ ಇದ್ದಿತು. ಅದು ಸತ್ಯದಮೇಲೆ ಅವಲಂಬನೆಯನ್ನು ತೆಗೆದುಕೊಂಡಿತು. ಆದರೆ ಪೂರ್ಣವಾದ ಸತ್ಯವು ತನಗೇ ತಿಳಿದಿದೆಯೆಂದುಕೊಂಡು ಅದು ಸತ್ಯವನ್ನು ಹುಡುಕುವ ಕಷ್ಟವನ್ನು ಕೂಡ ತೆಗೆದುಕೊಳ್ಳಲಿಲ್ಲ. ಇತರರಿಗೆ ಅದನ್ನು ಹೇಳುವುದು ಮಾತ್ರ ಅದರ ಕೆಲಸವಾಯಿತು. ನಂಬುವುದಕ್ಕೆ ಇದ್ದ ಮನಶ್ಶಕ್ತಿಯೂ ಸತ್ಯಕ್ಕಾಗಿ ಇದ್ದ ಮನಶ್ಶಕ್ತಿಯೂ ಎರಡೂ ಒಂದೇ ಆಗಿರಲಿಲ್ಲ. ಅದು ಶಾಂತಿಯ ವಿಚಾರದಲ್ಲಿ ಮಾತನಾಡುತ್ತಿದ್ದಿತು. ಆದರೆ ಹಿಂಸೆಯಿಲ್ಲದೆ ಸಾಧ್ಯವಿಲ್ಲದೆ ಇದ್ದ ಸಂಸ್ಥೆಗಳಿಗೂ ಪದ್ಧತಿಗಳಿಗೂ ಬೆಂಬಲವನ್ನು ಕೊಟ್ಟಿತು. ಅದು ಕತ್ತಿಯ ಹಿಂಸೆಯನ್ನು ಖಂಡಿಸಿತು. ಆದರೆ ಮೆಲ್ಲಗೆ, ಶಾಂತಿಯ ಉಡುಪಿನಲ್ಲಿ ಬಂದ ಆಹಾರವಿಲ್ಲದೆ ಸಾಯಿಸುವ ಅಥವಾ ಕೊಲ್ಲುವ ಹಿಂಸೆ ಅಥವಾ ಅದಕ್ಕಿಂತ ಹೆಚ್ಚಾಗಿ, ಹೊರಗಡೆ ದೇಹಕ್ಕೆ ಯಾವ ಪೆಟ್ಟನ್ನೂ ಮಾಡದೆ ಒಳಗಿನ ಆತ್ಮವನ್ನೂ ಹೃದಯವನ್ನೂ ಜಜ್ಜಿ ಒಡೆದು ಪುಡಿಪುಡಿ ಮಾಡುವ ಹಿಂಸೆಯು ಮಾತೇನು?

ಆಮೇಲೆ, ನನ್ನಲ್ಲಿ ಈ ಏರುಬ್ಬರ ತಳಮಳಗಳನ್ನುಂಟುಮಾಡಿದವನನ್ನು ಕುರಿತು ಯೋಚಿಸಿದೆ. ಗಾಂಧಿಜಿಯು ಎಂತಹ ಮಹನೀಯರು. ಜನರ ಮೇಲೆ ಅವರ ಪ್ರಭಾವ ಎಷ್ಟು ಸೂಕ್ಷ್ಮವೂ ಮನೋಹರವೂ ಆದುದು ಅವರ ಬರವಣಿಗೆಯಿಂದ ಅದರ ಹಿಂದಣ ಮನುಷ್ಯನ ವಿಷಯ ಬಹಳ ಸ್ವಲ್ಪ ತಿಳಿಯುತ್ತದೆ ಬರವಣಿಗೆ ತೋರಿಸುವುದಕ್ಕಿಂತ ಅವರ ವ್ಯಕ್ತಿತ್ವವು ಎಷ್ಟೋ ದೊಡ್ಡದಾಗಿದೆ ಮತ್ತು ಹಿಂದೂ ದೇಶಕ್ಕೆ ಅವರ ಸೇವೆಯೋ? ಅದು ಎಷ್ಟು ವಿಶಾಲವಾಗಿದ್ದಿತು ಅವರು ಈ ದೇಶದ ಜನರಿಗೆ ಧೈರ್ಯವನ್ನೂ ಗಂಡುತನವನ್ನೂ ತುಂಬಿದ್ದರು. ಶಿಸ್ತು, ಕಷ್ಟಸಹಿಷ್ಣುತೆ, ಸೇವೆಗಾಗಿ ಸ್ವಾರ್ಥತ್ಯಾಗ, ಮತ್ತು ತಾವು ಅಷ್ಟು ವಿನಯವಂತರಾದರೂ—ಹೆಮ್ಮೆ, ಇವನ್ನೆಲ್ಲಾ ದೇಶವು ಅವರಿಂದ ಕಲಿಯಿತು ಅವರು "ಧೈರ್ಯವು ನಡತೆಯ ಮುಖ್ಯವಾದ ಅಡಿಗಲ್ಲು ಧೈರ್ಯವಿಲ್ಲದಿದ್ದರೆ ನೀತಿಯಿಲ್ಲ, ಮತವಿಲ್ಲ ಮತ್ತು ಪ್ರೀತಿಯಿಲ್ಲ" ಎಂದು ಹೇಳಿದ್ದರು "ಎಲ್ಲಿಯವರೆಗೆ ಭಯವು ನಿವಾರಣೆಯಾಗುವುದಿಲ್ಲವೋ ಅಲ್ಲಿಯವರೆಗೆ ಸತ್ಯ ಮತ್ತು ಪ್ರೇಮದ ದಾರಿಯಲ್ಲಿ ನಡೆಯಲು ಸಾಧ್ಯವಿಲ್ಲ' ಹಿಂಸೆಯನ್ನು ಕಂಡರೆ ಅವರಿಗೆ ಅಷ್ಟೊಂದು ಜಿಗುಪ್ಸೆಯಿದ್ದರೂ ಹಿಂಸೆಗಿಂತ ಹೇಡಿತನವು ಹೆಚ್ಚು ತುಚ್ಛವಾದುದೆಂದು ಹೇಳಿವರು "ತಾನು ಸರಿಯಾಗಿ ಕೆಲಸ ಮಾಡುವೆನೆಂಬ ಒಡಂಬಡಿಕೆಯೇ ಶಿಸ್ತು ತ್ಯಾಗ, ಶಿಸ್ತು ಮತ್ತು ಜಿತೇಂದ್ರಿಯತ್ವ ಇವು ಇಲ್ಲದಿದ್ದರೆ ಬಿಡುಗಡೆಯ ಆಸೆಯಿಲ್ಲ, ಶಿಸ್ತಿಲ್ಲದ ತ್ಯಾಗದಿಂದ ಏನೂ ಪ್ರಯೋಜನವಾಗುವುದಿಲ್ಲ" ಬರಿಯ ಮಾತುಗಳು, ಚರ್ವಿತಚರ್ವಣ ಎಂದಿವು ತೋರಬಹುದಾದರೂ ಅವುಗಳ ಹಿಂದೆ ಶಕ್ತಿಯಿದ್ದಿತು ಈ ಪುಟ್ಟ ಮನುಷ್ಯನು ಕೆಲಸವನ್ನು ಸಾಧಿಸುವವನೆಂಬ ನಂಬಿಕೆ ಹಿಂದೂದೇಶದವರಿಗೆ ಇದ್ದಿತು

ಆಶ್ಚರ್ಯಕರವಾದ ಮಟ್ಟಿಗೆ ಅವರು ಈ ಮರವ್ಯಷ್ಟು ಹಿಂದೂದೇಶದ ಪೂರ್ಣಪ್ರತಿನಿಧಿಗಳಾಗಿದ್ದರು ಅವರ ಕುಂದುಕೊರತೆಗಳೇ ಹಿಂದೂದೇಶದ ಕುಂದುಕೊರತೆಗಳಾಗಿದ್ದುವು ವ್ಯಕ್ತಿಶಃ ಅವಮಾನ ಅವರಿಗೆ ಮಾಡಿದರೆ, ಅದು ಅವರಿಗೆ ಅವಮಾನವಾಗಿರಲಿಲ್ಲ ದೇಶಕ್ಕೇ ಅವಮಾನವಾಗಿದ್ದಿತು ಆ ಬಗೆಯ ತಿರಸ್ಕಾರವನ್ನು ತೋರುತ್ತಿದ್ದ ವೈಸ್‌ರಾಯರೂ ಇತರರೂ, ತಾವು ಬಿತ್ತುತ್ತಿದ್ದ ಅಪಾಯಕರವಾದ ಬೆಳೆಯನ್ನು ಆಗ ಮನಸ್ಸಿಗೆ ತೆಗೆದುಕೊಳ್ಳಲಿಲ್ಲ ೧೯೩೧ನೇ ಡಿಸೆಂಬರಿನಲ್ಲಿ ಗಾಂಧಿಜಿಯವರು ರೌಂಡ್ ಟೇಬಲ್ ಸಮ್ಮೇಳನದಿಂದ ಹಿಂದಿರುಗುತ್ತಿದ್ದಾಗ, ಪೋಪ್ ಜಗದ್ಗುರು ಅವರಿಗೆ ಭೇಟಿ ಕೊಡಲಿಲ್ಲವೆಂಬ ಸಮಾಚಾರವನ್ನು ಕೇಳಿ ನನಗೆ ಬಹಳ ಕೋಪ ಬಂದುದು ಜ್ಞಾಪಕವಿದೆ ಕ್ಯಾಥೊಲಿಕ್ ಮತವು, ತನ್ನ ಗುಂಪಿಗೆ ಸೇರದ ಮಹಾತ್ಮರನ್ನೂ ಋಷಿಗಳನ್ನೂ, ಮಹಾತ್ಮರೆಂದು ನಂಬುವುದಿಲ್ಲ ಮತ್ತು ಕೆಲವು ಪ್ರಾಟೆಸ್ಟೆಂಟ್ ಪಾದ್ರಿಗಳು, ಗಾಂಧಿಜಿಯವರು, ನಿಜವಾದ ಕ್ರೈಸ್ತರು ಎಂಬುದಾಗಿ ಹೇಳಿಬಿಟ್ಟಿದ್ದುದರಿಂದ ಈ ಪಾಷಂಡರೊಂದಿಗೆ ಎಲ್ಲ ಸಂಬಂಧವನ್ನೂ ತೊರೆಯುವುದು ರೋಮ್‌ಗೆ ಇನ್ನೂ ಹೆಚ್ಚು ಆವಶ್ಯಕವಾಯಿತು

ಅದೇ ಸುಮಾರಿನಲ್ಲಿ ಎಂದರೆ ೧೯೩೪ಳ ನೇ ಏಪ್ರಿಲ್‌ನಲ್ಲಿ ನಾನು ಅಲಿಪೂರ್ ಸೆರೆ ಮನೆಯಲ್ಲಿ ಬರ್ನಾರ್ಡ್ ಷಾ ರವರ 'ಆನ್ ದಿ ರಾಕ್ಸ್' ಎಂಬ ಹೊಸ ನಾಟಕಗಳ ಮುನ್ನುಡಿಯನ್ನು ಓದುತ್ತಿದ್ದೆ. ಅಲ್ಲಿ ಕ್ರೈಸ್ತನಿಗೂ ಪೈಲೇಟ್‌ಗೂ ನಡೆದ ಸಂಭಾಷಣೆ, ನನ್ನ ಮನಸ್ಸನ್ನು ಹಿಡಿಯಿತು. ಆಧುನಿಕ ಕಾಲದಲ್ಲಿ ಮತ್ತೊಂದು ಸಾಮ್ರಾಜ್ಯವು ಮತ್ತೊಬ್ಬ ಧರ್ಮ ಪುರುಷನೊಂದಿಗೆ ನಡೆಸುತ್ತಿದ್ದ ವ್ಯವಹಾರಕ್ಕೆ ಅದು ಅನ್ವಯಿಸು ವಂತೆ ತೋರಿತು. ಜೀಸಸ್ ಪೈಲೇಟ್ * ಗೆ ಹೀಗೆ ಹೇಳುತ್ತಾನೆ: "ನಾನು ನಿನಗೆ ಹೇಳುವುದು ಇಷ್ಟು. ಭಯವನ್ನು ಬಿಡು. ನಿನ್ನ ರೋಮನ್ ಚಕ್ರಾಧಿಪತ್ಯದ ಪ್ರತಿಷ್ಠೆ ಯನ್ನು ನನ್ನೆದುರಿಗೆ ವ್ಯರ್ಥವಾಗಿ ಹೇಳಿಕೊಳ್ಳಬೇಡ. ನೀನು ಹೇಳುವ ರೋಮಿನ ಮಹಾತ್ಮ್ಯೆ ಮತ್ತೇನೂ ಅಲ್ಲ. ಭಯಂಭೂತದ ಭಯ; ಭವಿಷ್ಯತ್ತಿನ ಭಯ, ಬಡವರ ಭಯ, ಬಲ್ಲಿದರ ಭಯ, ಪೂಜಾರಿಗಳ ಭಯ; ಜ್ಯೂಗಳ, ಗ್ರೀಕರ ಭಯ; ವಿದ್ಯಾ ವಂತರ ಭಯ; ಕಾಡು ಜನಗಳಾದ ಹನ್ಸ್, ಗಾತ್ಸ್, ಗಾಲ್ಸ್ ಇವರ ಭಯ; ಯಾರ ಭಯದಿಂದ ನೀನು ಹೆದರಿ ಅವರನ್ನು ನಾಶಮಾಡಿದೆಯೋ ಆ ಕಾರ್ತೇಜ್‌ರ ಭಯ; ಮತ್ತು ಈಗ ಎಲ್ಲದಕ್ಕಿಂತಲೂ ಹೆಚ್ಚಾಗಿ ನೀನೇ ಸೃಷ್ಟಿಸಿರುವ ನಿನ್ನ ಪೂಜಾಮೂರ್ತಿ ಸಾಮ್ರಾಟ ಸೀಜರನ ಭಯ; ಕೊನೆಯಲ್ಲಿ ನನ್ನಂತಹ ತಿರಸ್ಕೃತನಾದ ಹೊಡೆಯು ಲ್ಪಟ್ಟ, ಭಿಕಾರಿಯ ಭಯ; ನಿನಗೆ ದೇವರ ಆಡಳಿತದಲ್ಲಿ ಹೊರತು ಉಳಿದುದರ ಲ್ಲೆಲ್ಲಾ ಭಯ. ರಸ್ತ, ಕಬ್ಬಿಣ, ಹೊನ್ನು ಇವುಗಳ ಹೊರತು ಉಳಿದ ಯಾವುದ ರಲ್ಲೂ ನಿನಗೆ ನಂಬಿಕೆಯಿಲ್ಲ. ರೋಮ್ ಪರವಾಗಿರುವ ನೀನು ಪ್ರಪಂಚದ ಹೇಡಿಯ ಪ್ರತಿನಿಧಿ. ದೇವನ ರಾಜ್ಯದ ಪರವಾಗಿರುವ, ಎಲ್ಲವನ್ನೂ ಕಳೆದುಕೊಂಡ ದುಃಖಿ,. ನಾನು ಶಾಶ್ವತವಾದ ರಾಜ್ಯವನ್ನು ಸಂಪಾದಿಸಿದ್ದೇನೆ."

ಆದರೆ ಮುಖ್ಯವಾದುದು ಗಾಂಧಿಜಿಯವರು ಹಿಂದೂದೇಶಕ್ಕೆ ಮಾಡಿದ ಸೇವೆ ಗಳಾಗಲಿ, ಅಥವಾ ನಾನು ವ್ಯಕ್ತಿಶಃ ಎಷ್ಟರ ಮಟ್ಟಿಗೆ ಅವರಿಗೆ ಋಣಿಯಾಗಿದ್ದೇ ನೆಂಬುದಾಗಲಿ ಆಗಿರಲಿಲ್ಲ. ಅವೆಲ್ಲಾ ಇದ್ದರೂ ಕೆಲವು ವಿಚಾರಗಳಲ್ಲಿ ಅವರು ಪೂರ್ಣ

---

* ಪೈಲೇಟ್‌ನು ರೋಮ್ ಚಕ್ರಾಧಿಪತ್ಯದ ಗವರ್‌ನರ್ ಎಂದು ಹೇಳಬಹುದು. ಯೆಹೂದ್ಯರು ಕ್ರಿಸ್ತನನ್ನು ಹಿಡಿದುಕೊಂಡುಹೋಗಿ ವಿಚಾರಣೆಗಾಗಿ ಆತನ ಮುಂದೆ ನಿಲ್ಲಿಸಿದರು. ಆತನು ವಿಚಾರಣೆಯನ್ನು ನಡೆಯಿಸಿ, ಕ್ರಿಸ್ತನು ತಪ್ಪಿತಸ್ಥನಂತೆ ತನ್ನ ಗಣನೆಗೆ ಬರಲಿಲ್ಲವಾದರೂ ಯೆಹೂದ್ಯ ಜನಪದವು ಆತನನ್ನು ಶಿಲುಬೆಗೇರಿಸಬೇಕೆಂದು ಹಾಹಾಕಾರ ಮಾಡುತ್ತಿದ್ದುದರಿಂದ ತಾನು ಅಡ್ಡ ಬರಲು ಇಷ್ಟಪಡುವುದಿಲ್ಲವೆಂದೂ ಹೇಳಿ, ತಾನು ಬಳಿಯಲ್ಲಿದ್ದ ಪಾತ್ರೆಯಲ್ಲಿ ತನ್ನ ಕೈಗಳನ್ನು ತೊಳೆದುಕೊಂಡನು. ಕ್ರಿಸ್ತನನ್ನು ಪೈಲೇಟನು ವಿಚಾರಿಸಿದ ಈ ಪ್ರಸಂಗವು ಅನೇಕ ನಾಟಕಕಾರರಿಗೆ ವಸ್ತುವಾಗಿ ಪರಿಣಮಿಸಿದೆ.

ವಾಗಿ ತಪ್ಪಿನಲ್ಲಿರಬಹುದು ಅವರ ಗುರಿ ಏನು ? ಅವರೊಂದಿಗೆ ಅನೇಕ ವರ್ಷ ಬಹಳ ಬಳಕೆಯಿಂದಿದ್ದರೂ ಅವರ ಉದ್ದೇಶ ನನಗೆ ಸ್ಪಷ್ಟವಾಗಿಲ್ಲ ಅವರಿಗೇ ಸ್ಪಷ್ಟವಾಗಿದೆಯೆ, ಎಂದು ನನಗೆ ಅನುಮಾನ ಅವರು, ಒಂದು ಹೆಜ್ಜೆ ನನಗೆ ಸಾಕು ಎಂಬುದಾಗಿ ಹೇಳುತ್ತಾರೆ ಭವಿಷ್ಯವನ್ನು ಇಣಿಕಿ ನೋಡುವುದೂ, ಸ್ಪಷ್ಟವಾದ ಗುರಿಯನ್ನು ಇಟ್ಟುಕೊಳ್ಳುವುದೂ ಅವರದಲ್ಲ ಮಾರ್ಗಗಳನ್ನು ನೀವು ನೋಡಿಕೊಳ್ಳಿ ಕೊನೆಯು ತನ್ನನ್ನು ತಾನು ನೋಡಿಕೊಳ್ಳುವುದು ಎಂಬುದಾಗಿ ಅವರು ಎಂದೆಂದಿಗೂ ಹೇಳುತ್ತಿದ್ದಾರೆ ನಿಮ್ಮ ವ್ಯಕ್ತಿ ಜೀವನದಲ್ಲಿ ಪರಿಶುದ್ಧರಾಗಿರಿ ಉಳಿದುವೆಲ್ಲಾ ತಾವೇ ಹಿಂಬಾಲಿಸುತ್ತವೆ ಅದು ಶಾಸ್ತ್ರೀಯವಾದ ಮತ್ತು ರಾಜಕೀಯವಾದ ಮನೋಭಾವವಲ್ಲ ಬಹುಶಃ ಅದು ನೈತಿಕ ಮನೋಭಾವವೂ ಅಲ್ಲ ಅದು ಸಂಕುಚಿತವಾದ ನೀತಿ ಅದರಿಂದ ಈ ಪ್ರಶ್ನೆ ಹುಟ್ಟಿಕೊಳ್ಳುತ್ತದೆ ಒಳ್ಳೆಯದೆಂದರೇನು ? ಅದು ವ್ಯಕ್ತಿಗೆ ಸಂಬಂಧಪಟ್ಟುದೆ ಅಥವಾ ಸಮಾಜಕ್ಕೆ ಸಂಬಂಧಪಟ್ಟ ವಿಚಾರವೇ? ಗಾಂಧಿಜಿಯವರು ನಡತೆ, ಯೋಗ್ಯತೆಗಳಿಗೆ ಪೂರ್ಣ ಪ್ರಾಶಸ್ತ್ಯವನ್ನು ಕೊಟ್ಟು ಬುದ್ಧಿಗೂ ಅದರ ಸಿದ್ಧತೆಗೂ ಅತ್ಯಲ್ಪ ಪ್ರಶಸ್ತಿಯನ್ನು ಕೊಡುತ್ತಾರೆ ನಡತೆಯಿಲ್ಲದಿದ್ದ ಬುದ್ಧಿಯಿಂದ ಅಪಾಯವಾಗಬಹುದು ಆದರೆ ಬುದ್ಧಿಯಿಲ್ಲದೆ ನಡತೆಯು ಏತಕ್ಕೆ ಬೇಕು ? ನಡತೆಯು ಬೆಳೆಯುವುದಾದರೂ ಹೇಗೆ ? ಗಾಂಧಿಜಿಯವರು ಮಧ್ಯಕಾಲಿಕ ಕ್ರೈಸ್ತ ಸನ್ಯಾಸಿಗಳಿಗೆ ಹೋಲಿಸಲ್ಪಟ್ಟಿದ್ದಾರ ಅವರು ಹೇಳುವ ಅನೇಕ ವಿಷಯಗಳು ಆ ಕಾಲಕ್ಕೆ ಹೊಂದಿಕೊಳ್ಳುತ್ತವೆ ಅವು ಆಧುನಿಕ ಮಾನಸಿಕ ಅನುಭವಕ್ಕೂ ಕ್ರಮಗಳಿಗೂ ಹೊಂದಿಕೊಳ್ಳುವುದಿಲ್ಲ

ಇದು ಹೇಗಾದರೂ ಇರಲಿ. ಗುರಿಯಲ್ಲಿ ಅಸ್ಪಷ್ಟವಾಗಿರುವುದು ನನಗೆ ಬಹಳ ಖೇದಪೂರ್ಣವಾದುದಾಗಿ ತೋರುತ್ತದೆ ಕಾರ್ಯದಿಂದ ಫಲ ಬರಬೇಕಾದರೆ ಸ್ಪಷ್ಟವಾದ ಗುರಿಗೆ ಅದನ್ನು ತಿರುಗಿಸಬೇಕು ಜೀವವು ಬರಿಯ 'ಸಕಾರಣ'ಗಳಲ್ಲ ಅದುದರಿಂದ ಆ ಗುರಿಗಳನ್ನು ಜೀವನಕ್ಕೆ ಹೊಂದಿಸಿಕೊಳ್ಳಲು ಪದೇಪದೇ ಬದಲಾಯಿಸಬೇಕಾಗುವುದು ಆದರೆ ಯಾವುದಾದರೂ ಸ್ಪಷ್ಟವಾದ ಗುರಿಯಂತೂ ಇರಲೇಬೇಕು.

ಗಾಂಧಿಜಿಯವರು ಅನೇಕ ಸಲ ಹೊರಕ್ಕೆ ತೋರುವಷ್ಟು, ತಮ್ಮ ಗುರಿಯಲ್ಲಿ ಅಸ್ಪಷ್ಟರಾಗಿಲ್ಲವೆಂದು ನನಗೆ ತೋರುತ್ತದೆ· ಅವರಿಗೆ ಒಂದು ದಾರಿಯಲ್ಲಿ ನಡೆಯಲು ಆವೇಶಪೂರ್ಣವಾದ ಉತ್ಸಾಹವಿದೆ ಆ ದಾರಿಯು ಆಧುನಿಕ ಕ್ರಮಗಳಿಗೆ ಪೂರ್ಣವಾಗಿ ವಿರುದ್ಧವಾಗಿದೆ ಗಾಂಧಿಜಿಯವರಿಗೆ ಅವೆರಡನ್ನೂ ಸರಿಪಡಿಸಲು ಸಾಧ್ಯವಾಗಿಲ್ಲ ಮತ್ತು ತಮ್ಮ ಗುರಿಗೆ ಬೇಕಾದ ಮೆಟ್ಟಿಲುಗಳನ್ನೆಲ್ಲಾ ಸ್ಪಷ್ಟವಾಗಿ ನಿಶ್ಚಯಿಸಲೂ ಅವರಿಗೆ ಸಾಧ್ಯವಾಗಿಲ್ಲ ಅದುದರಿಂದ ಅಸ್ಪಷ್ಟತೆಯು

ತೋರಿಕೆಯೂ ಸ್ಪಷ್ಟತೆಯ ಅಭಾವವೂ ಉಂಟಾಗಿದೆ. ಆದರೆ ಅವರ ಸಾಧಾರಣ ಮನೋಭಾವವು, ಇಪ್ಪತ್ತೈದು ವರುಷಗಳ ಹಿಂದ ಅವರು ದಕ್ಷಿಣ ಆಫ್ರಿಕದಲ್ಲಿ ತಮ್ಮ ತತ್ವಗಳನ್ನು ಪ್ರಚಾರಮಾಡಲು ಪ್ರಾರಂಭಿಸಿದ ಕಾಲದಿಂದ ಸ್ಪಷ್ಟವಾಗಿದೆ ಹಿಂದಲ ಅವರ ಬರವಣಿಗೆಗಳೇ ಅವರ ಅಭಿಪ್ರಾಯಗಳನ್ನು ಈಗಲೂ ಪ್ರತಿಧ್ವನಿ ಮಾಡುತ್ತವೋ ಇಲ್ಲವೋ ನನಗೆ ಗೊತ್ತಿಲ್ಲ ಆ ಬರವಣಿಗೆಗಳೆಲ್ಲ ಪೂರ್ಣವಾಗಿ ಅವರ ಅಭಿಪ್ರಾಯಗಳ ಪ್ರತಿಧ್ವನಿಯೆಂದು ನಾನು ನಂಬಲಾರ ಆದರೆ ಒಟ್ಟಿನಲ್ಲಿ ಅವು ಅವರ ಆಲೋಚನೆಗಳ ಹಿನ್ನೆಲೆಯನ್ನು ತಿಳಿಯಲು ನಮಗೆ ಸಹಾಯ ಮಾಡುತ್ತವೆ

ಅವರು ೧೯೦೯ ರಲ್ಲಿ ಈ ರೀತಿ ಬರೆದರು "ಹಿಂದೂದೇಶದ ಬಿಡುಗಡೆಯು ತಾನು ಐವತ್ತು ವರುಷಗಳಿಂದ ಕಲಿತುದನ್ನು ಬಿಡುವುದರಲ್ಲಿದೆ ರೈಲುಗಳು, ಟೆಲಿ ಗ್ರಾಮುಗಳು, ಆಸ್ಪತ್ರೆಗಳು, ವಕೀಲರು, ವೈದ್ಯರು ಮುಂತಾದವರೆಲ್ಲಾ ಹೋಗ ಬೇಕು ಮೇಲು ತರಗತಿಯವರು ಉದ್ದೇಶಪೂರ್ವಕವಾಗಿ, ಅದೇ ಧರ್ಮವೆಂದು ರೈತರ ಬಡ ಜೀವನಕ್ರಮವನ್ನು ಕಲಿಯಬೇಕು ಅದೇ ನಿಜವಾದ ಸುಖಕ್ಕೆ ದಾರಿ ನಾನು ಪ್ರತಿಸಲವೂ ರೈಲುಗಾಡಿ ಅಥವಾ ಮೋಟಾರು ಗಾಡಿಯನ್ನು ಹತ್ತಿದಾಗ, ನನ್ನ ಆತ್ಮಕ್ಕೆ ನಾನೇ ವಿರೋಧವನ್ನು ಮಾಡಿದಂತೆ ನನಗೆ ತೋರುತ್ತದೆ ಕೃತ ಕವಾದ ಮತ್ತು ಬಹಳ ವೇಗವಾಗಿ ಹೋಗತಕ್ಕ ವಾಹನಾದಿಗಳಿಂದ ಪ್ರಪಂಚ ವನ್ನು ಉತ್ತಮಗೊಳಿಸಲು ಪ್ರಯತ್ನಪಡುವುದು, ಅಸಾಧ್ಯವಾದುದನ್ನು ಸಾಧಿಸಲು ಪ್ರಯತ್ನಿಸಿದಂತೆಯೆ"

ನನಗೆ ಇದೆಲ್ಲಾ ತಪ್ಪೆಂದೂ ಸಾಧಿಸಲು ಅಸಾಧ್ಯವಾದುದೆಂದೂ ತೋರು ತ್ತದೆ. ಅದರ ಹಿಂದೆ, ಗಾಂಧಿಜಿಯವರಿಗಿರುವ ಬಡತನ ಮತ್ತು ಸನ್ಯಾಸಿ ಜೀವ ನದ ಪ್ರೇಮವೂ ಪ್ರಶಂಸೆಯೂ ಗೊತ್ತಾಗುತ್ತದೆ ಅವರ ಅಭಿಪ್ರಾಯದಲ್ಲಿ ನಾಗರಿ ಕತೆ, ಸುಧಾರಣೆ ಎಂದರೆ ಆವಶ್ಯಕತೆಗಳನ್ನು ಹೆಚ್ಚಿಸಿಕೊಂಡು ಉತ್ತಮ ಜೀವನ ವನ್ನು ನಡೆಸುವುದಲ್ಲ "ಉದ್ದೇಶಪೂರ್ವಕವಾಗಿ, ಆವಶ್ಯಕತೆಗಳನ್ನೆಲ್ಲಾ ಕಡಿಮೆ ಮಾಡಬೇಕು· ಅದರಿಂದ ತೃಪ್ತಿಯೂ ಸುಖವೂ ಉಂಟಾಗುತ್ತದೆ ಸೇವೆಮಾ ಡುವ ಯೋಗ್ಯತೆಯೂ ಹೆಚ್ಚುತ್ತದೆ," ಈ ಸಂಗತಿಗಳನ್ನು ಒಂದು ಸಲ ಒಪ್ಪಿ ಕೊಂಡನಂತರ, ಗಾಂಧಿಜಿಯವರನ್ನು ತಿಳಿಯುವುದೂ ಅವರ ಕೆಲಸಗಳನ್ನು ಅನುಸ ರಿಸುವುದೂ ಸುಲಭವಾಗುತ್ತದೆ ನಾವು ಅನೇಕರು ಈ ಅವರ ತತ್ವಗಳನ್ನು ಒಪ್ಪಿ ಕೊಳ್ಳುವುದಿಲ್ಲ ಆದರೂ, ಅನಂತರ ಅವರ ಕಾರ್ಯಕ್ರಮಗಳು ನಮ್ಮ ಇಷ್ಟಕ್ಕೆ ವಿರೋಧವಾದಾಗ ನಾವು ಅವುಗಳನ್ನು ಆಕ್ಷೇಪಿಸುತ್ತೇವೆ

ನನಗೆ ದಾರಿದ್ರ್ಯ ಮತ್ತು ದುಃಖದ ಪ್ರಶಂಸೆಯನ್ನು ಕಂಡರೆ ಇಷ್ಟವಿಲ್ಲ ಅವು ಗಳನ್ನು ನಾಶಗೊಳಿಸಬೇಕು ಮತ್ತು ಸನ್ಯಾಸಿಯ ಜೀವನವು, ಸಾಮಾಜಿಕ ಗುರಿ ಯಲ್ಲಿ ಅದು ಕೆಲವು ವ್ಯಕ್ತಿಗಳಿಗೆ ಸರಿಹೋಗಬಹುದು ನನಗೆ ಸರಳತೆ, ಸಮಾನತೆ, ಆತ್ಮಸಂಯಮನ ಇವುಗಳೆಲ್ಲಾ ತಿಳಿಯುತ್ತದೆ, ಮೆಚ್ಚಿಕೆಯಾಗಿವೆ ಆದರೆ ದೇಹ ದಂಡನೆಯನ್ನು ನಾನು ಒಪ್ಪುವುದಿಲ್ಲ ದೇಹವನ್ನು, ವ್ಯಾಯಾಮ ಪ್ರವೀಣನು ತಯಾರುಮಾಡಿಕೊಳ್ಳುವಂತೆ, ಮನಸ್ಸನ್ನೂ ತಯಾರುಮಾಡಿಕೊಳ್ಳುವುದು ಅವಶ್ಯ ಕವೆಂದು ನನ್ನ ನಂಬಿಕೆ ಸುಖಲೋಲುಪನಾದ ಮನುಷ್ಯನು ಕಷ್ಟಸಹಿಷ್ಣುವಾಗಿ, ಆತ್ಮಸಂಯಮನವನ್ನು ಇಟ್ಟುಕೊಂಡು, ಸಂದರ್ಭ ಒದಗಿದಾಗ ಶೂರನಂತೆ ನಡೆಯು ತ್ತಾನೆಂದು ನಿರೀಕ್ಷಿಸುವುದು ತಪ್ಪು ಒಳ್ಳೆಯ ನೀತಿಯ ಮಟ್ಟದಲ್ಲಿ ಇರುವುದಕ್ಕೆ ಕಡೆಯಪಕ್ಷ ದೇಹಕ್ಕೆ ಎಷ್ಟು ತಯಾರಿಬೇಕೋ ಮನಸ್ಸಿಗೂ ಅಷ್ಟೇ ತಯಾರಿ ಬೇಕು ಆದರೆ ಅದು ನಿಜವಾಗಿಯೂ ದೇಹದಂಡನೆ ಅಥವಾ ಸನ್ಯಾಸಿಯಂತೆ ಇರುವುದೆಂದು ಅರ್ಥವಲ್ಲ

ಮತ್ತು ನನಗ "ಸಮಾನ್ಯ ರೈತನ ಜೀವನ"ದಲ್ಲಿ ಸ್ವಲ್ಪವೂ ಮೆಚ್ಚಿಕೆಯಿಲ್ಲ ಅದನ್ನು ಕಂಡರೆ ನನಗೆ ಹೇಸಿಗೆಯಾಗುತ್ತದೆ ಅದಕ್ಕೆ ಒಳಗಾಗುವ ಬದಲು, ರೈತರನ್ನೂ ಆದರಿಂದ ತಪ್ಪಿಸಬೇಕೆಂದು ನನಗೆ ಇಷ್ಟ ಎಂದರೆ ರೈತರನ್ನು ಪಟ್ಟಣಕ್ಕೆ ತರುವುದಲ್ಲ ರೈತರಿಗೆ ಪಟ್ಟಣಗಳ ಸಂಸ್ಕೃತಿಯನ್ನು ಹರಡಬೇಕೆಂಬುದು ರೈತನ ಜೀವನ ನನಗೆ ಸುಖವನ್ನುಂಟುಮಾಡುವ ಬದಲು ಸೆರೆಮನೆಯಷ್ಟೇ ಕಷ್ಟವಾಗಬಹುದು 'ನೇಗಿಲ ಯೋಗಿ'ಯ ಜೀವನದಲ್ಲಿ ಇರುವುದಾದರೂ ಏನು? ಅನೇಕ ಶತಮಾನಗಳಿಂದ ತುಳಿ ಯಲ್ಪಟ್ಟು ಲೂಟಿ ಮಾಡಲ್ಪಟ್ಟ ಅವನು, ಅವನು ಇಟ್ಟಿರತಕ್ಕ ಪ್ರಾಣಿಗಳಿಗಿಂತ ಯಾವ ರೀತಿಯಲ್ಲೂ ಉತ್ತಮನಾಗಿಲ್ಲ

"ಮಹದಾನಂದ, ನಿರಾಶೆಗಳಿಗವನ ಸತ್ತಂತೆ ಮಾಡಿದವರಾರ್,
ದುಃಖಿಸುವ ವಸ್ತು ತಾನಲ್ಲ ಮೇಣ್ ಎಂದಿಗೂ ಆಶಿಸುವುದಲ್ಲ,
ಕಲ್ಲುಕಲ್ಲಾಗಿರುವ ಮರಗೊಂಡಿರುವ, ಎತ್ತಿಗವ ಸೋದರನು?"

ಮನುಷ್ಯನ ಬುದ್ಧಿಯಿಂದ ದೂರವಾಗಿ ಬುದ್ಧಿಗೆ ಪ್ರಾಮುಖ್ಯತೆಯಿಲ್ಲದೆ ಕಾಡು ಜನರ ಮನೋಭಾವಕ್ಕೆ ಹಿಂದಿರುಗುವ ಈ ಆಸೆಯು ನನಗೆ ಅರ್ಥವಾಗಿಲ್ಲ ಮನುಷ್ಯನ ಸಾಧನೆಗಳಿಗೂ ಪ್ರಕೃತಿಯ ಮೇಲೂ ಅವನ ಜಯಗಳಿಗೂ ಔದಾಸೀನ್ಯ ಆ ಜನು

ವನ್ನೂ ಬೆಳಸಣಿಗೆಂಟ್ಟೂ ತಪ್ಪಿಸತಕ್ಕ ಸ್ಥಿತಿಗೆ ಸಾಪ್ರಶಸ್ತ್ಯ ಆಧುನಿಕ ನಾಗರೀಕತೆ ಯಲ್ಲಿ ಕೆಟ್ಟದ್ದು ತುಂಬಿದೆ ಹಾಗೆಯೇ ಒಳ್ಳೆಯುದೂ ತುಂಬಿದೆ ಕೆಟ್ಟದ್ದರಿಂದ ಬಿಡಿಸಿಕೊಳ್ಳಲು ಅದಕ್ಕೆ ಶಕ್ತಿಯಿದೆ ಅದರ ಬೇರನ್ನೂ ಕೊನೆಗಳನ್ನೂ ನಾಶಮಾ ಡುವುದು ಆ ಶಕ್ತಿಯನ್ನು ನಾಶಮಾಡಿದಂತೆಯೇ ಮತ್ತು ಹಳೆಯ ಉತ್ಸಾಹ ರಹಿತ ವಾದ ಒಂದೇ ಸಮನಾದ, ವೈವಿಧ್ಯವಿಲ್ಲದ ಜೀವನ ಕ್ರಮಕ್ಕೆ ಹಿಂದಿರುಗುವುದಾ ಗುತ್ತದೆ ಒಂದು ಪಕ್ಷ ಅದು ಇಷ್ಟಕರವಾಗಿದ್ದರೂ ಅದು ಅಸಾಧ್ಯಪ್ರಯತ್ನವೇ ಸರಿ ಬದಲಾವಣೆಯ ನದಿಯನ್ನು ತಡೆಯುವುದಕ್ಕೆ ನಮಗೆ ಸಾಧ್ಯವಿಲ್ಲ ಮನಸ್ಸಿ ನಲ್ಲಿ ಈಡನ್ ಸೇಬ * ನ್ನು ತಿಂದಿರುವ ನಾವು ಆ ರುಚಿಯನ್ನು ಮರೆತು, ಹಳೆಯ ಪದ್ಧತಿಗಳಿಗೆ ಹೋಗಲಾರೆವು

ಇದರ ಮೇಲೆ ವಾದ ಮಾಡುವುದು ಕಷ್ಟ ಏಕೆಂದರೆ ಎರಡು ದೃಷ್ಟಿಗಳೂ ತೀರ ಬೇರೆಬೇರೆಯಾಗಿವೆ ಗಾಂಧಿಜಿಯವರು ಯಾವಾಗಲೂ ವ್ಯಕ್ತಿಯ ಮುಕ್ತಿ, ಪಾಪ, ಈ ದೃಷ್ಟಿಯಲ್ಲಿ ಯೋಚಿಸುತ್ತಾರೆ ಆದರೆ ನಮ್ಮಲ್ಲಿ ಅನೇಕರಿಗೆ ಸಾಮಾಜಿಕ ಶುಭವು ಮನಸ್ಸಿನಲ್ಲಿ ಮುಖ್ಯವಾಗಿದೆ ಪಾಪದ ಭಾವ ನನ್ನ ಮನಸ್ಸಿಗೆ ಹಿಡಿಯು ವುದು ಕಷ್ಟವಾಗಿದೆ ಅದರಿಂದಲೇ ಗಾಂಧಿಜಿಯವರ ಜೀವನ ಭಾವನೆಗಳೂ ನನಗೆ

---

* ಇದು ಪ್ರಪಂಚದ ಸೃಷ್ಟಿಯನ್ನು ಕುರಿತದ್ದು. ದೇವನು ಅತಿ ಸುಂದರ ವಾದೊಂದು ವನವನ್ನು ಸೃಷ್ಟಿಸಿ ಆಡಮ್ ಎಂಬ ಪುರುಷನನ್ನೂ ಆತನ ಎದೆಯ ಮೂಳೆಯೊಂದರಿಂದ ಈವ್ ಎಂಬ ಸ್ತ್ರೀಯನ್ನೂ ಸೃಜಿಸಿ, ಆ ವನದಲ್ಲಿ ಅವರೀರ್ವ ರನ್ನೂ ವಾಸಿಸುವಂತೆ ಮಾಡಿದನು ಆ ವನದಲ್ಲಿ ಅನೇಕ ವಿಧವಾದ ಸುಂದರ ಫಲಪುಷ್ಪದ್ರುಮಗಳು ಇದ್ದವು ಸ್ತ್ರೀಪುರುಷರಿಬ್ಬರೂ ಆ ವನದಲ್ಲಿ ಅತಿ ಸರಳವಾದ ಜೀವನವನ್ನು ನಡೆಸುತ್ತಿದ್ದರು ಯಾವ ಸುಳ್ಳುಸುಳ್ಳಾದ, ಮಾನ ಮರ್ಯಾದೆ, ವ್ಯವಹಾರ, ಇವುಗಳಿಲ್ಲದ, ನಗ್ನರಾಗಿಯೇ, ಪ್ರೇಮಪೂರ್ಣವಾದ ಜೀವನವನ್ನು ಮಕ್ಕಳಂತೆ ನಡೆಸುತ್ತಿದ್ದರು. ದೇವನು, ಒಂದು ಎಚ್ಚರಿಕೆಯನ್ನು ಮಾತ್ರ ಕೊಟ್ಟಿ ದ್ದನು— ವನದಲ್ಲಿರುವ ಎಲ್ಲ ವೃಕ್ಷಗಳ ಹಣ್ಣುಗಳನ್ನೂ ಬೇಕಾದಹಾಗೆ ತಿನ್ನಬಹುದು ಆದರ ಅಲ್ಲಿದ್ದ ಲೌಕಿಕ ಜ್ಞಾನದ ವೃಕ್ಷದ ಫಲವನ್ನು ಮಾತ್ರ ಮುಟ್ಟಕೂಡದು

ಈ ಎಚ್ಚರಿಕೆಯನ್ನು ವಿಶೇಷವಾಗಿ ಈವ್ ಳಿಗೇ ಕೊಟ್ಟಿದ್ದನು ಆದರೆ ಸೈತಾ ನನ ದುರ್ಬೋಧೆಯಿಂದ ಈವ್ ಳು ಒಂದು ದಿನ ಆ ಹಣ್ಣಿನ ರುಚಿನೋಡಿದಳು ಕೂಡಲೆ ಅವಳಿಗೆ ನಾಚಿಕೆ ಮುಂತಾದವು ತಲೆದೋರಿತು ಆಕೆಯ ಪ್ರೇರಣೆಯ ಮೇರೆ ಆಡಮ್ ನೂ ಅದನ್ನು ತಿಂದನು ಅವರ ಸರಳಜೀವನವು ಅದರಿಂದ ಹಾಳಾಗಿ ಹೋಯಿತು. ಕೆಲಕಾಲದಲ್ಲಿಯೇ ದೇವನು ಕೋಪಗೊಂಡು ಪ್ರಳಯವಾಗಿಸಿದನು.

ಸರಿಯಾಗಿ ಮೆಚ್ಚಿಕೆಯಾಗಿಲ್ಲ ಅವರು ಸಮಾಜವನ್ನೂ ಸಾಮಾಜಿಕ ಸೌಧವನ್ನೂ ಬದಲಾಯಿಸಲು ಹೊರಟಿಲ್ಲ. ಆದರೆ ವ್ಯಕ್ತಿಗಳಿಂದ ಪಾಪವನ್ನು ಹೊರಡಿಸಲು ಹೊರಟಿದ್ದಾರೆ ಅವರು ಹೀಗೆ ಬರೆದಿದ್ದಾರೆ "ಸ್ವದೇಶಿಯನ್ನು ಅನುಸರಿಸುವವನು ಪ್ರಪಂಚವನ್ನು ತಿದ್ದುವ ವ್ಯರ್ಥವಾದ ಕೆಲಸಕ್ಕೆ ಹೋಗುವುದಿಲ್ಲ ಏಕೆಂದರೆ ಪ್ರಪಂಚವು ದೇವನ ನಿಯಮಕ್ಕೆ ಒಳಗಾಗಿ ನಡೆಯುತ್ತಿದೆಯೆಂದೂ ಯಾವಾಗಲೂ ಹಾಗೇ ನಡೆಯುವುದೆಂದೂ ಅವನಿಗೆ ನಂಬಿಕೆಯಿದೆ" ಆದರೆ ಪ್ರಪಂಚವನ್ನು ತಿದ್ದುವುದರಲ್ಲಿ ಗಾಂಧಿಜಿಯವರು ಬಹಳ ಮುಂದಾಗಿದ್ದಾರೆ. ಆದರೆ ಅವರು ಗುರಿಯಿಟ್ಟಿರತಕ್ಕ ಸುಧಾರಣೆ, ವ್ಯಕ್ತಿಗಳ ಸುಧಾರಣೆ ಇಂದ್ರಿಯಗಳ ಚಾಪಲ್ಯದಿಂದ ಪ್ರೇರಿತವಾಗತಕ್ಕ ಪಾಪಗಳಿಗೆ ವಿರುದ್ಧವಾದ ಸುಧಾರಣೆ ಬಹುಶಃ, ಒಬ್ಬ ಶಕ್ತನಾದ ರೋಮನ್ ಕ್ಯಾಥೋಲಿಕನು ಫೇಸಿಜಂನ್ನು ಕುರಿತು ಸ್ವಾತಂತ್ರ್ಯ ವಿಚಾರದಲ್ಲಿ ಹೇಳಿದ ಈ ವಾಕ್ಯವು ಅವರಿಗೆ ಒಪ್ಪಿಗೆಯಾಗಬಹುದು "ಸ್ವಾತಂತ್ರ್ಯವೆಂದರೆ, ಪಾಪದಿಂದ ಬಿಡುಗಡೆ, ಮತ್ತೇನೂ ಅಲ್ಲ" ಲಂಡನ್ ಬ್ರಿಟಿಷ್‌ರು ಇನ್ನೂರು ವರುಷಗಳ ಹಿಂದೆ ಬರೆದ ಈ ಮಾತುಗಳು ಎಷ್ಟು ಸಮಾನಾರ್ಥವುಳ್ಳವುಗಳಾಗಿವೆ—"ಕ್ರಿಶ್ಚಿಯನ್ ಮತವು ಕೊಡುವ ಸ್ವಾತಂತ್ರ್ಯವು, ಯಾವುದೆಂದರೆ, ಪಾಪ ಮತ್ತು ಸೈತಾನ್‌ನಿಂದ ಸ್ವಾತಂತ್ರ್ಯ, ಮನುಷ್ಯನ ಇಂದ್ರಿಯ ಚಾಪಲ್ಯ, ದುರಾಶೆ, ಕಾಮಕ್ರೋಧಾದಿಗಳಿಂದ ಬಿಡುಗಡೆ" *

ಈ ದೃಷ್ಟಿಯನ್ನು ಒಪ್ಪಿಕೊಂಡರೆ, ಗಾಂಧಿಜಿಯವರ ದಾಂಪತ್ಯ ವಿಚಾರಗಳು, ಸಾಧಾರಣ ಮನುಷ್ಯನಿಗೆ ಅಸಾಮಾನ್ಯವಾಗಿ ತೋರಿದರೂ, ಸ್ವಲ್ಪಮಟ್ಟಿಗೆ ಅರ್ಥವಾಗುತ್ತವೆ ಅದನ್ನು ಒಂದು ಧರ್ಮದಂತೆ ಸ್ವೀಕರಿಸಿ ಅದರಂತೆ ನಡೆಯಬೇಕು ಇಲ್ಲ ಅದನ್ನು ಬಿಡಬೇಕು. ಅಲ್ಲಿ ಮಧ್ಯದಾರಿಯಿಲ್ಲ ಏಕೆಂದರ ಅದು ನಂಬಿಕೆಯ ಮಾತೇ ಹೊರತು ಬುದ್ಧಿಯ ಮಾತಲ್ಲ ನನಗೆ ತೋರಿದ ಮಟ್ಟಿಗೆ ಈ ವಿಚಾರದಲ್ಲಿ ಗಾಂಧಿಜಿಯವರದು ತಪ್ಪು ಅವರ ಸಲಹೆ ಕೆಲವರಿಗೆ ಸರಿಹೋಗಬಹುದು ಆದರೆ ಅದು ಸಾಧಾರಣ ನಿಯಮವಾದರೆ ಅದರಿಂದ ಆಶಾಭಂಗವೂ, ಅದ್ದಿಯೂ ನರಗಳ ವ್ಯಾಧಿಯೂ ಇನ್ನೂ ಅನೇಕ ಬಗೆಯ ದೇಹದ ಮತ್ತು ನರಗಳ ರೋಗಗಳೂ ಉಂಟಾಗುವುವು ಇಂದ್ರಿಯ ನಿಗ್ರಹವು ನಿಜವಾಗಿಯೂ ಒಳ್ಳೆಯದು ಆದರೆ ಗಾಂಧಿಜಿಯವರ ತತ್ವವು ಈ ಫಲವನ್ನು ವಿಶಾಲವಾಗಿ ಪಡೆಯಲು ಸಹಾಯವಾಗುವುದೇ ಎಂಬುದು ನನ್ನ ಅನುಮಾನ ಅದು ಬಹಳ ಮಿತಿಮೀರಿದುದು ಅನೇಕರಿಗೆ ಅದು ಅಸಾಧ್ಯವೆಂದು ತೋರಿ ತಮ್ಮ ದಾರಿಯಲ್ಲಿ ತಾವು ಹೋಗುತ್ತಾರೆ ಇಲ್ಲದಿದ್ದರೆ ಪತಿ ಪತ್ನಿಯರಿಗೆ ವ್ಯತ್ಯಾಸ ಬರುತ್ತದೆ ಗಾಂಧಿಜಿಯವರು, ಸಂತಾನ ಸಂಯಮದ

---

* ಈ ಪತ್ರವು ೪೭ ನೆಯ ಅಧ್ಯಾಯದಲ್ಲಿ ಉಧೃತವಾಗಿದೆ.

ಮಾರ್ಗಗಳಿಂದ ಇಂದ್ರಿಯತೃಪ್ತಿಗೂ ಸ್ವೇಚ್ಛಾಪ್ರವರ್ತನೆಗೂ ಪ್ರೋತ್ಸಾಹ ಕೊಟ್ಟಂತೆ ಆಯಿತೆಂದೂ, ಹೆಣ್ಣುಗಂಡುಗಳಿಗೆ ಇರಬೇಕಾದ ಇಂದ್ರಿಯ ಸಂಬಂಧವನ್ನು ಒಪ್ಪಿ ಕೊಂಡ ಕೂಡಲೆ ಪ್ರತಿಯೊಬ್ಬ ಗಂಡಸೂ ಪ್ರತಿಯೊಬ್ಬ ಹೆಂಗಸಿನ ಹಿಂದೆಯೂ, ಪ್ರತಿಯೊಬ್ಬ ಹೆಂಗಸು ಪ್ರತಿಯೊಬ್ಬ ಗಂಡಸಿನ ಹಿಂದೆಯೂ ಓಡುವರೆಂದು ಯೋಚಿಸುತ್ತಿರುವಂತೆ ಕಾಣುತ್ತದೆ ಈ ಇಂದ್ರಿಯಗಳ ಪ್ರಶ್ನೆಯೇನೊ ಬಹಳ ಮುಖ್ಯವಾದುದೆ ಆದರೆ, ಮೇಲೆ ಹೇಳಿದ ಎರಡು ಬಗೆಯ ಊಹೆಗಳಿಗೂ ಆಸ್ಪದವಿಲ್ಲ ಗಾಂಧಿಜಿಯವರಿಗೆ ಈ ಪ್ರಶ್ನೆ ಏಕೆ ಅಷ್ಟರ ಮಟ್ಟಿಗೆ ಮನಸ್ಸಿಗೆ ಹಿಡಿಯಿತೋ ನನಗೆ ತಿಳಿಯದು. ಅವರಿಗೆ ಅದು ಮಶಿ, ಇಲ್ಲವೆ ಸುಣ್ಣ ಮಧ್ಯದ ಮತ್ತಾವ ಬಣ್ಣಗಳೂ ಇಲ್ಲ ಯಾವ ಕಡೆಯಲ್ಲೇ ಆಗಲಿ, ಅವರ ನಡತೆಯೂ ಮಾತೂ ನನಗೆ ಅಸ್ವಾಭಾವಿಕವಾಗಿಯೂ, ಅಸಾಧಾರಣವಾಗಿಯೂ ತೋರುತ್ತವೆ ಬಹುಶಃ ಇಂದ್ರಿಯಭೋಗದ ಮೇಲೆ ಈಗ ಬರೆಯಲ್ಪಡುತ್ತಿರುವ ಸಾವಿರಾರು ಪುಸ್ತಕಗಳ ಸುರಿಮಳೆಯ ಪ್ರತಿನೆಳಲು ಅದೆಂದು ನನಗೆ ತೋರುತ್ತದೆ ನಾನು ಸಾಧಾರಣವಾದ ಮನುಷ್ಯನೆಂದು ಊಹಿಸಿಕೊಳ್ಳುತ್ತೇನೆ. ಇಂದ್ರಿಯಭೋಗ ತನ್ನ ಭಾಗದ ಕೆಲಸವನ್ನು ಮಾಡಿವೆ ಆದರೆ ಅದೇ ನನ್ನ ಲಕ್ಷ್ಯವನ್ನೆಲ್ಲಾ ಆಕ್ರಮಿಸಿಲ್ಲ. ಮತ್ತು ಇತರ ಕಾರ್ಯಗಳಿಗೆ ನನಗೆ ಅವಕಾಶವನ್ನು ಕೊಡದೆ ಇಲ್ಲ ಅದು ಅಮುಖ್ಯ ವಾದ ಸ್ಥಾನವನ್ನು ಆಕ್ರಮಿಸಿದೆ

ಇದು ಸಾಧಾರಣವಾಗಿ ಸನ್ಯಾಸಿಯ ಮನೋಭಾವ ಅವನು ಪ್ರಪಂಚವನ್ನೂ ಅದರ ನಡತೆಗಳನ್ನೂ ಒಪ್ಪುವುದಿಲ್ಲ ಜೀವವು ಪಾಪವೆಂದುಕೊಂಡಿದ್ದಾನೆ ಸನ್ಯಾಸಿಗೆ ಅದು ಸ್ವಾಭಾವಿಕವಾದುದು ಆದರೆ ಪ್ರಪಂಚದಲ್ಲಿ ಬದುಕಿ ಜೀವನದಿಂದ ಸಾಧ್ಯವಾ ದಷ್ಟು ಫಲವನ್ನು ಹೊಂದಬೇಕೆಂದಿರುವ ಸ್ತ್ರೀ ಪುರುಷರ ವಿಷಯದಲ್ಲಿ ಅದು ಅಸಂಬದ್ಧ ವಾಗಿ ಕಾಣುತ್ತದೆ. ಮತ್ತು ಒಂದು ಪಾಪವನ್ನು ತಪ್ಪಿಸಿಕೊಳ್ಳುವುದರಲ್ಲಿ ಅವನು ಅನೇಕ ಇತರ ಪಾಪಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ.

ನಾನು ಇತರ ವಿಚಾರಗಳಿಗೆ ಹೋಗಿಬಿಟ್ಟೆ ಆದರೆ ಆಲಿಪುರದ ಸೆರೆಮನೆಯಲ್ಲಿ ಆ ಬೇಸರಿಕೆಯ ದಿನಗಳಲ್ಲಿ ಈ ಆಲೋಚನೆಗಳೆಲ್ಲಾ ನನ್ನ ಮನಸ್ಸನ್ನು ತುಂಬಿ ಕೊಂಡಿದ್ದವು ಅವುಗಳೆಲ್ಲಾ ಸಕಾರಣವಾಗಿ ಒಂದಾದಮೇಲೊಂದು ಈ ರೀತಿ ಬರುತ್ತಿದ್ದುವೆಂದಲ್ಲ ಎಲ್ಲಾ ಒಟ್ಟಾಗಿ ಅವ್ಯವಸ್ಥಿತವಾಗಿ ಸೇರಿಕೊಂಡಿದ್ದುವು. ಆದರಿಂದ ನನ್ನಲ್ಲಿ ಗೊಂದಲವೂ ನಿರುತ್ಸಾಹವೂ ಉಂಟಾದವು ಎಲ್ಲದಕ್ಕಿಂತ ಹೆಚ್ಚಾಗಿ ಸೆರೆಮನೆಯ ಕೋಣೆಯಿಂದ ಬೆಳೆಸಲ್ಪಟ್ಟ ಒಂಟಿತನ ಮತ್ತು ಹಾನಿಯ ಭಾವವಿದ್ದಿತು ನಾನು ಸೆರೆಮನೆಯ ಹೊರಗಡೆ ಇದ್ದಿದ್ದರೆ, ಏಟು ಕ್ಷಣಿಕ ವಾಗಿರುತ್ತಿದ್ದಿತು ಹೊಸ ಪರಿಸ್ಥಿತಿಗೆ ಹೊಂದಿಕೊಂಡು ನಾನು ಮಾತಿನಿಂದಲೂ

ಕೆಲಸದಿಂದಲೂ, ಅದರ ತೀವ್ರತೆಯನ್ನು ತಪ್ಪಿಸಿಕೊಳ್ಳುತ್ತಿದ್ದೆ ಸೆರೆಮನೆಯಲ್ಲಿ ಅಂತಹ ಬಿಡುಗಡೆ ಇರಲಿಲ್ಲ ನಾನು ಕೆಲವು ದಿನಗಳನ್ನು ಬಹಳ ಕಷ್ಟದಿಂದ ಕಳೆದೆ ಅದೃಷ್ಟವಶದಿಂದ, ನನ್ನನ್ನು ಯಾವುದೂ ಬಹುಕಾಲ ಅಮುಕಿ ಇಡಲಾರದು ನಿರುತ್ಸಾಹದಿಂದ ನಾನು ಬೇಗ ಚೇತರಿಸಿಕೊಳ್ಳುತ್ತಿದ್ದೆ ಸೆರೆಮನೆಯಲ್ಲಿ ಕಮಲ ಳೊಂದಿಗೆ ಒಂದು ಭೇಟಿಯಾಯಿತು ಅದರಿಂದ ನನಗೆ ಅಸಾಧ್ಯವಾದ ಉತ್ಸಾಹ ವುಂಟಾಯಿತು ನಾನು ಒಬ್ಬಂಟಿಗನಲ್ಲವೆಂಬ ಭಾವ ನನ್ನ ಮನಸ್ಸಿಗೆ ಬಂದಿತು ಏನಾದರೂ ಆಗಲಿ ನಾವು ಒಬ್ಬರಿಗೆ ಒಬ್ಬರು ಎಂಬ ಭಾವ ನನಗೆ ದೃಢವಾಯಿತು

೬೨

# ವಿರೋಧಾಭಾಸಗಳು

ಗಾಂಧಿಜಿಯವರನ್ನು ವ್ಯಕ್ತಿಶಃ ಕಾಣದೆ ಅವರ ಬರವಣಿಗೆಗಳನ್ನು ಮಾತ್ರ ಓದಿದವರು ಅವರನ್ನು ಪುರೋಹಿತರ ಪಙ್ತಿಗೆ ಸೇರಿಸಬಹುದು ಕಟ್ಟುನಿಟ್ಟಾಗಿ ಶುದ್ಧ ಮಡಿಯನ್ನು ಆಚರಿಸುವ ಉದ್ದಮುಖದ ಕ್ಯಾಲ್ವಿನಿಸ್ಟಿಕ್ ಪಂಗಡದವರೆಂದೂ ಮತ್ತು "ಕರಿಯ ನಿಲುವಂಗಿಗಳನ್ನು ಧರಿಸಿ ನಿತ್ಯ ಗ್ರಾಮಪ್ರದಕ್ಷಿಣೆ ಮಾಡುವ ಸಂತೋಷ ದ್ವೇಷಿಗಳಾದ ಪಾದ್ರಿಗಳ"ಂತರಾಗಿರುವಹವರೆಂದೂ ಭಾವಿಸಬಹುದು ಗಾಂಧಿಜಿಯವರ ಬರವಣಿಗೆಗಳಿಂದ ಅವರ ವ್ಯಕ್ತಿತ್ವವು ಸಂಪೂರ್ಣವಾಗಿ ತಿಳಿಯು ವುದಿಲ್ಲ, ಅವರ ಬರವಣಿಗೆಗಳಿಗಿಂತ ಅವರು ತೀರಾ ದೊಡ್ಡವರು. ಅವರು ಬರೆದಿರು ವುದರಲ್ಲಿ ಅಲ್ಲಿ ಇಷ್ಟು ಇಲ್ಲಿ ಅಷ್ಟು ತೆಗೆದು ಮುಂದಿಟ್ಟುಕೊಂಡು ಆಕ್ಷೇಪಿಸುವುದು ಸರಿಯಲ್ಲ ಅವರದು ಎಂದಿಗೂ ಕ್ಯಾಲ್ವಿನಿಸ್ಟಿಕ್ ಪಾದ್ರಿಗಳ ಗುಂಪಿನ ಮನೋಭಾವ ವಲ್ಲ, ಅದಕ್ಕೆ ತೀರಾ ವಿರುದ್ಧವಾದುದು ಅದು ಅವರೊಮ್ಮೆ ಮುಸಿನಗೆ ನಕ್ಕರೆ ನಮ್ಮ ಹೃದಯವು ಅರಳುವುದು ಅವರು ನಕ್ಕರ ನಾವೂ ನಗುವಂತಾಗುವುದು. ಅವರು ನಿಶ್ಚಿಂತಭಾವವನ್ನು ಪಸರಿಸುವರು ಎಳೆಯ ಮಗುವಿನಂತಹ ಆಕರ್ಷಣ ಶಕ್ತಿ ಯೊಂದು ಅವರಲ್ಲಿ ಬೇರೂರಿದೆ ಅವರು ಒಳಕ್ಕೆ ಬಂದರೆ, ಅವರೊಂದಿಗೆ ಹೊಸ ತಂಗಾಳಿಯೊಂದು ಬಂದು ಸುತ್ತಮುತ್ತೆಲ್ಲ ನಲವನ್ನು ಹರಡುತ್ತದೆ

ಅವರು ಒಂದು ಅಸಾಧಾರಣವಾದ ವಿರೋಧಾಭಾಸ ಮಹಾಪುರುಷರೆಲ್ಲರೂ ಸ್ವಲ್ಪಮಟ್ಟಿಗೆ ಹಾಗೆಯೇ ಎಂದು ನನ್ನ ಭಾವನೆ ದೀನಾನಾಥರಲ್ಲಿ ಇಷ್ಟೊಂದು ಪ್ರೀತಿ ಮತ್ತು ಅಭಿಮಾನಗಳನ್ನುಳ್ಳಂಥ ಈತನು ಅಂಥವರ ಸಂಖ್ಯೆಯನ್ನು ಬೆಳೆಸಿ ಅವರನ್ನು ತುಳಿಯುತ್ತಿರುವ ಪದ್ಧತಿಯೊಡನೆ ಸಹಕರಿಸುವುದೇಕೆ? ಅಹಿಂಸಾ ವ್ರತದಲ್ಲಿ ಅಷ್ಟೊಂದು ಪ್ರೀತಿಯಿದ್ದರೂ ಕೂಡ ಆತನು ಹಿಂಸೆ, ಮತ್ತು ಜೋರಾವರಿಯ ಆಧಾ ರದ ಮೇಲೆ ನಿಂತಿರುವ ಈ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯನ್ನೇ ಅಂಗೀ ಕರಿಸಿರುವನೇಕೆ? ಎಂಬ ಈ ಸಮಸ್ಯೆಯು ಅನೇಕ ವರ್ಷಗಳಿಂದ ನನಗೆ ಒಗಟಾಗಿಯೇ ಇದೆ, ಬಹುಶಃ ಅವರು ಇಂಥಾ ಸಂಸ್ಥೆಯನ್ನು ಒಪ್ಪಿರುವರೆಂದು ಹೇಳುವುದು ಸರಿ ಯಲ್ಲ. ಹೆಚ್ಚು ಕಡಿಮೆ ಅವರು ದಾರ್ಶನಿಕ ಕ್ರಾಂತಿಕಾರರು ಆದರೆ ಆದರ್ಶ ಅರಾಜಕ ಸ್ಥಿತಿಯು ಇನ್ನೂ ಬಹು ದೂರ ಇರುವುದರಿಂದಲೂ ಅದನ್ನು ಸುಲಭವಾಗಿ ಅರಿತು ಕೊಳ್ಳುವುದು ಅಸಾಧ್ಯವಾದುದರಿಂದಲೂ ಅವರು ಈಗಿನ ಸ್ಥಿತಿಯನ್ನೇ ಒಪ್ಪಿಕೊಂಡಿರ ಬೇಕು. ಬದಲಾವಣೆ ತರುವುದರಲ್ಲಿ ಹಿಂಸೆಯ ಉಪಯೋಗವನ್ನು ಆತನು

ಆಕ್ಷೇಪಿಸುವನೇ ಹೊರತು ಯಾವ ಮಾರ್ಗವನ್ನು ಅನುಸರಿಸಬೇಕೆಂಬುದು ಆತನ ಪ್ರಶ್ನೆಯಲ್ಲ ಈಗ ನಡೆದುಬಂದಿರುವ ರೀತಿಯನ್ನು ಬದಲಾಯಿಸುವ ಹಾದಿಯನ್ನು ಕುರಿತು ಚಿಂತಿಸದಿದ್ದರೂ, ನಾತಿದೂರದ ಭವಿಷ್ಯತ್ತಿನಲ್ಲಿ ಸಾಧ್ಯವಾಗುವಂತಹ, ಆದರ್ಶಪ್ರಾಯವಾದ ಲಕ್ಷ್ಯವೊಂದನ್ನು ಚಿಂತಿಸುವುದು ಸಾಧ್ಯ

ಕೆಲವು ವೇಳೆ ಗಾಂಧಿಜಿಯವರು ತಮ್ಮನ್ನು ತಾವೇ ಸಮತಾವಾದಿ ಎಂದು ಕರೆದುಕೊಳ್ಳುವರು ಆದರೆ ಆ ಪದಕ್ಕೆ ಅವರದೇ ಒಂದು ವಿಶೇಷವಾದ ಅರ್ಥವುಂಟು ಸೋಷಿಯಲಿಸಂ ಎಂಬ ಹೆಸರಿನಿಂದ ಈಗ ಜಾರಿಯಲ್ಲಿರುವ ಸಮಾಜದ ಆರ್ಥಿಕ ತತ್ವಕ್ಕೂ ಇವರ ಪದದ ಅರ್ಥಕ್ಕೂ ಬಹಳ ದೂರ ಅವರಂತೆ ಇನ್ನೂ ಕಾಂಗ್ರೆಸ್ ನಾಯಕರು ಅನೇಕರು ಅದೇ ಪದವನ್ನು ಉಪಯೋಗಿಸತೊಡಗಿದ್ದಾರೆ ಈಗ ಆ ಪದದ ಅರ್ಥವು ಕದಡಿಹೋದ ಮಾನವಹಿತವಾದವೆಂದು ಆಗಿಹೋಗಿದೆ ದೊಡ್ಡ ದೊಡ್ಡವರ ಕೂಟಗಳಲ್ಲಿ ಸಹ ಅಸ್ಪಷ್ಟವಾದ ಈ ರಾಜಕೀಯ ಪದವನ್ನು ಹೀಗೆ ಉಪಯೋಗಿಸಲು ಕಾರಣವೇನೆಂದರೆ ಬ್ರಿಟಿಷ್ ರಾಷ್ಟ್ರೀಯ ಸರಕಾರದ ಮುಖ್ಯಮಂತ್ರಿಗಳೇ ಹೀಗೆ ಮಾಡಿದ್ದಾರೆ * ಗಾಂಧಿಜಿಯವರಿಗೆ ಸಮತಾವಾದ ಎಂದರೇನೆಂಬುದು ತಿಳಿಯದೇ ಇಲ್ಲ ಎಂಬುದು ನನಗೆ ಗೊತ್ತು ಅವರು ಅರ್ಥಶಾಸ್ತ್ರ, ಸಮತಾವಾದ ಹಾಗೂ ಮಾರ್ಕ್ಸಿಸಂ ಸಹಾ ಓದಿ ಇತರರ ಕೂಡ ಜಿಜ್ಞಾಸೆ ಮಾಡಿದ್ದಾರೆ ಆದರೂ ಈಚೀಚೆಗೆ, ಇಂಥಾ ಜೀವಾಳದ ವಿಚಾರಗಳಲ್ಲಿ ಬರೀ ಮನಸ್ಸೇ ನಮ್ಮನ್ನು ಬಹಳದೂರ ಒಯ್ಯಲಾರದು ಎಂದು ನನಗೆ ನಂಬಿಕೆಯಾಗುತ್ತಿದೆ ವಿಲಿಯಂ ಜೇಮ್ಸ್‌ರು " ನಿಮ್ಮ ಮನಸ್ಸು ಒಪ್ಪದಿದ್ದರೆ ಬುದ್ಧಿಯು ನಿಮ್ಮನ್ನು ಎಂದಿಗೂ ನಂಬಿಸಲಾರದು " ಎಂದು ಹೇಳಿದ್ದಾರೆ ನಮ್ಮ ನಮ್ಮ ಮನೋಭಾವಗಳೆಲ್ಲ ನಮ್ಮ ನಮ್ಮ ಆಶೋತ್ತರಗಳಿಗೆ ಅನುಗುಣವಾಗಿ ರೂಪುಗೊಳ್ಳುತ್ತವೆ ನಮ್ಮ ಮಾತುಕಥೆಗಳು ಧಾರ್ಮಿಕವಾಗಲಿ ರಾಜಕೀಯವಾಗಲಿ ಅಥವಾ ಆರ್ಥಿಕವಾಗಲಿ, ಅವು ನಿಜವಾಗಿಯೂ ನಮ್ಮ ನಮ್ಮ ಆಶೋತ್ತರಗಳಿಗೆ ಅನುಗುಣವಾಗಿರುತ್ತವೆ, ಸ್ವಭಾವಕ್ಕೆ ತಕ್ಕಂತಿರುತ್ತವೆ ಷೋಪೆನ್‌ಹಾರ್‌ನು ಹೇಳುವಂತೆ " ಮನುಷ್ಯನು ತಾನಿಷ್ಟಪಟ್ಟದ್ದನ್ನು ಮಾಡಬಲ್ಲ, ಆದರೆ ತನಗೆ ಯಾವುದು ಇಷ್ಟವಾಗಬಹುದೋ ಅದನ್ನು ಕುರಿತು ಮಾತ್ರ ಇಷ್ಟಪಡಲಾರ "

* ಮಿ॥ ರ್‍ಯಾಂಸೆ ಮ್ಯಾಕ್ಡೊನಾಲ್ಡರೇ ಅವರ ಎಡಿನ್‌ಬರೋ ಭಾಷಣದಲ್ಲಿ ೧೯೩೫ ರ ಜನವರಿಯಲ್ಲಿ, ಫೆಡರೇಷನ್ ಆಫ್ ಕನ್ಸರ್ವೆಟಿವ್ ಮತ್ತು ಯೂನಿಯನಿಸ್ಟ್ ಅಸೋಸಿಯೇಷನ್‌ಗಳಿಗೆ ಸಂದೇಶವನ್ನು ಕೊಡುತ್ತ ಹೀಗೆ ಹೇಳಿದ್ದಾರೆ "ವಿದ್ಯಮಾನಗಳ ಕಷ್ಟಗಳು, ಸಂಘಟನೆಯೂ ಶಕ್ತಿಸಂಚಯನವೂ ಪ್ರತಿಯೊಂದು ಜನಾಂಗಕ್ಕೂ ಅವಶ್ಯಕವಾಗುವಂತೆ ಮಾಡಿವೆ ಇದೇ ನಿಜವಾದ ಸಮತಾವಾದ ಇದೇ ನಿಜವಾದ ರಾಷ್ಟ್ರೀಯವಾದವೂ ಹೌದು, ಅಷ್ಟೇಕೆ, ಇದೇ ನಿಜವಾದ ವ್ಯಕ್ತಿವಾದ."

ದಕ್ಷಿಣ ಆಫ್ರಿಕ ವಾಸದ ಮೊದಲ ದಿನಗಳಲ್ಲಿ ಗಾಂಧಿಜಿಯವರಲ್ಲಿ ಮಹಾ ಪರಿಣಾಮಕಾರಿಯಾದ ಬದಲಾವಣೆಯಾಗಿ ಜೀವನದ ಮೇಲಿನ ಅವರ ಅಭಿಪ್ರಾಯಗಳೆಲ್ಲ ಮಾರ್ಪಟ್ಟುವು ಅಂದಿನಿಂದ ಅವರ ಅಭಿಪ್ರಾಯಗಳಿಗೆಲ್ಲ ಒಂದು ಖಚಿತವಾದ ಬಣ್ಣ ಏದೆ ಅಂದಿನಿಂದ ಅವರ ಮನಸ್ಸು ಹೊರಗಣ ಅಭಿಪ್ರಾಯಗಳಿಗೆ ಅಷ್ಟು ಬೇಗ ಸೋಲುವುದಿಲ್ಲ. ಯಾರು ಏನು ಹೇಳಿದರೂ ಅವರು ಅತ್ಯಂತ ಸಾವಧಾನವಾಗಿ ಕುಳಿತು ಕೇಳುವರು ಅವರು ಅಷ್ಟು ಗೌರವವಾಗಿ ಆಸಕ್ತರಾಗಿ ಕುಳಿತು ಕೇಳುತ್ತಿದ್ದರೂ, ನಾವು ಹೇಳುತ್ತಿರುವುದೆಲ್ಲ ಅರಣ್ಯರೋದನ ಎಂಬ ಭಾವವು ಯಾರ ಮನಸ್ಸಿಗಾದರೂ ಹೊಳೆದೇ ಹೊಳೆಯುತ್ತದೆ ಅವರಿಗೆ ಕೆಲವು ವಿಷಯಗಳ ಮೇಲೆ ಕಪಿಮುಷ್ಟಿಯಂತಹ ನಿರ್ಧರಗಳಿವೆ ಅವುಗಳನ್ನುಳಿದು ಇನ್ನು ಯಾವದೂ ಅವರಿಗೆ ಮುಖ್ಯವಲ್ಲ ಅದು ಬಿಟ್ಟು ಎರಡನೆಯ ವಿಷಯಗಳನ್ನು ಒತ್ತಿದರೆ, ದಾರಿತಪ್ಪಿದಂತೆ; ಅದಕ್ಕಿಂತ ಭಾರಿಯ ಕೆಲಸದ ಮಾಟವೇ ಕೆಟ್ಟುಹೋದಂತೆ ಅವರು ತಮ್ಮ ಆ ನಿರ್ಧರವನ್ನು ಬದಲಾಯಿಸುವುದಿಲ್ಲ, ಆದರಿಂದ ಮಿಕ್ಕುದೆಲ್ಲ ಬದಲಾವಣೆಯಾಗಬೇಕಾಗುವುದು ಸಾಧನಗಳು ಸರಿಯಾಗಿದ್ದರೆ ಸಿದ್ಧಿಯೆಂತು ತಪ್ಪುವುದು? ಎಂದು ಅವರ ಭಾವನೆ

ಗಾಂಧಿಜಿಯವರ ಅಂತರಂಗದ ಜೀವಸ್ವರವಿದು ಎಂದು ನನ್ನ ಭಾವನೆ. ಸಮತಾವಾದದಲ್ಲಿ ಅದರಲ್ಲೂ ವಿಶೇಷವಾಗಿ ಮಾರ್ಕ್ಸಿಸಂನಲ್ಲಿ ಹಿಂಸಾ ಸಂಬಂಧವಿದೆಯೆಂದು ಅವರಿಗೆ ಸಂದೇಹ 'ಜಾತಿ ಕಲಹ' (Class war) ಎಂದರೆ, ಸಮರ ಹಿಂಸೆಗಳೇ ಎಂದು, ಅವರಿಗೆ ಅವುಗಳನ್ನು ಕಂಡರಾಗದು ಜನಜೀವನದ ಮಟ್ಟವು ಬಹಳವಾಗಿ ಏರಿದರೆ, ಜೀವನ ಸೌಖ್ಯವೂ ವಿರಾಮವೂ ಲೋಲುಪತೆ, ಪಾಪಗಳಲ್ಲಿ ಪರಿಣಮಿಸಬಹುದು ಎಂದು ಶಂಕಿಸುವರು ಅವರು ಈಗಾಗಲೇ ಇರುವಂಥ ಕೆಲವು ಜನ ಐಶ್ವರ್ಯವಂತರು ಆತ್ಮಸುಖಲೋಲುಪರಾಗಿರುವುದರಿಂದಲೇ ಬೇಕಾದಷ್ಟು ಅನರ್ಥವಾಗಿದೆ ಅಂಥವರ ಸಂಖ್ಯೆ ಬೆಳೆದುಹೋದರೆ ಹೇಗೆ? ಎಂದು ಅವರ ಭಯ ೧೯೨೬ ರಲ್ಲಿ ಅವರು ಬರೆದಂಥ ಒಂದು ಪತ್ರದಲ್ಲಿ ಹೆಚ್ಚು ಕಡಿಮೆ ಇದೇ ಭಾವವಿದೆ ಕಲ್ಲಿದ್ದಲು ಗಣಿಯ ಮುಷ್ಕರದ ಕಾಲದಲ್ಲಿ ಇಂಗ್ಲೆಂಡಿನಿಂದ ಅವರಿಗೆ ಬಂದ ಒಂದು ಕಾಗದಕ್ಕೆ ಬರೆದ ಉತ್ತರವಿದು ಆ ಕಾಗದವನ್ನು ಬರೆದವರು "ಗಣಿಯ ಕೂಲಿಕಾರರು ತಮ್ಮ ಸಂಖ್ಯಾ ಬಾಹುಳ್ಯದಿಂದ ಈ ಕಾದಾಟದಲ್ಲಿ ಬಿದ್ದುಹೋಗುವರು ಆದ್ದರಿಂದ ಅವರು ತಮ್ಮ ಸಂಖ್ಯೆಯನ್ನು ಕಡಿಮೆಮಾಡಿಕೊಳ್ಳುವುದಕ್ಕೋಸ್ಕರವಾಗಿ ಗರ್ಭನಿರೋಧಕಗಳನ್ನು ಉಪಯೋಗಿಸಬೇಕು" ಎಂದು ಅಭಿಪ್ರಾಯಪಟ್ಟಿದ್ದರು ಇದಕ್ಕೆ ಉತ್ತರವಾಗಿ ಗಾಂಧಿಜಿಯವರು ಹೀಗೆ ಬರೆದರು "ಕಟ್ಟಕಡೆಗೆ ಗಣಿಗಳ ಮಾಲೀಕರು ತಮ್ಮ ದುರ್ಮಾರ್ಗದಲ್ಲಿದ್ದು ಜಯಶಾಲಿಗಳಾದರೆ ಆ ಜಯದ ಕಾರಣವು, ಗಣಿಯ ಕೂಲಿಕಾರರು ಅವರ ಜೀವಮಾನದಲ್ಲಿ ಕಾಮನಿರೋಧವನ್ನು ಕಲಿತಿಲ್ಲವೆಂಬುದೇ ಹೊರತು ಅವರ ಅಮಿತ ಸಂತಾನವಲ್ಲ ಗಣಿಯ ಕೂಲಿಕಾರರಿಗೆ ಮಕ್ಕಳೇ ಇಲ್ಲದಿದ್ದರೆ

ಕೂಲಿ ಹೆಚ್ಚಿಸಿರೆಂದು ಕೇಳಲು ಕಾರಣವಾಗಲಿ ಆಶಯಾಗಲಿ ಇರುವುದಿಲ್ಲ ಕುಡಿತ, ಜೂಜು, ಹೊಗೆಬತ್ತಿ ಇವೆಲ್ಲ ಅನಾವಶ್ಯಕ ಗಣಿಗಳ ಮಾಲೀಕರು ಕುಡಿತ, ಜೂಜು, ಹೊಗೆಬತ್ತಿಗಳನ್ನು ಸೇವಿಸಿಯೂ ಕೂಡ ಅವರ ಕೈ ಮೇಲಾಗಿದೆಯಲ್ಲಾ ಎನ್ನುವುದು ಸಮರ್ಪಕವಾದ ಉತ್ತರವಾದೀತೆ? ಹಣವಂತರಿಗಿಂತ ಕೂಲಿಕಾರರು ಉತ್ತಮರಾಗಿಲ್ಲವಾದರೆ, ಅವರನ್ನು ಕಂಡು ಪ್ರಪಂಚವು ಕರಗುವುದೆಂತು? ಈ ಹೋರಾಟವೆಲ್ಲ ಬಂಡವಾಳಗಾರರ ಸಂಖ್ಯೆಯನ್ನು ಹೆಚ್ಚಿಸಿ ಬಂಡವಾಳವಾದದ ಶಕ್ತಿಯನ್ನು ಹೆಚ್ಚಿಸುವುದಕ್ಕೇನು? ಪ್ರಜಾಸತ್ತೆಯು ಬಂದರೆ, ಲೋಕವು ಉತ್ತಮಗೊಳ್ಳುವುದು ಎಂದಲ್ಲವೆ ನಾವು ಅದನ್ನು ಕುರಿತು ಹಂಬಲಿಸುವುದು ಹಾಗಲ್ಲದೆ, ಈಗಿನ ಶ್ರೀಮಂತರಿಗೂ ಶ್ರೀಮಂತಿಕೆಗೂ ಸಹಜವಾದ ಅನರ್ಥಗಳೆಂದು ನಾವು ದೂಷಿಸುತ್ತಿರುವ ಈ ದುಷ್ಟ ಸ್ಥಿತಿಯನ್ನು ಹಿರಿದಾಗಿ ಹಬ್ಬಿಸುವುದು ಮಾತ್ರ ಬೇಡ" *

ಇದನ್ನು ಓದುತ್ತಿರುವಾಗ ಇಂಗ್ಲಿಷ್ ಕೂಲಿಕಾರರು, ಅವರ ಹೆಂಡರು, ಮಕ್ಕಳು ಇವರ ಹಸಿವಿನಿಂದ ಒಣಗಿ ಸೊರಗಿದ ಮುಖಗಳು ನನ್ನ ಕಣ್ಣೆದುರಿಗೆ ಬಂದುವು ತುಳಿಯುತ್ತಿದ್ದ ಆದೊಂದು ರಾಕ್ಷಸೀಯ ಸಂಸ್ಥೆಗೆ ಬಲಿಯಾಗಿ ನೆರವಿಲ್ಲದೆ ಮನಮರುಗುವಂತೆ ಒದ್ದಾಡುತ್ತಿದ್ದ ಅವರ ಆ ಮುಖಗಳನ್ನು ನಾನು ೧೯೨೬ ನೆಯ ಬೇಸಿಗೆಯಲ್ಲಿ ಕಂಡಿದ್ದೆ ಗಾಂಧಿಜಿಯವರು ಇಲ್ಲಿ ತಪ್ಪಿದ್ದರು ಗಣಿಗಳ ಕೂಲಿಕಾರರು ಸಂಬಳವನ್ನು ಹೆಚ್ಚಿಸಿರೆಂದು ಬೇಡುತ್ತಿರಲಿಲ್ಲ ಸಂಬಳ ಕಡಿಮೆ ಮಾಡಬೇಡಿರೆಂದು ಕೇಳಿಕೊಂಡರೆಂದು ಅವರನ್ನು ಮಾಲೀಕರು ಹೊರಕ್ಕೆ ಅಟ್ಟಿದ್ದರು ಆದರೆ ಸದ್ಯಕ್ಕೆ ನಮಗೆ ಆ ವಿಚಾರವು ಅಷ್ಟು ಮುಖ್ಯವಲ್ಲ. ಕೂಲಿಕಾರರು ಗರ್ಭ ನಿರೋಧಗಳನ್ನು ಉಪಯೋಗಿಸಬೇಕೇ ಬೇಡವೇ ಎಂಬ ಪ್ರಶ್ನೆಯೂ ಬೇಡ ಔದ್ಯೋಗಿಕ ಕಲಹಗಳನ್ನು ತಪ್ಪಿಸುವುದಕ್ಕೆ ಅಂಥದೊಂದು ಸಲಹೆಯನ್ನು ಕೊಟ್ಟಿದ್ದು ಮಾತ್ರ ವಿಸ್ಮಯಜನಕವಾದುದು ನಾನು ಗಾಂಧಿಜಿಯವರ ಉತ್ತರವನ್ನು ಉದ್ಧರಿಸಲು ಕಾರಣವಿಷ್ಟೆ ಕೂಲಿಯವರ ವಿಚಾರಗಳಲ್ಲೂ ಅವರ ಜೀವನದ ಅಂತಸ್ತನ್ನು ಹೆಚ್ಚಿಸಬೇಕೆಂದು ಎಲ್ಲೆಲ್ಲೂ ಇರುವ ಅಭಿಪ್ರಾಯದ ವಿಚಾರದಲ್ಲೂ ಇವರ ಮನಸ್ಸು ಹೇಗಿದೆ ಎಂಬುದನ್ನು ತಿಳಿಯುವುದಕ್ಕೆ ಈ ಉತ್ತರವು ಬಹು ಸಹಾಯವಾಗಿದೆ ಅವರ ಮನೋಭಾವವು ಸಮತಾವಾದಕ್ಕೂ ಸೇರಿದುದಲ್ಲ, ಬಂಡವಾಳ ಶಾಹಿಗೆ ಸೇರಿದುದೂ ಅಲ್ಲ, ಎರಡಕ್ಕಿಂತಲೂ ತೀರ ವಿರುದ್ಧವಾದುದು ಸ್ವಾರ್ಥಗಳ ಕೈವಾಡವು ತಪ್ಪಿದರೆ, ಇಂದಿನ ವಿಜ್ಞಾನ ಮತ್ತು ಔದ್ಯೋಗಿಕ ಕೌಶಲ್ಯಗಳು ಎಲ್ಲರಿಗೂ ಅಶನವಸನಗಳನ್ನು ಕೊಟ್ಟು ಎಲ್ಲರ ಜೀವನದ ಆರ್ಥಿಕ ಮಟ್ಟವನ್ನು ಏರಿಸಬಲ್ಲವು ಎಂದು ಯಾರಾದರೂ ಹೇಳಿದರೆ, ಅವರಿಗೆ ಅದು ಮನಸ್ಸಿಗೆ ಹಿಡಿಯುವುದಿಲ್ಲ ಇವು ಅವರಿಗೆ ಕೊಂಚಮಟ್ಟಿಗೆ ಬೇಕು, ಆದರಿಂದ

* ಎಂ ಕೆ ಗಾಂಧಿಜಿಯವರ 'ಬ್ರಹ್ಮಚರ್ಯವೋ ಅಥವಾ ಕಾಮಸಾಧನೆಯೋ' ಎಂಬ ಪುಸ್ತಕದಲ್ಲಿ ಈ ಪತ್ರವು ಉದ್ಧರಿಸಲ್ಪಟ್ಟಿದೆ

ಆಚೆಗೆ ಅವು ಬೇಡ ಅದರಿಂದ, ಸಮತಾವಾದದ ಆಶೋತ್ತರಗಳಲ್ಲಿ ಅವರಿಗೆ ಆಸ್ಥೆಯಿಲ್ಲ ಬಂಡವಾಳ ಶಾಹಿಯು ಅನರ್ಥವನ್ನು ಕೊಂಚ ಕಡಿಮೆಮಾಡುವುದೆಂದು ಅದನ್ನು ಕೊಂಚಮಟ್ಟಿಗೆ ಸಹಿಸುತ್ತಾರೆ ಆದರೂ ಸಮತಾವಾದ ಬಂಡವಾಳಶಾಹಿ ಎರಡೂ ಅವರಿಗೆ ಸರಿಬೀಳವು, ಆದರೂ, ಕುರುಡುಗಣ್ಣಿಗಿಂತ ಮೆಳ್ಳಗಣ್ಣು ವಾಸಿ ಯೆಂಬಂತೆ, ಆದರೆ ಈಗ ಪ್ರಚಾರದಲ್ಲಿರುವುದೆಂದು, ಇದನ್ನು ನಿವಾರಿಸುವುದಕ್ಕೆ ಸಾಧ್ಯವಿಲ್ಲವೆಂದು ಎರಡನೆಯದನ್ನು ಸದ್ಯಕ್ಕೆ ಇರಲಿ ಎನ್ನುತ್ತಾರೆ

ಅವರ ಅಭಿಪ್ರಾಯಗಳಿವು ಎಂದು ಹೇಳುವುದು ಅಪರಾಧವೋ ಏನೋ? ಆದರೂ ಅವರ ಯೋಚನೆಗಳು ಓಡುವುದು ಹೀಗೆ, ಅವರ ಭಾಷಣಗಳಲ್ಲಿ ನಮಗೆ ಕಂಡುಬರುವ ಒಗಟುಗಳು, ಗೊಜಿಬಿಜಿಗಳು ಇವೆಲ್ಲಕ್ಕೂ ಅವರು ಹೋರಾಡುವಾಗಲೇ ಬೇರೆ ವಿಧವಾದ ಭಾವನೆಗಳನ್ನು ಇಟ್ಟುಕೊಂಡಿರುವುದೇ ಕಾರಣ ಎಂದು ನನ್ನ ಭಾವನೆ ದೇಹಸೌಖ್ಯ, ವಿರಾಮಗಳನ್ನು ಬೆಳೆಸುವುದೇ ಮಾನವ ಜೀವನದ ಧ್ಯೇಯವೆಂಬುದು ಅವರಿಗೆ ಒಪ್ಪಿತವಲ್ಲ, ಮನುಷ್ಯನು ನೀತಿಯುತವಾದ ಬಾಳು ಬಾಳಬೇಕು, ಕೆಟ್ಟುದ ನ್ನೆಲ್ಲ ಬಿಡಬೇಕು, ವಿಷಯ ಸುಖಗಳನ್ನು ದೂರದೂರ ಮಾಡಬೇಕು, ಪ್ರತಿ ಯೊಬ್ಬರೂ ಆಧ್ಯಾತ್ಮಿಕವಾಗಿ ಮುಂದುವರಿಯಬೇಕು ಎಂಬುದು ಅವರ ಅಪೇಕ್ಷೆ ಜನತೆಯ ಸೇವೆಯನ್ನು ಮಾಡಲಿಚ್ಛಿಸುವವರು ಜನರನ್ನು ಆರ್ಥಿಕ ರೀತಿಯಲ್ಲಿ ಉದ್ಧರಿ ಸುವುದಕ್ಕಿಂತಲೂ ಅವರ ಅಂತಸ್ತಿಗೆ ತಾವು ಇಳಿದು ಸಮಭಾವದಲ್ಲಿ ಅವರೊಡನೆ ಬೆರೆಯಬೇಕು ಹೀಗೆ ಮಾಡಿದರೆ ಖಂಡಿತವಾಗಿಯೂ ಅವರನ್ನು ಕೊಂಚವಾದರೂ ಉದ್ಧರಿಸಿದಂತಾಗುವುದು ಅಂಥದೇ ನಿಜವಾದ ಪ್ರಜಾಸತ್ತೆಯೆಂದು ಅವರ ಭಾವನೆ ೧೯೩೪ ನೆಯ ಸೆಪ್ಟಂಬರ್ ೧೭ ರಲ್ಲಿ ಅವರು ಬರೆದ ಒಂದು ಲೇಖನದಲ್ಲಿ "ಅನೇಕರು ನನ್ನನ್ನು ಪ್ರತಿಭಟಿಸಲಾರದೆ ಹೋಗಿದ್ದಾರೆ ಆಜನ್ಮ ಪ್ರಜಾಸತ್ತಾವಾದಿ ಯಾದ ನನಗೆ ಇದಕ್ಕಿಂತ ಅಪಮಾನಕರವಾದ ಸಂಗತಿಯಿಲ್ಲ ಮನುಷ್ಯಕುಲದ ದಟ್ಟದರಿದ್ರನೂ ನಾನೂ ಒಂದೇ ಎಂಬ ಭಾವನೆ, ಅತಿದರಿದ್ರರಿಗಿಂತ ಒಂದಾಗಿ ಅವರಿಗಿಂತ ಉತ್ತಮವಾದ ಜೀವನವು ನನಗೆಬೇಡ ಎಂಬ ಆಶೆ, ಸಾಧ್ಯವಾದ ಮಟ್ಟಿಗೂ ಮನಃಪೂರ್ವಕವಾಗಿ ಅವರಂತೆ ಮಾಡುವ ಪ್ರಯತ್ನ, ಇವು ಒಬ್ಬನನ್ನು ಆಜನ್ಮ ಪ್ರಜಾಸತ್ತಾವಾದಿಯೆಂದುಕೊಳ್ಳಲು ಅವಕಾಶಕೊಡುವುದಾದರೆ ನಾನೂ ಒಬ್ಬ ಅಂಥವನು ಎಂದುಕೊಳ್ಳುತ್ತೇನೆ," ಎಂದು ಹೇಳಿದ್ದಾರೆ

ಹೊಟ್ಟೆಬಟ್ಟೆಗಳಿಗೆ ಕೂಡ ಗತಿಯಿಲ್ಲದ ಪ್ರಜಾಕೋಟಿಯನ್ನು ಕಾಣುತ್ತಿದ್ದರೂ ಸುಖಜೀವನದ ಲೋಲುಪತೆಯಲ್ಲಿ ಮೆರೆಯುತ್ತಾ ಸಾಮಾನ್ಯ ಪ್ರಜಾವರ್ಗದಿಂದ ದೂರವಾಗುವುದು ಯೋಗ್ಯವಲ್ಲ, ಸರಿಯಲ್ಲ ಎಂಬುದನ್ನು ಮಾತ್ರ ಅವರೂ ಒಪ್ಪಿದರೂ ಆಧುನಿಕ ಪ್ರಜಾಸತ್ತಾವಾದಿಯಾಗಲಿ, ಬಂಡವಾಳಗಾರನಾಗಲಿ, ಸಮತಾವಾದಿ ಯಾಗಲಿ, ಯಾರೂ ಈ ವಾದವನ್ನೂ ಈ ಮನೋಭಾವವನ್ನೂ ಸಂಪೂರ್ಣವಾಗಿ ಒಪ್ಪ

ಲಾರನು ಹಿಂದಿನಕಾಲದ ಹಂಬಲದಿಂದ ಆಗಿನ ಸ್ಥಿತಿಯನ್ನೇ ಕುರಿತು ಚಿಂತಿಸುವ ಧರ್ಮಾಭಿಮಾನಿಗಳು ಮಾತ್ರ ಈ ವಾದ, ಈ ಮನೋಭಾವಗಳನ್ನು ಒಪ್ಪಬಹುದು ಈ ಧರ್ಮಾಭಿಮಾನಿಗಳಿಗೆ ಈಗ ಏನಾಗುತ್ತಿದೆ ಮುಂದೆ ಏನಾಗುತ್ತದೆ ಎಂಬುದಕ್ಕಿಂತಲೂ ಹಿಂದೆ ಏನಾಗಿತ್ತು ಎಂಬುದರ ಹಂಬಲವೇ ಹೆಚ್ಚು ಹಿಂದಿನ ಕಾಲವನ್ನು ಕುರಿತು ಹಂಬಲಿಸುವ, ಮುಂದೆ ಬರುವ ಕಾಲವನ್ನು ಕುರಿತು ಚಿಂತಿಸುವ ಮನಃಪ್ರವೃತ್ತಿಗಳಿಗೆ ಬಹಳ ವ್ಯತ್ಯಾಸ ಹಿಂದಿನ ಕಾಲದಲ್ಲಿ ಜನರ ಆರ್ಥಿಕಸ್ಥಿತಿಯನ್ನು ಉತ್ತಮಗೊಳಿಸುವುದು ಕಷ್ಟವಾಗಿತ್ತು ಬಡವರು ಯಾವಾಗಲೂ ಇದ್ದೇಇದ್ದರು ಆಗಿನ ಕಾಲದಲ್ಲಿ ಸಮಾಜದ ಕಟ್ಟಡಕ್ಕೆ ಅಲ್ಪಸ್ವಲ್ಪರಾದ ಶ್ರೀಮಂತರ ಇರುವಿಕೆಯು ಅತ್ಯಾವಶ್ಯಕವಾಗಿತ್ತು ಐಶ್ವರ್ಯವನ್ನು ಬೆಳೆಸುತ್ತಿದ್ದವರೇ ಅವರು ಆದುದರಿಂದ ನೀತಿವಾದಿಯೂ ಸುಧಾರಕನೂ, ಬಹುಸೂಕ್ಷ್ಮ ಪ್ರಕೃತಿಯವನೂ ಆ ಶ್ರೀಮಂತರನ್ನು ಅಂಗೀಕರಿಸಿ ಗೌರವಿಸಿದರು. ಇತರ ದರಿದ್ರರಿಗೆ ಅವರು ಮಾಡಬೇಕಾದ ಉಪಕಾರದ ವಿಷಯವನ್ನು ಅವರ ಮನಸ್ಸಿಗೆ ಹಿಡಿಯುವಂತೆ ಒತ್ತಿ ಒತ್ತಿ ಹೇಳುತ್ತಿದ್ದರು ಶ್ರೀಮಂತರೇ ಬಡವರ ಧರ್ಮದರ್ಶಿಗಳು ಅವರು ದಾನಶೀಲರಾಗಿರಬೇಕು ಪದೇಪದೇ ದಾನ ಮಾಡುವುದು ಮಹಾಸದ್ಗುಣಗಳಲ್ಲಿ ಒಂದು ಎಂದು ಧರ್ಮದ ಉಪದೇಶ ಗಾಂಧಿಜಿಯವರು ಪಾಳೆಯಗಾರರು, ಜಮೀನ್ದಾರರು, ಶ್ರೀಮಂತರು, ಹೀಗೆ, ಬಡವರ ಧರ್ಮದರ್ಶಿಗಳಾಗಿರಬೇಕು ಎಂದು ಒತ್ತಿಒತ್ತಿ ಹೇಳುತ್ತಾರೆ ಈ ವಿಚಾರದಲ್ಲಿ ಗಾಂಧಿಜಿಯವರು ಧರ್ಮಗುರುಗಳ ದೀರ್ಘಪರಂಪರೆಗೆ ಸೇರಿದವರು ಕ್ರೈಸ್ತಮತ ಗುರುಗಳಾದ ಪೋಪ್‌ರು " ಐಶ್ವರ್ಯವಂತರು ತಮ್ಮನ್ನು ಸರ್ವಶಕ್ತನಾದ ಭಗವಂತನ ಸೇವಕರು, ತಾವು ಪ್ರಪಂಚದ ಐಶ್ವರ್ಯದ ರಕ್ಷಕರೂ, ಆ ಐಶ್ವರ್ಯವನ್ನು ಜಗತ್ತಿಗೆಲ್ಲಾ ಹಂಚುವುದು ತಮ್ಮ ಕರ್ತವ್ಯ, ಏಸುಕ್ರಿಸ್ತನು ಬಡವರ ಅದೃಷ್ಟವನ್ನು ಅವರ ಮಡಿಲಲ್ಲಿ ಹಾಕಿ ಹೋಗಿದ್ದಾನೆ, ಎಂದು ತಿಳಿದುಕೊಳ್ಳಬೇಕು" ಎಂದು ಹೇಳಿದ್ದಾರೆ ಸರ್ವಸಾಮಾನ್ಯರ ತಿಳುವಳಿಕೆಯಲ್ಲಿರುವಂತೆ ಹಿಂದೂ ಮತ್ತು ಇಸ್ಲಾಂ ಮತಗಳೂ ಇದೇ ಅಭಿಪ್ರಾಯವನ್ನು ಒತ್ತಿ ಒತ್ತಿ ಹೇಳುತ್ತ ದಾನಶೀಲರಾಗಿ, ಎಂದು ಐಶ್ವರ್ಯವಂತರನ್ನು ಕೂಗಿ ಕರೆಯುತ್ತಲೇ ಇವೆ ಅವರು ದೇವಸ್ಥಾನಗಳನ್ನೋ, ಮಸೀದಿಗಳನ್ನೋ ಅಥವಾ ಧರ್ಮಶಾಲೆಗಳನ್ನೋ ಕಟ್ಟಿಸಿ ಔದಾರ್ಯದಿಂದ ಬಡವರಿಗೆ ಹಣಕಾಸುಗಳನ್ನೂ ಕೊಟ್ಟು, ಧರ್ಮವು ನೆರವೇರಿತು, ನಾವು ಕೃತಾರ್ಥರಾದೆವು ಎಂದುಕೊಳ್ಳುತ್ತಲಿದ್ದಾರೆ.

ಹದಿಮೂರನೆಯ ಪೋಪ್ ಲಿಯೊ ಅವರ ೧೮೯೧ ರ ಮೇ ತಿಂಗಳ ಪ್ರಸಿದ್ಧವಾದ ಎನ್‌ಸೈಕ್ಲಿಕಲ್ ರೀರಂ ನೋವಾರಂದಲ್ಲಿ ಗತಯುಗದ ದೃಷ್ಟಿಯು ಉದಾಹರಣೆಯಾಗಲು ತಕ್ಕುದು ಎಂಬದೊಂದು ಭಾಗವಿದೆ ಆಗ ಹೊಸದಾಗಿ ಬಂದ ಔದ್ಯೋಗಿಕ ರೀತಿನೀತಿಗಳನ್ನು ಕುರಿತು ಅವರು ಹೀಗೆ ಹೇಳಿದ್ದಾರೆ.

" ದುಃಖವನ್ನು ಅನುಭವಿಸುವುದು ಮತ್ತು ಕಷ್ಟವನ್ನು ಸಹಿಸುವುದು ಮಾನುಷತ್ವದ ಜೊತೆಯಲ್ಲಿ ಹುಟ್ಟಿ ಬಂದುದು ಮನುಷ್ಯರು ಎಷ್ಟಾದರೂ ಪ್ರಯತ್ನಪಡಲಿ, ಯಾವ ಶಕ್ತಿ, ಮತ್ತಿನ್ನಾವ ಉಪಾಯವಾಗಲಿ, ಮಾನವಜೀವನದಲ್ಲಿ ತುಂಬಿರುವ ದುಃಖಗಳನ್ನೂ ಕಷ್ಟಗಳನ್ನೂ ಬಹಿಷ್ಕರಿಸಲು ಸಾಧ್ಯವಿಲ್ಲ ಕಷ್ಟ ದುಃಖಗಳ ನಡುವೆ ಅರಚಿಹೋಗುತ್ತಲಿರುವವರಿಗೆ ನೋವನಳಿಸಿ, ಕಷ್ಟಬಿಡಿಸಿ ಅವಿರತಶಾಂತಿಯನ್ನೂ ಸಂತತ ಸುಖವನ್ನೂ ತೋರಿಸುವೆವು ಎನ್ನುವ ಕಪಟಿಗಳಿದ್ದರೆ—ಅವರು ಮಾನವರನ್ನು ಮೋಸಗೊಳಿಸುವ ಅನೃತವಾದ ಪ್ರತಿಜ್ಞೆಗಳಿಂದ ಪಾಪದ ಭಾರವನ್ನು ಹೆಚ್ಚಿಸುವರು ಎಂದು ಭಾವಿಸಬೇಕು. ಪ್ರಪಂಚವು ಹೇಗಿದೆಯೋ ಹಾಗೆಯೇ ಅದನ್ನು ನೋಡುವುದಕ್ಕಿಂತ ಹೆಚ್ಚಿನ ಫಲಕಾರಿಯಾದ ಕಾರ್ಯವು ಇನ್ನಾವುದೂ ಇಲ್ಲ ಮತ್ತು ಹಾಗೆಯೇ ಇಲ್ಲಿನ ಕಷ್ಟಗಳ ಪರಿಹಾರಕ್ಕಾಗಿ ಬೇರೆ ಕಡೆಯೇ ಹುಡುಕಬೇಕು "

ಇನ್ನೂ ಮುಂದೆ ಈ 'ಬೇರೆಯ ಕಡೆ' ಯಾವುದು ಎಂಬುದನ್ನು ಹೇಳಿದ್ದಾರೆ

" ಪ್ರಾಪಂಚಿಕ ವಿಷಯಗಳನ್ನು ಅರ್ಥ ಮಾಡಿಕೊಳ್ಳಬೇಕಾದರೆ ಅಥವಾ ಅವುಗಳಿಗೆ ಸರಿಯಾದ ಬೆಲೆ ಕೊಡಬೇಕಾದರ ಮುಂದೆ ಬರುವ ಅಮರ ಜೀವನವನ್ನು ಕುರಿತು ತಿಳಿಯದಿದ್ದರೆ ಸಾಧ್ಯವಿಲ್ಲ ನಮ್ಮ ಈ ಜೀವನವು ಮುಗಿದ ಮೇಲೆ ನಮ್ಮ ನಿಜವಾದ ಜೀವನವು ಆರಂಭವಾಗುವುದು ಎಂಬ ಮಹಾ ತತ್ವವನ್ನು ಪ್ರಕೃತಿದೇವಿಯು ನಮಗೆ ಕಲಿಸುವಳು ಈ ಮಹಾ ತತ್ವವೇ ಕ್ರಿಸ್ತಮತದ ವೈಭವಯುಕ್ತವಾದ ಮೂಲಧರ್ಮ, ಇದೇ ಧರ್ಮದ ತಳಹದಿ ಭೂಮಿಯ ನಶ್ವರ ಪದಾರ್ಥಗಳಿಗಾಗಿ ದೇವರು ನಮ್ಮನ್ನು ಸೃಷ್ಟಿಸಿಲ್ಲ ದೇವರು ನಮ್ಮನ್ನು ಸೃಷ್ಟಿಸಿರುವುದು ಸ್ವರ್ಗದಲ್ಲಿರುವ ಶಾಶ್ವತ ವಸ್ತುಗಳಿಗಾಗಿ ನಮ್ಮ ಸ್ವದೇಶವು ಈ ಲೋಕವಲ್ಲ, ನಮಗಿದು ಜೈಲಿನ ಹಾಗೆ ಮಾನವರು ತಮಗೋಳ್ಳಿಯದೆಂದು ತಿಳಿದು ಅಪೇಕ್ಷೆಪಡುವಂಥ ಐಶ್ವರ್ಯ ಮೊದಲಾದ ಭೋಗ್ಯವಸ್ತುಗಳು, ನಮಗೆ ಬೇಕಾದಷ್ಟು ಇರಬಹುದು ಅಥವಾ ಇಲ್ಲದಿರಬಹುದು, ಆದರೆ ಸಂತತ ಸುಖಕ್ಕೆ ಅವುಗಳ ಆವಶ್ಯಕತೆಯಿಲ್ಲ "

ಈ ಧಾರ್ಮಿಕ ಮನೋಭಾವವು, ಈಗಿನ ದುಃಖವು ಮುಗಿಯುವುದು ಪರಲೋಕದ ಲಾಭವಾದಾಗ ಎಂಬ ನಂಬಿಕೆಯಿದ್ದ ಪುರಾತನಯುಗದ್ದು ಸ್ಥಿತಿಗತಿಗಳು ವ್ಯತ್ಯಾಸವಾಗಿ ಮಾನವನ ಆರ್ಥಿಕ ಸ್ಥಿತಿಯು ಹಿಂದಿನವರು ಕನಸಿನಲ್ಲಿಯೂ ಕಾಣದಿದ್ದಮಟ್ಟಿಗೆ ಉತ್ತಮಗೊಂಡಿದ್ದರೂ, ಆ ಗತಪ್ರಪಂಚದ ಕತ್ತು ಮಿಸುಕುವಂತಹ ಮುಷ್ಟಿಹಿಡಿತವು ಇನ್ನೂ ಸಡಿಲವಾಗಿಲ್ಲ ಆದರೆ ಈಗ ಈ ಹಿಡಿತವು ಸ್ಪಷ್ಟಾಸ್ಪಷ್ಟವಾದ, ಅಳತೆಗೆ ಸಿಕ್ಕದ ಆಧ್ಯಾತ್ಮಿಕ ತತ್ವಗಳನ್ನು ಅವಲಂಬಿಸಿದೆ ಕ್ರೈಸ್ತ ಸಾಧು ಸಂತರು, ಮೆರೆದ ಕ್ರೈಸ್ತ ಪ್ರಭುಗಳು ಕ್ರೂಸೇಡ್ಸ್ ಯುದ್ಧಕ್ಕೆ ಕಂಕಣಬದ್ಧರಾಗಿ

ಹೊರಟ, ಗಾಥಿಕ್ ಶಿಲ್ಪರೀತಿಯ ಕ್ಯಥಡ್ರಲ್ (ಪ್ರಾರ್ಥನಾಮಂದಿರ) ಗಳು ನಿರ್ಮಾಣ ವಾದ ಕ್ರಿಸ್ತಶಕ ೧೨ ಮತ್ತು ೧೩ ನೆಯ ಶತಮಾನಗಳನ್ನು ಇತರರು 'ಅಂಧಕಾರ ಯುಗ'ವೆಂದು ಕರೆದರೂ ಕ್ಯಾಥೋಲಿಕ್ಕರಿಗೆ ಅದೇ ತಮ್ಮ ಧರ್ಮದ ಕೃತ ಯುಗ. ''ಆ ಯುಗದಲ್ಲಿಯೇ ಕ್ರೈಸ್ತಧರ್ಮದ ಪ್ರಜಾಸತ್ತೆಯು ನಭೂತೋನಭವಿಷ್ಯ ತಿಯಾಗಿ ಬೆಳಗಿದುದು ಆ ಕಾಲದ ಗಿಲ್ಡ್‌ಗಳು ಧರ್ಮದ ಅಭಿವೃದ್ಧಿಗೆ ಬಹಳ ಸಹಾಯವಾದುವು'' ಮುಸಲ್ಮಾನ ಜನಗಳು ಅದಿಖಲೀಫರುಗಳ ಮತ್ತು ಅವರ ಜಯಭರಿತ ಜೀವನಗಳ ಆಡಳಿತದಲ್ಲಿ ಸಾಧ್ಯವಾಗಿದ್ದ "ಇಸ್ಲಾಂ ಪ್ರಜಾಸತ್ತೆ"ಯ ಕಡೆಗೆ ಹಿಂತಿರುಗಿ ನೋಡುವರು. ಹಿಂದೂಗಳು ಹಾಗೆಯೇ ವೇದ ಮತ್ತು ಪುರಾಣ ಯುಗಗಳ ಕಡೆಗೆ ಮನಸ್ಸೋಡಿಸಿ ರಾಮರಾಜ್ಯದ ಕನಸುಕಾಣುವರು ಹೀಗಿದ್ದರೂ ನಾವು ಚರಿತ್ರೆಯನ್ನು ಸಂಶೋಧಿಸಿ ನೋಡಿದರೆ ಆಗ ಜನತೆಯು ಅತಿ ಸಂಕಟಕ್ಕೀಡಾಗಿ ಹೊಟ್ಟೆ ಬಟ್ಟೆಗೂ ಇಲ್ಲದೆ, ಕಷ್ಟಪಡುತ್ತಿದ್ದಂತೆ ಕಂಡುಬರುವುದು ಎಲ್ಲಿಯೋ ಮೇಲುಪ್ಪರಿಗೆಯಲ್ಲಿ ಒಂದು ಹಿಡಿಯಷ್ಟು ಜನ ಧರ್ಮವಿಚಾರಕ್ಕೆ ಮತ್ತು ಆತ್ಮ ವಿಚಾರಕ್ಕೆ ಮನಸ್ಸುಗೊಡುವಷ್ಟು ವಿಶ್ರಾಂತಿ ಮತ್ತು ಅನುಕೂಲವುಳ್ಳವರಾಗಿ ಇದ್ದಿರ ಬಹುದು, ಆದರೆ ಮಿಕ್ಕವರು ಹೊಟ್ಟೆ ಬಟ್ಟೆಗಳಿಗಾಗಿ ಕಷ್ಟವನ್ನು ಪಡುವುದು ಒಂದನ್ನು ಬಿಟ್ಟು ಇನ್ನೇನು ಮಾಡುತ್ತಿದ್ದರೋ ಹೇಳುವುದು ಅಸಾಧ್ಯ! ಹಸಿವಿನಿಂದ ನರಳುವವನಿಗೆ ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಪ್ರಗತಿಯು ಭಾವನೆಯಲ್ಲಿ ಬರುವುದು ಕೂಡ ಅಸಂಭವ ಏಕೆಂದರೆ ಅವನ ಮನಸ್ಸೆಲ್ಲ ಆಹಾರ ಮತ್ತು ಅದನ್ನು ಒದಗಿಸುವ ರೀತಿ ಇವಿಷ್ಟನ್ನು ಮಾತ್ರ ಕುರಿತು ಯೋಚಿಸುತ್ತಿರುತ್ತದೆ

ಕೈಗಾರಿಕೆ ಯುಗವು ನಮ್ಮ ದೃಷ್ಟಿಯಲ್ಲಿ ಅದ್ಭುತವಾಗಿ ಕಾಣುವ ಅನೇಕ ಕೆಡಕು ಗಳನ್ನು ತಂದಿದೆ ಆದರೆ ಸ್ವಾಭಾವಿಕವಾಗಿ ಇನ್ನೊಂದು ವಿಚಾರವನ್ನು ನಾವು ಮರೆತುಬಿಡುತ್ತೇವೆ ಸಮಗ್ರ ಪ್ರಪಂಚವನ್ನು ನೋಡಿದ್ದೇ ಆದರೆ ಹೆಚ್ಚಾಗಿ ಯಂತ್ರ ಕರ್ಮನಿರತರು ಇರುವ ಕಡೆಯಲ್ಲೆಲ್ಲ ಆರ್ಥಿಕ ತಳಹದಿಯು ಭದ್ರವಾಗಿದ್ದು ಜನತೆಯ ಭಾರಿ ಗುಂಪುಗಳಿಗೆ ಸಾಂಸ್ಕೃತಿಕ ಮಾರ್ಗವೂ ಧಾರ್ಮಿಕ ಪ್ರಗತಿಯೂ ಹಿಂದೆ ಇದ್ದುದಕ್ಕಿಂತ ಈಗ ಹೆಚ್ಚು ಸುಲಭಸಾಧ್ಯವಾಗಿದೆ ಹಿಂದೂಸ್ಥಾನವಾಗಲೀ ಜನರು ವಲಸೆಹೋಗಿ ನಿಂತಿರುವ ಇತರ ರಾಜ್ಯಗಳಾಗಲೀ ಯಂತ್ರ ಕರ್ಮದಿಂದ ಬಹಳ ಲಾಭವನ್ನೇ ಹೊಂದಿಲ್ಲವಾಗಿ ಇದು ನಮಗೆ ಸ್ಪಷ್ಟವಾಗಿಲ್ಲ. ಯಂತ್ರ ಯುಗದಿಂದ ನಾವು ಲಾಭ ಪಡೆಯುವುದಕ್ಕಿಂತ ಅದಕ್ಕೆ ನಾವೇ ಬಲಿಯಾಗಿದ್ದೇವೆ ಇತರರ ಸುಲಿಗೆಗೆ ಗುರಿಯಾಗಿದ್ದೇ ಇದರ ಫಲವಾಗಿ ನಮ್ಮ ಐಶ್ವರ್ಯ, ಸಂಸ್ಕೃತಿ, ಆಧ್ಯಾತ್ಮಿಕ ತೇಜಸ್ಸು ಇವುಗಳು ಸಹ ಅಳಿಸಿಹೋದಂತಾಗಿದೆ ಆದರದು ಯಂತ್ರ ಕರ್ಮದ ತಪ್ಪಲ್ಲ ಪರಕೀಯ ಅಧಿಕರಣದ ಆಳ್ವಿಕೆಯ ದೋಷ, ಪಾಶ್ಚಾತ್ಯ ಅನುಕರಣೆಯು ಸದ್ಯಕ್ಕೆ ಜಮೀನ್ದಾರಿ ಪದ್ಧತಿಯನ್ನು ಬಲಪಡಿಸಿದೆ, ಮತ್ತು ನಮ್ಮ ಸಮಸ್ಯೆಗಳನ್ನು ಪರಿಹರಿಸುವುದಕ್ಕೆ ಬದಲಾಗಿ ಅವುಗಳನ್ನು ಬೆಳೆಸಿದೆ.

ಅದೇ ನಮ್ಮ ದುರದೃಷ್ಟ ಅದರ ಯೋಚನೆಯು ಬಂದು ಆಧುನಿಕ ಪ್ರಪಂಚದ ಕಡೆಗೆ ನಾವು ನೋಡುವಾಗ ಅದನ್ನು ವಿಕಾರವಾಗಿ ತೋರಿಸಲು ನಾವು ಬಿಡಬಾರದು ಸದ್ಯಸ್ಥಿತಿಯಲ್ಲಿ ಸಮಾಜದ ಐಶ್ವರ್ಯವನ್ನು ಬೆಳೆಸಲು ಐಶ್ವರ್ಯವಂತನ ಆವಶ್ಯಕತೆಯಿಲ್ಲ; ಅವನಿದ್ದರೆ ಒಳ್ಳೆಯದೂ ಅಲ್ಲ. ಒಟ್ಟಿನಲ್ಲಿ ಸಮಾಜದಲ್ಲಿಯೂ ಅವನಿಗೆ ಸ್ಥಾನವಿಲ್ಲ ಅವನೀಗ ನಮಗೆ ಸಲ್ಲದ ನಾಣ್ಯ ನಮ್ಮ ಮುಂದಿನ ಹಾದಿಯಲ್ಲಿ ಅಡ್ಡಿ. ಐಶ್ವರ್ಯವಂತನಿಗೆ ಧರ್ಮಿಷ್ಟನಾಗಿರು ಎಂದೂ ಬಡವನಿಗೆ ಗೊಣಗುಟ್ಟದೆ ಕೊಟ್ಟ ದಾನವನ್ನು ತೆಗೆದುಕೊಂಡು ಕೃತಜ್ಞತೆಯನ್ನು ತೋರಿಸಿ, ಅಷ್ಟೇ ತನ್ನ ಹಣೆಯಬರಹವೆಂದು ತೃಪ್ತಿಯಲ್ಲಿದ್ದು ಸದಾಚಾರ ಸಂಪನ್ನನಾಗಿ ಇರಬೇಕು ಎಂದೂ ಧರ್ಮೋಪದೇಶ ಮಾಡಬೇಕಾದ ಆವಶ್ಯಕತೆಯೂ ಇಲ್ಲ ಮನುಷ್ಯನ ಶಕ್ತಿಸಾಮರ್ಥ್ಯಗಳು ಅಸಂಖ್ಯಾತವಾಗಿ ಬೆಳೆದಿವೆ ಆತನು ಇಡೀ ಪ್ರಪಂಚದ ಸಮಸ್ಯೆಗಳನ್ನು ಎದುರಿಸಿ ಸಾಧಿಸಬಲ್ಲ ಅನೇಕ ಐಶ್ವರ್ಯವಂತರು ಬಂದಣಿಕೆಯಾಗಿ ನಿಂತಿರುವುದು ಹೊಡೆದೆದ್ದು ಕಾಣಿಸುತ್ತಿದೆ ಮತ್ತು ಇಂಥಾ ಬಂದಣಿಕೆ ಜಾತಿಯಿಂದ ಅಡ್ಡಿಯೊಂದೇ ಅಲ್ಲ ಮೂಲ ಶಕ್ತಿಗಳ ನಷ್ಟವೂ ಸಹ ಬಹಳವಾಗುತ್ತದೆ ಆ ಶ್ರೀಮಂತ ಜಾತಿಯೂ ಮತ್ತು ಆ ಜಾತಿಯನ್ನು ಬೆಳೆಸಿಕೊಂಡುಬರುವ ಪದ್ಧತಿಯೂ ಸಹ ಕೆಲಸವನ್ನೂ ಉತ್ಪತ್ತಿಯನ್ನೂ ತಡೆಗಟ್ಟುವುದೊಂದಲ್ಲದೆ ಎರಡು ಕಡೆಯಲ್ಲಿಯೂ ಕೆಲಸವಿಲ್ಲದಂಥವರನ್ನು ಉತ್ತೇಜನಗೊಳಿಸುತ್ತದೆ ಇತರರ ಕರ್ಮ ಫಲದಿಂದ ಜೀವಿಸುವವರು ಮತ್ತು ಮಾಡುವುದಕ್ಕೆ ಕೆಲಸವಿಲ್ಲದವರು, ಇವೆರಡು ಜಾತಿಯವರೂ ಹೊಟ್ಟೆಗಿಲ್ಲದವರು ಗಾಂಧಿಜಿಯವರೇ ಕೆಲವು ಕಾಲದ ಹಿಂದೆ ಹೀಗೆ ಬರೆದಿರುವರು "ಕ್ಷುಧಾಪೀಡಿತರೂ ಮಾಡುವುದಕ್ಕೆ ಕೆಲಸವಿಲ್ಲದವರೂ ಆದ ಜನಗಳಿಗೆ ದೇವರು ದರ್ಶನ ಕೊಡುವ ಧೈರ್ಯ ಮಾಡಿದರೆ, ಅವರು ಒಪ್ಪುವ ಒಂದು ರೀತಿಯಲ್ಲಿ ಆತನು ಕೆಲಸದ ರೂಪದಲ್ಲಿ ಕಾಣಿಸಿಕೊಂಡು ಕೂಲಿಯಾಗಿ ಆಹಾರವನ್ನು ಕೊಡುವೆನೆಂದು ಮಾತು ಕೊಡಬೇಕು ದೇವರು ಮನುಷ್ಯನನ್ನು ಆಹಾರಕ್ಕಾಗಿ ಕೆಲಸ ಮಾಡಲಿ ಎಂದೇ ಸೃಷ್ಟಿ ಮಾಡಿದುದು. ಮತ್ತು ದೇವರು ಕೆಲಸ ಮಾಡದೆ ಊಟಮಾಡುವವರನ್ನು ಶುದ್ಧ ಕಳ್ಳರು ಎನ್ನುತ್ತಾನೆ."

ಆಧುನಿಕ ಸಮಸ್ಯೆಗಳು ಇರದಿದ್ದ ಪ್ರಾಚೀನಕಾಲದ ರೀತಿನೀತಿಗಳನ್ನು ಇಂದಿನ ಪ್ರಪಂಚದ ವಿಷಮ ಸಮಸ್ಯೆಗಳಿಗೆ ಸಂಪ್ರಯೋಗಿಸಿ ಅವನ್ನು ತಿಳಿಯ ಬಯಸುವುದು, ಮತ್ತು ಆ ಕಠಿನ ಸಮಸ್ಯೆಗಳನ್ನು ಕುರಿತು ಕಾಲೋಚಿತವಲ್ಲದ ಮಾತುಗಳನ್ನು ಉಪಯೋಗಿಸುವುದು, ಎಂದರೆ ಗೊಂದಲವೆಬ್ಬಿಸುವುದು ಮತ್ತು ಅಪಜಯವನ್ನು ಆಹ್ವಾನಿಸುವುದು. ಪ್ರಪಂಚವೆಂಬುದರ ಭಾವನೆಗೆ ಮೂಲಸ್ತಂಭಗಳಲ್ಲೊಂದಾದ ಸ್ವಂತ ಆಸ್ತಿಯ ಕಲ್ಪನೆ ಕೂಡ ಅರ್ಥದಲ್ಲಿ ಬದಲಾಯಿಸುತ್ತಾ ಬಂದಿದೆ ಒಂದಾನೊಂದು ಕಾಲದಲ್ಲಿ ಗುಲಾಮರು ಆಸ್ತಿಯಾಗಿದ್ದರು ಹೆಂಗಸರೂ ಮಕ್ಕಳೂ ಸಹಾ ಹಾಗೆಯೇ ಪರಿಗಣಿಸಲ್ಪಟ್ಟಿದ್ದರು. ಅಲ್ಲದೆ ವಧುವಿನ ಪ್ರಥಮ ರಾತ್ರಿಯ ಬಗ್ಗೆ ಶ್ರೀಮಂತನ

ಹಕ್ಕು, ರಸ್ತೆ, ದೇವಸ್ಥಾನ, ದೋಣಿ, ಸೇತುವೆ, ಗಾಳಿ, ನೆಲ ಮುಂತಾದ ಜನ ಸಾಮಾನ್ಯದ ಅನುಕೂಲ್ಯಗಳ ಮೇಲಿನ ಬಾಧ್ಯತೆ ಇವು ಆಸ್ತಿಗಳಾಗಿದ್ದವು. ನ್ಯಾಯನಿಬಂಧನೆಯು ಅನೇಕ ದೇಶಗಳಲ್ಲಿ ಆಸ್ತಿಯ ಹಕ್ಕುಗಳನ್ನು ಕಡಿಮೆ ಮಾಡಿದ್ದರೂ ಪ್ರಾಣಿಗಳು ಇನ್ನೂ ಆಸ್ತಿಗಳಾಗಿವೆ ಯುದ್ಧ ಕಾಲದಲ್ಲಿ ಆಸ್ತಿಯ ಹಕ್ಕುಗಳನ್ನು ಉದ್ದಕ್ಕೂ ಮುರಿದುಕೊಂಡೇ ಬರುತ್ತಾರೆ ಆಸ್ತಿಯೆಂಬುದು ಈಗಿನ ಕಾಲಕ್ಕೆ ಬರ ಬರುತ್ತಾ ಬಹು ಸೂಕ್ಷ್ಮವಾಗುತ್ತಾ ಬಂದು ಹಿಡಿತಕ್ಕೆ ಸಹಾ ಸಿಕ್ಕದಂಥ ಸೊಸೈಟಿಗಳ ಷೇರುಗಳು, ನಂಬಿಕೆ ಇಂಥವುಗಳಾಗಿಬಿಟ್ಟಿವೆ ಆಸ್ತಿಯ ಭಾವನೆಯು ಬದಲಾಯಿಸುತ್ತ ಬಂದಹಾಗೆಲ್ಲಾ ಯಾವ ಸ್ಥಿತಿವಂತರ ಅರಾಜಕೀಯ ಹಕ್ಕುಗಳ ಮೇಲೆ ಪ್ರತಿಬಂಧನವು ಬಲಿಯಬೇಕೆಂದು ಸರ್ಕಾರವು ಬರುಬರುತ್ತ ಹೆಚ್ಚು ಹೆಚ್ಚು ಕೈಹಾಕುತ್ತದೆಯೋ ಲೋಕಮತವು ಅಪೇಕ್ಷಿಸುತ್ತದೆಯೋ ಆ ವಿಷಯವಾಗಿ ಕಟ್ಟುಕಾಯಿದೆಗಳು ಏರ್ಪಡುತ್ತವೆ ಆಸ್ತಿಗಳನ್ನು ಮುಟ್ಟುಗೋಲುಹಾಕುವ ಸ್ವಭಾವದ, ಭಾರಿ ಭಾರಿ ತೆರಿಗೆಗಳೂ ಸಹ ವ್ಯಕ್ತಿಯನ್ನು ಆಸ್ತಿಯ ಪ್ರಜಾಕೋಟಿಯ ಸೌಖ್ಯಕ್ಕಾಗಿ ನುಂಗುತ್ತವೆ ಜನತೆಯ ಸೌಖ್ಯವೇ ಸರ್ಕಾರದ ಕಾರ್ಯಕ್ರಮಗಳ ಮೂಲಕಾರಣವಾಗುತ್ತಿದೆ ಆದರಿಂದ ಈ ಪ್ರಜಾಸೌಖ್ಯಕ್ಕೆ ವಿರುದ್ಧವಾಗಿ ಯಾವ ಮನುಷ್ಯನೂ ಕೂಡ ತನ್ನ ಆಸ್ತಿಯ ಹಕ್ಕುಗಳನ್ನು ಸಹ ರಕ್ಷಿಸಿಕೊಳ್ಳಲಾರ ಇಷ್ಟರ ಮೇಲೆ ಹಿಂದಿನ ಕಾಲದಲ್ಲಿ ಪ್ರಜಾಕೋಟಿಯ ಹೆಚ್ಚುಭಾಗವು ಆಸ್ತಿಗಳ ಮೇಲಿನ ಹಕ್ಕುಗಳನ್ನು ಹೊಂದುವುದು ಹಾಗಿರಲಿ ಅವರೇ ಇತರರ ಆಸ್ತಿಗಳಾಗಿದ್ದರು ಈಗಲೂ ಕೂಡ ಈ ತೆರನಾದ ಆಸ್ತಿಯ ಹಕ್ಕುಗಳಿರುವುದು ಅಲ್ಪಸಂಖ್ಯೆಯ ಕೆಲವರಿಗೆ ಮಾತ್ರ ಸ್ವಾರ್ಥಗಳ ವಿಚಾರವಾಗಿ ಎಷ್ಟೋ ಕೇಳಿದ್ದೇವೆ ಪ್ರತಿ ಗಂಡಸಿಗೂ ಹೆಂಗಸಿಗೂ ಬಾಳನ್ನು ಸಾಗಿಸುವ, ಬಾಳಿಗಾಗಿ ದುಡಿಯುವ, ದುಡಿದು ಗಳಿಸಿದುದನ್ನು ಅನುಭವಿಸುವ ಹಕ್ಕು ಉಂಟು ಎಂಬ ಹೊಸ ಸ್ವಾರ್ಥವೊಂದು ಈಗ ಹೊಸದಾಗಿ ಹುಟ್ಟಿಕೊಂಡಿದೆ ಕಲ್ಪನೆಗಳು ಆಗಾಗ ಹೀಗೆ ಬದಲಾಯಿಸುತ್ತಿರುವುದರಿಂದ ಆಸ್ತಿಯೂ ಐಶ್ವರ್ಯವೂ ಅದೃಶ್ಯವಾಗುವುದಿಲ್ಲ. ಅವು ಹಂಚಿಹೋಗುತ್ತವೆ ಮತ್ತು ಆಸ್ತಿ, ಐಶ್ವರ್ಯಗಳು ಕೇಂದ್ರೀಕೃತವಾಗಿ ಕೆಲವರಿಗೆ ಮಾತ್ರ ಲಭಿಸಿದ್ದ ಅಧಿಕಾರವು ಮತ್ತೆ ಪ್ರಜಾಸಾಮಾನ್ಯಕ್ಕೆ ಹಿಂದಿರುಗುತ್ತದೆ

ವ್ಯಕ್ತಿಯ ಅಂತರಂಗವು ಪರಿಶುದ್ಧವಾಗಿ ಅವನು ನೀತಿಪರನಾಗಿ, ಸಾತ್ವಿಕನಾಗಬೇಕು, ಅನಂತರ ಆ ಮೂಲಕ ಹೊರಗಿನ ಸ್ಥಿತಿಗತಿಗಳ ಬದಲಾವಣೆಯಾಗಬೇಕು ಎಂದು ಗಾಂಧಿಜಿಯವರ ಆಶೆ ಸಮಸ್ತ ಜನಗಳೂ ಕೆಟ್ಟ ನಡತೆಗಳನ್ನೂ, ಕೆಟ್ಟ ಅಭ್ಯಾಸಗಳನ್ನೂ ಬಿಟ್ಟು ಪರಿಶುದ್ಧರಾಗಬೇಕು ಎಂಬುದೇ ಗಾಂಧಿಜಿಯವರ ಅಪೇಕ್ಷೆ, ಸ್ತ್ರೀಸಂಗತ್ಯಾಗ, ಪಾನನಿರೋಧ, ಹೊಗೆಬತ್ತಿ ಸೇದುವುದನ್ನು ಬಿಟ್ಟುಬಿಡುವುದು, ಇವೇ ಮುಂತಾದುವುಗಳ ಮೇಲೆ ಅವರು ಬಹಳ ಒತ್ತಿಹೇಳುತ್ತಾರೆ ಇಂಥ ಇಂದ್ರಿಯಭೋಗಗಳು ಕೆಟ್ಟವೇ? ಹಾಗಾದರೆ ಎಷ್ಟುದೂರ ಕೆಟ್ಟವು ಎಂಬ ಅಭಿಪ್ರಾ

ಯಭೇದವಿರಬಹುದು. ಆದರೆ ಈ ದುರ್ಗುಣಗಳು ವ್ಯಕ್ತಿಗಾಗಲೀ ಸಮಾಜಕ್ಕಾಗಲೀ ದುರಾಶೆ, ಸ್ವಾರ್ಥತೆ, ಇತರರಿಗೆ ಇಲ್ಲದಂತೆ ಕೂಡಿಹಾಕುವುದು, ಸ್ವಂತ ಲಾಭಕ್ಕಾಗಿ ಆಗುವ ವ್ಯಕ್ತಿಗಳ ಬಲವಾದ ಸಂಘರ್ಷಣೆಗಳು, ಒಂದು ಗುಂಪಿನವರು ಇನ್ನೊಂದು ಗುಂಪಿನವರನ್ನು ಮಾನವ್ಯಕ್ಕೆ ಅಸಹಜವಾದ ರೀತಿಯಲ್ಲಿ ತುಳಿದು ಕೆಳಗೊತ್ತಿ ಕೊಳ್ಳೆಹೊಡೆಯುವುದು, ಜನಾಂಗಗಳು ಪರಸ್ಪರವಾಗಿ ಭಯಂಕರ ಯುದ್ಧಮಾಡುವುದು, ಇವುಗಳಿಗಿಂತಲೂ ಹಾನಿಕರವೇ? ಗಾಂಧಿಜಿಯವರು ಇಂಥ ಅಹಿಂಸೆಯನ್ನು ಅಧೋಗತಿಗಿಳಿಸುವ ಯುದ್ಧವನ್ನು ದ್ವೇಷಿಸುವರು ನಿಜ. ಆದರೆ ಪ್ರಬಲರು ದುರ್ಬಲರನ್ನು ಬಲಿಗೊಳ್ಳುವುದು ಸರಿ ಎಂಬರ್ಥದ ಕಟ್ಟುಕಾಯಿದೆಗಳೂ ಗತಯುಗದ "ಸಮರ್ಥನು ಸಂಪಾದಿಸಿಕೊಳ್ಳಲಿ, ಶಕ್ತನು ಕಾಪಾಡಿಕೊಳ್ಳಲಿ" ಎಂಬ ಧ್ಯೇಯವೂ ಉಳ್ಳ, ಕೂಡಿಹಾಕುವುದೇ ಸರಿ ಎಂಬ ಸಮಾಜದಲ್ಲಿ ಈ ದುರ್ಗುಣಗಳಿರುವುದು ಸಹಜವೇ ಅಲ್ಲವೆ? ಇಂದು ಅನಿವಾರ್ಯವಾದ ಜಗಳಗಳನ್ನು ತಂದೊಡ್ಡುತ್ತಿರುವುದು ಲಾಭದ ಲೋಭ, ಇಂದಿನ ಸಾಮಾಜಿಕ ಪರಿಸ್ಥಿತಿಯು ಮನುಷ್ಯನ ಸುಲಿಯುವ ಸ್ವಭಾವವನ್ನು ಕಾದಿಟ್ಟು ಅದಕ್ಕೆ ಉತ್ತೇಜನ ಕೊಡುತ್ತದೆ. ಈ ಪರಿಸ್ಥಿತಿಯು ಕೆಲವು ಸದ್ಗುಣಗಳನ್ನೂ ಪ್ರೋತ್ಸಾಹಿಸುತ್ತಿರುವುದೂ ನಿಜ. ಆದರೆ ಅದಕ್ಕಿಂತ ಹೆಚ್ಚಾಗಿ ಹೀನ ಸ್ವಭಾವಗಳಿಗೆ ಉತ್ತೇಜನ ಹೆಚ್ಚಾಗಿದೆ. ಜಯವೆಂದರೆ ಎದುರಿಸಿದವರನ್ನು ತುಳಿದು ಸೋತವರಮೇಲೆ ಹತ್ತಿನಿಲ್ಲುವುದು ಎಂದಾಗಿದೆ. ಇಂಥ ಧ್ಯೇಯಗಳೂ ಆಶೆಗಳೂ ನಮ್ಮ ಸಮಾಜದ ಮೆಚ್ಚಿಕೆಯನ್ನು ಪಡೆದು ನಮ್ಮಲ್ಲಿ ಉತ್ತಮರಾದವರನ್ನು ಆಕರ್ಷಿಸುತ್ತಿದ್ದರೆ ಗಾಂಧಿಜಿಯವರ ಪರಮಧ್ಯೇಯವು ಈಡೇರುವುದೇ? ಇಂಥಾ ವಾತಾವರಣದಲ್ಲಿ ಅವರ ಪರಮಧ್ಯೇಯವಾದ ಮನುಷ್ಯನ ಅವತಾರವಾಗುವುದೇ? ಸೇವಾಬುದ್ಧಿಯನ್ನು ಅಭಿವೃದ್ಧಿಪಡಿಸುವುದು ಅವರ ಅಪೇಕ್ಷೆ. ಕೆಲವರು ಅವರ ಇಚ್ಛೆಯಂತೆ ನಡೆಯಬಹುದು. ಆದರೆ ಎಲ್ಲಿಯವರೆಗೆ ಸಮಾಜವು ಸ್ವಾರ್ಥಪರರ ಕೂಟಗಳಲ್ಲಿ ಜಯಶೀಲರಾದವರನ್ನು ಉತ್ಸವಮೂರ್ತಿಗಳನ್ನಾಗಿ ಮೆರೆಯಿಸುವುದೋ ಮತ್ತು ವ್ಯಕ್ತಿಲಾಭವೇ ಎಲ್ಲಿಯವರೆಗೆ ಪ್ರಚೋದಕ ಶಕ್ತಿಯಾಗಿರುವುದೋ ಅಲ್ಲಿಯವರಗೆ ಸಮಾಜದ ಬಹಳಾಂಶವು ಅದೇ ಮಾರ್ಗವನ್ನೇ ಅನುಸರಿಸುತ್ತದೆ.

ಆದರೆ ಈ ಸಮಸ್ಯೆಯು ನೀತಿಯದಲ್ಲ, ಧರ್ಮದ್ದಂತೂ ಅಲ್ಲವೇ ಅಲ್ಲ. ಈ ಸಮಸ್ಯೆಯ ಪರಿಹಾರವು ಅತ್ಯಾವಶ್ಯಕ. ಪ್ರಪಂಚವು ನಿರಾಶೆಯ ತಳಮಳದಲ್ಲಿ ಬಿದ್ದಿದೆ. ಈಗ ಯಾವುದಾದರೂ ಒಂದು ಮಾರ್ಗವನ್ನು ಕಂಡುಹಿಡಿಯಲೇ ಬೇಕು. (ಆಂಗ್ಲ ಕಾದಂಬರಿಕಾರ ಡಿಕನ್ಸನು ರಚಿಸಿರುವ) ಮಿಕಾಬರ್ ವ್ಯಕ್ತಿಯಂತೆ ದೇವರು ಕೊಡುತ್ತಾನೆಂದು ನಾವು ಕಾದುಕುಳ್ಳಿರಲು ಸಾಧ್ಯವಲ್ಲ. ಅಥವಾ ಬಂಡವಾಳಶಾಹಿ, ಸಮತಾವಾದ, ಕಮ್ಯೂನಿಸಂ, ಮೊದಲಾದವುಗಳಲ್ಲಿರುವ ಕೆಡಕುಗಳನ್ನು ಮಾತ್ರ ಹಳಿಯುತ್ತಾ ನೀತಿ ಎಂದು ಬದುಕುವುದೂ ಕಷ್ಟ. ಅಥವಾ ಯಾವುದೋ

ಒಂದು ರಾಜಿಯಾಗಿ, ಹೊಸದು ಹಳೆಯದು ಇವೆರಡರ ನಡುವೆ ನೂತನ ಪುರಾತನಗಳ ಅತ್ಯಂತ ಉತ್ತಮ ಭಾವಗಳನ್ನು ಸುಖವಾಗಿ ಬೆರಸಿಕೊಂಡಿರುವ ಒಂದು ಹೊಸದು ಬರುವುದು ಎಂದು ನಿರೀಕ್ಷಿಸಿಕೊಂಡಿರುವುದೂ ಒಳ್ಳೆಯದಲ್ಲ. ರೋಗವು ಏನೆಂದು ಗೊತ್ತುಹಚ್ಚಿ ಅದಕ್ಕೆ ತಕ್ಕ ಮದ್ದನ್ನು ಸೂಚಿಸಿ ಗುಣಮಾಡಲು ಪ್ರಯತ್ನಪಡಬೇಕು ಇಷ್ಟುಮಾತ್ರ ಖಂಡಿತವಾಗಿಯೂ ನಿಶ್ಚಯ, ರಾಷ್ಟ್ರೀಯ ದೃಷ್ಟಿಯಿಂದ ಆಗಲಿ, ಅಂತರರಾಷ್ಟ್ರೀಯ ದೃಷ್ಟಿಯಿಂದ ಆಗಲಿ, ನಾವು ನಿಂತಲ್ಲಿಯೇ ನಿಂತಿರಲು ಸಾಧ್ಯವಿಲ್ಲ ಪ್ರಯತ್ನಪಟ್ಟು ಹಿಂದಕ್ಕೆ ಹೋಗಬಹುದು ಅಥವಾ ಮುಂದಕ್ಕೆ ನುಗ್ಗಿಹೋಗಬಹುದು ಹಿಂದಕ್ಕೆ ಹೋಗುವದಂತೂ ಸಾಧ್ಯವೇ ಇಲ್ಲವಾಗಿ ಇಲ್ಲಿ ನಮ್ಮ ಸ್ವಂತ ಇಚ್ಛೆಗೆ ಯಾವುದೂ ಉಳಿದಿಲ್ಲವೆಂದು ಕಾಣುತ್ತದೆ

ಮತ್ತೆ ಗಾಂಧಿಜಿಯವರ ಚಳವಳಿಗಳಲ್ಲಿ ಹಲವನ್ನು ನೋಡಿದರೆ, ಇವರು ಮತ್ತೆ ಎಲ್ಲಿಯೋ ಇಕ್ಕಟ್ಟಾದ ಸ್ವಂತ ಸ್ವಾಮಿತ್ವದ ಕಡೆಗೆ ಹಿಂದೆ ಹಿಂದಕ್ಕೆ ಕರೆದುಕೊಂಡು ಹೋಗುವಂತೆಯೂ ನಾವು ಮತ್ತೆ ಸ್ವಸಂಪೂರ್ಣ ಜನಾಂಗವಾಗಿ ಬಾಳುವುದಿರಲಿ, ಗ್ರಾಮಗಳೆಲ್ಲ ಸ್ವಸಂಪೂರ್ಣವಾಗಲಿ ಎಂಬ ಗುರಿಯಿಂದ ಹೊರಟಿರಬಹುದೋ ಎಂಬಂತೆಯೂ ಕಾಣುತ್ತದೆ ಆದಿ ಅನಾಗರಿಕ ಜಾತಿಗಳಲ್ಲಿ ಗ್ರಾಮವು ಹೆಚ್ಚುಕಡಿಮೆ ಬೇರೆ ಗ್ರಾಮಗಳಿಂದ ಏನೂ ಬಯಸದೆ ತನ್ನ ಪ್ರಜಾಜೀವನಕ್ಕೆ ಬೇಕಾಗಬಹುದಾದ ಆಹಾರ, ಬಟ್ಟೆ ಮುಂತಾದವುಗಳನ್ನು ಒದಗಿಸಿಕೊಳ್ಳುತ್ತ ಸ್ವಸಂಪೂರ್ಣವಾಗಿತ್ತು. ಯತ್ನವಿಲ್ಲದೆ, ಆಗ ಜೀವನದ ಆರ್ಥಿಕ ಅಂತಸ್ತು ಬಹು ಕೀಳಾಗಿರಬೇಕು ಅದು ಅಸಾಧ್ಯವಾದುದರಿಂದ ಗಾಂಧಿಜಿಯವರು ಅದನ್ನೇ ಶಾಶ್ವತವಾದ ಗುರಿಯಾಗಿಟ್ಟುಕೊಂಡಿದ್ದಾರೆಂದು ನಾನು ಭಾವಿಸಲಾರೆ ಈಗಿನ ಕಾಲದಲ್ಲಿ ಪ್ರಜಾಸಂಖ್ಯೆಯು ಬಹಳವಾಗಿ ಬೆಳೆದಿದೆ ಕೆಲವು ದೇಶಗಳಲ್ಲಂತೂ ಮೇಲೆ ಹೇಳಿದ ರೀತಿಯಲ್ಲಿ ಬದುಕುವುದೇ ಕಷ್ಟ ಇಂಥಾದ್ದೊಂದು ನಿರ್ಗತಿಕವಾದ ಕ್ಷಾಮ ಪೀಡಿತ ಕ್ಷುಧಾರ್ತ ಸ್ಥಿತಿಗೆ ಹಿಂತಿರುಗಲು ಅವರು ಒಪ್ಪುವುದಿಲ್ಲ. ಹಿಂದೂಸ್ಥಾನದಂಥ ವ್ಯವಸಾಯ ಪ್ರಧಾನ ದೇಶದಲ್ಲಿ ಮಾತ್ರ ಇದು ಸಾಧ್ಯ ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಯಾದರೆ ಜನರ ಈಗಿನ ಆರ್ಥಿಕಸ್ಥಿತಿಯು ಸ್ವಲ್ಪಮಾತ್ರವಾದರೂ ಉತ್ತಮವಾಗಬಹುದು ಆದರೆ, ಇನ್ನಿತರ ಜನಾಂಗಗಳೆಲ್ಲಾ ಹೇಗೋ ಹಾಗೆ ಹಿಂದೂ ದೇಶವೂ ಸಹ ಪ್ರಪಂಚದ ಇತರ ಭಾಗಗಳೊಂದಿಗೆ ಸೇರಿಹೋಗಿರುವಾಗ ಹಗ್ಗ ಹರಿದುಕೊಂಡು, ನಮಗೆ ಬೇಕಾದಂತೆ ಎಲ್ಲಿಯೋ ಹೊರಟುಹೋಗುವುದು ಸಾಧ್ಯವಿಲ್ಲ ಅದರಿಂದ ನಮ್ಮ ಆಲೋಚನೆಗಳು ಪ್ರತಿಕ್ಷಣದಲ್ಲಿಯೂ ಪ್ರಪಂಚವನ್ನು ಮುಟ್ಟಿಮುಟ್ಟಿ ಬರಬೇಕು ಇಂತಹ ಸಂದರ್ಭದಲ್ಲಿ ಕ್ಷುದ್ರವಾದ ಸ್ವಂತ ಸ್ವಾಮಿತ್ವವಾದಕ್ಕೆ ಅವಕಾಶವೇ ಇಲ್ಲ ನನ್ನ ಅಭಿಪ್ರಾಯದಲ್ಲಂತೂ ಯಾವ ದೃಷ್ಟಿಯಿಂದಲೂ ಅದು ಕೂಡದು.

ಈಗ ನಮಗೆ ಇರುವ ಮಾರ್ಗವು ಒಂದೇ ಒಂದು ಅಲ್ಲಿಗೇ ನಾವೂ ಅಗತಿಕವಾಗಿ ಹೋಗುತ್ತಿದ್ದೇವೆ, ಅದು ಸಮತಾವಾದದ ಹೊಸ ಸಂಸ್ಕೃತಿ ಅದಿಂದು

ನಿರ್ಮಾಣವಾಗುತ್ತಿದೆ ಮೊದಲು ಜನಾಂಗಗಳಲ್ಲಿ ಮಾತ್ರ ಫಲಿಸಿ ಕಟ್ಟಕಡೆಗೆ ಪ್ರಪಂಚಕ್ಕೆಲ್ಲಾ ಹಬ್ಬುತ್ತದೆ ಆ ಸ್ಥಿತಿಯಲ್ಲಿ ಜನತೆಯ ಕ್ಷೇಮಲಾಭಕ್ಕಾಗಿ ಆರ್ಥಿಕ ಸಂಪತ್ತಿನ ನಿರ್ಮಾಣವೂ ಮತ್ತು ಹಂಚುವಿಕೆಯೂ ಸಹ ಸಮತಾವಾದಿ ವ್ಯವಸ್ಥೆಯು ಕಟ್ಟಿಗೊಳಪಟ್ಟಿರುತ್ತದೆ ಇಂಥಾದ್ದೊಂದು ಸ್ಥಿತಿಯು ಯಾವ ರೀತಿಯಲ್ಲಿ ಬಂದೀತು ಎನ್ನುವುದು ಬೇರೆ ವಿಚಾರ ಸದ್ಯ ಸ್ಥಿತಿಯಿಂದ ಲಾಭ ಹೊಂದುತ್ತಿರುದ ಕೆಲವರಾರೋ ಆಕ್ಷೇಪಣೆ ಮಾಡಿದ ಮಾತ್ರಕ್ಕೆ ಒಂದು ಜನಾಂಗಕ್ಕೆ ಮಾನವಜಾತಿಗೆ ಕ್ಷೇಮಕಾರಿಯಾದ ಇಂಥಾದ್ದೊಂದು ಮಾರ್ಗವನ್ನು ತೊರೆಯುವುದು ಸರಿಯಲ್ಲ ಎಂಬುದು ಸ್ಪಷ್ಟವಾಗಿದೆ ಒಂದು ವೇಳೆ ರಾಜಕೀಯ ಅಥವಾ ಸಾಮಾಜಿಕ ಸಂಸ್ಥೆಗಳು ಇಂಥಾ ಬದಲಾವಣೆಗೆ ಅಡ್ಡ ಬಂದರೆ ಅವನ್ನೂ ನಿರ್ಮೂಲ ಮಾಡಬೇಕು ಅಪೇಕ್ಷಣೀಯವಾದ ಮತ್ತು ಅನುಕೂಲವಾದ ಇಂತಹ ಧ್ಯೇಯವನ್ನು ಇನ್ನಾವುದಾದರೂ ಕ್ಷುದ್ರಾಶೆಗಳಿಗಾಗಿ ಮಾರಿಕೊಳ್ಳುವುದು ಮಹಾ ದ್ರೋಹ ಅಂಥಾದ್ದೊಂದು ಬದಲಾವಣೆಯನ್ನು ಸುತ್ತಮುತ್ತಿನ ಪ್ರಪಂಚದ ಸ್ಥಿತಿಗತಿಗಳು ತಂದೊಡ್ಡಬಹುದು, ಜಾಗ್ರತೆಗೊಳಿಸಬಹುದು ಆದರೆ ಅದಕ್ಕೆ ಸಂಬಂಧಪಟ್ಟ ಜನತೆಯ ಅಧಿಕಾಂಶವು ಆ ಬದಲಾವಣೆಯನ್ನು ಒಪ್ಪದಿದ್ದರೆ, ಅಂಗೀಕರಿಸದಿದ್ದರೆ ಅದು ಬರುವುದು ಸಾಧ್ಯವಿಲ್ಲ ಆದ್ದರಿಂದ ಜನತೆಯನ್ನು ಒಪ್ಪಿಸಿ ಅವರನ್ನು ಗೆದ್ದುಕೊಳ್ಳಬೇಕು ಒಂದು ಸಣ್ಣ ಗುಂಪು ಮಸಲತ್ತು ಮಾಡಿ ಕಾರ್ಯದಿಂದ ಇದನ್ನು ಸಾಧಿಸುವೆವು ಎನ್ನುವುದು ಆಗದ ಮಾತು. ಚಾಲ್ತಿಯಲ್ಲಿರುವ ಸ್ಥಿತಿಯಿಂದ ಲಾಭ ಹೊಂದುತ್ತಿರುವವರನ್ನೂ ಗೆದ್ದುಕೊಳ್ಳಲು ಪ್ರಯತ್ನ ಮಾಡಬೇಕಾಗಿರುವುದು ಸ್ವಾಭಾವಿಕ ಆದರೆ ಅಂಥವರು ಬಹಳ ಜನ ನಮ್ಮ ಕಡೆ ತಿರುಗುವುದು ಬಹಳ ಅಸಂಭವ

ಕೈನೂಲಿನ ಮತ್ತು ಕೈಮಗ್ಗದ ಖಾದೀ ಚಳವಳಿಯು ಗಾಂಧಿಜಿಯವರ ಮೆಚ್ಚುಗೆಗೆ ಹೆಚ್ಚು ಪಾತ್ರವಾಗಿದ್ದರೂ, ಉತ್ಪಾದನೆಯಲ್ಲಿ ವ್ಯಕ್ತಿಯ ಕೈಯೇ ಮೇಲಾಗಿರಬೇಕೆಂಬ ವಾದದ ಪರಮಾವಧಿ ಆದ್ದರಿಂದ ಈಗಿನಂತಹ ಯಂತ್ರಕರ್ಮ ಯುಗದ ಹಿಂದಿನ ಸ್ಥಿತಿಯು ಅದು ಆಧುನಿಕ ದಿನದ ಜೀವನ ಸಮಸ್ಯೆಯಾವುದಕ್ಕೂ ಅದನ್ನು ಪರಿಹಾರವೆಂದು ಭಾವಿಸಲು ಸಾಧ್ಯವೇ ಇಲ್ಲ ಅದರಿಂದ ಇನ್ನೂ ಹೆಚ್ಚಾಗಿ ಮನಸ್ಸಿನ ಸ್ಥಿತಿಯು ವಿಪರೀತವಾಗಿ ಸರಿಯಾದ ಮಾರ್ಗದಲ್ಲಿ ಮುಂದುವರಿಯಲು ಅದು ಅಡ್ಡಿಯಾಗಬಹುದು ಆದರೂ ಸದ್ಯಕ್ಕೆ ಮಾತ್ರ ಏರ್ಪಾಡಾದ ಖಾಯಂ ಅಲ್ಲದ ಚಳುವಳಿಯೆಂದು ಮನಗಂಡಿದ್ದೇನೆ ಮತ್ತು ಅದು ಒಂದು ಸಹಾಯವನ್ನು ಮಾಡಿಕೊಟ್ಟಿರುವುದಲ್ಲದೆ ಎಲ್ಲಿಯವರಿವಿಗೆ ಎಂದರ ಸರಕಾರವೇ ಕ್ಷೇತ್ರಸಂಬಂಧವಾದ ಮತ್ತು ಕೈಗಾರಿಕೆ ಸಮಸ್ಯೆಗಳಿಗೆ ಸರಿಯಾದ ಪರಿಹಾರ ಮಾರ್ಗಗಳನ್ನು ದೇಶದಲ್ಲೆಲ್ಲಾ ಹರಡುವವರೆಗೆ, ಉಪಯೋಗಕರವಾಗಿ ಇರಲೂಬಹುದು ಹಿಂದೂಸ್ಥಾನದಲ್ಲಿ ಲೆಕ್ಕಕ್ಕೆ ಬರದಿರುವ ನಿರುದ್ಯೋಗಿಗಳ ಸಂಖ್ಯೆಯು ಬಹು ಭಾರಿಯಾಗಿದೆ ಅಲ್ಲದೆ ಗ್ರಾಮಾಂತರಗಳಲ್ಲಿ ಅರ್ಧ ನಿರುದ್ಯೋಗಿಗಳು ಇನ್ನೂ ಹೆಚ್ಚಾಗಿದ್ದಾರೆ ಸರಕಾರವು ಈ

ನಿರುದ್ಯೋಗವನ್ನು ನಿರ್ಮೂಲ ಮಾಡಲು ಯಾವ ಪ್ರಯತ್ನವನ್ನೂ ಮಾಡಿಲ್ಲ ಅಥವಾ ನಿರುದ್ಯೋಗಿಗಳಿಗೆ ಯಾವ ವಿಧದಲ್ಲಿಯೂ ಸಹಾಯವನ್ನೂ ಮಾಡಿಲ್ಲ ಆರ್ಥಿಕ ರೀತಿಯಲ್ಲಿ ಖಾದಿಯು ಸಂಪೂರ್ಣವಾಗಿ ಮತ್ತು ಅಪೂರ್ವವಾಗಿ ನಿರುದ್ಯೋಗಿಗಳಾದವರಿಗೆ ಸ್ವಲ್ಪ ಸಹಾಯಕೊಟ್ಟಿದೆ ಈ ಉತ್ತಮ ಸ್ಥಿತಿಯು ಸ್ವಪ್ರಯತ್ನದಿಂದ ಬಂದಿದೆಯಾದ್ದರಿಂದ ತತ್ಸಂಬಂಧ ಜನಗಳಿಗೆ ಆತ್ಮಗೌರವವನ್ನೂ ಮತ್ತು ಆತ್ಮ ನಂಬಿಕೆಯನ್ನೂ ಹೆಚ್ಚಿಸಿದೆ ಅತ್ಯಂತವಾಗಿ ಕಣ್ಣಿಗೆದ್ದು ಕಾಣುವ ಫಲಿತಾಂಶವೆಂದರೆ ಮಾನಸಿಕ ಸ್ಥಿತಿ ಬದಲಾದದ್ದು ಖಾದಿಯು ಗ್ರಾಮಕ್ಕೂ ಪಟ್ಟಣಕ್ಕೂ ಇದ್ದ ಅಂತರಕ್ಕೆ ಅಡ್ಡಲಾಗಿ ಸೇತುವೆಯನ್ನು ಕಟ್ಟುವುದರಲ್ಲಿ ಸ್ವಲ್ಪಮಟ್ಟಿಗೆ ಜಯಶೀಲವಾಗಿದೆ ಮಧ್ಯವರ್ಗದ ಕಲಿತವರನ್ನೂ ಮತ್ತು ಹಳ್ಳಿಯ ರೈತರನ್ನೂ ಖಾದಿಯು ಒಂದು ಗೂಡಿಸಿತು. ಬಟ್ಟೆಗಳು ಧರಿಸುವವರಿಗೂ ಮತ್ತು ನೋಡುವವರಿಗೂ ಮಾನಸಿಕ ಪರಿವರ್ತನೆ ಮಾಡುತ್ತವೆ ಶುಭ್ರವೂ ಸುಲಭವೂ ಆದ ಖಾದಿಯನ್ನು ಮಧ್ಯಮವರ್ಗದವರು ಧರಿಸಲು ಪ್ರಾರಂಭಿಸಿದ್ದರಿಂದ ಸರಳತನವು ಬೆಳೆಯಿತು. ವರಟುತನವೂ ಆಡಂಬರವೂ ಕಡಿಮೆಯಾಯಿತು ಜನತೆಯಲ್ಲಿ ಐಕ್ಯತೆಯು ನೆಲೆಗೊಂಡಿತು ಮಧ್ಯಮ ವರ್ಗದ ಕೆಳಗಿನವರು ಉಡಿಗೆತೊಡಿಗೆಯಲ್ಲಿ ಐಶ್ವರ್ಯವಂತರನ್ನು ಅನುಕರಿಸುವುದು ತಪ್ಪಿತು. ಈ ಸುಲಭದ ಉಡುಪನ್ನು ಧರಿಸುವುದು ಕೀಳುತನವೆಂಬ ಭಾವನೆಯೂ ಅಳಿಯಿತು ತಾವು ಗೌರವಸ್ಥರಾದೆವೆಂದುಕೊಂಡು ಇನ್ನೂ ರೇಷ್ಮೆ ಮತ್ತು ಬನಾತುಗಳಲ್ಲಿ ಮೆರೆಯುತ್ತಿದ್ದವರಿಗಿಂತ ಸ್ವಲ್ಪ ಹೆಚ್ಚೆಂದೂ ಭಾವಿಸಿದರು ಅತಿರಿಕ್ತರಿಗೂ ಸಹ ಈ ಆತ್ಮಗೌರವ ಮತ್ತು ಮರ್ಯಾದೆಯ ಅನುಭವವಾಯಿತು ಖಾದೀ ತೊಟ್ಟವರು ತುಂಬಿದ ಭಾರಿ ಸಭೆಗಳಲ್ಲಿ ಬಲ್ಲಿದರಾರು ಬಡವರಾರು ಎಂಬ ಭೇದವೇ ತೋರದೆ, ಭ್ರಾತೃಭಾವವೂ ಬೆಳೆಯಿತು ಕಾಂಗ್ರೆಸ್ಸು ಜನಜಂಗುಳಿಯ ಹೃದಯವನ್ನು ಮುಟ್ಟಿದುದು ನಿಜವಾಗಿಯೂ ಖಾದಿಯಿಂದಲೇ ರಾಷ್ಟ್ರೀಯ ಸ್ವಾತಂತ್ರ್ಯದ ಸಮವಸ್ತ್ರವೇ ಖಾದಿಯಾಗಿ ಪರಿಣಮಿಸಿತು

ಬಟ್ಟೆ ಗಿರಣಿಗಳ ಮಾಲೀಕರೂ ತಮ್ಮ ಪದಾರ್ಥಗಳ ಬೆಲೆಗಳನ್ನು ಹೆಚ್ಚಿಸಬೇಕೆನ್ನುವ ನಿತ್ಯ ಪ್ರಯತ್ನಕ್ಕೆ ಖಾದಿಯು ಪ್ರತಿಬಂಧಕವೂ ಆಯಿತು ಹಿಂದೂಸಾನದ ಗಿರಣಿಯ ಮಾಲೀಕರನ್ನು ಅಂಕೆಯಲ್ಲಿಟ್ಟಿದ್ದುದು ಪರದೇಶದ ಪೋಟಾಪೋಟಿ. ಅದರಲ್ಲೂ ಮುಖ್ಯವಾಗಿ ಲ್ಯಾಂಕಾಷೈರಿನದು ಈ ಪೋಟಾಪೋಟಿಯು ನಿಂತಾಗಲೆಲ್ಲಾ ಜಗತ್ತಿನ ದೊಡ್ಡ ಯುದ್ಧದಲ್ಲಿ ನಡೆದಂತೆ ಅರಿವೆಬೆಲೆಗಳು ಅಸಾಧ್ಯವಾಗಿ ಮೇಲೇರಿದುವು ಹಿಂದೂಸ್ಥಾನದ ಗಿರಣಿಗಳು ಬಹಳವಾಗಿ ಹಣ ಸಂಪಾದನೆ ಮಾಡುತ್ತಿದ್ದವು ಸ್ವದೇಶೀ ಸ್ವೀಕಾರ್ ಪರದೇಶಿ ಬಹಿಷ್ಕಾರ್ ಚಳವಳಿಗಳಿಂದಲೂ ಮುಂದೆ ಮುಂದೆ ಈ ಗಿರಣಿಗಳಿಗೆ ಬಹುವಾಗಿ ಸಹಾಯವಾಯಿತು ಆದರೆ ಖಾದಿಯು ಬಂದುದು ಒಂದು ವಿಶೇಷ ವ್ಯತ್ಯಾಸವಾಯಿತು ಅರಿವೆಯ ಬೆಲೆಯು ಏರುವುದು ತಪ್ಪಿತು

ಜನಗಳ ಈ ಖಾದಿಯ ಉತ್ಸಾಹವನ್ನು ಕಂಡು ಗಿರಣಿಗಳು (ಜಪಾನ ಸಹ) ಕೈನೂಲಿನ, ಕೈಮಗ್ಗದ ಬಟ್ಟೆಗಳಿಗೂ ಗಿರಣಿಯ ಒರಟು ಅರಿವೆಗೂ ವ್ಯತ್ಯಾಸವೇ ಕಾಣದಂತಹ ಒರಟು ಬಟ್ಟೆಯನ್ನು ಮಾಡಿ ಮಾರಿ ಹಣವನ್ನು ಗಳಿಸಿದುವು —ಇನ್ನು ಮುಂದೆ ಎಂದಾದರೂ ದೊಡ್ಡದೊಂದು ಯುದ್ಧದಂತಹ ಸಂಭವವೊದಗಿ ಪರದೇಶದ ಅರಿವೆಗಳು ಇಲ್ಲಿಗೆ ಬರದೆ ಹೋದರೆ, ಆಗ ಇಂಡಿಯಾ ದೇಶದ ಗಿರಣಿಗಳು ೧೯೨೧ರಿಂದ ಈಚೆಗೆ ಮಾಡಿದಷ್ಟು ಮೋಸವನ್ನು ಪುನಃ ಮಾಡಲು ಸಾಧ್ಯವಿಲ್ಲ ಖಾದೀ ಚಳುವಳಿಯು ಅದನ್ನು ತಡೆಯುವುದು. ಮತ್ತು ಖಾದೀ ಸಂಸ್ಥೆಯು ಸ್ವಲ್ಪ ಅವಕಾಶದಲ್ಲಿಯೇ ಎಲ್ಲೆಲ್ಲಿಯೂ ಹರಡಬಲ್ಲಷ್ಟು ಸಮರ್ಥವಾಗಿದೆ

ಖಾದೀ ಚಳವಳಿಯಿಂದ ಇಷ್ಟೆಲ್ಲ ಫಲವಾಗಿದ್ದರೂ ಅದು ಶಾಶ್ವತವಾಗಿ ನಿಲ್ಲಲಾರದು ಎಂದು ನನಗೆ ತೋರುತ್ತದೆ. ಮುಂದೆಯೂ ಕೂಡ ಹೆಚ್ಚಾಗಿ ಮಿತವ್ಯಯಕ್ಕೆ ಸಹಾಯಕಾರಿಯಾದ ಚಳವಳಿಯಾಗಿ ನಿಲ್ಲಬಹುದು. ಆದರೆ ಮುಂದೆ ನಮಗೆ ಬೇಕಾದ ಅತ್ಯವಶ್ಯಕವಾದ ಬದಲಾವಣೆಯೆಂದರೆ ವ್ಯವಸಾಯ ಪದ್ಧತಿಯನ್ನು ಸಂಪೂರ್ಣವಾಗಿ ಸರಿಪಡಿಸುವುದು ಮತ್ತು ಕೈಗಾರಿಕೆಯನ್ನು ಬೆಳೆಸಿಕೊಂಡು ಬರುವುದು ಲಕ್ಷಾಂತರ ರೂಪಾಯಿಗಳನ್ನು ಖರ್ಚು ಮಾಡಿಸುವ ಅಂಥಾ ಸಮಿತಿ ಇಂಥಾ ಸಮಿತಿ ಎಂಬ ಗುಂಪುಗಳು ಕೆದಕಿ ಬೆದಕಿನೋಡಿ ಮೇಲೆ ಮೇಲೆಲ್ಲ ಅತಿ ಸಣ್ಣ ಬದಲಾವಣೆಗಳನ್ನು ಸೂಚಿಸಿರುವುದರಿಂದ ಸ್ವಲ್ಪವೂ ಫಲವಾಗುವುದಿಲ್ಲ ನಮ್ಮ ದೇಶದ ಜಮೀನ್ದಾರಿ ಪದ್ಧತಿಯು ನಮ್ಮ ಕಣ್ಣೆದುರಿನಲ್ಲಿಯೇ ಬಿದ್ದುರುಳುತ್ತಲಿದೆ ಮತ್ತು ಪದಾರ್ಥ ನಿರ್ಮಾಣಕ್ಕೂ ಮಾರಾಟಕ್ಕೂ ಯೋಗ್ಯವಾದ ಭಾರಿ ಭಾರಿಯ ಕಾರ್ಯಕ್ರಮಗಳಿಗೂ ಪ್ರತಿಬಂಧಕವಾಗಿದೆ ಒಂದು ಸಂಪೂರ್ಣವಾದ ತಿರುಮುರುಗ ಬದಲಾವಣೆಯಾಗಬೇಕು ಸಣ್ಣ ಪುಟ್ಟ ಜಮೀನ್ದಾರಿಗಳು ಲಯವಾಗಬೇಕು ಒಳ್ಳೆ ಏರ್ಪಾಡಿನ ಮತ್ತು ಪರಸ್ಪರ ಸಹಾಯದ ಉತ್ಸಾಹ ಪೂರಿತವಾದ ಕಾಮಗಾರಿ ಪ್ರಾರಂಭವಾಗಬೇಕು ಸ್ವಲ್ಪ ಶ್ರಮದಿಂದ ಉತ್ಪತ್ತಿಯು ಹೆಚ್ಚುತ್ತಾ ಹೋಗಬೇಕು ಹಾಗಾದರೆ ಈಗಿನ ರೀತಿನೀತಿಗಳಿಗೆ ಸರಿಹೋಗುವುದು ವ್ಯವಸಾಯಕ್ಕೆ ಎಲ್ಲರೂ ಬೇಕಾಗಿಲ್ಲ ಭಾರಿ ಕಾಮಗಾರಿಗಳು (ಗಾಂಧಿಜಿಯವರು ಶಂಕಿಸಿರುವಂತೆ) ಜಮೀನಿನ ಮೇಲೆ ಕೆಲಸ ಮಾಡುತ್ತಲಿರುವವರ ಸಂಖ್ಯೆಯನ್ನು ಕಡಿಮೆ ಮಾಡಿಬಿಡುವುದು. ಹಾಗೆ ಹೊರಗೆ ಬಿದ್ದವರಲ್ಲಿ ಕೆಲವರು ಸಣ್ಣ ಪುಟ್ಟ ಕೈಗಾರಿಕೆಗಳ ಕಡೆಗೂ ಅನೇಕರು ಸಮತಾವಾದದ ಧೋರಣೆಯನ್ನು ಅವಲಂಬಿಸಿ ಹುಟ್ಟುವ ಭಾರಿಯ ಕೈಗಾರಿಕೆಗಳು ಅಥವಾ ಸಮಾಜ ಸೇವೆಗಳ ಕಡೆಗೂ ಹೊರಳಿಕೊಳ್ಳಬೇಕು

ಖಾದಿಯು ಅನೇಕ ಭಾಗಗಳಲ್ಲಿ ನಿಶ್ಚಯವಾಗಿಯೂ ಸಂಕಟವನ್ನು ಪರಿಹರಿಸಿದೆ ಖಾದಿಯ ಈ ವಿಜಯದಲ್ಲಿಯೇ ಅಪಾಯದ ಬೀಜವೂ ಇದೆ ಜೀರ್ಣವಾಗಿ ಬಿದ್ದು ಹೋಗುತ್ತಲಿರುವ ಜಮೀನು ಪದ್ಧತಿಯನ್ನು ಹಿಡಿದೆತ್ತಿ ನಿಲ್ಲಿಸಿ, ಮುಂದೆ ಬರಬಹು

ದಾದ ಉತ್ತಮ ಬದಲಾವಣೆಯನ್ನು ಆದಷ್ಟುಮಟ್ಟಿಗೆ ತಡೆದಿದೆ. ಈ ಭಾಗವು ಕಣ್ಣಿಗೆ ಕಾಣುವಷ್ಟು ಭಾರಿಯಲ್ಲದಿದ್ದರೂ ಅದು ಇರುವುದೇನೋ ನಿಜ ರೈತನಿಗಾಗಲೀ ಅಥವಾ ಸಣ್ಣ ಜಮೀನ್ದಾರನಾದ ವ್ಯವಸಾಯಗಾರನಿಗಾಗಲೀ ಜಮೀನಿನ ಆದಾಯದ ಅವನ ಭಾಗವು ಅವನ ಈಗಿನ ದರಿದ್ರ ಜೀವನವನ್ನು ಸಾಗಿಸಲೂ ಸಾಲದು. ಅವನು ಹೊರಗಿನಿಂದ ಏನಾದರೂ ಸಂಪಾದಿಸಿಕೊಳ್ಳಬೇಕು—ಅಥವಾ ಸಾಧಾರಣವಾಗಿ ಆಗು ವಂತೆ ಸಾಲದಲ್ಲಿ ಮುಳುಗುತ್ತ ಬರಬೇಕು. ಇಲ್ಲದಿದ್ದರೆ ಕಂದಾಯಗಳನ್ನು ಕೊಡಲೂ ಸಾಧ್ಯವಿಲ್ಲ ಹೀಗೆ ಅಧಿಕ ಸಂಪಾದನೆಯಿಲ್ಲದಿದ್ದರೆ ಜಮೀನ್ದಾರರಿಗೂ ಸರ್ಕಾರಕ್ಕೂ ಬರುವ ಕಂದಾಯವು ಬರುತ್ತಲೇ ಇರಲಿಲ್ಲ. ಈಗ ಅಧಿಕ ಸಂಪಾದನೆಯಿಂದ ಜಮೀನ್‌ದಾರನಿಗೂ ಸರ್ಕಾರಕ್ಕೂ ಅವರ ಭಾಗದ ಲಾಭವು ಬರುತ್ತದೆ ಈ ಸಂಪಾದ ನೆಯು ಚೆನ್ನಾಗಿದ್ದರೆ—ಕಂದಾಯಗಳು ಹೆಚ್ಚುವ ಸಂಭವವುಂಟು ಈಗಿನ ಪದ್ಧತಿ ಯಲ್ಲಿ ರೈತನ ಹೆಚ್ಚು ಕೆಲಸದಿಂದ ಮತ್ತು ಮಿತವ್ಯಯದಿಂದ ಕಟ್ಟಕಡೆಗೆ ಜಮೀನ್ದಾರ ನಿಗೇ ಲಾಭ ನನಗೆ ನೆನಪಿರುವಮಟ್ಟಿಗೆ ಹೆನ್ರಿ ಜಾರ್ಜರು ತಮ್ಮ 'ಪ್ರೋಗ್ರೆಸ್ ಅಂಡ್ ಪಾವರ್ಟಿ' (ಪ್ರಗತಿ ಮತ್ತು ಬಡತನ) ಎಂಬ ಪುಸ್ತಕದಲ್ಲಿ ಐರ್ಲೆಂಡಿನ ಉದಾ ಹರಣೆಗಳನ್ನು ತೆಗೆದುಕೊಂಡು ಈ ಅಂಶವನ್ನು ಚರ್ಚಿಸಿದ್ದಾರೆ

ಗಾಂಧಿಜಿಯವರು ಗ್ರಾಮ ಕೈಗಾರಿಕೆಗಳ ಪುನರುಜ್ಜೀವನವನ್ನು ಕೈಗೊಂಡಿದ್ದಾ ರಷ್ಟೆ ಅದು ಖಾದೀ ಪ್ರಚಾರದ ಬಡಾವಣೆಯೇ ಸರಿ ಇದರಿಂದ ಸದ್ಯಕ್ಕೇನೋ ಒಳ್ಳೇದಾಗುತ್ತದೆ ಸ್ವಲ್ಪ ಭಾಗವು ಹೆಚ್ಚುಕಡಿಮೆ, ಶಾಶ್ವತವಾಗಿ ನಿಲ್ಲುತ್ತದೆ. ಆದರೆ ಮುಕ್ಕಾಲುಪಾಲು ಅಳಿಸಿಹೋಗುತ್ತದೆ ಸದ್ಯದ ದುಃಸ್ಥಿತಿಯಲ್ಲಿ ಗ್ರಾಮಸ್ಥನಿಗೆ ಸಹಾಯವನ್ನೇನೋ ಮಾಡುವದು ಮತ್ತು ಮೃತಿಯನ್ನೈದುತಲಿದ್ದ ಕಲೆಯ ಹಾಗೂ ಸಂಸ್ಕೃತಿಯ ಕೆಲವು ಭಾಗಗಳನ್ನು ಪುನರುಜ್ಜೀವನಗೊಳಿಸುತ್ತದೆ ಆದರೆ ಯಂತ್ರ ಮತ್ತು ಉದ್ಯೋಗಗಳಿಗೆ ವಿರುದ್ಧವಾಗಿ ಇದು ಪ್ರತಿಭಟಿಸಿ ನಿಲ್ಲಲಾರದು ಹರಿಜನ ಪತ್ರಿಕೆಯಲ್ಲಿ ಈಚೆಗೆ ಬರೆದ ಲೇಖನ ಒಂದರಲ್ಲಿ ಗಾಂಧಿಜಿಯವರು "ಮಾಡಬೇಕೆಂದಿರುವ ಕೆಲಸಕ್ಕೆ ಬೇಕಾದಷ್ಟು ಜನರಿಲ್ಲದಿರುವಾಗ ಯಂತ್ರಗಳನ್ನು ಉಪಯೋಗಿಸುವುದು ಒಳ್ಳೆಯದು ಭಾರತದಲ್ಲಿರುವಂತೆ ಎಷ್ಟು ಬೇಕೋ ಅಷ್ಟಕ್ಕಿಂತಲೂ ಹೆಚ್ಚು ಜನಬಲ ವಿದ್ದಾಗ ಹಾಗೆಮಾಡುವುದು ತಪ್ಪು ಈಗ ನಮ್ಮ ಸಮಸ್ಯೆ ಏನೆಂದರೆ ಗ್ರಾಮವಾಸಿಗ ಳಾದ ಲಕ್ಷಾಂತರ ಪ್ರಜೆಗಳಿಗೆ ವಿರಾಮ ಸಿಕ್ಕುವಂತೆ ಮಾಡುವುದು ಹೇಗೆ ಎಂಬುದಲ್ಲ, ಕೆಲಸವಿಲ್ಲದೆ ಕುಳಿತಿರುವವರ— ಸುಮಾರು ಆರುತಿಂಗಳೆಲ್ಲ ಹಾಗಿರುವರು—ಕಾಲವನ್ನು ಉಪಯೋಗಿಸುವುದು ಹೇಗೆ ಎಂಬುದು" ಎಂದು ಬರೆದಿದ್ದಾರೆ. ಈ ಆಕ್ಷೇಪಣೆಯು ಹೆಚ್ಚುಕಡಿಮೆ ನಿರುದ್ಯೋಗದ ಹೊಡೆತಕ್ಕೆ ಸಿಕ್ಕಿರುವ ಎಲ್ಲಾ ದೇಶಗಳಿಗೂ ಅನ್ವಯಿ ಸುತ್ತದೆ ಇದರಲ್ಲಿ ದೋಷವೇನೆಂದರೆ ನಿಶ್ಚಯವಾಗಿಯೂ ಮಾಡುವುದಕ್ಕೆ ಕೆಲಸವೇ ಇಲ್ಲವೆಂದಲ್ಲ, ಆದರೆ ಈಗಿನ ಲಾಭ ಸಂಪಾದಿಸುವ ರೀತಿಯಲ್ಲಿ ಕೆಲಸಮಾಡಿಸುವವರಿಗೆ

ಕೆಲಸದಿಂದ ಲಾಭವಾಗುವಂತಿಲ್ಲ ಮಾಡಬೇಕಾದ ಕಾರ್ಯಗಳೇನೋ ಪುಷ್ಕಳವಾಗಿವೆ— ರಸ್ತೆ ಕಾಮಗಾರಿ, ನೀರು ಸರಬರಾಜು, ಗೃಹ ನಿರ್ಮಾಣ, ನೈರ್ಮಲ್ಯ ಪ್ರಸಾರ, ವೈದ್ಯಕೀಯ ಅನುಕೂಲತೆಗಳು, ಕೈಗಾರಿಕೆ, ವಿದ್ಯುತ್, ಸಾಮಾಜಿಕ ಮತ್ತು ಸಾಂಸ್ಕೃತಿಕ ಸೇವೆಗಳು, ವಿದ್ಯಾದಾನ ಮತ್ತು ಜನಗಳ ಉಪಯೋಗಕ್ಕೆ ನಿತ್ಯಗಟ್ಟಲೆ ಅವಶ್ಯವೆನಿಸಿರುವ ಹತ್ತಿಪ್ಪತ್ತು ಬಗೆಯ ಸಾಮಾನುಗಳನ್ನು ಒದಗಿಸುವುದು, ಮುಂತಾದ ಎಷ್ಟೋ ಕಾರ್ಯಗಳಿವೆ ಇನ್ನರ್ಧ ಶತಮಾನ ಪರ್ಯಂತ ಭಾರತದ ಕೋಟ್ಯಂತರ ಜನಗಳು ಕೆಲಸಮಾಡಿದರೂ ಸಹ ತೀರಿಹೋಗದಂಥ ಅನುಕೂಲಗಳು ಈಗಲೂ ನಮಗೆ ಇವೆ. ಆದರೆ ಕೆಲಸಮಾಡುವುದು ಸಮಾಜದ ಅಭಿವೃದ್ಧಿಗಾಗಿ ಮತ್ತು ಸರ್ವಕ್ಷೇಮಕ್ಕಾಗಿ ವ್ಯಕ್ತಿಯ ಲಾಭಕ್ಕಲ್ಲ, ಎಂಬ ಭಾವವು ಎಲ್ಲರಿಗೂ ಬಂದರೆ ಮಾತ್ರ ಸಾಧ್ಯ ರಷ್ಯಾ ದೇಶದ ಸೋವಿಯಟ್ ಸರಕಾರದಲ್ಲಿ ದೋಷಗಳು ಇನ್ನೇನೇ ಇರಲಿ, ಆ ದೇಶದಲ್ಲಿ ನಿರುದ್ಯೋಗಿಗಳಿಲ್ಲ ಎಂಬುದೊಂದು ದೊಡ್ಡ ಗುಣ ನಮ್ಮವರೆಲ್ಲರೂ ಕೆಲಸವಿಲ್ಲದೇ ಸೋಮಾರಿಗಳಾಗಿಲ್ಲ ಆದರೆ ಕೆಲಸಕ್ಕೂ ಮತ್ತು ಅವರ ಸಾಂಸ್ಕೃತಿಕ ಪ್ರಗತಿಗೂ ಅನುಕೂಲವಿಲ್ಲದ ಸೋಮಾರಿಗಳಾಗಿದ್ದಾರೆ ಬಾಲಕರನ್ನು ಕೂಲಿಗಿಟ್ಟುಕೊಳ್ಳುವ ಪದ್ಧತಿಯನ್ನು ತಪ್ಪಿಸಿ, ನಿಯತವಾದ ಒಂದು ವಯಸ್ಸಿನವರೆಗೆ ಬಲಾತ್ಕಾರ ವಿದ್ಯಾಭ್ಯಾಸಕ್ಕೆ ಏರ್ಪಾಡು ಮಾಡಿಕೊಟ್ಟರೆ, ಕೂಲಿಕಾರ ಗುಂಪಿನಿಂದ ಅಥವಾ ನಿರುದ್ಯೋಗ ಸೈನ್ಯದಿಂದ ಬಾಲಕ ಬಾಲಕಿಯರನ್ನು ಬೇರೆಮಾಡಬಹುದು ಮತ್ತು ಮುಂದೆ ಬೆಳೆದು ಸೇರಬಹುದಾದ ಲಕ್ಷಾಂತರ ಕೂಲಿಕಾರರ ಗುಂಪನ್ನು ತಗ್ಗಿಸಿದಂತಾಗುತ್ತದೆ

ಗಾಂಧಿಜಿಯವರು ಪ್ರಯತ್ನಪಟ್ಟು ಚರಕವನ್ನು ಮತ್ತು ತಕಲಿಯನ್ನು ಉತ್ತಮಗೊಳಿಸಿ ಅವುಗಳ ಉತ್ಪತ್ತಿ ಶಕ್ತಿಯನ್ನು ಹೆಚ್ಚಿಸುವುದರಲ್ಲಿ ಕೂಡ ಸ್ವಲ್ಪಮಟ್ಟಿಗೆ ಗೆದ್ದಿದ್ದಾರೆ ಎಂದರೆ ಉಪಕರಣವನ್ನೂ ಮತ್ತು ಯಂತ್ರವನ್ನೂ ಸಹ ಉತ್ತಮಗೊಳಿಸಿದಂತಾಯಿತು ಈ ಸಂಸ್ಕಾರವು ಮುಂದುವರಿದರ (ವಿದ್ಯುತ್ ಶಕ್ತಿಯಿಂದ ಗುಡಿಸಲುಗಳಲ್ಲಿಯೂ ಸಹ ಕೈಗಾರಿಕೆಗಳನ್ನು ನಡೆಯಿಸಬಹುದು) ಲಾಭದ ಲೋಭವು ಮತ್ತೆ ಎದ್ದು ನಿಂತು ಅತಿ ಉತ್ಪತ್ತಿ ಮತ್ತು ನಿರುದ್ಯೋಗ ಎಂಬಿವೆರಡಕ್ಕೂ ಆಕರವಾಗುತ್ತದೆ ನಮಗೆ ಈಗಿನ ಜೀವನಕ್ಕೆ ಬೇಕಾದ ಸಾಂಸ್ಕೃತಿಕ ಪದಾರ್ಥಗಳು ಅಥವಾ ಇನ್ನಾವುದೇ ಅತ್ಯಾವಶ್ಯಕವಾದ ಪದಾರ್ಥಗಳನ್ನು ಪಡೆಯಲು ಗ್ರಾಮ ಕೈಗಾರಿಕೆಗಳು ಆಧುನಿಕ ಔದ್ಯೋಗಿಕ ಕೌಶಲ್ಯದ ನೆರವನ್ನು ಪಡೆದಲ್ಲದೆ ಸಾಧ್ಯವೇ ಇಲ್ಲ ಮತ್ತು ಗ್ರಾಮ ಕೈಗಾರಿಕೆಗಳು ಯಂತ್ರದೊಡನೆ ಪೋಟಾಪೋಟಿ ಮಾಡಲಾರವು ನಮ್ಮ ದೇಶದಲ್ಲಿ ಭಾರೀ ಕಾಮಗಾರಿಗಳು ಯಾವುದೂ ನಡೆಯದಂತೆ ಮಾಡುವುದು ಸರಿಯೇ? ಸಾಧ್ಯವೆ? ಅಥವಾ ಯಂತ್ರಗಳನ್ನು ಕಂಡರೆ ತಮಗೇನೂ ದ್ವೇಷವಿಲ್ಲವೆಂದು ಪದೇಪದೇ ಗಾಂಧಿಜಿಯವರೇ ಸ್ವತಃ ಹೇಳಿದ್ದಾರೆ ಹಿಂದೂಸ್ಥಾನದಲ್ಲಿ ಯಂತ್ರಗಳು ಬೇಕಾಗಿಲ್ಲ ಎಂದು ಅವರ ಅಭಿಪ್ರಾಯ ಹಾಗಾದರ

ಮೂಲ ಕೈಗಾರಿಕೆಗಳಾದ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಗಳನ್ನೇ ಆಗಲಿ ಅಥವಾ ಲಘುವಾದ, ಈಗ ಜನ್ಮವೆತ್ತಿರುವ ಇತರ ಕೈಗಾರಿಕೆಗಳನ್ನೇ ಆಗಲಿ ನಿಲ್ಲಿಸಿಬಿಡುವುದು ಸಾಧ್ಯವೇ?

ನಾವು ಹಾಗೆ ಮಾಡುವುದು ಸಾಧ್ಯವೇಯಿಲ್ಲವೆಂಬುದು ವ್ಯಕ್ತವಾಗಿದೆ ರೈಲ್ವೆಗಳೂ ಸೇತುವೆಗಳೂ ಪದಾರ್ಥಗಳನ್ನು ಸಾಗಿಸುವುದಕ್ಕೆ ಸಾಧನಸಂಪತ್ತಿಗಳೂ ಮುಂತಾದವುಗಳು ಮುಂದೆ ಇರಬೇಕಾದರೆ ನಾವೇ ಅವುಗಳನ್ನು ಉತ್ಪತ್ತಿಮಾಡಬೇಕು ಅಥವಾ ಇನ್ನೊಬ್ಬರ ಕೈಕಾಯಬೇಕು ನಮ್ಮ ರಕ್ಷಣೆಗೆ ತಕ್ಕ ಅನುಕೂಲಗಳು ಬೇಕಾದರ ಮೂಲ ಕೈಗಾರಿಕೆಗಳು ಮಾತ್ರವೇ ಅಲ್ಲದೆ ಸಂಘಟಿತವಾದ ಕೌಶಲ್ಯವೂ ವ್ಯವಸ್ಥೆಗಳೂ ಕೂಡ ಇರಬೇಕು ಈಗಿನ ಕಾಲದಲ್ಲಿ ಯಾವ ದೇಶವೇ ಆಗಲಿ ಸ್ವತಂತ್ರವಾಗಿರಬೇಕಾಗಿದ್ದರೂ, ಪರರ ಅತಿಕ್ರಮಣವನ್ನು ತಡೆದುಕೊಳ್ಳಬೇಕಾಗಿದ್ದರೂ ಅದು ಔದ್ಯೋಗಿಕವಾಗಿ ಚೆನ್ನಾಗಿ ಅಭಿವೃದ್ಧಿಯಾಗಿರಬೇಕು ಒಂದು ಮೂಲ ಕೈಗಾರಿಕೆಗೆ ಮತ್ತೊಂದರ ಸಹಾಯಬೇಕು ಅದರ ಬಡಾವಣೆಯಾಗಿ ಇನ್ನೊಂದು ಹೀಗೆ ಕಟ್ಟಕಡೆಗೆ ಯಂತ್ರ ನಿರ್ಮಾಣದ ಕೈಗಾರಿಕೆಯೂ ಬೇಕಾಗಿ ಬರುತ್ತದೆ ಹೀಗೆ ಮೂಲ ಕೈಗಾರಿಕೆಗಳು ನಡೆಯುತ್ತ ಬಂದರೆ ಸಣ್ಣಪುಟ್ಟ ಇತರ ಕೈಗಾರಿಕಗಳು ಹಬ್ಬಲೇ ಬೇಕಾಗಿಬರುವುದು ಈ ಬೆಳವಣಿಗೆಯ ಮಾರ್ಗವನ್ನು ನಿಲ್ಲಿಸುವುದು ಸಾಧ್ಯವಿಲ್ಲ ಏಕೆಂದರೆ ನಮ್ಮ ಆರ್ಥಿಕ ಮತ್ತು ಸಾಂಸ್ಕೃತಿಕ ಪ್ರಗತಿಗಳು ಅದರೊಂದಿಗೆ ಸೇರಿ ಹೋಗಿರುವುದು ಮಾತ್ರವಲ್ಲದೆ, ನಮ್ಮ ಸ್ವಾತಂತ್ರ್ಯಕ್ಕೂ ಸಹಾ ಅದೇ ಆಧಾರವಾಗಿದೆ ಭಾರಿ ಭಾರಿ ಕೈಗಾರಿಕೆಗಳು ಹೆಚ್ಚುತ್ತ ಹೋದಂತಲ್ಲ ಸಣ್ಣ ಗ್ರಾಮಕೈಗಾರಿಕೆಗಳ ಪೋಟಾಪೋಟಿಯು ಕಡಿಮೆಯಾಗುವುದು ಸಮತಾವಾದವು ಪ್ರಧಾನವಾದಲ್ಲಿ ಮಾತ್ರ ಅವುಗಳು ಬದುಕಲು ಒಂದು ಮಾರ್ಗವುಂಟು ಆದರೆ ಬಂಡವಾಳಶಾಹಿಯಲ್ಲಿ ಮಾತ್ರ ಅವು ಬದುಕುವುದು ಸಾಧ್ಯವೇ ಇಲ್ಲ ಆಗಲೂ ಹಳ್ಳಿಯ ಗುಡಿಸಲು ಕೈಗಾರಿಕೆಗಳು—ಲಕ್ಷಗಟ್ಟಲೆ ತಯಾರಾಗದ ಬೇರ ಯಾವುದಾದರೂ ಪದಾರ್ಥಗಳನ್ನು ತಯಾರುಮಾಡಿಕೊಂಡು ಬದುಕಿರಬೇಕಾಗುವುದು

ಕೆಲವು ಕಾಂಗ್ರೆಸ್ ನಾಯಕರುಗಳಿಗೆ ದೇಶದಲ್ಲಿ ಔದ್ಯೋಗಿಕ ಸಂಸ್ಥೆಗಳು ಬೆಳೆದರೆ ಹೇಗೆ, ಎಂದು ಅಂಜಿಕೆ, ಮತ್ತು ಈಗಿನ ಔದ್ಯೋಗಿಕ ದೇಶಗಳಲ್ಲಿ ಇರುವ ಆಧುನಿಕ ತೊಂದರೆಗಳೆಲ್ಲಾ ಲಕ್ಷಗಟ್ಟಲೆ ಪದಾರ್ಥ ಸೃಷ್ಟಿಯಾಗುವುದರಿಂದಲೇ ಎಂದು ಅವರ ಅನುಮಾನ ಇದು ಸದ್ಯಸ್ಥಿತಿಯನ್ನು ತಪ್ಪಾಗಿ ತಿಳಿದಿರುವುದರ ಫಲ * ಜನತೆಯು ಯಾವುದಾದರೂ ಒಂದು ಪದಾರ್ಥವಿಲ್ಲದೆ

---

* ಸರ್ದಾರ್ ವಲ್ಲಭಭಾಯಿ ಪಟೇಲ್‌ರವರು ಜನವರಿ ೩, ೧೯೪೫ ರಲ್ಲಿ ಅಹಮದಾಬಾದಿನಲ್ಲಿ ಹೀಗೆ ಹೇಳಿದ್ದಾರೆ "ಗ್ರಾಮಕೈಗಾರಿಕೆಗಳನ್ನು ಬೆಳೆಸುವುದೇ ನಿಜವಾದ ಸಮತಾವಾದ ಅಖಂಡ ಸೃಷ್ಟಿಯಿಂದ ಪಾಶ್ಚಾತ್ಯ ದೇಶಗಳಲ್ಲಿ ಕಾಣುವ ಅವ್ಯವಸ್ಥೆಯನ್ನು ನಮ್ಮ ದೇಶದಲ್ಲಿಯೂ ಸಹ ನೆಲೆಗೊಳಿಸಬೇಕಾಗಿಲ್ಲ"

ತೊಂದರೆ ಪಡುತ್ತಿದ್ದರೆ ಅದನ್ನು ಅಪಾರವಾಗಿ ನಿರ್ಮಾಣ ಮಾಡುವುದೂ ಕೂಡ ಒಂದು ತಪ್ಪೇ? ಅಖಂಡ ನಿರ್ಮಾಣದಿಂದ ಅವರಿಗೆ ಬೇಕಾದ್ದನ್ನು ಒದಗಿಸೋಣವೆ ಅಥವಾ ಅವರನ್ನು ರಿಕ್ತಾವಸ್ಥೆಯಲ್ಲಿಯೇ ಇಡೋಣವೆ? ಪರಿಶೀಲಿಸಿ ನೋಡಿದರೆ ತಪ್ಪು ಇರುವುದು ಪದಾರ್ಥಗಳನ್ನು ಅಪಾರವಾಗಿ ತಯಾರಿಸುವುದರಲ್ಲಿ ಅಲ್ಲ ಅವನ್ನು ಹಂಚುವ ವ್ಯವಸ್ಥೆಯು ಚೆನ್ನಾಗಿ ಇಲ್ಲದೇ ಇರುವುದರಿಂದ ಮತ್ತು ತಪ್ಪು ತಪ್ಪಾಗಿರುವುದರಿಂದ.

ಇನ್ನೊಂದು ತೊಂದರೆಯಿದೆ ಗ್ರಾಮ ಕೈಗಾರಿಕೆಗಳ ಅಭಿವೃದ್ಧಿಯನ್ನು ಬಯಸುವವರು ನಮ್ಮ ವ್ಯವಸಾಯ ಸ್ಥಿತಿಯು ಪ್ರಪಂಚದ ಸಂತೆಯನ್ನು ಅವಲಂಬಿಸಿದೆಯೆಂಬುದನ್ನು ಮರೆಯಬಾರದು ರೈತನು ಬೆಲೆಯಾಗುವ ಪದಾರ್ಥಗಳನ್ನು ಬೆಳೆದು ಪ್ರಪಂಚದ ಕ್ರಯ ವಿಕ್ರಯಗಳ ಬೆಲೆಗಳನ್ನು ಎದುರು ನೋಡುತ್ತಿರಬೇಕು ಹಾಗೂ ಈ ಬೆಲೆಗಳು ಬದಲಾಯಿಸುತ್ತ ಇರುವಾಗ ಈತನು ತನ್ನ ಭೂಮಿಯ ಬಾಡಿಗೆಯನ್ನೋ ಅಥವಾ ಕಂದಾಯವನ್ನೋ ಗಟ್ಟಿ ಹಣದಲ್ಲಿ ಕೊಡಬೇಕು ಈ ಹಣವನ್ನು ಹೇಗಾದರೂ ಸಂಪಾದಿಸಬೇಕು ಅಥವಾ ಸರ್ವ ಪ್ರಯತ್ನಮಾಡಿ ಆ ಹಣವನ್ನು ಕೂಡಿಸಿಬಿಡುತ್ತಾನೆ ಆದರಿಂದ ಆತನು ಹೆಚ್ಚಿನ ಬೆಲೆ ದೊರೆಯುವಂತಹ ಬೆಳೆಗಳನ್ನೇ ಬೆಳೆಯುವನು ತನ್ನ ಸಂಸಾರದ ಅನುಕೂಲಕ್ಕೆ ಬೇಕಾಗುವಂತಹ ಆಹಾರ ಪದಾರ್ಥಗಳನ್ನು ಕೂಡ ಆತನು ಬೆಳೆಯಲು ಸಾಧ್ಯವಿಲ್ಲ

ಈಚೆಗೆ ಕೆಲವು ವರ್ಷಗಳಲ್ಲಿ ಅನೇಕ ಆಹಾರ ಪದಾರ್ಥಗಳ ಬೆಲೆಯಿಳಿದಿದ್ದರಿಂದ ಲಕ್ಷಾಂತರ ರೈತರುಗಳು ಸ ವಾ ಮತ್ತು ಬಿಹಾರಗಳಲ್ಲಿ ಕಬ್ಬು ಬೆಳೆಯಲು ಪ್ರಾರಂಭಿಸಿದರು ಹಾಗೂ ಸಕ್ಕರೆಯ ಮೇಲೆ ಸುಂಕವನ್ನೂ ಹಾಕಿದ್ದರ ಫಲವಾಗಿ ಸಕ್ಕರೆ ಗಿರಣಿಗಳು ನಾಯಿ ಕೊಡೆಗಳಂತೆ ಹುಟ್ಟಿಕೊಂಡವು ಅಂತೂ ಕಬ್ಬಿಗೆ ಬೆಲೆ ಬಂತು ಕಬ್ಬಿನ ಬೆಳೆಯು ಬಹಳ ಬಹಳವಾಗಲು, ಗಿರಣಿಗಳ ಮಾಲೀಕರು ರೈತರನ್ನು ಸುಲಿಗೆ ಮಾಡಿದರು ಕಟ್ಟ ಕಡೆಗೆ ಕಬ್ಬಿನ ಬೆಲೆಯು ಬಿದ್ದೇ ಹೋಯಿತು

ಇದೇ ಕೆಲವು ಆಲೋಚನೆಗಳಿಂದ ಮತ್ತು ಇನ್ನೂ ಇತರ ವಿಚಾರಗಳಿಂದ ನನಗೆ ತೋರುವುದೇನೆಂದರೆ—ಇಂಥಾ ಕ್ಷುದ್ರ ಮನಸ್ಸಿನ ಐಶ್ವರ್ಯವಂತರ ಕಡೆಯಿಂದ ನಮ್ಮ ವ್ಯವಸಾಯ ಮತ್ತು ಕೈಗಾರಿಕೆ ಸಮಸ್ಯೆಗಳ ತೀರ್ಮಾನಗಳು ಸಾಧ್ಯವಾಗುವುದೂ ಇಲ್ಲ, ಸಾಧ್ಯವಾಗಬೇಕಾದ್ದೂ ಇಲ್ಲ ನಿಶ್ಚಯವಾಗಿಯೂ ಅವುಗಳಿಂದ ನಮ್ಮ ರಾಷ್ಟ್ರೀಯ ಜೀವನದ ಪ್ರತಿಯೊಂದು ಭಾಗವೂ ಕೆಡುತ್ತಲಿದೆ ಅಸ್ಪಷ್ಟವಾದ ಮತ್ತು ಭಾವೋದ್ರೇಕದಿಂದಕೂಡಿದ ಕೆಲವು ಮಾತುಗಳನ್ನಾಡಿ ತಟಸ್ಥರಾಗುವುದು ಒಳ್ಳೆಯದಲ್ಲ ನಾವು ವಸ್ತುಸ್ಥಿತಿಯನ್ನು ಅರಿತುಕೊಂಡು ನಮ್ಮ ಜೀವನವನ್ನು ಅವಕ್ಕೆ ಅಳವಡಿಸಿಕೊಂಡು ಇತಿಹಾಸದಲ್ಲಿ ಕಾರಣಪುರುಷರಾಗಬೇಕೇ ವಿನಾ ನಿಸ್ಸಹಾಯ ಮೂರ್ತಿಗಳಾಗಿ ಕುಳಿತಿರಬಾರದು.

ಪುನಃ ನನಗೆ ಗಾಂಧಿಜಿ * ಎಂಬ ವಿರೋಧಾಭಾಸವು ನೆನಪಿಗೆ ಬರುತ್ತದೆ. ಇಂಥ ಅಭಿಪ್ರಾಯಗಳನ್ನುಳ್ಳವರಾಗಿ ಪತಿತರ ಉದ್ಧಾರವೇ ಒಂದು ವ್ರತವೆಂದು ಭಾವಿಸಿದ ಕುಶಾಗ್ರ ಬುದ್ಧಿಯಾದ ಇವರು, ತಾನು ಜೀರ್ಣವಾಗಿ, ದುಃಖವನ್ನು ಹೆಚ್ಚಿಸಿ ಸರ್ವವನ್ನೂ ಹಾಳು ಹಾಳು ಮಾಡುತ್ತಿರುವ ವ್ಯವಸ್ಥೆಯನ್ನು ಉಳಿಸಿಕೊಳ್ಳಲು ಬದ್ಧ ಕಂಕಣರಾಗಿರುವರೇಕೆ ? ಅವರೇನೋ ಹೊರಕ್ಕೆ ಮಾರ್ಗವನ್ನು ಹುಡುಕುತ್ತಲಿರುವುದು ನಿಜ. ಆದರೆ ಹಿಂದೆ ತಿರುಗಿ ಗತಯುಗಕ್ಕೆ ಹೋಗುವ ಆ ಬಾಗಿಲುಗಳು ಭದ್ರವಾಗಿ ಮುಚ್ಚಿಹೋಗಿಲ್ಲವೇ ? ಮತ್ತೂ ಹಿಂದಿನ ಸ್ಥಿತಿಯ ಅವಶೇಷಗಳಾಗಿ ಪ್ರಗತಿಗೆ ಅಡ್ಡವಾಗಿರುವಂಥ ಪೋಷಿತ ಸಂಸ್ಥಾನಗಳೂ ದೊಡ್ಡ ಜಮೀನ್ದಾರಿಗಳು, ತಾಲ್ಲೂಕ್‌ದಾರಿಗಳು, ಬಂಡವಾಳಶಾಹಿ, ಮೊದಲಾದವುಗಳನ್ನೂ ಹರಸುವುದೇಕೆ ? ಪೋಷಕತನದಲ್ಲಿ ನಂಬಿಕೆಯಿಟ್ಟು ಒಬ್ಬರಿಬ್ಬರಿಗೆ ನಿರಂಕುಶ ಪ್ರಭುತ್ವವನ್ನೂ ಅಪರಿಮಿತ ಐಶ್ವರ್ಯವನ್ನೂ ಕೊಟ್ಟು ಆ ವ್ಯಕ್ತಿಯು ಅಷ್ಟನ್ನೂ ಸಂಪೂರ್ಣವಾಗಿ ಜನತೆಯ ಉತ್ಕರ್ಷಕ್ಕಾಗಿ ಉಪಯೋಗಿಸುವನು ಎಂದು ನಂಬುವುದು ಯೋಗ್ಯವೇ ? ನಮ್ಮಲ್ಲಿ ಅತಿ ಉತ್ತಮರು ಎನ್ನುವವರೇ ಆಗಲಿ ಆ ರೀತಿ ನಂಬಿಕೆಗೆ ಅರ್ಹರೇ ? ಪ್ಲೇಟೊ ಹೇಳಿರುವ ವೇದಾಂತಿಗಳಾದ ರಾಜರೂ ಕೂಡ ಇಂಥಾದ್ದೊಂದು ಭಾರವನ್ನು ಯೋಗ್ಯ ರೀತಿಯಲ್ಲಿ ವಹಿಸುತ್ತಿರಲಿಲ್ಲ. ಇಂಥ ಮಹಾತ್ಮರಾದ ಸತ್ಪುರುಷರಾದರೂ ಮೇಲಿರುವುದು ಇತರರಿಗೆ ಒಳ್ಳೆಯದೇ ? ಆದರ ಅಂಥಾ ಸತ್ಪುರುಷರಾಗಲೀ ಅಥವಾ ರಾಜರ್ಷಿಗಳಾಗಲೀ ಇಲ್ಲವೇ ಇಲ್ಲ. ಆದರೆ ಈಗಿರುವವರು ಕ್ಷುದ್ರ ಮಾನವರು. ಅವರಾದರೋ ತಮ್ಮ ಸ್ವಂತ ಉನ್ನತಿಯೇ ಪ್ರಜೆಗಳ ಉನ್ನತಿ, ಮತ್ತು ತಮ್ಮ ಅಭಿಪ್ರಾಯಗಳ ಪ್ರಗತಿಯೇ ಪ್ರಜೆಗಳ ಪ್ರಗತಿಯೆಂದು ಭಾವಿಸುವವರು. ಜನ್ಮ, ಪದವಿ, ಆರ್ಥಿಕ ಸಾಮರ್ಥ್ಯಗಳ ಹೆಮ್ಮೆಯು ಶಾಶ್ವತವಾಗಿ ನಿಂತುಬಿಡುವುದು, ಮತ್ತು ಅದರ ಫಲಗಳು ಅನೇಕ ವಿಧದಲ್ಲಿ ವಿನಾಶಕಾರಕಗಳು.

---

* ೧೯೩೧ ರಲ್ಲಿ ಲಂಡನ್ನಿನಲ್ಲಿ ಚಕ್ರ ಗೋಷ್ಠಿಯ ಭಾಷಣಗಳೊಂದರಲ್ಲಿ ಗಾಂಧಿಜಿಯವರು ಹೀಗೆ ಹೇಳಿದ್ದಾರೆ : "ಎಲ್ಲಕ್ಕಿಂತ ಮಿಗಿಲಾಗಿ ತತ್ವತಃ ಕಾಂಗ್ರೆಸ್ಸು ಇಂಡಿಯಾ ದೇಶದ ಉದ್ದ ಅಗಲಗಳಲ್ಲಿ ಹರಡಿ ೭ ಲಕ್ಷ ಹಳ್ಳಿಗಳಲ್ಲಿ ವಾಸಿಸುವ ಕ್ಷುಧಾಪೀಡಿತರಾದ ಕೋಟ್ಯನುಕೋಟಿ ಮೂಕ ಪ್ರಜೆಗಳ ಪ್ರತಿನಿಧಿಯಾಗಿರುತ್ತದೆ. ಆ ಪ್ರಜೆಗಳು ಬ್ರಿಟಿಷ್ ಭಾರತೀಯರಾಗಿರಬಹುದು ಅಥವಾ ಭಾರತೀಯ ಭಾರತೀಯರಾಗಿರಬಹುದು. ಕಾಂಗ್ರೆಸ್ಸಿನ ಅಭಿಪ್ರಾಯದಲ್ಲಿ ಈ ಕೋಟ್ಯಂತರ ಮೂಕ ಪ್ರಜೆಗಳಿಗೆ ಅನುಕೂಲವಾಗುವ ಪ್ರತಿಯೊಂದು ವಿಚಾರವನ್ನೂ ಕಾಂಗ್ರೆಸ್ಸು ಕಾದುಕೊಳ್ಳುವುದು ಅವಶ್ಯಕ. ಆದ್ದರಿಂದ ಆಗಾಗ್ಯೆ ಹೊರ ಮುಖವಾಗಿ ನೋಡುವಂಥ ನಿಮಗೆ ಈ ಅನೇಕ ಪಕ್ಷಗಳ ನಡುವೆ ಕಲಹವೆದ್ದಿರುವುದು ಕಂಡುಬರಬಹುದು. ಕಾಂಗ್ರೆಸ್ಸಿನ ಪರವಾಗಿ ನಿಸ್ಸಂಶಯವಾಗಿ ನಾನು ಇಷ್ಟು ಹೇಳಬಲ್ಲೆ. ನಿಜವಾದ ಅಡ್ಡಿ ಅಡಚಣೆಗಳು ಕಲಹ ರೂಪವಾಗಿ ಸಂಭವಿಸಿದ್ದೇ ಆದರೆ ಈ ಕೋಟ್ಯನುಕೋಟಿ ಮೂಕ ಪ್ರಜೆಗಳ ಸಲುವಾಗಿ ಕಾಂಗ್ರೆಸ್ಸು ಎಂಥಾ ಬಲಿದಾನವನ್ನಾದರೂ ಮಾಡಬಲ್ಲದು."

ಬದಲಾವಣೆಯನ್ನು ಯಾವ ರೀತಿಯಲ್ಲಿ ತರಬಹುದು, ದಾರಿಯಲ್ಲಿರುವ ಆಘಾತಗಳನ್ನು ಬಲಾತ್ಕಾರದಿಂದಲೋ, ಬದಲಾವಣೆಯಿಂದಲೋ ಹಿಂಸೆಯಿಂದಲೋ ಅಹಿಂಸೆಯಿಂದಲೋ ಹೇಗೆ ನಿವಾರಿಸಬಹುದು, ಎಂಬ ವಿಚಾರವನ್ನೂ ಸಹ ನಾನು ಹೇಳುತ್ತಿಲ್ಲ ಎಂದು ಇನ್ನೂ ಒಮ್ಮೆ ಹೇಳುತ್ತೇನೆ ಈ ವಿಚಾರವನ್ನು ಮತ್ತೊಮ್ಮೆ ನೋಡೋಣ ಬದಲಾವಣೆಗೆ ಅವಶ್ಯಕತೆ ಇದೆಯೆಂಬುದನ್ನೂ ಮಾತ್ರ ಖಂಡಿತವಾಗಿ ಒಪ್ಪಿಕೊಂಡು ಸ್ಪಷ್ಟವಾಗಿ ಹೇಳಲೂ ಬೇಕ ನಾಯಕರು ಮತ್ತು ಭಾವುಕರು ನಿಷ್ಕಲ್ಮಷ ರೀತಿಯಲ್ಲಿ ಇದರೆದುರು ನಿಂತು ವಿವರಿಸದಿದ್ದರೆ ಇತರರನ್ನು ತಮ್ಮ ಭಾವನೆಗೆ ತಿರುಗಿಸಿಕೊಳ್ಳುವುದಾಗಲೀ ಅಥವಾ ಜನಗಳಲ್ಲಿ ಇದಕ್ಕಾವಶ್ಯಕವಾದ ಕಲ್ಪನ ವಿಜ್ಞಾನವು ಉದಯಿಸುವಂತಾಗಲೀ ಮಾಡುವುದು ಎಂದಾದರೂ ಸಾಧ್ಯವೇ? ಆಯಾ ಘಟನೆಗಳೇ ಬಂದು ಬೇಕಾದುದನ್ನು ಕಲಿಸಿಕೊಡುವುವು ಎಂಬುದು ನಿಜ ಆದರೆ ಆಯಾ ಘಟನೆಗಳನ್ನು ಸರಿಯಾಗಿ ತಿಳಿದುಕೊಂಡು ಅವುಗಳಿಂದ ಕ್ರಮವಾದ ಫಲವನ್ನು ಪಡೆಯಬೇಕಾದರೆ, ಅವುಗಳ ಅರ್ಥವನ್ನು ಸರಿಯಾಗಿ ತಿಳಿದುಕೊಂಡು ಅವನ್ನು ಸರಿಯಾಗಿ ವಿವರಿಸಬೇಕು

ನನ್ನ ಸ್ನೇಹಿತರೂ ಮತ್ತು ನನ್ನ ಸಹಚರಿಗಳೂ ನನ್ನ ಮಾತುಗಳಿಂದ ನೊಂದು ಆಗಾಗ್ಗೆ ಮುನಿದು ಹೀಗೆ ಕೇಳಿದ್ದಾರ ಒಳ್ಳೆಯವರೂ ಉಪಕಾರಿಗಳೂ ಆದ ರಾಜರು, ದಾನಶೀಲರಾದ ಜಮೀನುದಾರರು, ಮತ್ತು ಯೋಗ್ಯರೂ ಸ್ನೇಹಪರರೂ ಆದ ಐಶ್ವರ್ಯವಂತರು ಇವರನ್ನು ನೀವು ಕಂಡಿಲ್ಲವೇ? ಹೌದು ನಾನು ಅಂತಹವರನ್ನು ನಿಶ್ಚಯವಾಗಿಯೂ ಕಂಡಿದ್ದೇನ ಇಂಥಾ ಭೂಪತಿಗಳನ್ನೂ ಶ್ರೀಪತಿಗಳನ್ನೂ ನಿತ್ಯ ಕಂಡು ಅವರೊಡನೆ ಬೆರೆತು ಒಡನಾಡುವ ಸಂಗಡಕ್ಕೆ ಸೇರಿದವನೇ ನಾನು ನಾನೂ ಸಹ ನಾಗರಿಕರ ಗುಂಪಿಗೇ ಸೇರಿದವನು ನಾನು ಬೆಳೆದುದೂ ಸಹ ನಾಗರಿಕ ವಾತಾವರಣದಲ್ಲಿಯೇ! ಈ ಜಾತಿಯ ಬೆಳವಣಿಗೆಯಿಂದ ನನ್ನ ಮನಸ್ಸಿನಲ್ಲಿಯೂ ಅನೇಕ ದುರ್ಭಾವನೆಗಳು ಬಂದಿದ್ದುವು ಕಮ್ಯೂನಿಸ್ಟರು ನನ್ನನ್ನು ಕ್ಷುಲ್ಲಕ ನಾಗರಿಕನೆಂದು ಕರೆದಿದ್ದಾರೆ ಅವರು ಹಾಗೆಂದುದು ನ್ಯಾಯವೇ ಸರಿ 'ಪಶ್ಚಾತ್ತಾಪ ಪಡುವ ನಾಗರಿಕ'ನೆಂದು ನನ್ನನ್ನು ಅವರು ಈಗ ಕರೆಯಬಹುದು ಆದರೆ ನಾನೇನೆ ಆಗಿರಲಿ ಅದು ಈ ಸಂದರ್ಭಕ್ಕೆ ಬೇಕಾಗಿಲ್ಲ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ, ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನೂ ಒಬ್ಬೊಬ್ಬ ವ್ಯಕ್ತಿಯನ್ನೂ ಎದುರಿಟ್ಟುಕೊಂಡು ಚಿಂತಿಸುವುದು ಯೋಗ್ಯವಲ್ಲ ನನ್ನನ್ನು ಹೀಗೆ ಪ್ರಶ್ನೆ ಮಾಡುವ ಸ್ನೇಹಿತರೇ ಬೇಸರವಿಲ್ಲದೆ,—"ನಾವು ಕಾದಾಡುವುದು ಪಾಪದೊಂದಿಗೆ, ಪಾಪಿಯೊಂದಿಗಲ್ಲ" ಎಂದು ಹೇಳುತ್ತಲೇ ಇರುತ್ತಾರ ನಾನಾದರ ಅಷ್ಟು ದೂರವೂ ಹೋಗದೆ "ವ್ಯಕ್ತಿಗಳ ಸಂಗಡ ಅಲ್ಲ ನನ್ನ ಯುದ್ಧ, ವ್ಯವಸ್ಥೆಗಳ ಸಂಗಡ ಮಾತ್ರ" ಎಂದು ಹೇಳುತ್ತೇನೆ ಒಂದು ವ್ಯವಸ್ಥೆಯೆಂದರೆ ವ್ಯಕ್ತಿಗಳನ್ನೂ ಗುಂಪುಗಳನ್ನೂ ಒಳಗೊಂಡಿರುತ್ತದೆ ನಿಜ. ಮತ್ತು ಇಂಥಾ ವ್ಯಕ್ತಿಗಳನ್ನು ಮತ್ತು ಗುಂಪುಗಳನ್ನು ನಮ್ಮ

ಕಡೆಗೆ ತಿರುಗಿಸಿಕೊಳ್ಳಬೇಕು ಅಥವಾ ಅವರೊಡನೆ ಹೋರಾಡಬೇಕು ಆದರೆ ಒಂದು ವ್ಯವಸ್ಥೆಯು ನಿಷ್ಫಲವಾಗಿ ಭಾರವಾಗಿಹೋದರೆ ಅದನ್ನು ಇಟ್ಟುಕೊಂಡಿರಬಾರದು, ತೊಲಗಿಸಿಬಿಡಬೇಕು ಮತ್ತು ಆ ಸಂಸ್ಥೆಯನ್ನು ಆಶ್ರಯಿಸಿರುವ ಜಾತಿಗಳಾಗಲೀ ಅಥವಾ ಗುಂಪುಗಳಾಗಲೀ ಸಂದರ್ಭಕ್ಕನುಸಾರವಾಗಿ ಬದಲಾಯಿಸಲೇಬೇಕು ಈ ಬದಲಾವಣೆಯ ರೀತಿಯು ಸಾಧ್ಯವಾದಷ್ಟು ಸಂಕಟರಹಿತವಾಗಿ ಇರಬೇಕು ಆದರೆ ಸಂಕಟವೂ ಮತ್ತು ಸ್ಥಾನಭ್ರಷ್ಟತೆಯೂ ಅನಿವಾರ್ಯ ಆದರೆ ನಿವಾರಿಸಲು ನಮಗೆ ಸಾಧ್ಯವಿಲ್ಲವೆಂಬ ಮಾತ್ರಕ್ಕೆ ಸಣ್ಣ ಪಿಶಾಚಿಗೆ ಹೆದರಿ ದೊಡ್ಡ ಭೂತಕ್ಕೆಡೆ ಗೊಡುವುದು ಒಳ್ಳೆಯದಲ್ಲ

ಮಾನವ ವರ್ಗಕ್ಕೆ ಸಂಬಂಧಪಟ್ಟ ಪ್ರತಿಯೊಂದು ಸಂಘವೂ ರಾಜಕೀಯ ವಾಗಲಿ ಅಥವಾ ಆರ್ಥಿಕವಾಗಲಿ ಅದರ ಹಿಂದೆ ಒಂದು ತತ್ವ ವಿಚಾರವಿದ್ದೇ ಇರುವುದು ಈ ಸಂಘಗಳು ಬದಲಾಯಿಸಿದರೆ ಈ ತತ್ವ ವಿಚಾರದ ತಳಹದಿಯು ಬದಲಾಗಿ, ಹೊಸದರೊಡನೆ ಹೊಂದಿಕೊಳ್ಳಬೇಕು ಇಲ್ಲದಿದ್ದರೆ ಆ ಸಂಘದಿಂದ ಪೂರ್ಣ ಪ್ರಯೋಜನವಾಗುವುದಿಲ್ಲ ಆದರೆ ಸಾಧಾರಣವಾಗಿ ಹೊಸ ಘಟನೆಗಳ ಪ್ರವಾಹದಲ್ಲಿ ಮೂಲ ವೇದಾಂತವು ಹಿಂದೆ ನಿಂತು ಎಲ್ಲ ಕಷ್ಟಗಳಿಗೂ ಕಾರಣ ವಾಗುತ್ತದ ೧೯ ನೆಯ ಶತಮಾನದಲ್ಲಿ ಪ್ರಜಾಸತ್ತಾತ್ಮಕ ಪ್ರಭುತ್ವವೂ ಮತ್ತು ಬಂಡವಾಳಶಾಹಿಯೂ ಒಟ್ಟಿಗೇ ಬೆಳೆದುವು ಆದರೆ ಅವು ಒಂದಕ್ಕೊಂದು ಹೊಂದು ವಂಥವಲ್ಲ ಆವೆರಡಕ್ಕೂ ಮೂಲದಲ್ಲಿಯೇ ವಿರೋಧ ಏಕೆಂದರೆ ಪ್ರಜಾಸತ್ತೆಯು, ಶಕ್ತಿಯು ಹಲವರದು ಎಂಬ ತತ್ವದ ಮೇಲೆ ನಿಂತಿದ್ದರೆ, ಬಂಡವಾಳಶಾಹಿಯು ಕೆಲವರಿಗೇ ನಿಜವಾದ ಶಕ್ತಿಯನ್ನು ಕೊಟ್ಟಿದೆ ಈ ವಿಷಮಯುಗ್ಮವು ಹೇಗೋ ಬೆಳೆಯಿತು ಆಗ ರಾಜಕೀಯ ಪಾರ್ಲಿಮೆಂಟರಿ ಪ್ರಜಾಸತ್ತೆಯು ಅಪೂರ್ಣ ಪ್ರಜಾ ಸತ್ತೆಯಾದ್ದರಿಂದ, ಈ ವ್ಯಕ್ತಿಯ ಬೆಳವಣಿಗೆ ಮತ್ತು ಶಕ್ತಿ ಸಂಚಯದ ಪ್ರತಿಯಾಗಿ ನಿಲ್ಲಲಿಲ್ಲ

ಪ್ರಜಾಸತ್ತೆಯ ಭಾವನೆಯು ಬೆಳೆದು ಬಂದಂತೆಲ್ಲ ಅದೂ ಬಂಡವಾಳ ಶಾಹಿಯೂ ಬೇರೆಯಾಗಲೇ ಬೇಕಾಗಿ ಬಂತು ಇದು ಅವು ಬೇರೆಯಾಗುವ ಸಮಯ ಪಾರ್ಲಿಮೆಂಟರಿ ಪ್ರಜಾಸತ್ತೆಗೆ ಇಂದು ಬೆಲೆಯಿಲ್ಲ ಅದಕ್ಕೆ ಅಪಕೀರ್ತಿ ಬಂದಿದೆ ಆ ಅಪಕೀರ್ತಿಯ ಫಲವಾಗಿ ಏನೇನೋ ಪಲ್ಲವಿಗಳು ಗಾಳಿಯಲ್ಲಿ ಹಾರಾಡುತ್ತಿವೆ ಅದಕ್ಕೋಸ್ಕರವಾಗಿಯೇ ಭಾರತದಲ್ಲಿ ಬ್ರಿಟಿಷ್ ಸರಕಾರವು ಇನ್ನೂ ಹೆಚ್ಚಾಗಿ ಪ್ರಗತಿ ವಿರೋಧವಾಗಿ ರಾಜಕೀಯ ಸ್ವಾತಂತ್ರ್ಯದ ಹೊರಸಿಪ್ಪೆಯನ್ನೂ ನಮಗೆ ಕೊಡದೆ ಇರುವುದು ಭಾರತದ ರಾಜರೂ ಸಹಾ ವಿಚಿತ್ರರೀತಿಯಿಂದ ತಮ್ಮ ನಿರಂಕುಶ ಪ್ರಭು ತ್ವವೇ ನ್ಯಾಯವೆಂದು ಹೇಳಿಕೊಂಡು, ತಮ್ಮತಮ್ಮ ರಾಜ್ಯದಲ್ಲಿ ಹಿಂದಿನ ಯುಗದ ಸಂದರ್ಭಗಳನ್ನೇ, ಪ್ರಪಂಚದಲ್ಲಿ ಇನ್ನೆಲ್ಲಿಯೂ ಅವು ಇಲ್ಲದಿದ್ದರೂ ಸಹ, ಪಾಲಿಸಿ

ಕೊಂಡು ಬರುತ್ತಿದ್ದಾರೆ* ಆದರೆ ಪಾರ್ಲಿಮೆಂಟರಿ ಪ್ರಜಾಸತ್ತೆಯು ಸೋತುದು ಅದು ಬಹಳ ಮುಂದೆ ಹೋಯಿತೆಂದಲ್ಲ, ಅದು ಸಾಕಾದಷ್ಟು ದೂರ ಹೋಗಲಿಲ್ಲವೆಂದು ಸೋತಿತು ಅದು ಆರ್ಥಿಕ ಪ್ರಜಾಸತ್ತೆಯನ್ನು ಕುರಿತು ಚಿಂತಿಸುವಷ್ಟು ಪ್ರಜಾಸತ್ತೆಯಾಗಿರಲಿಲ್ಲವಾಗಿ, ಅದರ ಗಮನವು ಬಹು ಮಂದವಾಗಿ ಭಾರವಾಗಿ, ತಟ್ಟನೆ ತಟ್ಟನೆ ಆಗುತ್ತಿದ್ದ ಬದಲಾವಣೆಗಳ ಕಾಲಕ್ಕೆ ಅದು ಸರಿಹೋಗಲಿಲ್ಲ

ದೇಶೀಯ ಸಂಸ್ಥಾನಗಳು ಪ್ರಪಂಚದಲ್ಲಿರುವ ನಿರಂಕುಶ ಪ್ರಭುತ್ವಗಳಲ್ಲಿ ಬಹಳ ಮುಂದುವರಿದುವು. ಅವು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಅಂಕಿತವಾಗಿವೆ ನಿಜ, ಆದರ ಬ್ರಿಟಿಷ್ ಸರಕಾರವು ಬ್ರಿಟಿಷ್ ಹಕ್ಕುಬಾಧ್ಯತೆಗಳ ರಕ್ಷಣೆ, ಅಭಿವೃದ್ಧಿ ಇವೆರಡು ವಿಚಾರದಲ್ಲಿ ಮಾತ್ರ ಕೈಹಾಕುತ್ತದೆ ಪೂರ್ವಯುಗದ ಭಾವಗಳನ್ನಪ್ಪಿಕೊಂಡ ಈ ಅಧಿರಾಜರುಗಳು ಸ್ವಲ್ಪವೂ ಬದಲಾಯಿಸದೆ ೨೦ ನೆಯ ಶತಮಾನದ ಮಧ್ಯದಲ್ಲೂ ಬದುಕಿಬಂದಿರುವುದೇ ಒಂದು ಆಶ್ಚರ್ಯ ಅಲ್ಲಿ ವಾತಾವರಣವೂ ಭಾರೈಸಿ ಮೃತವಾಗಿ ಹೋಗಿದೆ ಮತ್ತು ಅಲ್ಲಿ ನೀರು ಕೂಡ ನಿಧಾನವಾಗಿ ಹರಿಯುತ್ತದೆ ಮತ್ತು ಬದಲಾವಣೆಗೂ ಚಲನವಲನಕ್ಕೂ ಪಕ್ಕಾದ ಹೊರಗಿನಿಂದ ಬಂದ ಹೊಸಬನು ಆಯಾಸಗೊಂಡು ಕೊಂಚ ತೂಕಡಿಸುತ್ತಾನೆ ಕೂಡಲೇ ಅವನ ಮೇಲೆ ಸೂಕ್ಷ್ಮ ಸಂಪೂಂದು ತನ್ನ ಪ್ರಭಾವವನ್ನು ಬೀರುತ್ತದೆ ನೋಡಿದುದಲ್ಲ ಅನಿಶ್ಚಿತವಾಗಿ ಒಂದು ಚಿತ್ರದಂತೆ ಕಾಣು

---

* ನರೇಂದ್ರ ಮಂಡಲದ ಅಧ್ಯಕ್ಷರಾದ ಪಾಟಿಯಾಲಾ ಮಹಾರಾಜರು ದೆಹಲಿಯಲ್ಲಿ ೧೯೩೫ ನೆಯ ಇಸವಿ ಜನವರಿ ೨೨ ರಲ್ಲಿ ಸಂದರ್ಭವಶದಿಂದ ಯತ್ನವಿಲ್ಲದೆ ಸಂಸ್ಥಾನಗಳ ರಾಜರುಗಳು ಪ್ರಜಾಸತ್ತಾತ್ಮಕ ಪ್ರಭುತ್ವವನ್ನು ಸ್ಥಾಪಿಸಬಹುದು ಎಂಬ ಆಶೆಯಿಂದ, ಫಡರೇಷನ್ ಆಗಲಿ ಎನ್ನುವ ಭಾರತದ ರಾಜನೀತಿಜ್ಞರ ಅಭಿಪ್ರಾಯವನ್ನು ಕುರಿತು ಹೀಗೆಂದು ಹೇಳಿದರು – 'ಹಿಂದೂಸ್ಥಾನದ ರಾಜರು ತಮ್ಮ ಪ್ರಜೆಗಳಿಗೆ ಹಿತವಾದ ಮಾರ್ಗವನ್ನೇ ಅನುಸರಿಸಲಿಚ್ಛೆಯುಳ್ಳವರು ಮತ್ತು ತಮ್ಮನ್ನೂ ತಮ್ಮ ಸರಕಾರವನ್ನೂ ಕಾಲಕ್ಕನುಗುಣವಾಗಿ ಬದಲಾಯಿಸಿಕೊಳ್ಳುವರು" ಆದರೂ ನಮ್ಮ ಸಿರಿಯ ರಾಜಕೀಯ ಶರೀರದ ಮೇಲೆ ವ್ಯರ್ಥವೆಂದು ಸ್ಪಷ್ಟವಾಗಿರುವ ಯಾವುದೋ ಶುಕ್ರನೀತಿಯ ನೀಸಸ್ ಷರಟನ್ನು ಧರಿಸುವುದಕ್ಕೆ ಬಲಾತ್ಕಾರ ಪಡಿಸಿದರೆ, ಅವರಲ್ಲಿಯೋ ಕನಸಿನ ರಾಜ್ಯದಲ್ಲಿ ವ್ಯವಹರಿಸುತ್ತಿದ್ದಾರೆಂದು ಸ್ಪಷ್ಟವಾಗಿ ನಾವು ಹೇಳಬೇಕಾಗುವುದು (೬೦ ನೆಯ ಅಧ್ಯಾಯದಲ್ಲಿ [ಪು ೭೦೭] ಮೈಸೂರು ದಿವಾನರ ಭಾಷಣವನ್ನು ನೋಡಿ) ಅದೇ ದಿವಸವೇ ನರೇಂದ್ರ ಮಂಡಲದಲ್ಲಿ ಬಿಕನೀರ್ ಮಹಾರಾಜರು ಹೀಗೆ ಹೇಳಿದರು, 'ಹಿಂದೂಸ್ಥಾನದ ಸಂಸ್ಥಾನಗಳ ಅಧಿಪತಿಗಳಾದ ನಾವು ಅದೃಷ್ಟವಶದಿಂದ ಹಠಾತ್ತಾಗಿ ಗಾದಿಗೆ ಬಂದವರಲ್ಲ ಸ್ವಾತಂತ್ರ್ಯವಹಿಸಿ ಹೇಳಬಹುದಾದರೆ ಶತಶತಮಾನಗಳಿಂದ ಆನುವಂಶೀಯವಾಗಿ ಅನುಸರಿಸಿ ಬಂದ ರಾಜಧರ್ಮವನ್ನು ರಕ್ತದಲ್ಲುಳ್ಳವರು ಅದರ ಜೊತೆಯಲ್ಲಿಯೇ ನಮಗೆ ರಾಜನೀತಿ ನೈಪುಣ್ಯವೂ ನಮಗುಂಟು ಮತ್ತು ಅದರಿಂದ ನಾವು ಇಂತಹ ಅವಸರದ ಅವಿಚಾರದಲ್ಲಿ ದುಡುಕಿ ಅವಿವೇಕ ಸಿದ್ಧಾಂತಕ್ಕೆ ಬರದಂತೆ ಬಹಳ ಜಾಗ್ರತೆಯಿಂದಿರಬೇಕು ಅರಸರು ಇತರರು ತಮ್ಮನ್ನು ವಿನಾಶಪಡಿಸಲು ಅವಕಾಶಕೊಡುವುದಿಲ್ಲ ಒಂದುವೇಳೆ ಗ್ರಹಚಾರವಶವಾಗಿ ಚಕ್ರವರ್ತಿಗಳು ಕಾಲಿನ ಪ್ರಕಾರ ನಮ್ಮನ್ನು ಸಂರಕ್ಷಿಸಲಾರದ ಸಂದರ್ಭವು ಒದಗಿದರೆ, ನಾವು ಕೊನೆಯವರೆಗೂ ಹೋರಾಡಿ ಸಾಯುವೆವು"

ತ್ತದೆ ಅಲ್ಲಿ ಕಾಲವೂ ಸಹ ನಿಶ್ಚಲ ಬದಲಾವಣೆಯನ್ನರಿಯದ ಚಿತ್ರವೊಂದು ಕಣ್ಣಿಗೆ ಕಟ್ಟುತ್ತದೆ ತನ್ನೊಳಗೆ ತಾನರಿಯದೆ ಬಲು ಹಿಂದಿನ ಬಾಲ್ಯದ ಕನಸುಗಳ ಕಡೆಗೆ ತೇಲಿಹೋಗುತ್ತಾನೆ ಅಲ್ಲಿ ನಡುಕಟ್ಟು ಕವಚಗಳನ್ನು ಧರಿಸಿದ ವೀರರೂ ಮತ್ತು ಸೌಂದರ್ಯವತಿಯರೂ ಧೈರ್ಯ ಯುಕ್ತರೂ ಆದ ಯುವತಿಯರು ಸುಳಿದಾಡುತ್ತಾರೆ, ಮತ್ತು ಗೋಪುರದರಮನೆಗಳೂ ಸಾಹಸಗಳೂ ಮತ್ತು ಗೌರವ ಮರ್ಯಾದೆಗಳ ವಿಚಿತ್ರಭಾವನೆಗಳೂ ಹಾಗೂ ಅಪ್ರಮೇಯವಾದ ಧೈರ್ಯವೂ ಮೃತ್ಯುವನ್ನು ಕಂಡರೆ ತಿರಸ್ಕಾರವೂ ಎದ್ದು ನಿಲ್ಲುತ್ತವೆ ಸಾಹಸನಿಕೇತನವೂ ನಿಷ್ಫಲವಾಗಿ ಅಸಾಧ್ಯವಾದ ಸಾಹಸಗಳ ನೆಲವೀಡೂ ಆದ ರಜಪುತಾನಕ್ಕೆ ಹೋದರಂತೂ ಇವೆಲ್ಲ ಹೆಚ್ಚು

ಆದರೆ ಈ ಕಣಸುಗಳೆಲ್ಲ ಬಲುಬೇಗ ಅಳಸಿಹೋಗುವುವು ಮನಸ್ಸು ಭಾರವಾಗುವುದು ಕೊರಳು ಹಿಸುಕಿದಂತಾಗಿ ಉಸಿರಾಡುವುದೇ ಕಷ್ಟವಾಗುವುದು ಮತ್ತು ಈ ಪ್ರಶಾಂತ ಮಂದಾಕಿನಿಗಳ ಬುಡದಲ್ಲಿ ನಿಂತು ನಾರುವ ನೀರಿನ ಪರಿಚಯವಾಗುವುದು ಮನಸ್ಸಿಗೆ ಶರೀರಕ್ಕೆ ಬೇಲಿಹಾಕಿ ಕಟ್ಟುಹಾಕಿ ಹಿಡಿತದಲ್ಲಿ ಹಿಡಿದಂತಾಗುವುದು ಹಿಂದೆ ಉಳಿದಿರುವ ಜನಗಳನ್ನೂ ಅವರ ಕಷ್ಟಮಯ ಜೀವನವನ್ನೂ ರಾಜರುಗಳ ಉರಿದೆದ್ದು ಕಾಣುವ ಡಾಂಭಿಕ ಜೀವನವನ್ನೂ ಮಗ್ಗುಲು ಮಗ್ಗುಲಲ್ಲಿ ಕಾಣುವನು ಸಂಸ್ಥಾನಗಳ ಐಶ್ವರ್ಯವು ಅರಸರ ಖರ್ಚಿಗೂ ಭೋಗಮಯ ಜೀವನಕ್ಕೂ ಅರಮನೆಯೊಳಕ್ಕೆ ಹರಿಯುವುದನ್ನೂ ಜನಗಳಿಗೆ ಎಷ್ಟು ಸ್ವಲ್ಪ ಉಳಿಯುತ್ತಿದೆಯೆಂಬುದೂ ಕಾಣುವುದು ಈ ಅರಸರೆಷ್ಟು ಹಣವನ್ನು ತಿಂದುಹಾಕುವರು ! ನಮಗೆ ಅವರಿಂದ ಬರುವ ಪ್ರತಿಫಲವಾದರೂ ಏನು ?

ಗುಟ್ಟೆಂಬ ಪರದೆಯೊಂದು ಈ ಸಂಸ್ಥಾನಗಳನ್ನು ಸುತ್ತಿಕೊಂಡಿದೆ ಸಮಾಚಾರ ಪತ್ರಿಕೆಗಳಿಗೆ ಅಲ್ಲಿ ಉತ್ತೇಜನವಿಲ್ಲ ಹೆಚ್ಚೆಂದರ ಸಾಹಿತ್ಯ ಸಂಬಂಧದ ಅಥವಾ ಅಧಿಕಾರ ಸ್ಥಾನದ ಆಶ್ರಯವನ್ನು ಪಡೆದ ವಾರಪತ್ರಿಕೆಯೊಂದು ಅಲ್ಲಿ ಸುಳಿದಾಡಬಹುದು ಹೊರಗಿನ ವಾರ್ತಾವಾಹಿನಿಗಳು ಅಲ್ಲಿಗೆ ಹೋಗಲು ಅವಕಾಶವಿಲ್ಲ ಜನರಲ್ಲಿ ವಿದ್ಯಾವಂತರು ಅತಿ ವಿರಳ ದಕ್ಷಿಣದ ಸಂಸ್ಥಾನಗಳಾದ ತಿರುವಾಂಕೂರು, ಕೊಚ್ಚಿ ಮೊದಲಾದ ಕೆಲವು ಸಂಸ್ಥಾನಗಳಲ್ಲಿ ಮಾತ್ರ ವಿದ್ಯಾವಂತರ ಸಂಖ್ಯೆಯು ಬ್ರಿಟಿಷ್ ಇಂಡಿಯಕ್ಕಿಂತ ಹೆಚ್ಚು. ಸಂಸ್ಥಾನಗಳಿಂದ ಬರುವ ಬಹು ಪ್ರಾಮುಖ್ಯವಾದ ವರ್ತಮಾನವೆಂದರೆ ಅದು ವೈಸ್‌ರಾಯಿ ಪ್ರಭುಗಳ ಭೇಟಿಯ ವಿಚಾರ ಆಡಂಬರದ ಏರ್ಪಾಡುಗಳು, ಪರಸ್ಪರ ಹೊಗಳಿಕೊಂಡ ಉಪಚಾರೋಕ್ತಿಗಳ ಆರ್ಭಟಗಳು ಅಥವಾ ಬಹು ವೆಚ್ಚಮಾಡಿ ನಡೆಸಿದ ವಿವಾಹ ಅಥವಾ ಆಳುವ ಪ್ರಭುವಿನ ಜನ್ಮೋತ್ಸವ ಅಥವಾ ರೈತರ ದಂಗೆ ಇವುಗಳ ವಿವರಣೆ ಈ ರಾಜರನ್ನು ಕುರಿತು ಯಾರೂ ಟೀಕಿಸದಂತೆ ಕಟ್ಟೋಲೆಯ ಕಟ್ಟುಗಳಿವೆ ಬ್ರಿಟಿಷ್ ಇಂಡಿಯಾದಲ್ಲಿಯಾಗಲೀ ಸಂಸ್ಥಾನಗಳ ಒಳಗಾಗಲೀ ಎಂತಹ ಅಲ್ಪವಾದ ಟೀಕೆಯೂ ಸಹ ನಿಷ್ಠುರತೆಯಿಂದ ವಿರುದ್ಧವಾಗುವುದು ಸಾರ್ವಜನಿಕ ಸಂಘಗಳು ಸೇರುವುದನ್ನೇ ಕಾಣೆವು ಸಾಮಾಜಿಕ ವ್ಯವಹಾರ ಕೂಟಗಳಿಗೆ ಸಹ

ನಿರ್ಬಂಧ ಉಂಟು.* ಹೊರಗಿನಿಂದ ಸಾರ್ವಜನಿಕ ಸೇವಾನಿರತರಾದ ನಾಯಕರೂ ಸಹಾ ಆಗಾಗ್ಯೆ ಸಂಸ್ಥಾನಗಳಿಗೆ ಕಾಲಿಡದಂತೆ ಮಾಡಿದ್ದಾರೆ ೧೯೨೫ ರ ಸುಮಾರಿನಲ್ಲಿ ಶ್ರೀ।। ಸಿ ಆರ್ ದಾಸರು ಅಧಿಕ ವ್ಯಾಧಿಯಲ್ಲಿದ್ದು ಗುಣಹೊಂದಲು ಕಾಶ್ಮೀರಕ್ಕೆ ಪ್ರವಾಸ ಮಾಡಬೇಕಾಗಿತ್ತು ಹಾಗೆ ಹೋಗಿ ಬರುವುದರಲ್ಲಿ ರಾಜಕೀಯ ವಾಸನೆಯೇನೂಯಿರಲಿಲ್ಲ ಕಾಶ್ಮೀರದ ಗಡಿಯವರೆಗೆ ನೇರವಾಗಿ ಅವರು ಹೋದರು ಆದರೆ ಒಳಗೆ ಹೋಗಲು ಅಪ್ಪಣೆಯು ದೊರಯಲಿಲ್ಲ ಹೈದರಾಬಾದ್ ಸಂಸ್ಥಾನದಲ್ಲಿ ಮಿ।। ಎಂ ಎ ಜಿನ್ನಾರವರಿಗೆ ಕಾಲಿಡಲವಕಾಶವಿರಲಿಲ್ಲ ಅಷ್ಟೇಕೆ ಶ್ರೀಮತಿ ಸರೋಜಿನೀ ನಾಯುಡುರವರ ಮನೆಯು ಹೈದರಾಬಾದಾದರೂ ಬಹು ಕಾಲದವರೆಗೆ ಅಲ್ಲಿ ಹೋಗಲು ಅವರಿಗೂ ಸಹ ಪ್ರತಿಬಂಧಕವಿತ್ತು

ಸಂಸ್ಥಾನಗಳಲ್ಲಿ ಇಂಥಾ ಅವ್ಯವಸ್ಥೆಗಳಿದ್ದಾಗ ಕಾಂಗ್ರೆಸ್ಸು ಪ್ರತಿಭಟಿಸಿ ನಿಂತು ಸಂಸ್ಥಾನದ ಪ್ರಜೆಗಳ ಜನ್ಮಸಿದ್ಧವಾದ ಹಕ್ಕುಗಳಿಗೆ ಹೊಡೆದಾಡಿ ಸಾರ್ವಜನಿಕ ನಿರ್ಬಂಧಗಳನ್ನು ತಿರಸ್ಕರಿಸಿ ನಿಲ್ಲುವುದು ಸ್ವಭಾವವಾಗಿತ್ತು ಆದರೆ ಗಾಂಧಿಜಿಯವರು ಸಂಸ್ಥಾನಗಳ ವಿಚಾರದಲ್ಲಿ—" ಒಳ ಆಡಳಿತ ವಿಚಾರದಲ್ಲಿ ಸಂಸ್ಥಾನಗಳನ್ನು ಪ್ರಶ್ನಿಸಬಾರದು," ಎಂಬೊಂದು ಕಟ್ಟಳೆ ಮಾಡಿದರು ಸಂಸ್ಥಾನಗಳಲ್ಲಿ ಅತಿ ವಿಚಿತ್ರವಾದ ಮತ್ತು ಮನೋವೇಧಕವಾದ ಎಂಥ ಸಂದರ್ಭ ಒದಗಲಿ ಮತ್ತು ಕಾಂಗ್ರೆಸ್ಸಿನ ಮೇಲೆ ಸಂಸ್ಥಾನಗಳ ಸರಕಾರದವರು ಸಂಬಂಧವೇ ಇಲ್ಲದೆ ಮೇಲೆ ಬೀಳಲಿ, ಈ ಹುಷ್–ಹುಷ್ ನೀತಿಯನ್ನು ಗಾಂಧಿಜಿಯವರು ಅದೇಕೋ ಬಿಡಲೊಲ್ಲರು ಕಾಂಗ್ರೆಸ್ಸು ಅವರುಗಳ ಮೇಲೆ ಟೀಕೆ ಮಾಡಿದರೆ ಆ ರಾಜರುಗಳು ರೇಗಿಯಾರು ಮತ್ತು ಅವರನ್ನು 'ತಿದ್ದುವುದು' ಇನ್ನೂ ಕಷ್ಟವಾದೀತು ಎಂದುಕೊಂಡಿರಬಹುದು ಜುಲೈ ೧೯೩೪ ರಲ್ಲಿ ಗಾಂಧಿಜಿಯವರು ಸಂಸ್ಥಾನಿಕ ಪ್ರಜಾ ಪರಿಷತ್ತಿನ ಅಧ್ಯಕ್ಷರಾದ ಶ್ರೀ।। ಯ್ನ ಸಿ ಕೇಳ್ಕರ್‌ರವರಿಗೆ ಬರೆದ ಕಾಗದದಲ್ಲಿ ಸಂಸ್ಥಾನಗಳ ವಿಚಾರವಾಗಿ ಕಾಂಗ್ರೆಸ್ಸು ಕೈಹಾಕದಿರುವುದು ಬಹಳ ವಿವೇಕವೂ ಯೋಗ್ಯವೂ

---

* ೧೯೩೪ ನೇ ಅಕ್ಟೋಬರ್ ೩ ನೇ ತಾರೀಖಿನ ಪ್ರೆಸ್ ವರ್ತಮಾನದಲ್ಲಿ ದರ್ಖು ಹೈದರಾಬಾದಿನ ಸಮಾಚಾರ ಹೀಗಿದೆ " ಮಿ।। ಗಾಂಧಿಯವರ ಜನ್ಮದಿನಾಚರಣೆಗಾಗಿ ಸಾರ್ವಜನಿಕ ಕೂಟವು ಸ್ಥಳೀಯ ವಿವೇಕ ವರ್ಧಿನಿ ನಾಟಕ ಶಾಲೆಯಲ್ಲಿ ನಿನ್ನೆ ಸೇರಬೇಕೆಂದು ಏರ್ಪಾಡಾಗಿದ್ದುದು ನಿಂತು ಹೋಯಿತು ಹೈದರಾಬಾದಿನ ಹರಿಜನ ಸೇವಕಸಂಘದವರು ಈ ಕೂಟಕ್ಕೆ ಏರ್ಪಾಟು ಮಾಡಿದ್ದರು ಸಂಘದ ಕಾರ್ಯದರ್ಶಿಯವರು ಪ್ರೆಸ್ಸಿಗೆ ಬರೆದಪತ್ರದಲ್ಲಿ ಹೀಗೆ ಹೇಳುತ್ತಾರೆ ಕೂಟ ಏರ್ಪಾಡು ಮಾಡುವುದಕ್ಕೆ ೨೪ ಘಂಟೆಗಳ ಮುಂಚಿತವಾಗಿ ೨೦೦೦ ರೂಪಾಯಿನ ನಗದು ರೇವಣಿ ಮತ್ತು ರಾಜಕೀಯ ಸಂಬಂಧವಾದ ಉಪನ್ಯಾಸಗಳು ಜರುಗುವುದಿಲ್ಲವೆಂಬ ಭರವಸೆಯ ಪತ್ರ ಹಾಗೂ ಸರಕಾರಿ ನೌಕರುಗಳ ಕಾರ್ಯಗಳ ಮೇಲೆ ವಿಮರ್ಶೆಮಾಡುವುದಿಲ್ಲವೆಂಬ ಮುಚ್ಚಳಿಕೆ, ಇವಿಷ್ಟು ಕೊಟ್ಟರೆ ಕೂಟವು ನಡೆಯಬಹುದು ಸಭೆಯನ್ನು ಆಹ್ವಾನಿಸಿದವರು ಈ ಸಕಲ ವಿಚಾರಗಳನ್ನೂ ಅಧಿಕಾರಿಗಳೊಂದಿಗೆ ಪುನಃ ಪರಿಶೀಲನೆ ಮಾಡಲು ಅವಕಾಶವಿರಲಿಲ್ಲವಾಗಿ ಜನ್ಮದಿನಾಚರಣೆಯು ನಿಂತುಹೋಯಿತು "

ಆದುದೆಂದು ತಮ್ಮ ಮನಸ್ಸಿಗೆ ನಂಬಿಕೆಯಾಗಿದೆಯೆಂದೂ ಈ ಸಂಸ್ಥಾನಗಳ ನ್ಯಾಯ ಮತ್ತು ಸರ್ಕಾರದ ಸ್ಥಿತಿಯ ವಿಚಾರವಾಗಿ ಅವರು ವಹಿಸಿದ ಮನೋಭಾವವೂ ಅತಿಶಯ ವಿಚಿತ್ರವಾಗಿತ್ತೆಂದೂ ಬರೆದಿದ್ದಾರೆ "ಬ್ರಿಟಿಷ್ ನ್ಯಾಯದೃಷ್ಟಿಯಲ್ಲಿ ಸಂಸ್ಥಾನಗಳು ಸ್ವತಂತ್ರಗಳು ಬ್ರಿಟಿಷರಿಗೆ ಸೇರಿದ್ದು ಎನ್ನುವ ಹಿಂದೂಸ್ಥಾನದ ಭಾಗವು ಅಫ್ಘಾನಿಸ್ತಾನ ಅಥವಾ ಸಿಂಹಳ ದ್ವೀಪಗಳ ರಾಜನೀತಿಧೋರಣವನ್ನು ಬದಲಾಯಿಸಲು ಎಷ್ಟು ಹಕ್ಕು ಪಡೆದಿದೆಯೋ ಈ ಸಂಸ್ಥಾನಗಳ ವಿಚಾರದಲ್ಲಿಯೂ ಅದಕ್ಕೆ ಅಷ್ಟೇ ಹಕ್ಕು" ಎಂದು ಬರೆದರು ಮೃದು ಮಂದಗಾಮಿಗಳಾದ ಹಿಂದೂ ಸಂಸ್ಥಾನಗಳ ಪ್ರಜಾ ಪರಿಷತ್ತಿನವರೂ ಉದಾರವಾದಿಗಳೂ ಸಹ ಗಾಂಧಿಜಿಯವರ ಇಂತಹ ಅಭಿಪ್ರಾಯ ಮತ್ತು ಉಪದೇಶಗಳನ್ನು ಎದುರಿಸಿದರೆಂದರೆ ಆಶ್ಚರ್ಯವೇನು?

ಆದರೆ ಈ ದೃಷ್ಟಿಯು ಸಂಸ್ಥಾನಗಳ ರಾಜರುಗಳಿಗೆ ಮೆಚ್ಚಿಕೆಯಾಗಿ ಅವರು ಅದನ್ನು ತಮ್ಮ ಅನುಕೂಲಕ್ಕೆ ಉಪಯೋಗಿಸಿಕೊಂಡರು ಒಂದೇ ಒಂದು ತಿಂಗಳೊಳಗಾಗಿ ತಿರುವಾಂಕೂರು ಸರ್ಕಾರವು ರಾಷ್ಟ್ರೀಯ ಕಾಂಗ್ರೆಸ್ಸನ್ನು ಬಹಿಷ್ಕರಿಸಿ, ತಮ್ಮ ರಾಜ್ಯದಲ್ಲಿ ಕಾಂಗ್ರೆಸ್ ಕೂಟಗಳು ನಡೆಯುವುದಾಗಲಿ ಅಥವಾ ಸದಸ್ಯರನ್ನು ಸೇರಿಸುವುದಾಗಲೀ ಕೂಡಲೇ ಕೂಡದೆಂದು ಅಪ್ಪಣೆ ಮಾಡಿತು ಹೀಗೆ ಮಾಡುವಾಗ ಕಾಂಗ್ರೆಸ್ಸಿನ ಹೊಣೆ ಹೊತ್ತ ಮುಂದಾಳುಗಳೇ ಈ ಉಪದೇಶವನ್ನು ಕೊಟ್ಟಿದ್ದಾರೆಂದೂ ಅವರು ಹೇಳಿ ವಿಶದವಾಗಿ ಗಾಂಧಿಜಿಯವರ ಸಿದ್ಧಾಂತವನ್ನೇ ಸಾರಿಬಿಟ್ಟರು ಅಸಹಕಾರ ಚಳವಳಿಯು ಬ್ರಿಟಿಷ್ ಸರ್ಕಾರದಲ್ಲಿ ನಿಂತುಹೋದ ಮೇಲೆ (ಸಂಸ್ಥಾನಗಳಲ್ಲಿ ಅದುವರಿಗೂ ಈ ಚಳವಳಿಯು ಇರಲೇ ಇಲ್ಲ) ಇಂಡಿಯಾ ಸರಕಾರದವರು ಕಾಂಗ್ರೆಸ್ಸು ನ್ಯಾಯಪರವಾದ ಸಂಸ್ಥೆಯೆಂದು ಸಾರಿದ ಮೇಲೆ ಈ ಬಹಿಷ್ಕಾರವು ಬಂದುದು ಮದ್ರಾಸ್ ಸರಕಾರದಲ್ಲಿ ಮತ್ತು ಇಂಡಿಯಾ ಸರಕಾರದಲ್ಲಿ ದೊಡ್ಡ ಹುದ್ದೆಯಲ್ಲಿದ್ದ ಹಾಗೂ ಲಿಬರಲ್ ಪಂಗಡಕ್ಕೆ ಸೇರಿದ, ಹಿಂದೆ ಹೋಂರೂಲ್ ಸಂಸ್ಥೆಯ ಮತ್ತು ಕಾಂಗ್ರೆಸ್ಸಿನ ಸಾಮಾನ್ಯ ಕಾರ್ಯದರ್ಶಿಗಳಾಗಿದ್ದ ತಿರುವಾಂಕೂರ್ ಸಂಸ್ಥಾನದ ಸರ್ ಸಿ ಪಿ ರಾಮಸ್ವಾಮಿ ಅಯ್ಯರ್‌ರವರು ಆಗ ಅಲ್ಲಿನ ಪೊಲಿಟಿಕಲ್ ಅಡ್ವೈಸರ್ ಆಗಿದ್ದರು (ಈಗಲೂ ಆಗಿದ್ದಾರೆ)

ಕಾಂಗ್ರೆಸ್ ನೀತಿಗನುಸಾರವಾಗಿ ಗಾಂಧಿಜಿಯವರ ಉಪದೇಶವನ್ನನುಸರಿಸಿ ಬಹಿರಂಗವಾಗಿ ಈ ದಬ್ಬಾಳಿಕೆಯನ್ನು ಯಾರೂ ವಿರೋಧಿಸಲಿಲ್ಲ ತಿರುವಾಂಕೂರು ಸರ್ಕಾರವು ಕಾಂಗ್ರೆಸ್ಸು ಶಾಂತಿರೀತಿಯಲ್ಲಿದ್ದ ಸಮಯದಲ್ಲಿ ಹೀಗೆ ಮಾಡಿತ್ತು *

* ೧೯೩೯ ನೆಯ ಜನವರಿ ೨ ನೆಯ ತಾರೀಖಿನಲ್ಲಿ ಬರೋಡಾದಲ್ಲಿ ಆದ ಉಪನ್ಯಾಸದಲ್ಲಿ ಸರದಾರ್ ವಲ್ಲಭಭಾಯಿ ಪಟೇಲ್‌ರವರು ಈ "ಕೈಹಾಕಬಾರದು" ನೀತಿಯನ್ನು ಒತ್ತಿ ಹೇಳಿದರು "ಸಂಸ್ಥಾನಗಳಲ್ಲಿ ಕಾಂಗ್ರೆಸ್ ಕೆಲಸಗಾರರು ಸಂಸ್ಥಾನ ಸರಕಾರದವರು ಹೇರಿದ ಕಟ್ಟುಕಟ್ಟಳೆಗಳನ್ನು ಮೀರಬಾರದು ಅವರುಗಳ ಆಳ್ವಿಕೆಯನ್ನು ಟೀಕಿಸಬಾರದು ರಾಜಪ್ರಜೆಗಳ ಮಧುರ ಬಾಂಧವ್ಯವನ್ನು ಬೆಳೆಸಬೇಕು" ಎಂದು ಹೇಳಿದರೆಂದು ವರದಿಯಾಗಿದೆ

ಕೆಲವು ಉದಾರವಾದಿ ಪಕ್ಷದವರು ಮಾತ್ರ ತೀವ್ರವಾಗಿ ಈ ನೀತಿಯನ್ನು ವಿರೋಧಿಸಿದರು ಉದಾರವಾದಿ ಪಕ್ಷದವರ ವರ್ತನೆಕ್ಕಿಂತ ಗಾಂಧಿಜಿಯವರ ನೀತಿಯು ಅತಿ ಮಂದವಾಯಿತು ಪ್ರಜಾಮುಖಂಡರುಗಳಲ್ಲಿ ಬಹುಶಃ ಪಂಡಿತ ಮದನಮೋಹನ ಮಾಳವೀಯರವರು ಮಾತ್ರ ರಾಜರುಗಳ ಸೂಕ್ಷ್ಮ ಮನಸ್ಸುಗಳಿಗೆ ಯಾವರೀತಿಯಾಗಿಯೂ ನೋವುಂಟುಮಾಡಬಾರದೆಂದು ಭಾವಿಸಿದರು ಏಕೆಂದರೆ ಅವರು ಹಲವು ರಾಜರುಗಳ ಸಂಗಡ ಆಪ್ತ ಸಂಬಂಧದಲ್ಲಿ ಇದ್ದರು

ಗಾಂಧಿಜಿಯವರೂ ಸಹ ರಾಜರ ವಿಷಯದಲ್ಲಿ ಅಷ್ಟೊಂದು ಎಚ್ಚರಿಕೆಯಿಂದ ಯಾವಾಗಲೂ ಇರಲಿಲ್ಲ ೧೯೧೬ ನೇ ಫೆಬ್ರವರಿ ತಿಂಗಳು ಬನಾರೆಸ್ಸಿನಲ್ಲಿ ಹಿಂದೂ ವಿಶ್ವವಿದ್ಯಾನಿಲಯದ ಪ್ರಾರಂಭೋತ್ಸವಗಳ ಸಮಯದಲ್ಲಿ ಅನೇಕ ರಾಜರುಗಳ ಗುಂಪಿನಲ್ಲಿ ರಾಜರೇ ಒಬ್ಬರು ಅಧ್ಯಕ್ಷರಾಗಿದ್ದಾಗ ಗಾಂಧಿಜಿಯವರು ಒಂದು ಭಾಷಣ ಮಾಡಿದರು ಆಗ ಅವರು ದಕ್ಷಿಣ ಆಫ್ರಿಕದಿಂದ ಹೊಸದಾಗಿ ಬಂದಿದ್ದರು ಅಖಿಲ ಭಾರತದ ರಾಜನೀತಿಯ ಭಾರವನ್ನು ಅವರು ಹೆಗಲಮೇಲೆ ಆಗ ಇನ್ನೂ ಹೊತ್ತಿರಲಿಲ್ಲ, ಉತ್ಸಾಹಭರದಲ್ಲಿ ಮತ್ತು ಭವಿಷ್ಯವಾಣಿಯನ್ನಾಡುವ ಕಾವಿನಲ್ಲಿ ರಾಜರನ್ನು ಕುರಿತು ಅವರು "ರಾಜಾಧಿರಾಜರೆ! ಎದ್ದೇಳಿ, ನಿಮ್ಮ ಹೆಮ್ಮೆಯ ಡಂಭಾಚಾರವನ್ನೂ ಭೋಗಜೀವನವನ್ನೂ ಬಿಟ್ಟುಬಿಡಿ ಹೊರಡಿ ನಿಮ್ಮ ಆಭರಣಗಳನ್ನೆಲ್ಲಾ ಮಾರಿ ಬನ್ನಿ" ಎಂದರು ಆಭರಣಗಳನ್ನೆಲ್ಲಾ ಆ ರಾಜರು ಮಾರಿದರೋ ಇಲ್ಲವೋ ಗೊತ್ತಿಲ್ಲ ಅವರು ಹೊರಟುಹೋದದ್ದೇನೋ ನಿಟ ಭಾರಿ ಹೆದರಿಕೆಯಲ್ಲಿ ಒಬ್ಬೊಬ್ಬರಾಗಿ ಸಣ್ಣಸಣ್ಣ ಗುಂಪಾಗಿ ಆ ಸಭೆಯನ್ನು ರಾಜರು ಬಿಟ್ಟುಹೋದರು ಅಧ್ಯಕ್ಷರೂ ಸಹ ಉಪನ್ಯಾಸಕರೊಬ್ಬರನ್ನೇ ಬಿಟ್ಟು ಹೊರಗೆ ಹೊರಟುಹೋದರು ಆಗ ಅಲ್ಲಿ ಬಂದಿದ್ದ ಶ್ರೀಮತಿ ಆನಿ ಬೆಸೆಂಟರೂ ಸಹಾ ಗಾಂಧಿಜಿಯವರು ಹೇಳಿದುದನ್ನು ಕೇಳಿ ಸಿಟ್ಟಾಗಿ ಸಭಾಪರಿತ್ಯಾಗ ಮಾಡಿದರು

ಶ್ರೀ|| ಎನ್ ಸಿ ಕೇಳ್ಕರ್‌ರವರಿಗೆ ಗಾಂಧಿಜಿಯವರು ಬರೆದ ಕಾಗದದಲ್ಲಿ "ಸಂಸ್ಥಾನಗಳವರು ತಮ್ಮ ಪ್ರಜೆಗಳಿಗೆ ಸ್ವಯಮಾಧಿಪತ್ಯವನ್ನು ಕೊಡಬೇಕು ಮತ್ತು ರಾಜರು ತಾವು ಆಳುವ ಪ್ರಜೆಗಳ ಧರ್ಮದರ್ಶಿಗಳು ಎಂದು ಭಾವಿಸಿಕೊಳ್ಳುವುದು ಮಾತ್ರವಲ್ಲದೆ ಹಾಗೆ ಇರಲೂ ಬೇಕು" ಎಂದು ಬರೆದರು ಈ ಧರ್ಮದರ್ಶಿತ್ವದ ಭಾವನೆಯಲ್ಲಿ ಏನಾದರೂ ಹುರುಳಿದೆಯೆ? ಹಾಗೆ ಇದ್ದ ಪಕ್ಷದಲ್ಲಿ ಬ್ರಿಟಿಷ್ ಸರಕಾರದವರು ಇಂಡಿಯಾ ಸರಕಾರದ ಧರ್ಮದರ್ಶಿಗಳಲ್ಲವೆಂದು ವಿರೋಧಿಸುವುದೇಕೆ? ಅವರು ಹಿಂದೂ ದೇಶಕ್ಕೆ ಹೊರಗಿನಿಂದ ಬಂದವರೆಂಬುದು ಒಂದು ಬಿಟ್ಟು ಇನ್ನೇನೂ ವ್ಯತ್ಯಾಸವಿಲ್ಲ ಹಾಗೆಯೇ ಹಿಂದೂಸ್ಥಾನದಲ್ಲಿ ಅನೇಕರಿಗೆ ಕುಲ ಗೋತ್ರ ಮತ್ತು ಮೈಬಣ್ಣಗಳಲ್ಲಿ ಹಾಗೂ ಸಂಸ್ಕೃತಿಯಲ್ಲಿ ವ್ಯತ್ಯಾಸವಿದ್ದೇ ಇದೆ.

ಕಳೆದ ಕೆಲವು ವರ್ಷಗಳಲ್ಲಿ ಬ್ರಿಟಿಷ್ ಅಧಿಕಾರಿಗಳನ್ನು ನಿಸ್ಸಹಾಯರಾದ ರಾಜರುಗಳ ಮೇಲೆ ಅವರ ಇಷ್ಟಕ್ಕೆ ವಿರೋಧವಾಗಿಯೂ ಸಹಾ ಸಂಸ್ಥಾನಗಳಲ್ಲಿ ಪ್ರತಿಷ್ಠೆ ಮಾಡಿದ್ದಾರೆ ಇಂಡಿಯಾ ಸರಕಾರವು ತಮ್ಮ ಕೈಕೆಳಗಿರುವ ಸಂಸ್ಥಾನಗಳಮೇಲೆ ಬಹಳ ಹಿಡಿತವನ್ನಿಟ್ಟಿದೆ ಅದರ ಜೊತೆಗೆ ಈಗ ಕೆಲವು ಸಂಸ್ಥಾನಗಳಲ್ಲಿ ಈ ಹಿಡಿತವು ಒಳಕ್ಕೂ ವ್ಯಾಪಿಸಿದೆ. ಅದರಿಂದ ಈ ಸಂಸ್ಥಾನಗಳಿಂದ ಬರುವ ಅಭಿಪ್ರಾಯವು ಇಂಡಿಯಾ ಸರಕಾರದ ಅಭಿಪ್ರಾಯವೇ? ಅದರದು ಸಾಮಂತ ಸಂಸ್ಥಾನಗಳ ಹಿಂದೆ ನಿಂತು ಆಡಿದ ಮಾತು ಅಷ್ಟೆ

ಹೊರಗಡೆ ನಡಿಸಿದ ಚಳವಳಿಗಳನ್ನು ಸಂಸ್ಥಾನಗಳಲ್ಲಿಯೂ ಹೂಡುವುದು ಸಾಧ್ಯವಿಲ್ಲವೆಂಬುದೂ ನನಗೆ ಗೊತ್ತು ಬ್ರಿಟಿಷ್ ಇಂಡಿಯನ್ ಪ್ರಾಂತಗಳಲ್ಲಿ ಒಂದೇ ಬಗೆಯಾದ ನೀತಿಯು ಯಾವಾಗ್ಲೂ ಸಾಧ್ಯವಲ್ಲ ಏಕೆಂದರೆ ಒಂದು ಪ್ರಾಂತದಿಂದ ಇನ್ನೊಂದು ಪ್ರಾಂತಕ್ಕೆ ವ್ಯವಸಾಯ, ಕೈಗಾರಿಕೆ, ಜಾತಿನೀತಿ, ಸರಕಾರ ಇವುಗಳಲ್ಲಿ ಒಂದು ಪ್ರಾಂತದಿಂದ ಇನ್ನೊಂದು ಪ್ರಾಂತಕ್ಕೆ ಎಷ್ಟೋ ವ್ಯತ್ಯಾಸವಿರುತ್ತದೆ ಕಾರ್ಯಕರಣವು ಅಲ್ಲಿನ ಸ್ಥಿತಿಗತಿಗನುಸಾರವಾಗಿ ಬದಲಾಯಿಸಬೇಕಾಗಿ ಬಂದರೂ ಸಾಧಾರಣ ಧೋರಣದಲ್ಲಿ ಸ್ಥಳದಿಂದ ಸ್ಥಳಕ್ಕೆ ಭೇದಬರಬಾರದು. ಏಕೆಂದರೆ ಯಾವುದೇ ಆಗಲಿ ಒಂದು ಬಾಗದಲ್ಲಿ ಕೆಟ್ಟಿದ್ದಾಗಿದ್ದರೆ, ಇನ್ನೊಂದು ಭಾಗದಲ್ಲಿಯೂ ಕೆಟ್ಟದ್ದೇ ಸರಿ ಹಾಗಿಲ್ಲದಿದ್ದರೆ ಕ್ರಮವಾದ ಏಕಮುಖವಾದ ರೀತಿನೀತಿಗಳು ಯಾವುದೂ ಇಲ್ಲವೆಂದೂ ಮತ್ತು ನಮಗಾಗಿ ನಾವು ಅಧಿಕಾರ ಸಂಪಾದಿಸಿಕೊಳ್ಳಲು ಹೊರಟಿದ್ದೇವೆಂದೂ ನಮ್ಮ ಮೇಲೆ ಈಗಾಗಲೇ ಹೊರಿಸಿರುವಂತೆ ಇನ್ನೂ ಹೆಚ್ಚಾಗಿ ಅಪರಾಧವನ್ನು ಹೊರಿಸಲು ಅವಕಾಶವಾಗುತ್ತದೆ

ಮತ ಸಂಬಂಧವಾದ ಮತ್ತು ಇನ್ನೂ ಇತರ ವೈನಾರಿಟಿಗಳಿಗೆ ಬೇರೆ ಬೇರೆ ಚುನಾವಣೆಯ ಸ್ಥಾನಗಳನ್ನು ಏರ್ಪಾಟು ಮಾಡಿದ್ದಕ್ಕೆ ಅತಿಯಾಗಿ ಆಕ್ಷೇಪಣೆಗಳು ಬಂದಿವೆ ಅಂಥಾ ಆಕ್ಷೇಪಣೆಗಳು ನ್ಯಾಯವೂ ಆಗಿವೆ ಯಾಕೆಂದರೆ ಅವು ಪ್ರಜಾಸತ್ತೆಯ ಸರಕಾರಕ್ಕೆ ವಿರೋಧವೆಂದು ಸ್ಪಷ್ಟವಾಗಿದೆ ಪ್ರಜಾಸತ್ತೆಯು ಅಥವಾ ಪ್ರಜಾ ಪ್ರಾತಿನಿಧ್ಯದ ಭಾರವಹಿಸಿದ ಸರಕಾರವೆಂದು ಹೇಳುವರಲ್ಲ ಅಂಥಾದ್ದಕ್ಕೆ ಮತದಾರರನ್ನು ಪ್ರತ್ಯೇಕವಾದ ಭಾಗಗಳನ್ನಾಗಿ ಬರೆಯುವುದು ಎಂದಿಗೂ ತರವಲ್ಲ ಪಂಡಿತ ಮದನ ಮೋಹನ ಮಾಳವೀಯರಂತಹ ಅತ್ಯಂತ ಶ್ರದ್ಧಾಳುಗಳೂ ಸಂತತವೂ ಆ ವಿಷಯವನ್ನೆತ್ತಿ ಆಡುವರೂ ಆಡದವರೂ ಮತ್ತು ಹಿಂದೂ ಮಹಾ ಸಭೆಯ ಮುಖಂಡರೂ ಸಹಾ ಸಂಸ್ಥಾನಗಳಲ್ಲಿರತಕ್ಕ ರೀತಿನೀತಿಗಳಿಗೆ ಒಪ್ಪಿಗೆ ಇತ್ತಿದ್ದಾರೆ ಮತ್ತು ಸಂಸ್ಥಾನಗಳ ನಿರಂಕುಶಾಧಿಪತ್ಯಕ್ಕೂ ಉಳಿದ ಹಿಂದೂಸ್ಥಾನದ ಪ್ರಜಾಸತ್ತಾತ್ಮಕ ಸರ್ಕಾರಕ್ಕೂ ಸೋದರ ಸಂಬಂಧವನ್ನು ಕಲ್ಪಿಸಲು ಸಿದ್ಧವಾಗಿದ್ದಾರೆ.

(ಹಾಗೆಂದು ತಾನೇ ಕರೆಯುತ್ತಾರೆ) ಇಂಥಾದ್ದಕ್ಕಿಂತ ಅಸಂಬದ್ಧವಾದ ಮತ್ತು ತಿಳಿಗೇಡಿತನದ್ದಾದ ಇನ್ನೊಂದು ಕೂಟವನ್ನು ಊಹಿಸುವುದೇ ದುಸ್ತರ ಆದರೂ ಹಿಂದೂಸಭೆಯ ಪ್ರಜಾಸತ್ತೆ ಮತ್ತು ರಾಷ್ಟ್ರೀಯತಾವಾದಗಳ ಜಗಜಟ್ಟಿಗಳೂ ಕಷ್ಟವೆನಿಸೂ ಇಲ್ಲದೆ ಇದನ್ನು ನುಂಗಿಬಿಡುತ್ತಿದ್ದಾರೆ ಹಾಗಿದ್ದೂ ಸಹ ನಿತ್ಯಸಮತೆಯು ಮತ್ತು ತರ್ಕಶಾಸ್ತ್ರದ ವಿಚಾರವಾಗಿ ನಾವು ಎಷ್ಟು ಮಾತನಾಡಿದರೇನು ? ಮನುಷ್ಯನು ಮಾಡುವ ಕೆಲಸಗಳಿಗೆಲ್ಲ ರಾಗದ್ವೇಷಗಳೇ ಕಾರಣ

ಕಾಂಗ್ರೆಸ್ಸಿನ ಮತ್ತು ಸಂಸ್ಥಾನಗಳ ವಿರೋಧಾಭಾಸಕ್ಕೆ ನಾನು ಮತ್ತೆ ಹಿಂತಿರುಗಿ ದಂತಾಯಿತು ಸುಮಾರು ಒಂದೂವರೆ ಶತಮಾನದ ಹಿಂದೆ ಥಾಮಸ್ ಪೆಯಿನ್‌ನು ಬರ್ಕ್‌ನ ವಿಚಾರದಲ್ಲಿ "ಅವನಾದರೋ ಸಾಯುತ್ತಿರುವ ಹಕ್ಕಿಯನ್ನು ಮರೆತುಬಿಟ್ಟು ಗರಿಗಳಿಲ್ಲಾ ಹಾಳಾದುವಲ್ಲಾ ಎಂದು ಮರುಗುತ್ತಾನೆ" ಎಂದು ಹೇಳಿದ ಮಾತಿನ ಸ್ಮರಣೆಯಾಗುತ್ತದೆ ಹಾಗೆ ಗಾಂಧಿಜಿಯವರೂ. ಸಾಯುವ ಹಕ್ಕಿಯನ್ನು ಎಂದೂ ಮರೆಯುವವರಲ್ಲ ಆದರೆ ಅದೇಕೋ ಕಾಣೆ, ಗರಿಗಳ ಮೇಲೆ ಅವರಿಗೆ ಅಷ್ಟೊಂದು ಅಭಿಮಾನ

ಹೆಚ್ಚು ಕಡಿಮೆ ತಾಲ್ಲೂಕ್‌ದಾರಿ ಮತ್ತು ಭಾರಿ ಜಮೀನ್ದಾರಿಗಳ ವಿಚಾರದಲ್ಲಿಯೂ ಹೀಗೆಯೇ ಎನ್ನಬಹುದು ಈ ಅರ್ಧಂಬರ್ಧ ಜಮೀನ್‌ದಾರಿ ವ್ಯವಸ್ಥೆಯು ಪ್ರಳಯದ ಆಚಿನ ಯುಗದ್ದೆಂದೂ ಮತ್ತು ಕೈಗಾರಿಕೆಗೂ ಮತ್ತು ಇತರ ಪ್ರಗತಿ ಮಾರ್ಗಕ್ಕೂ ಅಡ್ಡಕಟ್ಟೆಯಾಗಿದೆಯೆಂದೂ ಹೇಳಿ ತರ್ಕಿಸುವುದು ಬೇಕಾಗಿಯೇ ಇಲ್ಲ ಅದಾದರೋ ಬೆಳೆದುಬರುತ್ತಿರುವ ಬಂಡವಾಳಶಾಹಿಗಳೂ ಸಹ ವಿರುದ್ಧವೆ, ಮತ್ತು ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಸಹ ದೊಡ್ಡ ದೊಡ್ಡ ಜಮೀನ್‌ದಾರಿಗಳು ಬರಬರುತ್ತ ಅದೃಶ್ಯವಾಗಿ ರೈತಾಪಿ ಮಾಲೀಕರಿಗೆ ಎಡೆಕೊಟ್ಟಿವೆ ನಾನು, ಯಾವಾಗಲೂ ಹಿಂದೂಸ್ಥಾನದಲ್ಲಿ ಒಂದೇ ಒಂದು ಪ್ರಶ್ನೆ ಹುಟ್ಟಬಹುದು, ಜಮೀನ್‌ದಾರರಿಗೆ ಪರಿಹಾರದ್ರವ್ಯ ಕೊಡಬೇಕಾದೀತು ಎಂದುಕೊಂಡಿದ್ದೇನೆ ಆದರೆ ಕಳೆದ ವರ್ಷವೋ ಏನೋ ಗಾಂಧಿಜಿಯವರು ತಾಲ್ಲೂಕ್‌ದಾರಿ ಸಂಸ್ಥೆಗಳು ಬಹು ಚೆನ್ನೆಂದೂ ಅಂಥವು ಅವಶ್ಯಕವಾಗಿ ಇರಲೇಬೇಕೆಂದೂ ಹೇಳಿಬಿಟ್ಟರು. ಅದನ್ನು ಕೇಳಿ ನನಗೆ ಬಹು ಆಶ್ಚರ್ಯವಾಯಿತು ೧೯೩೪ ನೇ ಜುಲೈ ತಿಂಗಳಿನಲ್ಲಿ ಕಾನ್‌ಪುರದಲ್ಲಿ ಅವರೇ "ಜಮೀನ್‌ದಾರರುಗಳಿಗೂ ಮತ್ತು ಅವರ ಕುಲಗಳಿಗೂ ಹೃದಯ ಪರಿವರ್ತನವಾದರೆ, ಇಬ್ಬರಿಗೂ ಮಧುರ ಬಾಂಧವ್ಯವೇರ್ಪಡುವುದು ಹಾಗಾದರೆ, ಇಬ್ಬರಿಗೂ ಸುಖವಾಗಿ ಸಮ್ಮತವಾಗಿ ಇರಬಹುದು ಹಾಗೇನಾದರೂ ಆದರೆ ತಾಲ್ಲೂಕ್‌ದಾರಿ ಮತ್ತು ಜಮೀನ್‌ದಾರಿಗಳನ್ನು ತೆಗೆದೇಹಾಕಬಿಡುವುದು ಎಂದೂ ಅವರ ಮನಸ್ಸಿಗೆ ಬಂದಿರಲಿಲ್ಲ ಮತ್ತೂ ಅವುಗಳನ್ನು ತೆಗೆದುಹಾಕಬೇಕೆಂದು

ಹೇಳುವಂಥವರು ಯಾರಾದರೂ ಇದ್ದರೆ ಅವರ ಮನಸ್ಸು ಅವರಿಗೇ ತಿಳಿಯದು"
(ಈ ಕಡೆಯ ಆಕ್ಷೇಪಣೆಯು ಬಹು ಕ್ರೂರವಾದದ್ದು)

ಮತ್ತೆ ಅವರು ಹೀಗೆ ಹೇಳಿದರೆಂದು ವರದಿಯಾಗಿದೆ "ಆಸ್ತಿಪಾಸ್ತಿ ಇಟ್ಟು ಕೊಂಡಿರುವ ಗುಂಪಿನಿಂದ ಆ ಸ್ವಂತ ಆಸ್ತಿಗಳನ್ನು ನಿಷ್ಕಾರಣವಾಗಿ ಕಿತ್ತುಕೊಳ್ಳುವ ವಿಚಾರದಲ್ಲಿ ನಾನಂತೂ ಭಾಗವಹಿಸುವುದಿಲ್ಲ ನನ್ನ ಇಷ್ಟದ ಗುರಿಯಾದರೋ ನಿಮ್ಮ ಹೃದಯಗಳನ್ನು ಮುಟ್ಟಿ ನಿಮ್ಮನ್ನು ಬದಲಾಯಿಸಬೇಕು (ಈ ಸಂದರ್ಭದಲ್ಲಿ ಅವರು ಭಾರೀ ಜಮೀನ್ದಾರೀ ಪ್ರತಿನಿಧಿಗಳನ್ನು ಉದ್ದೇಶಿಸಿ ಮಾತನಾಡಿದರು) ನಿಮ್ಮ ಸ್ವಂತ ಆಸ್ತಿಯನ್ನೆಲ್ಲಾ ನಿಮ್ಮನ್ನು ನಂಬಿರುವ ರೈತಾಪಿ ಕುಳಗಳ ಪರವಾಗಿ ಕಾದಿಟ್ಟು ಕೊಂಡು ಪ್ರಥಮವಾಗಿ ಅವನ್ನು ಅವರ ಕ್ಷೇಮಕ್ಕಾಗಿ ಉಪಯೋಗಿಸುವಷ್ಟು ಮಟ್ಟಿಗೆ ನೀವಾಗಬೇಕು ಒಂದು ವೇಳೆ ನಿಮ್ಮಗಳ ಆಸ್ತಿಗಳನ್ನು ಅನ್ಯಾಯವಾಗಿ ಕಿತ್ತು ಕೊಳ್ಳುವ ಪ್ರಯತ್ನವೇನಾದರೂ ನಡೆದರೆ, ಆಗ ನಿಮ್ಮಗಳ ಪಕ್ಷದಲ್ಲಿ ನಿಂತು ನಾನು ಯುದ್ಧಮಾಡುವುದನ್ನು ನೀವೇ ನೋಡುವಿರಿ ಪಾಶ್ಚಾತ್ಯರ ಸಮತಾವಾದ ಮತ್ತು ಕಮ್ಯೂನಿಸಂಗಳು ಆಧಾರವಾಗಿರುವ ತತ್ವಗಳು ನಮ್ಮ ತತ್ವಗಳಿಗೆ ತೀರ ಭಿನ್ನವಾದವು ಮನುಷ್ಯ ಸ್ವಭಾವವು ಮುಖ್ಯವಾಗಿ ಸ್ವಾರ್ಥಪರವಾದುದು ಎಂಬುದೂ ಅಂತಹ ನಮಗೆ ಸೇರದ ಭಾವನೆ ನಮ್ಮ ಸಮತಾವಾದ ಮತ್ತು ಕಮ್ಯೂನಿಸಂ ಆದರೋ ಅಹಿಂಸಾ ತತ್ವದಮೇಲೂ ಕೂಲಿಗಾರರು ಬಂಡವಾಳಗಾರರು, ಜಮೀನ್ದಾರ–ಮತ್ತು ರೈತ, ಇವರ ಸುಮಧುರ ಸಹಕಾರದ ಮೇಲೂ ನಿಂತಿರಬೇಕು"

ಪಾಶ್ಚಾತ್ಯ ಮತ್ತು ಪೌರ್ವಾತ್ಯರ ಮೂಲ ಭಾವನೆಗಳಲ್ಲಿ ಇಂಥಹ ವ್ಯತ್ಯಾಸಗಳು ಇರುವುದು ನನಗೆ ಗೊತ್ತಿಲ್ಲದ ವಿಚಾರ ಇದ್ದರೂ ಇರಬಹುದು. ಆದರೆ ಸ್ಪಷ್ಟವಾಗಿ ಕಣ್ಣಿಗೆ ಕಂಡಿರುವ ಒಂದು ಭಾರಿಯ ವ್ಯತ್ಯಾಸವೇನೆಂದರೆ ಇಂಡಿಯಾ ದೇಶದ ಬಂಡ ವಾಳಗಾರನೂ ಜಮೀನ್‌ದಾರನೂ ಸಹಾ ಪಾಶ್ಚಾತ್ಯದಲ್ಲಿ ಇರುವ ತಮ್ಮ ಜಾತಿಯವರಿ ಗಿಂತ ಹೆಚ್ಚಾಗಿ ತಮ್ಮ ಕೂಲಿಯವರ ಮತ್ತು ರೈತರ ಸುಖಶಾಂತಿಗಳನ್ನು ಮರೆತಿದ್ದಾರೆ ಹಿಂದೂಸ್ಥಾನದ ಜಮೀನ್ದಾರನು ಪ್ರಾಯಿಕವಾಗಿ ತನ್ನ ರೈತನ ಕ್ಷೇಮಲಾಭಕ್ಕಾಗಿ ಯಾವುದೊಂದು ರೀತಿಯ ಸಮಾಜಸೇವೆಯಲ್ಲಿ ಯಾವ ಕುತೂಹಲವನ್ನೂ ತೋರಿ ಸಿಲ್ಲ ಮಿ|| ಹೆಚ್ ಎಸ್ ಬ್ರೈಯಿಲ್ಸ್‌ಫರ್ಡ್ ಎಂಬ ಪಾಶ್ಚಾತ್ಯ ದಾರ್ಶನಿಕರೊಬ್ಬರು ತಮ್ಮ 'ಪ್ರಾಪರ್ಟಿ ಆರ್ ಪೀಸ್' (ಆಸ್ತಿ ಅಥವಾ ಶಾಂತಿ) ಎಂಬ ಪುಸ್ತಕದಲ್ಲಿ "ಇಂಡಿಯಾ ದೇಶದ ಸಾಹುಕಾರರು ಮತ್ತು ಜಮೀನ್ದಾರರ ಹಾಗೆ ಕಿತ್ತುತಿನ್ನು ವವರು ಈ ಪ್ರಪಂಚದಲ್ಲಿ ಇನ್ನಾವ ಸಮಕಾಲಿಕ ಸಮಾಜದಲ್ಲಿಯೂ ಇಲ್ಲ" ಎಂದು ಹೇಳಿದ್ದಾರ ಪ್ರಾಯಶಃ ದೋಷವು ಇಂಡಿಯಾ ದೇಶದ ಜಮೀನ್ದಾರನದಲ್ಲ ಸಂದರ್ಭವಶದಿಂದ ಅವನು ಬರುಬರುತ್ತ ಅಧಃಪತನ ಹೊಂದಿದ್ದಾನೆ ಈಗ ಬಿಡಿಸಿ ಕೊಂಡು ಮೇಲೆದ್ದು ಬರುವುದು ಸಾಧ್ಯವಾಗದೆ ಹೋಗಿದೆ. ಸಾಲಗಾರರೂ ಅನೇಕ

ಜಮೀನ್ದಾರರುಗಳ ಭೂಮಿಕಾಣಿಗಳನ್ನು ಹೊತ್ತುಹಾಕಿದ್ದಾರೆ ಸಣ್ಣ ಸಣ್ಣ ಜಮೀನ್ದಾರರು ಹಿಂದೆ ತಮಗೇ ಸೇರಿದ್ದ ಜಮೀನಿನಲ್ಲಿಯೇ ರೈತರಾಗುವ ದುಸ್ಥಿತಿಗೆ ಇಳಿದಿದ್ದಾರೆ ಈ ಸಾಲಗಾರರೋ ಪಟ್ಟಣಗಳಲ್ಲಿದ್ದುಕೊಂಡು ಭೂಮಿಗಳನ್ನು ಅಡವು ಹಾಕಿಕೊಂಡು ಹಣ ಮುಂಗಡವಾಗಿ ಕೊಟ್ಟು ಹೊಸ ಜಮೀನ್ದಾರರುಗಳಾಗಿ ಹುಟ್ಟಿ ಕೊಂಡಿದ್ದಾರೆ ಮತ್ತೂ ಗಾಂಧಿಜಿಯವರು ಹೇಳಿದಂತೆ, ಅವರು ಹಿಂದೆ ಯಾರು ಯಾರ ಜಮೀನುಗಳನ್ನು ಅಡಮಾನದ ನೆವದಿಂದ ತಸ್ಕರಮಾಡಿದ್ದಾರೆಯೋ ಅಂಥ ದುರದೃಷ್ಟವಂತರಿಗೆಲ್ಲಾ ಅವರೇ ಇಂದು ಪೋಷಕರು ಅಲ್ಲದೆ ಇದೇ ಜಮೀನ್ದಾರರು ತಮ್ಮ ವರಮಾನವನ್ನು ತಮ್ಮ ರೈತರ ಯೋಗಕ್ಷೇಮಕ್ಕಾಗಿ ಉಪಯೋಗಿಸುವರೆಂದು ನಾವು ನಿರೀಕ್ಷಿಸಬೇಕು

ತಾಲ್ಲೂಕ್‌ದಾರಿ ಸಂಸ್ಥೆಯು ಒಳ್ಳೆಯದಾದರೆ ಅದನ್ನೇ ಇಂಡಿಯಾ ದೇಶದಲ್ಲೆಲ್ಲಾ ಜಾರಿಗೆ ತರಬಾರದೇಕೆ ? ಇಂಡಿಯಾ ದೇಶದಲ್ಲಿ ಭಾರಿಭಾರಿ ಜಮೀನುಗಳಿಗೆ ರೈತರೇ ಯಜಮಾನರಾಗಿದ್ದಾರೆ ಗುಜರಾತಿನಲ್ಲಿ ದೊಡ್ಡ ಜಮೀನ್ದಾರಿಗಳನ್ನು ಮತ್ತು ತಾಲ್ಲೂಕ್‌ದಾರಿಗಳನ್ನು ನಿರ್ಮಿಸಲು ಗಾಂಧಿಜಿಯವರು ಎಂದಾದರೂ ಒಪ್ಪಿ ಯಾರೇ ಎಂದು ನನಗೆ ಸಂದೇಹ ಒಪ್ಪಲಾರರು ಎಂದುಕೊಳ್ಳುತ್ತೇನೆ ಹಾಗಿದ್ದರೆ ಸಂಯುಕ್ತ ಪ್ರಾಂತಗಳು, ಬಿಹಾರ್ ಅಥವಾ ಬಂಗಾಳ ಪ್ರಾಂತಗಳಿಗೆ ಒಂದು ರೀತಿ ಜಮೀನ್ದಾರಿ ಪದ್ಧತಿ ಒಳ್ಳೆಯದಾಗಿ ಗುಜರಾತು ಮತ್ತು ಪಂಜಾಬಗಳಿಗೆ ಇನ್ನೊಂದು ಪದ್ಧತಿಯು ಒಳ್ಳೆಯದಾಗುವುದು ಹೇಗೆ ? ಉತ್ತರ, ಪೂರ್ವ ಪಶ್ಚಿಮ ಮತ್ತು ದಕ್ಷಿಣಗಳಲ್ಲಿರುವ ಹಿಂದೂ ನಿವಾಸಿಗಳಿಗೆ ಮುಖ್ಯವಾದ ಯಾವ ವ್ಯತ್ಯಾಸವೂ ಇರಲಾರದೆಂದು ನನ್ನ ಊಹೆ ಯಾಕೆಂದರೆ ಅವರುಗಳ ಮೂಲ ಭಾವನೆಗಳೆಲ್ಲಾ ಒಂದೇ ಕಟ್ಟಕಡೆಗೆ ಈಗ ಏನಿದೆಯೋ ಅದೇ ಇರಲಿ, ಹಿಂದಿನದೆಲ್ಲಾ ಇದ್ದಂತೆಯೇ ಇರಬೇಕು ಎಂದೂ ಹೇಳಿದಂತಾಯ್ತು ಆರ್ಥಿಕ ಸ್ಥಿತಿಯನ್ನು ವಿಚಾರಿಸಿ, ಜನಗಳಿಗೆ ಯಾವುದು ಬಹಳ ಇಷ್ಟವಾದುದು, ಯಾವುದು ಬಹಳ ಉಪಕಾರಕವಾದುದು ಎಂಬ ತೀರ್ಮಾನಕ್ಕೆ ಬರುವುದಾಗಲೀ ಈಗಿನ ಸ್ಥಿತಿಯನ್ನು ಬದಲಾಯಿಸುವ ಮಾತಾಗಲೀ ಇರಕೂಡದು ಮಾಡಬೇಕಾದುದೆಲ್ಲ ಈ ಜನಗಳ ಹೃದಯಗಳನ್ನು ಬದಲಾಯಿಸುವುದು , ಅಷ್ಟೆ ! ಅವು ಅವಶ್ಯಕ ಆದರೆ ಹಿಂದೆ ಹೇಳಿದುದೆಲ್ಲ ಧಾರ್ಮಿಕ ಪಕ್ಷವಾಯಿತು ಇಹ ಜೀವನ ಮತ್ತು ಅದರ ಸಮಸ್ಯೆಗಳ ವಿಚಾರದಲ್ಲಿ ಅವರ ಅಭಿಪ್ರಾಯವು ಹೀಗೆಯೇ ಇರುವುದು ಅದಕ್ಕೂ ರಾಜಕೀಯ, ಆರ್ಥಿಕ ಅಥವಾ ಸಾಮಾಜಿಕ ನೀತಿಗಳಿಗೂ ಏನೇನೂ ಸಂಬಂಧವಿಲ್ಲವೆಂದಂತಾಯಿತು ಇಷ್ಟಾದರೂ ಗಾಂಧಿಜಿಯವರು ರಾಜಕೀಯ ಹಾಗೂ ದೇಶೀಯ ಮಂಡಲಗಳಲ್ಲಿ ಇದಕ್ಕಿಂತ ಏಷ್ಟೋ ಮುಂದೆ ಹೋಗುತ್ತಾರೆ.

ಹಿಂದೂಸ್ಥಾನದ ಮುಂದಿರುವ ವಿರೋಧಾಭಾಸಗಳಲ್ಲಿ ಇವು ಕೆಲವು ನಮ್ಮಲ್ಲಿ ನಾವೇ ಅನೇಕ ಗಂಟುಗಳನ್ನು ಮುರುಟುಮುರುಟಾಗಿ ಹಾಕಿ ಸುರುಟಿಕೊಂಡಿದ್ದೇವೆ ಆ ಗಂಟುಗಳನ್ನೆಲ್ಲಾ ಬಿಚ್ಚಿ ಎಸೆದ ಹೊರತು ಮುಂದುವರಿಯಲು ಸಾಧ್ಯವಿಲ್ಲ ಆ ಬಿಡುಗಡೆಯು ಮನೋಭಾವಗಳಲ್ಲಿ ಹುಟ್ಟಿ ಬರುವುದಿಲ್ಲ ಬಹು ಹಿಂದೆ ಸ್ಪಿನೋಸಾ ಯಕ್ಷ ಪ್ರಶ್ನೆ ಹಾಕಿದ್ದಾನೆ "ಜ್ಞಾನ ಮತ್ತು ತಿಳಿವಳಿಕೆಯ ಮೂಲಕ ಸ್ವಾತಂತ್ರ್ಯ ಬೇಕೋ, ಅಥವಾ ರಾಗದ್ವೇಷಗಳ ಬಂಧನ ಬೇಕೋ?" ಅವನಿಗೆ ಮೊದಲನೆಯದರಲ್ಲಿ ಅಭಿಮಾನವಂತೆ

೬೩

# ಮತಾಂತರವೋ ಬಲಾತ್ಕಾರವೋ

ಗಾಂಧಿಜಿಯವರು ೧೬ ವರ್ಷಗಳ ಹಿಂದ ಭರತಖಂಡದ ಹೃದಯದಲ್ಲಿ ಅಹಿಂಸೆಯ ಬೀಜವನ್ನು ಬಿತ್ತಿದರು ಅಂದಿನಿಂದ ಅದು ಭಾರತೀಯ ಹೃದಯಾಕಾಶದಲ್ಲಿ ಅಚ್ಚಳಿಯದೇ ಬೆಳಗುತ್ತಿದೆ ಲಕ್ಷಾಂತರ ಜನರು ನಿರ್ವಿಚಾರಿಗಳಾಗಿ, ಆದರೂ ಪ್ರೀತಿಯಿಂದ ಅದನ್ನು ಜಪ ಮಾಡುತ್ತಿದ್ದಾರೆ. ಕೆಲವರು ಅದನ್ನು ಮೊದ ಮೊದಲು ವಿರೋಧಿಸಿ ಆಮೇಲೆ ಪೂರ್ಣವಾಗಿಯೋ ಅಥವಾ ಅಪೂರ್ಣವಾಗಿಯೋ, ಅಂತೂ ಅಂಗೀಕರಿಸಿದ್ದಾರೆ ಮತ್ತೆ ಕೆಲವರು ಸ್ಪಷ್ಟವಾಗಿ ಅದನ್ನು ಅಪಹಾಸ್ಯ ಮಾಡಿದ್ದಾರೆ ಇಂದಿನ ನಮ್ಮ ರಾಜಕೀಯ ಮತ್ತು ಸಾಮಾಜಿಕ ಜೀವನದಲ್ಲಿ ಅದು ಬಹಳ ಪರಿಣಾಮವನ್ನು ಮಾಡಿದೆ. ಅಷ್ಟೇ ಅಲ್ಲ ವಿಶಾಲ ಪ್ರಪಂಚದಲ್ಲೂ ಅದರ ಮೇಲೆ ಬೇಕಾದಷ್ಟು ಗಮನಬಿದ್ದಿದೆ. ಈ ತತ್ವವು ವಾಸ್ತವವಾಗಿ ನೋಡಿದರೆ ಬಹಳ ಪುರಾತನವಾದುದು ಆದರೂ ರಾಜಕೀಯ ಮತ್ತು ಸಾಮಾಜಿಕ ಆಂದೋಳನಗಳಲ್ಲಿ ಗುಂಪು ಗುಂಪಾಗಿಯೂ ಅದನ್ನು ಆಚರಣೆಗೆ ತರುವಂತೆ ಮಾಡಿದ ಕೀರ್ತಿಯು ಗಾಂಧಿಜಿಯವರಿಗೆ ಸಲ್ಲತಕ್ಕದ್ದು ಪೂರ್ವದಲ್ಲಿ ಅದು ಒಂದು ವೈಯಕ್ತಿಕ ವಿಷಯವಾಗಿದ್ದುದರಿಂದ, ಅದು ಸಾರಭೂತವಾಗಿ ಧಾರ್ಮಿಕ ವಿಷಯವಾಗಿತ್ತು ವ್ಯಕ್ತಿಯು ತನ್ನನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ಸಂಪೂರ್ಣ ವೈರಾಗ್ಯವನ್ನು ಪಡೆದು ಪ್ರಪಂಚದ ಸುಖದುಃಖಗಳಿಗೆ ಅತೀತನಾಗಿ ತನ್ನ ಆತ್ಮೀಯ ಸ್ವಾತಂತ್ರ್ಯ, ಮೋಕ್ಷಗಳನ್ನು ಸಾಧಿಸಿಕೊಳ್ಳುವುದಕ್ಕೆ ಅದು ಒಂದು ಸಾಧನವಾಗಿತ್ತು ವಿಶಾಲವಾದ ಸಾಮಾಜಿಕ ಸ್ಥಿತಿಗತಿಗಳನ್ನೂ ಪ್ರತ್ಯಕ್ಷವಾಗಿ ತಿದ್ದಿ ರೂಪುಗೊಳಿಸುವ ಸಾಧನವು ಅದು ಆಗಬಲ್ಲುದೆಂಬ ಭಾವನೆಯು ಯಾರಿಗೂ ಇರಲಿಲ್ಲ ಎಷ್ಟೇ ಅನ್ಯಾಯವಾಗಿರಲಿ, ಎಷ್ಟೇ ಹೆಚ್ಚುಕಡಿಮೆಗಳು ಇರಲಿ, ಆಗಿನ ಕಾಲದಲ್ಲಿ ಪ್ರಚಾರದಲ್ಲಿರುವ ಸಾಮಾಜಿಕ ವ್ಯವಸ್ಥೆಯನ್ನೇ ಅಂಗೀಕರಿಸುವುದು ಒಂದು ರೂಢಿಯಾಗಿ ಹೋಗಿತ್ತು ಗಾಂಧಿಜಿಯವರು ವೈಯಕ್ತಿಕವಾಗಿದ್ದ ಈ ತತ್ವವನ್ನು ಸಾಮೂಹಿಕವನ್ನಾಗಿ ಮಾಡಿದರು. ಇದೇ ಒಂದು ವಿಶೇಷ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ಬದಲಾಯಿಸುವುದನ್ನು ಲಕ್ಷ್ಯದಲ್ಲಿಟ್ಟುಕೊಂಡು ಮನಃಪೂರ್ವಕವಾಗಿ ಈ ಶಾಂತ ಅಹಿಂಸಾ ಮಾರ್ಗವನ್ನು ಹಿಡಿದರು ಅವರು ಮಾನವ ಸಮಾಜದ ಪರಿಸ್ಥಿತಿಯಲ್ಲಿಯೂ ಸುತ್ತುಮುತ್ತಲೂ ಅಪೂರ್ವವಾದ ಬದಲಾವಣೆಯನ್ನು ಮಾಡಬೇಕೆಂದುಕೊಂಡರು. '' ಸಮಾಜದಲ್ಲಿ ಒಂದು ಕ್ರಾಂತಿಯನ್ನು ಎಬ್ಬಿಸಿದಲ್ಲದೇ ಯಾರೂ ಕೃತಕಾರ್ಯರಾಗುವುದಿಲ್ಲ ಈ ಕ್ರಾಂತಿಯನ್ನು ಸಾಧಿಸುವುದಕ್ಕೆ ಎರಡೇ ಎರಡು ಮಾರ್ಗಗಳು ಒಂದು

ಹಿಂಸಾಮಾರ್ಗ, ಇನ್ನೊಂದು ಅಹಿಂಸಾಮಾರ್ಗ ಆ ಹಿಂಸಾಮಾರ್ಗದ ಪರಿಣಾಮವು ದೇಹದ ಮೇಲಾಗಿ ಅದರಿಂದ ಇದನ್ನು ಉಪಯೋಗಿಸುವವನೂ, ಇದಕ್ಕೆ ಗುರಿಯಾದವನೂ, ಇಬ್ಬರೂ ಕೀಳಾಗಿ ಹೋಗುವರು ಅಹಿಂಸಾಮಾರ್ಗದಿಂದ ತಾನು ಬಲಿಯಾಗಿ ಉಪವಾಸಾದಿಗಳನ್ನು ಮಾಡಿ ಹಣ್ಣಾಗಿ ಅವಲಂಬಿಸುವ ಮಾರ್ಗವು ದೇಹವನ್ನು ಮುಟ್ಟದೆ ಕೆಲಸಮಾಡುತ್ತದೆ ಯಾರ ವಿರೋಧವಾಗಿ ನಾವು ಅದನ್ನು ಉಪಯೋಗಿಸುವೆವೋ ಅವರ ನೀತಿಯನ್ನು ಸರಿಪಡಿಸಿ ಅದನ್ನು ದೃಢಪಡಿಸುತ್ತದೆ'' * ಎಂದು ಹೇಳಿದ್ದಾರೆ

ಈ ಭಾವನೆಯು ಭರತಖಂಡದ ಭಾವನಾ ಪ್ರಪಂಚಕ್ಕೆ ಹೊಸತಲ್ಲ ಹಾಗೆಯೇ ಕೊಂಚಮಟ್ಟಿಗೆ ಹೊಂದಿಕೊಂಡುದೂ ಹೌದು ಆದರಿಂದ ಇದನ್ನು ಬಹಳ ಆದರದಿಂದ ದೇಶವು ಸ್ಥೂಲವಾಗಿಯಾದರೂ ಒಪ್ಪಿಕೊಂಡಿತು ಇದರಿಂದ ಅಷ್ಟು ಭಾರಿ ಪರಿಣಾಮವಾಗುವುದೆಂದು ಯಾರೂ ನಂಬಿರಲಿಲ್ಲ. ಇದರಲ್ಲಿ ನಂಬಿಕೆಯನ್ನು ಇಟ್ಟು ಕೆಲವರು ಮಾತ್ರ—ಅವರೇ ಇದರ ಭಾರಿ ಪರಿಣಾಮವನ್ನು ನಂಬಿದ್ದವರು—ಇದನ್ನು ಅಂಗೀಕರಿಸಿ ಇದನ್ನು ಜಾರಿಗೆ ತಂದರು ಆದರೆ ಕಾರ್ಯದ ಭಾರವು ಶಿಥಿಲವಾದಾಗ ಕೆಲವರ ಮನಸ್ಸಿನಲ್ಲಿ ಅನೇಕಾನೇಕ ಪ್ರಶ್ನೆಗಳು ಮೊಳೆತುವು. ಅವುಗಳಿಗೆಲ್ಲಾ ಉತ್ತರವನ್ನು ಕೊಡುವುದು ಬಹಳ ಅಸಾಧ್ಯವಾಯಿತು ಈ ಪ್ರಶ್ನೆಗಳು ಈ ಅಹಿಂಸಾ ಸಮರವೆಂಬ ಭಾವನೆಯ ಹಿಂದೆ ಇರುವ ವೇದಾಂತವನ್ನು ಕುರಿತು ವಿಚಾರ ನಡೆಸಿದುವೇ ಹೊರತು ರಾಜನೀತಿಯಲ್ಲಿ ಅನುಸರಿಸಬೇಕಾದ ಮಾರ್ಗವನ್ನು ಬದಲಾಯಿಸಲಿಲ್ಲ ಈ ಅಹಿಂಸಾ ಚಳವಳಿಯು ಸಾಮ್ರಾಜ್ಯವಾದಿಗಳ ಕೈಗೆ ಭದ್ರವಾಗಿ ಸಿಕ್ಕಿಹೋಗಿರುವ ಹಿಂದೂಸ್ಥಾನದಲ್ಲಿ ರಾಜಕೀಯವಾಗಿ ಅಷ್ಟು ಯಶಸ್ವಿಯಾಗಿಲ್ಲ ಸಾಮಾಜಿಕ ರೀತಿಯಲ್ಲಿ ಆದರಿಂದ ಆಗಿರುವ ಬದಲಾವಣೆಯು ಇನ್ನೂ ಸ್ವಲ್ಪ ಆದರೂ ಇದರಿಂದ ಹಿಂದೂಸ್ಥಾನದ ಪ್ರಜಾವರ್ಗದಲ್ಲಿ ಅದ್ಭುತವಾದ ಬದಲಾವಣೆ ಆಗಿದೆಯೆಂಬುದನ್ನು ಯಾರು ಬೇಕಾದರೂ ಕಾಣಬಹುದು ಇದರಿಂದ ಪ್ರಜಾವರ್ಗಕ್ಕೆ ಧೈರ್ಯ ಬಂದಿದೆ ಅವರೀಗ ಧೀರರಾಗಿದ್ದಾರೆ ಸಮರ್ಥರೂ ಆಗಿದ್ದಾರೆ ಆತ್ಮವಿಶ್ವಾಸವುಳ್ಳವರೂ ಆಗಿದ್ದಾರೆ ರಾಜಕೀಯ ಅಥವಾ ಸಾಮಾಜಿಕ ಪ್ರಗತಿಗಳಲ್ಲಿ ಯಾವಯಾವ ಗುಣಗಳು ಇಲ್ಲದಿದ್ದರೆ ಮುಂದುವರಿಯುವುದು ಅಸಾಧ್ಯವೋ ಅಂತಹ ಅತ್ಯುತ್ತಮ ಗುಣಗಳನ್ನು ಈ ಅಸಹಕಾರ ಸಮರವು ಜನಗಳಿಗೆ ಸಂಪಾದಿಸಿಕೊಟ್ಟಿದ ಕೆಲವು ವೇಳೆ ಈ ಲಾಭವು— ಅವು ಲಾಭಗಳು ಎಂಬುದರಲ್ಲಿ ಸಂದೇಹವಿಲ್ಲ—ಅಹಿಂಸೆಯದು ಅಥವಾ ಹಿಂಸಾಸಮರದ್ದು ಎಂದು ಹೇಳುವುದು ಕಷ್ಟ ಕೆಲವು ವೇಳೆ

* ಗಾಂಧಿಜಿಯವರು ಡಿಸೆಂಬರ್ ೪, ೧೯೩೨ ರಲ್ಲಿ ತಮ್ಮ ಉಪವಾಸದ ಸಂದರ್ಭದಲ್ಲಿ ಆಡಿದ ಮಾತಿನಿಂದ ತೆಗೆದುಕೊಂಡುದು

ಗಳಲ್ಲಿ ಇಂತಹ ಲಾಭಗಳನ್ನು ಹಿಂಸಾಮಾರ್ಗದಿಂದ ಸಂಪಾದಿಸಿರುವುದೂ ಉಂಟು ಆದರೂ ಹಿಂದೂಸ್ಥಾನದಲ್ಲಿರುವ ನಮಗೆ ಈ ಅಹಿಂಸಾ ಚಳವಳಿಯಿಂದ ಆಗಿರುವ ಲಾಭವು ಅಪಾರವೆಂದು ನನ್ನ ದೃಢ ನಂಬಿಕೆ ಗಾಂಧಿಜಿಯವರು ಪದೇ ಪದೇ ಹೇಳುವ 'ಸಮಾಜದಲ್ಲಿ ಆಂದೋಳನ' ವೆಂಬುದನ್ನು ಇದು ನಿಜವಾಗಿಯೂ ಎಬ್ಬಿಸಿದೆ. ಆಂದೋಳನವು ಇನ್ನೂ ಇತರ ಮೂಲಕಾರಣಗಳ ಫಲವೆಂಬುದೂ ನಿಜ ಆದರೂ ಕ್ರಾಂತಿಗಳ ಪೂರ್ವರಂಗವಾಗಿ ಪ್ರಜಾವರ್ಗದಲ್ಲಿ ಜಾಗ್ರತಿಯನ್ನು ಹಬ್ಬಿಸುವುದರಲ್ಲಿ ಅದು ಬಹುಮಟ್ಟಿಗೆ ಕಾರ್ಯಕಾರಿಯಾಗಿದೆ

ಇದು ಆದರಿಂದ ಆಗಿರುವ ಅನುಕೂಲ ಆದರೆ ನಮಗೆ ಇದಿಷ್ಟು ಸಾಲದು ಇನ್ನೂ ನಿಜವಾಗಿಯೂ ಪ್ರಶ್ನೆಗಳಾವುದಕ್ಕೂ ತಕ್ಕ ಉತ್ತರವು ದೊರೆತಿಲ್ಲ ಗಾಂಧಿಜಿಯವರು ನಮಗೆ ಹಾಗೆ ಆ ಸಮಸ್ಯೆಗಳನ್ನು ಬಗೆಹರಿಸಲು ಬಹಳವಾಗಿ ನೆರವಾಗದಿರುವುದು ನಮ್ಮ ದುರದೃಷ್ಟ ಇದೇ ಸಂಬಂಧವಾಗಿ ಅವರು ಹಲವು ಸಲ ಬರೆದಿದ್ದಾರೆ, ಮಾತನಾಡಿದ್ದಾರೆ ಆದರೂ ಈ ಅಹಿಂಸಾ ವಿಷಯವನ್ನು ಕೂಲಂಕಷವಾಗಿ, ದಾರ್ಶನಿಕವಾಗಿ ಅಥವಾ ಶಾಸ್ತ್ರೀಯವಾಗಿ ಗಾಂಧಿಜಿಯವರು ಸಂಪೂರ್ಣವಾಗಿ ವಿಚಾರ ಮಾಡಿಯೇ ಇಲ್ಲವೆಂದು ನನ್ನ ಭಾವನೆ* ಅವರು " ಸಿದ್ಧಿಗಿಂತಲೂ ಸಾಧನವು ಹೆಚ್ಚು, ಬಲಾತ್ಕಾರಕ್ಕಿಂತಲೂ ಮತಾಂತರವು ಲೇಸು " ಎಂದು ಹೇಳುವರು ಮತ್ತು " ಅಹಿಂಸೆಯೇ ಪರಮಾರ್ಥ, ಅದಕ್ಕಿಂತಲೂ ಉತ್ತಮವಾದುದು ಇನ್ನು ಇಲ್ಲ" ಎಂದೂ ಹೇಳುವರು ಅನೇಕವೇಳೆ ಅವರು ಅದೇ ಅರ್ಥದಲ್ಲಿ ಅಹಿಂಸೆ ಎಂಬ ಪದವನ್ನೇ ಉಪಯೋಗಿಸಿರುವುದೂ ಉಂಟು. ಮತ್ತು '' ಈ ಮತವನ್ನು ಒಪ್ಪದವರು ಅಂಗೀಕರಿಸದವರು ಯೋಗ್ಯರ ಪಂಕ್ತಿಗೆ ಅನರ್ಹರು, ನೀತಿಬಾಹ್ಯರು, " ಎಂದು ಭಾವಿಸುವುದೂ ಉಂಟು ಗಾಂಧಿಜಿಯವರ ಅನುಯಾಯಿಗಳಲ್ಲಿ ಅನೇಕರಿಗೆ ಆ ಅಹಿಂಸಾ ಮಾರ್ಗವನ್ನು ಒಪ್ಪದವರ ಮೇಲೆ ಆಗ್ರಹ ಬಂದಿರುವುದೂ ಉಂಟು

ಈ ಮತವನ್ನು ಅಂಗೀಕರಿಸಿದ ನಮ್ಮಂತಹ ದುರದೃಷ್ಟವಂತರಿಗೆ ಸಂದೇಹಗಳು ಬಹಳ ಈ ಸಂದೇಹಗಳು ಸದ್ಯದಲ್ಲಿ ಆಗಬೇಕಾದವುಗಳಿಗೆ ಸಂಬಂಧಪಟ್ಟಿಲ್ಲ ಆದರೆ ವೈಯಕ್ತಿಕ ದೃಷ್ಟಿಯಿಂದ ನೀತಿಯುತವಾಗಿದ್ದರೂ, ಸಾಮಾಜಿಕ ದೃಷ್ಟಿಯಿಂದ ಕಾರ್ಯಕಾರಿಯಾಗುವಂತಹ ಪೂರ್ವಾಪರ ವಿರೋಧವಿಲ್ಲದ ಒಂದು ಕರ್ಮ ವೇದಾಂತವು ಕಣ್ಣೆದುರಿಗೆ ಇರಬೇಕೆಂಬ ಆಶೆಯಿಂದ ಹುಟ್ಟಿರುವ ಸಂದೇಹಗಳಿವು ಈ ಸಂದೇಹಗಳು ನನಗೆ ಇನ್ನೂ ನಿವಾರಣೆಯಾಗಿಲ್ಲ. ಈ ಸಮಸ್ಯೆ ಇನ್ನೂ ನನಗೆ ಬಗೆಹರಿದಿಲ್ಲ

* ರಿಚರ್ಡ್ ಬಿ ಗ್ರೆಗ್‌ರವರು ತಮ್ಮ 'ದಿ ಪವರ್ ಆಫ್ ನಾನ್–ವಯೊಲೆನ್ಸ್' (ಅಹಿಂಸೆಯ ಶಕ್ತಿ) ಎಂಬ ಗ್ರಂಥದಲ್ಲಿ ಈ ವಿಷಯವನ್ನು ಶಾಸ್ತ್ರೀಯವಾಗಿ ಚರ್ಚಿಸಿದ್ದಾರೆ ಅವರ ಗ್ರಂಥವು ಅತ್ಯಂತ ಸ್ವಾರಸ್ಯವಾಗಿಯೂ ವಿಚಾರ ಪ್ರಚೋದಕವಾಗಿಯೂ ಇದೆ

ನನಗೆ ಹಿಂಸೆಯನ್ನು ಕಂಡರೆ ಆಗುವದೇ ಇಲ್ಲ ಆದರೂ ನಾನು ಸಂಪೂರ್ಣವಾಗಿ ಹಿಂಸಾಪರ ತಿಳಿದೋ ತಿಳಿಯದೆಯೋ ನಾನು ಅನೇಕವೇಳೆ ಇತರರನ್ನು ಬಲವಂತ ಮಾಡುತ್ತೇನೆ ಗಾಂಧಿಜಿಯವರು ತಮ್ಮ ನಿಕಟ ಸಹೋದ್ಯೋಗಿಗಳ ಮೇಲೂ ಅನುಯಾಯಿಗಳ ಮೇಲೂ ತಮ್ಮ ಆತ್ಮಿಕ ಬಲಾತ್ಕಾರವನ್ನು ಪ್ರಯೋಗಿಸಿ ಅವರನ್ನು ಮಣ್ಣಿನ ಮುದ್ದೆಯನ್ನಾಗಿ ಮಾಡಿಬಿಟ್ಟದ್ದಾರೆ ಇನ್ನೂ ಇದಕ್ಕಿಂತಲೂ ಹೆಚ್ಚು ಬಲಾತ್ಕಾರವು ಬೇರೊಂದುಂಟೇನು ?

ಆದರೆ ನಮ್ಮ ಮುಂದಿರುವ ಪ್ರಶ್ನೆಯೇ ಬೇರೆ! ಅಹಿಂಸೆಯು ಫಲಕಾರಿಯಾಗ ಬೇಕಾದರೆ ಉತ್ತಮ ವರ್ಗದ ಪ್ರೇಮ ಮತ್ತು ಸೌಜನ್ಯಗಳು ಮನುಷ್ಯನ ಹೃದಯದಲ್ಲಿ ಉದ್ಭವಿಸಿ ಅವನನ್ನು ಬಹಳ ಮೇಲಿನ ಮೆಟ್ಟಲಿಗೆ ಎತ್ತಬೇಕು ಇದು ಸಾಧ್ಯವೋ ? ವೈಯಕ್ತಿಕ ಮತವಾದ ಈ ಅಹಿಂಸೆಯು ಜನಗಳಿಗೆ, ಜನಾಂಗಗಳಿಗೆ ಅರ್ಥವಾಗುವುದೋ ? ಇದನ್ನು ಅವರು ಕಾರ್ಯರೂಪದಲ್ಲಿ ತರಬಲ್ಲಷ್ಟು ತಿಳಿವಳಿಕೆಯುಳ್ಳವರಾಗುವರೋ ? ಎಂಬುದೇ ಒಂದು ದೊಡ್ಡ ಪ್ರಶ್ನೆ ಮಾನವನನ್ನು ಈ ಮಟ್ಟಕ್ಕೆ ಎತ್ತಿ, ದ್ವೇಷ, ವಕ್ರತೆ ಮತ್ತು ಸ್ವಾರ್ಥತೆಗಳನ್ನು ಧ್ವಂಸಮಾಡಿ ಅವನನ್ನು ಉದ್ಧರಿಸುವುದೇ ನಿಜವಾಗಿಯೂ ಮಾಡಬೇಕಾಗಿರುವ, ಆಗಬೇಕಾಗಿರುವ ಕಾರ್ಯ ಎಂಬುದರಲ್ಲಿ ಯಾರೂ ಎರಡು ಮಾತನಾಡುವಂತೆ ಇಲ್ಲ ಆದರೆ ಕಾಲ ಕಾಲಾಂತರದಲ್ಲಾದರೂ ಇದು ಸಾಧ್ಯವೋ ಎಂಬುದು ವಿವಾದಾಸ್ಪದ ವಿಷಯ ಆದರೆ ಒಂದು ಭಾವನೆ ಇಲ್ಲದೆ ಬಾಳು ಬದುಕಿರುವುದೆಂದರೆ ಮೂರ್ಖನು ಹೇಳಿದ ಕಥೆಯಂತೆ ಶಬ್ದಾಡಂಬರ ಬೇಕಾದಷ್ಟಿದ್ದರೂ ಅರ್ಥವಿಲ್ಲದೆ ಹೋಗಿ ವ್ಯರ್ಥವಾಗುವುದು ಎಂಬುದು ನಿಜ. ಇಂತಹ ಸಿದ್ಧಿಯು ಲಭಿಸಬೇಕಾದರೆ ಪ್ರತಿಪಕ್ಷದವರು ತಂದೊಡ್ಡುವ ವಿಘ್ನ ಪರಂಪರೆಗಳನ್ನೂ ಇವುಗಳಿಂದಾಗುವ ಅನರ್ಥಗಳನ್ನೂ ಉಪದೇಶಮಾಡುತ್ತ ನೇರವಾಗಿ ಕಾರ್ಯರಂಗಕ್ಕೆ ಇಳಿಯುವುದೇ ? ಅಥವಾ ಈ ವಿಘ್ನಪರಂಪರೆಗಳನ್ನು ಅತ್ತತಳ್ಳಿ ಈ ಪ್ರೇಮ, ಸೌಂದರ್ಯ, ಸೌಜನ್ಯ—ಇವುಗಳ ಬೆಳವಣಿಗೆಗೆ ಬೇಕಾಗಿರುವ, ಅನುಕೂಲವಾಗಿರುವ ವಾತಾವರಣವನ್ನು ಕಲ್ಪಿಸಿಕೊಳ್ಳುವುದೇ ? ಅಥವಾ ಈ ಎರಡು ಮಾರ್ಗಗಳನ್ನೂ ಸಮಸಮವಾಗಿ ಬೆರಸುವುದೇ! ಏನುಮಾಡಬೇಕು ?

ಅಲ್ಲದೆ ಹಿಂಸೆಗೂ ಅಹಿಂಸೆಗೂ, ಬಲವಂತಕ್ಕೂ ಮತಾಂತರಕ್ಕೂ ಇಷ್ಟು ಪ್ರಬಲವಾದ ಭೇದವಿರುವುದೇನು ? ಅನೇಕಾನೇಕ ವೇಳೆಗಳಲ್ಲಿ ಶಾರೀರಕ ಹಿಂಸೆಗಿಂತಲೂ ಸೌಜನ್ಯದ ಪ್ರಭಾವವು ಬಲವತ್ತರವಾದ ಆಯುಧವಾಗುವುದಿಲ್ಲವೇ ? ಅಹಿಂಸೆಯೆಂಬುದು, ಸತ್ಯವೆಂಬುದು ಎರಡೂ ಒಂದೆಯೇ ? ಸತ್ಯವೆಂದರೇನು ಎಂಬುದು ಬಹು ಬಹು ದಿವಸದ ಪ್ರಶ್ನೆ ಆದಕ್ಕೆ ಅನೇಕಾನೇಕರು ಅನೇಕಾನೇಕ ಉತ್ತರಗಳನ್ನು ಕೊಟ್ಟಿದ್ದರೂ ಇನ್ನೂ ಪ್ರಶ್ನೆಯು ಪ್ರಶ್ನೆಯಾಗಿಯೇ ಉಳಿದಿದೆ ಇದು ಎತ್ತಲಾದರೂ ಹೋಗಲಿ ಸತ್ಯವೆಂಬುದು ಅಹಿಂಸಾ ಮಾತ್ರವಲ್ಲ ಹಿಂಸೆ ಎಂಬುದು ಕೂಡ

ಕೆಟ್ಟುದೇ ಆದರೂ ಸಂಪೂರ್ಣವಾಗಿ ಅನೀತಿಯೆಂದು ಹೇಳಲಾಗುವುದಿಲ್ಲ ಇದರಲ್ಲಿ ಎಷ್ಟೋ ಭೇದ ಪ್ರಭೇದಗಳು ಇವೆ ಇದಕ್ಕಿಂತಲೂ ನೀಚವಾದವೂ ಎಷ್ಟೋ ಇವೆ "ಹೇಡಿತನಕ್ಕಿಂತ, ಹೆದರಿಕೆಗಿಂತ, ಗುಲಾಮಗಿರಿಗಿಂತ, ಹಿಂಸೆಯೇ ಎಷ್ಟೋ ಶ್ರೇಷ್ಠ" ಎಂದು ಗಾಂಧಿಜಿಯವರೇ ಹೇಳಿದ್ದಾರ ಹಿಂಸೆಗಿಂತಲೂ ಕಡೆಯಾಗಿರುವ ದುರ್ಗುಣ ಗಳು ಇನ್ನೂ ಎಷ್ಟೋ ಇವೆ ಹಿಂಸೆ ಎಂಬುದು ಸಾಮಾನ್ಯವಾಗಿ ದೌರ್ಜನ್ಯದ ಸಂಬಂಧ ಉಳ್ಳದ್ದು ಎಂಬುದು ನಿಜ ಆದರೆ ಸದಾ ಹೀಗೆಯೇ ಇರಬೇಕಾಗಿಲ್ಲವೆಂದು ಮಾತಿನಿಂದಲಾದರೂ ಹೇಳಬಹುದು ಅನೇಕವೇಳೆ ಹಿಂಸೆಯು ಒಳ್ಳೆಯ ಮನಸ್ಸಿ ನಿಂದಲೇ ಬಂದಿರಬಹುದು (ವೈದ್ಯರಲ್ಲಿರುವ ಹಾಗೆ) ಹಾಗೆ ಒಳ್ಳೆಯ ಮನಸ್ಸಿನಿಂದ ಬಂದ ಹಿಂಸೆಯನ್ನು ಸಂಪೂರ್ಣವಾಗಿ ಅನೀತಿಯುತವಾದುದೆಂದು ಹೇಳುವುದೆಂತು? ಎಲ್ಲಾ ಹೇಳಿ ಕೇಳಿ, ಕೊನೆಯಲ್ಲಿ ಯಾವ ಕಾರ್ಯವೇ ಆಗಲಿ ಒಳ್ಳೆಯ ಮನಸ್ಸಿನಿಂದ ಮಾಡಿದರೆ ಒಳ್ಳೆಯದು ಕೆಟ್ಟ ಮನಸ್ಸಿನಿಂದ ಮಾಡಿದ್ದರೆ ಕೆಟ್ಟದ್ದು ಎಂದೇ ಆಗುವುದು ಆದರಿಂದ ಹಿಂಸೆಯು ಅನೇಕಾನೇಕವೇಳೆ ನೀತಿಯ ದೃಷ್ಟಿಯಿಂದ ನ್ಯಾಯ ವಾಗಿಲ್ಲದಿದ್ದರೂ ಮತ್ತು ಅದೇ ದೃಷ್ಟಿಯಿಂದ ಅಪಾಯಕಾರಿಯಾಗಿದ್ದರೂ ಇದು ಯಾವಾಗಲೂ ಹಾಗೆಯೇ ಎಂದು ಹೇಳಲಾಗುವುದಿಲ್ಲ

ಜೀವನವೆಲ್ಲವೂ ಹೋರಾಟ ಮತ್ತು ಹಿಂಸೆಗಳಿಂದ ಕೂಡಿದ್ದು, ಹಿಂಸೆಯಿಂದ ಹಿಂಸೆಯು ಹುಟ್ಟುವುದು ಆದರಿಂದ ಹಿಂಸೆಯನ್ನು ಕೊಲ್ಲುವುದಕ್ಕೆ ಹಿಂಸೆಯೇ ಸಾಧನವಲ್ಲವೆಂಬುದೂ ನಿಜವಿದ್ದಂತೆ ಇದೆ ಆದರೂ ಹಿಂಸೆಯನ್ನು ಸಂಪೂರ್ಣವಾಗಿ ತೊರೆಯುವುದು ಎಂದರೆ ಮಾನವಜೀವನವನ್ನು ಮರೆತು ಪೂರ್ಣವಾಗಿ ಅಭಾವವಾಗಿ ರುವ ಮನೋ ಮುದ್ರೆಯನ್ನು ತಳೆದಂತೆ ಆಧುನಿಕ ರಾಜಸತ್ತೆಯ ಮತ್ತು ಸಾಮಾ ಜಿಕ ವ್ಯವಸ್ಥೆಯ ಜೀವಸ್ವರವಿರುವುದು ಹಿಂಸೆಯಲ್ಲಿ ರಾಜಸತ್ತೆಯ ಪ್ರಬಲ ಒತ್ತಡವಿ ಲ್ಲದಿದ್ದರೆ ಯಾರಾದರೂ ಕಂದಾಯವನ್ನು ಕೊಡುವರೇ? ಭೂಸ್ವಾಮಿಗಳು ತಮಗೆ ಬರಬೇಕಾದ ಆದಾಯವನ್ನು ಪಡೆಯಬಲ್ಲರೇನು? ವೈಯಕ್ತಿಕ ಆಸ್ತಿಯು ಉಳಿಯು ವುದೇನು? ಈಗಿರುವ ಕಟ್ಟು ಕಾಯಿದೆಗಳು ಒಬ್ಬರ ಆಸ್ತಿಯನ್ನು ಮತ್ತೊಬ್ಬರು ಅಪ ಹರಿಸದಂತೆ ಕಾಪಾಡುತ್ತಿರುವುದು ತಮ್ಮ ಆಯುಧದ ಸೈನ್ಯಗಳ ಸಹಾಯದಿಂದ ರಾಷ್ಟ್ರೀಯ ರಾಜಸತ್ತೆಯ ಉಳಿವು ಇರುವುದು ಕೂಡ ಇತರರ ಮೇಲೆ ತನ್ನ ಪ್ರಭಾವ ವನ್ನು ತೋರಿಸಬಲ್ಲ, ಮತ್ತು ತನ್ನನ್ನು ತಾನು ಕಾಪಾಡಿಕೊಳ್ಳಬಲ್ಲ ಹಿಂಸೆಯನ್ನು ಆಶ್ರಯಿಸಿರುವುದರಿಂದಲೇ

ಗಾಂಧಿಜಿಯವರ ಅಹಿಂಸೆಯು ಸಂಪೂರ್ಣವಾಗಿ ನೀತಿಸ್ವರೂಪವಾದ್ದಲ್ಲ, ನಿಜ; ಆದರೆ ಅದು ಅಸಮರವಲ್ಲ, ಅದು ಅಹಿಂಸಾ ಸಮರ ಇದೇ ಒಂದು ಬೇರೆ ಜಾತಿ, ಇದರ ಲ್ಲೊಂದು ಭಾವವಿದೆ. ವಿಜೃಂಭಿಸುವಂತೆ ಮಾಡುವ ಕಾರ್ಯಕಲಾಪವಿದೆ ಇದನ್ನು ಬರಿಯ ಅಹಿಂಸೆ ಎಂದು ಸಾಧುವಾಗಿ ಒಪ್ಪಿಕೊಳ್ಳುವವರ ಸಲುವಾಗಿ ಹುಟ್ಟಿದ್ದು

ಇದು ಅಲ್ಲ ಸಮಾಜದಲ್ಲಿ ಒಂದು ಆಂದೋಳನ'ವನ್ನು ಎಬ್ಬಿಸಬೇಕು. ಆ, ಆಂದೋಳನದ ಫಲವಾಗಿ ಆಗಿನ ವ್ಯವಸ್ಥೆಯು ಬೇರೆಯಾಗಬೇಕೆಂಬುದು ಇದನ್ನು ಸಿದ್ಧಿ ಮಾಡಿದುದರ ಉದ್ದೇಶ ಆದರ ಹಿಂದೆ ಮತಾಂತರಗೊಳಿಸುವ ಉದ್ದೇಶಗಳೇನೇನೇ ಇರಲಿ, ಕಾರ್ಯರೂಪದಲ್ಲಿ ಅದೊಂದು ಬಲಾತ್ಕಾರ ಸಾಧನವಾಗಿದೆ ಆ ಬಲಾತ್ಕಾರವು ಬಹುಕಾರಣಗಳಿಂದಾಗಿರಬಹುದು ಮನಸ್ಸಿಗೆ ಸ್ವಲ್ಪವೂ ಅಸಹನವಾಗದಂತೆ ಇರಬಹುದು, ಆದರೂ ಅದು ಬಲಾತ್ಕಾರ ಸಾಧನವೇನೋ ಹೌದು. ಗಾಂಧಿಜಿಯವರು ಆ ಬಲವಂತ ಎಂಬ ಮಾತನ್ನೇ ಮೊದಮೊದಲು ತಮ್ಮ ಬರವಣಿಗೆಯಲ್ಲಿ ಉಪಯೋಗಿಸುತ್ತಿದ್ದರು ೧೯೨೦ ರಲ್ಲಿ ಪಂಜಾಬಿನ ಸಮರ ಶಾಸನದ ಅನ್ಯಾಯಗಳನ್ನು ಕುರಿತು ವೈಸ್‌ರಾಯ್ (ಲಾರ್ಡ್ ಛೆಲ್ಮ್ಸ್ ಫರ್ಡ್) ರವರು ಮಾಡಿದ ಭಾಷಣವನ್ನು ಖಂಡಿಸಿ ಹೀಗೆ ಬರೆದರು

" ಕೌನ್ಸಿಲಿನ ಪ್ರಾರಂಭ ಭಾಷಣದಲ್ಲಿ ವೈಸ್‌ರಾಯ್‌ರವರು ಆಡಿದ ಮಾತುಗಳು ಅವರ ಮನೋಭಾವವನ್ನು ಸ್ಪಷ್ಟಗೊಳಿಸಿವೆ ಆತ್ಮಗೌರವವುಳ್ಳ ಯಾವ ಮನುಷ್ಯನೇ ಆಗಲಿ ಅವರೊಡನೆ, ಅವರ ಸರಕಾರದೊಡನೆ ಸಹಕರಿಸಲು ಸಾಧ್ಯವಿಲ್ಲದಂತೆ ಮಾಡುವ ಮನೋಭಾವನೆ ಇದುಯೆಂಬುದು ಸ್ಪಷ್ಟವಾಗಿದೆ.

" ಪಂಜಾಬನ್ನು ಕುರಿತು ಅವರು ಆಡಿದ ಮಾತುಗಳಿಂದ ಆಗಿರುವ ಅಪರಾಧಗಳನ್ನು ತಿದ್ದುಕೊಳ್ಳಬೇಕೆಂಬ ಭಾವನೆ ಅವರಿಗೆ ಇಲ್ಲವೇ ಇಲ್ಲವೆನ್ನಿಸುತ್ತದೆ ಅನತಿದೂರ 'ಭವಿಷ್ಯತ್ತಿ'ನಲ್ಲಿಯೇ ಬಗೆಹರಿಸಬೇಕಾಗಿರುವ ಸಮಸ್ಯೆಗಳ ಕಡೆಗೆ ತಿರುಗೋಣವೆಂದು ಅವರ ಸಲಹೆ! ಈ ಅನತಿದೂರ ಭವಿಷ್ಯತ್ತಿನಲ್ಲಿಯೇ ಆಗಬೇಕಾಗಿರುವ ಕೆಲಸವೆಂದರೆ ಅದು ಪಂಜಾಬಿನ ವಿಷಯಕ್ಕಾಗಿ ಸರಕಾರವು ಪಶ್ಚಾತ್ತಾಪ ಪಡುವಂತೆ ಮಾಡಬೇಕಾದ್ದು ವೈಸ್‌ರಾಯ್‌ರವರು ಈ ವಿಚಾರವನ್ನೇ ಪ್ರಸ್ತಾಪಿಸದೆ ಆಕ್ಷೇಪಿಸುವವರಿಗೆ ಸಮಾಧಾನವನ್ನು ಹೇಳುವ ಆಶೆಯನ್ನೂ ತೊರೆದು, ಭಾರತದ ಗೌರವವನ್ನು ಬದಿಗೆ ತುಳಿಯುವ ಮುಖ್ಯ ವಿಚಾರಗಳನ್ನು ಕುರಿತು ತಾವು ಇನ್ನೂ ತಮ್ಮ ಮನಸ್ಸನ್ನು ಬದಲಾಯಿಸಲಿಲ್ಲವೆಂದು ತೋರಿಸಿಕೊಂಡಿದ್ದಾರೆ ಈಗ ನಡೆದಿರುವುದು, ಒಳ್ಳೆಯದೋ ಕೆಟ್ಟದೋ ಎಂಬುದನ್ನು ಭವಿಷ್ಯತ್ತು ಸಿದ್ಧಾಂತ ಮಾಡಿಕೊಳ್ಳಲಿ ಎಂಬ ಭಾವನೆಯಲ್ಲಿದ್ದಾರೆ ಈ ವಿಧವಾದ ಮಾತುಕಥೆಗಳು ಭರತಖಂಡದ ಹೃದಯವನ್ನು ಕೆರಳಿಸುವುದು, ಮನಸ್ಸನ್ನು ರೇಗಿಸುವುದು ಎಂದು ನನ್ನ ಅಭಿಪ್ರಾಯ ಆ ಭವಿಷ್ಯದ ಸಿದ್ಧಾಂತವು ಏನಾದರೇನು? ಅದರಿಂದ ಈಗ ನೊಂದಿರುವವರಿಗೆ ಏನಾದಂತೆ ಆಯಿತು? ಹೊಣೆಗಾರಿಕೆಯ ಮತ್ತು ನಂಬಿಕೆಯ ಪದವಿಗಳನ್ನು ಪಡೆಯುವುದಕ್ಕೆ ಸಂಪೂರ್ಣವಾಗಿ ಅಯೋಗ್ಯರು ಎಂದು ಚೆನ್ನಾಗಿ ತೋರಿಸಿಕೊಂಡಿರುವ ಅಧಿಕಾರಿಗಳ ಕಾಲಿನ ತುಳಿತಕ್ಕೆ ಸಿಕ್ಕಿ ನೊಂದಿರುವವರಿಗೆ ಭವಿಷ್ಯದ ಸಿದ್ಧಾಂತದಿಂದ ಆಗುವುದಾದರೆ ಏನು? ಪಂಜಾಬಿನಲ್ಲಿ ನ್ಯಾಯವನ್ನು ಮಾಡುವುದಕ್ಕೆ ಹಿಂತೆಗೆದಿರುವ ಹಟವನ್ನು ತೊಟ್ಟು ಮತ್ತೆ ಸಹಕರಿಸಿರಿಯೆಂದು ಹೇಳುವುದು ನಿಜವಾಗಿ ವಿಧ್ಯಾಚರ್ಯ."

ಸರಕಾರಗಳು ನಿಂತಿರುವುದು ಹಿಂಸೆಯ ತಳಹದಿಯ ಮೇಲೆಂಬುದನ್ನು ಯಾರು ಕಾಣರು? ಸುಸಜ್ಜಿತವಾದ ಸೈನ್ಯಗಳ ಪ್ರಕಟಹಿಂಸೆಯು ಮಾತು ಇರಲಿ, ಅದಕ್ಕಿಂತಲೂ ಅಪಾಯಕರವಾಗಿ, ಅದಕ್ಕಿಂತಲೂ ಸೂಕ್ಷ್ಮವಾಗಿರುವ ಗೂಢಚಾರರೂ, ಸುದ್ದಿಗಾರರೂ, ರೇಗಿಸುವವರೂ ಸುಳ್ಳು ಸುದ್ದಿಯನ್ನು ಹಬ್ಬುವರು ಪ್ರತ್ಯಕ್ಷವಾಗಿ ಪರೋಕ್ಷವಾಗಿ ನಾಡಿನ ವಿದ್ಯಾಭ್ಯಾಸ, ವೃತ್ತಾಂತ ಪತ್ರಿಕೆಗಳು, ಮತ ಸಂಬಂಧವಾದ ಮತ್ತು ಇತರ ಅಂಜಿಕೆಗಳು, ಆರ್ಥಿಕ ದುರವಸ್ಥೆ ಮತ್ತು ಹೊಟ್ಟೆಗಿಲ್ಲದಿರುವುದು, ಇವೆಲ್ಲವೂ ಹಿಂಸೆಗಳೇ ಸರಕಾರದ ಆಧಾರವಾಗಿರುವ ಹಿಂಸೆಗಳವು ಒಂದು ಸರಕಾರವು ಮತ್ತೊಂದು ಸರಕಾರದೊಡನೆ ವ್ಯವಹರಿಸುವಾಗ ಎಷ್ಟು ಸುಳ್ಳು ಹೇಳಿದರೂ, ಎಷ್ಟು ದ್ರೋಹ ಮಾಡಿದರೂ ಪ್ರಕಟವಾಗುವವರೆವಿಗೂ ಅದು ಸರಿಯೆಂದೇ ಭಾವನೆ ಸಮಾಧಾನದ ದಿವಸಗಳಲ್ಲಿ ಕೂಡ ಇದು ಉಂಟು, ಎಂದ ಮೇಲೆ ಯುದ್ಧದ ದಿವಸಗಳಲ್ಲಿ ಹೇಳಲೇಬೇಕಾಗಿಲ್ಲ ೩೦೦ ವರ್ಷಗಳ ಕೆಳಗೆ ಸರ್ ಹೆನ್ರಿ ವೊಟ್ಟ್ರ್ ಎಂಬ ಕವಿಯಿದ್ದನು ಈತನು ಬ್ರಿಟಿಷ್ ರಾಯಭಾರಿಯಾಗಿದ್ದವನು ಈತನು ರಾಯಭಾರಿಯೆಂದರೇನು ಎಂಬುದನ್ನು ಕುರಿತು "ತನ್ನ ದೇಶದ ಸೌಖ್ಯಕ್ಕಾಗಿ ಸುಳ್ಳು ಹೇಳಲಿ ಎಂದು, ಪರದೇಶಗಳಿಗೆ ಕಳುಹಿಸಿಕೊಟ್ಟಿರುವ ಸತ್ಯವಂತ" ಎಂದು ಹೇಳಿದ್ದಾನೆ ಈಗ ರಾಯಭಾರಿಗಳಿಗೆ ಸೈನಿಕ, ನಾವಿಕ, ವ್ಯವಹಾರಿಕ ಸಹಾಯಕರುಂಟು ತಾವು ಇರುವ ದೇಶಗಳಲ್ಲಿ, ಆಯಾ ಮಂಡಲಗಳಲ್ಲಿ, ಏನೇನು ನಡೆಯುತ್ತಿದೆಯೆಂಬುದನ್ನು ಕಣ್ಣಿಟ್ಟು ಕಾಯುವುದೇ ಅವರ ಕೆಲಸ ಈ ಸಹಾಯಕರ ಆಶ್ರಯದಲ್ಲಿ ದ್ರೋಹ, ಮೋಸಗಳ ಬಲೆಯನ್ನು ಹಬ್ಬಿಸಿ, ಗೂಢಚಾರ ಪ್ರತಿಗೂಢಚಾರರನ್ನು ಉಪಯೋಗಿಸಿ, ದುರಾತ್ಮರೊಡನೆ ಸಖ್ಯವನ್ನು ಬೆಳೆಸಿ, ಲಂಚವನ್ನು ಕೊಟ್ಟು, ಮನುಷ್ಯನನ್ನು ಮೃಗವನ್ನಾಗಿ ಮಾಡಿ ರಹಸ್ಯವಾಗಿ ಎಷ್ಟೋ ಕೊಲೆಗಳನ್ನು ನಡೆಸಿ ದುರ್ಗಗಳನ್ನು ಕಟ್ಟಿಕೊಂಡು ಇರುವ ಗೂಢಚಾರರ ಅಪಾರವಾದ ಪಡೆಯಿದೆ ಇವೆಲ್ಲವೂ ಸಮಾಧಾನದ ದಿನಗಳಲ್ಲಿ ಕೆಟ್ಟದೆಂದು ಎನ್ನಿಸಿಕೊಂಡರೂ ಯುದ್ಧವು ಈ ಕಾರ್ಯಕಲಾಪಗಳಿಗೆ ಅಪಾರವಾದ ಗೌರವವನ್ನು ಕೊಟ್ಟು ಇದು ಎಲ್ಲೆಲ್ಲೂ ಹರಡುವಂತೆ ಮಾಡುತ್ತದೆ ಹಿಂದೆ ಕಳೆದುಹೋದ ಮಹಾಯುದ್ಧದಲ್ಲಿ ಯಾವ ಯಾವ ರೀತಿಯಲ್ಲಿ ಯಾರು ಯಾರು ಏನೇನು ಮಾಡುತ್ತಿದ್ದರು? ಶಸ್ತ್ರಗಳ ವಿಚಾರವಾಗಿ ಅದೆಷ್ಟು ಸುಳ್ಳುಗಳನ್ನು ಹರಡಲಾಯಿತು? ಇದಕ್ಕಾಗಿ ಮತ್ತೆ ಗೂಢಚಾರರಿಗಾಗಿ ಅದೆಷ್ಟು ಅನಂತವಾಗಿ ಹಣದ ದುರ್ವ್ಯಯವಾಯಿತೆಂಬುದನ್ನು ಓದಿದರೆ ಆಶ್ಚರ್ಯವಾಗುತ್ತದೆ ಇಂದಿನ ಸಮಾಧಾನವು ಮುಂದಿನ ಯುದ್ಧಕ್ಕೆ ಪೂರ್ವ ರಂಗ ಎರಡು ಯುದ್ಧಗಳ ನಡುವಿನ ಸ್ಮಶಾನ ಶಾಂತಿ. ಆರ್ಥಿಕ ಮತ್ತು ಇತರ ವ್ಯವಹಾರಗಳ ಹಿಂದಿನ ಅನರ್ಥಗಳು ಇನ್ನೂ ಇದ್ದೇ ಇವೆ ಗೆದ್ದವರು ಸೋತವರ ನಡುವೆ ಇರುವ ತುಯ್ಯಾಟವಿನ್ನೂ ತೀರಿಲ್ಲ. ಸಾಮ್ರಾಜ್ಯವಾದಿಗಳಾದ ವಿಜಯಿಗಳಿಗೂ ಆ ಸಾಮ್ರಾಜ್ಯದ ಅಂಗಗಳಾದ ದೇಶವಿದೇಶಗಳಿಗೂ ಇರುವ ಭೇದಭಾವಗಳು ಮಾಯವಾಗಿಲ್ಲ ಅದೃಷ್ಟವಂತರಾದ

ಭದ್ರಲೋಕದವರಿಗೂ ಕೊಳ್ಳಿಗೆ ಗುರಿಯಾಗಿರುವ ಜನರಿಗೂ ಮಸೆಯುತ್ತಿರುವ ದ್ವೇಷದ ಉರಿಯು ಇನ್ನೂ ನಂದಿಲ್ಲ. ಸಮಾಧಾನಕಾಲವೆನಿಸಿಕೊಂಡಿರುವ ಈಗಲೂ ಹಿಂಸೆ ಅಸತ್ಯಗಳೊಡನೇ ಬೆರೆದು ಮೆರೆಯುವ ಯುದ್ಧದ ವಾತಾವರಣವು ಒಂದಲ್ಲ ಒಂದು ರೀತಿಯಲ್ಲಿ ಇದ್ದೇ ಇದೆ ಈ ಪರಿಸ್ಥಿತಿಯನ್ನು ಹತೋಟಿಗೆ ತೆಗೆದುಕೊಳ್ಳುವುದಕ್ಕಾಗಿಯೇ ಸೈನಿಕನೂ ಪೌರಾಧಿಕಾರಿಯೂ ಸಿದ್ಧರಾಗುತ್ತಿದ್ದಾರೆ. "ಸೋಲ್ಜರ್ಸ್ ಪಾಕೆಟ್ ಬುಕ್ ಫಾರ್ ಫೀಲ್ಡ್ ಸರ್ವಿಸ್" ಎಂಬಲ್ಲಿ ಲಾರ್ಡ್ ಉಲ್ಸ್ಲಿ ಅವರು "ಸತ್ಯವು ಅತ್ಯುತ್ತಮವಾದ ರಾಜಮಾರ್ಗ ಎಂಬುದನ್ನು ನಂಬಿ ಸತ್ಯವು ಎಂದಾದರೂ ಗೆದ್ದೇ ಗೆಲ್ಲುತ್ತದೆ ಎಂದು ವಿಶ್ವಾಸದಿಂದ ಸಾರುತ್ತಲೇ ಇರುತ್ತೇವೆ. ಈ ಸುಂದರ ವಾಕ್ಯಗಳು ಮಕ್ಕಳ ಕಾಪಿ ಪುಸ್ತಕಗಳಿಗೆ ಬಲು ಚೆನ್ನ. ಆದರೆ ಯುದ್ಧದ ಸಮಯಗಳಲ್ಲಿ ಇಂತಹ ಮಾತುಗಳನ್ನು ಮನಸ್ಸಿನಲ್ಲಿಟ್ಟುಕೊಂಡು ನಡೆಯುವುದಕ್ಕಿಂತ ಕತ್ತಿಯನ್ನು ಒರೆಯಲ್ಲಿ ಮುಚ್ಚಿಡುವುದು ಎಷ್ಟೋ ಲೇಸು" ಎಂದು ಹೇಳಿದ್ದಾರೆ

ಈಗಿರುವ ಈ ದುಸ್ಥಿತಿಯಲ್ಲಿ, ಜನಾಂಗವು ಜನಾಂಗವನ್ನು, ಒಂದು ಗುಂಪು ಮತ್ತೊಂದು ಗುಂಪನ್ನು ಎದುರಿಸುತ್ತಿರುವಾಗ ಈ ಹಿಂಸೆ ಅಸತ್ಯಗಳು ಇಲ್ಲದಿದ್ದರೆ ಹೇಗೆ ಎನ್ನಿಸುತ್ತದೆ ಅದೃಷ್ಟವಂತವಾದ ಜನಾಂಗಗಳು ಮತ್ತು ಗುಂಪುಗಳು ತಮಗೆ ಲಭಿಸಿರುವ ಪದವಿ ಸೌಕರ್ಯಗಳನ್ನು ಬಿಡಲಾರದೆ ತಮ್ಮ ಕೈಕೆಳಗೆ ಸಿಕ್ಕಿ ನರಳುತ್ತ ಇರುವವರಿಗೆ, ಅಭಿವೃದ್ಧಿಗೆ ಅವಕಾಶವನ್ನೇ ಕೊಡದೆ ತಮ್ಮಷ್ಟಕ್ಕೆ ತಾವು ಇರಲು, ಹಿಂಸೆಯನ್ನು ಅವಲಂಬಿಸಲೇ ಬೇಕು ಬಲಾತ್ಕಾರದ ಮಾರ್ಗವನ್ನು ನಡೆಯಬೇಕು. ಅಸತ್ಯವನ್ನು ನುಡಿಯಬೇಕು, ದೇಶದಲ್ಲಿ ಮಹಾ ಜನರ ಅಭಿಪ್ರಾಯವು ಮೂರ್ತಿಗೊಳ್ಳುತ್ತಾ ಬಂದು ಒಳತೋಟಿಗಳು ಪ್ರಕಟವಾಗುತ್ತಾ ಬಂದು ಅವುಗಳನ್ನು ನಿವಾರಿಸಬೇಕೆಂಬ ಇಚ್ಛೆಯು ಪ್ರಬಲವಾಗುತ್ತಾ ಬಂದಂತೆಲ್ಲ ಹಿಂಸೆಯು ಕಡಮೆಯಾಗುತ್ತಾ ಬರುವುದೂ ಸಾಧ್ಯವಿರಬಹುದು ಆದರೆ ಇದುವರೆಗಿನ ಅನುಭವವು ಈ ಆಶೆಯನ್ನು ಬಲಪಡಿಸುವುದಕ್ಕೆ ಬದಲಾಗಿ ಹಿಂಸೆಯು ಇನ್ನೂ ಬಲಿಯುವುದು ಎಂಬ ನಂಬಿಕೆಯನ್ನೇ ತರುತ್ತಿದೆ ಈಗಿರುವ ಸಂಸ್ಥೆಗಳನ್ನು ವಿರೋಧಿಸುವ ಭಾವವು ಬಲಿದಂತೆಲ್ಲ ಹಿಂಸೆಯೂ ಬಲಿಯುತ್ತಿದೆ. ಹಿಂಸೆಯು ಹೊರಗಣ ಆವರಣವು ಕುಗ್ಗಿದಂತೆ ತಗ್ಗಿದಂತೆ ಹೆಚ್ಚು ಅಪಾಯಕಾರಿಯಾದ ರೂಪಗಳನ್ನು ತಳೆಯುತ್ತದೆ ಬುದ್ಧಿಯು ಬೆಳೆದಿದ್ದರೂ ಧಾರ್ಮಿಕ ಮನೋಭಾವವು ಬಲಿತಿದ್ದರೂ, ನೀತಿಯು ಅಭಿವೃದ್ಧಿಯಾಗಿದ್ದರೂ ಹಿಂಸೆಯ ವಿಜೃಂಭಣೆಯು ಮಾತ್ರ ಕಡಮೆಯಾಗಿಲ್ಲ ವ್ಯಕ್ತಿಗಳು ಬೆಳೆದು ಉತ್ತಮ ಮಾನವರಾಗಿದ್ದಾರೆ ಬಹುಶಃ ಈಗ ನಮ್ಮ ಪ್ರಪಂಚದಲ್ಲಿ ಇರುವಷ್ಟು ಒಳ್ಳೆಯವರು ಹಿಂದೆ ಇದ್ದರೋ ಇರಲಿಲ್ಲವೋ, ಸಮಾಜವೂ ಸಾಮೂಹಿಕವಾಗಿ ಮುಂದುವರೆದಿದೆ. ಇದ್ದದ್ದರಲ್ಲಿ ಕೊಂಚಮಟ್ಟಿಗಾದರೂ ಶೈಶವಾವಸ್ಥೆಯ ಮತ್ತು ಅನಾಗರಿಕತನದ ಆಶೆಗಳು ಹದ್ದುಬಸ್ತಿನಲ್ಲಿಟ್ಟುಕೊಳ್ಳಲು ಅಲ್ಲಲ್ಲಿ ಪ್ರಯತ್ನ

ಗಳು ನಡೆದಿವೆ ಆದರೂ ಒಟ್ಟಾರೆ ಗುಂಪುಗಳೂ ಜಾತಿಗಳೂ ಏನೇನೂ ಮುಂದುವರಿದಿಲ್ಲ ವ್ಯಕ್ತಿಯು ನಾಗರಿಕವಾಗಿ ಮುಂದುವರಿದಂತೆಲ್ಲ ಅವನ ಹೃದಯದಲ್ಲಿದ್ದ ಕೀಳು ತರದ ಭಾವನೆಗಳೂ, ದುರ್ಗುಣಗಳೂ, ವ್ಯಕ್ತಿಯನ್ನು ಬಿಟ್ಟು ಜಾತಿಯನ್ನು ಆಶ್ರಯಿಸುವುದರಿಂದಲೂ, ಹಿಂಸೆಯು ಯಾವಾಗಲೂ ನೀತಿಯಲ್ಲಿ ಸ್ವಲ್ಪ ಕಡಿಮೆಯಾದವರನ್ನು ಆಕರ್ಷಿಸುವುದು ಸ್ವಭಾವವಾದುದರಿಂದಲೂ ಒಂದು ಜಾತಿಯಲ್ಲಿ ಉತ್ತಮೋತ್ತಮರಾದವರೇ ಆಯಾ ಜಾತಿಯ ಮುಖಂಡರಾಗಿರುವುದಿಲ್ಲ

ಒಂದುವೇಳೆ ಹಿಂಸೆಯ ದುಷ್ಟತನ-ರೂಪಗಳೆಲ್ಲವನ್ನು ಸರಕಾರದಿಂದ ತೆಗೆದುಹಾಕುವುದಕ್ಕೆ ಸಾಧ್ಯವೆಂದು ನಾವು ಅಂಗೀಕರಿಸಿದರೂ ಸರಕಾರವು ಮತ್ತು ಸಮಾಜ ಜೀವನವು ಒಂದಲ್ಲ ಒಂದುತರದಿಂದ ಬಲಾತ್ಕಾರವನ್ನೂ ಅವಲಂಬಿಸಲೇಬೇಕು, ಅವಲಂಬಿಸದಿದ್ದರೆ ಯತ್ನವಿಲ್ಲ ಎಂಬುದನ್ನು ಮರೆಯುವಂತಿಲ್ಲ ಸಮಾಜ ಜೀವನವು ಯಾವುದಾದರೊಂದು ರೀತಿಯ ಸರಕಾರವು ಇದ್ದೇ ಇರಬೇಕೆಂದು ಬಯಸುತ್ತದೆ ಹೀಗೆ ಅಧಿಕಾರದಲ್ಲಿ ಬಂದು ನಿಂತವರು ಸ್ವಾರ್ಥತೆಯ ಮತ್ತು ಸಮಾಜಕ್ಕೆ ಹಾನಿಕರವಾಗಿರುವ ಆಶೋತ್ತರಗಳನ್ನು ಅವು ಒಬ್ಬರದಾಗಿರಲಿ ಅಥವಾ ಅಲ್ಲದೆ ಗುಂಪಿನದಾಗಿರಲಿ ತುಳಿಯಲೇಬೇಕಾಗಿ ಬರುತ್ತದೆ. ಸಾಮಾನ್ಯವಾಗಿ ಅಧಿಕಾರ ಪದವಿಗಳು ಮನುಷ್ಯನನ್ನು ಸ್ವಲ್ಪ ಕೀಳುಮಾಡಲೇ ಮಾಡುತ್ತವೆ. ಅದರಿಂದ ಅಧಿಕಾರಿಗಳು ಈ ತುಳಿಯುವ ಕಾರ್ಯದಲ್ಲಿ ಎಷ್ಟು ಮಾಡಬೇಕೋ ಅದಕ್ಕಿಂತಲೂ ಅತಿಮಾಡುತ್ತಾರೆ ಅಧಿಕಾರದಲ್ಲಿರುವವರಿಗೆ ಸ್ವಾತಂತ್ರ್ಯದಲ್ಲಿ ಎಷ್ಟೇ ಪ್ರೀತಿಯಿರಲಿ, ಬಲಾತ್ಕಾರದಲ್ಲಿ ಎಷ್ಟೇ ದ್ವೇಷವಿರಲಿ ಪ್ರತಿಪಕ್ಷದವರ ಮೇಲೆ ಬಲಾತ್ಕಾರವನ್ನು ಪ್ರಯೋಗಿಸಲೇಬೇಕಾಗಿ ಬರುವುದು ರಾಜ್ಯದಲ್ಲಿರುವ ಪ್ರತಿಯೊಬ್ಬ ಮಾನವನೂ ಪರಿಪೂರ್ಣವಾಗಿ ಸಂಪೂರ್ಣ ಅಸ್ವಾರ್ಥಿಯಾಗಿ ತನ್ನ ದೇಶದ ಹಿತಕ್ಕಾಗಿ ತನ್ನನ್ನು ಒಪ್ಪಿಸಿಕೊಳ್ಳುವವನು ಆಗುವವರೆಗೂ ಇಂಥಾ ಸ್ಥಿತಿಯು ತಪ್ಪುವಂತಿಲ್ಲ ಈ ರಾಜ್ಯಾಧಿಕಾರಿಗಳು ತಮ್ಮ ಮೇಲೆ ಬಂದು ಬೀಳುವ ಆಕ್ರಮಣಕಾರಿಗಳ ಬಲಾತ್ಕಾರವನ್ನು ಉಪಯೋಗಿಸಲೇಬೇಕಾಗುವುದು ಅವರು ಶಕ್ತಿಯನ್ನು ಉಪಯೋಗಿಸಿ ಶಕ್ತಿಯನ್ನು ತಡೆದು ತಮ್ಮನ್ನು ತಾವು ಕಾಯ್ದುಕೊಳ್ಳಬೇಕಾಗುವುದು ಇಂಥ ದುಸ್ಥಿತಿಯು ತಪ್ಪುವುದು ಎಂದಿಗೆ? ಪ್ರಪಂಚವೆಲ್ಲವೂ ಒಂದೇ ರಾಜ್ಯವಾದಾಗ

ರಾಜ್ಯವನ್ನು ಒಟ್ಟುಗೂಡಿಸಿ ಕಾಯ್ದುಕೊಳ್ಳುವುದಕ್ಕೂ ಅದಕ್ಕೆ ಹೊರಗಿನಿಂದ ಬರುವ ಅಪಾಯಗಳನ್ನು ತಪ್ಪಿಸುವುದಕ್ಕೂ ಶಕ್ತಿ ಬಲಾತ್ಕಾರಗಳು ಬೇಕೇಬೇಕು ಎಂದಾದರೆ ಎಷ್ಟುಮಟ್ಟಿಗೆ ಬೇಕು ? ನೀತಿಯು ರಾಜಕೀಯ ವ್ಯವಹಾರಕ್ಕೆ ದುರಂತವಾದ ಅಂಗೀಕಾರವನ್ನು ಕೊಟ್ಟರೆ ಸಾಕು, ಸಾಮಾಜಿಕವಾದ ಐಕ್ಯತೆಗೆ ಬಲಾತ್ಕಾರವು ಬೇಕೇಬೇಕು ಎಂದು ಒಪ್ಪಿಕೊಂಡರೆ ಸಾಕು, ರೈನ್‌ಹೋಲ್ಡ್ ನಿಭುರ್‌ರವರು

ಹೇಳಿರುವಂತೆ * ಬಲಾತ್ಕಾರದಲ್ಲಿ ಅಹಿಂಸಾತ್ಮಕ ಬಲಾತ್ಕಾರ ಮತ್ತು ಹಿಂಸಾತ್ಮಕ ಬಲಾತ್ಕಾರ, ಇವುಗಳಲ್ಲಾಗಲಿ ಸರಕಾರಗಳು ಉಪಯೋಗಿಸುವ ಬಲಾತ್ಕಾರ ಮತ್ತು ಕ್ರಾಂತಿಕಾರರು ಉಪಯೋಗಿಸುವ ಬಲಾತ್ಕಾರ ಇವುಗಳಲ್ಲಾಗಲಿ ಸೂಕ್ಷ್ಮ ಭೇದಗಳನ್ನು ಕಾಣಲು ಅಸಾಧ್ಯ.

ಈ ಅಪರಿಪೂರ್ಣ ಜಗತ್ತಿನಲ್ಲಿ ದೇಶೀಯ ಸರಕಾರವು ಕೂಡ, ನಿಷ್ಕಾರಣವಾಗಿ ತಮ್ಮ ಮೇಲೆ ಬಿದ್ದ ಆಕ್ರಮಣಕಾರಿಗಳಿಂದ ಉಳಿದುಕೊಳ್ಳಲು ತನ್ನನ್ನು ತಾನು ಕಾಪಾಡಿಕೊಳ್ಳುವುದಕ್ಕಾದರೂ ಶಕ್ತಿಯನ್ನು ಉಪಯೋಗಿಸಲೇ ಬೇಕಾಗುವುದೆಂದು ಗಾಂಧಿಜಿಯವರೂ ಒಪ್ಪಿಯಾರೋ ಏನೋ, ನನಗೆ ನಿರ್ಧರವಿಲ್ಲ, ಒಪ್ಪಿಯಾರೆಂದು ಭಾವಿಸುತ್ತೇನೆ. ಪ್ರತಿಯೊಂದು ಸರ್ಕಾರವೂ ನೆರೆಹೊರೆಯ ಸರಕಾರಗಳ ಜೊತೆಯಲ್ಲಿ ಪರಮಶಾಂತಿಯಿಂದ ಮತ್ತು ಸಸ್ನೇಹ ನೀತಿಯಿಂದ ವ್ಯವಹರಿಸಬೇಕೆಂಬುದು ದಿಟ ಆದರೆ, ಒಬ್ಬರು ಇನ್ನೊಬ್ಬರ ಮೇಲೆ ಬೀಳುವ ಸಂಭವವೇ ಇಲ್ಲವೆಂಬುದು ಮಾತ್ರ ಅವಿವೇಕ ಸರಕಾರವು ಕೂಡ ಕೆಲವು ಜಾತಿಕೋಮುಗಳಿಂದ ಕೆಲವು ಹಕ್ಕುದಾರಿಗಳನ್ನು ಕಸಿದುಕೊಂಡು ಕಾರ್ಯಸ್ವಾತಂತ್ರ್ಯಕ್ಕೆ ಅಡ್ಡಿಯನ್ನು ತಂದೊಡ್ಡುವಂತಹ ಕೆಲವು ನ್ಯಾಯಗಳನ್ನು ಜಾರಿಗೆ ತರಲೇಬೇಕಾಗುವುದು ಕಾಯಿದಕಟ್ಟುಗಳು ಎಂತಹವೇ ಆಗಲಿ ಸ್ವಲ್ಪಮಟ್ಟಿಗೆ ಬಲಾತ್ಕಾರವನ್ನುಳ್ಳವು ಕಾಂಗ್ರೆಸ್ಸಿನ ಕರಾಚಿಯ ಕಾರ್ಯಕ್ರಮದಲ್ಲಿ " ಪ್ರಜಾವರ್ಗವನ್ನು ಸುಲಿಯುವುದನ್ನು ತಪ್ಪಿಸುವುದಕ್ಕಾಗಿ ಹೊಟ್ಟೆಗಿಲ್ಲದೇ ಸಾಯುತ್ತಿರುವವರ ರಾಜಕೀಯ ಸ್ವಾತಂತ್ರ್ಯದೊಡನೆ ಆರ್ಥಿಕ ಸ್ವಾತಂತ್ರ್ಯವೂ ಸೇರಬೇಕು " ಎಂದು ನಿರ್ಣಯವಾಯಿತು ಇಂತಹ ಅಪೇಕ್ಷಣೀಯವಾದ ಆಶೆಯನ್ನು ಸಾಧಿಸಿಕೊಳ್ಳುವುದಕ್ಕೆ ಅದೃಷ್ಟವಂತರು ತಮಗಿಂತಲೂ ನಿರ್ಭಾಗ್ಯರಾದವರಿಗೆ ತಮ್ಮ ಭಾಗ್ಯದಲ್ಲಿ ಅಷ್ಟನ್ನು ಬಿಟ್ಟುಕೊಡಬೇಕು ಜೊತೆಗೆ ಕೂಲಿಗಾರರಿಗೆ ಸುಖವಾಗಿ ಬಾಳುವುದಕ್ಕೆ ಬೇಕಾದಷ್ಟಾದರೂ ಕೂಲಿಯು, ಮೊದಲಾದ ಇನ್ನೂ ಕೆಲವು ಸೌಕರ್ಯಗಳು ಆಗಬೇಕು ಆಸ್ತಿವಂತರ ಆದಾಯದ ಮೇಲೆ ವಿಶೇಷತರದ ತೆರಿಗೆಗಳನ್ನು ಹಾಕಬೇಕು " ಉದ್ಯೋಗ ಕೈಗಾರಿಕೆಗಳಲ್ಲಿ ಮುಖ್ಯಮುಖ್ಯವಾದವನ್ನೂ ಅಧಿಕಾರಗಳು, ಗಣಿಗಳು, ರೈಲ್ವೆಗಳು, ಜಲದಾರಿಗಳು—ಮೊದಲಾದ ಪ್ರಯಾಣ ಸೌಕರ್ಯಗಳನ್ನೂ ಸರಕಾರವು ತಮ್ಮ ಕೈಗೆ ತೆಗೆದುಕೊಳ್ಳಬೇಕು ಅಥವಾ ತಮ್ಮ ಅಧಿಕಾರದಲ್ಲಿಟ್ಟುಕೊಳ್ಳಬೇಕು, " ಎಂದು ಕರಾಚಿಯಲ್ಲಿ ಗೊತ್ತಾಯಿತು ಮತ್ತು " ಮಾದಕ ದ್ರವ್ಯಗಳನ್ನೂ ನಿಶಾಪದಾರ್ಥಗಳ ಮಾರಾಟವನ್ನೂ ಸಂಪೂರ್ಣವಾಗಿ ತಪ್ಪಿಸಿಬಿಡಬೇಕು, " ಎಂದೂ ಗೊತ್ತಾಯಿತು ಇವೆಲ್ಲವನ್ನೂ ಅನೇಕಾನೇಕರು ವಿರೋಧಿಸಬಹುದು ಅವರು ಒಂದುವೇಳೆ ಅಧಿಕ ಸಂಖ್ಯಾತರ ಅಭಿಪ್ರಾಯವನ್ನು ಅಂಗೀಕರಿಸಿದರೂ ಅದು ವಿಶ್ವಾಸದಿಂದಲ್ಲ, ಬಲಾತ್ಕಾರದಿಂದ ಆ ಅಂಗೀ

---

* 'ಮಾರಲ್ ಮ್ಯಾನ್ ಅಂಡ್ ಇಮ್ಮಾರಲ್ ಸೊಸೈಟಿ' (ನೈತಿಕ ಮಾನವ ಮತ್ತು ಅನೈತಿಕ ಸಮಾಜ) ಎಂಬುದರಲ್ಲಿ

ಕಾರವು ಅನಂಗೀಕಾರ ಫಲಗಳನ್ನು ಯೋಚಿಸಿ ಹೆದರಿರುವುದರ ಫಲ ಪ್ರಜಾಸತ್ತೆ ಯೆಂದರೆ, ಅಧಿಕ ಸಂಖ್ಯಾತರು ಅಲ್ಪ ಸಂಖ್ಯಾತರ ಮೇಲೆ ಮಾಡುವ ಬಲಾತ್ಕಾರ.

ಅಧಿಕ ಸಂಖ್ಯಾತರು ಆಸ್ತಿಯ ಹಕ್ಕುಗಳನ್ನು ಸಂಕೋಚ ಪಡಿಸುವ ಅಥವಾ ಸಂಪೂರ್ಣವಾಗಿ ರದ್ದು ಮಾಡುವಂತಹ ಒಂದು ಕಾಯಿದೆಯನ್ನು ಮಾಡುತ್ತಾರೆಂದು ಕೊಳ್ಳೋಣ ಆ ಕಾಯಿದೆಯು ಬಲಾತ್ಕಾರವೆಂದು ಅದನ್ನು ವಿರೋಧಿಸಬೇಕೇನು ? ಖಂಡಿತವಾಗಿಯೂ ಕೂಡದು ಏಕೆಂದರೆ ಪ್ರಜಾಸತ್ತಾತ್ಮಕ ಶಾಸನಗಳಲ್ಲಿ ಒಂದೊಂದು ರಚಿತವಾಗುವುದು ಹಾಗೆಯೇ ಆದರಿಂದ ಬಲಾತ್ಕಾರವೆಂಬ ಕಾರಣದಿಂದ ಒಂದು ಕಾಯಿದೆಯನ್ನು ವಿರೋಧಿಸಕೂಡದು ಅಧಿಕ ಸಂಖ್ಯಾತರು ತಪ್ಪಾಗಿ, ಅನೀತಿಯು ತರಾಗಿ ನಡೆದಿದ್ದಾರೆ ಎನ್ನಬಹುದು ಹಾಗೇನಾದರೂ ಆಗಿದ್ದರೆ, ಆಗ ಅಧಿಕ ಸಂಖ್ಯಾತರು ಮಾಡಿರುವ ಕಾಯಿದೆಯು ಯಾವುದಾದರೂ ನೀತಿಗೆ ವಿರೋಧಿಯಾಗಿ ದೆಯೇ ಎಂಬುದೇ ಪ್ರಶ್ನೆಯಾಗಬೇಕೇ ಹೊರತು ಇನ್ನು ಯಾವ ಪ್ರಶ್ನೆಯೂ ಕೂಡದು ಆದರೆ ಇದನ್ನು ಗೊತ್ತು ಮಾಡುವವರು ಯಾರು ? ಪ್ರತಿಯೊಬ್ಬನೂ ಪ್ರತಿಯೊಂದು ಕೋಮೂ ನೀತಿಯನ್ನು ತಮ್ಮ ತಮ್ಮ ಆಶೋತ್ತರಗಳಿಗೆ ಅನುಕೂಲವಾಗಿ ತಿದ್ದಿಕೊ ಳ್ಳುವುದಾದರೆ ಪ್ರಜಾಸತ್ತಾತ್ಮಕ ರೀತಿ ನೀತಿಗಳೆಲ್ಲ ಬಂತು ? ಅದರಿಂದ ನಾನು ನನ್ನ ಮಟ್ಟಿಗೆ ಹೇಳುವುದು ಇಷ್ಟು ಸಾಮಾನ್ಯವಾಗಿ ಸ್ವಂತ ಆಸ್ತಿ ಎಂಬುದು (ಬಹಳ ಸಂಕೋಚನಾದ ಅರ್ಥದಲ್ಲಿ ಹೊರತು) ಒಟ್ಟಾರೆ ಸಮಾಜದ ಮೇಲೆ ಒಬ್ಬನು ಸಂಪಾ ದಿಸುವ ಅಧಿಕಾರವಾಗಿ ಅದು ಸಮಾಜದ ಹಾನಿಗೆ ಕಾರಣವಾಗುತ್ತದೆ ಅದರಿಂದ ವೈಯಕ್ತಿಕ ಆಸ್ತಿ ಎಂಬುದು ಕುಡಿತಕ್ಕಿಂತಲೂ ಕೀಳು, ಸಮಾಜಕ್ಕಿಂತಲೂ ವ್ಯಕ್ತಿಗೆ ಹೆಚ್ಚು ಅಪಾಯಕಾರಿ ಆದುದು ಎಂದು ನಾನು ಭಾವಿಸುತ್ತೇನೆ

ಅಹಿಂಸಾ ತತ್ತ್ವದಲ್ಲಿ ನಂಬಿಕೆಯುಳ್ಳವರು ಕೆಲವರು " ಸ್ವಂತ ಆಸ್ತಿಗಳನ್ನು ಜನಾಂಗದ ಆಸ್ತಿಯನ್ನಾಗಿ ಮಾಡಬೇಕಾದರೆ ಆಸ್ತಿವಂತರ ಅಂಗೀಕಾರವನ್ನು ಪಡೆದೇ ಮಾಡಬೇಕು ಹಾಗೆ ಇಲ್ಲದೆ ಮಾಡಿದರೆ ಅದು ಬಲಾತ್ಕಾರವಾಗುವುದು ಅದರಿಂದ ಇದು ಹಿಂಸೆಯಾಗಿ ಅಹಿಂಸಾ ತತ್ವಕ್ಕೆ ವಿರೋಧವಾಗುವುದು" ಎಂದು ಹೇಳಿದ್ದಾರೆ ಭಾರಿ ಜಮೀನುದಾರರು ತಮ್ಮ ಕಂದಾಯಗಳನ್ನು ವಸೂಲುಮಾಡುವುದಕ್ಕೆ ಸರ್ಕಾರದ ಸಹಾಯವನ್ನು ತೆಗೆದುಕೊಳ್ಳಲು ಹಿಂತೆಗೆಯದೆ ಇದ್ದರೂ ಕೂಡ, ಇದೇ ಅಭಿಪ್ರಾಯ ವನ್ನು ನನಗೆ ಹೇಳಿದ್ದಾರೆ ಅನೇಕ ಫ್ಯಾಕ್ಟರಿಗಳನ್ನು ಇಟ್ಟುಕೊಂಡು ನಡೆಸುತ್ತಿರುವ ಬಂಡವಾಳಗಾರರು ಸ್ವತಂತ್ರವಾದ ಲೇಬರ್ ಯೂನಿಯನ್‌ಗಳು ಇರುವುದಕ್ಕೂ ಅಪ್ಪಣೆ ಯನ್ನು ತಾವು ಕೊಡದಿದ್ದರೂ ಇದೇ ಅಭಿಪ್ರಾಯವನ್ನು ಉಳ್ಳವರಾಗಿದ್ದಾರೆ ಅನೇ ಕರಿಗೆ ಇವರಿಂದ ಅನುಕೂಲವಾಗುವುದೆಂಬುದಕ್ಕಿಂತಲೂ ಯಾರು ಇದರಿಂದ ನಷ್ಟಪ ಡುವರೋ ಅವರನ್ನು ನಾವು ನಮ್ಮ ಕಡೆಗೆ ಬರುವಂತೆ ಮಾಡಿಕೊಳ್ಳಬೇಕೆಂಬ ಅಭಿ

ಸ್ವಾಯುವೇ ಬಲವಾಗಿರುವುದರಿಂದ ಲೋಭಿಗಳಾದ ಕೆಲವರು ತಮ್ಮ ಲಾಭಕ್ಕಾಗಿ ಆಗಲೇಬೇಕಾಗಿರುವ ಈ ಅನುಕೂಲವಾದ ಬದಲಾವಣೆಯನ್ನೂ ತಡೆದು ನಿಲ್ಲಿಸಬಲ್ಲರು

ಆರ್ಥಿಕ ಆಶೋತ್ತರಗಳು, ಜಾತಿ ಕೋಮುಗಳ ರಾಜಕೀಯ ದೃಷ್ಟಿಯನ್ನು ಬದಲಾಯಿಸುವುದು ಎಂಬುದು ಚರಿತ್ರಸಿದ್ಧವಾಗಿರುವ ವಿಷಯ. ಈ ವಿಷಯದಲ್ಲಿ ನ್ಯಾಯ ನೀತಿಗಳಾವುವೂ ಫಲಕಾರಿಗಳಾಗುವುದೇ ಇಲ್ಲ ಒಂದುವೇಳೆ ವ್ಯಕ್ತಿಗಳನ್ನು ನಮ್ಮ ಕಡೆಗೆ ತಿರುಗಿಸಿಕೊಂಡರೂ ತಿರುಗಿಸಿಕೊಳ್ಳಬಹುದು ಅವರು ತಮ್ಮ ವಿಶೇಷ ಹಕ್ಕುಗಳನ್ನೂ ಬಿಟ್ಟುಕೊಡಬಹುದು—ಇದು ಬಹಳ ಅಪರೂಪ—ಆದರೆ ಜಾತಿಗಳು ಕೋಮುಗಳು ಹಾಗೆ ಮಾಡುವುದಿಲ್ಲ ಅಧಿಕಾರದಲ್ಲಿರುವ ಮತ್ತು ವಿಶೇಷ ಹಕ್ಕುದಾರಿಗಳನ್ನು ಪಡೆದಿರುವ ಒಂದು ಜಾತಿಯನ್ನು ನಮ್ಮ ಕಡೆಗೆ ತಿರುಗಿಸಿಕೊಂಡು ಅದುವರೆಗೆ ಅದು ಅನುಭವಿಸಿರುವ ಅಧಿಕಾರಗಳನ್ನೂ ಅನ್ಯಾಯವಾದ ಹಕ್ಕುದಾರಿಗಳನ್ನೂ ಬಿಟ್ಟುಕೊಡುವಂತೆ ಮಾಡುವ ಪ್ರಯತ್ನಗಳೂ ಇದುವರೆಗೆ ಫಲಕಾರಿಯಾಗಿಲ್ಲ ಇನ್ನು ಮುಂದೆಯಾದರೂ ಇಂಥ ಪ್ರಯತ್ನಗಳು ಫಲಕಾರಿಯಾಗುವುದೆಂದು ನಂಬಲೂ ಅವಕಾಶವಿಲ್ಲ ರೈನ್‌ಹೋಲ್ಡ್ ನಿಭುರ್ ಎಂಬುವರು ತಮ್ಮ ಗ್ರಂಥದಲ್ಲಿ * ಇದೇ ವಿಚಾರವನ್ನು ಕುರಿತು ಬರೆಯುತ್ತಾ "ಬುದ್ಧಿಯು ಬೆಳೆಯುವುದರಿಂದಲೋ ಇಲ್ಲವೇ ಧಾರ್ಮಿಕ ಭಾವನೆಯಿಂದ ಉತ್ಪನ್ನವಾಗುವ ಸೌಮನಸ್ಯವು ದೃಢಪಡುವುದರಿಂದಲೋ ವ್ಯಕ್ತಿಗಳ ಅಹಂಕಾರಗಳು ಕಡಿಮೆಯಾಗುವುದು ಮತ್ತು ಇಂಥ ಪ್ರಯತ್ನಗಳನ್ನು ಬೇಕಾದಷ್ಟು ಮಾಡಿದ್ದೇ ಆದರೆ ಮಾನವ ಸಮೂಹದಲ್ಲೆಲ್ಲಾ ಸಾಮಾಜಿಕ ಸಾಮರಸ್ಯವು ಸ್ಥಿರವಾಗುವುದೆಂದು ನಂಬಿರುವ" ನೀತಿವಾದಿಗಳನ್ನು ಖಂಡಿಸುತ್ತಾರೆ "ಮನುಷ್ಯರು ಗುಂಪುಗುಂಪಾಗಿ ವ್ಯವಹರಿಸುವ ವೇಳೆಯಲ್ಲಿ ಅವರವರ ಸಹಜ ಗುಣಕ್ಕನುಸಾರವಾಗಿ ನಡೆಯುವುದೇ ಹೊರತು ಬುದ್ಧಿ ಮನಸ್ಸಾಕ್ಷಿಗಳಿಗೆ ಅಧೀನವಾಗಿ ನಡೆಯುವುದು ಸಾಧ್ಯವಿಲ್ಲವೆಂಬುದನ್ನು ಮರೆತು ಮಾನವ ಸಮಾಜದಲ್ಲಿ ನ್ಯಾಯಕ್ಕಾಗಿ ಹೆಣಗುವಾಗ ರಾಜಕೀಯ ಆವಶ್ಯಕತೆಗಳು ಎಷ್ಟು ದೂರ ಹೇಗೆ ಪರಿಸ್ಥಿತಿಯನ್ನು ಮಾರ್ಪಡಿಸುವುದು" ಎಂಬುದನ್ನೂ ಲಕ್ಷಿಸದೆ ಇಂಥ ನೀತಿವಾದಿಗಳು ಮಾತನಾಡುತ್ತಾರೆ "ಆ ಗುಂಪಿನ ವ್ಯವಹಾರದ ಧೋರಣವು ಸಾಮ್ರಾಜ್ಯತತ್ವದ ರೂಪದಲ್ಲಿಯಾಗಲಿ ಒಂದು ಜಾತಿಯವರು ಮತ್ತೊಂದು ಜಾತಿಯವರ ಮೇಲೆ ಚಲಾಯಿಸುವ ಅಧಿಕಾರವತ್ತಾಗಿಯಾಗಲಿ ಕೈಲಾಗದವರನ್ನು ಕಿತ್ತುಕೊಂಡು ತಿನ್ನುತ್ತಾ ಇರಬಹುದು ಅದು ಯಾವುದೇ ಆಗಿರಲಿ, ಎಂತಹುದೇ ಆಗಿರಲಿ ಅದನ್ನು ವಿರೋಧಿಸಲು ಮತ್ತೊಂದು ಸಮರ್ಥವಾದ, ಶಕ್ತಿಯು ಹುಟ್ಟಿಬರುವವರೆಗೂ ಅದನ್ನು ಬದಲಾಯಿಸುವುದು ಸಾಧ್ಯವೇ ಇಲ್ಲ" ಎಂಬುದನ್ನು ಇವರು ಮರೆಯುತ್ತಾರೆ

*'ಮಾರಲ್ ಮ್ಯಾನ್ ಅಂಡ್ ಇಮ್ಮಾರಲ್ ಸೊಸೈಟಿ' (ನೈತಿಕ ಮಾನವ ಮತ್ತು ಅನೈತಿಕ ಸಮಾಜ)

" ಜೊತೆಗೆ ಪರಿಸ್ಥಿತಿಯಲ್ಲಿಯೇ ಆಗಲಿ ಮನಸ್ಸು ಯಾವಾಗಲೂ ಯಾವುದಾದರೊಂದು ಸಾಮಾಜಿಕ ಪರಿಸ್ಥಿತಿಯನ್ನೂ ಮೆಚ್ಚಿಕೊಂಡಿರುವುದು ಬುದ್ಧಿಯೂ ಕೂಡ ಆ ಮೆಚ್ಚಿಕೆಯನ್ನೇ ಕೊಂಚಮಟ್ಟಿಗೆ ಅನುಸರಿಸಿ ನಡೆಯುವುದು ಅದರಿಂದ ಸಾಮಾಜಿಕ ನ್ಯಾಯವು ನೀತಿ ಅಥವಾ ಬುದ್ಧಿಗಳಿಂದಲೇ ಸಿದ್ಧವಾಗುವುದು ಎಂದು ಹೇಳುವುದು ಸಾಧ್ಯವಿಲ್ಲ ಸಮರವು ತಪ್ಪುವುದೇ ಇಲ್ಲ ಈ ಸಮರದಲ್ಲಿ ಶಕ್ತಿಯನ್ನು ಶಕ್ತಿಯಿಂದಲೇ ಎದುರಿಸಬೇಕು " ಎಂದು ಹೇಳುತ್ತಾರೆ

ಆದುದರಿಂದ, ಯಾವುದಾದರೊಂದು ಜಾತಿಯನ್ನಾಗಲಿ ಒಂದು ಜನಾಂಗವನ್ನಾಗಲಿ ನಾವು ಸಂಪೂರ್ಣವಾಗಿ ಮತಾಂತರ ಮಾಡುವುವೆಂದು ಯೋಚಿಸುವುದು ಅಥವಾ ಈ ಸಮರವನ್ನು ಮಾತುಕತೆಗಳಿಂದ, ನ್ಯಾಯವೇ ಅನ್ಯಾಯವೇ ನೋಡಿ ಎಂದು ವಾದಿಸುವುದರಿಂದ ನಿರ್ಮೂಲಿಸುವೆವು ಎಂದುಕೊಳ್ಳುವುದು ಒಂದು ಭ್ರಾಂತಿ ಅಧಿಕಾರ ಸಂಪನ್ನವಾಗಿ ಆಳುತ್ತಿರುವ ಒಂದು ಸಾಮ್ರಾಜ್ಯವಾದಿ ಸರಕಾರವು ತನ್ನ ಅಧಿಕಾರದಲ್ಲಿರುವ ಒಂದು ರಾಜ್ಯವನ್ನು ಬಿಟ್ಟುಕೊಡುವುದು ಎಂದು ಭಾವಿಸುವುದು ಅಥವಾ ಒಂದು ಜಾತಿಯು ತನಗೆ ಸಿಕ್ಕಿರುವ ಒಂದು ಅನುಕೂಲ ಪರಿಸ್ಥಿತಿಯನ್ನೂ ಕೆಲವು ಹಕ್ಕುದಾರಿಗಳನ್ನೂ ಬಲಾತ್ಕಾರವಾಗುವಂಥ ಕಾರಣಗಳಿಲ್ಲದೆ ಬಿಟ್ಟುಕೊಡುವುದು ಎಂಬುದು ನಿಜವಾಗಿಯೂ ಮರುಮರೀಚಿಕೆ

ಗಾಂಧಿಜಿಯವರು ಇಂತಹ ಬಲಾತ್ಕಾರ ಒಂದನ್ನು ತಂದು ಕೆಲಸಮಾಡಿಸಬೇಕು ಎಂದು ಸ್ಪಷ್ಟವಾಗಿ ಹೇಳುತ್ತಾರೆ ಆದರೆ ಅವರು ಇದನ್ನು ಬಲಾತ್ಕಾರವೆನ್ನದೆ ಆತ್ಮಯಜ್ಞವೆಂದು ಕರೆಯುತ್ತಾರೆ ಇದರಲ್ಲಿ ಒಂದು ಆಧ್ಯಾತ್ಮಿಕ ಅಂಶವಿರುವುದರಿಂದ ಇದನ್ನು ಅಳೆಯುವುದಕ್ಕೆ ಸಾಧ್ಯವಿಲ್ಲ ಮತ್ತೆ ಯಾವ ರೀತಿಯಿಂದಲೂ ತೂಕ, ಬಣ್ಣ ಗೊತ್ತುಮಾಡುವುದಂತೂ ಇನ್ನೂ ಸಾಧ್ಯವಿಲ್ಲ ಆದ್ದರಿಂದ ಇದು ಏನು ಎಂದು ಹೇಳುವುದು ಅಸಾಧ್ಯವಾದರೂ ಈ ಆತ್ಮಯಜ್ಞದಿಂದ ಪ್ರತಿಪಕ್ಷದವರ ಮೇಲೆ ಪ್ರಬಲವಾದ ಪ್ರಭಾವವು ಬೀಳುವುದೆಂಬುದು ನಿಜ, ಸಂದೇಹವಿಲ್ಲ ಅವನು ತನ್ನ ನೀತಿ ಪ್ರಪಂಚದಲ್ಲಿ ಏನೇನು ದುರ್ಗಗಳನ್ನು ಕಟ್ಟಿಕೊಂಡಿರುವನು ಎಂಬುದನ್ನು ಹೊರಗೆಡಹಿ ಅವನನ್ನು ಅಂಜಿಸುತ್ತದೆ ಅವನಲ್ಲಿರುವ ಉತ್ತಮೋತ್ತಮ ಭಾವನೆಗಳನ್ನು ಅದು ಒಲಿಸಿಕೊಳ್ಳುತ್ತದೆ ಪರಸ್ಪರ ಸಮ್ಮೇಳನಕ್ಕೆ ಅವಕಾಶವನ್ನು ಮಾಡಿಕೊಡುತ್ತದೆ ಪ್ರೇಮದಿಂದ, ಆತ್ಮಯಜ್ಞದಿಂದ, ಒಬ್ಬನ ಬಳಿ ಸಾರುವುದರಿಂದ ಪ್ರತಿಪಕ್ಷದವರ ಮತ್ತು ನೋಡುತ್ತಿರುವವರ ಮನಸ್ಸಿನ ಮೇಲೆ ಪ್ರಬಲ ಪರಿಣಾಮವಾಗುವುದು ಎನ್ನುವುದರಲ್ಲಿ ಏನೂ ಸಂದೇಹವಿಲ್ಲ ಶಿಕಾರಿಗಳಿಗೆಲ್ಲಾ ಗೊತ್ತು, ಬೇಟೆಯನ್ನು ಸಮೀಪಿಸುವ ರೀತಿಯಲ್ಲಿ ವ್ಯತ್ಯಾಸವಾದ ಹಾಗೆಲ್ಲಾ ಫಲವೂ ವ್ಯತ್ಯಾಸವಾಗುವುದೆಂಬುದು ಬೇಟೆಯು ತನ್ನ ಮೇಲೆ ಬೀಳ ಬರುತ್ತಿರುವ ವೈರಿಯನ್ನು ದೂರದಿಂದಲೇ ಅರಿತು ಅದಕ್ಕೆ ಪ್ರತಿಯನ್ನು ಮಾಡಲು ಯೋಚಿಸುವುದು ಬೇಟೆಗಾರನ ಮನಸ್ಸಿನಲ್ಲಿ ಅವ

ನಿಗೆ ತಿಳಿಯದೆಯೇ ಹುಟ್ಟುವ ಭೀತಿಯ ನೆರಳೂ ಕೂಡ ಮೃಗಕ್ಕೆ ಹೇಗೆ ಹೇಗೋ ತಿಳಿದು, ಅದು ತಾನು ಹೆದರಿ, ಆ ಹೆದರಿಕೆಯಲ್ಲಿ ಬೇಟೆಗಾರನಮೇಲೆ ಬೀಳುತ್ತದೆ ಸಿಂಹವನ್ನು ಪಳಗಿಸುವವನು ಒಂದು ಘಳಿಗೆ ಅಂಜಿದರೆ ಸಾಕು, ಅದು ಮೇಲೆ ಬೀಳುತ್ತದೆ ಸಂಪೂರ್ಣವಾಗಿ ನಿರ್ಭೀತನಾದ ಮನುಷ್ಯನಿಗೆ ಕಾಡು ಮೃಗಗಳಿಂದ ಅಪಾಯವಾಗುವ ಸಂಭವವೇ ಇಲ್ಲ. ಅಕಸ್ಮಾತ್ತಾಗಿ ಅಪಾಯ ಸಂಭವಿಸಿದರೆ ಆ ಮಾತು ಬೇರೆ ಅದರಿಂದ ಮನುಷ್ಯರಲ್ಲೂ ಹೀಗೆಯೇ ಇದೇ ಮಾನಸಿಕ ಪ್ರಭಾವವೇ ಪರಿಣಾಮಕಾರಿ ಆದರೆ ವ್ಯಕ್ತಿಗಳಲ್ಲಿ ಇದು ನಿಜವಾಗಿದ್ದರೂ ಗುಂಪು ಅಥವಾ ಜಾತಿಯ ಮೇಲೆಯೂ ಇದು ಪರಿಣಾಮಕಾರಿಯಾಗುವುದೇ ? ಸಂದೇಹಿಸಬೇಕಾಗಿದೆ ಎದುರುಗಡೆಯ ಜಾತಿಯು ಈ (ಅಹಿಂಸಾ) ಪಕ್ಷದೊಡನೆ ವೈಯಕ್ತಿಕ ಮತ್ತು ಆತ್ಮೀಯ ಸಂಬಂಧವನ್ನು ಒಂದು ಜಾತಿಯಾಗಿ ಗಳಿಸಲಾರದು ಒಂದು ಜಾತಿಯೆಂದರೆ ಅದರಲ್ಲಿ ಎಷ್ಟೋ ವ್ಯಕ್ತಿಗಳು, ಅವರಿಗೆ ಬರುವ ಸುದ್ದಿಗಳು ಸಂಪೂರ್ಣವಾಗಿರುವುದಿಲ್ಲ, ಒಂದೇತರ ಸಂಪೂರ್ಣವಾಗಿರುವುದಿಲ್ಲ ಇದ್ದದ್ದು ಇದ್ದ ಹಾಗೆಯೇ ಇರುವುದಿಲ್ಲ ಏನೇ ಆಗಲಿ ಒಂದು ಗುಂಪು ತನ್ನ ಹಕ್ಕುದಾರಿಗಳನ್ನು ಒಪ್ಪದೇ ಇರುವ ಮತ್ತೊಂದು ಗುಂಪಿನ ಮೇಲೆ ಕೋಪಗೊಳ್ಳುವುದೂ, ಆ ಕೋಪವು ಮಿಕ್ಕ ಎಲ್ಲಾ ಸದ್ಭಾವನೆಗಳನ್ನು ನುಂಗಿಬಿಡುವಷ್ಟು ದೊಡ್ಡದಾಗುವುದೂ ಸ್ವಭಾವ ಈ ಜಾತಿಗೆ ಬಹು ಕಾಲದಿಂದಲೂ ತಾನು ಉತ್ತಮ, ಹಕ್ಕುದಾರಿಗಳು ತನ್ನವು, ಇವೆಲ್ಲವೂ ಹೀಗೇ ಇರುವುದೇ ಸಮಾಜಕ್ಕೆ ಕ್ಷೇಮ, ಎಂದುಕೊಂಡು ಅಭ್ಯಾಸವಾಗಿ ಹೋಗಿರುತ್ತದೆ ಅದರಿಂದ ಈ ಅಭ್ಯಾಸಕ್ಕೆ ವಿರೋಧವಾಗಿರುವ ಯಾವುದೊಂದು ಭಾವನೆ ಬಂದರೂ ಅದು ನಾಸ್ತಿಕವಾದವೆನಿಸುತ್ತದೆ ಕಟ್ಟು ಕಾಯಿದೆಗಳೂ ವ್ಯವಸ್ಥೆಯೂ ಇದ್ದುದನ್ನು ಇದ್ದಂತೆ ಕಾಪಾಡಿಕೊಂಡು ಹೋಗುವುದು, ಎಂಬಿವೇ (ಈ ಸದ್ಯದಲ್ಲಿ) ಭಾರಿ ಸದ್ಗುಣಗಳು, ಇವನ್ನು ವಿರೋಧಿಸುವುದು ಭಾರಿಯ ಪಾಪ ಎಂದಾದರ ತಪ್ಪೇನು ?

ಆದ್ದರಿಂದ ಆ ಪ್ರತಿಭಟಿಸುವ ಜಾತಿಯ ವಿಚಾರದಲ್ಲಿ ಈ ಮತಾಂತರದ ಸಾಧನವು ಅಷ್ಟು ಪರಿಣಾಮಕಾರಿಯಾಗುವುದಿಲ್ಲ ಕೆಲವು ವೇಳೆ ವಿರೋಧಿಸುವವರ ಸಾಧು ಸ್ವಭಾವವೂ ಸೌಜನ್ಯವೂ ಅವರನ್ನು ಇನ್ನೂ ಅಷ್ಟು ರೇಗಿಸಬಹುದು ಅವರಿಗೆ ಇಂತಹ ಪ್ರತಿಪಕ್ಷದವರನ್ನು ಕಂಡು ತಮ್ಮ ದೋಷವದೆಷ್ಟು ದೊಡ್ಡದು ಎನ್ನಿಸುತ್ತದೆ ಯಾರಿಗಾದರೂ ತಮ್ಮಲ್ಲಿ ದೋಷವಿರುವುದೆಂಬ ಭಾವನೆ ಬಂದರೆ ಅವರಿಗೆ ಮೊದಲು ತಮ್ಮ ಮೇಲೆಯೇ ಆಗ್ರಹ ಬರುತ್ತದೆ ಈ ಅಹಿಂಸಾ ಸಾಧನವು ಪ್ರತಿಪಕ್ಷದಲ್ಲಿರುವ ಹಲ ಕೆಲವರನ್ನು ತನ್ನ ಕಡೆಗೆ ಮಾಡಿಕೊಂಡು ಅಲ್ಲಿ ಇರುವ ವಿರೋಧವನ್ನು ಸಡಿಲಿಸಬಲ್ಲುದು, ಉದಾಸೀನರಾಗಿರುವವರ ಮೇಲೆ ಇದರ ಪರಿಣಾಮವು ಇನ್ನೂ ಹೆಚ್ಚು; ಅಖಿಲ ವಿಶ್ವದ ಮನೋಭಾವವನ್ನು ತಿದ್ದುವುದರಲ್ಲಿ ಇದೊಂದು ಪ್ರಚಂಡ ಸಾಧನ,

ಎಂಬುದಿಷ್ಟೂ ನಿಜ. ಆದರೆ ಅಧಿಕಾರದಲ್ಲಿರುವವರು ಈ ಸುದ್ದಿಯು ಹೊರಗೆ ಹೋಗದಂತೆ ಮಾಡುವುದಕ್ಕೂ ಅಥವಾ ತಮಗೆ ಬೇಕಾದಂತೆ ತಿದ್ದಿ ಕಳುಹಿಸುವುದಕ್ಕೂ ಸಾಧ್ಯವಿದೆ. ಸುದ್ದಿಯನ್ನು ಹೊರಗೆ ಕಳುಹಿಸಿಕೊಡುವ ಸಂಸ್ಥೆಗಳೆಲ್ಲವೂ ಅಧಿಕಾರಸ್ಥರ ಕೈಯಲ್ಲಿ ಇರುವುದರಿಂದ ಇದರ ಸುದ್ದಿಯು ನಿಜವಾಗಿಯೂ ನೇರವಾಗಿ ಹೊರಕ್ಕೆ ಹೋಗದಂತೆ ತಡೆಯಲು ಸಂಪೂರ್ಣವಾಗಿ ಸಾಧ್ಯ. ಆದರೂ ಈ ಅಹಿಂಸೆಯ ಕ್ರಮದ ಉತ್ತಮೋತ್ತಮವಾದ ಒಳ್ಳೆಯ ಪರಿಣಾಮಕಾರಿಯಾದ ಗುಣವು ಇನ್ನೊಂದು ಇದೆ. ಇದನ್ನು ಅನುಸರಿಸಿ ಜಾರಿಗೆ ತರುವ ದೇಶದಲ್ಲಿ ಇರುವ ಉದಾಸೀನ ಪ್ರಜೆಗಳ ಮೇಲೆ ಇದರ ಪರಿಣಾಮವು ಬಹಳ. ಅಂಥವರು ನಿಜವಾಗಿಯೂ ಇದರ ಕಡೆ ತಿರುಗುವರು. ಅನೇಕವೇಳೆ ಇದರಲ್ಲಿ ಉತ್ಸಾಹವಂತರೂ ಆಗುವರು. ಅವರು ಸಾಮಾನ್ಯವಾಗಿ ಅದರ ಉದ್ದೇಶವನ್ನು ಒಪ್ಪಿಕೊಂಡವರಾದ್ದರಿಂದ ಅವರತ್ತಕಡೆ ತಿರುಗುವುದಕ್ಕೆ ಬಹಳ ಪ್ರಯತ್ನ ಬೇಕಾಗಿಲ್ಲ. ಆದರೆ ಯಾರು ಈ ಬದಲಾವಣೆ ಬೇಡವೆನ್ನುವರೋ ಅವರ ಮೇಲೆ ಇದರ ಪರಿಣಾಮವು ಅಷ್ಟು ಪ್ರಭಾವಕಾರಿಯಲ್ಲ. ಹಿಂದೂಸ್ಥಾನದಲ್ಲಿ ಅಸಹಕಾರ ಮತ್ತು ಶಾಸನಭಂಗವು ಅಷ್ಟು ಬೇಗ ಹಬ್ಬಿದುದು, ಈ ಅಹಿಂಸೆಯ ಕ್ರಮವು ಪ್ರಜಾವರ್ಗದ ಮೇಲೆ ಅದಂತಹ ಪ್ರಬಲ ಪರಿಣಾಮವನ್ನು ಮಾಡುವುದು? ಉದಾಸೀನರನ್ನು ಅದು ಎಂದು ಉಳಿಸಿಕೊಳ್ಳುವುದು ಎಂಬುದಕ್ಕೆ ಒಂದು ಪ್ರತ್ಯಕ್ಷ ಪ್ರದರ್ಶನ. ಮೊದಲಿನಿಂದಲೂ ಅದಕ್ಕೆ ವಿರೋಧವಾಗಿದ್ದವರು ಅಷ್ಟಾಗಿ ಅದನ್ನು ಒಲಿಸಿಕೊಳ್ಳಲಿಲ್ಲ. ಈ ಚಳವಳಿಯು ಬಲಿತಹಾಗೆಲ್ಲಾ ಅವರಿಗೆ ಅಂಜಿಕೆ ಹೆಚ್ಚಿತು. ಅವರು ಇನ್ನೂ ದ್ವೇಷಿಗಳಾದರು.

ಸರಕಾರವು ತನ್ನ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಹಿಂಸೆಯನ್ನು ಉಪಯೋಗಿಸಬಹುದು ಎಂದು ಒಪ್ಪಿಕೊಳ್ಳುವುದಾದರೆ ಅದು ಆ ಸ್ವಾತಂತ್ರ್ಯವನ್ನು ಸಾಧಿಸುವುದಕ್ಕೆ ಹಿಂಸೆಯ ಬಲಾತ್ಕಾರಗಳನ್ನು ಏಕೆ ಉಪಯೋಗಿಸಬಾರದು? ಹಿಂಸೆಯ ಕ್ರಮವು ಮನಸ್ಸಿಗೆ ಒಪ್ಪದ ಇರಬಹುದು, ಸದ್ಯದಲ್ಲಿ ಅವಿವೇಕವಾಗಿರಬಹುದು, ಆದರೆ ಅದು ಸಂಪೂರ್ಣವಾಗಿ ಅನ್ಯಾಯವಲ್ಲ, ನಿಷಿದ್ಧವಲ್ಲ. ಸರ್ಕಾರದಲ್ಲಿ ಅಧಿಕಾರವಿದೆ. ಅವರಿಗೆ ಸೈನ್ಯದ ಬಲವಿದೆ ಎಂಬಷ್ಟು ಮಾತ್ರದಿಂದಲೇ ಅವರಿಗೆ ಹಿಂಸೆಯನ್ನು ಉಪಯೋಗಿಸಲು ಅಧಿಕಾರವುಂಟೇನು? (ಅವರು ಉಪಯೋಗಿಸುವ ಹಿಂಸೆಯು ನ್ಯಾಯವಾದೀತೇನು?) ಅಹಿಂಸೆಯ ಕ್ರಾಂತಿಯು ವಿಜಯಿಯಾಗಿ ಸರ್ಕಾರದ ಅಧಿಕಾರವನ್ನು ಕೈಗೆ ತೆಗೆದುಕೊಂಡರ ಹಿಂಸೆಯನ್ನು ಉಪಯೋಗಿಸುವ ಅಧಿಕಾರವು ಇದುವರವಿಗೂ ಇಲ್ಲದ ಇದ್ದು ಅದಕ್ಕೆ ಆಗ ಬರುವುದೇನು? ಆ ಕಾಲದಲ್ಲಿ ಒಂದು ದಂಗೆ ಎದ್ದರೆ ಅದೆಂತು ಅದನ್ನು ತಡೆಯುವುದು? ಹಿಂಸೆಯ ಕ್ರಮಗಳನ್ನು ಉಪಯೋಗಿಸಲು ಅದಕ್ಕೆ ಇಷ್ಟವಿಲ್ಲವಾದ್ದರಿಂದ ಶಾಂತವಾದ ಕ್ರಮಗಳಿಂದಲೇ ದಂಗೆಯನ್ನು ಅಡಗಿಸಲು ಪ್ರಯತ್ನಪಡುವುದಾದರೂ ಹಿಂಸೆಯನ್ನು ಉಪಯೋಗಿಸಲು

ತನಗೆ ಇರುವ ಅಧಿಕಾರವನ್ನು ಮಾತ್ರ ಬಿಟ್ಟುಕೊಡುವುದಿಲ್ಲ ಆದ ಬದಲಾವಣೆಗ ಳನ್ನು ಆಗಬಾರದಾಗಿತ್ತು ಎನ್ನುವವರು—ಜನ ಸಾಮಾನ್ಯದಲ್ಲಿ ಇದ್ದೇ ಇರುವವರು ಅವರು ಹಿಂದಿನ ಪರಿಸ್ಥಿತಿಯೇ ಇರಬೇಕು ಎನ್ನುವರು ಈ ಹೊಸ ಸರಕಾರವು ತಮ್ಮ ಹಿಂಸಾಕ್ರಮವನ್ನು ಅಣಗಿಸುವುದಕ್ಕೆ ಪ್ರತಿ ಹಿಂಸೆಯನ್ನು ಅವಲಂಬಿಸುವುದಿಲ್ಲ ಎಂದು ಗೊತ್ತಾದ ಕೂಡಲೆ ಅವರು ಹಿಂಸಾಪರರಾಗುವ ಸಂಭವವೇ ಹೆಚ್ಚು ಆದ ರಿಂದ ಹಿಂಸೆಯಾವುದು, ಅಹಿಂಸೆಯಾವುದು ಮತ್ತು ಬಲವಂತವಾವುದು, ಮತಾಂತರ ವಾವುದು ? ಎಂಬ ಎರಡನ್ನೂ ಅಷ್ಟು ಪ್ರತ್ಯೇಕಿಸಿ ಇಡುವುದು ಸಾಧ್ಯವಿಲ್ಲ. ರಾಜ ಕೀಯ ಬದಲಾವಣೆಗಳನ್ನು ಕುರಿತು ಯೋಚಿಸುವಾಗಲಂತು, ಈ ಕಷ್ಟವು ಬಹಳ ಭದ್ರಲೋಕಗಳಿಗೂ ಸುಲಿಗೆಗೆ ಗುರಿಯಾಗಿರುವ ಜಾತಿಗಳಿಗೂ ನಡುವೆಯಿರುವ ವ್ಯತ್ಯಾಸಗಳನ್ನು ತಿದ್ದಬೇಕೆನ್ನುವಾಗಲಂತು ಅದು ಇನ್ನೂ ಕಠಿಣವಾಗುವುದು

ಒಂದು ಉದ್ದೇಶಕ್ಕಾಗಿ ಬಲಿಯಾಗುವುದನ್ನು ಜನರು ಬಹಳ ಮೆಚ್ಚುತ್ತಾರೆ ಸೋಲದೆ ಹಿಂತಿರುಗದೆ ಯುದ್ಧಕ್ಕಾಗಿ ಆತ್ಮಾರ್ಪಣ ಮಾಡುವುದರಲ್ಲಿ ಒಂದು ದೊಡ್ಡ ತನವಿದೆ, ಒಂದು ಸೊಗಸಿದೆ ಆ ದೊಡ್ಡತನ ಸೊಗಸುಗಳು ಲೋಕವನ್ನು ಮೆಚ್ಚಿ ಸುತ್ತವೆ ಆದರ ಉದ್ದೇಶವಿಲ್ಲದ ಬಲಿಯಾಗುವುದಕ್ಕೂ ಒಂದು ಉದ್ದೇಶಕ್ಕಾಗಿ ಬಲಿಯಾಗುವುದಕ್ಕೂ ಸದ್ಯದಲ್ಲಿರುವ ವ್ಯತ್ಯಾಸವು ಬಹಳ ಸ್ವಲ್ಪ ಉದ್ದೇಶವಿಲ್ಲದೆ ಬಲಿ ಯಾಗುವುದರಲ್ಲಿ ಏನೋ ಒಂದು ಜಿಗುಪ್ಸೆ ಇದೆ ಒಂದು ಕೀಳುತನವಿದೆ ಹಿಂಸೆ ಯಲ್ಲಿ ಕ್ರೌರ್ಯಪ್ರದರ್ಶನದ ದೋಷವಿದೆ ಎಂದರ ಅಹಿಂಸೆಯಲ್ಲಿಯೂ ತದ್ವಿರುದ್ಧ ವಾದ ದೋಷವಿದೆ, ಹೇಡಿತನಕ್ಕೂ ಸೋಮಾರಿತನಕ್ಕೂ ಒಂದು ಗೌಸುಹಾಕಿ, ಅದನ್ನು ಅಹಿಂಸೆಯೆಂದು ಕರೆಯಬಹುದಾದ ಸಂಭವವಿದೆ ಇದ್ದುದನ್ನು ಇದ್ದ ಹಾಗೇ ಉಳಿಸಿಕೊಳ್ಳಲೂ ಈ ಅಹಿಂಸೆಯ ಸೋಗು ಹಾಕಿಕೊಳ್ಳಲೂ ಸಾಧ್ಯವಿದೆ.

ಭರತಖಂಡದಲ್ಲಿ ಕಳೆದ ಕಲವು ವರ್ಷಗಳಿಂದ ಸಾಮಾಜಿಕ ವ್ಯವಸ್ಥೆಯಲ್ಲಿ ತೀವ್ರವಾದ ಬದಲಾವಣೆಗಳಾಗಬೇಕೆಂಬ ಯೋಚನೆಯು ಬೆಳೆಯುತ್ತಾ ಬಂದಿದೆ ಅದು ಬೆಳೆದಹಾಗೆಲ್ಲ ಇಂತಹ ಬದಲಾವಣೆಯಾಗಬೇಕಾದರೆ ಹಿಂಸೆಯ ಮಾರ್ಗವನ್ನು ಅವ ಲಂಬಿಸಬೇಕು ಆದರಿಂದ ಇದು ಬೇಡವೆಂದು ಅನೇಕರು ಹೇಳುತ್ತಿದ್ದಾರೆ ಜಾತಿ ಸಮರವು ಎಷ್ಟೇ ಇರಲಿ ಅದರ ಸುದ್ದಿಯನ್ನು ಎತ್ತಬಾರದು ಇದರ ಮಾತು ಬಂದರೆ ಸಂಪೂರ್ಣವಾಗಿ ಸಹಕಾರದ ಭವ್ಯದರ್ಶನವೂ ಭಾವಿಸಿದ್ಧಿಯ ಕಡೆಗೆ ಅಹಿಂಸಾ ಮಾರ್ಗದ ಪ್ರಗತಿಯೂ ಎರಡೂ ಕೆಟ್ಟುಹೋಗುವುದು ಎನ್ನುತ್ತಾರೆ ಯಾವದೇ ಒಂದು ವಿಚಾರದಲ್ಲಿ ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸಬೇಕಾದರೆ ಒಂದು ಘಟ್ಟದಲ್ಲಿಯಾದರೂ ಹಿಂಸೆಯಾಗಲೇಬೇಕು, ಅದನ್ನು ಬಿಟ್ಟು ಬೇರೆ ಗತಿಯಿಲ್ಲ ಭದ್ರಲೋಕದವರಂತೂ ತಮ್ಮ ಶ್ರೀಮಂತಿಕೆಯನ್ನು ಬಿಟ್ಟುಕೊಡಲು ಹಿಂತೆಗೆದು ಅದನ್ನು ಉಳಿಸಿಕೊಳ್ಳಲು ಹಿಂಸೆಯನ್ನೇ ಅವಲಂಬಿಸುವುದಕ್ಕೆ ಹಿಂದೆಗೆಯುವುದಿಲ್ಲ

ಎಂಬುದು ಬಹಳ ನಿಜವೆಂದು ತೋರುತ್ತದೆ. ಆದರೆ ಅಹಿಂಸಾ ಕ್ರಮದಿಂದ ಒಂದು ಭಾರಿಯ ರಾಜಕೀಯ ವ್ಯತ್ಯಾಸವಾಗುವುದು ಸಾಧ್ಯವಾಗಿದ್ದರೆ, ಸಾಮಾಜಿಕ ವ್ಯವಸ್ಥೆಯಲ್ಲಿಯೂ ಅದೇ ಕ್ರಮದಿಂದ ಏಕೆ ಒಂದು ತೀವ್ರ ಬದಲಾವಣೆ ಆಗಬಾರದು ಎಂದು ಮಾತಿಗಾದರೂ ಕೇಳಬಹುದಲ್ಲ? ಅಹಿಂಸಾ ಕ್ರಮದಿಂದ ನಾವು ಬ್ರಿಟಿಷ್ ಸಾಮ್ರಾಜ್ಯಸತ್ತೆಯ ಕೊನೆಯನ್ನು ಕಂಡು ರಾಜಕೀಯ ಸ್ವಾತಂತ್ರ್ಯವನ್ನು ಸಂಪಾದಿಸಬಲ್ಲೆವಾದರೆ ಈ ಸಾಮಂತರಾಜರ ಮತ್ತು ಭೂಸ್ವಾಮ್ಯಗಳ ಸಮಸ್ಯಗಳನ್ನೂ ಉಳಿದ ಸಾಮಾಜಿಕ ಸಮಸ್ಯೆಗಳನ್ನೂ ಪರಿಹರಿಸಿಕೊಂಡು ಒಂದು ಸಮತಾವಾದ ಸರಕಾರವನ್ನು ಏರ್ಪಡಿಸಲು ಈ ಕ್ರಮವನ್ನು ಉಪಯೋಗಿಸಿಕೊಳ್ಳಲು ಸಾಧ್ಯವಿಲ್ಲವೇನು? ಅಹಿಂಸೆಯು ಇದಿಷ್ಟನ್ನು ಸಾಧಿಸಬಲ್ಲುದೇ, ಸಾಧಿಸಲಾರದೆ ಎಂಬುದು ಪ್ರಶ್ನೆಯಲ್ಲ. ಅಹಿಂಸೆಯಿಂದ ಸಾಧ್ಯವಾಗುವುದಾದರೆ ಎರಡೂ ಸಾಧ್ಯ, ಇಲ್ಲವಾದರೆ ಎರಡೂ ಇಲ್ಲ. ಈ ಅಹಿಂಸಾ ಕರ್ಮವನ್ನು ವಿದೇಶೀ ಸರ್ಕಾರದ ವಿರುದ್ಧವಾಗಿ ಮಾತ್ರ ಉಪಯೋಗಿಸಬೇಕೆಂದು ಯಾರೂ ಹೇಳಲಾಗುವುದಿಲ್ಲ. ಒಂದು ದೇಶದಲ್ಲಿರುವ ದೇಶೀಯರ ಸ್ವಾರ್ಥತೆ ಮತ್ತು ಅದರಿಂದ ಹುಟ್ಟಿಬರುವ ಅಡ್ಡಿಗಳನ್ನು ನಿವಾರಿಸಿಕೊಳ್ಳಲು ಅದರಿಂದ ಇನ್ನೂ ಸುಲಭ. ಹೊರಗಿನವರ ಮೇಲೆ ಆಗುವ ಪರಿಣಾಮಕ್ಕಿಂತಲೂ ನಮ್ಮವರ ಮೇಲೆ ಇದರಿಂದಾಗುವ ಪರಿಣಾಮವು ಹೆಚ್ಚು ಎಂಬುದು ಸ್ವತಸ್ಸಿದ್ಧ.

ಭರತಖಂಡದಲ್ಲಿ ಈಚೀಚಗೆ ಅಹಿಂಸೆಗೆ ವಿರೋಧವೆಂದು ತೋರುವ ಪ್ರತಿಯೊಂದು ರೀತಿನೀತಿಯನ್ನೂ ಖಂಡಿಸುವುದೊಂದು ಆರಂಭವಾಗಿದೆ. ಇದು ಅನ್ಯಾಯವೆಂದು ನನ್ನ ಭಾವನೆ. ೧೫ ವರ್ಷಗಳ ಹಿಂದೆ ನಾವು ಈ ಅಹಿಂಸೆಯನ್ನು ಅವಲಂಬಿಸಿದೆವು. ಇದರಿಂದ ಬಹಳ ಲಾಭವಾಗಿ ಶೀಘ್ರವಾಗಿ ನನಗೆ ಇಷ್ಟಾರ್ಥಸಿದ್ಧಿಯಾಗುವುದೆಂದು ಆಗಿನ ನಂಬಿಕೆ ಇತ್ತು. ಆಗ ಅಹಿಂಸೆಯೇ ಬೇರೆ, ಅದರಿಂದ ಸಾಧಿಸಬೇಕಾಗಿದ್ದ ಸಿದ್ಧಿಯೇ ಬೇರೆ ಎಂಬುದು ಸ್ಪಷ್ಟವಾಗಿತ್ತು. ನಮ್ಮ ಸಿದ್ಧಿಯು ಅಹಿಂಸೆಯ ಅವಾಂತರ ಫಲ ಅಥವಾ ಪರಿಣಾಮ ಎಂದು ಆಗಿರಲಿಲ್ಲ. ನಮ್ಮ ಸ್ವಾತಂತ್ರ್ಯವು ಅಹಿಂಸೆಯಿಂದ ಬರುವಂತಿದ್ದರೆ ಬರಲಿ, ಇನ್ನು ಬೇರೆ ಮಾರ್ಗಗಳಿಂದಾದರೆ ಬೇಡ ಎಂದು ಯಾರೂ ಹೇಳಿರಲಿಲ್ಲ. ಹೀಗಿರಲು ಈಗ ನಮ್ಮ ಗುರಿಯನ್ನು ಅಹಿಂಸೆಯ ಅಳತೆಗೋಲಿಂದ ಅಳೆದು ಅಹಿಂಸೆಗೆ ಸರಿಬೀಳದಿದ್ದರೆ ಅದನ್ನು ತಿರಸ್ಕರಿಸುವುದೆ? ಅಹಿಂಸಾ ಭಾವನೆಯು ಬರಬರುತ್ತಾ ಅಚಲವಾಗಿ ಶಾಶ್ವತವಾಗಿ ಪ್ರತಿಯಾಡುವುದಕ್ಕೆ ಸಾಧ್ಯವಲ್ಲದಂತಹ ಸಿದ್ಧಾಂತವಾಗುತ್ತದೆ. ಹೀಗಾಗಿ ಅದು ಬುದ್ಧಿಯ ಮೇಲೆ ತಾನು ಬೀರಿದ್ದ ಆಧ್ಯಾತ್ಮಿಕ ಪ್ರಭಾವವನ್ನು ಕಳೆದುಕೊಂಡು ಶ್ರದ್ಧಮತ ಎಂಬ ಕಟ್ಟುಗಳಲ್ಲಿ ಕುಳಿತುಕೊಳ್ಳುತ್ತದೆ. ಅಷ್ಟೇ ಅಲ್ಲ. ಸ್ವಾರ್ಥಪರರಾದವರು ತಮ್ಮ ಸದ್ಯಸ್ಥಿತಿಯನ್ನು ಕಾಪಾಡಿಕೊಳ್ಳಲು ಈ ಅಹಿಂಸೆಯೆಂಬ ದುರ್ಗವನ್ನು ಆಶ್ರಯಿಸಿದ್ದಾರೆ.

ಹೀಗಾಗಿರುವುದು ನಮ್ಮ ದುರದೃಷ್ಟ ಅಹಿಂಸೆಯನ್ನು ಎದುರಿಸುವುದು, ಅಹಿಂಸೆಯಿಂದ, ಅಹಿಂಸಾಪೂರ್ವಕವಾಗಿ ಹೆಣಗಾಡುವುದು, ಎಂಬ ಭಾವನೆಗಳು ಭರತಖಂಡದಲ್ಲಿ ಮಾತ್ರವಲ್ಲ ಪ್ರಪಂಚಕ್ಕೇ ಅವು ಅಮೌಲ್ಯವಾದವು ಈಗಿನವರ ಮನಸ್ಸನ್ನು ಅತ್ತ ಕಡೆಗೆ ತಿರುಗಿಸುವುದರಲ್ಲಿ ಗಾಂಧಿಜಿಯವರು ಮಾಡಿರುವ ಉಪಕಾರವು ಅಪಾರವಾದುದು ಎಂಬುದು ನನ್ನ ದೃಢನಂಬಿಕೆ ಈ ಭಾವನೆಗಳು ಮುಂದಕ್ಕೆ ಬಹಳ ಮಟ್ಟಿಗೆ ಹರಡುವುವು ಎಂದು ನನ್ನ ಭಾವನೆ ಬಹುಶಃ ಈ ಭಾವನೆಗಳನ್ನು ಸಂಪೂರ್ಣವಾಗಿ ಒಪ್ಪಿಕೊಳ್ಳಲು ಮನುಷ್ಯ ಸಮಾಜವು ಇನ್ನೂ ತಕ್ಕಷ್ಟು ಪಕ್ವವಾಗಿ ಲ್ಲವೋ ಏನು? ಎ ಇ ಅವರ 'ಇಂಟರ್‌ಪ್ರೆಟರ್ಸ್' ಎಂಬ ಒಂದು ಗ್ರಂಥದಲ್ಲಿ, "ದಿವ್ಯದರ್ಶನದ ಜ್ಯೋತಿಯನ್ನು ಕುರುಡರ ಮುಂದೆ ಹಿಡಿಯುವುದೇ? ಅವರಿಗೆ ಬೇಕಾದ್ದು ದೊಣ್ಣೆ, ಈ ದರ್ಶನದಿಂದ ಅವರಿಗೆ ಏನು ಫಲವಾದೀತು" ಎನ್ನುತ್ತಾರೆ ಇದೂ ಹಾಗೆಯೇ ಇರಬಹುದು ಸದ್ಯದಲ್ಲಿ ಈ ಭಾವನೆಗಳನ್ನು ಎಲ್ಲರೂ ಅಂಗೀಕರಿಸದಿರಬಹುದು ಆದರೆ ಮಿಕ್ಕ ಭಾರಿಯ ಭಾವನೆಗಳಂತೆ ಇದೂ ಬೆಳೆಯುವುದು ಬರಬರುತ್ತಾ ನಮ್ಮ ಕಾರ್ಯಕ್ರಮವೆಲ್ಲವನ್ನೂ ಈ ಭಾವನೆಗಳು ತಿದ್ದುವುವು ಅಸಹಕಾರವೆಂದರೆ, ಕೆಟ್ಟುದೆಂದು ಗೊತ್ತಾದ ಒಂದು ಸರಕಾರ ಅಥವಾ ಸಮಾಜದಿಂದ ಹೊರಕ್ಕೆ ಬಂದುಬಿಡುವುದು ಎಂಬುದು ಒಹಳ ಪರಿಣಾಮಕಾರಿಯಾದ ಮತ್ತು ದೂರಗಾಮಿಯಾದ ಭಾವನೆ ನೀತಿಪರರಾದ ಕೆಲವರು ಮಾತ್ರ ಇದನ್ನು ಮಾಡಿದರೂ ಸಾಕು, ಇದರ ಪ್ರಭಾವವು ಬೆಳೆಯುವುದು, ಹರಡುತ್ತಾ ಹೋಗುವುದು ಇದನ್ನು ಅವಲಂಬಿಸಿದವರ ಸಂಖ್ಯೆಯು ಹೆಚ್ಚಿದಂತೆಲ್ಲ ಪರಿಣಾಮವು ಕಣ್ಣಿಗೆ ಹೆಚ್ಚಾಗಿ ಕಾಣುವುದಾದರೂ ಸಂಖ್ಯೆಯು ಹೆಚ್ಚಾದಾಗ ಅದರ ನೈತಿಕ ಸ್ವರೂಪವು ಕಣ್ಣಿಗೆ ಕಾಣದೆ ಹೋಗುವ ಸಂಭವವೂ ಉಂಟು ಈ ಅಸಹಕಾರದ ನೈತಿಕ ಸ್ವರೂಪವನ್ನು ಇತರ ಕಾರಣಗಳು ಮರಸುವುದೂ ಉಂಟು ಅದು ಬೆಳೆದಂತೆಲ್ಲ ಅದರ ತೀವ್ರತೆಯು ಕಡಿಮೆಯಾಗುವುದೋ ಏನೋ? ಸಮೂಹವು ಮುಂದೆ ಬಂದಂತೆಲ್ಲ ವ್ಯಕ್ತಿಯು ಹಿಂದೆಬಿದ್ದು ಅವನ ಪ್ರಭಾವವು ಕಡಿಮೆಯಾಗುವುದು

ಸಂಪೂರ್ಣವಾಗಿ ಅಹಿಂಸೆಯನ್ನೇ ಪ್ರಧಾನ ಮಾಡುವುದರಿಂದ ಅದು ಜೀವನದ ಕೇಂದ್ರದಿಂದ ದೂರವಾಗುವುದು. ಆಗ ಜನರು ಅದನ್ನು ಅವಿಚಾರಿಗಳಾಗಿ ಒಂದು ಶ್ರದ್ಧೆಯಿಂದ ಒಪ್ಪಿಕೊಳ್ಳುವರು ಅಥವಾ ತಿರಸ್ಕರಿಸುವರು ಅಲ್ಲಿ ಬುದ್ಧಿಯ ಪ್ರಭಾವವು ಇಲ್ಲದೆಯೂ ಹೋಗುವುದು ಭರತಖಂಡದಲ್ಲಿ ೧೯೩೦ರಲ್ಲಿ ಭಯೋತ್ಪಾದಕನ ಮೇಲೆ ಇದು ಕೆಲವು ಪರಿಣಾಮಗಳನ್ನು ಮಾಡಿತು ಅನೇಕರು ಅಲ್ಲಿಂದ ವಿಮುಖರಾಗಿ ಹಿಂದಿರುಗಿದರು ವಿಮುಖರಾಗದೆ ನಿಂತವರಿಗೂ ಇದರ ಪ್ರಭಾವದಿಂದ ಸಂದೇಹಗಳು ತಲೆದೋರಿ ಅವರ ಹಿಂಸೆಯ ಕರ್ಮಗಳಿಗೆ ಅಡ್ಡ

ಹಾದಿ ಒಂದು ಹುಟ್ಟಿಕೊಂಡಿತು ಈಗ ಹಾಗಿಲ್ಲ ಇಂದಿನ ಕಾಂಗ್ರೆಸ್ಸಿನಲ್ಲಿ ಮುಖ್ಯ ರಾಗಿರುವ ಅನೇಕರು ಹಿಂದೆ ಅಸಹಕಾರ ಮತ್ತು ಶಾಸನಭಂಗ ಚಳವಳಿಯಲ್ಲಿ ಹೃದಯಪೂರ್ವಕವಾಗಿ ಅಹಿಂಸಾಕ್ರಮವನ್ನು ಸಂಪೂರ್ಣವಾಗಿ ಪಾಲಿಸಬೇಕೆಂದು ಹಟತೊಟ್ಟಿದ್ದವರು, ಈಗ ಈ ಅಹಿಂಸೆಯನ್ನು ಒಂದು ವ್ರತ ಅಥವಾ ಒಂದು ಮತವಾಗಿ ಅಂಗೀಕರಿಸದೆ ಇರುವುದರಿಂದ ಮತ್ತು ಸರ್ವಸಮವಾಗಿರುವ ನ್ಯಾಯ ಅಥವಾ ಅವಕಾಶವನ್ನು ಕಲ್ಪಿಸುವ ಸಮತಾವಾದ ಸರಕಾರವೇ ಸರ್ಕಾರ, ಈಗಿರುವ ಪದವಿ ಆಸ್ತಿಗಳನ್ನು ಕಿತ್ತೊಗೆದು ಒಂದು ಕ್ರಮಬದ್ಧವಾದ ಸಮಾಜವನ್ನು ರಚಿಸುವುದೇ ಮುಖ್ಯ ಧ್ಯೇಯ, ಇದನ್ನು ಬಿಟ್ಟರೆ ಇನ್ನೊಂದಿಲ್ಲವೆಂಬ ತಮ್ಮ ಗುರಿಯನ್ನು ಬಿಡಲಾರದಿರುವುದರಿಂದ, ಇವರು ಕಾಂಗ್ರೆಸ್ಸಿನಲ್ಲಿರಲು ಅನರ್ಹರು ಎಂದೆನಿಸಿಕೊಂಡಿದ್ದಾರೆ ಗಾಂಧಿಜಿಯವರು ಪ್ರಭಾವಶಾಲಿಗಳಾದ ಇಂದಿನ ಪ್ರಮುಖ ಮುಖಂಡರಲ್ಲಿ ಒಬ್ಬರು ಅವರ ಅಹಿಂಸೆಯು ಬಹಳ ಪ್ರಬಲವಾದ ಮತ್ತು ಪರಿಣಾಮಕಾರಿಯಾದ ಜಾತಿಯದು. ಮತ್ತು ಯಾವಾಗ ಆತನು ಈ ದೇಶದಲ್ಲಿ ನವಚೈತನ್ಯವನ್ನು ತುಂಬಿ ಮತ್ತೊಂದು ಸ್ವಾತಂತ್ರ್ಯ ಚಳವಳಿಯನ್ನು ಎಂದು ಹೂಡುವನೊ ಯಾರು ಹೇಳಬಲ್ಲರು ಈತನೊಬ್ಬ ಮಹಾಪುರುಷ ಈತನಲ್ಲಿ ಪೂರ್ವಾಪರ ವಿರೋಧವುಂಟು. ಆದರೂ ಈತನು ಪ್ರಜಾವರ್ಗವನ್ನು ತನ್ನ ಅಂಗೈಯಲ್ಲಿ ಇರಿಸಿಕೊಂಡು ಮುಂದೆ ನುಗ್ಗಬಲ್ಲನು ಈತನನ್ನು ಅಳೆಯುವ ಅಳತೆಗೋಲು ನಮ್ಮಲ್ಲಿಲ್ಲ ಇತರರನ್ನು ಅಳೆಯುವಂತೆ, ಇತರರ ಯೋಗ್ಯತೆಯನ್ನು ಗೊತ್ತುಮಾಡಿಕೊಳ್ಳುವಂತೆ, ಈತನನ್ನು ಅಳೆದು ಗೊತ್ತುಮಾಡಲು ಸಾಧ್ಯವಿಲ್ಲ ಈತನನ್ನು ಅನುಸರಿಸುವ ಅನೇಕಾನೇಕರು ನಿಸ್ತೇಜರಾದ ಶಾಂತವಾದಿಗಳಾಗುವರು, ಅಥವಾ ಟಾಲ್‌ಸ್ಟಾಯ್ ಜಾತಿಯ ಅಸಮರ್ಥರಾಗುವರು, ಅಥವಾ ಜೀವನದ ಸಮಸ್ಯೆಗಳನ್ನೂ ವಾಸ್ತವಾಂಶಗಳನ್ನೂ ಪರಿಗಣಿಸದ ಒಂದು ಸಣ್ಣ ಗುಂಪಾಗುವರು ಇಂಥವರು ಈಗಿರುವ ಪರಿಸ್ಥಿತಿಯನ್ನು ಕಾಪಾಡಿಕೊಳ್ಳಬೇಕೆಂಬ ಭಾವನೆ ಇರುವ ಹಲವರನ್ನು ತಮ್ಮ ಸುತ್ತಮುತ್ತಲೂ ಸೇರಿಸಿಕೊಳ್ಳುವರು ಅವರು ಸ್ವಾರ್ಥಕ್ಕಾಗಿ ಅಹಿಂಸೆಯನ್ನು ಅವಲಂಬಿಸುವರು "ರಾಮಾಯ ಸ್ವಸ್ತಿ ರಾವಣಾಯ ಸ್ವಸ್ತಿ" ಎಂಬ ಭಾವವು ಹೀಗೆ ತಲೆದೋರಿ ಪ್ರತಿಪಕ್ಷದವರನ್ನು ಅಹಿಂಸೆಯ ಕಡೆಗೆ ತಿರುಗಿಸಿಕೊಳ್ಳುವುದರ ಬದಲು ಅಹಿಂಸೆಯನ್ನೂ ಆ ಕಡೆಗೆ ತಿರುಗಿಸಿಕೊಂಡು ಪ್ರತಿಪಕ್ಷದವರ ಪಾಲಾಗುವ ಪದ್ಧತಿಯು ಕಾಣಿಸಿಕೊಳ್ಳುವುದು ಉತ್ಸಾಹವು ಕಡಮೆಯಾಗಿ ನಾವು ದುರ್ಬಲರಾದಾಗ ಕೊಂಚ ಹಿಂದಕ್ಕೆ ಹೋಗೋಣ ಎನಿಸುವುದೂ ರಾಜಿಯಾಗೋಣ ಎನಿಸುವುದೂ ಸ್ವಭಾವ, ಇಂತಹ ಸ್ವಭಾವವನ್ನು ನಮ್ಮ ಶತ್ರುಗಳನ್ನು ಗೆದ್ದುಕೊಳ್ಳುವ ಸಾಧನವೆಂದುಕೊಳ್ಳುವುದರಲ್ಲಿ ನಮಗೆ ಒಂದು ಸಮಾಧಾನ ಉಂಟು ಕೆಲವು ವೇಳೆ ನಾವು ನಮ್ಮ ಹಳೆಯ ಸ್ನೇಹಿತರನ್ನು ಬಿಟ್ಟುಕೊಟ್ಟು ಈ ಲಾಭವನ್ನು ಸಂಪಾದಿಸುವುದುಂಟು. ಅವರು ಅತಿ ಅತಿ. ಅವರ ಮಾತುಗಳು ನಮ್ಮ ಹೊಸ ಸ್ನೇಹಿತರಿಗೆ

ಸರಿಬೀಳುವುದಿಲ್ಲ, ಅವರು ನಮ್ಮ ಒಗ್ಗಟ್ಟನ್ನು ಹಾಳುಮಾಡುವವರು ಎಂದು ನಾವು ಅವರನ್ನು ಅಲ್ಲಗಳೆಯುವೆವು ಸಮಾಜದ ಇಂದಿನ ಈ ದುರ್ವ್ಯವಸ್ಥೆಯನ್ನು ನಿಜವಾಗಿಯೂ ಬದಲಾಯಿಸಬೇಕು ಎಂಬುದಕ್ಕೆ ಬದಲಾಗಿ ಈಗಿರುವ ಕ್ರಮದಲ್ಲಿ ದಯಾದಾಕ್ಷಿಣ್ಯಗಳು ಪ್ರಮುಖವಾಗಿರಲಿ ಎನ್ನುವೆವು ಇದರಿಂದ ಈಗ ಬೇರೂರಿರುವ ಸ್ವಾರ್ಥಲೋಭಗಳು ಹಾಗೆ ಹಾಗೆಯೇ ಉಳಿಯುವುವು

ಗಾಂಧಿಜಿಯವರು ಸಿದ್ಧಿಯ ಸಾಧನವನ್ನು ಕುರಿತು ಒತ್ತಿ ಒತ್ತಿ ಹೇಳಿರುವುದರಿಂದ ನಮಗೆ ಒಂದು ಭಾರಿ ಉಪಕಾರವಾಗಿದೆ ಎಂದು ನನ್ನ ನಂಬಿಕೆ ಆದರೂ ಸಾಧನಕ್ಕಿಂತಲೂ ಸಿದ್ಧಿಯು ಹೆಚ್ಚು ಎಂದು ಒತ್ತಿ ಒತ್ತಿ ಹೇಳಬೇಕೆಂದು ನನಗೆ ಆಶೆ ನಮಗೆ ಆ ಭಾವನೆ ಬರುವವರೆಗೂ ನಾವು ಏನು ಆಗುವುದಕ್ಕೂ ಸಾಧ್ಯವಿಲ್ಲ ಸುಮ್ಮನೆ ಸುತ್ತಿ ಸುತ್ತಿಕೊಂಡು ಬಂದಂತೆ ಆಗುವುದು ನಮ್ಮ ಶಕ್ತಿ ಸಾಮರ್ಥ್ಯಗಳನ್ನೆಲ್ಲಾ ಮುಖ್ಯವಲ್ಲದ ವಿಷಯಗಳಲ್ಲಿ ಕಳೆದುಕೊಂಡಂತಾಗುವುದು ಹಾಗೆಂದು ಸಾಧನವನ್ನೂ ತಿರಸ್ಕರಿಸುವಂತಿಲ್ಲ ಈ ಸಾಧನಗಳಿಗೆ ನೀತಿಯ ಪಕ್ಷ ಒಂದು, ಕಾರ್ಯಕಾರಿಯಾದ ಪಕ್ಷ ಒಂದು, ಹೀಗೆ ಎರಡುಂಟು ಅನೀತಿಯುತವಾದ ದುಷ್ಟ ಸಾಧನಗಳಿಂದ ಅನೇಕ ವೇಳೆ ಸಿದ್ಧಿಯು ನಾಶವಾಗುವುದಲ್ಲದೆ ಇನ್ನೂ ಏನೇನೋ ಹೊಸ ಹೊಸ ಭೀತಿಗಳು ಹುಟ್ಟಿಕೊಳ್ಳುವುದೂ ಉಂಟು ಎಲ್ಲದಕ್ಕಿಂತಲೂ ಹೆಚ್ಚಾಗಿ ಯಾವನೇ ಆಗಲಿ ತಾನು ಹಾಗೆ ಮಾಡುವೆನು ಹೀಗೆ ಮಾಡುವೆನು ಎಂದು ಎಷ್ಟು ಹೇಳಿದರೂ ಅವನು ಮಾಡುತ್ತಿರುವುದೇನು ಎಂಬುದರಿಂದಲೇ ಅವನ ಯೋಗ್ಯತೆ ಸ್ಪಷ್ಟವಾಗಿ ಗೊತ್ತಾಗುವುದು ಅನಾವಶ್ಯಕವಾದ ಸಮರಗಳನ್ನು ಹೂಡುವ ಮತ್ತು ದ್ವೇಷಗಳನ್ನು ಅಭಿವೃದ್ಧಿಸುವ ಸಾಧನವನ್ನು ಅವಲಂಬಿಸಿದರೆ ಸಿದ್ಧಿಯು ಅಸಾಧ್ಯವೂ ದೂರವೂ ಆಗುವುದರಲ್ಲಿ ಸಂದೇಹವಿಲ್ಲ ಸಿದ್ಧಿ ಸಾಧನಗಳು ಬಹು ನಿಕಟವಾದುವು ಒಂದಕ್ಕೊಂದು ಬಹಳ ಹೊಂದಿಕೊಂಡಿವೆ ಇವುಗಳನ್ನು ಬೇರ್ಪಡಿಸುವುದು ಸಾಧ್ಯವೇ ಇಲ್ಲ ಆದರಿಂದ ಮುಖ್ಯವಾಗಿ ಸಮರವನ್ನೂ ದ್ವೇಷವನ್ನೂ ಆದಷ್ಟು ತಗ್ಗಿಸುವ ಸಾಧನವೇ ಆಗಬೇಕು. ಸಂಪೂರ್ಣವಾಗಿ ಸಮರದ್ವೇಷಗಳನ್ನು ತಪ್ಪಿಸದಿದ್ದರೂ ಹೋಗಲಿ ಇಲ್ಲವೆ ಆದಷ್ಟು ಕಡಿಮೆಯಾದರೂ ಮಾಡುವ ಮತ್ತು ಎಲ್ಲರಲ್ಲಿಯೂ ಸೌಜನ್ಯವನ್ನು ಸಂಪಾದಿಸುವ ಸಾಧನವೇ ಆಗಬೇಕು ಆಗ ಅದು ಮನೋವೃತ್ತಿ ಎಂತಹುದು ಸ್ವಭಾವವೆಂತಹುದು ಎಂಬುದನ್ನು ಅವಲಂಬಿಸುವುದೇ ಹೊರತು ಆ ಕ್ರಮವೇ ಆಗಬೇಕು, ಈ ಕ್ರಮವೇ ಆಗಬೇಕು ಎಂದು ಒತ್ತುವುದಿಲ್ಲ, ಈ ಅತ್ಯಂತ ಮುಖ್ಯೋದ್ದೇಶವನ್ನು ಗಾಂಧಿಜಿಯವರು ಒತ್ತಿಒತ್ತಿ ಹೇಳಿದರು ಅವರ ಈ ಕಾರ್ಯದಿಂದ ಮನುಷ್ಯ ಸ್ವಭಾವವೇ ಬಹಳ ಮಟ್ಟಿಗೆ ಬದಲಾಯಿಸದೆ ಹೋಗಿದ್ದರೂ ಲಕ್ಷಾಂತರ ಪ್ರಜೆಗಳನ್ನು ಪ್ರಚೋದನ ಮಾಡಿದ ಒಂದು ಭಾರಿಯ ಚಳವಳಿಯ ಮೇಲೆ ಈತನ ಮುದ್ರೆ ಅಚ್ಚಳಿಯದಂತೆ ಬಿದ್ದಿದೆ. ನೀತಿಯ ಶಿಸ್ತನ್ನು ಕಾಪಾಡಿಕೊಳ್ಳುವುದು ಬಹಳ ಆವಶ್ಯಕವೆಂದು ಈತನು ಹೇಳುವಂತಹ ವೈಯಕ್ತಿಕ ನೀತಿಯ ಮಾನದಂಡಗಳು ಬಹುಶಃ ಇತರರಿಗೆ ಸಮ್ಮತ

ವಿಲ್ಲದೆ ಇರಬಹುದು ಈತನು ಮನುಷ್ಯನ ಪಾಪ ಮತ್ತು ದೌರ್ಬಲ್ಯ ಇವುಗಳನ್ನು ಗಮನಿಸುವಂತೆ ಸಾಮಾಜಿಕ ಪಾಪಗಳನ್ನು ಗಮನಿಸುವುದಿಲ್ಲ ಇದು ಏಕೆ ಎಂಬುದು ಸ್ಪಷ್ಟವಾಗಿಯೇ ಇದೆ ಅನೇಕರಿಗೆ ಕಾಡುಮೇಡುಗಳನ್ನು ತೊರೆದು ಅರಮನೆಗಳ ಅಧಿಕಾರಸ್ಥಾನಗಳನ್ನು ಸೇರುವುದಕ್ಕೆ ಎಷ್ಟೋ ಆಶೆ ಈ ದುರಾಶೆಯು ಅದೆಷ್ಟೋ ಮಂದಿ ಕಾಂಗ್ರೆಸ್ಸಿನವರನ್ನು ಬಲಿಗೊಂಡಿದೆ ಕಾಂಗ್ರೆಸ್ಸಿನಲ್ಲಿ ಯಾರಾದರೂ ಸ್ವಲ್ಪ ಪ್ರಸಿದ್ಧಿಗೆ ಬಂದರೆ ಸಾಕು ಅವರಿಗೆ ಈ ಅಧಿಕಾರದ ಅರಮನೆಯ ಬಾಗಿಲುಗಳು ಯಾವಾಗಲೂ ತೆರದೇ ಇರುತ್ತವೆ

ಈಗಿನ ಜಗತ್ತಿನಲ್ಲಿ ಭಾರಿ ಭಾರಿಯ ಎಷ್ಟೋ ಸಂದು ಕಟ್ಟುಗಳು ಒದಗಿವೆ ಆದರೆ ಅವು ಯಾವುವೂ ಆಧ್ಯಾತ್ಮಿಕ ಸಂದು ಕಟ್ಟಿನಷ್ಟು ಭಾರಿಯಲ್ಲ ಪೌರ್ವಾತ್ಯ ದೇಶಗಳ ವಿಷಯದಲ್ಲಂತೂ ಇದು ಅಕ್ಷರಶಃ ನಿಜ ಈಚೆಗೆ ಏಷ್ಯದಲ್ಲಿ ಬಹು ಬೇಗ ಬೇಗ ಬದಲಾವಣೆಗಳು ಆಗುತ್ತಿವೆ, ಇನ್ನೆಲ್ಲಿಯೂ ಆಗದಷ್ಟು ಬದಲಾವಣೆಯಾಗುತ್ತಿವೆ ಅಂದು ಇಂದುಗಳನ್ನು ಸರಿತೂಗಿಸಿಕೊಳ್ಳುವುದು ಬಹು ಕಷ್ಟವಾಗಿದೆ ಈ ಸಂದರ್ಭದಲ್ಲಿ ಕಣ್ಣೆದುರು ನಿಂತು ಹೆದರಿಸುತ್ತಿರುವ ಸಮಸ್ಯೆಗಳಲ್ಲಿ ರಾಜಕೀಯ ಸಮಸ್ಯೆಯು ಬಹಳ ಸಣ್ಣದು ನಮಗೇನೋ ಅದು ಬಹಳ ದೊಡ್ಡದಾಗಿ ಕಾಣಿಸುತ್ತದೆ ಆದರೂ ಅದೇನೋ ಸಣ್ಣದೇ! ಮಿಕ್ಕ ಯಾವ ಸಮಸ್ಯೆಯನ್ನು ಪರಿಹರಿಸಬೇಕಾದರೂ ಅದು ಮೊದಲು ಬಗೆ ಹರಿಯಬೇಕು ಅನಾದಿಕಾಲದಿಂದ ನಮಗೆ ಒಂದು ಸಾಮಾಜಿಕ ವ್ಯವಸ್ಥೆಯು ಶಾಶ್ವತವಾಗಿ ನಡೆದು ಬಂದಿದೆ ನಮ್ಮಲ್ಲಿ ಅನೇಕರು "ಇದೇ ಸರಿಯಾದ ವ್ಯವಸ್ಥೆ ಇದಕ್ಕಿಂತ ನ್ಯಾಯವಾದ ವ್ಯವಸ್ಥೆಯು ಬೇರೊಂದಿಲ್ಲ" ಎಂದುಕೊಂಡು ತಮ್ಮ ನೀತಿಯ ಭಾವನೆಗಳನ್ನೆಲ್ಲಾ ಅದಕ್ಕೆ ತಕ್ಕಂತೆ ರೂಪಗೊಳಿಸಿದ್ದಾರೆ ಆದರೆ ಆ ಭೂತ ಕಾಲದ ಸ್ಥಿತಿಯನ್ನು ವರ್ತಮಾನದಲ್ಲಿ ಸೇರಿಸುವುದು ಸಾಧ್ಯವಿಲ್ಲದೆ ಹೋಗಿದೆ ಅಮೇರಿಕದ ಅರ್ಥಶಾಸ್ತ್ರಜ್ಞನಾದ ವೆಬ್ಲನ್ ಎಂಬುವನು "ಆರ್ಥಿಕ ನೀತಿಗಳು ಆರ್ಥಿಕ ಆವಶ್ಯಕತೆಯ ಮೇಲೆಯೇ ಅವಲಂಬಿಸಿರುವುದು" ಎಂದು ಹೇಳಿದ್ದಾನೆ ಇಂದಿನ ಸ್ಥಿತಿಗತಿಗಳೂ ಇಂದಿನ ಕಾರ್ಯ ಕರ್ತವ್ಯಗಳೂ ನಮಗೆ ನೀತಿಯ ಹೊಸದಾರಿಯನ್ನು ತುಳಿಯಬೇಕಾದ ಆವಶ್ಯಕತೆಯನ್ನು ಕಲ್ಪಿಸಿವೆ ಈ ಆಧ್ಯಾತ್ಮಿಕ ಸಂದುಕಟ್ಟಿನಿಂದ ಪಾರಾಗಬೇಕಾದರೆ, ಆಧ್ಯಾತ್ಮಿಕವಾಗಿ ನಮಗೆ ಇಂದು ಬೇಕಾಗುವುದೇನು ಎಂಬುದನ್ನು ನಾವು ಮನಗಾಣಬೇಕಾದರೆ, ಸಮಸ್ಯೆಗಳನ್ನು ನೇರವಾಗಿ ಧೈರ್ಯವಾಗಿ ಯಾವುದೊಂದು ಮತದ ಯಾವುದೊಂದು ಸಿದ್ಧಾಂತದ ಅವಲಂಬನೆಯೂ ಇಲ್ಲದೆ ಬಗೆಹರಿಸಿಕೊಳ್ಳಬೇಕು ಮತದ ಉಪದೇಶವು ಸರಿ ಇರಬಹುದು ತಪ್ಪಿರಬಹುದು ಆದರೆ ಅದನ್ನು ಹೇಳುವ ರೀತಿಯಲ್ಲಿ ನಮ್ಮನ್ನು ಕುರುಡರನ್ನಾಗಿ ಮಾಡುವ ಸಂಭವವಿದೆ ಅದು ನಾವು ನಮ್ಮ ಸಮಸ್ಯೆಗಳನ್ನು ಬುದ್ಧಿಯ ಬಲದಿಂದ ವಿಚಾರ ಮಾಡಿನೋಡಿ ಪರೀಕ್ಷಿಸಲು ಅವಕಾಶ ಕೊಡುವುದಿಲ್ಲ ಫ್ರಾಯ್ಡ್

ಎಂಬುವನು ತೋರಿಸಿಕೊಟ್ಟಿರುವಂತೆ "ಮತದ ಉಪದೇಶಗಳು ನಂಬಬೇಕಾದವು ಇದನ್ನು ನಮ್ಮ ಪೂರ್ವಜರು ನಂಬಿದ್ದರು ಆ ಪುರಾತನ ಕಾಲದಿಂದಲೂ ಇವು ಸರಿ ಎಂಬುದಕ್ಕೆ ತಕ್ಕಷ್ಟು ಸಾಕ್ಷಿಗಳಿವೆ ಅವು ಸರಿಯೋ ತಪ್ಪೋ ಎಂಬ ಪ್ರಶ್ನೆಯನ್ನು ಎತ್ತುವುದೇ ಸಾಧುವಲ್ಲ *"

ನಾವು ಅಹಿಂಸೆಯನ್ನೂ ಅದರೊಡನೆ ಬೆರೆತುಹೋಗಿರುವ ಮತಸಿದ್ಧಾಂತ ದೃಷ್ಟಿಯನ್ನೂ ಗಮನಿಸಿದರೆ, ಅದಕ್ಕೆ ಪ್ರತಿಯಾಡುವಂತೆಯೇ ಇಲ್ಲ ಆಗ ಅದು, ಪ್ರಜಾವರ್ಗಕ್ಕೆ ಸಮ್ಮತವೋ ಅಸಮ್ಮತವೋ ಎಂಬ ಯೋಚನೆಯೇ ಇಲ್ಲದೆ, ಅದನ್ನು ಅಂಗೀಕರಿಸಿ ಆಚರಿಸುವ ಒಂದು ಗುಂಪಿನ ವ್ರತವಾಗಿಬಿಡುವುದು ಹೀಗಾದರೆ, ಅದಕ್ಕೆ ಅಷ್ಟು ತೇಜಸ್ಸಿರುವುದಿಲ್ಲ ಮತ್ತು ಅದು ವರ್ತಮಾನ ಸಮಸ್ಯೆಗಳನ್ನು ಬಗೆಹರಿಸುವ ಸಾಧನವಾಗುವುದಿಲ್ಲ ಹಾಗಿಲ್ಲದೆ ಆ ಅಹಿಂಸೆಯನ್ನು ಇಂದಿನ ವರ್ತಮಾನ ಸ್ಥಿತಿಗತಿಗಳಿಗೆ ಸಂಬಂಧಪಟ್ಟಂತೆ ನಾವು ಚರ್ಚಿಸಿ ಅಳೆದು ಸುರಿದು ಮಾಡಬಲ್ಲೆವಾದರೆ, ಅದು ಪ್ರಪಂಚವನ್ನು ಸುಧಾರಿಸುವುದರಲ್ಲಿ ನಮಗೆ ಬಹಳ ಸಹಾಯಕಾರಿಯಾಗುವುದು ಇಂಥಹ ಅಳೆದು ಸುರಿಯುವ ವಿಚಾರವು ಮನುಷ್ಯ ಸ್ವಭಾವವು ಎಂತಹುದು, ಅದಕ್ಕಿರುವ ದೌರ್ಬಲ್ಯವೇನು, ಎಂಬುದನ್ನು ಮುಖ್ಯವಾಗಿ ಗಮನಿಸಬೇಕು ಮನುಷ್ಯ ಸಮಾಜದ ಆಚರಣೆಗಾಗಿ ಸಿದ್ಧವಾಗುವ, ಅದರಲ್ಲೂ ಅಭೂತಪೂರ್ವವಾಗಿ ಬದಲಾವಣೆಗಳನ್ನು ಮಾಡುವುದಕ್ಕೆ ಹೊರಟ, ಚಳವಳಿಗಳಲ್ಲಿ, ಪರಿಣಾಮಕಾರಿಯಾಗುವ ಪ್ರಭಾವವು ಕಾಣುವುದು, ಆ ಚಳವಳಿಯ ಮುಖಂಡರು ಏನನ್ನು ಕುರಿತು ಚಿಂತಿಸುವರು ಎಂಬುದರಿಂದಲ್ಲ, ಸಮಯೋಚಿತ ಪರಿಸ್ಥಿತಿಗಳು ಏನು ಹೇಗಿವೆ ಎಂಬುದರಿಂದ ಎಲ್ಲದಕ್ಕಿಂತಲೂ ಹೆಚ್ಚಾಗಿ, ಆ ಚಳವಳಿಯಲ್ಲಿ ಭಾಗವಹಿಸುವ ಜನರು ಅದರ ವಿಚಾರದಲ್ಲಿ ಏನೆಂದುಕೊಂಡಿದ್ದಾರೆ ಎಂಬುದರಿಂದ

ಜಗತ್ತಿನ ಇತಿಹಾಸದಲ್ಲಿ ಹಿಂಸೆಯು ಅನೇಕ ಭಾರಿಯ ಕೆಲಸಗಳನ್ನು ಮಾಡಿದೆ, ಈಗಲೂ ಎಷ್ಟೋ ಮಾಡುತ್ತಿದೆ, ಇನ್ನು ಮುಂದೆಯೂ ಎಷ್ಟೋ ಮಾಡುತ್ತದೆ ಹಿಂದಿನ ಕಾಲದಲ್ಲಿ ಆಗಿರುವ ಬದಲಾವಣೆಗಳೆಲ್ಲಾ ಬಹುತರವಾಗಿ ಹಿಂಸೆ ಮತ್ತು ಬಲಾತ್ಕಾರಗಳಿಂದಲೇ ಆದವು ಡಬ್ಲ್ಯು ಇ ಗ್ಲಾಡ್‌ಸ್ಟನ್ನರು ಒಮ್ಮೆ "ರಾಜಕೀಯ ವಿಷಮ ಪರಿಸ್ಥಿತಿಗಳ ಕಾಲದಲ್ಲಿ ಈ ದೇಶದ ಜನರಿಗೆ ಹಿಂಸೆಯಲ್ಲಿ ದ್ವೇಷ, ಒಂದು ವ್ಯವಸ್ಥೆಯಲ್ಲಿ ಪ್ರೀತಿ, ಸಮಾಧಾನವನ್ನು ಕಾಪಾಡಿಕೊಳ್ಳಬೇಕಾದ ಆವಶ್ಯಕತೆ, ಇವು ನೆನೆಪಿನಲ್ಲಿರಲಿ ಎಂಬುದನ್ನು ಬಿಟ್ಟು ಇನ್ನೇನನ್ನೂ ಹೇಳದೆಯೇ ಹೋಗಿದ್ದರೆ, ಈ ದೇಶದ ಸ್ವಾತಂತ್ರ್ಯವು ಎಂದಿಗೂ ಬರುತ್ತಲೇ ಇರಲಿಲ್ಲ ಎಂದು ಹೇಳಲು ಸಂಕಟವಾಗುತ್ತದೆ," ಎಂದು ಹೇಳಿದ್ದಾರೆ

---

*ಫ್ಯೂಚರ್ ಆಫ್ ಆ್ಯನ್ ಇಲ್ಯೂಷನ್ (ಭ್ರಾಂತಿಯೊಂದರ ಭವಿಷ್ಯತ್ತು)

ಹಿಂದಿನ ಕಾಲದಲ್ಲೂ ಇಂದಿನ ಕಾಲದಲ್ಲೂ ಹಿಂಸೆಗೆ ಎಷ್ಟೋ ಪ್ರಾಮುಖ್ಯತೆ ಇದೆ ಎನ್ನುವುದನ್ನು ಮರೆಯುವುದು ಸಾಧ್ಯವಿಲ್ಲ ಇದನ್ನು ಗಮನಿಸದಿದ್ದರೆ ಜಗತ್ತನ್ನೇ ಮರೆತಂತೆ ಆದರೂ ಹಿಂಸೆಯು ಕೆಟ್ಟದು ಅದರ ದುಷ್ಪರಿಣಾಮಗಳು ಅನಂತ ಆ ಹಿಂಸೆಗಿಂತಲೂ, ಅದರ ಜೊತೆಯಲ್ಲಿ ಬರುವ ದ್ವೇಷ, ಕ್ರೌರ್ಯ ವೈರ, ಶಿಕ್ಷೆ ಮುಂತಾದ ಉದ್ದೇಶಗಳು ಇನ್ನೂ ಕೆಟ್ಟದು ಹಿಂಸೆಯು ಸ್ವಾಭಾವಿಕ ವಾಗಿ ಕೆಟ್ಟದೆಂದಲ್ಲ, ಇವರ ಜೊತೆಯಲ್ಲಿ ಈ ಕೆಟ್ಟ ಉದ್ದೇಶಗಳು ಬರುವುದರಿಂದ ಅದು ಕೆಟ್ಟದು ಈ ಉದ್ದೇಶಗಳೇ ಇಲ್ಲದೆ ಹಿಂಸೆ ಇರಬಲ್ಲದು ಒಳ್ಳೆಯದ ಕ್ಕಾಗಲಿ, ಕೆಟ್ಟದಕ್ಕಾಗಲೀ ಎರಡಕ್ಕೂ ಹಿಂಸೆಯು ಸಾಧನವಾಗಬಹುದು ಆದರ ಈ ದುರುದ್ದೇಶಗಳನ್ನು ಬಿಟ್ಟು ಹಿಂಸೆಯನ್ನು ನೋಡುವುದು ಸಾಧ್ಯವಿಲ್ಲವಾದ್ದರಿಂದ ಆದಷ್ಟುಮಟ್ಟಿಗೆ ಅದನ್ನು ತಪ್ಪಿಸುವುದು ಒಳ್ಳೆಯದು ಹಾಗೆಂದು, ಹಿಂಸೆಯನ್ನು ತಪ್ಪಿಸಬೇಕೆಂದು, ಅದಕ್ಕೆ ವಿರೋಧವಾಗಿ ಅದಕ್ಕಿಂತಲೂ ನೀಚವಾಗಿ ಕೆಡಕುಗಳನ್ನು ಒಪ್ಪಿಕೊಳ್ಳುವ ಅಭಾವ ವೈರಾಗ್ಯವು ಮಾತ್ರ ಎಂದಿಗೂ ಕೂಡದು ಹಿಂಸೆಗೆ ಸಗ್ಗುವುದು, ಅಥವಾ ಹಿಂಸಾಪ್ರಧಾನವಾದ ಅಧಿಕಾರವನ್ನು ಹಿಂಸೆಗೆ ಹೆದರಿ ಅನ್ಯಾಯವಾಗಿದ್ದರೂ ಒಪ್ಪಿಕೊಳ್ಳುವುದು, ಇವು ಎರಡೂ ಅಹಿಂಸೆಯ ಜೀವವನ್ನೇ ಹಿಂಡಿ ಕೊಂದಂತೆ ಅಹಿಂಸಾಕ್ರಮವು ಸರಿಯನ್ನಿಸಿಕೊಳ್ಳಬೇಕಾದರೆ, ಅದಕ್ಕೆ ಸರ್ವತೋಮುಖವಾಗಿ ಬೆಳೆಯುವ ಶಕ್ತಿಯಿರಬೇಕು ಅದಕ್ಕೆ ಹಿಂಸಾ ಪ್ರಧಾನವಾದ ಅಧಿಕಾರವನ್ನೇ ಆಗಲಿ, ಸಾಮಾಜಿಕ ವ್ಯವಸ್ಥೆಯನ್ನೇ ಆಗಲಿ, ಬದಲಾಯಿಸುವ ಸಾಮರ್ಥ್ಯವಿರಬೇಕು

ಆದರೆ ಇದಿಷ್ಟನ್ನು ಅದು ಮಾಡಬಲ್ಲುದೋ ಮಾಡಲಾರದೋ ನಾನರಿಯೆ ಅದು ನಮ್ಮನ್ನು ಬಹಳ ದೂರ ಕರೆದುಕೊಂಡು ಹೋಗಬಲ್ಲುದು ಎಂದುಕೊಂಡಿದ್ದರೂ ಅದು ನಮ್ಮನ್ನು ಆ ಸಿದ್ಧಿಯ ಕೊನೆಯ ಮೆಟ್ಟಲಿನವರೆಗೂ ಕರದೊಯ್ಯಬಲ್ಲುದೆಂಬು ದರಲ್ಲಿ ನನಗೆ ಸಂದೇಹ ಅಧಿಕಾರದಲ್ಲಿರುವವರೂ ಪದವಿಗಳನ್ನು ಪಡೆದಿರುವವರೂ ಇದನ್ನು ಬಲಾತ್ಕರಿಸದಲ್ಲದೇ ಅವುಗಳನ್ನು ಬಿಟ್ಟುಕೊಡುವುದಿಲ್ಲ, ಅವುಗಳನ್ನು ಇಟ್ಟು ಕೊಂಡಿರುವುದಕ್ಕಿಂತ ಬಿಟ್ಟುಕೊಡುವುದೇ ಕ್ಷೇಮವೆಂಬಂತಹ ಪರಿಸ್ಥಿತಿಯನ್ನು ತಂದೊ ಡ್ಡುವವರೆಗೆ ಅವರು ಬಿಟ್ಟುಕೊಡುವುದಿಲ್ಲ ಅದರಿಂದ ಹೇಗೆ ಹೇಗೂ ಬಲಾತ್ಕಾರವು ಕೊಂಚವಾಗಿಯಾದರೂ ಆಗಲೇಬೇಕ, ಅದಿಲ್ಲದೆ ಏನೂ ಸಾಧ್ಯವಾಗುವುದಿಲ್ಲ ಎನ್ನಿ ಸುತ್ತದೆ ಈಗಿನ ಸಮಾಜದಲ್ಲಿರುವ ಜನಾಂಗ ಸಮರ, ಜಾತಿ ಸಮರಗಳು ಬಲಾತ್ಕಾ ರವಿಲ್ಲದಿದ್ದರೆ ಶಾಂತವಾಗುವುದೇ? ಬಹಳ ವಿಸ್ತಾರವಾಗಿ ಮತಾಂತರಗಳು ನಡೆಯ ಬೇಕು, ನಿಜ—ಹಾಗೆ ವಿಸ್ತಾರವಾದ ಮತಾಂತರಗಳಿಲ್ಲದಿದ್ದರೆ ಸಮಾಜದ ಬದಲಾವಣೆಗೆ ಅವಕಾಶವೇ ಇಲ್ಲದೆ ಹೋಗುವುದು ಆದರೆ ಕೆಲವರ ಮೇಲಾದರೂ ಬಲಾತ್ಕಾರವಾ ಗಲೇಬೇಕು ಈ ಮೂಲಭೂತವಾದ ಸಮರಗಳನ್ನು ನಮ್ಮನ್ನು ಎತ್ತೆತ್ತಲೂ ಸುತ್ತಿ ಕೊಂಡಿದ್ದರೂ ಅವನ್ನು ಮುಚ್ಚಿಟ್ಟು ಅವು ಇಲ್ಲವೇ ಇಲ್ಲವೆಂದು ಹೇಳುವುದು ನಮಗೆ

ಯೋಗ್ಯವಲ್ಲ ಅದು ನಿಜವನ್ನು ಮುಚ್ಚಿಟ್ಟ ಪಾಪ ಮಾತ್ರವಲ್ಲ, ಜನಗಳನ್ನು ಅಡ್ಡ ಹಾದಿ ಹಿಡಿಸಿ, ಈಗಿರುವ ವ್ಯವಸ್ಥೆಯೇ ಸರಿಯೆಂದು ತಪ್ಪು ತಿಳಿದುಕೊಳ್ಳಲು ಅವಕಾಶ ವನ್ನು ಕಲ್ಪಿಸಿದ ಅನರ್ಥವನ್ನು ಮಾಡಿದಂತಾಗುವುದು ಮತ್ತು ಅಷ್ಟೇ ಅಲ್ಲ ಈಗ ಅಧಿಕಾರದಲ್ಲಿರುವವರು ತಮ್ಮ ವಿಶೇಷ ಹಕ್ಕುಗಳನ್ನು ಸರಿಯೆನ್ನಿಸುವುದಕ್ಕೆ ನೀತಿಯ ಆಧಾರ ಸ್ತಂಭಗಳನ್ನು ಕಟ್ಟಿಕೊಟ್ಟಂತಾಗುವುದು ಒಂದು ಅನ್ಯಾಯ ಪದ್ಧತಿಯನ್ನು ವಿರೋಧಿಸಬೇಕಾದರೆ ಅದು ಎಷ್ಟು ನಿರಾಧಾರವಾದುದು ಎಂಬುದನ್ನೂ ಆ ಪದ್ಧತಿ ಯಲ್ಲಿ ಸತ್ಯವೆಷ್ಟಿದೆ ಅಸತ್ಯವೆಷ್ಟಿದೆ ಎಂಬುದನ್ನೂ ಬಯಲಿಗೆ ಎಳೆಯಬೇಕು ಇಂತಹ ಸುಳ್ಳು ಆಧಾರಗಳಿಗೆ ಸೋತು ವಶರಾಗದೆ ಹಿಮ್ಮೆಟ್ಟಿ, ಈ ಅನ್ಯಾಯದೊಡನೆ ಸಹಕರಿ ಸದೆ ನಿಂತು, ಈ ಅಪಸಿದ್ಧಾಂತಗಳನ್ನು ಹೊರಕ್ಕೆಳೆಯುವುದು ಅಸಹಕಾರದ ಒಂದು ಸದ್ಗುಣ

ನಮ್ಮ ಕೊನೆಯ ಗುರಿಯು ಜಾತಿಕೋಮುಗಳಿಲ್ಲದ ಸಮಾಜ, ಅದರಲ್ಲಿ ಪ್ರತಿ ಯೊಬ್ಬರಿಗೂ ಆರ್ಥಿಕ ಅನುಕೂಲವಿರಬೇಕು, ಪ್ರತಿಯೊಬ್ಬರಿಗೂ ಸಮಾನವಾದ ಅವಕಾಶವಿರಬೇಕು, ಮನುಷ್ಯ ಸಮಾಜವನ್ನು ಉತ್ತಮಗೊಳಿಸುವ, ಸಂಸ್ಕೃತಿಯ ಮಟ್ಟವನ್ನು ಹತ್ತಿಸಲು ಕ್ರಮಬದ್ಧವಾಗಿರುವ ಸಮಾಜವೊಂದು ಏರ್ಪಡಬೇಕು ಆಧ್ಯಾತ್ಮಿಕದ ಉದ್ದೇಶಗಳನ್ನು ಸಾಧಿಸಿಕೊಳ್ಳಲು ಸಹಕಾರ, ಅಸ್ವಾರ್ಥತೆ, ಸಾಮರ್ಥ್ಯ, ನ್ಯಾಯವನ್ನು ಮಾಡುವ ಆಶೆ, ಸೌಮನಸ್ಯ ಪ್ರೇಮ ಇವುಗಳಿಂದ ತುಂಬಿರುವ ಸಮಾಜ, ಇದೇ ನಮ್ಮ ಕೊನೆಯಗುರಿ ಪ್ರಪಂಚವೇ ಹೀಗಾಗಬೇಕೆಂಬುದು ನಮ್ಮ ಆಶೆ ಹೀಗೆ ಮಾಡಬೇಕೆಂದು ಹೊರಟು ನಮಗೆ ಅಡ್ಡಿಬರುವ ಪ್ರತಿಯೊಂದನ್ನೂ ನಾವು ತೆಗೆದು ಒಗೆಯಬೇಕು ಸಧ್ಯವಾದರೆ ಗೌರವದಿಂದ ಸಾಮರ್ಥ್ಯದಿಂದ ಆವಶ್ಯಕವಾದರೆ ಶಕ್ತಿ ಪ್ರದರ್ಶನದಿಂದ ಅಂತೂ ತೆಗದೇ ತೆಗೆಯಬೇಕು ಇದರಿಂದ ಅನೇಕವೇಳೆ ಬಲಾತ್ಕಾರವು ಬೇಕೇಬೇಕು ಎಂಬುದರಲ್ಲಿ ಸಂದೇಹವೇ ಇಲ್ಲ ಆದರೆ ನಾವು ಶಕ್ತಿಯನ್ನು ಉಪಯೋಗಿಸುವುದು ದ್ವೇಷ ಕ್ರೌರ್ಯಗಳಿಂದಲ್ಲ, ವಿಘ್ನವನ್ನು ನಿವಾರಿಸಿಕೊಳ್ಳಬೇಕೆಂಬ, ಉದ್ವೇಗವಿಲ್ಲದ ಆಶೆಯಿಂದ ಅದು ಬಹುಕಷ್ಟ, ಸುಲಭವಲ್ಲ, ಇದಕ್ಕೆ ಸುಲಭವಾದ ಮಾರ್ಗವಿಲ್ಲ, ಇದರಲ್ಲಿ ಎಡವುವುದು ಬಹಳ ಹೆಚ್ಚು ಈ ಕಷ್ಟ ಗಳೂ, ಈ ಎಡವುಗಳೂ ನಾವು ಕಣ್ಣುಮುಚ್ಚಿಕೊಂಡ ಮಾತ್ರಕ್ಕೆ ತಪ್ಪುವುದಿಲ್ಲ ಅವುಗಳ ನಿಜವಾದ ಸ್ವಭಾವವನ್ನು ತಿಳಿಯಬೇಕು ಅವುಗಳನ್ನು ಸರಿಯಾಗಿ ಪರಿಹರಿಸಿ ಕೊಳ್ಳಬೇಕು ಇದೆಲ್ಲವನ್ನೂ ಕೇಳಿ, ಇದೊಂದು ಮನೋರಾಜ್ಯ, ಭ್ರಾಂತಿ ಎನ್ನಿಸ ಬಹುದು ಅನೇಕರಿಗೆ ಈ ಘನವಾದ ಉದ್ದೇಶಗಳು ಹಿಡಿಯದೇ ಹೋಗಬಹುದು ಆದರೂ ನಾವು ಇವುಗಳನ್ನು ಮರೆಯದೆ ಎದುರಿಗೆ ಇಟ್ಟುಕೊಂಡಿರಬೇಕು ಅದು ಸಾಧ್ಯ, ಅನೇಕಾನೇಕರ ಹೃದಯದಲ್ಲಿ ತುಂಬಿರುವ ದ್ವೇಷ ಉದ್ವೇಗಗಳನ್ನು ಬರ ಬರುತ್ತಾ ಈ ಭಾವನೆಗಳು ಕಡಿಮೆಮಾಡಬಹುದು

ನಮ್ಮ ಸಾಧನಗಳು ಈ ಭಾವನೆಗಳಿಂದ ಪ್ರೇರಿತವಾಗಿ ಆ ಗುರಿಗೆ ನಮ್ಮನ್ನು ಕರೆದೊಯ್ಯಬೇಕು ಹಾಗೆಯೇ, ಮನುಷ್ಯ ಸ್ವಭಾವವೆಂತಹುದು? ಗುಂಪುಗೂಡಿ ನಡೆಯುವಾಗ ಹೇಗಿರುವುದು? ಆ ಸ್ವಭಾವವು ನಾವು ಕೈಮುಗಿದು ಕೇಳಿಕೊಂಡ ಮಾತ್ರಕ್ಕೇ, ಬಲಾತ್ಕರಿಸಿದ ಮಾತ್ರಕ್ಕೇ ನಮಗೆ ಅಭಿಮುಖವಾಗುವುದಿಲ್ಲ, ಅದು ಯಾವಾಗಲೂ ಘನವಾದ ನೈತಿಕೋದ್ದೇಶಗಳನ್ನು ಲಕ್ಷ್ಯದಲ್ಲಿಟ್ಟುಕೊಂಡೇ ನಡೆಯುವುದಿಲ್ಲ, ಎಂಬುದನ್ನೂ ನಾವು ಗಮನಿಸಬೇಕು ಮತಾಂತರಗೊಳಿಸುವುದರ ಜೊತೆಗೆ ಬಲವಂತವಾಗಿ ಹಿಡಿದು ಮಾಡಿಸುವುಗೂ ಅನೇಕವೇಳೆ ಬೇಕಾಗುವುದು ಆದರೆ ಹೀಗೆ ಬಲಾತ್ಕರಿಸುವುದನ್ನು ಆದಷ್ಟು ಕಡಿಮೆಮಾಡಿ ಅದರಿಂದ ದುಷ್ಪರಿಣಾಮವಾಗದಂತೆ ಅದನ್ನು ಉಪಯೋಗಿಸುವುದೇ ನಾವು ಮಾಡಬಲ್ಲ ಅತ್ಯುತ್ತಮ ಕಾರ್ಯ

೩೪

# ಮತ್ತೆ ಡೆಹ್ರಾ ಸೆರೆಮನೆ

ನನಗೆ ಆಲಿಪುರ್ ಸೆರೆಮನೆ ಒಗ್ಗಲಿಲ್ಲ ನನ್ನ ತೂಕವು ಬಹಳ ಕಡಿಮೆಯಾಗಿ ಹೋಯಿತು ಕಲ್ಕತ್ತೆಯ ಗಾಳಿಯೂ ಹೆಚ್ಚುತ್ತಿರುವ ಸೆಕೆಯೂ ನನಗೆ ತಡೆಯ ಲಾರದಷ್ಟು ಆಯಿತು ನನ್ನನ್ನು ಇನ್ನೂ ಉತ್ತಮ ಸ್ಥಳಕ್ಕೆ ಕಳುಹಿಸಬಹುದೆಂಬ ಸುದ್ದಿಯು ಹುಟ್ಟಿತ್ತು. ಮೇ ೭ ನೆಯ ತಾರೀಖಿನ ದಿನ ನನ್ನ ಪದಾರ್ಥಗಳನ್ನೆಲ್ಲ ತೆಗೆದುಕೊಂಡು ಡೆಹ್ರಾ ಡೂನ್ ಸೆರೆಮನೆಗೆ ಹೋಗಬೇಕೆಂದು ಹೇಳಿದರು. ಹಲವು ತಿಂಗಳು ಏಕಾಂಗಿಯಾಗಿದ್ದು ಬೇಸರವಾಗಿದ್ದ ನನಗೆ ಕಲ್ಕತ್ತೆಯಲ್ಲಿ ಆ ಸಂಧ್ಯಾ ಕಾಲದಲ್ಲಿ ಪ್ರಶಾಂತ ಸಮಯದಲ್ಲಿ ಮೋಟಾರಿನಲ್ಲಿ ಹೋಗುವುದು ಬಹಳ ಸುಖ ವಾಗಿತ್ತು ಹೌರಾ ಸ್ಟೇಷನ್ ದೊಡ್ಡದು, ಅಲ್ಲಿದ್ದ ಜನರ ಗುಂಪು ನನ್ನ ಚಿತ್ತವನ್ನಾ ಕರ್ಷಿಸಿತು.

ಈ ಬದಲಾವಣೆಯು ನನಗೂ ಸಮ್ಮತವಾಗಿತ್ತು ಪರ್ವತಶ್ರೇಣಿಗಳ ನಡು ವೆಯಿರುವ ಡೆಹ್ರಾ ಡೂನಿಗೆ ಎಷ್ಟು ಹೊತ್ತಿಗೆ ಹೋದೇನು ಎನಿಸುತ್ತಿತ್ತು ಅಲ್ಲಿಗೆ ಹೋದಮೇಲೆ, ಒಂಭತ್ತು ತಿಂಗಳ ಹಿಂದೆ ನೈನಿಗೆ ಹೋದಾಗ ಎಲ್ಲವೂ ಇದ್ದಂತೆ ಇರಲಿಲ್ಲ ಎಂಬುದು ಮನಸ್ಸಿಗೆ ಬಂತು ದನದ ಕೊಟ್ಟಿಗೆಯೊಂದನ್ನು ಚೊಕ್ಕಟ ಮಾಡಿ ನಾನಿರುವುದಕ್ಕೆ ಅನುಕೂಲಪಡಿಸಿಕೊಟ್ಟರು

ಆ ಓವರಿಯಂತೆ ಅದು ಇದ್ದುದರಲ್ಲಿ ಚೆನ್ನಾಗಿತ್ತು ಅದರ ಮಗ್ಗುಲಲ್ಲಿ ಒಂದು ಸಣ್ಣ ಕೈಸಾಲೆ ಸುಮಾರು ಐವತ್ತು ಅಡಿ ಉದ್ದವಾದ ಅಂಗಳ ಅದಕ್ಕೆ ಸೇರಿಕೊಂಡಿತ್ತು ಹಿಂದೆ ನಾನು ಇದ್ದ ಪುರಾತನ ಓವರಿಗಿಂತಲೂ ಇದು ಚೆನ್ನಾಗಿದ್ದರೂ ಮಾಡಿದ್ದ ಬದಲಾವಣೆಗಳು ಅಷ್ಟು ಸಮರ್ಪಕವಾಗಿರಲಿಲ್ಲ ಸುತ್ತಿನ ಪೌಳಿಗೋಡೆಯು ಹತ್ತು ಅಡಿ ಇದ್ದುದನ್ನು ನನಗಾಗಿ ಇನ್ನೂ ನಾಲ್ಕೈದು ಅಡಿ ಎತ್ತರಿಸಿದರು ಹೀಗಾಗಿ ಸುತ್ತುಮುತ್ತಲೂ ಕಾಣಿಸುತ್ತಿದ್ದ ಬೆಟ್ಟಗಳ ನೋಟವು ಮರೆಯಾಗಿ, ಎಲ್ಲಿಯೋ ಶಿಖರಗಳ ಮೇಲಿನ ಕೆಲವು ಗಿಡಗಳ ತಲೆಯು ಮಾತ್ರ ಕಾಣಿಸುತ್ತಿತ್ತು ನಾನು ಇಲ್ಲಿ ಮೂರು ತಿಂಗಳಿದ್ದರೂ ಒಂದು ದಿನವೂ ನನಗೆ ಪರ್ವತಗಳ ದರ್ಶನವಾಗಲಿಲ್ಲ ಹಿಂದೆ ಇದ್ದಂತೆ, ಸೆರೆಮನೆಯ ಬಾಗಿಲ ಮುಂದೆ ಓಡುವುದಕ್ಕೆ ಅಪ್ಪಣೆಯಿರಲಿಲ್ಲ ವ್ಯಾಯಾಮಕ್ಕೆ ನಮ್ಮ ಅಂಗಳವೇ ಸಾಕು ಎಂದಾಗಿತ್ತು

ಈ ಮತ್ತು ಇತರ ಹೊಸ ಕಟ್ಟುನಿಟ್ಟುಗಳಿಂದ ಮನಸ್ಸಿಗೆ ಬಹಳ ಆಯಾಸ ವಾಗಿ ನಿರಾಶೆಯಾಯಿತು ಸಮಾಧಾನವು ತಪ್ಪಿತು. ಅಂಗಳದಲ್ಲಿ ವ್ಯಾಯಾಮ

ಮಾಡುವುದೂ ಬೇಕಾಗಲಿಲ್ಲ ನನಗೆ ಇದುವರೆಗೂ ಇಷ್ಟು ಒಬ್ಬಂಟಿಗನಾದಂತೆ ತೋರಿರಲಿಲ್ಲ ಈಗ ನನ್ನನ್ನು ಪ್ರಪಂಚದಿಂದ ತೆಗೆದು ಬೇರೆಲ್ಲಿಯೋ ಇಟ್ಟಿದ್ದಂತೆ ತೋರುತ್ತಿತ್ತು ಈ ರೀತಿಯಾದ ಏಕಾಂತವಾಸದಿಂದ ನನಗೆ ದೇಹಸ್ಥಿತಿಯೂ ಕೆಟ್ಟು ದೇಹಮನಸ್ಸುಗಳೆರಡರಲ್ಲಿಯೂ ಇಳಿನೋಗವಾಯಿತು ಗೋಡೆಯಿಂದಾಚೆ, ಕೆಲವು ಅಡಿಗಳ ದೂರದಲ್ಲಿ, ಹೊಸ ಹಸುರು, ಸೊಗಸಾದ ಗಾಳಿ, ಹಸುರು ಹುಲ್ಲಿನ ಮನೋಹರವಾದ ತಂಪು, ಮೃದುವಾದ ಭೂಮಿ, ಕಣ್ಣೊಪ್ಪುವ ನೋಟಗಳಿದ್ದುವು ಆದರೆ ಅವು ನನಗೆ ನಿಲುಕುವಂತಿರಲಿಲ್ಲ ನನ್ನ ಕಣ್ಣುಗಳು ಆ ಗೋಡೆಗಳನ್ನು ನೋಡಿ ನೋಡಿ ಬೇಸತ್ತು ಮುಚ್ಚಿಕೊಳ್ಳುವಂತಾಗುವುವು ಸೆರೆಮನೆಯಲ್ಲಿದ್ದ ಇತರರೂ ನನ್ನ ಕಣ್ಣಿಗೆ ಬೀಳದಷ್ಟು ಪ್ರತ್ಯೇಕವಾಗಿ ನನ್ನನ್ನು ಇಟ್ಟಿದ್ದರು

ಆರು ವಾರಗಳು ಕಳೆದ ಮೇಲೆ ಮಳೆಗಾಲಂಭವಾಗಿ ಕುಂಭದ್ರೋಣವು ಕರೆಯಿತು ಮೊದಲನೆಯ ವಾರದಲ್ಲಿಯೇ ಹನ್ನೆರಡು ಅಂಗುಲ ಮಳೆಯಾಯಿತು ಗಾಳಿಯು ಬದಲಾಯಿಸಿ, ನೂತನ ಸೃಷ್ಟಿಯ ನವಚೈತನ್ಯದ ಗುರುತು ಕಾಣಿಸಿತು ಸೆಕೆಯು ತಗ್ಗಿ ದೇಹಕ್ಕೆ ಕೊಂಚ ಆಯಾಸವೂ ಕಡಿಮೆಯಾಯಿತು ಆದರೆ ಕಣ್ಣು ಮನಸ್ಸುಗಳ ಆಯಾಸವು ತೀರಲಿಲ್ಲ ಆಗಾಗ ಓವರಿಯ ಕಬ್ಬಿಣದ ಕದವು ತೆರೆದು ಕಾವಲುಗಾರನೊಬ್ಬನು ಬಂದು ಹೋಗುತ್ತಿದ್ದನು ಆಗ ಬಾಹ್ಯ ಪ್ರಪಂಚದ – ಮಳೆ ಹನಿಗಳಿಂದ ಸುಂದರವಾಗಿ ಮುತ್ತು ಹಣೆದಂತೆ ತೋರುವ ಹಸುರು ಮರ ಹೊಲಗಳ ದರ್ಶನವು – ಒಂದೇ ಒಂದು ಕ್ಷಣವಾಗಿ, ಮಿಂಚಿನ ವೇಗದಿಂದ ಮರೆಯಾಗುವುದು ಬಾಗಿಲೂ ಎಂದಿಗೂ ಪೂರ್ತಿಯಾಗಿ ತೆರೆದಿರುತ್ತಿರಲಿಲ್ಲ ನಾನು ಹತ್ತಿರವಿದ್ದಾಗ ಬಾಗಿಲನ್ನು ಪೂರ್ತಿಯಾಗಿ ತೆರೆಯಲೇಕೂಡದೆಂಬ ನಿರ್ಬಂಧವಿದ್ದಿತೆಂದು ತೋರುತ್ತದೆ ಹಸುರುಡುಗೆಯಿಂದ ಹೊಸತಾದ ಪ್ರಪಂಚದ ಕ್ಷಣಿಕದರ್ಶನವು ನನಗೆ ಬೇಕಾಗಿರಲಿಲ್ಲ ಅದನ್ನು ನೋಡಿ ನನಗೆ ಅಸಹ್ಯ ಯಾತನೆಯುಂಟಾಗುತ್ತಿತ್ತು, ಬಾಗಿಲು ತೆರೆದಿದ್ದರೂ ಅತ್ತ ಕಡೆ ನಾನು ನೋಡುತ್ತಲೇ ಇರಲಿಲ್ಲ

ಆದರೆ ಇದೆಲ್ಲವೂ ಸೆರೆಮನೆಯ ಅಪರಾಧವೆಂದು ಹೇಳಲಾರೆ, ಈ ಅಸೌಖ್ಯಕ್ಕೆ ಅದೂ ಕಾರಣವಾಗಿದ್ದರೂ, ಮುಖ್ಯವಾದ ಕಾರಣಗಳು–ಕಮಲಳ ಕಾಯಿಲೆ ಮತ್ತು ನನಗೆ ಇದ್ದ ರಾಜಕೀಯ ಚಿಂತೆಗಳು ಕಮಲಳಿಗೆ ಹಿಂದಿನ ಕಾಯಿಲೆಯು ಮತ್ತೆ ಬಂದಿದೆಯೆಂದು ನನ್ನ ಮನಸ್ಸಿಗೆ ನಂಬಿಕೆಯಾಗುತ್ತ ಬಂತು ನಾನು ನಿಸ್ಸಹಾಯಕನಾಗಿದ್ದೆ ಮತ್ತು ನಾನು ಆಕೆಗಾಗಿ ಏನನ್ನು ಮಾಡಲೂ ಸಾಧ್ಯವಿರಲಿಲ್ಲ ನಾನು ಆಕೆಯ ಬಳಿ ಇರುವುದಕ್ಕೆ ಅವಕಾಶವಿದ್ದಿದ್ದರೆ ಆ ರೀತಿಯೇ ಬೇರೆಯಾಗುತ್ತಿತ್ತು

ಆಲಿಪುರ್‌ದಲ್ಲಿ ನನಗೆ ವರ್ತಮಾನ ಪತ್ರಿಕೆಯು ಬರುತ್ತಿರಲಿಲ್ಲ, ಇಲ್ಲಿ ಡೆಹ್ರಾ ಡೂನಿನಲ್ಲಿ ಒಂದು ದಿನಪತ್ರಿಕೆಯು ಬರುತ್ತಿತ್ತು. ಹೊರಗಡೆಯ ರಾಜಕೀಯ ಮುತ್ತು

ಇತರ ಸುದ್ದಿಗಳು ತಿಳಿಯುತ್ತಿದ್ದವು ಪಾಟ್ನದಲ್ಲಿ, ಸುಮಾರು ಮೂರು ವರ್ಷಗಳು ಕಳೆದ ಮೇಲೆ (ಇದರಲ್ಲಿ ದೀರ್ಘಕಾಲ ಕಾಂಗ್ರೆಸ್ಸು ನ್ಯಾಯವಿರುದ್ಧ ಸಂಸ್ಥೆಯೆಂದಾಗಿತ್ತು) ಅಖಿಲ ಭಾರತ ಕಾಂಗ್ರೆಸ್ ಸಮಿತಿಯು ಸೇರಿತು, ಮತ್ತು ಅಲ್ಲಿ ನಡೆದುದು ಯಾವುದೂ ತೃಪ್ತಿಕರವಾಗಿರಲಿಲ್ಲ. ಭರತಖಂಡದಲ್ಲಿಯೂ ಜಗತ್ತಿನಲ್ಲಿಯೂ ಎಷ್ಟೆಷ್ಟೋ ನಡೆದಿದ್ದರೂ ಆ ಸಭೆಯಲ್ಲಿ ಏನೇನು ನಡೆದಿದೆಯೆಂಬುದನ್ನು ಕುರಿತು ವಿಸ್ತಾರವಾದ ಚರ್ಚೆ ನಡೆಯಲಿಲ್ಲ, ಹಳೆಯ ಹಾದಿಗಳಿಂದ ಹೊರಬಿದ್ದು ಹೊಸ ಹಾದಿಗಳನ್ನು ಹಿಡಿಯುವ ಪ್ರಯತ್ನವು ನಡೆಯಲಿಲ್ಲ ದೂರದಿಂದ ನೋಡಿದರೆ ಗಾಂಧಿಜಿಯವರು ಎಂದಿನಂತೆ ತಾವೇತಾವಾಗಿ, "ನನ್ನನ್ನು ಮುಖಂಡನೆಂದು ಒಪ್ಪಿಕೊಂಡರೆ, ನೀವು ನನ್ನ ಕಟ್ಟುಗಳಿಗೆ ಒಳಪಡಬೇಕು" ಎಂದು ಸರ್ವಾಧಿಕಾರಿಯಂತೆ ಹೇಳಿದರು ಅವರು ಹಾಗೆ ಕೇಳಿದುದು ಬಹಳ ಸರಿ. ಏಕೆಂದರೆ ಅವರನ್ನು ಸ್ವಾಗತಿಸಿ, ಅವರ ಸಿದ್ಧಾಂತಗಳನ್ನು ಮಾತ್ರ ಬೇಡವೆನ್ನುವದು ಸಾಧ್ಯವಲ್ಲ ಆದರೆ, ಎಲ್ಲವೂ ಮೇಲಿನಿಂದ ಇಳಿದು ಬಂದಂತಿತ್ತೇ ಹೊರತು, ಪರಸ್ಪರ ವಿಚಾರ ವಿನಿಮಯದಿಂದ ರೂಪುಗೊಂಡ ಕಾರ್ಯಜಾಲವಂತಿರಲಿಲ್ಲ ಗಾಂಧಿಜಿಯವರು ಬಲುಬೇಗ ಇತರರ ಮನಸ್ಸನ್ನು ತಮ್ಮ ಕಡೆಗೆ ಒಲಿಸಿಕೊಂಡು ಬಿಟ್ಟು ಅವರೇನೂ ಸ್ವತಂತ್ರವಾಗಿ ಹೇಳುವುದಿಲ್ಲವೆನ್ನುವುದೊಂದು ವಿಚಿತ್ರ ಬಹುಶಃ ಜನಜಂಗುಳಿಯು ಗಾಂಧಿಜಿಯವರಿಗೆ ತೋರಿಸುವ ಭಕ್ತಿ, ಶ್ರದ್ಧೆಗಳನ್ನು ಇನ್ನಾರಿಗೂ ತೋರಿಸಿದಂತಿಲ್ಲ, ಆದರಿಂದ ಜನಜಂಗುಳಿಯು ಗಾಂಧಿಜಿಯವರು ನಿರೀಕ್ಷಿಸಿದ ಮಟ್ಟಕ್ಕೆ ಏರಲಿಲ್ಲವೆಂದು ಆಕ್ಷೇಪಿಸುವುದು ಅಷ್ಟು ಸಾಧುವಲ್ಲ ಹರಿಜನ ಯಾತ್ರೆಯನ್ನು ಮುಂದುವರಿಸಬೇಕಾಗಿದ್ದುದರಿಂದ ಗಾಂಧಿಜಿಯವರು ಪಾಟ್ನಾ ಸಭೆಯಲ್ಲಿ ಕೊನೆಯವರಗೂ ನಿಲ್ಲಲಿಲ್ಲ ಅ ಭಾ ಕಾ ಸ ಗೆ ಅವರು ಕಾರ್ಯಪರರಾಗಿರಬೇಕೆಂದೂ ಕಾರ್ಯಕಾರಿ ಸಮಿತಿಯು ಮುಂದೆ ಇಟ್ಟಿರುವ ಸಲಹೆಗಳನ್ನು ಆದಷ್ಟು ಬೇಗ ಅಂಗೀಕರಿಸಬೇಕೆಂದೂ ಹೇಳಿ ಹೊರಟು ಹೋದರು

ದೀರ್ಘವಾಗಿ ಚರ್ಚೆ ನಡೆದಿದ್ದರೂ ಅಷ್ಟೇನು ಫಲವಾಗುತ್ತಿರಲಿಲ್ಲವೆಂದೇ ತೋರುತ್ತದೆ ಅಲ್ಲಿ ಸೇರಿದ್ದ ಸದಸ್ಯರಲ್ಲಿ ಗೊಂದಲವೂ ಒಮ್ಮತದ ಅಭಾವವೂ ಇತ್ತು ಮತ್ತು ಅನೇಕರು ಖಂಡಿಸಿ ಮಾತನಾಡಬಲ್ಲವರಾಗಿದ್ದರೂ, ಏನುಮಾಡಬೇಕೆಂಬುದು ಮಾತ್ರ ಯಾರಿಗೂ ಹೊಳೆದಿರಲಿಲ್ಲ ಬೇರೆ ಬೇರೆ ಪ್ರಾಂತಗಳಿಂದ ಬಂದಿದ್ದ ಈ ಮುಖಂಡರು ಸಮರದ ಭಾರವನ್ನು ಬಹುವಾಗಿ ಹೊತ್ತು ನೋತಿದ್ದವರು, ಈ ಸಂದರ್ಭದಲ್ಲಿ ಅವರ ಬುದ್ಧಿಯು ತಿಳಿಯಾಗಿಲ್ಲದೆ ಇರುವುದು ಸಹಜ ಕೊಂಚ ತಡೆಯೋಣ, ಶಾಸನ ಭಂಗ ಚಳವಳಿಯನ್ನುಕೊಂಚ ನಿಲ್ಲಿಸೋಣ ಎಂದು ಎಲ್ಲರಿಗೂ ಎನ್ನಿಸಿತ್ತು, ಆದರೆ ಮುಂದೆ? ಹೀಗಾಗಿ, ಎರಡು ಕವಲೊಡೆದು, ಒಂದು ಪಕ್ಷವು ಕ್ರಮಬದ್ಧ ಚಳವಳಿಯನ್ನೇ ಮಾಡಬೇಕು, ಶಾಸನ ಸಭೆಗಳನ್ನು ಹಿಡಿಯಬೇಕು ಎಂದಿತು, ಮತ್ತೊಂದು ಸ್ಪಷ್ಟಾಸ್ಪಷ್ಟವಾಗಿ ಸಮತಾವಾದದ ಹಾದಿಯನ್ನು ಕುರಿತು

ನಡೆಯೋಣವೇ ಎಂದು ಆರಂಭಿಸಿತು. ಅನೇಕರಿಗೆ ಇವೆರಡು ಹಾದಿಗಳೂ ಸಮ್ಮತ ವಾಗಲಿಲ್ಲ. ಅವರಿಗೆ ಕ್ರಮಬದ್ಧ ಚಳವಳಿಗೆ ಹಿಂದಿರುಗುವುದಕ್ಕೆ ಮನಸ್ಸಿಲ್ಲ, ಸಮತಾವಾದದಲ್ಲಿ ನಂಬಿಕೆಯಿಲ್ಲ, ಜೊತೆಗೆ ಸಮತಾವಾದ ಬಂದರೆ ತಾವೆಲ್ಲ ಒಟ್ಟುಗೂಡಿರುವುದು ಅಸಾಧ್ಯವಾದೀತೆಂಬ ಹೆದರಿಕೆ, ಅಲ್ಲದೆ ಅದು ತಮ್ಮಲ್ಲಿ ಒಡಕನ್ನುಂಟುಮಾಡುವ ಒಂದು ಸಾಧನವಾಗಬಹುದೆಂದು ಭಾವಿಸಿದರು. ಅವರಿಗೆ ರಚನಾತ್ಮಕವಾದ ಕಲ್ಪನೆಗಳಿರಲಿಲ್ಲ, ಅವರಿಗೆ ಇದ್ದ ಒಂದೇ ಒಂದು ಗತಿ ಗಾಂಧಿಜಿ ಅದುವರೆಗೂ ಮಾಡಿದ್ದಂತೆ, ಆಗಲೂ ಅವರು ಗಾಂಧೀಜಿಯವರ ಕಡೆಗೆ ತಿರುಗಿ, ಅನೇಕರಿಗೆ ಗಾಂಧಿಯವರ ಮಾತು ಸಂಪೂರ್ಣ ಒಪ್ಪಿಗೆಯಾಗದಿದ್ದರೂ, ಅವರ ಹಿಂದೆ ಹೊರಟರು. ಮಿತವಾದಿ ಕ್ರಮಬದ್ಧ ಚಳವಳಿಗಾರರಿಗೆ ಗಾಂಧೀಜಿಯವರ ಬೆಂಬಲ ದೊರೆತು, ಆದರಿಂದ ಸಮಿತಿಗಳಲ್ಲಿಯೂ ಕಾಂಗ್ರೆಸ್ಸಿನಲ್ಲಿಯೂ ಅವರ ಕೈಯೇ ಬಲವಾಯಿತು.

ಹೀಗೆಲ್ಲಾ ಆಗುವುದೆಂಬ ನಿರೀಕ್ಷೆಯಿತ್ತು. ಆದರೆ, ಹೀಗಾಗಿ ಕಾಂಗ್ರೆಸ್ಸು ಅಷ್ಟು ದೂರ ಹಿಂದೆ ಹೋಗುವುದು ಎಂದು ನಾನೆಣಿಸಿರಲಿಲ್ಲ. ಅಸಹಕಾರ ಚಳವಳಿಯು ಬಂದ ಈ ಹದಿನೈದು ವರ್ಷಗಳಲ್ಲಿ ಯಾವಾಗಲೂ ಕಾಂಗ್ರೆಸ್ಸಿನ ಮುಖಂಡರು ಈ ಅತ್ಯಂತ ಕ್ರಮಬದ್ಧ ರೀತಿಯಲ್ಲಿ ಮಾತನಾಡಿರಲಿಲ್ಲ. ಹಿಂದೆ ಸುಮಾರು, ೨೫ ರಲ್ಲಿ ಹೀಗೆಯೇ ಸಿಡಿದು ನಿಂತುದರ ಫಲವಾಗಿ ಹುಟ್ಟಿದ ಸ್ವರಾಜ್ಯಪಕ್ಷವೂ ಕೂಡ ಈಗಿನ ಪಕ್ಷಕ್ಕಿಂತ ಎಷ್ಟೋ ಮುಂದೆ ಹೋಗಿತ್ತು, ಮತ್ತು ಸ್ವರಾಜ ಪಕ್ಷದಲ್ಲಿ ಇದ್ದಂಥ ಪ್ರಭಾವಶಾಲಿಗಳು ಯಾರೂ ಈ ಪಕ್ಷದಲ್ಲಿರಲಿಲ್ಲ. ಇದುವರೆಗೆ ಹುವರಿ ತಪ್ಪಿಸಿಕೊಂಡು ಚಳವಳಿಯಿಂದ ಹಿಂದೆ ನಿಂತಿದ್ದ ಅನೇಕಾನೇಕರು ಮುಂದೆ ಬಂದು ಕಾಂಗ್ರೆಸ್ಸನ್ನು ಸೇರಿ ಮುಖಂಡರಾದರು.

ಸರಕಾರವು ಕಾಂಗ್ರೆಸ್ಸಿಗೆ ಹಾಕಿದ್ದ ಬಹಿಷ್ಕಾರವನ್ನು ತೆಗೆಯಿತು, ಕಾಂಗ್ರೆಸ್ ಮತ್ತೆ ನ್ಯಾಯಬದ್ಧ ಸಂಸ್ಥೆಯಾಯಿತು. ಆದರೂ, ಸ್ವಯಂಸೇವಾಸಂಸ್ಥೆ, ಸೇವಾದಳ, ಅರ್ಧ ಸ್ವತಂತ್ರವಾದ ರೈತರ ಸಂಘಗಳಾದ ಅನೇಕ ಕಿಸನ್ ಸಭೆಗಳು, ಅನೇಕ ವಿದ್ಯಾ ಸಂಸ್ಥೆಗಳು, ತರುಣ ಸಂಘಗಳು, ಬಾಲಕ ಸಂಘವೊಂದು ಮೊದಲಾದ ಕಾಂಗ್ರೆಸ್ಸಿನ ಅಂಗಗಳ ಮೇಲಿನ ಬಹಿಷ್ಕಾರವು ಇನ್ನೂ ಹೋಗಿರಲಿಲ್ಲ. ಗಡಿನಾಡಿನ ಕೆಂಪು ಜುಬ್ಬದ 'ಖುದಾಇ-ಖಿದ್‌ಮತ್‌ಗಾರ್'ರ ಸಭೆಯು ಇನ್ನೂ ಸಂಪೂರ್ಣವಾಗಿ ಬಹಿಷ್ಕೃತವೇ ಆಗಿತ್ತು. ಈ ಸಭೆಯು ೧೯೩೧ ರಲ್ಲಿ ಕಾಂಗ್ರೆಸ್ಸಿಗೆ ಸೇರಿ, ಗಡಿನಾಡಿನಲ್ಲಿ ಕಾಂಗ್ರೆಸ್ಸಿನ ಪ್ರತಿನಿಧಿಯಾಗಿ ಕೆಲಸಮಾಡುತ್ತಿತ್ತು. ಹೀಗೆ ಕಾಂಗ್ರೆಸ್ಸು ಸಮರದ ಪ್ರತ್ಯಕ್ಷ ಕಾರ್ಯಕ್ರಮವನ್ನು ಸಂಪೂರ್ಣವಾಗಿ ತೊರೆದು ಕ್ರಮಬದ್ಧ ಚಳವಳಿಗೆ ತಿರುಗಿದರೂ, ಸರಕಾರವು ಮಾತ್ರ ಶಾಸನ ಭಂಗ ಕಾಲದಲ್ಲಿ ಜಾರಿಗೆ ತಂದ ವಿಶೇಷ ಕಾಯಿದೆಗಳನ್ನು ಹಾಗೆಯೇ ಇಟ್ಟುಕೊಂಡು ಕಾಂಗ್ರೆಸ್

ಸಂಸ್ಥೆಯು ಮುಖ್ಯ ಮುಖ್ಯಾಂಗಗಳನ್ನು ಬಹಿಷ್ಕರಿಸುತ್ತಲೇ ಬಂತು. ಸರಕಾರದ ಅಧಿಕಾರಿಗಳು ಜಮೀನ್ದಾರರನ್ನೂ ಭಾರಿಯ ಭೂಸ್ವಾಮಿಗಳನ್ನೂ, ನೀವೆಲ್ಲರೂ ಸಂಘಗಳನ್ನು ಮಾಡಿಕೊಳ್ಳಿ, ಎಂದು ಉಪದೇಶ ಮಾಡುತ್ತಿರುವಾಗಲೇ ಸರಕಾರವು ರೈತರ ಸಂಘಗಳನ್ನೂ ಕೂಲಿಕಾರರ ಸಂಘಗಳನ್ನೂ ಹಟಹಿಡಿದು ತುಳಿಯುತ್ತಾ ಬಂತು ಭೂಸ್ವಾಮಿಗಳ ಸಂಘಕ್ಕೆ ವಿಶೇಷ ರಿಯಾಯಿತಿಗಳು ದೊರೆತುವು ಸಂಯುಕ್ತ ಪ್ರಾಂತದಲ್ಲಿ ಇಂತಹ ಎರಡು ದೊಡ್ಡ ಸಂಘಗಳ ಚಂದಾಹಣವನ್ನು ಸರಕಾರದವರು ತಮಗೆ ಬರಬೇಕಾದ ಕಂದಾಯದ ಜೊತೆಯಲ್ಲಿಯೇ ವಸೂಲು ಮಾಡಿಕೊಡುತ್ತಾರೆ

ನಾನಿದುವರೆಗೆ ಹಿಂದೂ ಮುಸ್ಲಿಂ ಜಾತಿ ಸಂಘಗಳ ವಿಚಾರವಾಗಿ ಪಕ್ಷಪಾತ ಮಾಡಿದ ಹಾಗಿಲ್ಲ, ಆದರೆ ಒಂದು ಘಟನೆಯು ಹಿಂದೂ ಮಹಾ ಸಭೆಯ ವಿಚಾರವಾಗಿ ಮನಸ್ಸಿಗೆ ಪ್ರಬಲ ಅಸಮಾಧಾನವನ್ನುಂಟುಮಾಡಿತು ಆ ಮಹಾ ಸಭೆಯ ಕಾರ್ಯದರ್ಶಿಗಳಲ್ಲಿ ಒಬ್ಬರು “ಕೆಂಪು ಜುಬ್ಬ” ದವರಿಗೆ ಹಾಕಿರುವ ಬಹಿಷ್ಕಾರವು ಬಹಳ ಸರಿಯೆಂದೂ ಸರಕಾರವು ಹಾಗೆ ಮಾಡಿದುದು ಬಹಳ ಒಳ್ಳೆಯದಾಯಿತು ಎಂದೂ ಹೊಗಳಿದರು ಸರಕಾರವು ಆಕ್ರಮಣ ಶೀಲವಾಗಿ ನಾಗರಿಕರ ಹಕ್ಕುಗಳಲ್ಲಿ ಅತ್ಯಂತ ಮುಖ್ಯವಾದುದನ್ನೂ ಕಸಿದುಕೊಳ್ಳುತ್ತಿರುವುದನ್ನು ಅವರು ಒಪ್ಪಿಕೊಂಡು ಭೇಷ್ ಎಂದುದು ನೋಡಿ ನಾನು ಬೆಕ್ಕಸ ಬೆರಗಾದೆ ಈ ತತ್ವದ ಮಾತು ಇರಲಿ ಹೋರಾಟದ ಈ ವರ್ಷಗಳಲ್ಲಿ ಈ ಗಡಿನಾಡಿನವರ ವರ್ತನೆಯು ಎಂತಹ ಅದ್ಭುತವಾದುದು ಅವರ ಮುಖಂಡರಾದ ಖಾನ್ ಅಬ್ದುಲ್ ಗಫಾರ್ ಖಾನರವರು ಭರತಖಂಡದ ಧೀರೋದಾತ್ತರಲ್ಲಿ ಒಬ್ಬರು, ಅವರು ವಿಚಾರಣೆಯೇ ಇಲ್ಲದೆ ಸೆರೆಮನೆಯಲ್ಲಿ ಇನ್ನೂ ಇದ್ದರು ಕೋಮುವಾರು ಪಕ್ಷಪಾತವು ಇನ್ನೂ ಮುಂದು ಹೋಗಲಾರದು ಎಂದು ನನಗನಿಸಿತು, ಮತ್ತು ಹಿಂದೂ ಮಹಾಸಭೆಯ ಪ್ರಮುಖ ಮುಖಂಡರು ಅನೇಕರು ಈ ವಿಷಯದಲ್ಲಿ ತಮ್ಮ ಸಹೋದ್ಯೋಗಿಯನ್ನು ಪ್ರತಿಭಟಿಸಬಹುದು ಎಂದುಕೊಂಡಿದ್ದೆ ಆದರೆ, ಯಾರೂ ಪ್ರತಿಭಟಿಸಿದಂತೆ ಕಾಣಲಿಲ್ಲ

ಹಿಂದೂ ಸಭೆಯ ಕಾರ್ಯದರ್ಶಿಯ ಹೇಳಿಕೆಯಿಂದ ನನಗೆ ಬಹಳ ಖೇದವಾಯಿತು ಅದು ಕೆಟ್ಟುದು ಮಾತ್ರವಲ್ಲ ದೇಶದಲ್ಲಿ ತಲೆದೋರುತ್ತಿರುವ ಹೊಸ ಪರಿಸ್ಥಿತಿಯ ಗುರುತದು ಎನ್ನಿಸಿತು ಬೇಸಿಗೆಯ ನಡು ಹಗಲಿನಲ್ಲೊಮ್ಮೆ ಹಾಗೆಯೇ ತೂಕಡಿಕೆ ಹತ್ತಿದಾಗ ನನಗೊಂದು ವಿಚಿತ್ರ ಕನಸಾದುದು ಇನ್ನೂ ನೆನಪಿದೆ. ಅಬ್ದುಲ್ ಗಫಾರ್ ಖಾನರನ್ನು ಆಕ್ರಮಿಸಿ ಎಲ್ಲ ಕಡೆಯಿಂದಲೂ ಅವರ ಮೇಲೆ ಬೀಳುತ್ತಿದ್ದಾರೆ ಆಗ ಅವರ ಜೊತೆಯಲ್ಲಿ ಅವರ ಸಹಾಯವಾಗಿ ನಾನೊಬ್ಬನೇ ಹೋರಾಡುತ್ತಿದ್ದೇನೆ ನನಗೆ ಬಹಳ ಆಯಾಸವಾಗಿ, ಮೈ ದಣಿದು, ಕೈಸೋತು, ಎಚ್ಚರವಾಗಿ ಹೋಯಿತು ನನಗೆ ಬಹು ದುಃಖವಾಯಿತು. ನನ್ನ ದಿಂಬೆಲ್ಲ ಕಣ್ಣೀರಿನಿಂದ ನೆನೆದು ಹೋಗಿತ್ತು.

ನಾನು ಎಚ್ಚರವಾಗಿದ್ದಾಗ ಹಾಗೆ ಕಣ್ಣೀರು ಕರೆಯುವಷ್ಟು ಮಟ್ಟಿಗೆ ಭಾವಕ್ಕೆ ಸೋತವ ನಲ್ಲ, ನನಗೆ ಕನಸಿನಲ್ಲಿ ಹಾಗಾದುದು ಆಶ್ಚರ್ಯವಾಯಿತು

ಆಗಿನ ದಿವಸಗಳಲ್ಲಿ ನನಗೇಕೋ ಮನಸ್ಸಿಗೆ ನೆಮ್ಮದಿಯಿರಲಿಲ್ಲ ನಿದ್ರೆಯೂ ಚೆನ್ನಾಗಿ ಬರುತ್ತಿರಲಿಲ್ಲ ಬಂದ ನಿದ್ದೆಯಲ್ಲಿಯೂ ಕನಸುಗಳು ಬಹಳ ಅಲ್ಲದ ಕನಸುಗಳೂ ಕೆಟ್ಟ ಕನಸುಗಳು ನನಗೆ ಅದುವರೆಗೆ ಹಾಗಾಗಿರಲಿಲ್ಲ ಕೆಲವುವೇಳೆ ನಿದ್ರೆಯಲ್ಲಿ ನಾನು ಕೂಗಿಕೊಳ್ಳುತ್ತಿದ್ದೆ ಒಂದು ಸಲ ನನ್ನ ಕೂಗು ಬಹಳ ಭಾರಿಯಾಗಿ ಇಬ್ಬರು ಸೆರೆಮನೆ ಕಾವಲುಗಾರರು ಇದೇನೆಂದು ನೋಡಲು ಓಡಿಬಂದಿದ್ದರು ಆ ದಿನ ನನ್ನ ಕುತ್ತಿಗೆ ಹಿಸುಕಿದಂತೆ ಕನಸಾಗಿತ್ತು

ಸುಮಾರು ಇದೇ ಕಾಲದಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯು ಅಂಗೀಕರಿಸಿದ ಒಂದು ಠರಾವು ನನ್ನ ಮನಸ್ಸಿಗೆ ಬಹಳ ಆಯಾಸವನ್ನುಂಟುಮಾಡಿತು "ಸ್ವಂತ ಆಸ್ತಿಯನ್ನು ರದ್ದುಮಾಡುವುದು ಮತ್ತು ವರ್ಗಯುದ್ಧದ ಆವಶ್ಯಕತೆ" ಎಂದು ನಿರಾಧಾರವಾದ ಸುದ್ದಿಗಳು ಹೊರಟಿವೆಯಾಗಿ ಈ ಠರಾವು ತರಲಾಯಿತು ಎಂದು ಆರಂಭಿಸಿ, ಕರಾಚಿಯ ಠರಾವಿನ ಉದ್ದೇಶವು, ನ್ಯಾಯವಾದ ಕಾರಣವಿಲ್ಲದ, ಅಥವಾ ಯೋಗ್ಯವಾದ ಪ್ರತಿಫಲವನ್ನು ಕೊಡದ ಸ್ವಂತ ಆಸ್ತಿಯನ್ನು ರದ್ದುಮಾಡುವುದು ಮತ್ತು ಶ್ರೀಮಂತರ ಬಡವರ ಬಡಿದಾಟವಾಗಲಿ, ಎನ್ನುವುದಲ್ಲ ಎಂದು ಕಾಂಗ್ರೆಸ್ಸಿನವರಿಗೆಲ್ಲ ಗೊತ್ತಿರತಕ್ಕದ್ದು ಎಂದು ಮುಕ್ತಕಂಠವಾಗಿ ಹೇಳಲಾಯಿತು ಜೊತೆಗೆ, ಕಾಂಗ್ರೆಸ್ ಅಹಿಂಸಾ ತತ್ವವನ್ನು ಒಪ್ಪಿಕೊಂಡಿದೆ ಮೇಲಿನ ಎರಡು ಕಾರ್ಯಗಳೂ ಅಹಿಂಸಾತತ್ವಕ್ಕೆ ವಿರೋಧವಾದವು ಎಂದು ವರ್ಕಿಂಗ್ ಸಮಿತಿಯು ಅಭಿಪ್ರಾಯಪಡುತ್ತದೆ ಎಂದೂ ಆಯಿತು ಈ ಠರಾವು ಮಾತಿನಲ್ಲಿಯೂ ಭದ್ರವಾಗಿದೆ, ಈ ಠರಾವು ತಂದವರಿಗೆ ಶ್ರೀಮಂತ ಬಡವರ ಬಡಿದಾಟವೆಂದರೇನು ಎಂಬುದರ ಅರಿವೇ ಇಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಸುತ್ತಿತ್ತು. ಈ ಠರಾವು ತಂದುದು ಹೊಸದಾಗಿ ಹುಟ್ಟಿಕೊಂಡ ಕಾಂಗ್ರೆಸ್ ಸಮತಾವಾದ ಪಕ್ಷಕ್ಕೆ ವಿರೋಧವಾಗಿ ಎಂದು ಯಾರೂ ಹೇಳಲೇಬೇಕಾಗಿರಲಿಲ್ಲ ಅಷ್ಟು ಸ್ಪಷ್ಟವಾಗಿತ್ತು ಈ ಗುಂಪಿನಲ್ಲಿಯೂ ಪ್ರಮುಖರಾದವರು ಯಾರೂ ಸ್ವಂತ ಆಸ್ತಿಯನ್ನು ರದ್ದುಮಾಡುವ ವಿಚಾರ ವೆತ್ತಿರಲಿಲ್ಲ ಈಗಿರುವ ಸ್ಥಿತಿಯಲ್ಲಿ ಶ್ರೀಮಂತರಿಗೂ ಬಡವರಿಗೂ ಬಡಿದಾಟವಾಗುತ್ತಿದೆಯೆಂಬ ವಿಚಾರವಾಗಿ ಮಾತ್ರ ಆಗಾಗ ಎರಡು ಮಾತು ಬಂದಿತ್ತು ಈ ಬಡಿದಾಟವಿದೆಯೆಂದು ಕೊಂಡವರೂ ಕೂಡ ಕಾಂಗ್ರೆಸ್ಸಿನ ಸಾಮಾನ್ಯ ಸದಸ್ಯರಾಗಿರಲು ಅನರ್ಹರು ಎಂದು ಕಾರ್ಯಕಾರಿ ಸಮಿತಿಯವರು ಅಭಿಪ್ರಾಯ ಪಟ್ಟಿರುವಂತೆ ಈ ಠರಾವಿನಿಂದ ಸೂಚಿತವಾಗುತ್ತಿತ್ತು ಕಾಂಗ್ರೆಸ್ ಸಮತಾವಾದವು ಆಗಿಹೋಯಿತು ಎಂದಾಗಲೀ ಸ್ವಂತ ಆಸ್ತಿಗೆ ವಿರೋಧವಾಗಿದೆಯೆಂದಾಗಲೀ ಯಾರೂ ಕಾಂಗ್ರೆಸ್ಸನ್ನು ದೂಷಿಸಿರಲಿಲ್ಲ. ಕಾಂಗ್ರೆಸ್ಸಿನ ಸದಸ್ಯರಲ್ಲಿ ಕೆಲವರಿಗೆ ಈ ಅಭಿಪ್ರಾಯವಿತ್ತು ದೇಶದ

ಈ ಕೊನೆಯಿಂದ ಆ ಕೊನೆಯುವರೆಗೆ ಇರುವ ಸರ್ವರನ್ನೂ ಒಳಗೊಳ್ಳುವ ಕಾಂಗ್ರೆಸ್ಸಿನಲ್ಲಿಯೂ ಅಂಥವರಿಗೆ ಸ್ಥಳವಿಲ್ಲ ಎನ್ನಿಸಿತು

ಭರತಖಂಡದಲ್ಲಿರುವ ಸಮಸ್ತ ಗುಂಪುಗಳಿಗೂ ಅರಸನಿಂದ ಭಿಕಾರಿಯುವರಗೆ ಎಲ್ಲರಿಗೂ ಕಾಂಗ್ರೆಸ್ಸು ಪ್ರತಿನಿಧಿಯೆಂದು ಅನೇಕವೇಳೆ ಹೇಳಲಾಗಿದೆ ಜನಾಂಗದ ಚಳವಳಿಗಳು ತಾವು ದೇಶದ ಪ್ರಜಾವರ್ಗದಲ್ಲಿ ಬಹುಭಾಗದ ಪ್ರತಿನಿಧಿಗಳು, ಆ ದೇಶದವರಿಗೆಲ್ಲ ಅನುಕೂಲವಾಗುವಂತಹ ಕಾರ್ಯಕ್ರಮವನ್ನು ಕೈಗೊಂಡವರು ಎಂದು ತೋರಿಸಿಕೊಳ್ಳಲು ಅನೇಕವೇಳೆ ಹೀಗೆ ಹೇಳಿಕೊಳ್ಳುವುದುಂಟು ಆದರೆ ಇದು ಅಸಂಭವವೆಂಬದು ಬಹು ಸ್ಪಷ್ಟ ಯಾವ ರಾಜಕೀಯ ಸಂಸ್ಥೆಯೇ ಆಗಲಿ, ಅದು ಹೇಗೆ ಎಲ್ಲ ಪಕ್ಷಗಳಿಗೂ ಪ್ರತಿನಿಧಿಯಾಗಿರಬಲ್ಲದು ? ಹಾಗೆ ಸರ್ವಪಕ್ಷ ಪ್ರತಿನಿಧಿಯಾಗಬೇಕಾದರೆ ಅದಕ್ಕೆ ವ್ಯಕ್ತಿತ್ವವೊಂದು ಉಳಿಯುವುದೂ ಉಂಟೇನು ? ಅದಕ್ಕೆ ಪ್ರತ್ಯೇಕವಾದ ವಿಶಿಷ್ಟ ಲಕ್ಷಣಗಳೇನಾದರೂ ಇರುವುವೇನು ? ಕಾಂಗ್ರೆಸ್ಸು ಎಂಬುದು ಗೊತ್ತಾದ, ನಿರ್ದಿಷ್ಟವಾದ ಗುರಿಯೂ ರಾಜಕೀಯ ಅಧಿಕಾರವನ್ನು ಸಂಪಾದಿಸಿ ಅದನ್ನು ದೇಶಹಿತಕ್ಕಾಗಿ ಉಪಯೋಗಿಸಬಲ್ಲ ಗುರಿ ಮತ್ತು ತತ್ವಗಳನ್ನುಳ್ಳ ರಾಜಕೀಯ ಸಂಸ್ಥೆಯಾದರೂ ಆಗಿರಬೇಕು ಅಥವಾ ಎಲ್ಲರಿಗೂ ಒಳ್ಳೆಯದಾಗಲಿ ಎಂದುಕೊಂಡು ಲೋಕೋಪಕಾರ ಮಾಡಿಕೊಂಡಿರುವ ಧರ್ಮ ಸಂಸ್ಥೆಯಾಗಬೇಕು ತನ್ನ ಗುರಿಯನ್ನೂ ಕಾರ್ಯಕ್ರಮವನ್ನೂ ಒಪ್ಪಿಕೊಂಡಿರುವವರಿಗೆ ಮಾತ್ರ ಕಾಂಗ್ರೆಸ್ಸು ಪ್ರತಿನಿಧಿಯಾಗಿರಬಲ್ಲುದು ಹಾಗಿಲ್ಲದೆ ವಿರೋಧವಾಗಿರುವವರನ್ನು ತನ್ನ ಕ್ಷೇಮಕ್ಕಾಗಿ ಅದು ಹೊರಗಿಡಲೇಬೇಕು ಸಾಮ್ರಾಜ್ಯ ವಿರೋಧಿಯಾದ ಸಾಮಾಜಿಕ ಸಮರಗಳ ಗೊಂದಲವಿಲ್ಲವಾಗಿ, ಒಪ್ಪಿಕೊಳ್ಳುವಂತಹ ಅಂಶಗಳು ಹಲವಿರುತ್ತವೆ ಆದರಿಂದ ಭರತಖಂಡದ ನಾನಾ ಪಕ್ಷಗಳ ಪ್ರತಿನಿಧಿಯಾಗಲು ಕಾಂಗ್ರೆಸ್ಸಿಗೆ ಸಾಧ್ಯವಿದೆ ಆದರಿಂದ ಉಳಿದ ವಿಚಾರಗಳಲ್ಲಿ ಪರಸ್ಪರ ಸಮ್ಮತವಿಲ್ಲದಿದ್ದರೂ ಸಾಮ್ರಾಜ್ಯ ವಿರೋಧವೆಂಬ ಒಂದೇ ಒಂದು ಅಂಶದಲ್ಲಿ ಸಮ್ಮತವಿರುವ ಅನೇಕರು ಕಾಂಗ್ರೆಸ್ಸಿಗೇ ಸೇರಿದ್ದಾರೆ ಸಮ್ಮತವಾದ ಈ ಅಂಶದಲ್ಲಿಯೂ ಅನೇಕ ಭಿನ್ನಾಭಿಪ್ರಾಯಗಳುಂಟು ಈ ಅಂಶಕ್ಕೆ ವಿರೋಧವಾಗಿರುವವರು ಕಾಂಗ್ರೆಸ್ಸಿಗೆ ಸೇರಲಿಲ್ಲ ಮತ್ತು ಅಂಥವರು ಹೆಚ್ಚು ಕಡಿಮೆ ಬ್ರಿಟಿಷ್ ಸರಕಾರದ ಪಕ್ಷದವರಾದರು ಹೀಗೆ ಕಾಂಗ್ರೆಸ್ ಬರುಬರುತ್ತ ಶಾಶ್ವತವಾದ ಅಖಿಲ ಪಕ್ಷಗಳ ಕಾಂಗ್ರೆಸ್ ಆಯಿತು ಅದರಲ್ಲಿ ಭಿನ್ನ ಭಿನ್ನ ಪಕ್ಷದವರು ಬಂದು ಸೇರಿದರು ಅವರವರಿಗೆ ಕೊಂಚಕೊಂಚ ವ್ಯತ್ಯಾಸವಿದ್ದರೂ ಎಲ್ಲರೂ ಗಾಂಧಿಜಿಯವರನ್ನು ನಂಬಿದವರು ; ಅವರ ಪ್ರಭಾವಕ್ಕೆ ಸೋತವರು

ಕಾರ್ಯಕಾರಿ ಸಮಿತಿಯವರು ' ಬಡಿದಾಟದ ' ಮೇಲಿನ ರಠಾವನ್ನು ಅಲ್ಲಿಂದೀಚೆಗೆ ವಿಶದಪಡಿಸಲು ಯತ್ನಿಸಿದ್ದಾರೆ , ಆ ರಠಾವಿನ ಪ್ರಾಮುಖ್ಯತೆಯು ಅದರ ಭಾಷೆಯನ್ನಾಗಲೀ, ಅದು ಏನು ಹೇಳುವುದು ಎಂಬುದರ ಮೇಲಾಗಲೀ ಅವಲಂಬಿಸಿರಲಿಲ್ಲ . ಅದು

ಕಾಂಗ್ರೆಸ್ಸು ಹೋಗುತ್ತಿರುವ ಹಾದಿಯನ್ನು ಬಹಳ ಚೆನ್ನಾಗಿ ತೋರಿಸಿತು ಎಂಬುದರಿಂದ ಆ ಠರಾವಿಗೆ ಅಷ್ಟು ಪ್ರಾಮುಖ್ಯತೆ ಆ ಠರಾವು ಮುಂದೆ ಬರಲಿದ್ದ ಅಸೆಂಬ್ಲಿ ಚುನಾವಣೆಗಳಲ್ಲಿ ಆಸ್ತಿವಂತರ ಬೆಂಬಲವನ್ನು ಪಡೆಯುವುದಕ್ಕೆ ಕಾಂಗ್ರೆಸ್ಸಿನ ಪಾರ್ಲಿಮೆಂಟರಿ ಪಕ್ಷದವರು ಹೂಡಿದ್ದ ಉಪಾಯವೆಂದು ಸ್ಪಷ್ಟವಾಗಿ ತಿಳಿದುಹೋಯಿತು ಅವರ ಸಲಹೆಯಂತೆ ಕಾಂಗ್ರೆಸ್ಸು ಬಲಮುಗ್ಗುಲು ಕೊಂಚ ಹೊರಳಿ ಮುಂದ ಪಕ್ಷದವರನ್ನೂ ಕನ್ಸರ್ವೆಟಿವ್ ಪಕ್ಷದವರನ್ನೂ ತನ್ನ ಕಡೆಗೆ ಮಾಡಿಕೊಳ್ಳಲು ಯತ್ನಿಸಿತು. ಕಾಂಗ್ರೆಸ್ಸಿನ ಚಳವಳಿಗಳಿಗೆ ವಿರೋಧವಾಗಿದ್ದು ಶಾಸನ ಭಂಗ ಕಾಲದಲ್ಲಿ ಸರಕಾರದವರ ಕಡೆಗೆ ಸೇರಿದ್ದವರನ್ನು ಒಳ್ಳೆಯ ಮಾತುಗಳಿಂದ ಒಲಿಸಿಕೊಳ್ಳಲು ಆರಂಭವಾಯಿತು ಹೋರಾಡುತ್ತ, ದೂರುಗಳನ್ನು ಹೊರಿಸುವ ಎಡಮುಗ್ಗುಲು ಪಕ್ಷವು ಈ ಮಿತ್ರೀಕರಣ ಮತ್ತು ಮತಾಂತರಗಳಿಗೆ ವಿಘ್ನವಾಗುವುದು ಎನ್ನಿಸಿ, ಕಾರ್ಯಕಾರಿ ಸಮಿತಿಯ ಠರಾವೂ ಮತ್ತು ಇತರರ ಭಾಷಣಗಳೂ, "ಕಾಂಗ್ರೆಸ್ಸಿನ ಅಧಿಕಾರಿ ವರ್ಗವು ಪ್ರತಿಪಕ್ಷದವರು ಬೇಕಾದುದು ಹೇಳಲಿ, ತಾವು ತಮ್ಮ ಧೋರಣೆಯನ್ನು ಬದಲಾಯಿಸುವುದಿಲ್ಲ" ಎಂದು ಸ್ಪಷ್ಟಪಡಿಸಿದುವು ಎಡಮುಗ್ಗುಲಿನವರು ಸರಿಯಾಗಿ ನಡೆದುಕೊಳ್ಳದಿದ್ದರೆ, ಅವರನ್ನು ಕಾಂಗ್ರೆಸ್ಸಿನಿಂದಲೇ ಹೊರಕ್ಕೆ ಹಾಕುವುದಾಗಿಯೂ ಹೆದರಿಸಿದರು ಕಾಂಗ್ರೆಸ್ಸಿನ ಮಂತ್ರಿಮಂಡಲದ ಸಂಸ್ಥೆಯವರು ಹೊರಡಿಸಿದ ವಿಜ್ಞಾಪನಾ ಪತ್ರಿಕೆಯಲ್ಲಿ ಬಲು ಎಚ್ಚರಿಕೆಯಿಂದ ಬಹುಮಿತವಾಗಿ ತಯಾರಿಸಿದ್ದ ಪ್ರೋಗ್ರಾಂ ಇತ್ತು ಹದಿನೈದು ವರುಷಗಳಿಂದ ಕಾಂಗ್ರೆಸ್ ಸಪ್ಪೆಯಾದ ಪ್ರೋಗ್ರಾಂ ಪ್ರಕಟಿಸಿರಲಿಲ್ಲ

ಕಾಂಗ್ರೆಸ್ಸಿನ ಮುಖಂಡರಲ್ಲಿ ಗಾಂಧಿಜಿಯವರಲ್ಲದೆ, ಇನ್ನೂ ಅನೇಕರು ಹೆಸರಾದವರು ಇದ್ದರು ಅವರೆಲ್ಲರೂ ಸ್ವಾತಂತ್ರ್ಯ ಸಮರದಲ್ಲಿ ಯಶಸ್ವಿಗಳಾದವರು, ಸತ್ಯವಂತರು, ನಿರ್ಭೀತರು ಎಂದು ದೇಶದಲ್ಲೆಲ್ಲಾ ಗೌರವವನ್ನು ಪಡೆದವರು. ಇಂಥವರಿದ್ದರೂ ಕಾಂಗ್ರೆಸ್ಸಿನ ಹೊಸ ಧೋರಣದಿಂದ ಆದರ್ಶಪ್ರಿಯರೆಂದು ಹೇಳಲಾಗದಂಥವರೂ ಕೂಡ ಮೊದಲನೆಯ ಎರಡನೆಯ ಪಂಕ್ತಿಗಳಿಗೆ ಬರುವಂತಾಯಿತು ಕಾಂಗ್ರೆಸ್ಸಿನಲ್ಲಿ ಆದರ್ಶಪ್ರಿಯರಾದವರು ಅನೇಕಾನೇಕರಿದ್ದರೂ ಸ್ವಾರ್ಥಪರರನೇಕರಿಗೆ ಹಿಂದೆ ಎಂದೂ ಇಲ್ಲದಷ್ಟು ಅವಕಾಶವು ದೊರೆಯಿತು. ಅವ್ಯಕ್ತವೂ ಅಜ್ಞೇಯವೂ ಆದ ಪ್ರಭಾವವನ್ನುಳ್ಳ ಗಾಂಧಿಜಿಯು ಇನ್ನೂ ಮುಖಂಡರಾಗಿದ್ದರೂ ಕಾಂಗ್ರೆಸ್ಸಿಗೆ ಎರಡು ಮುಖಗಳಿದ್ದಂತೆ ತೋರುತ್ತಿತ್ತು ಒಂದು ಕಾಂಗ್ರೆಸ್ಸಿನಂತೆ ಬೆಳೆಯುತ್ತಿದ್ದ ಶುದ್ಧ ರಾಜಕೀಯ ಪಕ್ಷವೊಂದು, ಇನ್ನೊಂದು ಪ್ರಾರ್ಥನೆಯ ಸಭೆಯಂತೆ ಏನೋ ಭಕ್ತಿ, ಏನೋ ಹಂಬಲಗಳಿಂದ ತುಂಬಿದುದು

ಸರಕಾರದವರು ಗೆದ್ದ ಬಿಂಕದಿಂದ ಬೀಗಿದರು ಶಾಸನ ಭಂಗವನ್ನೂ ಅದರ ಮರಿಗಳನ್ನೂ ತುಳಿದುಬಿಟ್ಟೆವೆಂದು ಸ್ಪಷ್ಟವಾಗಿ ಮೆರೆದರು ಶಸ್ತ್ರಚಿಕಿತ್ಸೆಯು ಚೆನ್ನಾಗಿ ನಡೆಯಿತು, ಇನ್ನು ರೋಗಿಯು ಉಳಿದರೇನು? ಹೋದರೇನು? ಕೊಂಚ ಬದಲಾವಣೆ

ಮಾಡಿ ಅದೇ ಧೋರಣವನ್ನೇ, ಕಾಂಗ್ರೆಸ್ಸು ಸದ್ಯಕ್ಕೆ ಹಿನ್ನಟ್ಟಿದರೂ, ಅನುಸರಿಸುವು ದಾಗಿ ಸರಕಾರವು ಹೇಳಿಕೊಂಡಿತು ಮೂಲಭೂತವಾದ ಸಮಸ್ಯೆಗಳು ಪರಿಹಾರವಾಗು ವವರೆಗೂ ಜನಾಂಗದ ಧೋರಣದಲ್ಲಿ ಆಗುವ ಬದಲಾವಣೆಗಳು ತಾತ್ಕಾಲಿಕ ಮಾತ್ರ ವೆಂಬುದು ಸರಕಾರಕ್ಕೂ ಗೊತ್ತು, ಅವರು ತಮ್ಮ ಹಿಡಿತವನ್ನು ಕೊಂಚ ಸಡಲಿಸಿದರ, ಈ ಚಳವಳಿಯು ತಗ್ಗುವುದಕ್ಕಿಂತಲೂ ಧಟ್ಟನೆ ಬೆಳೆಯುವ ಸಂಭವವು ಹೆಚ್ಚೆಂದೂ ಅವರಿಗೆ ಗೊತ್ತು ಕಾಂಗ್ರೆಸ್ಸಿನಲ್ಲಿರುವ ಮುಂದುವರದ ಅಂಶಗಳನ್ನು ಕೂಲಿಕಾರರ, ಮತ್ತು ರೈತರ ವರ್ಗಗಳನ್ನೂ ತುಳಿದರೆ, ಅದರಿಂದ ಕಾಂಗ್ರೆಸ್ಸಿನಲ್ಲಿರುವ ಹುಷಾರಿ ಮುಖಂಡರು ಅಪರಾಧವಾಯಿತೆಂದುಕೊಳ್ಳುವುದಿಲ್ಲ ಎಂದು ಬಹುಶಃ ಸರಕಾರದವರು ಅಭಿಪ್ರಾಯಪಟ್ಟಿರಬಹುದು

ಡೆಹ್ರಾಡೂನಿನ ಜೈಲಿನಲ್ಲಿರುವಾಗ ನನಗೆ ಇಂತಹ ಭಾವನೆಗಳೇ ಬರುತ್ತಿದ್ದವು ನನಗೆ ಪ್ರತ್ಯಕ್ಷವಾಗಿ ಪರಿಚಯವಿರಲಿಲ್ಲವಾಗಿ ಏನೇನು ಹೇಗೆ ಹೇಗೆ ಆಗುತ್ತಿದೆಯೆಂಬುದನ್ನರಿತು ಸರಿಯಾಗಿ ಗೊತ್ತುಮಾಡಿಕೊಳ್ಳುವುದು ಸಾಧ್ಯವಿರಲಿಲ್ಲ ಆಲಿಪುರದಲ್ಲಂತೂ ಹೊರಗಿನ ವಿಷಯವೇನೂ ತಿಳಿಯುತ್ತಲೇ ಇರಲಿಲ್ಲ ಡೆಹ್ರಾದಲ್ಲಿ ಸರಕಾರದವರು ತಮಗೆ ತೋರಿದ ಪತ್ರಿಕೆಯೊಂದನ್ನು ಕಳುಹಿಸುತ್ತಿದ್ದುದರಿಂದ ಹಾಗೂ ಹೀಗೂ ಅಷ್ಟು ಸುದ್ದಿಯು ತಿಳಿಯುತ್ತಿತ್ತು ಬಹುಶಃ ನನ್ನ ಸಹ ಕಾರ್ಯಕರ್ತರುಗಳೊಡನೆ ಕಲೆತು ನಡೆದುದನ್ನೆಲ್ಲ ಚನ್ನಾಗಿ ನೋಡಲು ಅವಕಾಶವಿದ್ದಿದ್ದರೆ, ನನ್ನ ಅಭಿಪ್ರಾಯಗಳು ಬದಲಾವಣೆಯಾಗುತ್ತಿದ್ದವೋ ಏನೋ?

ವರ್ತಮಾನಸ್ಥಿತಿಯನ್ನು ಯೋಚಿಸಿ ಮನಸ್ಸಿಗೆ ಆಯಾಸವಾಗಿ ನನಗೆ ಹಿಂದಿನ ಕಾಲದ ಕಡೆಗೆ ಮನಸ್ಸು ತಿರುಗಿತು ನಾನು ದೇಶಸೇವೆಗೆ ಇಳಿದಂದಿನಿಂದ ಭರತ ಖಂಡದಲ್ಲಿ ರಾಜಕೀಯವಾಗಿ ಏನೇನಾಗಿದೆಯೆಂಬುದರ ಕಡೆಗೆ ಮನಸ್ಸು ಹೊರಳಿತು "ನಾವು ಮಾಡಿರುವ ಕಾರ್ಯಗಳಲ್ಲಿ ಎಷ್ಟು ಸರಿ? ಎಷ್ಟು ತಪ್ಪು? ಎಲ್ಲವನ್ನು ಬರೆದಿಟ್ಟರ ನನ್ನ ಯೋಚನೆಗಳೆಲ್ಲ ಕ್ರಮವಾಗಿರುವುವು ನನಗೂ ಸರಿಹೋಗುವುದು" ಎನ್ನಿಸಿತು ಜೊತೆಗೆ ನನಗೂ ಒಂದು ಗೊತ್ತಾದ ಕೆಲಸವಿದ್ದು ನನ್ನ ಮನಸ್ಸಿನ ಬೇಸರ ಆಯಾಸಗಳು ಕಳೆಯುವುವು ಎಂದು ಜೂನ್ ೧೯೩೪ರಲ್ಲಿ ಡೆಹ್ರಾ ಜೈಲಿನಲ್ಲಿ ಆತ್ಮಕಥೆಯನ್ನು ಆರಂಭಿಸಿದೆನು ಬರೆಯಬೇಕು ಎಂಬ ಭಾವನೆಯು ಬಂದಾಗ ಬರೆಯುತ್ತಾ ಎಂಟು ತಿಂಗಳಿಂದ ಬರೆಯುತ್ತಿದ್ದೇನೆ ಅನೇಕವೇಳೆ ಬರೆಯುವುದಕೆ, ಮನಸ್ಸೇ ಇರುವುದಿಲ್ಲ ಮೂರು ಸಲ ಒಂದೊಂದು ತಿಂಗಳು ಬರೆಯಲೇ ಇಲ್ಲ ಹಾಗೂ ಹೀಗೂ ಬರೆದು ಆತ್ಮಕಥೆಯ ಕೊನೆಗೆ ಬಂದಿದ್ದೇನೆ ಇದರ ಬಹುಭಾಗವನ್ನು ಮನಸ್ಸು ಬಹಳ ಆಯಾಸದಿಂದಲೂ ದುಃಖಾತಿರೇಕದಿಂದಲೂ ಕೂಡಿ ಏನೋ ಹೇಳಲಾಗದ ಬೇಸರದ ಪರಿಸ್ಥಿತಿಯಲ್ಲಿದ್ದಾಗ ಬರೆದಿದ್ದೇನೆ ಈ ಮನೋಭಾವದ ಒಂದು ಅಂಶವು ನನ್ನ ಬರವಣಿಗೆಯಲ್ಲಿ ಪ್ರತಿಫಲಿಸಿದ್ದರೂ ಪ್ರತಿಫಲಿಸಿರಬಹುದು ಆದರೆ ಇದು ನನ್ನ

ಉಪಾಸಗಳನ್ನು ಪರಿಹರಿಸಿ ನನಗೆ ಎಷ್ಟೋ ಸಮಾಧಾನವನ್ನು ತಂದಿದೆ ಇವನ್ನು ಬರೆಯುವಾಗ ಇದನ್ನು ಯಾರಾದರೂ ಓದಿಯಾರು ಎಂಬ ಭಾವನೆಯೇ ನನಗೆ ಇರಲಿಲ್ಲ ನನಗೆ ನಾನೇ ಪ್ರಶ್ನೆಗಳನ್ನು ಹಾಕಿಕೊಂಡು, ನನಗಾಗಿ ಉತ್ತರಗಳನ್ನು ಹೇಳಿಕೊಳ್ಳುತ್ತಾ ಅದರಿಂದ ಅಷ್ಟು ಸಂತೋಷಪಟ್ಟುಕೊಳ್ಳುತ್ತಿದ್ದೆ ಆದಷ್ಟು ಮಟ್ಟಿಗೆ ನೇರವಾಗಿ ಯೋಚಿಸಬೇಕೆಂಬ ನನ್ನ ಪ್ರಯತ್ನವು ಹಿಂದೆ ನಡೆದುದನ್ನೆಲ್ಲ ಒಮ್ಮೆ ಪರಿಶೀಲಿಸಿದರೆ, ಸಫಲವಾಗುವುದು ಎಂದುಕೊಂಡೆ

ಜುಲೈ ಕೊನೆಯ ವೇಳೆಗೆ ಕಮಲಳ ಸ್ಥಿತಿಯು ಬಹಳ ಕೆಟ್ಟುಹೋಯಿತು, ಇನ್ನು ಕೆಲವು ದಿನಗಳೊಳಗಾಗಿ ಅದು ಅಪಾಯಕರವಾದ ಸ್ಥಿತಿಗೂ ಬಂತು ಆಗಸ್ಟ್ ೧೧ ರಲ್ಲಿ ಇದ್ದಕ್ಕಿದ್ದ ಹಾಗೆಯೇ ನನ್ನನ್ನು ಹೊರಡಬೇಕೆಂದು ಹೇಳಿ ಆ ರಾತ್ರಿ ಪೊಲೀಸ್ ಪಹರೆಯೊಡನೆ ಅಲಹಾಬಾದಿಗೆ ಕಳುಹಿಸಿದರು ಮರುದಿನ ಸಾಯಂಕಾಲ ಅಲಹಾಬಾದಿನ ಪ್ರಯಾಗ ಸ್ಟೇಷನ್ನಿಗೆ ಬಂದಾಗ ಅಲ್ಲಿನ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರು "ಖಾಯಿಲೆಯಿಂದ ನರಳುತ್ತಿರುವ ನಿಮ್ಮ ಹೆಂಡತಿಯನ್ನು ನೋಡುವುದಕ್ಕಾಗಿ ನಿಮ್ಮನ್ನು ತಾತ್ಕಾಲಿಕವಾಗಿ ಜೈಲಿನಿಂದ ಬಿಟ್ಟಿದೆ"ಎಂದು ಹೇಳಿದರು ನನ್ನನ್ನು ಹಿಡಿದು ಜೈಲಿಗೆ ಹಾಕಿ ಆವೊತ್ತಿಗೆ ಆರು ತಿಂಗಳಾಗಿತ್ತು

೬೫

# ಹನ್ನೊಂದು ದಿನಗಳು

ಏಕೇ ? ಕತ್ತಿಯು ಒರೆಗಿಂತ ದೀರ್ಘಕಾಲ ಬಾಳುತ್ತದೆ
ಜೀವವು ದೇಹವಳಿದ ಮೇಲೂ ಇರುತ್ತದೆ

ಬೈರ್

ನನಗೆ ಬಂಧವಿಮೋಚನೆಯು ಇನ್ನೂ ಆಗಿರಲಿಲ್ಲ ಒಂದೇ ದಿನವೋ ಎರಡೇ ದಿನವೋ ಅಂತೂ ವೈದ್ಯರು ಅಗತ್ಯವಾಗಿ ಆಗಲೇಬೇಕೆಂದು ಹೇಳುವಷ್ಟು ದಿನಗಳು ಮಾತ್ರ ನಾನು ಹೊರಗೆ ಇರತಕ್ಕುದು ಎಂದು ನನಗೆ ಮೊದಲೇ ಹೇಳಿದ್ದರು. ಅದೆಂತಹ ವಿಚಿತ್ರ ಸ್ಥಿತಿ ಯಾವಾಗ ನಾನು ಹೊರಟುಹೋಗಬೇಕೋ ತಿಳಿಯದು, ನಾನೇನೂ ಮಾಡುವಂತಿಲ್ಲ ಇಷ್ಟು ಕಾಲ ಇಲ್ಲಿರುವೆನೆಂಬುದು ತಿಳಿದಿದ್ದರೆ, ಸ್ಥಿತಿಗತಿಗಳನ್ನು ನೋಡಿಕೊಂಡು ಅದಕ್ಕೆ ತಕ್ಕಂತೆ ಎಲ್ಲವನ್ನೂ ಸರಿಪಡಿಸಿಕೊಳ್ಳಬಹುದಾಗಿತ್ತು ಆದರೆ, ಯಾವ ದಿನ, ಯಾವ ಗಳಿಗೆ, ಮತ್ತೆ ಜೈಲಿಗೆ ಹೊರಡಬೇಕೋ ಯಾರಿಗೆ ಗೊತ್ತು ?

ಏಕಾಕಿಯಾಗಿ ಕುಳಿತುಕೊಳ್ಳುತ್ತಿದ್ದ ಜೈಲಿನ ಕೊಠಡಿಯಿಂದ ವೈದ್ಯರು, ದಾದಿಯರು, ಬಂಧುಗಳು ತುಂಬಿದ ಮನೆಗೆ ಬಂದ ಬದಲಾವಣೆಯು ಬಹಳ ಆಕಸ್ಮಿಕವಾಯಿತು ನಾನು ಎಳ್ಳಷ್ಟೂ ಅದಕ್ಕೆ ಸಿದ್ಧನಾಗಿರಲಿಲ್ಲ ಶಾಂತಿನಿಕೇತನದಿಂದ ಇಂದಿರೆಯೂ ಬಂದಿದ್ದಳು ಅನೇಕಾನೇಕ ಸ್ನೇಹಿತರು ನನ್ನನ್ನು ನೋಡುವುದಕ್ಕೂ ಕಮಲಳ ದೇಹಸ್ಥಿತಿಯನ್ನು ವಿಚಾರಿಸುವುದಕ್ಕೂ ಒಂದೇ ಸಮನಾಗಿ ಬರುತ್ತಿದ್ದರು ಇಲ್ಲಿ ಅನ್ನವಸತಿ ಸೌಖ್ಯಗಳು, ನಿತ್ಯಜೀವನದ ರೀತಿ, ಜೈಲಿನ ಸ್ಥಿತಿಗಿಂತ ಎಷ್ಟೋ ಭಿನ್ನ ಎಲ್ಲದಕ್ಕಿಂತಲೂ ಹೆಚ್ಚಾಗಿ ಕಮಲಳ ದೇಹಸ್ಥಿತಿಯು ಅಪಾಯಕರವಾಗಿದೆ ಎಂಬ ಭೀತಿ ಎಲ್ಲವನ್ನೂ ಆವರಿಸಿದೆ, ನೆರಳಿನಂತೆ ನಿಂತು ಅಂಜಿಸುತ್ತಿದೆ

ಆಕೆಯು ಕೃಶಳಾಗಿ, ಶುದ್ಧಾಂಗವಾಗಿ ನಿರ್ಬಲಳಾಗಿ, ಮೊದಲಿದ್ದ ಕಮಲಳ ನೆರಳೋ ಎಂಬಂತಾಗಿ, ರೋಗದಲ್ಲಿ ಒದ್ದಾಡುತ್ತಾ ಮೃತ್ಯುವಿನೊಡನೆ ಹೋರಾಡುತ್ತ ಮಲಗಿದ್ದಾಳೆ ಆಕೆಯು ಇನ್ನು ಬಹಳಕಾಲ ನಮ್ಮ ಜೊತೆಯಲ್ಲಿ ಇರುವುದಿಲ್ಲವೆಂಬ ಯೋಚನೆಯು ನನ್ನ ಮನಸ್ಸಿನಲ್ಲಿ ತಾನೇ ತಾನಾಗಿ ಹೋಯಿತು ನಮನಮಗೆ ಮದುವೆಯಾಗಿ ಹದಿನೆಂಟೂವರೆ ವರುಷವಾಯಿತು ನನ್ನ ಮನಸ್ಸು ಆ ಹಿಂದಿನದೆಲ್ಲವನ್ನೂ ಆ ದೀರ್ಘಕಾಲ ನಾವು ಪಟ್ಟ ಸುಖದುಃಖಗಳನ್ನೂ ನೆನೆದು

ಕೊಂಡಿತು ನನಗೆ ಆಗ ಇಪ್ಪತ್ತಾರುವರುಷ ಆಕೆಗೆ ಇನ್ನೂ ಹದಿನೇಳು ವರುಷ ಪ್ರಪಂಚವನ್ನು ಏನೇನೂ ಅರಿತವಳಲ್ಲ ತಾರತಮ್ಯವಿದ್ದುದು ನಮ್ಮ ವಯಸ್ಸಿನಲ್ಲಿ ಮಾತ್ರವಲ್ಲ ನಮ್ಮ ಮಾನಸಿಕ ಸ್ಥಿತಿಯಲ್ಲಿಯೂ ಬೇಕಾದಷ್ಟು ಹೆಚ್ಚು ಕಡಿಮೆ ಆಕೆಗಿಂತ ಎಷ್ಟೋ ಬೆಳೆದ ಮನಸ್ಸಿನವನು ನಾನು ನಾನು ಓದಿದ ವನು ಎನ್ನಿಸಿಕೊಂಡಿದ್ದರೂ ನಾನಿನ್ನೂ ಹುಡುಗ ಈ ಕೃಶಾಂಗಿಯು ಬಹಳ ಸೂಕ್ಷ್ಮದವಳು, ಹೂವಿನಂತೆ ಅರಳುತ್ತಿದ್ದಾಳೆ, ಈಕೆಯನ್ನು ಬಲು ಜೋಪಾನ ವಾಗಿ ಕಾಪಾಡಬೇಕು ಎಂಬುದರ ಅರಿವೇ ನನಗೆ ಇರಲಿಲ್ಲ. ನಮನಮಗೆ ಪರಸ್ಪರ ಪ್ರೇಮವಿದ್ದರೂ ಬೆಳೆದ ರೀತಿಗಳು ಬೇರಬೇರೆಯಾಗಿದ್ದು ಒಬ್ಬರೊಬ್ಬರಿಗೆ ಹೊಂದಿ ಕೆಯಾಗಿರಲಿಲ್ಲ ಹೊಂದದೆ ಹೋಗುವುದರಿಂದ ಆಗಾಗ ಹೃದಯಗಳು ಕದಡಿ, ಸಣ್ಣಪುಟ್ಟ ವಿಷಯಗಳಿಗಾಗಿ ಮಕ್ಕಳಂತೆ ಕಾದಾಡುವೆವು ಆದರೇನು! ಮಕ್ಕ ಳಂತೆಯೇ ಉತ್ತರ ಕ್ಷಣದಲ್ಲಿಯೇ ಸೇರಿಕೊಳ್ಳುವೆವು ಇಬ್ಬರಿಗೂ ಮೂಗಿನಮೇಲೆ ಕೋಪ ಇಬ್ಬರಿಗೂ ಬಹುಸೂಕ್ಷ್ಮ, ಇಬ್ಬರೂ ಅಭಿಮಾನಿಗಳು ಇಷ್ಟಾದರೂ ನಮನಮಗೆ ಹೊಂದಿಕೊಂಡುದು ನಿಧಾನವಾದರೂ ಇಬ್ಬರ ಹೃದಯಗಳು ಬೇಗ ಬೆರೆತುವು ನಮಗೆ ಮದುವೆಯಾದ ಎರಡನೆಯ ವರ್ಷದಲ್ಲಿ ನಮ್ಮ ಏಕಮಾತ್ರ ಪುತ್ರಿ ಇಂದಿರಾ ಜನ್ಮಿಸಿದಳು

ನಮ್ಮ ಮದುವೆಯಾಗುವುದಕ್ಕೂ ದೇಶದಲ್ಲಿ ಹೊಸ ರಾಜಕೀಯ ಪರಿಸ್ಥಿತಿಗಳು ಹುಟ್ಟಿಕೊಳ್ಳುವುದಕ್ಕೂ ಸರಿಹೋಯಿತು ನನಗೆ ಅತ್ತ ಕಡೆ ಮನಸ್ಸು ಎಳೆಯು ವುದು ಹೆಚ್ಚಾಯಿತು ಹೋಂ ರೂಲ್ ದಿನಗಳವು ಅದರ ಹಿಂದೆಯೇ ಪಂಜಾಬಿನ ಮಾರ್ಷಲ್ ಲಾ ಪ್ರಕರಣ, ಅದಾದಮೇಲೆ ಅಸಹಕಾರ, ಹೀಗಾಗಿ ನಾನು ಹೊರಗಿನ ಕೆಲಸಗಳಲ್ಲಿ ಹೆಚ್ಚು ಹೆಚ್ಚು ಸೇರಬೇಕಾಗಿ ಬಂತು ಹೀಗಾಗಿ ಹೆಚ್ಚು ಕಡಿಮೆ ಮೂರು ಹೊತ್ತೂ ನಾನು ಆ ಕಾರ್ಯಜಾಲದಲ್ಲಿ ತೊಡಗಿದ್ದು, ನನ್ನ ಪೂರ್ಣ ಸಹಾ ಯವು ಆಕೆಗೆ ಬೇಕಾಗಿದ್ದ ಕಾಲದಲ್ಲಿಯೇ ನಾನು ಆಕೆಯನ್ನು ಸಂಪೂರ್ಣವಾಗಿ ಆಕೆಯ ಪಾಡಿಗೇ ಬಿಡಬೇಕಾಗಿ ಬಂತು ನನಗೆ ಆಕೆಯಲ್ಲಿದ್ದ ಪ್ರೀತಿಯು ಕಡಿಮೆ ಯಾಗಲಿಲ್ಲ, ಬೆಳೆಯಿತು ಏನುಬೇಕಾದರೂ ಆಗಲಿ, ನನ್ನ ಕಮಲಳು ಇರುವಳು ಎಂದುಕೊಂಡು ಎಷ್ಟೋ ಸುಖಿಯಾಗುತ್ತಿದ್ದೆನು ಆಕೆಯು ಅದೆಷ್ಟು ನೊಂದಳೋ? ತನ್ನನ್ನು ಕೇಳುವವರಿಲ್ಲವೆಂದುಕೊಂಡು ಎಷ್ಟು ತಪಿಸಿದಳೋ? ನನಗೆ ಮಾತ್ರ ಆಕೆಯು ಒಂದು ಆನೆಯ ಬಲವಾಗಿದ್ದಳು ಹೀಗೆ ಅರಿಮರೆತು, ವರ್ತಿಸುತ್ತಿದ್ದ ವರ್ತನಕ್ಕಿಂತ ಆಕೆಯಲ್ಲಿ ಕ್ರೂರನಾಗಿ ವರ್ತಿಸುವುದೇ ಚೆನ್ನಾಗಿತ್ತೋ ಏನೋ?

ಇವೆಲ್ಲದರ ಜೊತೆಗೆ ಆಕೆಗೆ ಆಗಾಗ ಖಾಯಿಲೆ, ನನಗೆ ಪದೇ ಪದೇ ಜೈಲು ನಾವು ನಾವು ನೋಡುತ್ತಿದ್ದುದು ಆಕೆಯು ಯಾವಾಗಲಾದರೂ ನನ್ನನ್ನು ನೋಡುವು ದಕ್ಕೆ ಜೈಲಿಗೆ ಬಂದಾಗ ಕಾಯಿದೆ ಭಂಗ ಚಳವಳಿಯಲ್ಲಿ ಆಕೆಯು ನಮ್ಮ ಯೋಧ

ರಲ್ಲಿ ಮೊದಲನೆಯ ಪಂಕ್ತಿಗೆ ಬಂದಳು. ತನಗೂ ಜೈಲು ಆಯಿತೆಂದು ಹಿಗ್ಗಿದಳು. ಆಗ ನಮ್ಮ ಹೃದಯಗಳು ಇನ್ನೂ ಹತ್ತಿರ ಹತ್ತಿರವಾಗಿ, ಪರಸ್ಪರ ಪ್ರೇಮವು ಮಡಲಿಟ್ಟಿತು. ಎಲ್ಲೋ ಯಾವಾಗಲೋ ನಾವು ಒಬ್ಬರನ್ನೊಬ್ಬರು ಕಾಣುವೆವು. ಆ ದೂರದರ್ಶನವು ಎಷ್ಟೋ ಹಿತವಾಗುತ್ತಿದ್ದು, ಅಮೂಲ್ಯವಾಗುವುದು. ದಿನ ದಿನಗಳನ್ನು ಎಣಿಸಿ, ಆ ದರ್ಶನದಿನವು ಬಂದಂತೆಲ್ಲ ಹಿರಿಹಿಗ್ಗುವೆವು. ಒಬ್ಬರನ್ನು ಕಂಡು ಇನ್ನೊಬ್ಬರಿಗೆ ಬೇಸರವಿಲ್ಲ. ಅವಜ್ಞತೆಯಿಲ್ಲ. ನಾವು ಜೊತೆಯಲ್ಲಿ ಇದ್ದಷ್ಟೂ ಹೊತ್ತೂ ಏನೋ ಒಂದು ಅಭೂತಪೂರ್ವವಾದ ಆನಂದವನ್ನು ಅನುಭವಿಸುವೆವು. ಒಬ್ಬರಲ್ಲೊಬ್ಬರು ಹೊಸ ಹೊಸದನ್ನು ಕಾಣುವೆವು. ಕಂಡುದೆಲ್ಲ ನಮಗೆ ಒಪ್ಪಿಗೆಯಾಗಿರುತ್ತಿತ್ತು ಎಂದಲ್ಲ. ನಮಗೆ ಒಪ್ಪಿಗೆಯಾಗದೆ ಬಿಡುತ್ತಿದ್ದಲ್ಲಿಯೂ ಕೂಡ ಎಳೆತನದ ಗುರುತುಗಳು ಇನ್ನೂ ಇರುತ್ತಿದ್ದುವು.

ಮದುವೆಯಾಗಿ ಹದಿನೆಂಟು ವರುಷವಾಗಿದ್ದರೂ ಇನ್ನೂ ಆಕೆಯು ಹುಡುಗಿ ಹುಡುಗಿಯಾಗಿಯೇ ಇದ್ದಳು. ನೋಡಿದವರ ಮಕ್ಕಳತಾಯಿ ಎನ್ನುವಂತಿರಲೇ ಇಲ್ಲ. ಆ ಮದುವೆಯ ದಿನ ಇದ್ದಂತೆಯೇ ಇನ್ನೂ ನವೀನವಾಗಿಯೇ ಇದ್ದಳು. ನನ್ನಲ್ಲಿ ಮಾತ್ರ ಬೇಕಾದಷ್ಟು ಬದಲಾವಣೆಯಾಗಿ ಹೋಗಿತ್ತು. ಶಕ್ತಿ ಸಾಮರ್ಥ್ಯ, ಚಟುವಟಿಕೆಗಳಲ್ಲಿ—ಇನ್ನೂ ಹುಡುಗ ಬುದ್ಧಿಯೂ ಬಿಟ್ಟಿರಲಿಲ್ಲವಂತೆ—ನಾನು ಹಿಂದೆ ಬಿದ್ದಿರಲಿಲ್ಲವಾದರೂ ನನಗೆ ವಯಸ್ಸಾಗಿದೆಯೆಂಬುದು ಮುಖದಲ್ಲಿಯೇ ಕಾಣುತ್ತಿತ್ತು. ಈ ಕಳೆದ ನಾಲ್ಕು ವರ್ಷದ ಒಗ್ಗಟ್ಟುಗಳಲ್ಲಿ ನಾನು ಹಣ್ಣಾಗಿದ್ದೇನೆಂಬುದು ನೋಡಿದ ಕೂಡಲೇ ತಿಳಿದು ಹೋಗುತ್ತಿತ್ತು. ಈಚೀಚೆಗೆ ನಾನೂ ಕಮಲಳೂ ಇಬ್ಬರೂ ಅಪರಿಚಿತವಾದ ಊರಿಗೆ ಹೋಗಿದ್ದಾಗ ನೋಡಿದವರು ಆಕೆಯನ್ನು "ನಿಮ್ಮ ಮಗಳೇ ?" ಎಂದು ಕೇಳುತ್ತಿದ್ದರು. ಆಕೆಯೂ ಇಂದಿರೆಯೂ ನೋಡುವುದಕ್ಕೆ ಅಕ್ಕತಂಗಿಯರಿದ್ದಂತೆ ಇದ್ದರು.

ನಾವು ಗೃಹಸ್ಥರಾಗಿ ಬಾಳಿದುದು ಹದಿನೆಂಟು ವರ್ಷಗಳು! ಆದರೆ ಆ ಸುದೀರ್ಘ ವರ್ಷಗಳಲ್ಲಿ ನಾನು ಜೈಲಿನ ಕೊಠಡಿಯಲ್ಲಿ ಕಳೆದುದೆಷ್ಟು ? ಆಕೆಯು ಆಸ್ಪತ್ರೆಗಳಲ್ಲಿಯೂ ಆರೋಗ್ಯಧಾಮಗಳಲ್ಲಿಯೂ ಕಳೆದುದು ಎಷ್ಟು ? ಈಗಲೂ ನಾನು ಜೈಲಿನಲ್ಲಿದ್ದು ಎಲ್ಲೋ ಒಂದೆರಡು ದಿನ ಹೊರಕ್ಕೆ ಬಂದವನು. ಆಕೆ ಈಗಲೂ ರೋಗಶಯ್ಯೆಯಲ್ಲಿಯೇ ಈಗಲೋ ಆಗಲೋ ಎನ್ನುವಂತೆ ಇರುವಳು. ಆಕೆಯು ತನ್ನ ಆರೋಗ್ಯದ ವಿಷಯವಾಗಿ ಅಷ್ಟು ಉದಾಸೀನವಾಗಿ ಇರುವದನ್ನು ಕಂಡು ನನಗೆ ಖೇದವಾಯಿತು. ಆದರೇನು ? ಆಕೆಯು ದೇಶದಲ್ಲಿ ನಡೆಯುತ್ತಿರುವ ಚಳವಳಿಯಲ್ಲಿ ಮುಂದೆ ನಿಂತು ಕೆಲಸ ಮಾಡಲು ಸಾಧ್ಯವಿಲ್ಲವಲ್ಲ ಎಂದು ಹಾತೊರೆಯುತ್ತಿರಲು ತಾನು ಆಕೆಯನ್ನು ಏನೆನ್ನಲಿ ? ಆಕಗೆ ಚಳವಳಿಯಲ್ಲಿ ಧುಮುಕಿಬಿಡಬೇಕೆಂದು ಜ್ವಲಿಸುತ್ತಿರುವ ಆಶೆ, ದೇಹವು ಅದಕ್ಕೆ ಅವಕಾಶ ಕೊಡದು. ಆಕೆಗೆ ಅದೇ ಚಿಂತೆ. ಬೇರೆ ಕಾರ್ಯವೂ



ಶಾಸನಗ ಭಂಗ ಚಳವಳಿಯಲ್ಲಿ ಭಾಗವಹಿಸಿದ ಮಹಿಳೆಯರು
ಶ್ರೀಮತಿ ಕಮಲಾ ನೆಹ್ರೂರವರು ಎರಡನೆಯ ಸಾಲಿನಲ್ಲಿ ಕುಳಿತಿರುವರು

ಬೇಡ, ಔಷಧೋಪಚಾರಗಳಲ್ಲಿ ಮನಸ್ಸಿಲ್ಲ ಆ ದುರಂತವಾದ ಆಶೆಯೇ ಆಕೆಯನ್ನು ಕೊರಗಿಸಿ ಬಿಟ್ಟಿತು

ಕಮಲಾ ನನ್ನನ್ನು ಬಿಟ್ಟು ಹೋಗುವಳೇ? ಅಬ್ಬಾ! ಆಕೆಯಿಲ್ಲದಿದ್ದರ ನನ್ನ ಗತಿಯೇನು? ನಿಜವಾಗಿಯೂ ನಮುನಮಗೆ ಹೃದಯಗಳು ಬೆರೆತು ಪರಸ್ಪರ ಪರಿಚಯವು ಪೂರ್ಣವಾಗಿದ್ದುದು ಇತ್ತೀಚೆಗೆ ನಮ್ಮ ಇಬ್ಬರ ಸಂಯುಕ್ತ ಜೀವನವು ಇನ್ನೂ ಆರಂಭವಾಗುತ್ತಿದೆ ನ ವಿಬ್ಬರೂ ಒಬ್ಬರೊಬ್ಬರಿಗೆ ಆಧಾರವಾಗುತ್ತಿದೇವೆ ನಾವಿಬ್ಬರೂ ಮಾಡಬೇಕಾದ ಕಲಸವಿನ್ನೂ ಬೇಕಾದಷ್ಟು ಇದೆ

ಆಕೆಯ ಮಗ್ಗುಲಲ್ಲಿ ಕುಳಿತು ಕ್ಷಣಗಳನ್ನೂ ದಿನಗಳನ್ನೂ ನೂಕುತ್ತಿದ್ದಾಗ ಇಂತಹ ಭಾವನೆಗಳು ನನ್ನ ಹೃದಯದಲ್ಲಿ ಮೂಡುತ್ತಿದ್ದುವು

ಕಾರ್ಯಬಂಧುಗಳೂ ಮಿತ್ರರೂ ಬಂದು, ನನಗೆ ತಿಳಿಯದ ಸಂಗತಿಗಳನ್ನೆಲ್ಲ ಹೇಳುವರು ಸದ್ಯದ ರಾಜಕೀಯ ಸಮಸ್ಯೆಗಳನ್ನು ಚರ್ಚಿಸಿ ಪ್ರಶ್ನೆಗಳನ್ನು ಕೇಳುವರು ಅವರಿಗೆ ಉತ್ತರ ಹೇಳುವುದು ನನಗೆ ಕಷ್ಟವಾಗುತ್ತಿತ್ತು ಕಮಲಳ ದೇಹಸ್ಥಿತಿಯನ್ನು ಕುರಿತು ಮನಸ್ಸು ಹೊರಳಲಾರದು ಜೊತೆಗೆ ಏಳು ದಿನ ಜೈಲಿನಲ್ಲಿದ್ದು ಈಚೆಗೆ ಬಂದಿದ್ದೆನಾಗಿ ಈ ಕಠಿಣ ಪ್ರಶ್ನೆಗಳಿಗೆ ಉತ್ತರಕೊಡುವುದೂ ಸಾಧ್ಯವಾಗುತ್ತಿರಲಿಲ್ಲ ಮನಸ್ಸು ಸರಿಯಾಗಿ ಕೆಲಸಮಾಡುವುದಕ್ಕೆ ವ್ಯಕ್ತಿಗಳ ಸಂಬಂಧವೂ ಬೇಕು ಹಾಗಿಲ್ಲದೆ, ಉತ್ತರ ಹೇಳಿದರೆ, ಅದು ಪುಸ್ತಕದ ಬವಣೆಕಾರನಾಗಿ ನಿರ್ಜೀವವಾಗಿರುತ್ತದೆ ಸಾಲದೆ, ಗಾಂಧಿಜಿಯವರನ್ನು ವರ್ಕಿಂಗ್ ಕಮಿಟಿಯ ಇತರ ಕಾರ್ಯಬಂಧುಗಳನ್ನೂ ನೋಡಿ ಅವರೊಡನೆ ಚರ್ಚಿಸುವುದಕ್ಕಿಂತ ಮುಂಚೆ ಕಾಂಗ್ರೆಸ್ಸಿನ ಧೋರಣೆಯನ್ನು ಕುರಿತು ತೋರಿದಂತೆ ಮಾತಾಡುವುದು ಅನ್ಯಾಯ ಎನ್ನಿಸಿತು ನಡೆದಿರುವುದರಲ್ಲಿ ಬಹುಮಟ್ಟಿಗೆ ನನಗೆ ಸಮರ್ಪಕವಾಗಿರಲಿಲ್ಲ, ಆದರೂ ನಾನು ಹೀಗೆ ಮಾಡಿ ಎಂದು ಹೇಳಲು ಸಿದ್ಧನಾಗಿರಲಿಲ್ಲ ಜೈಲಿನಿಂದ ಹೊರಗೆ ಬರುವುದರ ಯೋಚನೆಯೇ ಇಲ್ಲದಿದ್ದ ನಾನು ಆ ವಿಷಯವಾಗಿ ಯೋಚಿಸಿಯೇ ಇರಲಿಲ್ಲ

ಇವೆಲ್ಲದರ ಜೊತೆಗೆ, ನನ್ನ ಹೆಂಡತಿಯನ್ನು ನೋಡುವುದಕ್ಕೆಂದು ನನ್ನನ್ನು ಕಳುಹಿಸಿ, ಸರಕಾರವು ಗೌರವ ತೋರಿರಲು, ನಾನು ಆ ಅವಕಾಶವನ್ನು ರಾಜಕೀಯ ಕಾರ್ಯಗಳಿಗಾಗಿ ಉಪಯೋಗಿಸುವುದು ಸರಿಯೇ ಎಂಬ ಭಾವನೆಯು ನನಗ ಹುಟ್ಟಿತು ನಾನು ಹಾಗೆ ಮಾಡುವುದಿಲ್ಲ ಎಂದು ಬರೆದುಕೊಟ್ಟಿರಲಿಲ್ಲ ಮಾತಿನಲ್ಲಿಯೂ ಹೇಳಿರಲಿಲ್ಲ ಆದರೂ ಹಾಗೆ ಮಾಡಕೂಡದು ಎಂದು ನನ್ನ ಮನಸ್ಸು ಹಿಂದೆಗೆಯಿತು

ಕೆಲವು ಸುಳ್ಳು ಸುದ್ದಿಗಳನ್ನು ನಿರಾಕರಿಸುವುದರ ಹೊರತು, ನಾನು ಇನ್ನು ಯಾವ ಹೇಳಿಕೆಗಳನ್ನೂ ಪ್ರಕಟಿಸಲಿಲ್ಲ ಹಿಂದೆ ನಡೆದಿದ್ದ ಘಟನೆಗಳ ವಿಚಾರವಾಗಿ

ಧಾರಾಳವಾಗಿ ದೋಷಾರೋಪಣ ಮಾಡುತ್ತಿದ್ದರೂ ನಾನು ಯಾವುದೊಂದು ಕಾರ್ಯ ಧೋರಣವನ್ನು ನನ್ನ ಸ್ವಂತಕ್ಕಾಗಿಯೂ ಅವಲಂಬಿಸಲಿಲ್ಲ ಇತ್ತೀಚಿಗೆ ಕಾಂಗ್ರೆಸ್ ಸೋಷಿಯಲಿಸ್ಟ್ ಪಾರ್ಟಿಯು ಹುಟ್ಟಿಕೊಂಡಿತ್ತು ನನ್ನ ಆಪ್ತರಾದ ಕಾರ್ಯಬಂಧುಗಳು ಅನೇಕರು ಆ ಪಕ್ಷಕ್ಕೆ ಸೇರಿದ್ದರು ನಾನು ವಿಚಾರಿಸಿ ತಿಳಿದಮಟ್ಟಿಗೆ, ಅದರ ಧೋರಣವು ನನಗೂ ಸಾಮಾನ್ಯವಾಗಿ ಸಮ್ಮತವಾಗಿತ್ತು ಆದರೆ ಅಲ್ಲಿ ಸೇರಿದ್ದವರು ನಾನಾ ಗೋತ್ರಗಳವರು ಎಂದೆನ್ನಿಸಿತು. ನಾನು ಸ್ವತಂತ್ರನಾಗಿದ್ದರೂ ನಾನು ಕೂಡಲೇ ಆ ಪಕ್ಷವನ್ನು ಸೇರುತ್ತಿರಲಿಲ್ಲ ಅಲಹಾಬಾದಿನಲ್ಲಿಯೂ ಇತರ ಕಡೆಗಳಲ್ಲಿ ಆಗುತ್ತಿದ್ದಂತೆ, ಸ್ಥಳೀಯ ಕಾಂಗ್ರೆಸ್ ಕಮಿಟಿಗೆ ಚುನಾವಣೆಯು ಸಮಾಪಿಸಿ, ಅದಕ್ಕಾಗಿ ಒಂದು ಕೋಲಾಹಲವಾಗಿತ್ತು ಆ ಸಂಬಂಧವಾಗಿ ಸ್ಥಳೀಯ ವಿದ್ಯಮಾನಗಳೂ ನಾನಿದ್ದ ದಿನಗಳಲ್ಲಿ ಕೆಲಕಾಲವನ್ನು ಕಬಳಿಸಿದುವು ಆ ಚುನಾವಣೆಯಲ್ಲಿ ತತ್ವಗಳಿಗಿಂತ ವ್ಯಕ್ತಿಗಳೇ ಪ್ರಧಾನರಾಗಿದ್ದು, ಕೆಲವು ಜಗಳಗಳೂ ಹುಟ್ಟಿಕೊಂಡಿದ್ದವು ಇಂತಹ ಜಗಳಗಳು ಕೆಲವನ್ನು ನಾನು ತೀರಿಸಬೇಕಾಗಿ ಬಂತು

ಈ ವಿಷಯಗಳಲ್ಲಿ ಕೈಹಾಕುವುದು ನನಗೆ ಎಳ್ಳಷ್ಟೂ ಬೇಕಿರಲಿಲ್ಲ ಅಲ್ಲದೆ ಅದಕ್ಕೆ ನನಗೆ ಸಮಯವೂ ಇರಲಿಲ್ಲ ಹೀಗಿದ್ದರೂ, ಕೆಲವು ವಿಷಯಗಳು ನನ್ನವರೆಗೂ ತಿಳಿದು ನನಗೆ ಬಹಳ ವ್ಯಥೆಯನ್ನುಂಟುಮಾಡಿದುವು ಸ್ಥಳೀಯ ಕಾಂಗ್ರೆಸ್ ಕಮಿಟಿಯ ಚುನಾವಣೆಯ ಸಂಬಂಧವಾಗಿ ಜನರು ಇಷ್ಟು ಹೋರಾಡುವರೆಂದು ನಾನು ಭಾವಿಸಿರಲಿಲ್ಲ ಕರನಿರಾಕರಣ ಸಮರದಲ್ಲಿ ಸ್ವಂತ ಕಾರಣಗಳಿಂದ ಹಿಂದೆ ಬಿದ್ದಿದ್ದವರು ಅನೇಕರು ಈಗ ಚುನಾವಣೆಗೆ ಒದ್ದಾಡುತ್ತಿದ್ದರು, ಕಾಯಿದೆಭಂಗ ಚಳವಳಿಯನ್ನು ನಿಲ್ಲಿಸಿದ ಕೂಡಲೇ, ಆ ಸ್ವಂತ ಕಾರಣಗಳೆಲ್ಲ ಮಾಯವಾಗಿ, ಅವರು ಮತ್ತೆ ಈಚೆಗೆ ಬಂದು ಒಬ್ಬರಿಗೊಬ್ಬರು ಭಯಂಕರವಾಗಿ ನೀಚವಾಗಿ ಹೋರಾಡಲಾರಂಭಿಸಿದರು ಸ್ಥಳೀಯ ಚುನಾವಣೆಗಳ ಸಂಬಂಧವಾಗಿ, ಕಮಲಳ ಹೆಸರತ್ತ ಆಕೆಯು ಕಾಯಿಲೆಯಲ್ಲಿ ನರಳುತ್ತಿರುವಳೆಂಬುದನ್ನೂ ದುರುಪಯೋಗಪಡಿಸಿಕೊಂಡುದನ್ನು ತಿಳಿದು ನನ್ನ ಮನಸ್ಸಿಗೆ ಬಹಳ ವ್ಯಥೆಯಾಯಿತು

ನಾವು ಚರ್ಚಿಸಿದ ಪ್ರಬಲ ವಿಚಾರಗಳಲ್ಲಿ ಬರುವ ಅಸೆಂಬ್ಲಿ ಚುನಾವಣೆಗಳಲ್ಲಿ ಭಾಗವಹಿಸಬೇಕೆಂದು ಆಗಿದ್ದ ಕಾಂಗ್ರೆಸ್ ಠರಾವೂ ಒಂದು ತರುಣರನೇಕರಿಗೆ, ಹೀಗಾದರೆ ಮತ್ತೆ ಹಿಂದಿನ ಪಾರ್ಲಿಮೆಂಟರಿಯ ಲೇವಾದೇವಿ ಪದ್ಧತಿಯು ಮತ್ತೆ ತಲೆಯೆತ್ತುವುದೆಂದು, ಇದು ಸರಿಬೀಳಲಿಲ್ಲ ಆದರೆ, ಅವರು ಏನು ಮಾಡಬೇಕೆಂಬುದನ್ನು ಕುರಿತು ಏನೂ ಹೇಳಲಿಲ್ಲ ಅವರಲ್ಲಿ ಕೆಲವರು ಶುದ್ಧ ತತ್ವಾವಲಂಬಿಗಳಾಗಿ "ಈ ಚುನಾವಣೆಗಳಲ್ಲಿ ಕಾಂಗ್ರೆಸ್ ಭಾಗವಹಿಸಬಾರದು ಇನ್ನಾವುದಾದರೂ ಸಂಸ್ಥೆಯು ಈ ಕೆಲಸವಮಾಡಿದರೆ ಮಾಡಿಕೊಳ್ಳಲಿ" ಎಂದು ಅಭಿಪ್ರಾಯಪಟ್ಟರು

ಜಾತಿಕೋಮು ಸಭೆಗಳೂ ಈ ಚುನಾವಣೆಯನ್ನು ನೋಡಿಕೊಳ್ಳಲಿ ಎಂದು ಅವರ ಮನಸ್ಸಿದ್ದಂತೆ ತೋರಿತು

ನನಗೆ ಈ ಸ್ಥಳೀಯ ವಿದ್ಯಮಾನಗಳೂ ಅಲ್ಲಿ ಯದ್ವಾತದ್ವಾ ಬೆಳೆಯುತ್ತಿದ್ದ ಆ ವ್ಯವಹಾರಗಳೂ ಅಷ್ಟು ಸಮರ್ಪಕವಾಗಲಿಲ್ಲ ನನಗೂ ಅವಕ್ಕೂ ಸರಿಹೋಗುವುದಿಲ್ಲ ಎನ್ನಿಸಿ ನನ್ನ ಊರು ಅಲಹಾಬಾದಿನಲ್ಲಿಯೇ ನಾನು ಹೊಸಬನಾಗುವ ಪರಿಸ್ಥಿತಿಯೊದಗಿತು ನಾನೂ ಕಾರ್ಯರಂಗಕ್ಕಿಳಿದು, ಈ ವಿಷಯಗಳಲ್ಲಿ ಕೈಹಾಕಬೇಕಾಗಿ ಬಂದಾಗ, ಈ ವಿಷಮ ಪರಿಸ್ಥಿತಿಯಲ್ಲಿ ಏನುಮಾಡುವುದು ಸಾಧ್ಯವಾದೀತು ಎಂದು ಚಿಂತೆಯಾಯಿತು

ಕಮಲಳ ದೇಹಸ್ಥಿತಿಯು ವಿಚಾರವಾಗಿ ಗಾಂಧಿಜಿಯವರಿಗೆ ಒಂದು ಕಾಗದ ಬರೆದೆ. ಬಹುಶಃ ನಾನು ಮತ್ತೆ ಜೈಲಿಗೆ ಹೊರಟುಹೋಗಬಹುದು, ಕಾಗದ ಬರೆಯಲು ಅವಕಾಶವೇ ಇಲ್ಲದೆ ಹೋಗಬಹುದು ಎಂದುಕೊಂಡು, ನನ್ನ ಮನಸ್ಸಿನಲ್ಲಿದ್ದುದನ್ನು ಕುರಿತು ಅವರಿಗೆ ಎರಡು ಮಾತು ಬರೆದೆ ಇತ್ತೀಚೆಗೆ ನಡೆದ ವಿದ್ಯಮಾನಗಳು ನನಗೆ ಬೇಸರವನ್ನೂ ಖೇದವನ್ನೂ ಬಹಳ ಮಟ್ಟಿಗೆ ಹುಟ್ಟಿಸಿದ್ದುವು ಎಂಬುದನ್ನು ಆ ಕಾಗದದಿಂದ ಕೊಂಚವಾದರೂ ಅರಿಯಬಹುದಾಗಿತ್ತು ಏನು ಮಾಡಬೇಕಾಗಿತ್ತು, ಏನು ಮಾಡಬಾರದಾಗಿತ್ತು ಎಂಬುದನ್ನು ಕುರಿತು ಬರೆಯುವ ಪ್ರಯತ್ನವನ್ನು ನಾನು ಅಲ್ಲಿ ಮಾಡಲಿಲ್ಲ ನಡೆದುದನ್ನೆಲ್ಲ ತಿಳಿದು ನನ್ನ ಮನಸ್ಸಿಗೆ ಏನೆನ್ನಿಸಿತು ಎಂಬುದಷ್ಟು ಮಾತ್ರ, ಮುಚ್ಚುಮರೆಯಿಲ್ಲದೆ, ನನ್ನ ಮನಸ್ಸನ್ನು ಧಾರಾಳವಾಗಿ ಬಿಚ್ಚಿಟ್ಟು ಬರೆದಿದ್ದೆ ಅದರಿಂದ ಗಾಂಧಿಜಿಯವರ ಮನಸ್ಸಿಗೆ ಬಹಳ ನೋವಾಯಿತು ಎಂದು ಈಚೆಗೆ ತಿಳಿಯಿತು

ದಿನಗಳು ಕಳೆದುವು ಯಾವಾಗ ಬಂದು ನನ್ನನ್ನು ಹಿಡಿದುಕೊಂಡು ಹೋಗುವರೋ, ಯಾವ ಗಳಿಗೆಯಲ್ಲಿ ಸರಕಾರದಿಂದ ಏನು ಅಪ್ಪಣೆ ಬರುವುದೋ ಎಂದು ಗಳಿಗೆ ಗಳಿಗೆಯೂ ನಿರೀಕ್ಷಿಸುತ್ತಿದ್ದೆ ನಾಳೆಯೋ ನಾಡಿದ್ದೋ ಗೊತ್ತಾಗುವುದೆಂದು ಆಗಾಗ ನನಗೆ ವರ್ತಮಾನ ಬರುತ್ತಲೇ ಇತ್ತು. ಕಮಲಳ ಸ್ಥಿತಿಯನ್ನು ಕುರಿತು ಸರಕಾರಕ್ಕೆ ನಿತ್ಯವೂ ವರದಿಯನ್ನು ಕಳುಹಿಸಬೇಕೆಂದು ವೈದ್ಯರಿಗೆ ಅಪ್ಪಣೆಯಾಗಿತ್ತು ನಾನು ಬಂದಮೇಲೆ ಕಮಲಳಿಗೆ ಕೊಂಚ ಗುಣಮುಖವಾಗಿತ್ತು

ಅಕ್ಟೋಬರಿನಲ್ಲಿ ಬೊಂಬಾಯಿನಲ್ಲಿ ನಡೆಯುವ ಕಾಂಗ್ರೆಸ್ಸು, ನವೆಂಬರಿನಲ್ಲಿ ನಡೆಯುವ ಅಸೆಂಬ್ಲಿ ಚುನಾವಣೆ ಇವೆರಡೂ ಇಲ್ಲದಿದ್ದರೆ, ನನ್ನನ್ನು ಬಿಟ್ಟೇ ಬಿಡುತ್ತಿದ್ದರು ಎಂದು ಸರಕಾರದ ವಿಶ್ವಾಸಕ್ಕೆ ಪಾತ್ರರಾದವರೂ ಅನೇಕರು ನಂಬಿದ್ದರು. ನಾನು ಈಚೆ ಸ್ವತಂತ್ರನಾಗಿದ್ದರೆ, ಈ ಎರಡರಲ್ಲಿಯೂ ನನ್ನಿಂದ ಅನರ್ಥವಾಗುವ ಸಂಭವವುಂಟೆಂದು ಇನ್ನೂ ಮೂರೂ ತಿಂಗಳ ಮಟ್ಟಿಗಾದರೂ ನನ್ನನ್ನು ಜೈಲಿನಲ್ಲಿ

ಟ್ಟಿದ್ದು ಬಿಟ್ಟುಬಿಡಬಹುದು ಎಂದು ಎನ್ನಿಸುತ್ತಿತ್ತು ದಿನಗಳು ಕಳೆದ ಹಾಗೆಲ್ಲ ಈ ತೋರಿ ಕೆಯೇ ಬಲವಾಗಿ ಇನ್ನೇನು ಎಲ್ಲಾ ಸಂಪಾದಿಸಿಕೊಳ್ಳೋಣ ಎಂದೂ ಗೊತ್ತು ಮಾಡಿ ಕೊಂಡಿದ್ದೆ

ಆಗಸ್ಟ್ ೨೩ ನನ್ನನ್ನು ಹೊರಕ್ಕೆ ಕರೆತಂದು ಹನ್ನೊಂದು ದಿನಗಳಾಗಿತ್ತು ಪೊಲೀಸ್ ಕಾರ್ ಬಂತು ಪೋಲೀಸ್ ಆಫೀಸರ್ ಬಂದು, ನೈನಿ ಜೈಲಿಗೆ ಬರಬೇಕೆಂದರು ನಾನು ಎಲ್ಲರನ್ನೂ ಬೀಳ್ಕೊಟ್ಟು ಹೊರಟೆ ನಾನು ಪೋಲೀಸ್ ಕಾರಿನೊಳಗೆ ಇನ್ನೇನು ಕುಳಿತುಕೊಳ್ಳಬೇಕು, ಆಗ, ನಮ್ಮ ತಾಯಿಯು ಅಯ್ಯೋ ಎಂದು ಓಡಿ ಬಂದರು ಆಕೆಯ ಆಗಿನ ಮುಖವು ನನ್ನ ಮನಸ್ಸಿನ ಕಣ್ಣೆದುರು ಬಹುಕಾಲ ನಿಂತಿತ್ತು

೬೬

# ಮತ್ತೆ ಸೆರೆಮನೆಗೆ

ನೆರಳು ನಿರಾತಂಕವಾಗಿ ಸಂಚರಿಸುವುದು ಬಿಸಿಲು ಸಂಚರಿಸುವುದಕ್ಕೆ ಅದರ ಸ್ವಭಾವವೇ ಅದಕ್ಕೆ ನೂರಾರು ಆತಂಕ ತಂದೊಡ್ಡುವುದು ಅದರಂತೆ, ದುಃಖವು ಸುಖದಿಂದ ಬೇರೆ ಸುಖದ ಹಾದಿಯಲ್ಲಿ ಅನಂತ ದುಃಖಗಳ ಗಾಯಗಳೂ ನೋವುಗಳೂ ಬಹಳ ಬಹಳ

ರಾಜತರಂಗಿಣಿ *

ಮತ್ತೆ ನೈನಿ ಜೈಲಿಗೆ ಹೋದಾಗ, ಇನ್ನೊಂದು ಸಲ ಶಿಕ್ಷೆಯನ್ನು ಅನುಭವಿಸಲು ಬಂದಂತೆ ತೋರಿತು ಜೈಲಿನಿಂದ ಹೊರಕ್ಕೆ, ಮತ್ತೆ ಜೈಲಿಗೆ ನಾನು ಲಾಳಿಯಂತಾದೆ ಅತ್ತಕಡೆಯಿಂದ ಇತ್ತಕಡೆ, ಇತ್ತಕಡೆಯಿಂದ ಅತ್ತಕಡೆ ಎಸೆದಾಡುವುದರಲ್ಲಿ ನನ್ನ ಭಾವಪ್ರಪಂಚವೆಲ್ಲ ಕುಲುಕಿಹೋದಂತಾಯಿತು. ಪದೇಪದೇ ಆಗುತ್ತಿರುವ ಬದಲಾವಣೆಗಳಿಗೆ ಸರಿಹೋಗಿಸಿಕೊಳ್ಳುವುದು ಸುಲಭವಾಗಿರಲಿಲ್ಲ ನೈನಿಯಲ್ಲಿ ಹಿಂದೆ ನಾನಿದ್ದ ಕೋಣೆಯಲ್ಲಿಯೇ ಈ ಸಲವೂ ಹಾಕಬಹುದು ಎಂದುಕೊಂಡಿದ್ದೆ ಅಲ್ಲಿ ನಮ್ಮ ಭಾವ ರಂಜಿತ್ ಪಂಡಿತರು ನೆಟ್ಟಿದ್ದ ಹೂವಿನ ಗಿಡಗಳು ಕೆಲವಿದ್ದುವು ಒಳ್ಳೆಯ ವೆರಾಂಡಾ ಕೂಡ ಇತ್ತು ಈ ೬ ನೆಯ ನಂಬರು ಕೋಣೆಯಲ್ಲಿ ಇನ್ನೊಬ್ಬ ಡಿಟೆನ್ಯೂ ಇದ್ದನು. ಆತನಿಗೆ ವಿಚಾರಣೆಯೂ ಇಲ್ಲ, ಶಿಕ್ಷೆಯನ್ನೂ ಕೊಟ್ಟಿರಲಿಲ್ಲ ಆತನ ಜೊತೆಯಲ್ಲಿ ನಾನಿರುವುದು ಅಧಿಕಾರಿಗಳಿಗೆ ಸರಿಹೋಗಲಿಲ್ಲ. ಆದರಿಂದ ನನ್ನನ್ನು ಮತ್ತೊಂದೆಡೆ ಇಟ್ಟರು ಅಲ್ಲಿ ಇನ್ನೂ ಭದ್ರವಾಗಿತ್ತು ಹೂವು ಹಸುರು ಏನೂ ಇರಲಿಲ್ಲ

ನನ್ನ ಮನಸ್ಸು ಎಲ್ಲಿಯೋ ಹೋಗಿದ್ದುದರಿಂದ ನಾನು ಹಗಲೂ ಇರುಳೂ ಇರಬೇಕಾದ ಸ್ಥಳದ ವಿಚಾರವಾಗಿ ಏನೂ ಯೋಚನೆಯೇ ಬರಲಿಲ್ಲ ನನ್ನನ್ನು ಮತ್ತೆ ಜೈಲಿಗೆ ಕಳುಹಿಸಿದುದರಿಂದ ಕಮಲಳ ದೇಹಸ್ಥಿತಿಯು ಮೊದಲಿನಂತೆ ಆಗವುದು ಎಂದು ನಾನೆಂದುಕೊಂಡೆ ಹಾಗೆಯೇ ಆಯ್ತು ಕೆಲವು ದಿನ ಕಮಲಳ ದೇಹಸ್ಥಿತಿಯ ವಿಚಾರವಾಗಿ ವೈದ್ಯರು ಹೊರಡಿಸಿದ ಪ್ರಕಟನೆಗಳು ಬಂದುವು ವೈದ್ಯರು ಅದನ್ನು ಟೆಲಿಫೋನ್ ಮೂಲಕ ಪೋಲೀಸ್ ಹೆಡ್ ಕ್ವಾರ್ಟರ್ಸ್‌ಗೆ ತಿಳಿಸುವುದು, ಅವರು ಅದನ್ನು ಜೈಲಿಗೆ ಕಳುಹಿಸುವುದು ಹೀಗೆ ಆ ಸುದ್ದಿ ಸುತ್ತಿ

---

* ಆರ್ ಎಸ್ ಪಂಡಿತರ ಅನುವಾದ ["ರಿವರ್ ಕಿಂಗ್ಸ್" — ತರಂಗ, ೭ ಶ್ಲೋಕ, ೧೯೧೩ )

ಕೊಂಡು ಬರುತ್ತಿತ್ತು ವೈದ್ಯರು ಜೈಲಿನ ಅಧಿಕಾರಿಗಳೊಡನೆ ನೇರವಾಗಿ ವ್ಯವಹರಿಸ ಕೂಡದೆಂದು ಆಗಿತ್ತು ಎರಡುವಾರ ಈ ಪ್ರಕಟನೆಗಳು ಕ್ರಮಕ್ರಮವಾಗಿ ಬಂದುವು ಆಕೆಯ ದೇಹಸ್ಥಿತಿಯು ಇಳಿಮೊಗವಾಗಿದ್ದರೂ ಅನಂತರ ಪ್ರಕಟನೆಗಳು ಬರುವುದು ನಿಂತುಹೋಯಿತು

ಕೆಟ್ಟ ಸುದ್ದಿ–ಅದರ ಮೇಲೆ ಅದಕ್ಕೂ ಕಾಯಬೇಕು–ಹೀಗಾಗಿ ದಿನಗಳನ್ನು ನೂಕುವುದು ದುಸ್ತರವಾಯಿತು ರಾತ್ರಿಗಳಂತೂ ಇನ್ನೂ ಅಸಾಧ್ಯವಾಯಿತು ಕಾಲಚಕ್ರವು ಏನಾದರೂ ನಿಂತು ಹೋಗಿದೆಯೋ ಅಥವಾ ನಡೆದರೂ ಬಹಳ ನಿಧಾನ ವಾಗಿ ನಡೆಯುತ್ತಿದೆಯೋ ಎನ್ನಿಸಿ, ಒಂದೊಂದು ಗಂಟೆಯೂ ಒಂದೊಂದು ಭಾರವಾಗಿ ಒಂದು ಭಯವಾಗಿ ಹೋಯಿತು ನನಗೆ ಇದುವರೆಗೆ ಇಂತಹ ಭಾವವು ಇಷ್ಟು ತೀವ್ರ ವಾಗಿ ಬಂದಿರಲಿಲ್ಲ ಬೊಂಬಾಯಿ ಕಾಂಗ್ರೆಸ್ ಆದಮೇಲೆ, ಎರಡು ತಿಂಗಳು ಸುಮಾರಿನಲ್ಲಿ ನನ್ನನ್ನು ಜೈಲಿನಿಂದ ಬಿಟ್ಟಾರು ಎಂದುಕೊಂಡಿದ್ದೆ. ಆದರೆ, ಆ ಎರಡು ತಿಂಗಳು ಏನೋ ಒಂದು ಅನಂತಕಾಲವಿದ್ದಂತೆ ಭಾಸವಾಯಿತು

ನನ್ನನ್ನು ಮತ್ತೆ ಹಿಡಿದು ತಂದಂದಿನಿಂದ ಒಂದು ತಿಂಗಳಿಗೆ ಸರಿಯಾಗಿ ಒಬ್ಬ ಪೊಲೀಸ್ ಆಫೀಸರು ಬಂದು ನನ್ನನ್ನು, ಕಮಲಳನ್ನು ನೋಡಿ ಬರುವುದಕ್ಕೆ ಕರೆದೊಯ್ದನು ಇನ್ನು ಮೇಲೆ ವಾರಕ್ಕೆರಡು ಸಲ ಆಕೆಯನ್ನು ನೋಡಿ ಬರಲು ಅವಕಾಶವನ್ನು ಕಲ್ಪಿಸಿರುವುದಾಗಿ ಹೇಳಿ, ಇಂತಹ ದಿನ ಇಂತಹ ಗಂಟೆಯೆಂದು ಕೂಡ ಆತನು ನನ್ನೊಡನೆ ಹೇಳಿದನು ಅದರಂತೆ ನಾಲ್ಕನೆಯ ದಿನ ನಾನು ಕಾದುಕುಳಿತೆ ಒಂದು ದಿನ ವಾಯಿತು, ಎರಡಾಯಿತು, ಮೂರುದಿನವಾಯಿತು ಕಾದು ಕಾದು ಸಾಕಾಯಿತು ಆಕೆಯ ದೇಹಸ್ಥಿತಿಯೂ ಮತ್ತೆ ದಿಗಿಲಾಗುವಂತಾಗಿದೆಯೆಂದು ಸುದ್ದಿಯು ಬಂತು ಇಂತಹ ಸ್ಥಿತಿಯಲ್ಲಿ, ವಾರಕ್ಕೆರಡು ಸಲ ಆಕೆಯನ್ನು ನೋಡಿಬರಲು ಕಳುಹಿಸುವೆವು ಎಂದು ಹಾಸ್ಯ ಮಾಡುವುದೇ ? ಎಂದು ನೊಂದುಕೊಂಡೆ

ಸೆಪ್ಟೆಂಬರು ತಿಂಗಳೂ ಹಾಗೂ ಹೀಗೂ ಕಳೆಯಿತು ಆ ಮೂವತ್ತು ದಿವಸವೂ ನಾನು ಪಟ್ಟ ಶ್ರಮ, ಆ ದಿನಗಳಷ್ಟು ದೀರ್ಘ ದಿನಗಳು, ಭಯಂಕರ ದಿನಗಳು, ನಾನು ಇನ್ನು ಯಾವಾಗಲೂ ಅನುಭವಿಸಿರಲಿಲ್ಲ

ಉಳಿದಿರುವ ಶಿಕ್ಷಾಕಾಲದಲ್ಲಿ ರಾಜಕೀಯ ವ್ಯವಹಾರದಲ್ಲಿ ಕೈಹಾಕುವುದಿಲ್ಲ ವೆಂದು ಮಾತುಕೊಟ್ಟರೆ, ಬರೆದುಕೊಡಬೇಕಾಗಿಯೂ ಇರಲಿಲ್ಲ–ಕಮಲಳನ್ನು ನೋಡಿ ಕೊಳ್ಳಲು ನನ್ನನ್ನು ಬಂಧನದಿಂದ ಬಿಡುವುದಾಗಿ ನನಗೆ ಹಲವು ಕಡೆಯಿಂದ ಮಧ್ಯಸ್ಥ ನಡೆಯಿತು ಆಗ ನನ್ನ ಮನಸ್ಸಿಗೆ, ರಾಜಕೀಯವು ಕೊಂಚದೂರವಾಗಿತ್ತು. ಮತ್ತು ನನಗೆ ದೊರೆತಿದ್ದ ಹನ್ನೊಂದು ದಿನದ ಬಿಡುವಿನಲ್ಲಿ ಹೊರಗಿದ್ದ

## ೧೯೩೦ ರಲ್ಲಿ ಜವಹರಲಾಲರ ವಿಚಾರಣೆ



ವಿಚಾರಣೆಯ ತೀರ್ಮಾನವನ್ನು ಕೇಳಲು ಕಾರಾಗೃಹದ ಹೊರಗೆ ನಿಂತಿರುವ ಜನಸಂದಣಿ

ವಿಚಾರಣೆ ಪಂಡಿತ ಮೋತಿಲಾಲರು ಜವಹರಲಾಲರ ಪಕ್ಕದಲ್ಲಿ ಕುಳಿತಿರುವರು

ಮಗನನ್ನು ಸಂದರ್ಶಿಸಲು ಪಂಡಿತ ಮೋತಿಲಾಲರು ನೈನಿ ಕೇಂದ್ರ ಕಾರಾಗೃಹದ ೬ ನೆಯ ಪಾಳೆಯದ ಕಡೆಗೆ ಹೋಗುತ್ತಿರುವರು

ರಾಜಕೀಯ ವ್ಯವಹಾರವನ್ನು ಕಂಡು ನನಗೆ ಅಸಹ್ಯವಾಗಿತ್ತು ಆದರೆ ಕೈಹಾಕು ವುದಿಲ್ಲವೆಂದು ಭರವಸೆಕೊಡುವುದೇ? ನಾನು ಮಾಡಿರುವ ಪ್ರಮಾಣಗಳಿಗೆ, ತತ್ವಕ್ಕೆ, ಕಾರ್ಯಬಂಧುಗಳಿಗೆ, ನನಗೆ ದ್ರೋಹಮಾಡಿಕೊಳ್ಳುವುದೆ? ಬೇಕಾದುದು ಆಗಲಿ, ಅದು ಸಾಧ್ಯವಿಲ್ಲ ಹಾಗೆ ಮಾಡಿದರೆ ನನ್ನ ಕರುಳು ಕಿತ್ತುಕೊಂಡಂತೆ, ನಾನು ಪವಿತ್ರವೆಂದು ಭಾವಿಸಿರುವ ಸಮಸ್ತವನ್ನು ಅಪವಿತ್ರಗೊಳಿಸಿದಂತೆ. "ಕಮಲಳು ಇನ್ನು ಯಾವಾಗ ಏನೋ ಎಂಬ ಸ್ಥಿತಿಗೆ ಬರುತ್ತಿದ್ದಾಳೆ ಈಗ ನೀನು ಆಕೆಯ ಬಳಿ ಯಿದ್ದರೆ ಆಕೆಯು ಉಳಿದರೂ ಉಳಿಯಬಹುದು" ಎಂದು ಕೂಡ ಹೇಳಿದರು ಆಕೆಯು ಉಳಿದುಕೊಳ್ಳುವಂತೆ ಮಾಡುವುದೇ? ಅಥವಾ ನನ್ನ ಜಂಭ ನನ್ನ ಅಹಂ ಕಾರಗಳನ್ನು ಮಾತ್ರ ಕಾಪಾಡಿಕೊಳ್ಳುವುದೇ? ಎಂಬ ಭಯಂಕರ ಸಮಸ್ಯೆಯು ಬಂದಿದ್ದರೆ ನಾನು ಏನಾಗುತ್ತಿದ್ದೆನೋ? ಆದರೆ ಅದೃಷ್ಟವಶದಿಂದ ಹಾಗಾಗ ಲಿಲ್ಲ ನಾನು ಹೀಗೆ ಅಭಿವಚನಕೊಡುವುದು ಕಮಲಳಿಗೆ ಎಳ್ಳಷ್ಟೂ ಸಮ್ಮತವಿಲ್ಲ, ಆಕೆಯು ಇದನ್ನು ಎಂದಿಗೂ ಒಪ್ಪಳು, ನಾನು ಹಾಗೆ ಮಾಡಿದರೆ ಆಕೆಗೆ ಅದು ಅಸಮಾಧಾನವಾಗುವುದು, ಹಾನಿಯಾಗುವುದು ಎಂದು ನನಗೆ ಚೆನ್ನಾಗಿ ಗೊತ್ತಿತ್ತು

ಅಕ್ಟೋಬರಿನ ಮೊದಲನೆಯ ವಾರದಲ್ಲಿ ನಾನು ಆಕೆಯನ್ನು ನೋಡಲು ಮತ್ತೆ ಅವಕಾಶವಾಯಿತು ಬಲವಾದ ಜ್ವರದ ತಾಪಾಧಿಕ್ಯದಿಂದ ಹೆಚ್ಚು ಕಡಿಮೆ ಅರ್ಧ ಜ್ಞಾನವಾಗಿತ್ತು ಆಕೆಗೆ ನಾನು ತನ್ನ ಬಳಿಯಲ್ಲೇ ಇರಬಾರದೇ ಎಂದು ಆಶೆ ಆದರೂ ನಾನು ಜೈಲಿಗೆಂದು ಹೊರಟಾಗ, ಧೀರಳಾಗಿ ನಕ್ಕು "ಇಲ್ಲಿಬಾ" ಎಂದು ಕರೆ ದಳು ನನ್ನನ್ನು ಹತ್ತಿರಕ್ಕೆ ಕರೆದು ಕಿವಿಯಲ್ಲಿ "ಸರಕಾರಕ್ಕೆ ಅಭಿವಚನ ಕೊಡಬೇಕು ಎಂದುಕೊಂಡಿರುವೆಯಂತೆ! ಕೊಡಬೇಡ!" ಎಂದು ಪಿಸುಗುಟ್ಟಿದಳು

ನಾನು ಹೊರಗಿದ್ದ ಹನ್ನೊಂದು ದಿವಸಗಳಲ್ಲಿ ಆಕೆಗೆ ಕೊಂಚ ಅನುಕೂಲವಾ ದೊಡನೆಯೇ, ಚಿಕಿತ್ಸೆಗಾಗಿ ಯಾವುದಾದರೂ ಯೋಗ್ಯವಾದ ಸ್ಥಳಕ್ಕೆ ಆಕೆಯನ್ನು ಕಳುಹಿಸಬೇಕೆಂದು ಗೊತ್ತಾಗಿದ್ದಿತು ಆಗಿನಿಂದಲೂ ಆಕೆಗೆ ಕೊಂಚ ಗುಣಮುಖ ವಾದೀತೇ ಎಂದು ಕಾದಿದ್ದೆವು ಆದರೆ, ಅದು ಹಾಗಾಗಲಿಲ್ಲ ಬರಬರುತ್ತ ಇಳಿ ಮೊಗವೇ ಆಗಿ, ಈ ಒಂದೂವರೆ ತಿಂಗಳಲ್ಲಿ ಆಕೆಯ ದೇಹಸ್ಥಿತಿಯು ಬಹಳ ಅಸಮರ್ಥ ಕವಾಗಿ ಹೋಗಿದೆಯೆಂದು ಕಾಣುವ ಮಟ್ಟಿಗೆ ಆಯಿತು ಹೀಗೆ ದಿನದಿನಕ್ಕೆ ಕ್ಷಯಿಸಿ ಹೋಗುತ್ತಿರುವುದನ್ನು ಕಾದುಕುಳಿತಿದ್ದು ಫಲವಿಲ್ಲವೆಂದು, ಆಕೆಯನ್ನು ಪರ್ವತಗಳ ಲ್ಲಿರುವ ಭೋವಾಲಿಗೆ ಕಳುಹಿಸುವುದೆಂದು ಗೊತ್ತಾಯಿತು

ಆಕೆಯು ಹೊರಡುವುದಕ್ಕೆ ಒಂದು ದಿನ ಮುಂಚೆ ನಾನು ಅಲ್ಲಿಗೆ ಹೋಗಿ ಆಕೆಯನ್ನು ಕಂಡುಬರಲು ಅವಕಾಶ ಸಿಕ್ಕಿತು ಮತ್ತೆ ಆಕೆಯನ್ನು ಕಾಣುವುದು ಯಾವಾಗಲೋ ಎಂದು ಮನಸ್ಸು ಕಾತಳಿಸಿತು ಮತ್ತೆ ಕಾಣುವೆನೋ ಇಲ್ಲವೇ

ಇಲ್ಲವೋ ಎಂದು ಕೂಡ ಚಿಂತೆಯಾಯಿತು ಆದರೆ ಆಕೆಯು ಮಾತ್ರ ಅಂಪು ಬಹು ಸಂತೋಷವಾಗಿದ್ದಳು ನನಗೂ ಸಂತೋಷವಾಯಿತು ನಾನು ಅಷ್ಟು ಸಂತೋಷ ಪಟ್ಟು ಬಹುದಿನವಾಗಿತ್ತು

ಸುಮಾರು ಇಪ್ಪತ್ತು ದಿನಗಳು ಕಳೆದ ಮೇಲೆ ಕಮಲಳಿಗೆ ಹತ್ತಿರವಾಗಿರಲೆಂದು ನನ್ನನ್ನು ನೈನಿ ಜೈಲಿನಿಂದ ಆಲ್ಮೋರಾ ಡಿಸ್ಟ್ರಿಕ್ಟ್ ಜೈಲಿಗೆ ಕಳುಹಿಸಿದರು ಅಲ್ಲಿಗೆ ಭೋವಾಲಿಯ ಮೇಲೆ ಹೋಗಬೇಕಾಗಿತ್ತು ಅಲ್ಲಿ ಕೆಲವು ಗಂಟೆಗಳ ಕಾಲ ತಂಗಿದ್ದು ಮುಂದಕ್ಕೆ ಹೋದೆವು ಕಮಲಳಿಗೆ ಕೊಂಚ ಅನುಕೂಲವಾಗಿತ್ತು ನಾನು ತೃಪ್ತಿ ಪಟ್ಟುಕೊಂಡು ಹಗುರವಾದ ಮನಸ್ಸಿನಿಂದ ಆಲ್ಮೋರಾಕ್ಕೆ ಹೋದೆ ಕಮಲಳನ್ನು ನೋಡುವುದಕ್ಕೆ ಮುಂಚೆಯೇ ಆ ಪರ್ವತಪಂಕ್ತಿ ದರ್ಶನದಿಂದ ನನ್ನ ಮನಸ್ಸಿನಲ್ಲಿ ಒಂದು ಸಂತೋಷವಾಗಿತ್ತು

ಪರ್ವತಶ್ರೇಣಿಗಳಲ್ಲಿರುವುದಕೆ, ಅವಕಾಶವು ದೊರೆತುದು ನನಗೆ ಬಹಳ ಸಂತೋಷವಾಯಿತು ನಮ್ಮ ಕಾರು ಆ ಪರ್ವತದ ಸುತ್ತುಮುತ್ತಿನ ಹಾದಿಯಲ್ಲಿ ಹೋಗುವಾಗ ಬೀಸುತ್ತಿದ್ದ ಶೀತವಾತವೂ ಕಣ್ಣಿಗೆ ಕಂಡ ಆ ದೃಶ್ಯವೂ ನನ್ನ ಹೃದಯವನ್ನು ಸಂತೋಷದಿಂದ ತುಂಬಿ ಕುಣಿಸಿದವು ಮೇಲ ಮೇಲಕ್ಕೆ ಏರಿದಂತೆಲ್ಲಾ ಕಮರಿಗಳು ಆಳವಾಗಿ ಪರ್ವತ ಶಿಖರಗಳು ಮೇಘಮಾಲೆಗಳಲ್ಲಿ ಮಾಯವಾಗಿ, ಫರ್, ಪೈನ್ ಮೊದಲಾದ ವೃಕ್ಷಶ್ರೇಣಿಗಳಿಂದ ನಿಬಿಡವಾದ ಪರ್ವತಪ್ರಾಂತಗಳು ಹೃದ್ಗೋಚರವಾದುವು ಒಂದು ಸಲ ತಿರುಗಿದರೆ, ಮತ್ತೊಂದು ಪರ್ವತ ದೃಶ್ಯವು ಹೊಸದಾಗಿ ಬಂದು ಕಣ್ಣೆದುರು ನಿಲ್ಲುವುದು ಆ ಪರ್ವತದ ಕಮರಿಯಲ್ಲಿ ಗಿರಿನದಿಯೊಂದು ಅಧಃಪಾತಾಳದಲ್ಲಿ ಹಾಡಿಕೊಂಡು ಕುಣಿದುಕೊಂಡು ಹೋಗುತ್ತಿರುವುದು ಕೇಳಿಸುವುದು ಆ ದೃಶ್ಯಗಳನ್ನು ಎಷ್ಟು ನೋಡಿದರೂ ಮನವು ತಣಿಯದು ಅತೃಪ್ತನಾಗಿ, ಅತೃಪ್ತಿಯಿಂದ, ಮತ್ತೊಂದು ಸಲಕ್ಕಿರಲಿ ಎಂದು ಇದು ಸಿಕ್ಕಿದಂದಿಗಿರಲೆಂದು, ನನ್ನ ಸ್ಮೃತಿಯಲ್ಲಿ ಅದೆಲ್ಲವನ್ನು ತುಂಬಿಟ್ಟುಕೊಂಡು ಬಂದನು

ಅಲ್ಲಲ್ಲಿ ಬೆಟ್ಟ ಗುಡಿಸಲುಗಳು ಕೆಲವು ಬೆಟ್ಟದ ಮಗ್ಗುಲಿಗೆ ಹತ್ತಿಕೊಂಡಂತೆ ಕಾಣುತ್ತವೆ ಅವುಗಳ ಸುತ್ತಲೂ ಅವಕಾಶವಿದ್ದಲ್ಲೆಲ್ಲಾ ಅಪಾರವಾದ ಶ್ರಮದಿಂದ ಸಾಗುವಳಿ ಮಾಡಿರುವ ಸಣ್ಣ ಸಣ್ಣ ಹೊಲಗಳು ದೂರದಿಂದ ನೋಡಿದರೆ, ಅವು ಮೆಟ್ಟಲು ಮೆಟ್ಟಲಾಗಿ, ಪಾದದಿಂದ ಹಿಡಿದು ಶಿಖರದವರೆಗೂ ಹೋಗಿರುವ ಅಗಲವಾದ ಮೆಟ್ಟಲುಗಳಂತೆ ಕಾಣುವುವು ಅಲ್ಲಿರುವವರು ಒಂದು ಹಿಡಿ ಜನರು. ಅವರಿಗೆ ಬೇಕಾದ ಆಹಾರವನ್ನಿಷ್ಟು ಪಡೆದುಕೊಳ್ಳಲು ಅವರು ಅದೆಷ್ಟು ಭಾರಿಯ ಶ್ರಮವನ್ನು ಮಾಡಿರುವರು ! ಅವರು ಅಂತು ಸಂತತವಾಗಿ ಶ್ರಮಪಟ್ಟರೂ ತಮಗೆ ಸಾಕಾಗುವಷ್ಟಾದರೂ ದೊರೆಯುವುದೇ ? ಅಲ್ಲಿ ಸಾಗುವಳಿಯಾಗಿರುವ ಜಮೀನುಗಳನ್ನು

ನೋಡಿದರೆ, ಆ ಪರ್ವತ ಪ್ರಾಂತಗಳನ್ನು ಪಳಗಿಸಿಕೊಂಡಿರುವಂತೆ ಕಾಣುವುದು ಮತ್ತೆ ಇತ್ತ ತಿರುಗಿದರೆ ಅದೇ ಭಯಂಕರ ದೃಶ್ಯ ಅಥವಾ ಬೆಳೆದು ನಿಂತಿರುವ ಕಾಡುಗಳು

ಹಗಲಿನಲ್ಲಿ ಆ ದೃಶ್ಯವು ಬಹಳ ಸೊಗಸಾಗಿತ್ತು ಹೊತ್ತು ಏರಿದಂತೆಲ್ಲ, ಚಳಿಯು ಕಡಮೆಯಾಗಿ ಪರ್ವತಗಳಲ್ಲಿ ಸದ್ದು ಗದ್ದಲವೂ ಹೆಚ್ಚಿದುವು ಎಲ್ಲಿಯೋ ಏನೋ ಎಂದು ದೂರವಾಗಿದ್ದ ಭಾವವು ಹೋಗಿ ಮನಸ್ಸು ಒಗ್ಗಿ ಬಳಕೆಯಾದಂತೆ ತೋರಿತು ಆದರೆ, ಸಂಜೆಯಾಗುತ್ತ ಆಗುತ್ತ ಆ ಪರ್ವತ ದೃಶ್ಯವು ಅದೆಂತಹ ಬದಲಾವಣೆಯನ್ನು ಹೊಂದುವುದು! "ನಿಶೆಯೋಡಿ ಬಂದು ನೆಲವನ್ನೆಲ್ಲ ಹಿಡಿದಾಡು ವಂದು" ಸದ್ದು ಗದ್ದಲವೆಲ್ಲ ಅಡಗಿಹೋಗಿ ಪ್ರಕೃತಿಯು ತಾನ ಕಾನಾದಂದು, ಆ ಪರ್ವತಗಳದೆಷ್ಟು ಗಂಭೀರ ಭಯಂಕರ! ಬೆಳದಿಂಗಳ ಅರೆಬೆಳಕಿನಲ್ಲಿ, ತಾರಾಗಣದ ಮಂದಪ್ರಭೆಯಲ್ಲಿ ಆ ಪರ್ವತಗಳು ಅವ್ಯಕ್ತವಾಗಿ, ಅಂಜಿಸುವಂತೆ, ನುಂಗುವಂತೆ, ಇಷ್ಟಾದರೂ ನರಳಿನಂತೆ, ನಿಂತಿರುವಂತೆ ಕಾಣುತ್ತವೆ ಕಮರಿಗಳಲ್ಲಿ ಗಾಳಿಯು ಬೀಸಿದರೆ ಏನೋ ನೋವಿನಿಂದ ನರಳುವಂತ ಕೇಳುತ್ತದ ಇಂತಹ ಭಯಂಕರ ಸನ್ನಿವೇಶದಲ್ಲಿ ಒಬ್ಬನೇ ಹೋಗುತ್ತಿದ್ದರೆ ಅಂಜಿಕೆಯಾಗುತ್ತದ ಬೀಸುವ ಗಾಳಿಯೂ ಅಣಕಿಸಿ ಎದುರಿಸುವಂತೆ ತೋರುತ್ತದ ಮಿಕ್ಕ ದಿನಗಳಲ್ಲಿ ಗಾಳಿಯೂ ಇರುವುದಿಲ್ಲ, ಸದ್ದಂತೂ ಇಲ್ಲವೇ ಇಲ್ಲ ಹೀಗಾಗಿ ಸಂಪೂರ್ಣವಾಗಿ ನಿಶ್ಶಬ್ದವಾಗಿದ್ದು ಆ ನಿಶ್ಶಬ್ದ ತೆಯ ಗಂಭೀರತೆಯೇ ಕತ್ತು ಹಿಡಿದು ಹಿಸುಕಿದಂತೆ ತೋರುತ್ತದೆ ಬಹುಶಃ ಟೆಲಿಗ್ರಾಫ್ ತಂತಿಗಳು ಎಲ್ಲೋ ಒಂದಿಷ್ಟು ಸದ್ದು ಮಾಡಬಹುದು ಅಲ್ಲಿ ನಕ್ಷತ್ರಗಳು ಇತರ ಕಡೆಗಳಲ್ಲಿರುವುದಕ್ಕಿಂತಲೂ ತೇಜಸ್ವಿಗಳಾಗಿದ್ದು ಹತ್ತಿರವಿದ್ದಂತೆ ತೋರುತ್ತವೆ ಪರ್ವತಗಳು ಸಿಂಡರಿಸಿಕೊಂಡು ನೋಡುತ್ತಿದ್ದಂತೆ ತೋರಿ ಭಯಂಕರವಾದ ರಹಸ್ಯದ ಎದುರು ನಿಂತಂತಾಗುತ್ತದೆ ಪ್ಯಾಸ್ಕಲ್‌ನಂತೆ ನಾವೂ "ಈ ಅನಂತಾಕಾಶಗಳ ಶಾಶ್ವತ ಮೌನವು ನನ್ನನ್ನು ಅಂಜಿಸಿತು" ಎನ್ನಬೇಕಾಗುತ್ತದೆ ಬಯಲುನಾಡಿನಲ್ಲಿ ರಾತ್ರಿಯು ಅಷ್ಟು ನಿಶ್ಶಬ್ದವಾಗಿರುವುದಿಲ್ಲ ಏನಾದರೊಂದು ಸದ್ದು ಕೇಳಿಸುತ್ತದೆ ಎಷ್ಟೋ ಮೃಗಗಳು ಹುಳುಹುಪ್ಪಟೆಗಳು ಏನಾದರೂ ಸದ್ದು ಮಾಡಿ ರಾತ್ರಿಯ ನಿಶ್ಶಬ್ದತೆಯನ್ನು ಮುರಿಯುತ್ತವೆ

ನಾವು ಆಲ್ಮೋರಾದ ಹಾದಿಯಲ್ಲಿ ಹೋಗುತ್ತಿದ್ದಾಗ, ಇನ್ನೂ ರಾತ್ರಿಯು ತನ್ನ ಚಳಿಯನ್ನೂ ಮನಸ್ಸಿಗೆ ಬೇಡವಾದ ಸಂದೇಶವನ್ನೂ ಹೊತ್ತು ಬಂದಿರಲಿಲ್ಲ ಹಾದಿಯೆಲ್ಲ ಮುಗಿದು ಬಂದು, ಕೊನೆಯ ಸಲ ತಿರುಗಿದಾಗ, ಮೇಘ ಮಾಲೆಯು ಮರೆಯಾಗಿ, ಆಶ್ಚರ್ಯದಿಂದ ಉಸಿರು ಕಟ್ಟುವಂತಹ ದೃಶ್ಯವೊಂದು ಕಾಣಿಸಿತು ಕಾಡುಗಳ ಹೊದಿಕೆಯನ್ನು ಹೊದೆದುಕೊಂಡಿದ್ದ ಪರ್ವತಗಳ ಆಚೆ ಅವೆಲ್ಲದಕ್ಕಿಂತಲೂ ಎತ್ತರವಾಗಿ, ಎಷ್ಟೋ ದೂರದಲ್ಲಿ ಹಿಮಾಲಯದ ಹಿಮಾವೃತ ಶಿಖರಗಳು ಬೆಳಗು

ತ್ತಿವೆ. ಶಾಂತವಾಗಿ, ಅಜ್ಞೇಯವಾಗಿ ಯುಗ ಯುಗಗಳ ಜ್ಞಾನ ಭಂಡಾರವನ್ನೆಲ್ಲ ತಳೆದು, ಕೆಳಗೆ ಹರಡಿರುವ ಹಿಂದೂಸ್ಥಾನದ ಬಯಲಿನ ಭಾರಿಯ ಕಾವಲುಗಾರರಂತೆ ಅವು ನಿಂತಿದ್ದಂತೆ ತೋರಿತು ಅವುಗಳ ದರ್ಶನವಾದೊಡನೆಯೇ ನನಗೆ ತಲೆಯಲ್ಲಿದ್ದ ಜ್ವರವೆಲ್ಲ ತಣ್ಣಗಾಯಿತು ಬಯಲು ನಾಡಿನಲ್ಲಿಯೂ ನಗರಗಳಲ್ಲಿಯೂ ನಾನು ಕಂಡಿದ್ದ ಸಣ್ಣ ಪುಟ್ಟ ಹೊಡೆದಾಟಗಳು, ಪಿತೂರಿಗಳು, ಲೋಭಗಳು—ಅಸತ್ಯಗಳು, ಎಲ್ಲವೂ ತುಚ್ಛವೆನಿಸಿ, ಶಾಶ್ವತವಾದ ಆ ದೃಶ್ಯದ ಮುಂದೆ ಎಷ್ಟೋ ದೂರದಲ್ಲಿರುವಂತೆ ಭಾಸವಾಯಿತು

ಆಲ್ಮೋರಾದ ಜೈಲು ಚಿಕ್ಕದು ಅದು ಒಂದು ದಿಬ್ಬದ ಮೇಲಿದೆ ನನಗೆ ಸೊಗಸಾದ ತೊಟ್ಟಿಯೊಂದನ್ನು, ಕೊಟ್ಟರು. ಅದರಲ್ಲಿ ಒಂದು ಭಾರಿಯ ಹಜಾರ ಅದು ಹದಿನೇಳು ಅಡಿ ಅಗಲ ಐವತ್ತೊಂದು ಅಡಿ ಉದ್ದ. ನೆಲವು ಮಾತ್ರ ಚೆನ್ನಾಗಿರಲಿಲ್ಲ. ಭಾವಣಿಯೆಲ್ಲ ಮಣ್ಣುತಿಂದು ಹೋಗಿ ಆಗಾಗ ಅಷ್ಟಷ್ಟಾಗಿ ಬೀಳುತ್ತಿತ್ತು ಅದಕ್ಕೆ ಹದಿನೈದು ಕಿಟಕಿ ಒಂದು ಬಾಗಿಲು ಎನ್ನುವುದಕ್ಕಿಂತಲೂ ಅದಕ್ಕೆ ಕಿಟಕಿಗಳೂ ಬಾಗಿಲುಗಳೂ ಇಲ್ಲ ಇದ್ದುದೆಲ್ಲ ಸಲಾಕಿ ಹಾಕಿದ್ದ ತೂತುಗಳೆಂದರೂ ಒಪ್ಪುವುದು. ಗಾಳಿಯು ಬೇಕಾದಷ್ಟು ಇತ್ತು ಚಳಿಯು ಹೆಚ್ಚಾದಾಗ, ಕಿಟಕಿಗಳಿಗೆ ಅಡ್ಡವಾಗಿ ಹಗ್ಗದ ಚಾಪೆಗಳನ್ನು ಹಾಕುವರು ಈ ಭಾರಿಯ ಹಜಾರದಲ್ಲಿ (ಡೆಹ್ರಾ ಡೂನಿನಲ್ಲಿ ಅಂಗಳಗಳು ಇಷ್ಟು ದೊಡ್ಡವಲ್ಲ) ಏಕಾಂತವಾಸದ ವೈಭವದಲ್ಲಿ ನಾನಿದ್ದೆ ನಾನೊಬ್ಬನೇ ಇದ್ದೆ ಎನ್ನುವಂತೆಯೂ ಇಲ್ಲ. ಅಲ್ಲಿ ಆ ಹರುಕುಮುರುಕು ಭಾವಣಿಯಲ್ಲಿ ಸುಮಾರು ಮುವ್ವತ್ತು ನಲವತ್ತು ಗುಬ್ಬಚ್ಚಿಗಳೂ ಸೇರಿಕೊಂಡಿದ್ದುವು ಆಗಾಗ ಒಮ್ಮೊಮ್ಮೆ ನನ್ನನ್ನು ನೋಡಿಕೊಂಡು ಹೋಗಲು ಯಾವುದಾದರೂ ಒಂದು ಮೋಡವು ಬರುವುದು ಆಗ ಅದರ ಭಾಗಗಳು ಆ ಹಲವು ತೂತುಗಳಲ್ಲಿಳಿದು ಹಜಾರವೆಲ್ಲ ಥಂಡಿಯಾಗುವುದು

ಅಲ್ಲಿ ಸುಮಾರು ನಾಲ್ಕೂವರೆ ವೇಳೆಗೆ ನನಗೆ ರಾತ್ರಿಯ ಭೋಜನವಾಗುವುದು ನಾನು ಒಂದು ಬಟ್ಟಲು ದಪ್ಪ 'ಟೀ' ತೆಗೆದುಕೊಳ್ಳುತ್ತಿದ್ದೆ ಅಷ್ಟೆ ಆಮೇಲೆ ಐದು ಗಂಟೆಯವೇಳೆಗೆ ಬಾಗಿಲಿಗೆ ಬೀಗವು ಬೀಳುವುದು. ಮತ್ತೆ ಬೆಳಗ್ಗೆ ಏಳುಗಂಟೆಗೆ ಬಾಗಿಲು ತೆರೆಯುವುದು ಹಗಲು, ನಾನು ಆ ಹಜಾರದಲ್ಲಿಯೋ ಅಥವಾ ಅದಕ್ಕೆ ಸೇರಿದಂತಿದ್ದ ಅಂಗಳದಲ್ಲಿಯೋ ಬಿಸಿಲು ಕಾಯಿಸಿಕೊಳ್ಳುತ್ತಾ ಕುಳಿತುಕೊಳ್ಳುವೆನು. ಗೋಡೆಗಳಿಂದಾಚೆ ಸುಮಾರು ಒಂದೆರಡು ಮೈಲಿ ದೂರದಲ್ಲಿ ಪರ್ವತ ಶಿಖರವೊಂದು ಕಾಣುವುದು ತಲೆಯೆತ್ತಿದರೆ, ಅನಂತವಾದ ನೀಲಾಕಾಶ ಅದರಲ್ಲಿ ಒಂದೊಂದು ತುಂಡು ಮೋಡಗಳು. ಈ ಮೋಡಗಳು ಚಿತ್ರವಿಚಿತ್ರವಾದ ಆಕಾರಗಳನ್ನು ತಡೆಯುವುವು, ಅವುಗಳನ್ನು ನೋಡುತ್ತಿದ್ದರೆ ನನಗೆ ಬೇಸರವೇ ಆಗದು. ಅವು ಎಲ್ಲಾ ಜಾತಿಯ ಮೃಗಗಳಂತೆಯೂ ಆಗುವುವು. ಒಂದೊಂದುವೇಳೆ ಎಲ್ಲವೂ ಸೇರಿ ಅಪಾರ

ವಾದ ಸಾಗರದಂತಾಗುವುದು, ಮತ್ತೊಂದು ವೇಳೆ ಅವು ಸಮುದ್ರತೀರದಂತಾಗುವುವು. ಆಗ ದೇವದಾರಗಳ ತೋಪಿನಿಂದ ಬೀಸುವ ಗಾಳಿಯು ಮರ್ಮರ ಶಬ್ದವು ದೂರದಲ್ಲಿ ಏರಿಬರುತ್ತಿರುವ ಭರತದ ಶಬ್ದದಂತೆ ಕೇಳಿಸುವುದು ಒಂದೊಂದು ಸಲ ಒಂದೊಂದು ಮೋಡವು ಗಟ್ಟಿಯಾಗಿ ದೃಢವಾಗಿ ದಪ್ಪವಾಗಿ ನಮ್ಮನ್ನು ಆಕ್ರಮಿಸುವುದಕ್ಕೆ ಬಂದಂತೆ ಬಂದು, ಹತ್ತಿರಕ್ಕೆ ಬಂದಾಗ ಬರಿಯ ಮಂಜಿನಂತಾಗಿಹೋಗಿ ನಮ್ಮನ್ನು ಮುಸುಕಿಕೊಳ್ಳುವುದು

ಸಣ್ಣ ಕೊಠಡಿಯಲ್ಲಿರುವುದಕ್ಕಿಂತ ಹಜಾರದಲ್ಲಿರುವುದು ಹೆಚ್ಚು ಏಕಾಕಿಯಾಗಿರುವಂತೆ ಕಂಡುಬಂದರೂ ಹಜಾರದಲ್ಲಿರುವುದೇ ಚೆನ್ನ ಎನ್ನಿಸಿತು ನನಗೆ. ಹೊರಗೆ ಮಳೆಯಾಗುತ್ತಿದ್ದರೂ ನಾನು ಅಲ್ಲಿ ತಿರುಗಾಡಲವಕಾಶವಿತ್ತು ಆದರೆ ಚಳಿಯು ಹೆಚ್ಚಾದಹಾಗೆಲ್ಲ ಅಲ್ಲಿ ಒಂದು ತೆರದ ಜಡತೆಯು ತೋರಿಬಂದು, ನೀರು ಹೆಪ್ಪುಕಟ್ಟುವಷ್ಟು ಚಳಿಯಾದಾಗ ಗಾಳಿ ಬಯಲುಗಳ ಮೇಲೆ ನನಗಿದ್ದ ವಿಶ್ವಾಸವು ಕಡಿಮೆಯಾಯಿತು ಹೊಸ ವರ್ಷದಲ್ಲಿ ಹಿಮವು ಹೆಚ್ಚಾಗಿಬಿದ್ದು ಮಂಕುಮಂಕಾದ ಜೈಲಿನ ಸುತ್ತಮುತ್ತಲೆಲ್ಲ ಸಿಂಗರಿಸಿದಂತೆ ಅಂದವಾಗಿ ನನಗಷ್ಟು ಸಂತೋಷವಾಯಿತು. ಜೈಲಿನ ಗೋಡೆಯ ಆಚೆಯಿದ್ದ ದೇವದಾರು ಮರಗಳಂತೂ ಹಿಮದ ಉಡುಗೆಯನ್ನೂ ಉಟ್ಟು ಚೆಂದವಾಗಿ ಗಂಧರ್ವಕನ್ಯೆಯರಂತೆ ಕಂಡುಬಂದುವು.

ಕಮಲಳ ದೇಹಸ್ಥಿತಿಯ ಏರಿಳಿತಗಳಿಂದ ನನ್ನ ಮನಸ್ಸಿಗೆ ಬಹಳ ನೋವಾಗುತ್ತಿತ್ತು ಕೆಟ್ಟಸುದ್ದಿಯನ್ನು ಕೇಳಿದಾಗ ಮನಸ್ಸು ನೊಂದುಕೊಳ್ಳುವುದು ಮತ್ತೆ ಪರ್ವತವಾತವು ಶಾಂತಿಗೊಳಿಸಿ ಸಮಾಧಾನಯಿಸುವುದು ಎಂದಿನಂತೆ ಸುಖವಾಗಿ ನಿದ್ದೆ ಬರುವುದು. ಅನೇಕ ದಿನ ನಿದ್ದೆ ಬರುತ್ತಿರುವಾಗ ನಿದ್ದೆಯಂತಹ ಅದ್ಭುತವೂ ವಿಚಿತ್ರವೂ ಆದ ವಸ್ತು ಮತ್ತೊಂದುಂಟೇ ಎಂದು ಎಷ್ಟು ಆಶ್ಚರ್ಯಪಟ್ಟಿದ್ದೇನೆ ನಿದ್ದೆಯಿಂದ ಮಾನವನು ಏಕೆ ಏಳಬೇಕು? ನಾನು ಹಾಗೆ ಏಳದೆಯೇ ಹೋದರೆ ಏನಾಗುವುದು?

ನನಗೆ ಜೈಲಿನಿಂದ ಹೊರಹೋಗಬೇಕು ಎಂಬ ಆಶೆಯು ಎಂದಿಗಿಂತ ಬಲವಾಯಿತು ಬೊಂಬಾಯಿಯ ಕಾಂಗ್ರೆಸ್ಸೂ ಮುಗಿಯಿತು ನವೆಂಬರು ತಿಂಗಳಾಯಿತು. ಅಸೆಂಬ್ಲಿ ಚುನಾವಣೆಗಳ ಉದ್ವೇಗವೂ ಶಾಂತವಾಯಿತು ನನಗೆ ಬಿಡುಗಡೆಯಾದೀತು ಎಂದುಕೊಂಡಿದ್ದೆ

ಆದರೆ ಆಗ ಇನ್ನೊಂದು ವಿಚಿತ್ರ ಸುದ್ದಿ ಒ. ಖಾ. ಖಾನ್ ಅಬ್ದುಲ್ ಗಫಾರ್ ಖಾನರನ್ನು ಹಿಡಿದು ಶಿಕ್ಷೆಯನ್ನು ವಿಧಿಸಿದುದೂ ಹಿಂದೂಸ್ಥಾನಕ್ಕೆ ಬಂದಾಗ ಸುಭಾಷ್ ಬೋಸರ ಮೇಲೆ ವಿಚಿತ್ರವಾದ ಅಪ್ಪಣೆಗಳನ್ನು ವಿಧಿಸಿದುದೂ ಕೇಳಿ ನನಗೆ ಆಶ್ಚರ್ಯವಾಯಿತು ಆ ಅಪ್ಪಣೆಗಳನ್ನು ಮನುಷ್ಯಮಾತ್ರದವರು ಮಾಡಾರು

ಎಂದುಕೊಂಡಿರಲಿಲ್ಲ ನಾನು ಅವುಗಳಲ್ಲಿ ನ್ಯಾಯನೀತಿಗಳೇನೂ ಇರಲಿಲ್ಲ. ಅದೂ ಅವು ಯಾರಿಗಾಗಿ ಹುಟ್ಟಿದುದು? ಲಕ್ಷಾಂತರ ಪ್ರಜೆಗಳ ಆದರ ವಿಶ್ವಾಸಗಳಿಗೆ ಪಾತ್ರನಾಗಿ, ತಾನು ರೋಗದಲ್ಲಿ ನರಳುತ್ತಿದ್ದರೂ ಮೃತ್ಯುಶಯ್ಯೆಯಲ್ಲಿರುವ ತಂದೆಯನ್ನು ನೋಡುವುದಕ್ಕೆಂದು ಓಡಿಬಂದು, ತಂದೆಯು ಸತ್ತನೆಂದು ಕೇಳಿರುವವನ ಮೇಲೆ! ಇಂತಹ ಮನೋಭಾವವಿರುವ ಸರಕಾರವು ನನ್ನನ್ನು ಜೈಲಿನಿಂದ ಬಿಡುವುದೇ ಎನ್ನಿಸಿತು ನನಗೆ ಆಮೇಲೆ ಬಂದ ಸರಕಾರದ ಅಪ್ಪಣೆಯಿಂದ ಇದು ಇನ್ನೂ ಸ್ಪಷ್ಟವಾಯಿತು

ಅಲ್ಮೋರಾದಲ್ಲಿ ಒಂದು ತಿಂಗಳಿದ್ದ ಮೇಲೆ, ಕಮಲಳನ್ನು ನೋಡುವುದಕ್ಕೆಂದು ನನ್ನನ್ನು ಭೋವಾಲಿಗೆ ಕಳುಹಿಸಿಕೊಟ್ಟರು ಆಗಿನಿಂದ ಹೆಚ್ಚು ಕಡಿಮೆ ಇಪ್ಪತ್ತು ದಿನಗಳಿಗೊಮ್ಮೆ ಆಕೆಯನ್ನು ನೋಡುತ್ತಿದ್ದೆ ಹಿಂದೂಸ್ಥಾನದ ಸ್ಟೇಟ್ ಸೆಕ್ರೆಟರಿಯವರಾದ ಸರ್ ಸ್ಯಾಮ್ಯುಯಲ್ ಹೋರರು ನಾನು ನನ್ನ ಹೆಂಡತಿಯನ್ನು ವಾರಕ್ಕೆ ಒಂದುಸಲ ಎರಡುಸಲ ನೋಡುತ್ತಿದ್ದೆನೆಂದು ಪದೇಪದೇ ಹೇಳಿದ್ದಾರೆ ಅವರು ತಿಂಗಳಿಗೆ ಒಂದು ಸಲ ಅಥವಾ ಎರಡುಸಲ ಎಂದು ಹೇಳಿದ್ದರೆ ಸರಿಯಾಗಿತ್ತು ಅಲ್ಮೋರಾದಲ್ಲಿ ನಾನಿದ್ದ ಮೂರೂವರೆ ತಿಂಗಳಿಗೆ ನಾನು ಐದು ಸಲ ಆಕೆಯನ್ನು ನೋಡಿದ್ದೇನೆ ಸರಕಾರವು ನಾನು ಕಮಲಳನ್ನು ನೋಡಿಬರುವುದಕ್ಕೆ ಹೆಚ್ಚಿನ ಅನುಕೂಲಗಳನ್ನು ಕಲ್ಪಿಸಿಕೊಟ್ಟು ನನಗೆ ಉಪಕಾರವನ್ನು ಮಾಡಿವೆಯಾಗಿ, ಆ ಉಪಕಾರಕ್ಕೆ ನಾನು ಕೃತಜ್ಞನಾಗಿದ್ದೇನೆಯಾಗಿ, ನಾನು ಈ ವಿಷಯವನ್ನು ಒಂದು ದುಃಖವನ್ನಾಗಿ ಹೇಳಿಕೊಳ್ಳುವುದಿಲ್ಲ. ನಾನು ಆಕೆಯೊಡನೆ ಇರುತ್ತಿದ್ದುದು ಬಹು ಸ್ವಲ್ಪ ಕಾಲ ಆದರೂ ಆ ಕಾಲವು ನನಗೆಷ್ಟೋ ಅಮೂಲ್ಯ ಆಕೆಗೂ ಹಾಗೆಯೇ ಇರುತ್ತಿತ್ತು ಇವೆಲ್ಲದರ ಫಲವಾಗಿ ನನಗೂ ಆಕೆಗೂ ಸ್ನೇಹಬಂಧವು ಬಲಿಯಿತು ನಮ್ಮ ನಮ್ಮ ಸ್ನೇಹವು ಪಕ್ವವಾಯಿತು ಆಕೆಯನ್ನು ಬಿಟ್ಟು ಹೊರಡುವುದೆಂದರೆ ಹೃದಯವನ್ನು ಕಿತ್ತಿಟ್ಟಂತಾಗುವುದು ನಮಗೆ ದರ್ಶನವಾಗುತ್ತಿದ್ದುದೇ ವಿಯೋಗದ ದುಃಖವನ್ನು ಹೆಚ್ಚಿಸುವುದಕ್ಕೆ ಎನ್ನುವಂತಿತ್ತು ನನಗ [illegible] ಕಟದಲ್ಲಿ ಒಂದು ದಿವಸ ವಿಯೋಗವಾಗುವುದು, ಆಮೇಲೆ ಮತ್ತೆ ದರ್ಶನ [illegible] ಂತಿಲ್ಲ ಎನ್ನಿಸುವುದು

ನಮ್ಮ ತಾಯಿಯು ಚಿಕಿತ್ಸೆಗಾಗಿ ಬೊಂಬಾಯಿಗೆ ಹೋಗಿದ್ದರು ಅವರಿಗೆ ಇನ್ನೂ ಸಂಪೂರ್ಣವಾಗಿ ಗುಣವಾ[illegible]ಲಿಲ್ಲ ಅವರಿಗೆ ಗುಣಮುಖವಾಗಿದೆ ಎನ್ನುವ ಹಾಗಿತ್ತು ಎಂದುಕೊಂಡಿರುವಾಗ [illegible]ಟು ದಿನ ಬೆಳಗ್ಗೆ ಒಂದು ತಂತಿಯು ಬಂದು ನನಗೆ ಗಾಬರಿಯನ್ನುಂಟುಮಾಡಿತು ಆಕೆಗೆ ಪಾರ್ಶ್ವವಾಯು ಹೊಡೆದಿದೆ ಆಕೆಯನ್ನು ನೋಡಲು ಅನುಕೂಲವಾಗಲೆಂದು ನನ್ನನ್ನು ಬೊಂಬಾಯಿನ ಜೈಲೊಂದಕ್ಕೆ ಕಳುಹಿಸಬಹುದು ಎನ್ನಿಸಿತು ಆದರೆ ಆಕೆಗೆ ಕೊಂಚ ಉತ್ತಮವಾಯಿತು ನನ್ನನ್ನು ಅಲ್ಲಿಗೆ ಕಳುಹಿಸಲಿಲ್ಲ

ಜನವರಿಯು ಕಳೆದು ಫೆಬ್ರವರಿಯೂ ಬಂತು ಸುಗ್ಗಿಯ ಆಗಮನದ ಸುದ್ದಿಯು ಗಾಳಿಯಲ್ಲಿ ಬಂದಿದೆ ಬುಲ್‌ಬುಲ್ ಮೊದಲಾದ ಹಕ್ಕಿಗಳು ಈಚೆಗೆ ಬಂದು ಸದ್ದುಮಾಡುತ್ತಿವೆ ಎಲ್ಲೆಲ್ಲೂ ಮೊಳಕೆಗಳು–ಅವೆಲ್ಲಿದ್ದವೋ ಏನೋ–ನೆಲವನ್ನೊಡೆದುಕೊಂಡು ಈಚೆಗೆ ಬಂದು ಈ ವಿಚಿತ್ರ ಪ್ರಪಂಚವನ್ನು ನೋಡುತ್ತಿವೆ ಅಲ್ಲಲ್ಲಿ ಬೆಟ್ಟದ ಮಗ್ಗುಲಲ್ಲಿ ರಕ್ತದ ಬಟ್ಟುಗಳನ್ನಿಟ್ಟಂತೆ ಮೆರೆಯುತ್ತಿವೆ ಎಲ್ಲೆಲ್ಲೂ ಶಾಂತಿ ಹೂವುಗಳು ಕಣ್ಣುಬಿಡುತ್ತಿವೆ ನಾನು ಕಳೆಯುತ್ತಿರುವ ದಿನಗಳನ್ನು ಲೆಕ್ಕ ಮಾಡುತ್ತ, ಭೋವಾಲಿಗೆ ಯಾವೊತ್ತು ಹೋಗುವುದು ಎಂದು ನಿರೀಕ್ಷಿಸುತ್ತಿದ್ದೇನೆ ಆಶೆಯು ಭಂಗವಾದಮೇಲೆ, ಕ್ರೌರ್ಯಕ್ಕೆ ಗುರಿಯಾದಮೇಲೆ, ವಿರಹವನ್ನು ಅನುಭವಿಸಿದಮೇಲೆ ಜೀವಮಾನದ ಉತ್ತಮೋತ್ತಮ ಫಲವು ಲಭಿಸುವುದೆಂದು ಹೇಳುವ ಮಾತಿನಲ್ಲಿ ಅದೆಂತಹ ಸತ್ಯವಿದೆಯೋ ನಾನರಿಯೆ ಬಹುಶಃ ಆ ಫಲಗಳ ಸೊಗಸನ್ನು ಸರಿಯಾಗಿ ಅರಿಯಬೇಕಾದರೆ, ಹೀಗೆಲ್ಲ ಆಗಲೇಬೇಕೋ ಏನೋ? ಯೋಚನೆಗಳು ತಿಳಿತಿಳಿಯಾಗಬೇಕಾದರೆ, ಮನಸ್ಸಿಗೆ ದುಃಖಾನುಭವವು ಬೇಕೇಬೇಕು ಎಂದು ತೋರುತ್ತದೆ ಆದರೆ, ದುಃಖವು ಅತ್ಯಧಿಕವಾದರೆ, ಮನಸ್ಸು ನುಂಕಾಗಬಹುದು ಜೈಲಿನಲ್ಲಿರುವುದು ಅಂತರ್ಮುಖಿಯಾಗುವುದಕ್ಕೆ ಬಹು ಸಹಾಯ ನಾನು ಜೈಲಿನಲ್ಲಿ ಕಳೆದ ದೀರ್ಘ ವರ್ಷಗಳು ನನ್ನನ್ನು ಅಂತರ್ಮುಖಿಯಾಗಿ ಮಾಡಿವೆ ನಾನಷ್ಟಾಗಿ ಕಣ್ಣುಮುಚ್ಚಿ ಕುಳಿತಿರುತ್ತಿದ್ದವನಲ್ಲ, ಆದರೆ ಜೈಲಿನ ವಾಸವು, ಬಲನಾದ ಕಾಫಿಯಂತೆ ಸ್ಟ್ರಿಕ್ನಸ್ ಅಂತೆ, ಮನುಷ್ಯನ ಮನಸ್ಸನ್ನು ಅಂತರ್ಮುಖಿಯನ್ನು ಮಾಡುತ್ತದೆ ಕೆಲವುವೇಳೆ ಹೊತ್ತುಹೋಗಲೆಂದು ಅಂತರ್ಮುಖಿಯೋ ಬಹಿರ್ಮುಖಿಯೋಯೆಂದು ಗೊತ್ತುಮಾಡಲು ಪ್ರೊಫೆಸರ್ ಮೆಕ್‌ಡೂಗಲ್‌ರವರು ಕೊಟ್ಟಿರುವ ಪಟ್ಟಿಯನ್ನು ಗುರ್ತಿಸಿ, ಒಂದರಿಂದ ಒಂದಕ್ಕೆ ಎಷ್ಟೆಷ್ಟು ಬೇಗ ಬದಲಾವಣೆಗಳಾಗುವುವು ಎಂಬುದನ್ನು ನೋಡುತ್ತಿರುತ್ತೇನೆ ಬದಲಾವಣೆಗಳು ಬಹು ಜಾಗ್ರತೆಯಾಗುವಂತೆ ತೋರುತ್ತದೆ

# ೬೭

# ಇತ್ತೀಚಿನ ವಿದ್ಯಮಾನಗಳು

ನಿಶೆಯು ಕಳೆದು ಅರುಣೋದಯವಾಗುವುದು. ಆದರೆ ಜೀವನದ ಕಳೆದ ದಿನಗಳು ಬರುವುದಿಲ್ಲ ದೂರದ ದಿಗಂತವು ಕಣ್ಣಿಗೆ ಗೋಚರಿಸುತ್ತದೆ ಆದರೆ ಸುಗ್ಗಿಯ ಗಾಯವು ಹೃದಯದ ಅಂತರಾಂತರದಲ್ಲಿ ಇದ್ದೇ ಇರುತ್ತದೆ

ಲಿ ತಾಯ್-ಪೊ

ಬೊಂಬಾಯಿ ಕಾಂಗ್ರೆಸ್ಸಿನಲ್ಲಿ ಏನಾಯಿತೆಂಬುದನ್ನು ವೃತ್ತ ಪತ್ರಿಕೆಗಳಲ್ಲಿ ಓದಿದೆ ಅಲ್ಲಿನ ರಾಜಕೀಯ ವ್ಯವಹಾರಗಳನ್ನೂ ಅಲ್ಲಿ ಯಾರು ಯಾರು ಮುಖಂಡರಾಗಿ ಕಾರ್ಯಗಳನ್ನೂ ನಡೆಸಿದರು ಎಂಬುದರಲ್ಲಿ ನನಗೆ ಬಹಳ ಕುತೂಹಲ ೨೦ ವರ್ಷ ಗಳಿಂದ ಬೆರೆದು ಹೋಗಿದ್ದುದರ ಫಲವಾಗಿ ನನಗೆ ನಾನೇ ಕಾಂಗ್ರೆಸ್ಸೋ ಕಾಂಗ್ರೆಸ್ಸೇ ನಾನೋ ಎಂಬಂತೆ ಆಗಿದ್ದಿತು ಆ ಕಾಂಗ್ರೆಸ್ಸಿನ ಅಧಿಕಾರಕ್ಕಿಂತಲೂ ಆ ಹೊಣೆಗಾರಿಕೆ ಗಿಂತಲೂ ಆ ಮಹಾ ಸಭೆಗೂ ಮತ್ತು ಅಲ್ಲಿರುವ ನನ್ನ ಸಾವಿರಾರು ಮಂದಿ ಸ್ನೇಹಿತ ರಿಗೂ ನನಗೂ ಇರುವ ಅದೃಶ್ಯ ಸ್ನೇಹಬಂಧವೇ ಭದ್ರವಾಗಿತ್ತು ಆದರೂ ನನಗೆ ಆ ಕಾಂಗ್ರೆಸ್ಸಿನ ಕಾರ್ಯಕ್ರಮಗಳಿಂದ ಕೋಪ ಬರಲಿಲ್ಲ ಕೆಲವು ಮುಖ್ಯವಾದ ವಿಷಯಗಳನ್ನು ಬಿಟ್ಟು ಮಿಕ್ಕ ಎಲ್ಲಾ ವಿಚಾರಗಳಲ್ಲಿಯೂ ಈ ಅಧಿವೇಶನವು ಏನೋ ಮಂಕಾಗಿದ್ದಂತೆ ಇತ್ತು ನನಗೆ ಬೇಕಾದ ವಿಷಯಗಳು ಅಲ್ಲಿ ಚರ್ಚೆಗೆ ಬರಲಿಲ್ಲ ನಾನು ಅಲ್ಲಿದ್ದರೆ ಏನು ಮಾಡುತ್ತಾ ಇದ್ದೆ ಎಂದು ಯೋಚಿಸಿದೆ. ನಾನೇನು ಮಾಡು ತ್ತಿದ್ದೇನೊ, ಈ ಹೊಸ ಪರಿಸ್ಥಿತಿಯಲ್ಲಿ ನಾನು ಹೇಗೆ ವರ್ತಿಸುತ್ತಿದ್ದೆನೋ ಹೇಳಲಾರೆ ನಾನು ಜೈಲಿನಲ್ಲಿದ್ದುಕೊಂಡು, ಬೊಂಬಾಯಿಯಲ್ಲಿ ಇದ್ದಿದ್ದರೆ ಏನು ಮಾಡುತ್ತಾ ಇದ್ದೆ ಎಂದು ಅನಾವಶ್ಯಕವಾಗಿ ಸಿದ್ಧಾಂತ ಮಾಡುವ ಭಾರವು ಏಕೆ ಎನಿಸಿತು "ಇದೇ ಸಮಸ್ಯೆಗಳನ್ನು ನಾನೂ ಎದುರಿಸಿ ಏನು ಮಾಡಬೇಕೆಂಬುದನ್ನು ಗೊತ್ತುಮಾಡಿಕೊಳ್ಳುವ ಕಾಲವು ಬರುವುದು. ಅದುವರೆಗೆ ಏನು ಮಾಡಬೇಕೆಂದು ಈಗಲೇ ಗೊತ್ತುಮಾಡಿ ಕೊಂಡಿರುವುದು ಅನಾವಶ್ಯಕ ನಾನು ಗೊತ್ತುಮಾಡಿಕೊಂಡು ಕಾರ್ಯಪರನಾಗುವ ವೇಳೆಗೆ ಈ ಪರಿಸ್ಥಿತಿಗಳೇ ಬದಲಾಯಿಸಿಹೋಗಬಹುದು ಅದರಿಂದ ಹಾಗೆ ಮಾಡು ವುದು ಅವಿವೇಕ" ಎನಿಸಿತು.

ಆ ಪರ್ವತ ಶ್ರೇಣಿಯ ಮಧ್ಯದಲ್ಲಿ ಇಷ್ಟು ದೂರದಲ್ಲಿ ಕುಳಿತುಕೊಂಡು ನಾನು ತಿಳಿದುಕೊಂಡ ಮಟ್ಟಿಗೆ ಬೊಂಬಾಯಿ ಕಾಂಗ್ರೆಸ್ಸಿನಲ್ಲಿ ಇದ್ದುದು ಎರಡು ವಿಷಯಗಳು,

ಮೊದಲನೆಯದು, ಗಾಂಧಿಜಿಯವರ ಪ್ರಭಾವ ಎರಡನೆಯದು ಪಂಡಿತ ಮಾಲವೀಯ ರವರೂ ಶ್ರೀ ಅಣೆಯವರೂ ಪ್ರಯತ್ನಪಟ್ಟು ಎಬ್ಬಿಸಿದ ಕೋಮುವಾರು ಪ್ರತಿ ರೋಧದ ನಿರ್ಜೀವತೆ. ಹಿಂದೂಸ್ಥಾನದ ಸಾಮಾನ್ಯ ಮತ್ತು ಮಧ್ಯಮ ತರಗತಿಯ ಪ್ರಜಾವರ್ಗದ ಹೃದಯಾಂತರಾಳದ ಪರಿಜ್ಞಾನವಿರುವವರಿಗೆ ಭರತಖಂಡದಲ್ಲಿ ಗಾಂಧಿಜಿಯವರನ್ನು ಬಿಟ್ಟರೆ ಇನ್ನು ಯಾರೂ ದೊಡ್ಡವರು ಇಲ್ಲವೆಂಬುದು ಗೊತ್ತು ಸರ್ಕಾರದ ಅಧಿ ಕಾರಿಗಳು ಅವರ ಜೊತೆಗೆ ಏನೂ ಮಾಡದೆ ಸುಮ್ಮನೆ ನಿಂತಿರುವ ರಾಜಕೀಯ ಮುಖಂ ಡರು ಕೆಲವರು ಇಂಥವರು ಬೇಕಾದರೆ ತಮ್ಮ ಮನಸ್ಸಿನಲ್ಲಿದ್ದ ಭಾವನೆಯನ್ನು ಕಾರ್ಯ ವೆಂದು ಭಾವಿಸಿಕೊಂಡು " ಗಾಂಧಿಜಿಯವರ ಪ್ರಭಾವವು ಮುಗಿದು ಹೋಯಿತು. ಇನ್ನೂ ಅವರನ್ನು ಕೇಳುವವರೇ ಇಲ್ಲ " ಅಂದುಕೊಳ್ಳಬಹುದು ಗಾಂಧಿಜಿಯವರು ತಮ್ಮ ಪೂರ್ಣ ಸಾಮರ್ಥ್ಯ ಪ್ರಭಾವಗಳಿಂದ ಹೊರಕ್ಕೆಬಂದಾಗ ಅವರು ಗಾಬರಿಯಾಗಿ ಇದೊಂದು ಹೊಸ ಬದಲಾವಣೆ ಇದಕ್ಕೆ ಕಾರಣಗಳೇನು ಎಂದು ಹುಡುಕಲು ಆರಂಭಿ ಸುತ್ತಾರೆ ಕಾಂಗ್ರೆಸ್ಸು ಮತ್ತು ದೇಶ ಇವೆರಡು ಗಾಂಧಿಜಿಯವರ ಅಂಗೈಯಲ್ಲಿದೆ ಅದು ಅವರು ಇಟ್ಟುಕೊಂಡಿರುವ ಆ ಭಾವನೆ ಈ ಭಾವನೆಗಳ ಪ್ರಭಾವವಲ್ಲ—ಅವರ ಭಾವನೆಗಳು ಸಾಮಾನ್ಯವಾಗಿ ಸರ್ವತ್ರ ಅಂಗೀಕೃತವಾಗಿವೆ ಅದು ಅವರ ವಿಚಿತ್ರ ಅಸಾಮಾನ್ಯ ವೈಯಕ್ತಿಕ ಪ್ರಭಾವ, ಮುಖಪುಣ್ಯ ಇಂತಹ ಪ್ರಭಾವಶಾಲಿಗಳು ಹೀಗೆಯೇ ಎಲ್ಲವನ್ನೂ ಮೆಟ್ಟಿ ನಿಲ್ಲಿಸುತ್ತಾರೆ ನಿಜ. ಭರತಖಂಡದಲ್ಲಿ ಅದು ಇನ್ನೂ ಹೆಚ್ಚು

ಈ ಬೊಂಬಾಯಿ ಅಧಿವೇಶನದಲ್ಲಿ ಗಾಂಧಿಜಿಯವರು ರಾಜಕೀಯ ವ್ಯವಹಾರ ವನ್ನು ಬಿಟ್ಟು ನಡೆದುದು ಒಂದು ಭಾರಿ ಸಂಘಟನೆ ಅದು ಕಾಂಗ್ರೆಸ್ಸಿನ ಮತ್ತು ಭರತಖಂಡದ ಚರಿತ್ರೆಯಲ್ಲಿಯೇ ಒಂದು ಹೊಸ ಅಧ್ಯಾಯ ಎನ್ನಬಹುದು ಸ್ಥೂಲ ವಾಗಿ ಹಾಗೆ ರಾಜಕೀಯ ಸನ್ಯಾಸ ಮಾಡಿದ್ದರೂ ವಾಸ್ತವವಾಗಿ ಗಾಂಧಿಜಿಯವರು ಬೇಕೆಂದರೂ ತಮ್ಮ ಪ್ರಭಾವವನ್ನು ತಾವೇ ನಿರೋಧಿಸಲಾರರು ಅವರಿಗಿದ್ದ ಪ್ರಭಾವವು ಅವರ ಅಧಿಕಾರದ ಅಥವಾ ಮತ್ತೆ ಯಾವುದಾದರೊಂದು ಕಣ್ಣಿಗೆ ಕಾಣು ವಂತಹ ಸಂಬಂಧದ ಫಲವಲ್ಲ ಇಂದಿನ ಕಾಂಗ್ರೆಸ್ಸೂ ಹಿಂದಿನಂತೆಯೇ ಬಹಳ ಮಟ್ಟಿಗೆ ಗಾಂಧಿಜಿಯವರನ್ನೇ ಅನುಸರಿಸಿದೆ ಅದು ಗಾಂಧಿಜಿಯವರ ಮಾರ್ಗವನ್ನು ಬಿಟ್ಟುಹೋದರೂ ಗಾಂಧಿಜಿಯವರ ಪ್ರಭಾವವು, ಅವರಿಗೂ ಅಗೋಚರವಾಗಿ, ಕಾಂಗ್ರೆಸ್ಸನ್ನೂ ದೇಶವನ್ನೂ ತಿದ್ದುತ್ತಿರುವುದು ಎಂಬುದು ದಿಟ ಈ ವಿಷಯವಾಗಿ ಗಾಂಧಿಯವರು ತಾವು ಹೊತ್ತಿರುವ ಭಾರವನ್ನೂ ಹೊಣೆಗಾರಿಕೆಯನ್ನೂ ಕಿತ್ತೆಸೆಯುವುದು ಸಾಧ್ಯವಿಲ್ಲ. ಭರತಖಂಡದಲ್ಲಿ ಈಗ ಇರುವ, ಕಣ್ಣೆದುರಿಗೆ ಕಾಣುತ್ತಿರುವ ಪರಿಸ್ಥಿತಿ ಯನ್ನು ನೋಡಿದಂತೆಲ್ಲಾ ಗಾಂಧಿಜಿಯವರೇ ಎದುರಿಗೆ ಬಂದು ನಿಂತುಕೊಂಡಂತಾ ಗುತ್ತದೆ ಅವರನ್ನು ಅತ್ತ ತಳ್ಳುವುದು ಸಾಧ್ಯವೇ ಇಲ್ಲ

ಅವರು ಸದ್ಯಕ್ಕೆ ತಮ್ಮಿಂದ ಕಾಂಗ್ರೆಸ್ಸಿನಲ್ಲಿ ಯಾವ ತೊಂದರೆಯೂ ಆಗಬಾರದೆಂದು ಕಾಂಗ್ರೆಸ್ಸಿನಿಂದ ಹೊರಬಿದ್ದಾರೆ ಬಹುಶಃ ಸರಕಾರದೊಡನೆ ಹೋರಾಡಬೇಕಾಗುವಂತಹ ಪ್ರತ್ಯಕ್ಷ ಕಾರ್ಯಕ್ರಮವನ್ನು ಅವರು ಕೈಗೊಳ್ಳಬೇಕೆಂದು ಯೋಚಿಸಿರಬಹುದು ಆ ಕಾರ್ಯಕ್ರಮವು ಕಾಂಗ್ರೆಸ್ಸಿಗೆ ಸಂಬಂಧಪಡದೆ ಇರಲಿ ಎಂದು ಅವರ ಇಷ್ಟವಿರಬೇಕು

ನಮ್ಮ ದೇಶದ ಸರ್ಕಾರದ ರಚನೆಯು ಹೇಗಿರಬೇಕೆಂಬುದನ್ನು ಗೊತ್ತು ಮಾಡಲು ಒಂದು ಕಾನ್ಸ್ಟಿಟ್ಯೂಯೆಂಟ್ ಅಸೆಂಬ್ಲಿ ಆಗಬೇಕೆಂಬ ಸಲಹೆಯನ್ನು ಅಂಗೀಕರಿಸಿದ್ದು ನನಗೆ ಬಹಳ ಸಂತೋಷವಾಯಿತು ಈ ಸಮಸ್ಯೆಯನ್ನು ಬಗೆಹರಿಸುವುದಕ್ಕೆ ಇನ್ನಾವುದೂ ಬೇರೆ ಹಾದಿಯಿಲ್ಲ ಇಂದೋ ನಾಳೆಯೋ ಎಂದಾದರೂ ಇಂತಹುದೇ ಒಂದು ಅಸೆಂಬ್ಲಿಯು ಸೇರಿ ಆ ಕೆಲಸವನ್ನು ಮಾಡಬೇಕು ಎಂದು ನನ್ನ ಭಾವನೆ ವಾಸ್ತವವಾಗಿ ಒಂದು ಭಾರಿ ಕ್ರಾಂತಿಯಾದರೆ ಆ ಮಾತು ಬೇರೆ ಹಾಗಾಗದೆ ಈಗಿರುವ ಸ್ಥಿತಿಯೇ ಇರುವವರೆಗೆ ಬ್ರಿಟಿಷ್ ಸರಕಾರದ ಅನುಮತಿ ಇಲ್ಲದೆ ಅದು ಏನೂ ಮಾಡಲಾರದು. ಮತ್ತು ಈ ಬ್ರಿಟಿಷ್ ಸರ್ಕಾರದ ಅನುಮತಿಯು ಈಗಿರುವ ರೀತಿಯಲ್ಲಿ ಬರುವುದು ಶುದ್ಧ ಅಸಂಭವ ಆದರಿಂದ ಒಂದು ನಿಜವಾದ ಅಸೆಂಬ್ಲಿಯು ತನಗೆ ತಕ್ಕಷ್ಟು ಶಕ್ತಿಯು ಬಂದು ದೇಶವು ಮುಂದೆ ಅಡಿಯಿಡಲೇಬೇಕಾಗುವವರೆಗೂ ಏನೂ ಮಾಡಲಾಗದು ಅದುವರೆಗೆ ಈ ರಾಜಕೀಯ ಸಮಸ್ಯೆಯು ಪರಿಹಾರವಾಗದೆ ಹೀಗೆಯೇ ಉಳಿಯುವುದೆಂಬುದು ಶತಸಿದ್ಧಾಂತ ಕಾಂಗ್ರೆಸ್ಸಿನ ಮುಖಂಡರು ಕೆಲವರು ಈ ಕಾನ್ಸ್ಟಿಟ್ಯೂಯೆಂಟ್ ಅಸೆಂಬ್ಲಿಯ ಸಲಹೆಯನ್ನು ಒಪ್ಪಿಕೊಂಡರೂ ಅದನ್ನು ಕೊಂಚ ಹಾಗೆ ಹೀಗೆ ಮಾಡಿ, ಆ ಹಿಂದಿನ ಆಲ್ ಪಾರ್ಟೀಸ್ ಕಾನ್ಫರೆನ್ಸಿನ ಹಾಗೆಯೇ ಮಾಡಬೇಕೆಂದು ಪ್ರಯತ್ನಿಸಿದರು. ಆದರೆ ಅದು ಫಲಕಾರಿಯಾಗುವ ಪ್ರಯತ್ನವಲ್ಲ ಹಾಗಾದರೆ, ಸ್ವಯಂ ಮುಖಂಡರಾದ ಹಳಬರು ಹಲವರು ಮತ್ತೆ ಬಂದು ಸೇರುವುದು , ಮತ್ತೆ ಒಬ್ಬರ ಮಾತು ಒಬ್ಬರಿಗಿಲ್ಲದೆ ಚದುರುವುದು, ಇಷ್ಟರಲ್ಲಿ ಪರಿಣಮಿಸಬಹುದು ತಮ್ಮ ಸರ್ವ ಸಾಮರ್ಥ್ಯವನ್ನು ಮತ್ತು ಸರ್ವ ಶಕ್ತಿಯನ್ನು ಪ್ರಜಾವರ್ಗದಿಂದ ಪಡೆದು ಚುನಾಯಿತರಾಗಿ ಬಂದ ಪ್ರತಿನಿಧಿಗಳನ್ನು ಉಳ್ಳದಾಗಿರಬೇಕು ಎಂಬುದೇ ಈ ಕಾನ್ಸ್ಟಿಟ್ಯೂಯೆಂಟ್ ಅಸೆಂಬ್ಲಿಯ ಸಲಹೆಯನ್ನು ತಂದವರ ಇಷ್ಟ ಅಂತಹ ಸಭೆಯು ದೇಶದ ಮುಂದಿರುವ ನಿಜವಾದ ಸಮಸ್ಯೆಗಳಾವುವು ಎಂಬುದನ್ನು ಕಂಡು ಅವುಗಳನ್ನು ಪರಿಹರಿಸುವ ಯತ್ನವನ್ನು ಮಾಡುವುದು ಇದು ಜಾತಿ ಮೊದಲಾದ ಆ ಹಿಂದಿನ ಹಳೆಯ ದಾರಿಗಳನ್ನು ಹಿಡಿದು ಹಿಂದಿನಂತೆ ಮುಗ್ಗರಿಸುವುದಿಲ್ಲ, ಹೂತುಕೊಳ್ಳುವುದಿಲ್ಲ

ಈ ಕಾನ್ಸ್ಟಿಟ್ಯೂಯೆಂಟ್ ಅಸೆಂಬ್ಲಿಯ ಸಲಹೆಯನ್ನು ಕುರಿತು ಸಿಮ್ಲಾದಲ್ಲಿಯೂ ಲಂಡನ್ನಿನಲ್ಲಿಯೂ ಬಂದ ಅಭಿಪ್ರಾಯಗಳು ಬಹಳ ವಿಚಿತ್ರವಾಗಿದ್ದುವು.

ಅರ್ಧ ಅಧಿಕಾರವಾಣಿಯಿಂದ ಸರಕಾರವು ಇದನ್ನು ವಿರೋಧಿಸುವುದಿಲ್ಲ ಎಂದು ತಿಳಿಯಿತು "ಹಿಂದಿನ ಆಲ್ ಪಾರ್ಟೀಸ್ ಕಾನ್‌ಫರೆನ್ಸ್‌ನಂತೆಯೇ ಇದೂ ಒಂದು ಇದೂ ಅದರಂತೆಯೇ ಮುಗ್ಗುರಿಸುವುದು–ಕೊನೆಗೆ ತಮ್ಮ ಕೈಯೇ ಮೇಲಾಗುವುದು" ಎಂದುಕೊಂಡು ಸರಕಾರದವರು ಇದನ್ನು ಪ್ರೋತ್ಸಾಹಿಸಿದರು ಕೊಂಚ ಕಾಲವಾದ ಮೇಲೆ ಈ ಸಲಹೆಯು ಎಷ್ಟು ದೂರ ಕಾರ್ಯ ಮಾಡಬಲ್ಲದು ಅದರಿಂದ ತಮಗೆ ಎಷ್ಟು ಅಪಾಯವಾಗುವುದು ಎಂಬುದೂ ಅವರಿಗೆ ಮನಸ್ಸಿಗೆ ಬಂದಿರಬೇಕು ಆಗ ಅವರು ಇದನ್ನು ಬಹಳ ತೀವ್ರವಾಗಿ ವಿರೋಧಿಸಲು ಆರಂಭಿಸಿದರು.

ಬೊಂಬಾಯಿ ಕಾಂಗ್ರೆಸ್ಸು ಆದ ತರುಣದಲ್ಲೇ ಅಸೆಂಬ್ಲಿ ಚುನಾವಣೆಗಳೂ ಬಂದವು ಕಾಂಗ್ರೆಸ್ಸಿನ ಪಾರ್ಲಿಮೆಂಟರೀ ಪ್ರೋಗ್ರಾಮಿನಲ್ಲಿ ನಾನು ಅಷ್ಟು ಉತ್ಸಾಹಿಯಲ್ಲದ್ದಿದ್ದರೂ ಈ ಚುನಾವಣೆಗಳಲ್ಲಿ ನನಗೆ ಒಂದು ಕುತೂಹಲವು ಹುಟ್ಟಿಕೊಂಡಿತು ನಮ್ಮ ಕಾಂಗ್ರೆಸ್ಸಿನವರು ಗೆಲ್ಲಲಿ ಎನಿಸಿತು ಇನ್ನೂ ಸರಿಯಾಗಿ ಹೇಳಬೇಕೆಂದರೆ ಕಾಂಗ್ರೆಸ್ಸಿನ ವಿರೋಧಿಗಳಿಗೆ ಅಪಜಯವಾಗಲಿ ಎಂದು ನನ್ನ ಆಶೆ ಆ ಕಾಂಗ್ರೆಸ್ಸಿನ ವಿರೋಧಿಗಳಲ್ಲಿ ಅಧಿಕಾರ ಬೇಕೆನ್ನುವವರು, ಕೋಮುವಾರು ವೀರರು, ಕಾಂಗ್ರೆಸ್ಸು ಬಿಟ್ಟು ಓಡಿಹೋದವರು, ಮತ್ತು ಸರಕಾರದವರು ಅವಲಂಬಿಸಿದ ತುಳಿತದ ನೀತಿಯನ್ನು ಮನಃಪೂರ್ವಕವಾಗಿ ಆಗಬಹುದು ಎಂದವರು, ಇಂಥವರೇ ಇದ್ದುದು ಅವರಲ್ಲಿ ಅನೇಕರು ಕೊಚ್ಚಿಹೋಗುವರು ಎಂಬುದರಲ್ಲಿ ಏನೂ ಸಂದೇಹವಿರಲಿಲ್ಲ ಆದರೂ ದುರ್ದೈವದಿಂದ ಕಮ್ಯೂನಲ್ ಅವಾರ್ಡ್ ಬಂದು ಜನಗಳ ಕಣ್ಣಿಗೆ ಮಣ್ಣೆರಚಿತು ಅವರಲ್ಲಿ ಅನೇಕರು ಕೋಮುವಾರು ಸಂಘಗಳ ಉದಾರಾಶ್ರಯವನ್ನು ಅವಲಂಬಿಸಿ ನಿಂತರು ಅಷ್ಟಾದರೂ ಕಾಂಗ್ರೆಸ್ಸು ಅದ್ಭುತ ವಿಜಯವನ್ನು ನಡೆಯಿತು ಎಷ್ಟೋ ಜನ ಅಯೋಗ್ಯರು ಚುನಾವಣೆಯಲ್ಲಿ ಗೆಲ್ಲಲಿಲ್ಲ ಅದೇ ನನಗೆ ಒಂದು ಸಂತೋಷ

ಕಾಂಗ್ರೆಸ್ಸು ನ್ಯಾಷನಲಿಸ್ಟ್ ಪಾರ್ಟಿಯ ಮನೋಭಾವವನ್ನು ಕಂಡು ನನಗೆ ಬಹಳ ದುಃಖವಾಯಿತು ಅವರು ಕಮ್ಯೂನಲ್ ಅವಾರ್ಡ್–ಕೋಮುವಾರು ನಿರ್ಣಯವನ್ನು ಆವೇಶಪೂರಿತವಾಗಿ ವಿರೋಧಿಸಿದ್ದು ಸರಿ ಆದರೆ ಅವರು ತಮ್ಮ ಬಲವನ್ನು ರೂಢಿಸಿಕೊಳ್ಳುವುದಕ್ಕೆಂದು ವಿಪರೀತ ಕೋಮುವಾರು ಭಾವನೆಯುಳ್ಳ ಸಂಘಗಳೊಡನೆ ಸೇರಿಕೊಂಡರು ರಾಜಕೀಯ ಸಾಮಾಜಿಕ ಸುಧಾರಣೆಗಳನ್ನೆಲ್ಲ ಪ್ರತಿಭಟಿಸುವುದರಲ್ಲಿ ಸನಾತನಿಗಳಿಗಿಂತ ಕಡೆಯಾದ ಗುಂಪು ಮತ್ತೊಂದಿಲ್ಲ. ಅವರಂತೆಯೇ ರಾಜಕೀಯ ಸುಧಾರಣಾ ವಿರೋಧಿಗಳೆಂದು ಹೆಸರಾದ ಅನೇಕ ಸಂಘಗಳೊಡನೆಯೂ ಅವರು ಸೇರಿಕೊಂಡರು ಬಂಗಾಳದಲ್ಲಿ ಮಾತ್ರ ಏನೋ ವಿಶೇಷ ಕಾರಣಗಳಿಗಾಗಿ ಕಾಂಗ್ರೆಸ್ಸಿನ ಗುಂಪು ಅವರ ಕಡೆ ಇತ್ತು ಮಿಕ್ಕ ಕಡೆಗಳಲ್ಲೆಲ್ಲ, ಈ ಪಾರ್ಟಿಯ ಅನೇಕಾನೇಕರು ಪ್ರತಿಯೊಂದು ವಿಧದಲ್ಲಿಯೂ ಕಾಂಗ್ರೆಸ್ಸಿಗೆ ಬಹಳಮಟ್ಟಿಗೆ ವಿರೋಧಿಗಳೇ ಆಗಿದ್ದರು.

ಕಾಂಗ್ರೆಸ್ಸನ್ನು ಬಹಳವಾಗಿ ವಿರೋಧಿಸಿದವರಲ್ಲಿ ಅವರೇ ಮುಖ್ಯರು ಇಷ್ಟೆಲ್ಲಾ ಪ್ರತಿ ಪಕ್ಷದ ವಿಜೃಂಭಣವಿದ್ದರೂ, ಭೂಸ್ವಾಮಿಗಳೂ ಮಂದಪಕ್ಷದವರೂ ಸರ್ಕಾರದ ಅಧಿಕಾರಿಗಳೂ ಇವರುಗಳೆಲ್ಲಾ ಸೇರಿಕೊಂಡಿದ್ದರೂ, ಕಾಂಗ್ರೆಸ್ಸಿನ ಕಡೆಯವರೇ ಬಹಳ ಮಟ್ಟಿಗೆ ವಿಜಯಿಗಳಾದರು

ಕಮ್ಯೂನಲ್ ಅವಾರ್ಡ್ ವಿಚಾರವಾಗಿಯೂ ಕಾಂಗ್ರೆಸ್ಸಿನ ಮನೋಭಾವವು ಒಂದು ವಿಶೇಷತರದ್ದಾಗಿದ್ದಿತು ಆದರೆ ಇನ್ನೇನೂ ಮಾಡುವುದಕ್ಕೆ ಯತ್ನವಿಲ್ಲದಂತಹ ಪರಿಸ್ಥಿತಿ ಅದು. ಇದುವರೆಗೆ ಕಾಂಗ್ರೆಸ್ಸು ಅವಲಂಬಿಸಿದ ಉದಾಸೀನ ಮತ್ತು ಬಲಹೀನ ನೀತಿಯ ಅಗತ್ಯವಾದ ಫಲವದು ಈ ಮೊದಲೇ ಒಂದು ಪ್ರಬಲವಾದ ಕಾರ್ಯಕ್ರಮವನ್ನವಲಂಬಿಸಿ, ಆದುದಾಗಲಿ ಎಂದು ಹೊರಟಿದ್ದರೆ ಗೌರವವಾಗಿ ಇತ್ತು ಹಾಗೆಯೇ ಮಾಡಬೇಕಾಗಿಯೂ ಇತ್ತು. ಆದರೆ ಕಾಂಗ್ರೆಸ್ಸಿಗೆ ಹಾಗೆ ಮಾಡುವುದು ಸಮ್ಮತವಿರಲಿಲ್ಲವಾಗಿ ಹೀಗೆಯೇ ಮಾಡಬೇಕಾಯಿತು ಆ ಕೋಮುವಾರು ನಿರ್ಣಯವೆಂಬುದು ಶುದ್ಧ ಅವಿವೇಕವೆಂಬುದು ಸ್ಪಷ್ಟವಾಗಿ ಗೊತ್ತಿತ್ತು ಅದು ಜಾರಿಯಲ್ಲಿರುವವರೆಗೂ ಯಾವುದೇ ರೀತಿಯಲ್ಲಿ ಸ್ವಾತಂತ್ರ್ಯ ಬರುವುದಿಲ್ಲವೆಂಬುದು ಗೊತ್ತಿತ್ತು ಆದರಿಂದ ಅದನ್ನು ಅಂಗೀಕರಿಸುವುದು ಸಾಧ್ಯವಿರಲಿಲ್ಲ ಹೀಗಾಗಲು ಅದು ಮುಸ್ಲಿಮರಿಗೆ ವಿಶೇಷ ಪಕ್ಷಪಾತವನ್ನು ತೋರಿಸಿತ್ತು ಎಂಬುದು ಕಾರಣವಲ್ಲ. ಮುಸ್ಲಿಮರು ಬೇಕೆಂದುದನ್ನೆಲ್ಲ ಅವರಿಗೆ ಬೇರೊಂದು ವಿಧವಾಗಿ ಕೊಡಬಹುದಾಗಿತ್ತು ಎಂದು ಕಾಣುತ್ತದೆ. ಆದರೆ, ಬ್ರಿಟಿಷ್ ಸರಕಾರವು ಈ ಅವಾರ್ಡನ್ನು ಕೊಟ್ಟು ಹಿಂದೂಸ್ಥಾನವನ್ನು ಒಂದಕ್ಕೊಂದು ಸಂಬಂಧವಿಲ್ಲದಂತೆ ಹಲವು ಭಾಗವಾಗಿ ಹಂಚಿಹಾಕಿಬಿಟ್ಟಿತು. “ಒಂದರಿಂದ ಒಂದಕ್ಕೆ ತೊಂದರೆ ಒಂದರ ತೊಂದರೆಯು ತೀರುವುದಕ್ಕೆ ಮತ್ತೆ ಒಂದನ್ನು ಎತ್ತಿಕಟ್ಟುವುದು ಹೀಗಾಗಿ ಇಲ್ಲಿ ಬ್ರಿಟಿಷರ ಗುಂಪು ಯಾವಾಗಲೂ ಬಲವಾಗಿರಬೇಕು” ಎಂಬ ಅಭಿಪ್ರಾಯದಿಂದ ಹೀಗೆ ಮಾಡಿದ್ದುದು. ಭರತಖಂಡವು ಬ್ರಿಟಿಷ್ ಸರಕಾರದ ಮೇಲೆಯೇ ಅವಲಂಬಿಸಿರುವಂತೆ ಮಾಡಬೇಕೆಂಬುದೇ ಈ ಅವಾರ್ಡಿನ ಉದ್ದೇಶ

ಮುಖ್ಯವಾಗಿ ಬಂಗಾಳದಲ್ಲಿ ಯೂರೋಪಿಯನರು ಬಹಳ ಕಡಮೆಯಿದ್ದರೂ ಅವರಿಗೆ ಕೊಟ್ಟಿರುವ ಪ್ರಾತಿನಿಧ್ಯವು ಬಹಳ ಹೆಚ್ಚಾಗಿ ಆದರಿಂದ ಹಿಂದುಗಳಿಗೆ ಬಹಳ ಅನ್ಯಾಯವಾಗಿದ್ದಿತು. ಇಂತಹ ನಿರ್ಣಯ, ಸಿದ್ಧಾಂತ ಅಥವಾ ಏನೋ ಒಂದು ಇದನ್ನು ವಿರೋಧಿಸದೆ ಇರುವುದು ಎಂತು? ಅದನ್ನು ಸರಕಾರದವರು ಬಲಾತ್ಕಾರದಿಂದ ಜನಗಳ ಮೇಲೆ ಹೇರಬಹುದು. ಅಥವಾ ರಾಜಕೀಯ ಕಾರಣಗಳಿಂದ ಅದನ್ನು ಜನರೂ ಬಹಳ ಕಾಲ ಸಹಿಸಿಕೊಂಡಿರಬಹುದು. ಆದರೂ ಅದು ಯಾವಾಗಲೂ ನಿಲ್ಲುವ ವಿರೋಧಕ್ಕೆ ಕಾರಣವಾಗುವುದು ಎಂಬುದರಲ್ಲಿ ಸಂದೇಹವಿರಲಿಲ್ಲ. ಸಾಮಾನ್ಯವಾಗಿ ಒಂದು ಪದಾರ್ಥದ ದುರ್ಗುಣವೇ ಅದರ ಯೋಗ್ಯತೆಯನ್ನೂ ನಿರ್ಣಯಿಸುತ್ತದೆ.

ದುರ್ಗುಣಿಯಾದ ವಸ್ತು ತಾನು ಶಾಶ್ವತವಾಗಿ ನಿಂತರಲ್ಲವೆ ಇತರ ವಸ್ತುಗಳಿಗೆ ತಳಹದಿಯಾಗಿ ನಿಲ್ಲುವುದು ?

ನ್ಯಾಷನಲಿಸ್ಟ್ ಪಾರ್ಟಿಯೂ ಅದಕ್ಕಿಂತ ಹೆಚ್ಚಾಗಿ ಹಿಂದೂ ಮಹಾಸಭೆ ಮೊದಲಾದ ಕೋಮುವಾರು ಸಂಸ್ಥೆಗಳೂ ಈ ಹೊರಗಿನಿಂದ ಹೇರಿದ್ದ ಕೋಮುವಾರು ನಿರ್ಣಯಗಳನ್ನು ವಿರೋಧಿಸಿದವು ಆದರೆ ಅವರು ಬ್ರಿಟಿಷ್ ಸರಕಾರದ ಮಾತುಗಳನ್ನೂ ಆ ನಿರ್ಣಯವನ್ನೂ ಅಂಗೀಕರಿಸಿದವರಂತೆಯೇ ಒಪ್ಪಿಕೊಂಡು, ಅದನ್ನು ವಿರೋಧಿಸಿದರು ಇದರಿಂದ ಸರ್ಕಾರಕ್ಕೆ ಬಹಳ ಮಟ್ಟಿಗೆ ಒಪ್ಪಿಗೆಯಾಗುವಂತಹ ಒಂದು ವಿಚಿತ್ರ ನೀತಿಯನ್ನೂ ಅವರು ಅವಲಂಬಿಸಬೇಕಾಗಿ ಬಂತು ಆ ನಿರ್ಣಯವೆಂಬುದು ಅವರ ಕಣ್ಣೆದುರು ನಿಂತು. ಮಿಕ್ಕ ಮುಖ್ಯ ವಿಚಾರಗಳಿಗೆ ಇದ್ದ ಅವರ ವಿರೋಧವು ಕಡಮೆಯಾಗುತ್ತಾ ಬಂತು ಅವರು ಹೀಗೆ ಮಾಡಿ ನಿರ್ಣಯವನ್ನು ತಮಗೆ ಅನುಕೂಲವಾಗುವಂತೆ ತಿರುಗಿಸಿಕೊಳ್ಳಲು ಸರ್ಕಾರದವರನ್ನು ಸ್ವಲ್ಪ ಪುಸಲಾಯಿಸಬೇಕು ಎಂದುಕೊಂಡರು ಹಿಂದೂ ಮಹಾಸಭೆಯು ಆ ವಿಚಾರದಲ್ಲಿ ಬಹಳ ದೂರ ಹೋಯಿತು ಇಂತಹ ಸ್ಥಿತಿಗೆ ಇಳಿಯುವುದು ತಮಗೆ ಅವಮಾನವೆಂಬುದೂ ಹೀಗೆ ಮಾಡಿದರೆ ಆ ನಿರ್ಣಯದಲ್ಲಿ ಬದಲಾವಣೆಯಾಗುವುದೂ ಬಹಳ ದುಸ್ಸಾಧ್ಯವಾಗುವುದು ಎಂಬದೂ ಅವರ ಮನಸ್ಸಿಗೆ ಬಂದಂತಿಲ್ಲ ಹಿಂದೂ ಮಹಾಸಭೆಯು ಹೀಗೆ ಮಾಡುವುದು ಮುಸ್ಲಿಮರ ಆಗ್ರಹಕ್ಕೆ ಕಾರಣವಾಗಿ ಈ ಗುಂಪು ಇನ್ನೂ ಅಷ್ಟು ದೂರ ಸರಿಯುವುದು ಬ್ರಿಟಿಷ್ ಸರ್ಕಾರದವರು ನ್ಯಾಷನಲಿಸ್ಟ್ ಗುಂಪುಗಳನ್ನು ಒಲಿಸಿಕೊಳ್ಳುವುದು ಸಾಧ್ಯವೇ ಇಲ್ಲ ಅವರವರಿಗೆ ಬಹಳ ದೂರ ಅಲ್ಲದೆ ಅವರವರ ಆಶೋತ್ತರಗಳು ಪರಸ್ಪರ ವಿರೋಧಿಗಳು ಹಾಗೆಯೇ ಕೋಮುವಾರು ಆಶೋತ್ತರಗಳನ್ನುಳ್ಳ ಮಂದಿಯನ್ನೂ ಒಲಿಸಿಕೊಳ್ಳುವುದು, ಕೋಮುವಾರು ಭಾವನೆಯುಳ್ಳ ಹಿಂದು ಮುಸ್ಲಿಮರಿಬ್ಬರನ್ನೂ ಮೆಚ್ಚಿಸುವುದು ಕೂಡ ಅಸಾಧ್ಯವೆ ಆದುದರಿಂದ ಒಬ್ಬರನ್ನು ಒಲಿಸಿಕೊಂಡರೆ ಮತ್ತೊಬ್ಬರಿಗೆ ದ್ರೋಹವಾಗುವುದು ಎಂಬುದನ್ನು ಯಾರೂ ಹೇಳಕೊಡಬೇಕಾಗಿರಲಿಲ್ಲ ಯಾರನ್ನಾದರೂ ಒಬ್ಬರನ್ನು ಒಲಿಸಿಕೊಳ್ಳುವುದು ಸಾಧ್ಯ ಆದರಿಂದ ಅನೇಕ ಕಾರಣಗಳಿಂದ ಅವರು ಕೋಮುವಾರು ಭಾವನೆಯ ಮುಸ್ಲಿಮರನ್ನೇ ಒಲಿಸಿಕೊಳ್ಳಲು ಯತ್ನಿಸಿದುದೇ ಸರಿ ಇದುವರೆಗೂ ಸುಖವಾಗಿ ನಡೆದುಬಂದಿರುವ, ಈಗಲೂ ಲಾಭದಾಯಕವಾಗಿರುವ, ಈ ಧೋರಣವನ್ನು ತಲೆಕೆಳಗು ಮಾಡುವುದು ಏಕೆ? ಹಿಡಿಹಿಡಿಯಾಗಿರುವ ಜಾತಿವಾರು ಮತ್ತು ಕೋಮುವಾರು ಭಾವನೆಯುಳ್ಳ ಹಿಂದುಗಳನ್ನು ಒಲಿಸಿಕೊಳ್ಳುವುದಕ್ಕೆ ಮುಸ್ಲಿಮರಲ್ಲಿ ಏಕೆ ವಿರೋಧ ಕಟ್ಟಿಕೊಳ್ಳಬೇಕು?

ಹಿಂದುಗಳು ಸಾಮೂಹಿಕ ದೃಷ್ಟಿಯಿಂದ ರಾಜಕೀಯವಾಗಿ ಕೊಂಚ ಮುಂದುವರಿದಿದ್ದಾರೆ. ಮತ್ತು ರಾಷ್ಟ್ರದ ಸ್ವಾತಂತ್ರ್ಯವು ಬೇಕೆಂದು ಅವರು ಮಾಡುತ್ತಿರುವ

ಗದ್ದಲವು ಬಲವಾಗಿದೆ ಇವೆರಡು ಅವರಿಗೇ ವಿರೋಧವೆಂಬುದು ನಿಜ ರಾಜಕೀಯ ವಿರೋಧವುಳ್ಳವರಿಗೆ ಸಣ್ಣಸಣ್ಣ ಕೋಮುವಾರು ರಿಯಾಯಿತಿಗಳನ್ನು ತೋರಿಸಿದುದರಿಂದ ಫಲವೇನೂ ಇಲ್ಲ ಇದೇ ಈ ಸಣ್ಣ ಪುಟ್ಟ ರಿಯಾಯಿತಿಗಳನ್ನು ತೋರಿಸಿದರೆ ಮುಸ್ಲಿಮರ ಮನೋಭಾವದಲ್ಲಿ ತಾತ್ಕಾಲಿಕವಾಗಿಯಾದರೂ ಬದಲಾವಣೆಯಾಗುವುದು

ಹಿಂದೂ ಮಹಾಸಭೆ ಮತ್ತು ಮುಸ್ಲಿಮ್ ಕಾನ್ಫರನ್ಸ್—ಇವೆರಡೂ ಸುಧಾರಣಾ ವಿರೋಧಿಗಳಾದ ಕೋಮುವಾರು ಸಮಾಜಗಳು ಈ ಸಭೆಗಳಲ್ಲಿ ಯಾರು ಯಾರು ಇದ್ದಾರೆ ಎಂಬುದು ಚುನಾವಣೆಗಳಿಂದ ಸ್ಪಷ್ಟವಾಗಿ ತಿಳಿದಂತಾಯಿತು ಅವರ ಉಮೇದುವಾರರು ಅವರಿಗೆ ಬೆಂಬಲವನ್ನೀಯುವವರು ಮೇಲೆ ಮೇಲೆ ಭೂಸ್ವಾಮಿಗಳ ಮತ್ತು ಬಂಡವಾಳಗಾರರ ವರ್ಗದವರು ಜೊತೆಗೆ ಮಹಾಸಭೆಯು ಸಾಲದ ಹೊರೆಯನ್ನು ಇಳಿಸುವ ಬಿಲ್ಲುಗಳು ಬಂದಾಗ ಸಂಪೂರ್ಣವಾಗಿ ವಿರೋಧಿಸಿ ತಾನು ಬಂಡವಾಳಗಾರರ ಪಕ್ಷ ಎಂಬುದನ್ನು ತೋರಿಸಿಕೊಂಡಿತು ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ತಲೆಯ ಮೇಲೆ ಇರುವ ಗುಂಪುಗಳೇ ಹಿಂದೂ ಮಹಾಸಭೆಯ ಸೂತ್ರಧಾರಿಗಳು ಅವರಲ್ಲಿ ಒಂದು ಗುಂಪು ಮತ್ತು ಇನ್ನೂ ಕೆಲವರು ವ್ಯಾಪಾರಗಾರರೂ ಸೇರಿ ಲಿಬರಲ್ಸ್ ಅಥವಾ ಮಂದ ಪಕ್ಷದವರಾಗಿರುವುದು ಈಚೆಗೆ ಹಿಂದೂ ಸಮಾಜದಲ್ಲಿ ನೀಚ ಮಧ್ಯಮ ವರ್ಗದವರು ರಾಜಕೀಯವಾಗಿ ಜಾಗ್ರತರಾಗಿರುವುದರಿಂದ ಈ ಮಂದ ಪಕ್ಷದವರ ಮೇಲೆ ಹಿಂದೂಗಳಿಗೆ ಅಷ್ಟು ಗೌರವವಿಲ್ಲ ಉದ್ಯೋಗ ಕೈಗಾರಿಕೆಗಳ ಮುಖಂಡರು ಕೂಡ ಅವರೊಡನೆ ಸೇರುವುದಿಲ್ಲ ಬೆಳೆಯುತ್ತಿರುವ ಉದ್ಯೋಗದ ಆಶೆಗಳಿಗೂ ಸಾಮಂತ ನೀತಿಗಳಿಗೂ ಜೊತೆಯಾಗುವುದೆಂತು? ಅವರವರಿಗೆ ಸರಿಬೀಳುವುದಿಲ್ಲ ಈ ಕೈಗಾರಿಕೆ ಉದ್ಯೋಗಗಳಲ್ಲಿ ಇರುವವರು ಪ್ರತ್ಯಕ್ಷವಾಗಿ ಕೆಲಸ ಮಾಡಲು ಒಪ್ಪದವರು ಮತ್ತೆ ಯಾವ ನಷ್ಟಕರವಾದ ಮಾರ್ಗವನ್ನೂ ಅವಲಂಬಿಸಲಾರರು ಅವರಿಗೆ ಅಷ್ಟು ಧೈರ್ಯವಿಲ್ಲ ಆದರಿಂದ ಅವರು ಇತ್ತಕಡೆ ಸರ್ಕಾರ ಅತ್ತಕಡೆ ರಾಷ್ಟ್ರೀಯ ಪಕ್ಷ ಇವರಿಬ್ಬರನ್ನೂ ಮೆಚ್ಚಿಸಬೇಕೆಂದು ಯೋಚಿಸುತ್ತಾರೆ ಅವರಿಗೆ ಮಂದ ಪಕ್ಷದವರೂ ಕೋಮುವಾರು ಗುಂಪಿನವರೂ ಇಬ್ಬರೂ ಬೇಕಾಗಿಲ್ಲ ಅವರಿಗೆ ಬೇಕಾದುದು ಉದ್ಯೋಗದಲ್ಲಿ ಮುಂದುವರಿಯುವುದು ಮತ್ತು ಲಾಭಗಳು ಇವೆರಡೇ ಎರಡು

ಮುಸ್ಲಿಮರಲ್ಲಿ ಇನ್ನೂ ನೀಚ ಮಧ್ಯಮ ವರ್ಗದವರು ಜಾಗ್ರತರಾಗಿಲ್ಲ ಉದ್ಯೋಗಗಳಲ್ಲಿಯೂ ಅವರು ಇನ್ನೂ ಹಿಂದುಳಿದಿದ್ದಾರೆ ಆದುದರಿಂದ ಅವರಲ್ಲಿ ಸುಧಾರಣೆಯನ್ನು ವಿರೋಧಿಸುವವರೂ ಸಾಮಂತಭಾವದವರೂ ಅಧಿಕಾರಿಗಳ ಪರವಾಗಿರುವವರೂ ಇವರಲ್ಲ ಹೆಚ್ಚು ಇಂಥವರೇ ಅವರ ಕೋಮುವಾರು ಸಂಘಗಳ ಸೂತ್ರಧಾರಿಗಳು, ಇಂಥವರ ಪ್ರಭಾವವೇ ಆ ಜಾತಿಯ ಮೇಲೆ ಬಹಳ ಮುಸ್ಲಿಮ್

ಕಾನ್ಫರೆನ್ಸ್ ಎಂದರೆ ಬಿರುದಾಂಕಿತರೂ ಮಂತ್ರಿಗಳೂ ಆಗಿದ್ದವರೂ ದೊಡ್ಡ ದೊಡ್ಡ ಭೂಸ್ವಾಮಿಗಳೂ ಇವರದೇ ಒಂದು ದೊಡ್ಡ ಸಂತೆ. ಇಷ್ಟಾದರೂ ಮುಸ್ಲಿಮ್‌ರ ಪ್ರಜಾಸಾಮಾನ್ಯದಲ್ಲಿ ಅಪಾರ ಸಾಮರ್ಥ್ಯವಿದೆ. ಅವರಲ್ಲಿ ಹಿಂದೂ ಪ್ರಜಾಸಾಮಾನ್ಯಕ್ಕಿಂತಲೂ ಹೆಚ್ಚು ಸಾಮಾಜಿಕ ಸ್ವಾತಂತ್ರ್ಯವುಂಟು. ಆದರಿಂದ ಅವರು ಮನಸ್ಸು ಮಾಡಿದರೆ, ಆ ಜಾತಿಯು ಸೋಷಿಯಲಿಸ್ಟ್ ಹಾದಿಯಲ್ಲಿ ಬಹು ವೇಗವಾಗಿ ಮುಂದೆ ಸಾಗಬಲ್ಲುದು. ಆದರೆ ಯಾರಾದರೂ ಮುಂದೆ ಒಮ್ಮೆ ತಳ್ಳಬೇಕು. ಈಗ ಮುಸ್ಲಿಮರಲ್ಲಿ ಬುದ್ಧಿವಂತರಾದವರ ಮಾತೇನೂ ನಡೆಯುತ್ತಾ ಇಲ್ಲ. ಆ ಸಮಾಜದಲ್ಲಿ ಇನ್ನು ಮುಂಜಾಗ್ರತೆಯೂ ತೋರಿ ಬಂದಿಲ್ಲವಾಗಿ ಹಿಂದಿನ ಮುಖಂಡರನ್ನು ಇನ್ನೂ ಬಿಡುವ ಸ್ಥಿತಿಗೆ ಬಂದಿಲ್ಲ.

ಈಗ ದೇಶದಲ್ಲಿರುವ ರಾಜಕೀಯ ಸಂಘಗಳಲ್ಲೆಲ್ಲಾ ಕಾಂಗ್ರೆಸ್ಸೇ ಬಹಳ ಮುಂದುವರಿದಿರುವುದು. ಆದರೂ ಕಾಂಗ್ರೆಸ್ಸಿನ ಮುಖಂಡರು ಈಗಿನ ಪ್ರಜಾವರ್ಗದ ಸ್ಥಿತಿಯನ್ನು ಪರಿಗಣಿಸಿದರೆ ಎಷ್ಟು ಧೈರ್ಯವಾಗಿ ಮುಂದೆ ನುಗ್ಗಬಹುದೋ ಅಷ್ಟು ನುಗ್ಗಲು ಸಿದ್ಧರಾಗಿಲ್ಲ. ಅವರು ಪ್ರಜೆಗಳ ಬೆಂಬಲವನ್ನೂ ಅಪೇಕ್ಷಿಸುತ್ತಿದ್ದಾರೆಯೇ ಹೊರತು ಪ್ರಜೆಗಳ ಅಭಿಪ್ರಾಯವೇನು ? ಪ್ರಜೆಗಳಿಗಿರುವ ಕುಂದು ಕೊರತೆಗಳೇನು ? ಎಂಬುದನ್ನು ವಿಚಾರಿಸುವುದಕ್ಕೆ ಹೊರಟಿಲ್ಲ. ಅಸೆಂಬ್ಲಿ ಚುನಾವಣೆಗಳ ಕಾಲದಲ್ಲಿ ಕಾಂಗ್ರೆಸ್ಸಿಗೆ ಸೇರದೆ ಇರುವ ಇತರ ಮಂದ ಪಕ್ಷದವರೇ ಮೊದಲಾದ ಕಾಂಗ್ರೆಸ್ಸಿನಿಂದ ಹೊರಗಿನವರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇಕೆಂದು ತಮ್ಮ ಕಾರ್ಯಕ್ರಮವನ್ನು ಸೂಕ್ಷ್ಮ ಮಾಡಲು ಆದಷ್ಟು ಯತ್ನಿಸಿದರು. ದೇವಸ್ಥಾನದ ಪ್ರವೇಶದ ಬಿಲ್ಲು ಮುಂತಾದ ಸುಧಾರಣೆಗಳ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿದ್ದುವು. ಮದರಾಸಿನಲ್ಲಂತೂ ವೈದಿಕ ಮಾರ್ಗದವರನ್ನು ಒಲಿಸಿಕೊಳ್ಳಲು ಭರವಸೆಗಳನ್ನು ಕೂಡ ಕೊಟ್ಟುದಾಯಿತು.

ನೇರವಾಗಿ, ಧೈರ್ಯವಾಗಿ, ಮುಂದೆ ನುಗ್ಗುವಂತಹ ಆಕ್ರಮಣ ಶೀಲವಾದ ಚುನಾವಣೆಯ ಕಾರ್ಯಕ್ರಮವೊಂದು ಇದ್ದಿದ್ದರೆ ಅದರಿಂದ ಜನಗಳಿಗೆ ಬಹು ಉತ್ಸಾಹ ಬರುತ್ತಿತ್ತು. ಅದು ಪ್ರಜಾವರ್ಗದ ಮನೋಭಾವವನ್ನು ತಿದ್ದುವುದರಲ್ಲಿ ಸಾಧಕವಾಗುತ್ತಿತ್ತು. ಈಗ ಕಾಂಗ್ರೆಸ್ಸು ಪಾರ್ಲಿಮೆಂಟರಿ ಪ್ರೋಗ್ರಾಮ್ ಒಂದನ್ನು ಒಪ್ಪಿಕೊಂಡಿರುವುದರಿಂದ ಇನ್ನೂ ರಾಜಕೀಯ ಸಾಮಾಜಿಕ ಸುಧಾರಣಾ ವಿರೋಧಿ ಪಕ್ಷಗಳಿಗೆ ಹೆಚ್ಚು ಅವಕಾಶವು ದೊರೆಯುವುದು. ಆದರಿಂದ ಅಲ್ಲಲ್ಲಿ ಕೆಲವು ಓಟುಗಳು ಸಿಕ್ಕಬಹುದಾದರೂ ಕಾಂಗ್ರೆಸ್ಸಿನ ಮುಖಂಡರಿಗೂ ಪ್ರಜಾವರ್ಗಕ್ಕೂ ಸದ್ಯದಲ್ಲಿರುವ ದೂರವು ಹೆಚ್ಚಾಗುವುದರಲ್ಲಿ ಸಂದೇಹವಿಲ್ಲ. ಅದ್ಭುತ ಭಾಷಣಗಳಾಗಬಹುದು. ಪಾರ್ಲಿಮೆಂಟಿನ ಸಂಪ್ರದಾಯಗಳನ್ನು ಅಚ್ಚುಕಟ್ಟಾಗಿ ನಡೆಸಬಹುದು. ಸರ್ಕಾರವನ್ನು ಆಗಾಗ ಸೋಲಿಸಬಹುದು. ಆದರೆ ಸರ್ಕಾರದವರು ಇದುವರೆಗೂ ಮಾಡಿದಂತೆಯೇ ಈಗಲೂ ಇಂತಹ ಕಾಂಗ್ರೆಸ್ಸಿನ ಗೆಲುವುಗಳನ್ನು ಬುಟ್ಟಿಯಲ್ಲಿ ಹಾಕಿಕೊಂಡು ಕುಳಿತುಕೊಳ್ಳಬಲ್ಲರು.

ಕಳೆದ ಕೆಲವು ವರ್ಷಗಳಿಂದ ಕಾಂಗ್ರೆಸ್ಸು ಅಸೆಂಬ್ಲಿಗಳನ್ನು ಬಾಯ್‌ಕಾಟ್ ಮಾಡಿದ್ದಾಗ ಸರ್ಕಾರದ ಅಧಿಕಾರಿಗಳು "ಅಸೆಂಬ್ಲಿಯೂ ಪ್ರಾಂತಿಕ ಕೌನ್ಸಿಲುಗಳೂ ಜನಗಳ ನಿಜವಾದ ಪ್ರತಿನಿಧಿಗಳಿಂದ ತುಂಬಿವೆ ಅವುಗಳ ಅಭಿಪ್ರಾಯವೇ ಮಹಾ ಜನಗಳ ಸರಿಯಾದ ಅಭಿಪ್ರಾಯ" ಎಂದು ಪದೇಪದೇ ಹೇಳಿಕೊಳ್ಳುತ್ತಿದ್ದರು. ಈಗ ಸ್ವಲ್ಪ ಮುಂದುವರಿದಿರುವ ಜನಗಳು ಬಂದು ಅಸೆಂಬ್ಲಿಯಲ್ಲಿ ಕುಳಿತುಕೊಳ್ಳುತ್ತಲೂ ಸರ್ಕಾರದ ಅಭಿಪ್ರಾಯವು ಬದಲಾಯಿಸಿರುವುದೇ ಒಂದು ಚಂದ "ಚುನಾವಣೆಯಲ್ಲಿ ಕಾಂಗ್ರೆಸ್ಸು ಗೆದ್ದಿರುವುದಲ್ಲ" ಎಂದಾಗಲೆಲ್ಲ "ಅದಕ್ಕೇನು ಮಹಾ! ಚುನಾವಣೆ ಮಾಡಿದವರು ಬಹಳ ಸ್ವಲ್ಪಮಂದಿ. ದೇಶದಲ್ಲಿರುವ ಮೂವತ್ತು ಕೋಟಿ ಜನಗಳೆಲ್ಲಿ? ಓಟುಕೊಡುವ ಮೂವತ್ತು ಲಕ್ಷ ಮಂದಿ ಎಲ್ಲಿ?" ಎನ್ನುತ್ತಾರೆ ಓಟುಕೊಡದೆ ಇರುವ ಈ ಕೋಟ್ಯಾಂತರ ಜನಗಳು ಬ್ರಿಟಿಷ್ ಸರ್ಕಾರವನ್ನು ಅನುಮೋದಿಸಿರುವರು ಎಂದು ಸರಕಾರವು ಹೇಳಿಕೊಳ್ಳುತ್ತಿದೆ ಇಂತಹ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂಬುದನ್ನು ಯಾರೂ ಹೇಳಬೇಕಾಗಿಲ್ಲ. ವಯಸ್ಸು ಬಂದಿರುವವರು ಪ್ರತಿಯೊಬ್ಬರೂ ಓಟು ಕೊಡುವುದೆಂದು ಆಗಿಬಿಟ್ಟರೆ ಆಗ ಜನಗಳ ಮನೋಭಿಪ್ರಾಯವು ಹೇಗೆ ಇದೆ? ಜನಗಳು ಏನೆಂಬುವರು ಎಂಬುದು ಸ್ಪಷ್ಟವಾಗಿ ತಿಳಿದೀತು

ಅಸೆಂಬ್ಲಿ ಚುನಾವಣೆಗಳು ಆದ ಕೂಡಲೆ ಜಾಯಿಂಟ್ ಪಾರ್ಲಿಮೆಂಟರಿ ಕಮಿಟಿಯು ಸರ್ಕಾರದ ಸುಧಾರಣೆಗಳ ಮೇಲೆ (ಕಾನ್‌ಸ್ಟಿಟ್ಯೂಷನಲ್ ರಿಫಾರ್ಮ್) ವರದಿಯನ್ನು ಹೊರಡಿಸಿತು ಆ ವರದಿಯು ಆ ಸುಧಾರಣೆಗಳ ಮೇಲೆ ಹೊರಿಸಿದ ವಿವಿಧ ಆಕ್ಷೇಪಣೆಗಳಲ್ಲಿ, ಸುಧಾರಣೆಗಳು ಭರತಖಂಡದ ಜನಗಳ ಮೇಲಿನ ಅಪನಂಬಿಕೆ ಸಂದೇಹಗಳಿಂದ ರೂಪುಗೊಂಡಿವೆ ಎಂಬುದೊಂದು ಬಹಳ ಭಾರಿಯದು. ಈ ವರದಿಯನ್ನು ಓದಿ, ನಮ್ಮ ಜನಾಂಗದ ಮತ್ತು ಸಮಾಜದ ಸಮಸ್ಯೆಗಳನ್ನು ಪರೀಕ್ಷಿಸುವುದರಲ್ಲಿ ಇದೊಂದು ವಿಚಿತ್ರ ಮಾರ್ಗ ಎನಿಸಿತು ಬ್ರಿಟಿಷರ ಸಾಮ್ರಾಜ್ಯ ನೀತಿಗೂ ನಮ್ಮ ಜನಾಂಗದ ಯೋಗಕ್ಷೇಮಗಳಿಗೂ ಪ್ರಬಲವಾದ ವಿರೋಧಗಳೇ ಇಲ್ಲವೇನು? ಇವೆರಡರಲ್ಲಿ ಯಾವುದು ನಿಲ್ಲಬೇಕೆಂಬುದು ಮುಖ್ಯ ಪ್ರಶ್ನೆ ನಾವು ಸ್ವಾತಂತ್ರ್ಯವನ್ನಪೇಕ್ಷಿಸುವುದು ಈ ಸಾಮ್ರಾಜ್ಯದ ನೀತಿಯನ್ನು ಅವಲಂಬಿಸುವುದಕ್ಕೇನು? ಹಾಗಿರಬೇಕೆಂಬುದು ಬ್ರಿಟಿಷ್ ಸರ್ಕಾರದ ಮನೋಭಿಪ್ರಾಯ ಅದಕ್ಕಾಗಿ ಅಲ್ಲವೇ ಬ್ರಿಟಿಷರ ರಾಜನೀತಿಯನ್ನು ಅನುಸರಿಸಿ ನಾವು ನಮ್ಮ ದೇಶದ ಆಡಳಿತವನ್ನು ಅವರಿಗೆ ಒಪ್ಪುವ ರೀತಿಯಲ್ಲಿ ನಡೆಸಿಕೊಂಡು ಹೋಗುವವರೆಗೂ ಸೇಫ್‌ಗಾರ್ಡ್‌ಗಳನ್ನು ಉಪಯೋಗಿಸುವುದಿಲ್ಲ ಎಂದು ಅವರು ಅಭಯ ಕೊಟ್ಟಿರುವುದು? ಇಂಡಿಯಾದಲ್ಲಿ ಬ್ರಿಟಿಷರ ಧೋರಣವು ಶಾಶ್ವತವಾಗಿ ನಡೆಯಬೇಕೆಂದರೆ ಸರಕಾರವು ನಮ್ಮ ಕೈಗೆ ಬರಬೇಕೆಂದು ನಾವು ಏಕೆ ಇಷ್ಟು ಕಂಠಶೋಷಣ ಮಾಡಿಕೊಳ್ಳಬೇಕು?

ಒಟ್ಟಾವಾ ಒಪ್ಪಂದಗಳೂ ಭರತಖಂಡದ ವ್ಯಾಪಾರವನ್ನು ಬಿಟ್ಟು ಇನ್ನಾವ ರೀತಿಯಲ್ಲಿಯೂ ಆರ್ಥಿಕವಾಗಿ ಇಂಗ್ಲೆಂಡಿಗೆ ಅಷ್ಟು ಉಪಕಾರವನ್ನು ಮಾಡಿಲ್ಲ

ವೆಂಬುದು ಎಲ್ಲರಿಗೂ ಗೊತ್ತು.* ಈ ಒಪ್ಪಂದಗಳಿಂದ ಭರತಖಂಡದೊಡನೆ ನಡೆಯುತ್ತಿರುವ ಬ್ರಿಟಿಷ್ ವ್ಯಾಪಾರವು ಭರತಖಂಡದ ಯೋಗಕ್ಷೇಮಗಳನ್ನು ಬಹಳಮಟ್ಟಿಗೆ ಮೂಲೆಗೊತ್ತಿ ತಾನು ಸುಖವಾಗಿ ಬೆಳೆಯಿತು ಎಂದು ಭರತಖಂಡದ ರಾಜಕೀಯ ಮತ್ತು ವಾಣಿಜ್ಯ ಮಂಡಲದ ಅಭಿಪ್ರಾಯ ಕೆನಡಾ ಆಸ್ಟ್ರೇಲಿಯಾ ಮುಂತಾದ ಡೊಮಿನಿಯನ್ನುಗಳ ಸ್ಥಿತಿಯು ಬೇರೆಯಾಯಿತು ಅವು ಬ್ರಿಟನ್ನಿನೊಡನೆ ಚೌಕಿಸಿ ಮಾಡಿ ತಮ್ಮ ಲಾಭವನ್ನು ತಾವು ನೋಡಿಕೊಂಡುವು § ಇಷ್ಟಾದರೂ ಆ ಡೊಮಿನಿಯನ್‌ಗಳು ಒಟ್ಟಾವಾ ಒಪ್ಪಂದವನ್ನು ಮುರಿದು ತಮ್ಮ ತಮ್ಮ ಉದ್ಯೋಗಗಳನ್ನೂ ಮತ್ತು ಇತರ ದೇಶಗಳೊಡನೆ ತಾವು ಮಾಡುತ್ತಿರುವ ವ್ಯಾಪಾರಗಳನ್ನೂ ರೂಢಿಸಿಕೊಳ್ಳುವ ವಿಚಾರದಲ್ಲಿ ಒಂದೇ ಸಮನಾಗಿ ಪ್ರಯತ್ನ ಮಾಡುತ್ತಿವೆ † ಕೆನಡಾದ

---

* ಸರ್ ವಿಲಿಯಂ ಕರಿ ಎಂಬುವರು ಪಿ ಅಂಡ್ ಒ ಷಿಪ್ಪಿಂಗ್ ಕಂಪೆನಿಯ ಸಭೆಯ ಅಧ್ಯಕ್ಷರಾಗಿದ್ದು ಲಂಡನಿನಲ್ಲಿ ತಾ|| ೫–೧೨–೧೯೩೪ ರಲ್ಲಿ ಭರತಖಂಡದ ವ್ಯಾಪಾರವನ್ನು ಕುರಿತು ಮಾತನಾಡುತ್ತಾ, ಈ ಒಟ್ಟಾವಾ ಒಪ್ಪಂದಗಳಿಂದ ಬ್ರಿಟನ್ನಿಗೆ ಬಹಳ ಉಪಕಾರವಾಯಿತು ಎಂದು ಹೇಳಿದ್ದಾರೆ

§ ಜೂನ್ ೧೯೩೪ ರಲ್ಲಿ ಲಂಡನ್ನಿನ 'ಎಕಾನಾಮಿಸ್ಟ್' ಎಂಬ ಪತ್ರಿಕೆಯು ಒಟ್ಟಾವಾ ಸಮ್ಮೇಳನದ ವಿಚಾರವಾಗಿ ಹೀಗೆ ಬರೆದಿದೆ "ಈ ಸಮ್ಮೇಳನ ಫಲವಾಗಿ ಬ್ರಿಟಿಷ್ ಸಾಮ್ರಾಜ್ಯಕ್ಕೂ ಮತ್ತು ಪ್ರಪಂಚದ ಇತರ ಭಾಗಗಳಿಗೂ ಇರುವ ವ್ಯಾಪಾರವು ಕಡಿಮೆಯಾಗಿದೆ ಅಂತರ್ಸಾಮ್ರಾಜ್ಯವ್ಯಾಪಾರವು ಹೆಚ್ಚಾಗಿದ್ದರೆ ಆಗ ಈ ಸಮ್ಮೇಳನವು ಯಶಸ್ವಿಯಾಯಿತೆಂದು ಹೇಳಬಹುದಾಗಿದ್ದಿತು ಈಗ ಸಾಮ್ರಾಜ್ಯದ ವ್ಯಾಪಾರವು ಕಡಿಮೆಯಾಗುತ್ತಿದೆ ಅಂತರ್ಸಾಮ್ರಾಜ್ಯ ವ್ಯಾಪಾರವು ಒಂದಿಷ್ಟು ಹೆಚ್ಚಾದರೆ ಅದರಿಂದ ಏನು ಮಹೋಪಕಾರವಾದಂತಾಯಿತು ? ಈ ರೀತಿಯಾಗಿ ಬೆಳೆದಿರುವ ಸ್ವಲ್ಪ ವ್ಯಾಪಾರವೂ ಕೂಡ ಗ್ರೇಟ್ ಬ್ರಿಟನ್ನಿಗಿಂತಲೂ ಡೊಮಿನಿಯನ್ನುಗಳಿಗೆ ಹೆಚ್ಚು ಅನುಕೂಲವಾಗಿದೆ ಸಾಮ್ರಾಜ್ಯದಿಂದ ನಮಗೆ ಬಂದ ವ್ಯಾಪಾರವು ೧೯೩೧ ರಲ್ಲಿ ೨೪೭ ಮಿಲಿಯನ್ ಪೌಂಡುಗಳು ಇದ್ದುದು ೧೯೩೩ ರಲ್ಲಿ ೨೪೯ ಮಿಲಿಯನ್ ಪೌಂಡುಗಳಾಯಿತು ಆದರೆ ನಮ್ಮ ಹೊರಗಿನ ವ್ಯಾಪಾರವು ಮಾತ್ರ ೧೩೦೬ ಲಕ್ಷ ಪೌಂಡುಗಳಿದ್ದುದು ೧೬೩೫ ಲಕ್ಷ ಪೌಂಡುಗಳಾಯಿತು ಹೀಗೆ ೧೯೨೯ ರಿಂದ ೧೯೩೩ ರವರೆಗೆ ನಮ್ಮ ಹೊರ ವ್ಯಾಪಾರವು ಶೇಕಡ ೫೦ ೯ ಕಡಿಮೆಯಾಗಿ ಸಾಮ್ರಾಜ್ಯದಿಂದ ನಮಗೆ ಬಂದ ವ್ಯಾಪಾರವು ಶೇಕಡ ೩ ೨೯ ರಷ್ಟು ಮಾತ್ರ ಕಡಿಮೆಯಾಯಿತು ನಾವು ಸಾಮ್ರಾಜ್ಯದ ಹೊರಗಿರುವ ದೇಶಗಳಿಗೆ ಕಳುಹಿಸುತ್ತಿರುವ ವ್ಯಾಪಾರದಲ್ಲಿ ಕಡಿಮೆಯಾದುದು ಅಷ್ಟು ಹೆಚ್ಚಾಗಿಲ್ಲ ಆದರೆ ಆ ದೇಶಗಳಿಂದ ನಿಮಗೆ ಬರುತ್ತಿರುವ ಸಾಮಾನುಗಳು ಮಾತ್ರ ಬಹಳ ಮಟ್ಟಿಗೆ ಕಡಿಮೆಯಾಯಿತು "

† ಮೆಲ್‌ಬೋರ್ನಿನ 'ಏಜ್' ಎಂಬ ಪತ್ರಿಕೆಯು ಒಟ್ಟಾವಾ ಒಪ್ಪಂದವನ್ನು ಕೊಂಚವೂ ಒಪ್ಪಿಲ್ಲ "ಒಟ್ಟಾವಾ ಒಪ್ಪಂದವು ಎದುರಿಗೆ ಇದ್ದು ಕಣ್ಣು ಉರಿಸುತ್ತದೆ ಇದರಂತಹ ಅವಿವೇಕವು ಮತ್ತೊಂದಿಲ್ಲವೆಂಬುದು ಕ್ಷಣೇ ಕ್ಷಣೇ ಮನಸ್ಸಿಗೆ ಬರುತ್ತಿದೆ" ಎಂದು ಅದು ಬರೆದಿದೆ (೧೯೩೪ ನೇ ಅಕ್ಟೋಬರ್ ೧೯ ರ 'ಮ್ಯಾಂಚೆಸ್ಟರ್ ಗಾರ್ಡಿಯನ್ ವಾರಪತ್ರಿಕೆ' ಯಿಂದ ಉಧೃತವಾದುದು )

ರಾಜಕೀಯ ಪಕ್ಷಗಳಲ್ಲೆಲ್ಲಾ ಅಗ್ರಗಾಮಿಗಳಾದ ಲಿಬರಲ್‌ಗಳು—ಬಹುಶಃ ಇಷ್ಟರಲ್ಲೇ ಅವರು ಸರಕಾರವನ್ನು ತಮ್ಮ ಕೈಗೆ ತೆಗೆದುಕೊಳ್ಳಬಹುದು— ಒಟ್ಟಾವಾ ಒಪ್ಪಂದವನ್ನೂ ಮುಗಿಸಿಬಿಡುವುದೇ ಸರಿ ಎಂದು ಶಪಥಮಾಡಿಕೊಂಡಿದ್ದಾರೆ. *

ಆಸ್ಟ್ರೇಲಿಯದಲ್ಲಿ ಒಟ್ಟಾವಾ ಒಪ್ಪಂದದ ಷರತ್ತುಗಳನ್ನು ಹಾಗೂ ಹೀಗೂ ಅರ್ಥಮಾಡಿ ಕೆಲವು ಜಾತಿಯ ಚೀಟಿ ಬಟ್ಟೆಗಳು ಮತ್ತು ನೂಲು ಮುಂತಾದುವುಗಳ ಮೇಲೆ ಸುಂಕವನ್ನು ಏರಿಸಿಬಿಟ್ಟಿದ್ದಾರೆ ಅದನ್ನು ಲಂಕಾಷೈರ್‌ನ ಹತ್ತಿ ಕೈಗಾರಿಕೆಯವರು ಬಹಳವಾಗಿ ವಿರೋಧಿಸಿ, ಇದರಿಂದ ಒಟ್ಟಾವಾ ಒಪ್ಪಂದವನ್ನೇ ಮುರಿದಂತೆ ಆಗುವುದಿಲ್ಲವೇ ಎಂದು ಪ್ರತಿಭಟಿಸಿದ್ದಾರೆ ಆಸ್ಟ್ರೇಲಿಯದಲ್ಲಿ ಮಾಡಿರುವ ಆ ಕಾರ್ಯವನ್ನು ವಿರೋಧಿಸಲು ಮತ್ತು ಅದಕ್ಕೆ ಪ್ರತಿಕ್ರಿಯೆಯನ್ನು ಆಚರಿಸಲು ಆಸ್ಟ್ರೇಲಿಯದ ಪದಾರ್ಥಗಳನ್ನು ತೆಗೆದುಕೊಳ್ಳಕೂಡದು, ಬಾಯ್‌ಕಾಟ್ ಮಾಡಬೇಕು ಎಂದು ಕೂಡ ಲಂಕಾಷೈರಿನಲ್ಲಿ ಒಂದು ಚಳವಳಿ ಎದ್ದಿದೆ ಆದರೆ ಈ ಚಳವಳಿಯಿಂದ ಆಸ್ಟ್ರೇಲಿಯದ ಮೇಲೆ ಏನೂ ಪರಿಣಾಮವಾಗಲಿಲ್ಲ ಅಲ್ಲಿನವರು “ ಧೈರ್ಯವಿದ್ದರೆ ಮಾಡಿ ನೋಡೋಣ ” ಎಂದು ಇದ್ದುಬಿಟ್ಟರು §

ಈ ಆರ್ಥಿಕ ಸಮರಗಳು ಬ್ರಿಟನ್ನಿನ ಮೇಲೆ ಕೆನಡಾ ಅಥವಾ ಆಸ್ಟ್ರೇಲಿಯಾಕ್ಕೆ ಇರುವ ದೌರ್ಮನಸ್ಯದ ಫಲವಲ್ಲ ಐರ್ಲೆಂಡಿನ ವಿಷಯದಲ್ಲಂತೂ ಹಾಗೆ ಹೇಳಲಾಗುವುದಿಲ್ಲ ಅವರವರ ಆಶೋತ್ತರಗಳಿಗೆ ವಿರೋಧಗಳು ಬರುವುದರಿಂದ ಈ

---

* ಈಗ ಕೆನಡಾದಲ್ಲಿ ಸರ್ಕಾರವನ್ನು ನಡೆಸುತ್ತಿರುವ ಕನಸರ್‌ವೇಟಿವ್ ಪಕ್ಷದ ಪ್ರೈಮ್ ಮಿನಿಸ್ಟರಾದ ಮಿ|| ಬೆನೆಟ್‌ರವರು ಕೂಡ ವ್ಯಾಪಾರದ ವಿಷಯಗಳಲ್ಲಿ ಬ್ರಿಟಿಷ್ ಸರ್ಕಾರಕ್ಕೆ ಆದಷ್ಟು ಕಿರುಕುಳವನ್ನು ಕೊಡುತ್ತಿದ್ದಾರೆ ಅವರು ಈ ಹೊಸ ಒಪ್ಪಂದವನ್ನು ಕುರಿತು ಪದೇಪದೇ ಮಾತನಾಡುತ್ತಾ ತಾವು ಇದನ್ನು ಬದಲಾಯಿಸಿರುವವರು ಎಂಬುದನ್ನೂ ತೋರಿಸಿಕೊಳ್ಳುತ್ತಿದ್ದಾರೆ ಮಿ|| ಲಿಟ್ವಿನಾಫ್, ಸರ ಸ್ಟ್ಯಾಫರ್ಡ್ ಕ್ರಿಪ್ಸ್, ಮಿ|| ಜಾನ್ ಸ್ಟ್ರಾಚಿ—ಮುಂತಾದವರು ಅಪಾಯಕರವಾದ ಪ್ರಭಾವಕ್ಕೆ ಸಿಕ್ಕಿ ಈಗ “ಕಲೆಕ್ಟಿವಿಸ್ಟ್” ಆಗಿದ್ದಾರೆ ಇದನ್ನು ನೋಡಿ ಕನಸರ್‌ವೇಟಿವ್‌ಗಳೂ ಲಿಬರಲ್‌ಗಳೂ, ಐ ಸಿ ಎಸ್ ನವರೂ ಮುಂತಾದವರೆಲ್ಲ “ಹೀಗೆ ಯೋಚಿಸಬಾರದು ಮತ್ತು ಹೀಗೆ ಯೋಚಿಸುವವರ ಜತೆಗೆ ಸೇರಬಾರದು ಇಲ್ಲದಿದ್ದರೆ ತಾವೂ ಕೂಡ ಈ ಅಪಾಯಕರವಾದ ಸಿದ್ಧಾಂತಗಳಿಗೆ ಬಲಿಯಾಗಬಹುದು” ಎಂಬುದನ್ನು ತಿಳಿದುಕೊಳ್ಳಬೇಕು [ಇದನ್ನು ಬರೆದಂದಿನಿಂದ ಈಚೆಗೆ ಲಿಬರಲ್ ಪಾರ್ಟಿಯು ಕೆನಡಾದಲ್ಲಿ ಸರ್ಕಾರವನ್ನು ಹಿಡಿದುಕೊಂಡಿದೆ ಮಿ|| ಕಿಂಗರವರು ಚುನಾವಣೆಗಳಲ್ಲಿ ಗೆದ್ದು ಈಗ ಅಧಿಕಾರಕ್ಕೆ ಬಂದಿದ್ದಾರೆ)

§ ಮೆಲಬೋರ್ನಿನ ‘ಏಜ್’ ಪತ್ರಿಕೆಯು, “ಲಂಕಾಷೈರ್ ತಾನು ಮಾಡಿಕೊಂಡಿರುವ ಬಾಯ್‌ಕಾಟನ್ನು ಬಿಟ್ಟರೆ ಸರಿ ಇಲ್ಲದಿದ್ದರೆ ಅಲ್ಪಸ್ವಲ್ಪ ಉಳಿದಿರುವ ವ್ಯಾಪಾರವನ್ನು ಕೂಡ ಆಸ್ಟ್ರೇಲಿಯ ಬಿಟ್ಟುಬಿಟ್ಟೀತು ಲಂಕಾಷೈರಿಗೆ ತಕ್ಕ ರೀತಿಯಲ್ಲಿ ಈ ಮಾತನ್ನು ಸ್ಫುಟವಾಗಿ ಒತ್ತೊತ್ತಿ ಹೇಳಬೇಕು” ಎಂದು ಬರೆದಿದೆ [೧೯೩೪ನೆ ನವೆಂಬರ್ ೯ರ ‘ ಮ್ಯಾಂಚೆಸ್ಟರ್ ಗಾರ್ಡಿಯನ್ ವಾರಪತ್ರಿಕೆ’ ಯಿಂದ ಉದ್ಧೃತವಾದುದು ]

ಸಮರಗಳು ಹುಟ್ಟಿಕೊಳ್ಳುತ್ತವೆ ಇಂಥ ವಿರೋಧಗಳು ಬಂದಾವು ಎಂದೇ, ಬ್ರಿಟಿಷರು ತಮ್ಮ ಯೋಗಕ್ಷೇಮಗಳನ್ನು ಕಾಪಾಡಿಕೊಳ್ಳಲು ಹಿಂದೂಸ್ಥಾನದಲ್ಲಿ ಸೇಫ್‌ಗಾರ್ಡ್ಸ್ ಎಂಬ ದುರ್ಗಗಳನ್ನು ಕಟ್ಟಿಕೊಂಡಿದ್ದಾರೆ ಹಿಂದೂಸ್ಥಾನಕ್ಕೂ ಬ್ರಿಟನ್ನಿಗೂ ನಡೆದಿರುವ ಈಚೀಚಿನ ವ್ಯಾಪಾರದ ಒಪ್ಪಂದವು ಕೂಡ ಹಿಂದೂಸ್ಥಾನದ ಉದ್ಯೋಗ ಕೈಗಾರಿಕೆಗಳ ಹಿತವನ್ನು ಗಮನಿಸಿಲ್ಲ ಈ ಒಪ್ಪಂದದ ವಿಷಯವು ಬ್ರಿಟಿಷ್ ಕೈಗಾರಿಕೆಗಾರರಿಗೆ ಗೊತ್ತಿದ್ದರೂ, ಇಂಡಿಯದ ವ್ಯಾಪಾರ ಉದ್ಯೋಗ ಮಂಡಲಗಳಿಗೆ ತಿಳಿದಿರಲಿಲ್ಲ ಹೀಗೆ ಗುಟ್ಟಾಗಿ ಆದ ಈ ಒಪ್ಪಂದವನ್ನು ತಿರಸ್ಕರಿಸಿತು ಆದರೂ ಸರ್ಕಾರವು ಇದನ್ನು ಮಾಡಿಕೊಂಡಿತು ಸೇಫ್‌ಗಾರ್ಡ್ಸ್ ಅಭಿಪ್ರಾಯವು ಏನು ? ಅವು ಎತ್ತಕಡೆ ಎಳೆದುಕೊಂಡು ಹೋಗುವುವು ಎಂಬುದಕ್ಕೆ ಇದೊಂದು ಸೂಕ್ಷ್ಮ ನಿದರ್ಶನ ! ಇಂತಹ ಸೇಫ್‌ಗಾರ್ಡ್ಸ್‌ಗಳು ಕೆನಡಾ ಆಸ್ಟ್ರೇಲಿಯಾ ಸೌತ್ ಆಫ್ರಿಕಗಳಲ್ಲಿ ಬಹಳಮಟ್ಟಿಗೆ ಬೇಕು ವ್ಯಾಪಾರ ವಿಷಯಗಳಲ್ಲಿ ಚ್ಯುತಿ ಬಾರದಂತೆ ನೋಡಿಕೊಳ್ಳುವುದಕ್ಕೆ ಮಾತ್ರವಲ್ಲ, ಸಾಮ್ರಾಜ್ಯದ ಯೋಗಕ್ಷೇಮಗಳನ್ನೂ ನೋಡಿಕೊಳ್ಳುವುದಕ್ಕೆ ಡೊಮಿನಿಯನ್‌ಗಳು ಬೇರೊಡೆದು, ಸಾಮ್ರಾಜ್ಯವು ಕೆಡದಂತೆ ನೋಡಿಕೊಳ್ಳುವುದಕ್ಕೆ ಅವು ಬೇಕೇಬೇಕು †

ಸಾಮ್ರಾಜ್ಯವೆಂಬುದು ಒಂದು ಭಾರಿಯ ಸಾಲ ಈ ಸಾಮ್ರಾಜ್ಯವಾದಿ ಸಾಹುಕಾರನು ತನ್ನಿಂದ ಹಣತೆಗೆದುಕೊಂಡಿರುವ ಬಡವಾಯಿ ಸಾಲಗಾರನಮೇಲೆ ಯಾವಾಗಲೂ ತನ್ನ ಮೃತ್ಯು ಹಸ್ತವನ್ನು ಇಟ್ಟುಕೊಂಡಿರಲು, ತನ್ನ ವಿಶೇಷ ಲಾಭಗಳಿಗೂ ಅಧಿಕಾರಕ್ಕೂ ಚ್ಯುತಿಬಾರದಂತೆ ಕಾಪಾಡಿಕೊಳ್ಳಲು, ಬೆಸೆದಿರುವ ಸಾಧನೆಗಳು ಈ ಸೇಫ್‌ಗಾರ್ಡ್ಸ್‌ಗಳು ಎಂದು ಹೇಳುತ್ತಾರೆ ಆದರೂ, ಸೇಫ್‌ಗಾರ್ಡ್ಸ್‌ಗಳು ಭರತಖಂಡದ ಹಿತಕ್ಕಾಗಿಯೇ ಹುಟ್ಟಿದುವು "ಅದರಿಂದಲೇ ಗಾಂಧಿಜಿಯವರೂ ಕಾಂಗ್ರೆಸ್ಸೂ ಈ ಸೇಫ್‌ಗಾರ್ಡ್ಸ್‌ಗಳನ್ನು ಅಂಗೀಕರಿಸಿದ್ದಾರೆ, ೧೯೩೧ ರ ಡೆಲ್ಲಿ ಒಪ್ಪಂದದಲ್ಲಿ ಅವುಗಳು ಅಂಗೀಕೃತವಾಗಿವೆ" ಎಂದು ಸರ್ಕಾರದವರು ಅನೇಕವೇಳೆ ಹೇಳುತ್ತಲೇ ಇರುತ್ತಾರೆ ಇದೇ ಒಂದು ವಿಚಿತ್ರ

† ಸೌತ್ ಆಫ್ರಿಕ ಯೂನಿಯನ್ನಿನ ಡಿಫೆನ್ಸ್ ಮಿನಿಸ್ಟರಾದ ಮಿ|| ಪಿರೋ ಅವರು "ಸಾಮ್ರಾಜ್ಯ ರಕ್ಷಣೆಯಲ್ಲಿ ಈ ಯೂನಿಯನ್ ಭಾಗವಹಿಸುವುದಿಲ್ಲ ಮತ್ತು ಬ್ರಿಟನ್ನು ಯುದ್ಧಕ್ಕೆ ಹೋದರೂ ನಾವು ಸಮುದ್ರದ ಆಚೆನ ಯುದ್ಧಗಳಲ್ಲಿ ಭಾಗವಹಿಸುವುದು ನಮಗೆ ಸಾಧ್ಯವಿಲ್ಲ ಒಂದು ವೇಳೆ ಸರ್ಕಾರವು ದುಡುಕಿ ಸಮುದ್ರದ ಆಚಿನ ಇನ್ನೊಂದು ಯುದ್ಧದಲ್ಲಿ ದಕ್ಷಿಣ ಆಫ್ರಿಕವನ್ನು ಸಿಕ್ಕಿಹಾಕಿದರೆ ಆದರಿಂದ ಬಹಳ ದೊಡ್ಡ ಅನರ್ಥಗಳು ಆಗಬಹುದು ಸಿವಿಲ್ ವಾರ್ ಕೂಡ ಆದೀತು ಅದರಿಂದ ಸಾಮ್ರಾಜ್ಯ ರಕ್ಷಣೆಯ ಸಾಧನಗಳಲ್ಲಿ ಸರಕಾರವು ಭಾಗವಹಿಸುವುದಿಲ್ಲ" ಎಂದು ಹೇಳಿದ್ದಾರೆ ಮುಖ್ಯ ಮಂತ್ರಿಗಳಾದ ಜನರಲ್ ಹರ್ಟ್‌ಜೊಗ್ ಅವರು "ಈ ಪ್ರಕಟನೆಯೇ ಸರಿ ಯೂನಿಯನ್ ಸರ್ಕಾರದ ನೀತಿಯನ್ನು ಇದು ಬಹಳ ಚೆನ್ನಾಗಿ ಪ್ರತಿಬಿಂಬಿಸಿದೆ" ಎಂದು ಅಂಗೀಕರಿಸಿದ್ದಾರೆ

ಒಟ್ಟಾವಾ ಒಪ್ಪಂದವು ಮತ್ತು ವ್ಯಾಪಾರ ವಾಣಿಜ್ಯಗಳ ಸೇಫ್‌ಗಾರ್ಡ್ಸ್‌ಗಳು ಅಷ್ಟೇನೂ ದೊಡ್ಡ ವಿಷಯಗಳಲ್ಲ* ದೇಶದ ಐಶ್ವರ್ಯವನ್ನು ಕೊಳ್ಳೆಹೊಡೆಯುವುದಕ್ಕೆ ಅಂದಿನಿಂದ ಇಂದಿನವರೆಗೂ ಸಾಧಕವಾಗಿರುವ, ಮತ್ತು ಭರತಖಂಡದ ಜನಗಳ ಮೇಲೆ ರಾಜಕೀಯ ಮತ್ತು ಆರ್ಥಿಕ ಅಧಿಕಾರಗಳನ್ನು ಚಲಾಯಿಸುವ, ಪ್ರತಿಯೊಂದು ಕಟ್ಟನ್ನೂ ಕಾಪಾಡಿಕೊಳ್ಳುವುದಕ್ಕೆ ಅನೇಕ ನಿಬಂಧನೆಗಳನ್ನು ಮಾಡಿಟ್ಟಿರುವುದು ಬಹಳ ಮುಖ್ಯವಾದುದು ಈ ನಿಬಂಧನೆಗಳು ಈ ಸೇಫ್‌ಗಾರ್ಡ್ಸ್‌ಗಳು ಇರುವ ತನಕ ಎತ್ತ ಕಡೆಯೂ ಹೇಗೂ ಮುಂದುವರಿಯುವಂತಿಲ್ಲ ಮತ್ತೆ ಇದನ್ನು ಬದಲಾಯಿಸುವುದಕ್ಕೆ ಶಾಸನಬದ್ಧವಾಗಿ ಯಾವ ಪ್ರಯತ್ನವು ನಡೆಯುವುದಕ್ಕೂ ಸಾಧ್ಯವಿಲ್ಲ ಹಾಗೆ ಮಾಡುವ ಪ್ರಯತ್ನಗಳೆಲ್ಲವೂ ಸೇಫ್‌ಗಾರ್ಡ್ಸ್ ಎಂಬ ಭದ್ರವಾದ ಗೋಡೆಗೆ ತಲೆಯನ್ನು ಚಚ್ಚಿಕೊಂಡಂತಾಗುವುದು ಹೀಗಾಗಿ, ಶಾಸನಬದ್ಧವಾಗಿ ಏನುಮಾಡುವುದಕ್ಕೂ ಸಾಧ್ಯವಿಲ್ಲ ಬದಲಾವಣೆಯಾಗಲೇಬೇಕಾದರೆ ದಾರಿಯೂ ಬೇರೆಯೇ ಆಗಬೇಕು ಎಂಬುದು ಬರಬರುತ್ತಾ ಸ್ಪಷ್ಟವಾಗುವುದು ಸೋಷಿಯಲಿಸಂ ಅಥವಾ ಸಾಮ್ಯವಾದದ ಹಾದಿಗೆ ಬೇಕೆಂದು ಮುಳ್ಳು ಎಳೆದಿದೆ ಹೊಣೆಗಾರಿಕೆಯ ಬಹುಭಾಗವನ್ನು ಇಲ್ಲಿಂದ ಅಲ್ಲಿಗೆ ಬದಲಾಯಿಸಿದಂತೆ ತೋರುವಂತೆ ಮಾಡಿದೆ (ಅದೂ ಹೋಗಿರುವುದು 'ಯೋಗ್ಯ'ರ ಕೈಗೆ) ಆದರೆ ಅಧಿಕಾರ ಅಥವಾ ಯೋಗ್ಯವಾದ ಏನಾದರೊಂದನ್ನು ಮಾಡುವ ಸಾಮರ್ಥ್ಯಗಳನ್ನು ಮಾತ್ರ ಎಳ್ಳಷ್ಟೂ ಕೊಟ್ಟಿಲ್ಲ. ಅಧಿಕಾರವಿರುವುದು ಬ್ರಿಟನ್ನಿನಲ್ಲಿ ಆದರೆ ಹೊಣೆಗಾರಿಕೆ ಮಾತ್ರ ಬ್ರಿಟನ್ನಿಗೆ ಇಲ್ಲ. ಆ ಅಧಿಕಾರವರ್ಗದ ಅಪಾರವಾದ ಅಧಿಕಾರವನ್ನು ಮರೆಮಾಡುವ ಪ್ರಯತ್ನವಿಷ್ಟೂ ನಡೆದಿಲ್ಲ "ಈಗ ಪರಿಸ್ಥಿತಿಗಳು ಕ್ಷಣೇ ಕ್ಷಣೇ ಬದಲಾಯಿಸುತ್ತಿವೆ. ಇಂತಹ ಸ್ಥಿತಿಯಲ್ಲಿ ಸರ್ಕಾರದ ಪದ್ಧತಿಗಳು ಆದಷ್ಟು ಸಡಿಲವಾಗಿರಬೇಕು ಹಾಗಿಲ್ಲದಿದ್ದರೆ ಯತ್ನವಿಲ್ಲ" ಎಂದು ಎಲ್ಲರಿಗೂ ಗೊತ್ತಿದೆ ಈಗ ತಟ್ಟನೆ ಕೆಲಸಮಾಡಬೇಕು, ಕೆಲಸಮಾಡುವ ಶಕ್ತಿಯೂ ಬೇಕು ಆದರಿಂದ ಈಗ ಕೆಲವು ಪಾಶ್ಚಾತ್ಯದೇಶಗಳಲ್ಲಿರುವ ಪಾರ್ಲಿಮೆಂಟರಿ ಪ್ರಭುತ್ವವೂ ಈ ಆಧುನಿಕ ಪ್ರಪಂಚಕ್ಕೆ ಬೇಕಾದ ರೀತಿಯಲ್ಲಿ ರಾಜ್ಯಭಾರವನ್ನು ವಹಿಸಬಲ್ಲುದೇ ಎಂದು ಸಂದೇಹವು ತೋರುತ್ತಿದೆ. ಆದರೆ ಆ

---

* ಲಂಡನ್ನಿನ "ಎಕಾನಾಮಿಸ್ಟ್," ಹೀಗೆ ಹೇಳಿದೆ "ಬ್ರಿಟಿಷರ ಆಳುವಿಕೆಯಿಂದ ಉಂಟಾಗುವ ಉಪಕಾರಗಳಲ್ಲಿ ಪ್ರಪಂಚದ ಅನೇಕಾನೇಕ ಕಡೆಗಳಲ್ಲಿ ನೇಟಿವ್‌ಗಳು ಲ್ಯಾಂಕಷೈರಿನಿಂದಲೇ ಬಟ್ಟೆಗಳನ್ನು ಹೆಚ್ಚು ದುಡ್ಡು ಕೊಟ್ಟು ಕೊಂಡುಕೊಳ್ಳಬೇಕೆಂಬ ಒಂದು ಹಕ್ಕು ಜನಗಳಿಗೆ ದೊರೆಯಬಹುದು ಆದರೆ ಈ ಹಕ್ಕು ಎಷ್ಟು ನ್ಯಾಯವೋ ಗೊತ್ತಿಲ್ಲ ಈ ಹಕ್ಕನ್ನು ಪ್ರಪಂಚದ ನಾನಾ ಭಾಗಗಳಲ್ಲಿ 'ನೇಟಿವ್' ಜನಗಳ ಮೇಲೆ ನಾವು ಬಲವಂತವಾಗಿ ಹೊರಿಸಬೇಕಾದ ಕಾಲವೂ ಈ ಸದ್ಯದಲ್ಲಿಯೇ ಬರಬಹುದು" ಇದಕ್ಕೆ ಸಿಲೋನ್ ಅತ್ಯುತ್ತಮ ನಿದರ್ಶನ.

ಪ್ರಶ್ನೆಯು ಇಲ್ಲಿಲ್ಲ ಇಲ್ಲಿ ಯಾವ ಚಳವಳಿಯೂ ತಲೆಯೆತ್ತದಂತೆ ಬೇಕಾದಷ್ಟು ನಿಗಳ ನಿಬಂಧನೆಗಳನ್ನು ಬಿಗಿದು ನಮ್ಮನ್ನು ಕೋಣೆಯೊಳಗೆ ಕೂಡಿ ಬಾಗಿಲುಗಳನ್ನು ಭದ್ರವಾಗಿ ಹಾಕಿಕೊಂಡು ಬೀಗ ಮುದ್ರೆಗಳನ್ನು ಮಾಡಿಬಿಟ್ಟಿದ್ದಾರೆ ನಮಗೆ ಒಂದು ಮೋಟಾರ್ ಕೊಟ್ಟಿದ್ದಾರೆ ಅದಕ್ಕೆ ಎಲ್ಲೆಲ್ಲೂ ಬ್ರೇಕುಗಳೇ ಇಂಜಿನ್ ಮಾತ್ರ ಇಲ್ಲ ಈಗ ಹಿಂದೂಸ್ಥಾನಕ್ಕೆ ಕೊಟ್ಟಿರುವ ಸರ್ಕಾರದ ಪದ್ಧತಿಯನ್ನು ರಚಿಸಿದವರಿಗೆ 'ಮಾರ್ಷಲ್ ಲಾ' ಮನೋಭಾವವು ಇರಬೇಕು ತುಳಿದು ಆಳಬೇಕು ಎನ್ನುವವನಿಗೆ ಮಾರ್ಷಲ್ ಲಾ ಇಲ್ಲದಿದ್ದರೆ ಅಧಃಪತನವೇ ಗತಿ

ಬ್ರಿಟನ್ ಹಿಂದೂಸ್ಥಾನಕ್ಕೆ ಕೊಡಬೇಕೆಂದಿರುವ ಈ ವರದಿಂದ ನಮಗೆ ಲಭಿಸುವ ಸ್ವಾತಂತ್ರ್ಯವೆಷ್ಟೆಂಬುದನ್ನು ಈ ದೇಶದಲ್ಲಿರುವ ಅತಿಮಂದ ಪಕ್ಷದವರು, ರಾಜಕೀಯವಾಗಿ ಹಿಂದುಳಿದವರು ಅನ್ನಿಸಿಕೊಂಡಿರುವವರು ಕೂಡ ಇವನ್ನು ಬಹಳ ಅಸಮರ್ಪಕ ಎಂದು ತಿರಸ್ಕರಿಸಿರುವುದರಿಂದಲೇ ಅರಿಯಬಹುದು ಸರ್ಕಾರವು ಒಳ್ಳೆಯದೇ ಕೆಟ್ಟದೇ ಎಂಬ ಯೋಚನೆಯೇ ಇಲ್ಲದೆ ಹೊಗಳುತ್ತಿದ್ದ ಭಕ್ತರು ಕೂಡ ಈಗ ಇದನ್ನು ತಮ್ಮ ಸ್ವಭಾವಕ್ಕೆ ಅನುಗುಣವಾಗಿ ಹೊಗಳುತ್ತಿದ್ದರೂ, ಇದನ್ನು ಬಯ್ಯದಿದ್ದರೆ ಯತ್ನವಿಲ್ಲ ಎಂದುಕೊಂಡು ಬಯ್ಯಲಾರಂಭಿಸಿದ್ದಾರ ಇತರರಂತೂ ಪ್ರಕಟವಾಗಿ ಸ್ಪಷ್ಟವಾಗಿ ತಿರಸ್ಕರಿಸಿದ್ದಾರೆ

"ಹಿಂದೂಸ್ಥಾನವನ್ನು ಬ್ರಿಟಿಷರ ಆಳುವಿಕೆಗೆ ದೈವವೇ ವಹಿಸಿಕೊಟ್ಟಿತ್ತು ಅದು ನಮ್ಮ ಅದೃಷ್ಟ" ಎಂದು ಇದುವರೆಗೆ ದೃಢವಾಗಿ ನಂಬಿದ್ದ ಮಂದ ಪಕ್ಷದವರು ಕೂಡ ಈಚೀಚೆಗೆ ತಾವು ಎಂದುಕೊಂಡಿದ್ದುದು ಸರಿಯೇ ಎಂದು ಸಂದೇಹಪಡುವಂತಾಗಿದೆ ಹೀಗಾಗಿರುವುದು ಈ ರಾಜಕೀಯ ಸಲಹೆಗಳ ಪರಿಣಾಮ ಅವರು ಮೊದಲು ಅವುಗಳನ್ನು ಬಲವಾಗಿ ಖಂಡಿಸಿದ್ದರು ಆದರೆ ಸತ್ಯವನ್ನು ಹಿಡಿಯುವ ಅಭ್ಯಾಸವಿಲ್ಲ ಮತ್ತು ಒಳ್ಳೆಯ ಮಾತುಗಳು, 'ವಿಶ್ವಾಸಗಳು,'—ಇವುಗಳಿಗೆ ಸೋತ ಸ್ವಭಾವ ಇದರಿಂದ ಇವರು ರಿಪೋರ್ಟಿನಲ್ಲಾಗಲೀ, ಬಿಲ್ಲಿನಲ್ಲಾಗಲೀ ಡೊಮಿನಿಯನ್ ಸ್ಟೇಟಸ್ ಎಂಬ ಪದ ಇಲ್ಲವಲ್ಲಾ ಎಂದು ಬಹಳ ವ್ಯಥೆಪಡುವುದರಲ್ಲೇ ಎಲ್ಲವನ್ನೂ ಕೊನೆಗಾಣಿಸಿದರು ಅದಕ್ಕಾಗಿ ಒಂದು ದೊಡ್ಡ ಆರ್ಭಟವೇನೋ ಆಯಿತು ಆದರ ಮೇಲೆ ಸರ್ ಸ್ಯಾಮ್ಯುಯಲ್ ಹೋರರು ಏನೋ ಒಂದಿಷ್ಟು ಹೇಳಿದರು ಇನ್ನು ಇವರಿಗೆ ತೃಪ್ತಿ ಆಗಿಹೋಯಿತು ಆ ಡೊಮಿನಿಯನ್ ಸ್ಟೇಟಸ್ ಎಂಬುದೊಂದು ಛಾಯಾ ಮಾತ್ರ ಅದು ಇನ್ನೆಷ್ಟು ಸಹಸ್ರ ವರ್ಷಗಳಿಗೆ ಮೂಡುವುದೋ ಅದೂ ಗೊತ್ತಿಲ್ಲ ಅದು ನಾವು ಹೋಗದೇ ಇದ್ದ ಊರಿನಲ್ಲಿ ಬಹುಶಃ ಇದ್ದೀತು ಆದರೂ ಚಿಂತೆಯಿಲ್ಲ ನಾವು ಅದರ ವಿಷಯದಲ್ಲಿ ಅದೆಷ್ಟೋ ಸವಿಗನಸುಗಳನ್ನು ಕಂಡು, "ಆಹಾ, ಇದೆಷ್ಟು ಸೊಗಸಾದುದು" ಎಂದುಕೊಂಡು, ಎಷ್ಟೋ ಒಳ್ಳೆಯ ಮಾತುಗಳನ್ನಾಡಿಕೊಂಡು ಸುಖಪಡಬಹುದು. ಸರ್ ತೇಜ್‌ಬಹದ್ದೂರ್ ಸಪ್ರೂ ಅವರಿಗೆ ಬ್ರಿಟಿಷ್

ಪಾರ್ಲಿಮೆಂಟ್ ಮೇಲೂ ಬ್ರಿಟಿಷ್ ಜನಾಂಗದಲ್ಲಿಯೂ ಸ್ವಲ್ಪ ಅನುಮಾನವು ಹುಟ್ಟಿತೇನೋ ? ಬ್ರಿಟಿಷ್ ರಾಜರ ಮರಹೊಕ್ಕರು ಅವರು ಒಳ್ಳೆಯ ಪ್ರಸಿದ್ಧ ಲಾಯರಾಗಿದ್ದರೂ ಹೊಸದೊಂದು ಸಿದ್ಧಾಂತವನ್ನು ಪ್ರಪಂಚದ ಮುಂದಿಟ್ಟಿದ್ದಾರೆ. "ಬ್ರಿಟಿಷ್ ಪಾರ್ಲಿಮೆಂಟ್ ಅಥವಾ ಬ್ರಿಟಿಷ್ ಜನಾಂಗವು ಹಿಂದೂಸ್ತಾನದ ಹಿತಕ್ಕಾಗಿ ಏನು ಮಾಡಲಿ, ಏನು ಬಿಡಲಿ, ಹಿಂದೂಸ್ತಾನದ ಪ್ರಜೆಗಳ ಹಿತವನ್ನೂ, ಹಿಂದೂಸ್ಥಾನದ ಶಾಂತಿ ಮತ್ತು ಯೋಗಕ್ಷೇಮಗಳನ್ನೂ ನೋಡಿಕೊಳ್ಳುವುದಕ್ಕೆ ಅವರಲ್ಲರ ಮೇಲೆ ರಾಜಸತ್ತೆಯಿದೆ" ಎಂದಿದ್ದಾರೆ *

ಈ ಸಿದ್ಧಾಂತವು ಬಹಳ ಚೆನ್ನಾಗಿದೆ ಈ ಸಿದ್ಧಾಂತ ಒಂದಿದ್ದರೆ ಸಾಕು, ರಾಜ್ಯಭಾರಕ್ರಮ, ಕಟ್ಟುಕಾಯಿದೆಗಳು, ರಾಜಕೀಯ ಸಾಮಾಜಿಕ ಬದಲಾವಣೆಗಳು— ಇವುಗಳ ವಿಚಾರವಾಗಿ ನಾವೇನೂ ಯೋಚಿಸಲೇಬೇಕಿಲ್ಲ

ಆದರೆ ಇದಿಷ್ಟುಮಾತ್ರದಿಂದ ಮಂದಪಕ್ಷದವರು ಈ ಹೊಸ ಕಾನೂನನ್ನೂ, ಪದ್ಧತಿಯನ್ನೂ ವಿರೋಧಿಸದೇ ಬಿಟ್ಟುಬಿಟ್ಟಿದ್ದಾರೆಂದು ಹೇಳುವುದು ಸರಿಯಲ್ಲ ಅವರಲ್ಲಿ ಅನೇಕರು, "ಈಗಿರುವ ಸ್ಥಿತಿಯು ಎಷ್ಟೋ ಕೆಟ್ಟದಾಗಿದ್ದರೂ ಮುಂದೆ ಬರುವ ಸ್ಥಿತಿಗಿಂತ ಇದೇ ಉತ್ತಮ, ಆದ್ದರಿಂದ ನಮಗೆ ಬೇಡದ ಈ ಭೂತವನ್ನು ನಮ್ಮ ತಲೆಯಮೇಲೆ ಹೇರಬೇಡಿ" ಎಂದು ಸ್ಪಷ್ಟವಾಗಿ ಹೇಳಿದ್ದಾರೆ ಆದರ ಅವರು ಒಪ್ಪಿಕೊಂಡು ಅನುಸರಿಸುತ್ತಿರುವ ಧೋರಣವು ಅವರನ್ನು ಇನ್ನುಮುಂದಕ್ಕೆ ಹೋಗಗೊಡುವುದಿಲ್ಲ ಅವರು ಏನೇ ಆಗಲಿ ಬರಿಯಮಾತಿನಲ್ಲಿ ಮುಗಿಸುವವರು ಬೇಕಾದರೆ ಒಂದು ಸಲವಲ್ಲ ಹತ್ತು ಸಲ ಹೇಳುವರು ಅವರ ಧೋರಣವೂ ಕೂಡ ಆ ಹಿಂದಿನ ಪುರಾತನ ಗಾದಯ ಅಭಿನವರೂಪವೆನ್ನಬಹುದು ಮೊದಲನಯ ಸಲ ಸಿಕ್ಕದಿದ್ದರೆ ಇನ್ನೊಂದು ಸಲ ಕೂಗು, ಎಂದಂತ ಆ ಹಿಂದಿನ ಗಾದ

ಈ ಮಂದಪಕ್ಷದ ಮುಖಂಡರೂ ಕೆಲವರು ಕಾಂಗ್ರೆಸ್ಸಿನವರೂ ಇನ್ನೂ ಎಷ್ಟೋ ಜನರೂ ''ಬ್ರಿಟನ್ನಿನಲ್ಲಿ ಕೂಲಿಗಾರರ ಪಕ್ಷವು ವಿಜಯಿಯಾಗುವುದು, ಅದರ ಕೈಗೆ ಸರಕಾರವು ಬಂದುಬಿಡುವುದು, ಆಗ ಏನೋ ಆಗುವುದು'' ಎಂದು ಏನೋ ಒಂದು ಆಶೆಯಿಟ್ಟುಕೊಂಡಿದ್ದಾರ ಬ್ರಿಟನ್ನಿನಲ್ಲಿ ಮುಂದುವರಿದ ಕಲವು ಗುಂಪುಗಳಿವೆ ಅವುಗಳ ಸಹಾಯವನ್ನು ಪಡೆದು ಹಿಂದೂಸ್ತಾನವೂ ಮುಂದ ಮುಂದ ಹೋಗಲು ಯಾತಕ್ಕೆ ಪ್ರಯತ್ನಪಡಬಾರದು ? ಕೂಲಿಗಾರರ ಪಕ್ಷದ ಸರಕಾರವು ಬಂದುದರಿಂದ ಲಾಭವನ್ನು ಪಡೆಯುವುದಕ್ಕೆ ಏಕೆ ಪ್ರಯತ್ನಪಡಬಾರದು ? ಅದು ಬಿಟ್ಟು, ಪ್ರಯತ್ನಗಳನ್ನೆಲ್ಲಾ ಮೂಟೆಕಟ್ಟಿ ಎಸೆದು, ಇಂಗ್ಲೆಂಡಿನಲ್ಲಿ ಆಗುವ ಬದಲಾವಣೆಯ ಮೇಲೆ ನಮ್ಮ ಅದೃಷ್ಟವು ಕುಳಿತಿದೆ ಎಂದುಕೊಂಡು ಅದೃಷ್ಟದ ಹಾದಿಯನ್ನು ಕಾಯ್ದು ಕುಳಿ

* ಜನವರಿ ೨೯, ೧೯೩೫ ರಲ್ಲಿ ಲಕ್ನೋದಲ್ಲಿ ಪಬ್ಲಿಕ್ ಮಾಟಂಗಿನಲ್ಲಿ ಮಾಡಿದ ಭಾಷಣ

ತಿರುವುದು ನಮಗೆ ಯೋಗ್ಯವಲ್ಲ, ನಮ್ಮ ಜನಾಂಗದ ಗೌರವಕ್ಕೆ ತಕ್ಕುದಲ್ಲ ಗೌರವದ ಮಾತು ಇರಲಿ, ಅದು ಬುದ್ಧಿವಂತಿಕೆಯೇನು? ಬ್ರಿಟಿಷ್ ಕೂಲಿಗಾರರ ಪಕ್ಷವು ನಮಗೆ ಏನೋ ಮಾಡಿಬಿಡುವುದು ಎಂದು ನಾವೇಕೆ ನಿರೀಕ್ಷಿಸಬೇಕು? ಈ ವೇಳೆಗಾಗಲೇ ಎರಡು ಸಲ ಕೂಲಿಗಾರರ ಪಕ್ಷದ ಸರಕಾರವಾಯಿತು ಅವರು ಹಿಂದೂಸ್ಥಾನಕ್ಕೆ ಏನೇನು ಮಾಡಿದ್ದಾರೆಂಬುದನ್ನು ನಾವು ಮರೆಯುವಂತಿಲ್ಲ ಮಿ|| ರ್‍ಯಾಂಸೇ ಮ್ಯಾಕ್‌ಡೊನಾಲ್ಡ್ ಅವರು ಕೂಲಿಗಾರರ ಪಕ್ಷವನ್ನು ಬಿಟ್ಟುಬಿಟ್ಟರು ಹೋಗಲಿ, ಅವರ ಹಿಂದಿನ ಜೊತೆಗಾರರಲ್ಲೇನಾದರೂ ಬದಲಾವಣೆ ಆಗಿದೆಯೇನು? ಅಕ್ಟೋಬರ್ ೧೯೩೪ ರ ಸೌತ್ ಪೋರ್ಟ್ ಲೇಬರ್ ಪಾರ್ಟಿ ಕಾನ್ಫರೆನ್ಸಿನಲ್ಲಿ ಮಿ|| ವಿ ಕೆ ಕೃಷ್ಣ ಮೇನನ್‌ರವರು "ಹಿಂದೂಸ್ಥಾನದಲ್ಲಿ ಸಂಪೂರ್ಣ ಸ್ವರಾಜ್ಯವನ್ನು ಸ್ಥಾಪಿಸುವುದಕ್ಕೆ, ತಮಗೆ ತೋರಿದಂತೆ ತಾವು ಮಾಡಿಕೊಳ್ಳುವುದಕ್ಕೆ ಅನುಕೂಲವಿರತಕ್ಕುದು ಎಂಬ ನೀತಿಯನ್ನು ಅಂಗೀಕರಿಸಲೇಬೇಕೆಂಬುದು ಈ ಸಭೆಯ ಸಂಪೂರ್ಣ ವಿಶ್ವಾಸ" ಎಂದು ಒಂದು ಠರಾವನ್ನು ತಂದರು ಮಿ|| ಆರ್ಥರ್ ಹೆಂಡರ್‌ಸನ್ ಅವರು ಈ ಠರಾವನ್ನು ವಾಪಸು ತೆಗೆದುಕೊಳ್ಳಿ ಎಂದರು ಅಷ್ಟೇ ಅಲ್ಲ "ಹಿಂದೂಸ್ಥಾನಕ್ಕೆ ತನ್ನ ಪಾಡಿಗೆ ತಾನು ಎಂಬ ನೀತಿಯನ್ನು ಅಂಗೀಕರಿಸುವುದಕ್ಕೂ ಕೂಡ ಕೂಲಿಗಾರರ ಪಕ್ಷದ ಅಧಿಕಾರಿಗಳು ಸಿದ್ಧವಾಗಿಲ್ಲ" ಎಂದು ಸ್ಪಷ್ಟವಾಗಿ ಹೇಳಿಬಿಟ್ಟರು "ಸಾಧ್ಯವಾದರೆ ಹಿಂದೂಸ್ಥಾನದ ಜನಾಂಗದ ಎಲ್ಲಾ ಗುಂಪುಗಳನ್ನೂ ಸಲಹೆ ಕೇಳುವುದೆಂದು ಸ್ಪಷ್ಟವಾಗಿ ಹೇಳಿದ್ದೇವೆ ಇನ್ನು ಇದಕ್ಕಿಂತಲೂ ಏನು ಬೇಕು?" ಎಂದರು ಹಿಂದಿನ ಕೂಲಿಗಾರರ ಪಕ್ಷದ ಸರಕಾರ ಮತ್ತು ನ್ಯಾಷನಲ್ ಸರಕಾರ ಎರಡೂ ಹೇಳಿದುದು ಇಷ್ಟೆ ಇದರ ಫಲವಾಗಿಯೇ ರೌಂಡ್ ಟೇಬಲ್ ಕಾನ್ಫರೆನ್ಸ್, ಜಾಯಿಂಟ್ ಕಮಿಟಿ ರಿಪೋರ್ಟ್, ಇಂಡಿಯಾ ಆಕ್ಟ್ ಇವುಗಳೆಲ್ಲವೂ ಬಂದಿರುವುದು ಇದನ್ನು ನೋಡಿ ಎಲ್ಲರಿಗೂ ತೃಪ್ತಿಯಾಗಲೇಬೇಕು

ಸಾಮ್ರಾಜ್ಯ ವಿಷಯಕವಾದ ಧೋರಣದ ಪ್ರಸಕ್ತಿ ಬಂದಾಗ ಇಂಗ್ಲೆಂಡಿನಲ್ಲಿ ಕೂಲಿಗಾರ ಪಕ್ಷವಾಗಲೀ ಟೋರಿ ಪಕ್ಷವಾಗಲೀ ಎರಡೂ ಒಂದೇ ರೀತಿಯಾಗಿ ವರ್ತಿಸುವುವು ಎಂಬುದು ಸ್ಪಷ್ಟ ಕೂಲಿಗಾರರ ಪಕ್ಷದವರು ಟೋರಿಗಳಿಗಿಂತ ಬಹಳ ಮುಂದುವರಿದಿದ್ದರೂ, ಆ ಪಕ್ಷದ ಮುಂದಾಳುಗಳು ಮಾತ್ರ ಇನ್ನೂ ಹಿಂದೆಯೇ ಉಳಿದಿದ್ದಾರೆ. ಲೇಬರ್ ಪಕ್ಷದಲ್ಲಿ ತೀವ್ರವಾದಿಗಳು ಮುಂದೆ ನುಗ್ಗಬಹುದು ಈಗ ಬದಲಾವಣೆಗಳು ಬಲು ಬೇಗ ಬೇಗ ಆಗುತ್ತಿರುವುದರಿಂದ ಹೀಗೆ ಆಗುವುದು ಸಾಧ್ಯ ಆದರೆ, ಅನುವರೆಗೂ ಆಗುವುದೋ ಹೋಗುವುದೋ ಗೊತ್ತಿಲ್ಲದ ಆ ಬದಲಾವಣೆಯು ಇನ್ನೆಲ್ಲಿಯೂ ಆಗುವವರೆಗೂ ದೇಶದ ಮತ್ತು ಸಮಾಜದ ಚಳವಳಿಗಳೆಲ್ಲ ಕೈಕಾಲು ಮುದುರಿಕೊಂಡು ಮಲಗಿರಬೇಕೇನು?

ನಮ್ಮ ಮುಂದಕ್ಷದವರು ಬ್ರಿಟಿಷ್ ಲೇಬರ್ ಪಾರ್ಟಿಯವರ ಮೇಲೆ ಆಶೆಯಿಟ್ಟುಕೊಂಡು ಕುಳಿತಿದ್ದರೆ ಇನ್ನೂ ಒಂದು ವಿಚಿತ್ರವಾಗಬಹುದು,

ಒಂದು ವೇಳೆ, ಹಠಾತ್ತಾಗಿ, ಈ ಲೇಬರ್ ಪಕ್ಷದ ತೀವ್ರವಾದಿಗಳ ಕೈ ಮೇಲಾಗಿ ಇಂಗ್ಲೆಂಡಿನಲ್ಲಿ ಸೋಷಿಯಲಿಸ್ಟಿಕ್ ಕಾರ್ಯಕ್ರಮವನ್ನು ಆರಂಭಿಸಿಬಿಟ್ಟಿತೆನ್ನೋಣ. ಆಗ ಹಿಂದೂಸ್ಥಾನದಲ್ಲಿ ಇಲ್ಲಿನ ಮಂದಪಕ್ಷದವರ ಮೇಲೆ ಅದರ ಪರಿಣಾಮವೇನಾಗುವುದು ? ಅದರಲ್ಲಿ ಅನೇಕರು ಸಾಮಾಜಿಕ ವ್ಯವಹಾರದಲ್ಲಿ ಉಗ್ರತರದ ಸಂಪ್ರದಾಯ ಶರಣರು. ಲೇಬರ್ ಪಕ್ಷದ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳು ಅವರಿಗೆ ಸರಿ ಬೀಳುವುದಿಲ್ಲ. ಆ ಬದಲಾವಣೆಗಳು ಇಲ್ಲಿಗೆ ಬಂದಾವು ಎಂದು ಅವರಿಗೆ ಬಲು ಹೆದರಿಕೆ. ಆಗ ಬಹುಶಃ ಅವರಿಗೆ ಬ್ರಿಟಿಷ್ ಸಂಬಂಧವು ತಪ್ಪಿಹೋಗುವುದೇ ಉತ್ತಮವೆನ್ನಿಸಬಹುದು. ಈ ಸಂಬಂಧವಿದ್ದರೆ, ಈ ದೇಶದಲ್ಲಿ ಎಲ್ಲವೂ ತಲೆಕೆಳಗಾಗುವುದು ಎನ್ನಿಸಿಬಿಡಬಹುದು. ಆಗ ಜನಾಂಗದ ಸ್ವಾತಂತ್ರ್ಯವು ಬೇಕು. ಬ್ರಿಟಿಷ್ ಸಂಬಂಧವು ಬೇಡ ಎನ್ನುತ್ತಿರುವ ನನ್ನಂಥವರಿಗೆ ಮನಸ್ಸು ಬದಲಾಯಿಸಿ, ಸೋಷಿಯಲಿಸ್ಟ್ ಬ್ರಿಟನ್ನಿನೊಡನೆ ಸಂಬಂಧವೂ ಇನ್ನೂ ಬೆಳೆಯಲಿ, ಎನ್ನಿಸಬಹುದು. ಬ್ರಿಟಿಷರೊಡನೆ ವ್ಯವಹಾರ ಬೇಡವೆನ್ನುವವರು ಯಾರೂ ನಮ್ಮಲ್ಲಿಲ್ಲ. ನಮಗೆ ಬೇಡವಾಗಿರುವುದು ಅವರ ಸಾಮ್ರಾಜ್ಯವಾದ. ಅದನ್ನು ಅವರು ಬಿಟ್ಟರೆಂದರೆ, ನಾವು ಅವರೊಡನೆ ಸಹಕರಿಸಲು ಸಿದ್ಧವಾಗಿದ್ದೇವೆ. ಆಗ ಮಂದಪಕ್ಷದವರ ಗತಿಯೇನು ? ಬಹುಶಃ ಅದೂ ವಿಧಿಯ ಅಜ್ಞೇಯ ಲೀಲೆಗಳಲ್ಲಿ, ಒಂದು. ಆ ಸ್ಥಿತಿಯನ್ನೂ ಒಪ್ಪಿಕೊಳ್ಳುವರೇನೋ ?

ರೌಂಡ್ ಟೇಬಲ್ ಕಾನ್ಫರೆನ್ಸ್ ನಡೆದು ಫೆಡರೇಷನ್ ಬರಬೇಕೆಂದುದರ ಮೊದಲನೆಯ ಸ್ಪಷ್ಟ ಫಲವಾಗಿ, ದೇಶೀಯ ರಾಜರನ್ನು ಮುಂದಕ್ಕೆ ತಳ್ಳಿದುದು. ಟೋರೀ ಅಗ್ನಿಭಕ್ಷಕರು ಅವರಲ್ಲಿ ವಿಶ್ವಾಸವಿಟ್ಟು, ಅವರ ಸ್ವಾತಂತ್ರ್ಯವನ್ನು ರಕ್ಷಿಸಬೇಕೆಂದುದರ ಫಲವಾಗಿ ಅವರಿಗೆ ಹೊಸಜೀವ ಬಂತು. ಇದಕ್ಕೆ ಮುಂಚೆ ಬ್ರಿಟಿಷ್ ರೆಸಿಡೆಂಟರು ಏನಾದರೂ ಹೇಳಿದರೆ, ಅವರಿಗೆ ಪ್ರತಿಯಾಡಲು ಧೈರ್ಯವಿರಲಿಲ್ಲ. ಹಿಂದೂಸ್ತಾನದ ಸರಕಾರವು ಈ ಮಹಾರಾಜರು ಅನೇಕರೊಡನೆ ತಿರಸ್ಕಾರದಿಂದ ಸಹ ವರ್ತಿಸುತ್ತಿತ್ತು. ಅವರ ರಾಜ್ಯದ ಒಳ ಆಡಳಿತಗಳಲ್ಲಿ ಕೈಹಾಕುತ್ತಲೇ ಇತ್ತು ಮತ್ತು ಹಾಗೆ ಕೈಹಾಕುವುದು ಅತ್ಯವಶ್ಯವಾಗಿಯೂ ಇದ್ದಿತು. ಈಗಲೂ ಈ ದೇಶೀಯ ರಾಜರ ರಾಜ್ಯಗಳನ್ನು ಆಳುತ್ತಲಿರುವವರು, ಬ್ರಿಟಿಷ್ ಸರಕಾರವು ಕಳುಹಿಸಿಕೊಟ್ಟಿರುವ ಬ್ರಿಟಿಷ್ ಅಧಿಕಾರಿಗಳೇ ! ಆದರೂ ಮಿ|| ಚರ್ಚಿಲ್ಲರೂ ಲಾರ್ಡ್ ರೋದರ್ ಮಿರ್ ಅವರೂ ನಡೆಸಿದ ಚಳವಳಿಯು ಹಿಂದೂಸ್ತಾನ ಸರಕಾರವನ್ನು ಕೊಂಚ ಹೆದರಿಸಿತು. ಈಗ ಆ ಸರಕಾರವು ಈ ರಾಜರ ವ್ಯವಹಾರಗಳಲ್ಲಿ ಕೈಹಾಕಲು ಕೊಂಚ ಹಿಂದೆಗೆಯುತ್ತದೆ. ಈಗ ಈ ರಾಜರೂ ಕೊಂಚ ದರ್ಪದಿಂದ ಮಾತನಾಡಲು ಆರಂಭಿಸಿದ್ದಾರೆ.

ಹಿಂದೂಸ್ಥಾನದ ರಾಜಕೀಯ ರಂಗಭೂಮಿಯಲ್ಲಿ ನಡೆಯುತ್ತಿರುವ ಈ ನಾಟಕ ದೃಶ್ಯವನ್ನು ನೋಡಿ ಅರ್ಥಮಾಡಿಕೊಳ್ಳಲು ಪ್ರಯತ್ನಪಟ್ಟಿರುವ ನನಗೆ ಇದೆಲ್ಲವೂ

ಅಸತ್ಯ, ಸತ್ಯವೆಲ್ಲ ಎನ್ನಿಸುತ್ತದೆ ಹಿಂದೂಸ್ಥಾನದಲ್ಲಿರುವ ಪರಿಸ್ಥಿತಿಯನ್ನು ನೋಡಿ ಬಹು ದುಃಖವಾಗುತ್ತದೆ ಇಲ್ಲಿರುವ ಪರಿಸ್ಥಿತಿಯು ಎಂತಹುದು? ಯಾವ ಜಾತಿಯ ಸ್ವಾತಂತ್ರ್ಯವೂ ತಲೆಯೆತ್ತದಂತೆ ತುಳಿಯುತ್ತಿರುವುದೊಂದು ಕಡೆ, ಅಪಾರವಾದ ಯಾತನೆ ಮತ್ತು ಪ್ರಯತ್ನವಿಫಲತೆ ಇನ್ನೊಂದು ಕಡೆ, ಮನಸ್ಸು ಮುರಿದು, ನಾನಾ ತೆರದ ದುರ್ಬುದ್ಧಿಗಳು ಉದಯವಾಗುವುದಕ್ಕೆ ಪ್ರೋತ್ಸಾಹವು ಮತ್ತೊಂದು ಕಡೆ ಅನೇಕಾನೇಕರು ಜೈಲಿನಲ್ಲಿ ತಮ್ಮ ಯೌವ್ವನದ ದೀರ್ಘ ವರ್ಷಗಳನ್ನು ಕಳೆಯುತ್ತಾ ಕೊಳೆಯುತ್ತಾ ಬಿದ್ದಿದ್ದಾರೆ * ಆ ತರುಣರ ಕುಟುಂಬವು,ಬಂಧುಮಿತ್ರರೂ, ಇನ್ನೂ ಅನೇಕರು ಅದನ್ನು ನೆನೆದು ಹಲ್ಲುಕಡಿಯುತ್ತಾರೆ ಪ್ರತಿಕ್ರಿಯೆ ಮಾಡಲು ತಾವು ಅಸಮರ್ಥರಾಗಿರುವುದನ್ನೂ, ತಮ್ಮ ದೀನಾವಸ್ಥೆಯನ್ನೂ ಕುರಿತು ಚಿಂತಿಸಿ, ಅವರಿಗೆ ಬಾಳೇ ಬೇಸರವಾಗುತ್ತದೆ ಏನೂ ಗದ್ದಲವಿಲ್ಲದೆ ಎಲ್ಲವೂ ಸಮಾಧಾನವಾಗಿರುವು ವಾಗಲೂ ಅನೇಕಾನೇಕ ಸಂಘಗಳಿಗೆ ಬಹಿಷ್ಕಾರ, 'ಆತುರದ ಅಧಿಕಾರಿಗಳು', 'ಶಾಂತಿ ಕಾಯಿದೆಗಳು' ಇವು ಸರಕಾರದ ಬತ್ತಳಿಕೆಯಲ್ಲಿ ಶಾಶ್ವತವಾಗಿ ಮನೆಮಾಡಿ ಕುಳಿತಿವೆ ಸ್ವಾತಂತ್ರ್ಯವನ್ನು ಅಪಹರಿಸುವುದಕ್ಕೆ ಹುಟ್ಟಿದ ಕಟ್ಟುಕಾಯಿದೆಗಳು ನಿತ್ಯವಿಧಿಗಳಾಗಿ ಕುಳಿತಿವೆ ಅನೇಕ ಪುಸ್ತಕಗಳೂ ಮಾಸಪತ್ರಿಕೆಗಳೂ ನಿಷಿದ್ಧವಾಗಿವೆ ಅಥವಾ "ಸೀ ಕಸ್ಟಮ್ಸ್ ಆಕ್ಟ್" ಪ್ರಕಾರ ದೇಶದ ಒಳಕ್ಕೆ ಬರುವುದೇ ಇಲ್ಲ ಅಥವಾ ಒಂದುವೇಳೆ ಬಂದರೂ "ಅಪಾಯಕಾರಿಯಾದ ಸಾಹಿತ್ಯ"ವೆಂದು ಗಣ್ಯವಾಗಿ, ಅದನ್ನು ಇಟ್ಟುಕೊಂಡಿದ್ದವರಿಗೆ ಭಾರಿ ಸಜಾವಾಗುತ್ತದ ಈಗಿರುವ ರಾಜಕೀಯ, ಅಥವಾ ಆರ್ಥಿಕ ವಿಷಯವಾಗಿ ನಿರ್ಭಯವಾಗಿ ಸ್ಪಷ್ಟವಾಗಿ ಮಾತನಾಡಿದರ, ಅಥವಾ ರಷಿಯಾದ ಸ್ಥಿತಿಗತಿಗಳ ವಿಚಾರವಾಗಿ ಅನುಕೂಲವಾಗಿ ಬರೆದರೆ, ಆಗಲೇ ಸರಕಾರದ ಕೆಟ್ಟನೋಟಕ್ಕೆ ಗುರಿಯಾಗಬೇಕಾಗುತ್ತದೆ. ಡಾ|| ರವೀಂ

---

* ಹಿಂದೂಸ್ಥಾನದ ಹೋಂ ಮೆಂಬರ್ ಸರ್ ಹ್ಯಾರಿ ಹೇಗ್‌ರವರು ೧೯೩೪ ನೆಯ ಇಸವಿ ಜುಲೈ ೨೩ ರಲ್ಲಿ ಲೆಜಿಸ್ಲೇಟಿವ್ ಅಸೆಂಬ್ಲಿಯಲ್ಲಿ "ಬಂಗಾಳದಲ್ಲಿ ೧೫೦೦ ರಿಂದ ೧೬೦೦, ಡೆಯೋಲಿಯಲ್ಲಿ ೫೦೦. ಒಟ್ಟು ೨೦೦೦ ದಿಂದ ೨೧೦೦ ವರೆಗೆ ರಾಜಕೀಯ ಬಂದಿಗಳು ಇದ್ದಾರೆ" ಎಂದರು. ಇವರೆಲ್ಲ ಡಿಟೆನ್ಯೂಗಳು ಎಂದರೆ ವಿಚಾರಣೆ ಶಿಕ್ಷೆಯೇನೂ ಇಲ್ಲದೆ ಇರುವವರು ಈ ಸಂಖ್ಯೆಯಲ್ಲಿ ವಿಚಾರಣೆಯಾಗಿ ಶಿಕ್ಷೆ ಪಡೆದಿರುವ ರಾಜಕೀಯ ಬಂದಿಗಳ ಲೆಕ್ಕವು ಸೇರಿಲ್ಲ ಹೀಗೆ ವಿಚಾರಣೆಗೆ ಗುರಿಯಾದವರಿಗೆ ಶಿಕ್ಷೆಯನ್ನು ಅತಿಅತಿಯಾಗಿ ಕೊಡುವರು ಅಸೋಸಿಯೇಟೆಡ್ ಪ್ರೆಸ್ (ಡಿ ೧೭ ೧೯೩೪) ರಲ್ಲಿ ಕಲ್ಕತ್ತೆಯ ಒಂದು ಘಟನೆಯನ್ನು ಕುರಿತು ಹೈಕೋರ್ಟಿನವರು ಒಂಭತ್ತು ವರ್ಷ ಸಶ್ರಮ ಸಜೆಯನ್ನು ವಿಧಿಸಿದರು ಲೈಸೆನ್ಸ್ ಇಲ್ಲದೆ ಬಂದೂಕು ಮದ್ದು ಗುಂಡು ಇಟ್ಟುಕೊಂಡಿದ್ದನೆಂಬುದು ಅಪರಾಧ ಅಪರಾಧಿಯ ಬಳಿ ಒಂದು ರಿವಾಲ್ವರ್ ಆರು ತೋಟಾಗಳು ಇದ್ದುವು, ಎಂದು ವರದಿಮಾಡಿದೆ.

ದ್ರನಾಥ ಟಾಗೋರರು ರಷಿಯಾಕ್ಕೆ ಹೋಗಿ ಅಲ್ಲಿ ತಾವು ನೋಡಿಬಂದುದನ್ನು ಕುರಿತು ಒಂದು ಲೇಖನವನ್ನು ಬರೆದರು ಅದನ್ನು 'ಮಾಡರ್ನ್ ರಿವ್ಯೂ' ಪ್ರಕಟಿಸಿತು ಅದಕ್ಕಾಗಿ ಬಂಗಾಳ ಸರಕಾರವು ಆ ಪತ್ರಿಕೆಗೆ ಎಚ್ಚರಕೊಟ್ಟಿತು ಹಿಂದೂಸ್ಥಾನದ ಅಂಡರ್ ಸೆಕ್ರೆಟರಿಗಳು "ಆ ಲೇಖನವು ಹಿಂದೂಸ್ಥಾನದಲ್ಲಿ ಆಳುತ್ತಿರುವ ಬ್ರಿಟಿಷರ ರಾಜ್ಯಭಾರಕ್ರಮವನ್ನು ವಿಕಟವಾಗಿ ಟೀಕಿಸಿತು ಅದರಿಂದ ಆ ವಿಚಾರವಾಗಿ ಹಾಗೆ ವರ್ತಿಸಬೇಕಾಯಿತು" ಎಂದು ಪಾರ್ಲಿಮೆಂಟಿನಲ್ಲಿ ಹೇಳಿದರು * ಇದು ಸರಿಯೋ ತಪ್ಪೋ ಎಂದು ವಿಚಾರಿಸುವವರು ನೇಸರ್ ಅವರಿಗೆ ವಿರೋಧವಾಗಿ ನಾವೂ ಉಸಿರೆತ್ತುವಂತಿಲ್ಲ ಡಾ|| ರವೀಂದ್ರನಾಥ ಟಾಗೋರರು ಡಬ್ಲಿನ ಸೊಸೈಟಿ ಆಫ್ ಫ್ರೆಂಡ್ಸ್‌ಗೆ ಒಂದು ಸಂದೇಶವನ್ನು ಕಳುಹಿಸಿದರು ಆ ಪುಟ್ಟ ಸಂದೇಶವನ್ನು ಪ್ರಕಟಿಸಿದುದಕ್ಕೆ ಸರಕಾರವು ಆಕ್ಷೇಪಿಸಿತು. ಸಾಂಸ್ಕೃತಿಕ ವಿಚಾರಗಳಲ್ಲಿ ಹೊರತು ಮತ್ತೇತರಲ್ಲೂ ಕೈಹಾಕದೆ, ರಾಜಕೀಯ ವಿಷಯಗಳನ್ನು ದೂರದಲ್ಲಿ ಬಿಟ್ಟಿರುವ ಡಾ|| ಟಾಗೋರರಂತಹ ಋಷಿಗಳಿಗೆ, ಇಂಡಿಯಾದಲ್ಲಿಯೂ ಸಮಸ್ತ ಜಗತ್ತಿನಲ್ಲಿಯೂ ಪೂಜ್ಯರಾಗಿರುವ ಅವರಿಗೇ ಹೀಗಾದ ಮೇಲೆ, ಉಳಿದ ಬಡವಾಯಿಗಳ ಮಾತೇನು? ಪ್ರಕಟಿಸದೆ ತುಳಿಯುವುದಕ್ಕಿಂತಲೂ, ಅದರಿಂದ ಹುಟ್ಟುವ ಹೆದರಿಕ ವಾತಾವರಣವು ಇನ್ನೂ ಕೆಟ್ಟುದು ಈ ಪರಿಸ್ಥಿತಿಯಲ್ಲಿ ಯಾವ ಪತ್ರಿಕೆಯು ತಾನೇ ತನ್ನ ಮನಸ್ಸಾಕ್ಷಿಗೆ ಅನುಸಾರವಾಗಿ ನಡೆಯಲು ಸಾಧ್ಯ ಚರಿತ್ರೆ, ಅರ್ಥಶಾಸ್ತ್ರ, ರಾಜಕೀಯ ವ್ಯವಹಾರ, ನಿತ್ಯನಿತ್ಯದ ನಡೆವಳಿಕೆಗಳು ಇವುಗಳ ಪೈಕಿ ಯಾವುದರಲ್ಲಿ ಸತ್ಯವು ಇರಬಲ್ಲುದು? ರಾಜಕೀಯ ಸುಧಾರಣೆಗಳನ್ನೂ ಹೊಣೆಗಾರಿಕೆಯ ಸರಕಾರವನ್ನೂ ಆ ಜಾತಿಯ ಇನೂ ಮಿಕ್ಕ ವರಗಳನ್ನೂ ಕೊಡುವುದಕ್ಕೆ ಈ ಪರಿಸ್ಥಿತಿಯು ಅದೆಷ್ಟು ಚೆನ್ನಾಗಿದೆ §

---

* ನವೆಂಬರ್ ೧೨, ೧೯೩೪

§ ಸೆಪ್ಟೆಂಬರ್ ೪, ೧೯೩೫ ರಲ್ಲಿ ಲೆಜಿಸ್ಲೆಟಿವ್ ಅಸೆಂಬ್ಲಿಯಲ್ಲಿ ಹಿಂದೂಸ್ಥಾನದಲ್ಲಿ ಪ್ರೆಸ್ ಲಾ ಹೇಗೆ ಇದೆ ಎನ್ನುವುದನ್ನು ಕುರಿತು ಸರಕಾರದವರು ಒಂದು ಹೇಳಿಕೆಯನ್ನು ಕೊಟ್ಟಿದ್ದಾರ ೧೯೩೦ ರಿಂದ ಈಚೆಗೆ ಸರಕಾರವು ೫೧೪ ಪತ್ರಿಕೆಗಳಿಂದ ರೇವಣಿಯನ್ನು ಅಪೇಕ್ಷಿಸಿತು, ಮತ್ತು ಅವುಕಟ್ಟಿದ್ದ ರೇವಣಿಯನ್ನು ಮುಟ್ಟುಗೋಲು ಹಾಕಿಕೊಂಡಿತು ಇವುಗಳಲ್ಲಿ ಮುಂದಕ್ಕೆ ರೇವಣಿ ಕೊಡಲಾರದೆ ೩೪೮ ಪತ್ರಿಕೆಗಳು ನಿಂತುಹೋದುವು ೧೬೬ ಪತ್ರಿಕೆಗಳು ೨೫೨,೮೨ ರೂ ರೇವಣಿ ಕಟ್ಟಿದುವು

ಈಚೆಗೆ, (೧೯೩೫ ರ ಉತ್ತರಾರ್ಧದಲ್ಲಿ) ನಾಗರಿಕ ಸ್ವಾತಂತ್ರ್ಯವನ್ನು ನುಂಗುವ ಹಲವು ಕಾಯಿದೆಗಳಿಗೆ ಮತ್ತೆ ಜೀವದಾನವಾಗಿದೆ. ಅವುಗಳಲ್ಲಿ ಮುಖ್ಯವಾದ

ಇಂದು ಜಗತ್ತಿಗೆ ಜಗತ್ತೇ ತಳಮಳಿಸುತ್ತಿದೆ ಜ್ಞಾತಾಜ್ಞಾತವಾಗಿ ಈಗಿರುವ ಪರಿಸ್ಥಿತಿಯ ವಿಚಾರದಲ್ಲಿ ಅತೃಪ್ತಿಯು ತಾನೇತಾನಾಗುತ್ತಿದೆ ಇದನ್ನು ಬುದ್ಧಿಯಿರುವವರು ಯಾರುತಾನೇ ಕಂಡಿಲ್ಲ? ನಮ್ಮ ಕಣ್ಣೆದುರಿಗೇ ಅದ್ಭುತವಾದ ಬದಲಾವಣೆಗಳಾಗುತ್ತಿವೆ. ಭವಿಷ್ಯವೇನಾಗುವುದೋ ಎಂಬ ಚಿಂತೆಯು ಎಲ್ಲರನ್ನೂ ಕಬಳಿಸುತ್ತಿದೆ ಭವಿಷ್ಯದ ಯೋಚನೆಯು ದಾರ್ಶನಿಕರು, ಸಮಾಜ ಶಾಸ್ತ್ರ ವಿದ್ವಾಂಸರು, ಅರ್ಥಶಾಸ್ತ್ರಜ್ಞರು ಇವರಿಗೆ ಮಾತ್ರವಲ್ಲದೆ ಎಲ್ಲರಿಗೂ ಹಿಡಿದಿದೆ ಬದಲಾಯಿಸುವ ಭವಿಷ್ಯದಲ್ಲಿ ಬದಲಾಯಿಸದೇ ಉಳಿಯುವವರು ಯಾರು? ಅದರಿಂದ ಆ ಬದಲಾವಣೆಯನ್ನು ಮಾಡುತ್ತಿರುವ ನಾನಾ ಶಕ್ತಿಗಳನ್ನು ಅರಿಯುವ ಯತ್ನಮಾಡಿ, ಅದಕ್ಕೆ ತಕ್ಕಂತೆ ತನ್ನ ಸ್ಥಿತಿಯನ್ನು ಬದಲಾಯಿಸಿಕೊಳ್ಳಬೇಕಾದುದು ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ ಒಂದು ಪ್ರಪಂಚವು ಮುಗಿದು ಮತ್ತೊಂದು ಪ್ರಪಂಚವು ರೂಪುಗೊಳ್ಳುತ್ತಿದೆ ಯಾವ ಸಮಸ್ಯೆಗೇ ಆಗಲಿ, ಸರಿಯಾದ ಉತ್ತರವನ್ನು ಕೊಡಬೇಕಾದರೆ, ಆ ಸಮಸ್ಯೆಯ ಪರಿಚಯವನ್ನು ಮಾಡಿಕೊಳ್ಳಬೇಕು ಸಮಸ್ಯೆಯನ್ನು ಅರಿಯುವುದೂ ಸಮಸ್ಯೆಗೆ ಉತ್ತರ ಹುಡುಕುವುದಷ್ಟೇ ಮುಖ್ಯವಾದುದು

ನಮ್ಮ ರಾಜಕೀಯ ಮುಖಂಡರಲ್ಲಿ ಜಗತ್ತಿನಲ್ಲಿ ಏನಾಗುತ್ತಿದೆಯೆಂಬುದರ ಅರಿವಿಲ್ಲ ಅಥವಾ ಆ ವಿಚಾರವಾಗಿ ಉದಾಸೀನ ಹಿಂದೂಸ್ಥಾನದ ಅಧಿಕಾರಿಗಳು ಅನೇಕರೂ ಈ ವಿಚಾರವನ್ನು ಅರಿತವರಲ್ಲ ಹಿಂದೂಸ್ಥಾನದ ಸಿವಿಲ್ ಸರ್ವಿಸ್ ಸುಖವಾಗಿ ತನ್ನ ವಾಡಿಗೆ ತಾನು ಇರಬಲ್ಲುದಾಗಿ ಈ ವಿಚಾರವಾಗಿ ಅರಿಯಬೇಕಾಗಿಲ್ಲ ಈ ದೇಶದ ಅಧಿಕಾರಿಗಳಲ್ಲಿ ಉತ್ತಮೋತ್ತಮರಾದವರು ಮಾತ್ರ ಇದನ್ನು ಪರಿಗಣಿಸಬೇಕಾಗುತ್ತದೆ ಬ್ರಿಟನ್ನಿನಲ್ಲಿರುವ ಸರಕಾರಕ್ಕೆ ಹೀಗಿರುವುದು ಸಾಧ್ಯವಿಲ್ಲ ಪ್ರಪಂಚದಲ್ಲಿ ಆಗುತ್ತಿರುವುದನ್ನೆಲ್ಲ ಕಣ್ಣಿಟ್ಟು ನೋಡಿ, ತನ್ನ ಧೋರಣವನ್ನು ತದನುಸಾರವಾಗಿ ರೂಪಿಸಿಕೊಳ್ಳಬೇಕಾಗಿದೆ ಬ್ರಿಟಿಷರ ಫಾರಿನ್ ಪಾಲಿಸಿಯು, ಹಿಂದೂಸ್ಥಾನವು ಅವರ ಕೈಸೇರಿ, ಅದರ ರಕ್ಷಣೆಯನ್ನು ಅವರು ವಹಿಸಿದುದರಿಂದ ಬೇಕಾದಷ್ಟು ಬದಲಾಯಿಸಿದೆ ಎಂಬುದು ಎಲ್ಲರಿಗೂ ತಿಳಿದಿರುವ ಮಾತು ಜಪಾನಿಗಳ ಸಾಮ್ರಾಜ್ಯವಾದ, ಅಭ್ಯುದಯದಲ್ಲಿರುವ ಸೋವಿಯಟ್ ಯೂನಿಯನ್ನಿನ ಸಾಮರ್ಥ್ಯ, ಆಂಗ್ಲೋ ರಷ್ಯೋ ಜಪಾನೀಯರು ಸೇರಿ ಸಿಂಕಿಯಾಂಗ್‌ನಲ್ಲಿ ನಡೆಸುತ್ತಿರುವ ಮಸಲತ್ತು, ಸೆಂಟ್ರಲ್ ಏಷಿಯಾ, ಆಫ್‌ಘಾನಿಸ್ಥಾನ, ಪರ್ಷಿಯಾದಲ್ಲಿ ನಡೆಯುತ್ತಿರುವ ಘಟನಗಳು, ಇವೆಲ್ಲವೂ ಇಂಡಿಯ ರಾಜನೀತಿಯನ್ನು

---

ಕ್ರಿಮಿನಲ್ ಲಾ ಅಮೆಂಡ್‌ಮೆಂಟ್ ಆಕ್ಟ್ ಎಂಬುದು ಹಿಂದೂಸ್ಥಾನಕ್ಕೆಲ್ಲ ಅನ್ವಯಿಸುತ್ತದೆ ಲೆಜಿಸ್ಲೆಟಿವ್ ಅಸೆಂಬ್ಲಿಯು ಅದನ್ನು ನಿರಾಕರಿಸಿತು ಗವರ್ನರ್ ಜನರಲ್‌ರವರು ಅದನ್ನು "ಸರ್ಟಿಫೈ" ಮಾಡಿದರು ಅನೇಕ ಪ್ರಾಂತಗಳಲ್ಲಿ ಇಂತಹ ಕಾಯಿದೆಗಳಾಗಿವೆ

ಎಷ್ಟುಮಟ್ಟಿಗೆ ಬದಲಾಯಿಸಿವೆಯೆಂಬುದನ್ನು ನಮ್ಮ ದೇಶದ ರಾಜಕೀಯ ಮುಖಂಡರೆಷ್ಟು ಜನರು ಬಲ್ಲರು? ಸೆಂಟ್ರಲ್ ಏಷಿಯಾದಲ್ಲಿ ಈಗಿರುವ ಸ್ಥಿತಿಯಿಂದ ಕಾಶ್ಮೀರದ ಸ್ಥಿತಿಯು ಬದಲಾಯಿಸುವುದು ಬ್ರಿಟಿಷರ ರಾಜಕೀಯಧೋರಣ ಮತ್ತು ಸಂರಕ್ಷಣಗಳ ದುರ್ಗವು ಕಾಶ್ಮೀರವಾಗುವುದು ಎಂಬುದು ಸ್ಪಷ್ಟ.

ಜಗತ್ತಿನಲ್ಲಿ ಆಗುತ್ತಿರುವ ಆರ್ಥಿಕ ಬದಲಾವಣೆಗಳ ವಿಚಾರವು ಇನ್ನೂ ಮುಖ್ಯವಾದುದು ಹತ್ತೊಂಭತ್ತನೆಯ ಶತಮಾನದ ಪದ್ಧತಿಗಳು ಕಳೆದುಹೋಗಿವೆ ಆ ದೃಷ್ಟಿಯಿಂದ ಇಂದಿನ ಪರಿಸ್ಥಿತಿಯನ್ನು ಸರಿಹೋಗಿಸಿಕೊಳ್ಳುವುದು ಸಾಧ್ಯವಿಲ್ಲವೆಂಬುದು ಇಂದು ನಮ್ಮ ಮನಸ್ಸಿಗೆ ಬರಬೇಕು ಮಾಮೂಲಿನಂತೆ ನಡೆಯೋಣ ಎಂಬ ವಕೀಲರ ದೃಷ್ಟಿಯು ಇಂದು ಹಿಂದೂಸ್ಥಾನವನ್ನೆಲ್ಲ ಆವರಿಸಿದೆ ಆದರೆ ಮಾಮೂಲೇ ಮೂಲೆಗೆ ಬಿದ್ದಿರುವಾಗ, ಆ ದೃಷ್ಟಿಯಿಂದ ನಾವು ಏನುತಾನೇ ಮಾಡಲು ಸಾಧ್ಯ? ಒಂದು ಎತ್ತಿನ ಗಾಡಿಯನ್ನು ತೆಗೆದು ರೈಲು ಕಂಬಿಗಳ ಮೇಲಿಟ್ಟು ಅದನ್ನು ರೈಲ್ವೆ ಟ್ರ್ಯಾಕ್ ಎನ್ನುವುದೂ ಆದೀತೆ? ಅದರ ಕಾಲವಾಗಿ ಹೋಯಿತು ಎಂದು ಅದನ್ನು ಅತ್ತ ನೂಕಬೇಕು ರಷಿಯಾದ ಮಾತಿರಲಿ, ಎಲ್ಲೆಲ್ಲಿಯೂ ಹೊಸ ರೀತಿಗಳ ಮಾತು ಭಾರಿಯ ಬದಲಾವಣೆಗಳ ಯೋಚನೆಗಳು ಬಂಡವಾಳಗಾರರ ಪದ್ಧತಿಯನ್ನು ಇಟ್ಟುಕೊಂಡು ಅದನ್ನು ದೃಢಪಡಿಸಬೇಕು ಎಂದು ಸಂಪೂರ್ಣವಾಗಿ ಆಶಿಸುತ್ತಿರುವ ಪ್ರೆಸಿಡೆಂಟ್ ರೂಸ್‌ವೆಲ್ಟನೂ, ಬಲು ಧೈರ್ಯ ಮಾಡಿ ಭಾರಿಯ ಯೋಜನೆಗಳಿಗೆ ಕೈ ಹಾಕಿದ್ದಾನೆ, ಅದರ ಫಲವಾಗಿ ಅಮೇರಿಕನ್ನರ ಜೀವನದ ರೀತಿಯೇ ಮಾರ್ಪಡಬಹುದು ಹೆಚ್ಚು ಹಕ್ಕುಗಳನ್ನು ಸಂಪಾದಿಸಿರುವವರಿಂದ ಕಿತ್ತುಕೊಂಡು, ಕಡಿಮೆ ಹಕ್ಕುಗಳಿರುವವರಿಗೆ ಕೊಡುವೆನೆಂದು ಆತನು ಆರಂಭಿಸಿದ್ದಾನೆ ಆತನು ತನ್ನ ಕಾರ್ಯದಲ್ಲಿ ಗೆಲ್ಲಲಿ ಸೋಲಲಿ, ಆತನ ಧೈರ್ಯ, ಹಿಂದಿನ ಓಬೀರಾಯನ ಪದ್ಧತಿಯನ್ನು ತಪ್ಪಿಸಿ, ಹೊಸ ಮಾರ್ಗಕ್ಕೆ ತರಲು ಆತನಿಗಿರುವ ಆಸ್ಥೆ, ಇವು ಎಂತಹ ಭಾರಿಯವು! ಆತನು ತನ್ನ ಧೋರಣವನ್ನು ಬದಲಾಯಿಸಲು ಸಿದ್ಧನಾಗಿದ್ದಾನೆ, ಮಾಡಿದ ತಪ್ಪುಗಳನ್ನು ಒಪ್ಪಿಕೊಳ್ಳುವ ಧೈರ್ಯವಿದೆ ಇಂಗ್ಲೆಂಡಿನಲ್ಲಿಯೂ ಮಿ॥ ಲಾಯ್ಡ್ ಜಾರ್ಜರು ತಮ್ಮ ಹೊಸರೀತಿಯನ್ನು ಜನದ ಮುಂದಿಟ್ಟಿದ್ದಾರೆ ಇಂಡಿಯದಲ್ಲಿಯೂ ನಮಗೆ ಈ ಹೊಸ ರೀತಿಗಳು ನಾನಾ ಮುಖವಾಗಬೇಕು "ತಿಳಿಯಬೇಕಾದ್ದೆಲ್ಲ ತಿಳಿದಿದೆ. ಆಗಬೇಕಾದ್ದೆಲ್ಲ ಆಗಿದೆ" ಎಂಬ ಭ್ರಾಂತಿಯು ಅನರ್ಥಕಾರಿಯಾದ ಅವಿವೇಕ!

ನಾವು ಎಷ್ಟೋ ಪ್ರಯತ್ನಗಳನ್ನು ಗಮನಿಸಬೇಕಾಗಿದೆ ನಾವು ಅವನ್ನು ಧೈರ್ಯವಾಗಿ ಎದುರಿಸಬೇಕು ಈಗಿರುವ ಈ ಸಾಮಾಜಿಕ ಅಥವಾ ಆರ್ಥಿಕ ಪದ್ಧತಿಯು ಪ್ರಜಾವರ್ಗದ ಸ್ಥಿತಿಯನ್ನು ಉತ್ತಮಗೊಳಿಸಲಾರದು ಎಂದಾದ ಮೇಲೂ ಅದು ಬದುಕಿರಬೇಕೇ? ಅಂತಹ ಉತ್ತಮಸ್ಥಿತಿಯನ್ನು ತರುವ ಪದ್ಧತಿಯು ಮತ್ತಾ

ವುದಾದರೂ ಉಂಟೆ? ರಾಜಕೀಯ ಬದಲಾವಣೆಯೊಂದು ಆಗಿಬಿಟ್ಟರೆ ಸಾಕೇ? ಹಾಗೆ ಬದಲಾವಣೆಯಾಗಬೇಕಾಗಿ ಬಂದಾಗ ಆಸ್ತಿವಂತರ ಕೈವಾಡದಿಂದ ವಿಘ್ನಗಳು ಒದಗಿದರೆ ಪ್ರಜಾವರ್ಗದ ಗೋಳು ಬಡತನಗಳು ಇದ್ದರೂ ಇರಲಿ ಎಂದು ಅವರ ಕಡೆಗೆ ಒಲಿಯುವುದು ಬುದ್ಧಿವಂತಿಕೆಯೇ? ನ್ಯಾಯವೇ? ಆಸ್ತಿವಂತರನ್ನು ಹಿಂಸಿಸಬೇಕೆಂಬುದು ಸರ್ವಥಾ ಉದ್ದೇಶವಿಲ್ಲ. ಆದರೆ ಅವರಿಂದ ಇತರರಿಗೆ ಹಿಂಸೆಯಾಗದಿರಲಿ ಎಂಬುದು ಉದ್ದೇಶ ಈ ಆಸ್ತಿವಂತರೊಡನೆ ರಾಜಿ ಮಾಡಿಕೊಳ್ಳುವುದಕ್ಕೆ ಸಾಧ್ಯವಾದರೆ ಬಹಳ ಸಂತೋಷ ಆದರೆ ಹೀಗೆ ರಾಜಿಮಾಡಿಕೊಳ್ಳುವುದು ನ್ಯಾಯವೇ ಅನ್ಯಾಯವೇ ಎಂಬ ವಿಚಾರದಲ್ಲಿ ಪರಸ್ಪರ ಭಿನ್ನಾಭಿಪ್ರಾಯಗಳಿರಬಹುದು, ಆದರೆ, ಆದಷ್ಟು ಬೇಗ ಹೇಗಾದರೂ ಈ ಸಮಸ್ಯೆಯನ್ನು ಪರಿಹರಿಸಬೇಕೆಂಬ ವಿಚಾರದಲ್ಲಿ ಮಾತ್ರ ಭಿನ್ನಾಭಿಪ್ರಾಯಗಳಿಲ್ಲ. ಆದರೆ ಹಾಗೆ ರಾಜೀಮಾಡುವುದೆಂದರೆ, ಒಂದು ಜಾತಿಯ ಆಸ್ತಿಯನ್ನು ತೆಗೆದು ಮತ್ತೊಂದು ಜಾತಿಯ ಆಸ್ತಿಯನ್ನು ಮಾಡುವುದಲ್ಲ ಸಾಧ್ಯವಾದಾಗ ಮತ್ತು ನ್ಯಾಯವಾದಾಗ, ಯೋಗ್ಯವಾದ ಪರಿಹಾರ ದ್ರವ್ಯವನ್ನು ಕೊಡೋಣ ಇಲ್ಲದಿದ್ದರೆ ಅದಕ್ಕೆಂದು ಜಗಳವಾಡುವುದರಲ್ಲಿ ಇನ್ನೂ ನಷ್ಟಪಡಬೇಕಾದೀತು ಆದರೆ, ಈ ಆಸ್ತಿವಂತರು ಯಾರೂ ಈ ರೀತಿಯ ರಾಜಿಗೆ ಒಪ್ಪುವುದಿಲ್ಲ ಎನ್ನುವುದಕ್ಕೆ ಚರಿತ್ರೆಯೇ ಸಾಕ್ಷಿ ಸಮಾಜದಲ್ಲಿ ತಮ್ಮ ಅಧಿಕಾರವನ್ನೂ ಪ್ರಭಾವವನ್ನೂ ಕಳೆದುಕೊಂಡಿರುವ ಗುಂಪುಗಳಿಗೆ ಬುದ್ಧಿಯೇ ಇರುವುದಿಲ್ಲ ಅವರಿಗೆ ಇದ್ದರೆ ಎಲ್ಲ ಇರಲಿ; ಇಲ್ಲದಿದ್ದರೆ ಎಲ್ಲ ಹೋಗಲಿ, ಎಂಬ ಬುದ್ಧಿ ಅದರಿಂದಲೇ ಅವರು ಸಂಪೂರ್ಣವಾಗಿ ನಾಶವಾಗುವುದು.

ಆಸ್ತಿಯನ್ನು ತೆಗೆದುಕೊಂಡುಬಿಡುವುದು ಎಂಬ ವಿಚಾರದಲ್ಲಿ (ಕಾಂಗ್ರೆಸ್ ವರ್ಕಿಂಗ್ ಕಮಿಟಿಯವರು ಹೇಳಿದಂತೆ) ಬೇಜವಾಬ್ದಾರಿಯ ಮಾತುಗಳು ಬಹಳವಿವೆ ಒಂದೇಸಮನಾಗಿ, ತಪ್ಪದೆ, ಈ ಅಪಹಾರವು ಈಗ ನಡೆಯುತ್ತಿದೆ ಈಗಿರುವ ಪದ್ಧತಿಯ ತಳಹದಿಯೇ ಅಪಹಾರ ಈ ಅಪಹಾರವನ್ನು ತಪ್ಪಿಸುವುದಕ್ಕೆ ಸಾಮಾಜಿಕ ಬದಲಾವಣೆಗಳನ್ನು ನಾವು ಯೋಚಿಸುತ್ತಿರುವುದು. ಶ್ರಮ ಜೀವಿಯ ಶ್ರಮದ ಫಲದಲ್ಲಿ ಒಂದು ಭಾಗವು ನಿತ್ಯವೂ ಅಪಹೃತವಾಗುತ್ತಿದೆ ರೈತನು ಭೂಮಿಯ ಮೇಲಿನ ಕಂದಾಯವನ್ನು ಹೆಚ್ಚಿಸಿ, ಅವನು ಅದನ್ನು ಕೊಡುವುದಕ್ಕೆ ಸಾಧ್ಯವಿಲ್ಲದಂತೆ ಮಾಡಿ, ಅವನ ಭೂಮಿಯನ್ನು ಅಪಹಾರ ಮಾಡುವುದಾಗುತ್ತಿದೆ. ಹಿಂದೆ ಎಲ್ಲೆಲ್ಲಿದ್ದ ಭೂಮಿಗಳನ್ನೆಲ್ಲ ಅಪಹಾರಮಾಡಿ ದೊಡ್ಡದೊಡ್ಡ ಜಹಗೀರುದಾರರಾದುದು. ರೈತರ ಭೂಮಿಗಳೆಲ್ಲ ಹಾಳಾದುದು ಹೀಗೇ. ಈಗಿನ ಪದ್ಧತಿಯ ಜೀವಸ್ವರ, ತಳಹದಿ, ಅದು ಅಪಹಾರ

ಈ ಪದ್ಧತಿಯ ಕ್ರೌರ್ಯವನ್ನು ಕೊಂಚವಾದರೂ ಕಡಿಮೆಮಾಡಲೆಂದು ಸಮಾಜವು ಅನೇಕ ಉಪಾಯಗಳನ್ನು ಹುಡುಕಿದೆ ಅದರಲ್ಲಿಯೂ ತತ್ವವೇನೋ

ಅಪಹಾರವೇ. ಹೆಚ್ಚು ತೆರಿಗೆಯನ್ನು ಹಾಕುವುದು, ಮರಣದ ತೆರಿಗೆ, ಸಾಲದ ಭಾರ ದಿಂದ ತಪ್ಪಿಸುವ ಕಾಯದೆಗಳು, ಹಣದ ಬೆಲೆಯನ್ನು ಹೆಚ್ಚಿಸುವುದು, ಮೊದಲಾದ ವೆಲ್ಲ ಈ ಔಷಧಗಳು ಕೆಲವು ದಿನಗಳ ಹಿಂದೆ, ದೊಡ್ಡದೊಡ್ಡ ಜನಾಂಗಗಳು ತಾವು ಕೊಡಬೇಕಾದ ಸಾಲವನ್ನು ಇಲ್ಲವೆಂದಿವೆ ಹೀಗೆಂದು ತಪ್ಪಿಸಿಕೊಂಡುದು ಸೋವಿಯಟ್ ಯೂನಿಯನ್ ಮಾತ್ರವಲ್ಲ, ಬಂಡವಾಳಗಾರರೆನ್ನಿಸಿಕೊಂಡ ರಾಷ್ಟ್ರಗಳೂ ಕೂಡ ಹೀಗೇ ಮಾಡಿವೆ ಇವುಗಳಲ್ಲೆಲ್ಲ ಬ್ರಿಟಿಷರು ಅಮೇರಿಕಕ್ಕೆ ಕೊಡಬೇಕಾದ ಸಾಲವನ್ನು ಕೊಡದೇ ತಪ್ಪಿಸಿಕೊಂಡುದೇ ಬಹಳ ಭಾರಿ ಹಿಂದೂಸ್ಥಾನವೂ ಅವರ ಮೇಲ್ಪಂಗ್ತಿಯನ್ನೇ ಅನುಸರಿಸುವುದಾದರೆ? ಅದಿರಲಿ, ಈ ಅಪಹಾರಗಳು, ಈ ತಪ್ಪಿಸಿಕೊಳ್ಳುವಿಕೆ ಎಲ್ಲವೂ ಎಲ್ಲಿಯೋ ಕೊಂಚ ದೂರ ಅನುಕೂಲಪಡಿಸಿಕೊಡಬಲ್ಲವು ಅಷ್ಟೇ ಅಲ್ಲದೆ, ಮೂಲಕಾರಣವನ್ನು ನಿವಾರಣೆಮಾಡಲಾರವು ಹೊಸದು ಮಾಡಬೇಕೆಂದರೆ, ಮೂಲಕಾರಣಗಳನ್ನು ನಿವಾರಿಸಬೇಕು

ಈಗ ಜಾರಿಯಲ್ಲಿರುವ ಈ ವ್ಯವಸ್ಥೆಯನ್ನು ಬದಲಾಯಿಸುವುದಕ್ಕಿಂತ ಮುಂಚೆ ಈ ಬದಲಾವಣೆಯಿಂದ ಆಗುವ ಆದಿಭೌತಿಕ, ಆಧ್ಯಾತ್ಮಿಕ ನಷ್ಟಗಳನ್ನು ಎಂಬುದನ್ನು ನಾವು ಗಮನಿಸಬೇಕು ಕಣ್ಮುಚ್ಚಿಕೊಂಡು ಮುಂದೆ ನುಗ್ಗುವುದು ಸರ್ವಥಾ ಕೂಡದು ಈ ಬದಲಾವಣೆಯಾದರೆ, ಪ್ರಜಾವರ್ಗದ ಸೌಖ್ಯವೂ ಪ್ರಗತಿಯೂ ಆದಿಭೌತಿಕ, ಆಧ್ಯಾತ್ಮಿಕವಾಗಿ ಎಷ್ಟು ಲಭಿಸುವುದು ಎಂಬುದನ್ನು ಮೊದಲು ಪರಿಗಣಿಸಬೇಕು ಹಾಗೆಯೇ ಈಗ ಬದಲಾಯಿಸದಿದ್ದರೆ ಆಗುವ ನಷ್ಟವೇನು ಎಂಬುದನ್ನೂ ಗಣಿಸಬೇಕು ಈಗ ನಾವು ಬಾಳುತ್ತಿರುವಂತೆ ಹೊಟ್ಟೆಗಿಲ್ಲದೆ ದುಃಖದಲ್ಲಿ ಕಂಗೆಟ್ಟು, ಆಧ್ಯಾತ್ಮಿಕ ನೈತಿಕ ಮಾರ್ಗಗಳಲ್ಲಿ ಕಳೆಗೆಟ್ಟು, ಮುರಿದ ಮನಸ್ಸಿನ ವಿರೂಪಗೊಂಡ ಬಾಳುಗಳನ್ನು ಬದುಕುತ್ತಿರುವುದು ಎಷ್ಟು ಕಷ್ಟವಾಗಿದೆ? ಇದರಿಂದ ಎಷ್ಟು ನಷ್ಟವಾಗಿದೆ ಎಂಬುದನ್ನೂ ನಾವು ಗಣಿಸಬೇಕು ಪದೇಪದೇ ಬರುವ ಕಳ್ಳ ಹೊಳೆಯ ಹೊನಲಿನಂತೆ, ಈ ಆರ್ಥಿಕ ಪದ್ಧತಿಯಲ್ಲಿ ನಾವು ಕೊಚ್ಚಿಹೋಗುತ್ತಿದ್ದೇವೆ, ಈ ಪದ್ಧತಿಯು ಲಕ್ಷೋಪಲಕ್ಷ ಜನರನ್ನು ಮಾರಿಯಂತೆ ಬಲಿಗೊಳ್ಳುತ್ತಿದೆ ನಮ್ಮಲ್ಲಿ ಕೆಲವರು ಬಿಂದಿಗೆಗಳನ್ನು ತಂದು ನೀರು ತುಂಬಿಕೊಂಡು ಹೋದ ಮಾತ್ರಕ್ಕೇ ಈ ಪ್ರವಾಹವನ್ನು ಅಡ್ಡಗಟ್ಟಿದಂತಾಗಲಿಲ್ಲ, ಕೊಚ್ಚಿಹೋಗುವವರು ಉಳಿಯುವುದಿಲ್ಲ ಆ ಪ್ರವಾಹಕ್ಕೆ ಅಣೆಕಟ್ಟುಗಳನ್ನು ಹಾಕಬೇಕು, ಕಾಲುವೆಗಳನ್ನು ತೋಡಬೇಕು, ಆ ಪ್ರವಾಹದ ವಿನಾಶಕ ಶಕ್ತಿಯನ್ನು ತಿರುಗಿಸಿ, ಅದು ಮನುಷ್ಯನಿಗೆ ಸೌಖ್ಯಪ್ರದವಾಗುವಂತೆ ಮಾಡಬೇಕು

ಕೆಲವು ಕಟ್ಟುಕಾಯಿದೆಗಳನ್ನೂ ಮಾಡಿ ಬಿಟ್ಟ ಮಾತ್ರಕ್ಕೇ ಸೋಷಿಯಲಿಸಂ ಮಾಡಬೇಕೆಂದಿರುವ ಅಗಾಧ ಬದಲಾವಣೆಗಳನ್ನು ಮಾಡಿಬಿಡುವುದು ಸಾಧ್ಯವಿಲ್ಲ ಆದರೆ ಪ್ರಗತಿಯ ಮಾರ್ಗವನ್ನು ತೋರಿಸುವುದಕ್ಕೆ ಆ ಭಾರಿಯ ಕಟ್ಟಡದ ತಳಹದಿಯನ್ನು ಹಾಕುವುದಕ್ಕೆ ಮೂಲಭೂತವಾದ ಕಟ್ಟುಕಾಯಿದೆಗಳೂ ಅಧಿಕಾರವೂ

ಬೇಕೇಬೇಕು ಸೋಷಿಯಲಿಸ್ಟ್ ಸಮಾಜದ ಅದ್ಭುತ ಕಟ್ಟಡವು ಏಳಬೇಕಾದರೆ, ಅದೃಷ್ಟವನ್ನು ನಂಬಿ ಕುಳಿತರಾಗಲಿ, ಆದಷ್ಟು ಮಾಡಿ, ಈಗಷ್ಟು ಮಾಡಿಕೊಂಡು ಹೋದರಾಗಲೀ ಸಾಧ್ಯವಿಲ್ಲ ಅದರಿಂದ ಆ ಹಾದಿಯಲ್ಲಿರುವ ಭಾರಿಯ ವಿಘ್ನಗಳನ್ನು ನಿವಾರಿಸಬೇಕು ಕಿತ್ತುಕೊಳ್ಳುವುದು ಉದ್ದೇಶವಲ್ಲ ಕೊಡುವುದು ಉದ್ದೇಶ. ಈಗಿರುವ ಈ ಕ್ಷಾಮವನ್ನು ಮುಂದಿನ ಸಂತುಷ್ಟಿಯನ್ನಾಗಿ ಮಾಡಬೇಕು ಆದರೆ ಹಾಗೆ ಮಾಡುವುದಕ್ಕೆ ಮುಂಚೆ ಹಾದಿಯಲ್ಲಿರುವ ಅಡ್ಡಿಗಳನ್ನು ತೊಡೆದು ಹಾಕಬೇಡವೇ ? ಅಡ್ಡವಾಗಿ ಕುಳಿತಿರುವ ಸ್ವಾರ್ಥಪರರನ್ನು ಅತ್ತ ತಳ್ಳಬೇಡವೆ ? ಆ ಹಾದಿಯೂ ಅಷ್ಟೆ ನಮಗೆ ಬೇಕಾಯಿತು, ನಮಗೆ ಬೇಡವಾಯಿತು, ಇದು ಶುದ್ಧಾಂಗ ನ್ಯಾಯವಾಗಿದೆ ಎಂಬ ಮಾತೇ ಇಲ್ಲ ಆ ಹಾದಿಯಾವುದು ಎಂದು ಗೊತ್ತು ಮಾಡುವುದರಲ್ಲಿ ಆರ್ಥಿಕವಾಗಿ ಸರಿಯಾದುದು ಯಾವುದು, ಪ್ರಗತಿಗೆ ಅನುಕೂಲವಾದುದು ಯಾವುದು ಬದಲಾಯಿಸುತ್ತಿರುವ ಪರಿಸ್ಥಿತಿಗೆ ಅನುಗುಣವಾದುದು ಯಾವುದು, ಪ್ರಜಾವರ್ಗದ ಹೆಚ್ಚು ಭಾಗಕ್ಕೆ ಸೌಖ್ಯವನ್ನುಂಟು ಮಾಡುವುದು ಯಾವುದು ಎಂಬುದೇ ದೃಷ್ಟಿಯಾಗಬೇಕು

ಹೀಗಾಗಬೇಕಾದರೆ ಒಂದು ಗುಂಪಿನವರಿಗೂ ಮತ್ತೊಂದು ಗುಂಪಿನವರಿಗೂ ಹೋರಾಟವಾಗದೆ ಸಾಧ್ಯವಿಲ್ಲ ಎನ್ನಿಸುತ್ತದೆ ಇಲ್ಲಿ ಮಧ್ಯಸ್ಥಿಕೆಯು ನಡೆಯುವಂತಿಲ್ಲ ನಾವು ನಾವು ತಾನು ತಾನು ಯಾವ ಪಕ್ಷವನ್ನು ವಹಿಸಬೇಕು ಎಂಬುದನ್ನು ಮೊದಲೇ ಗೊತ್ತುಮಾಡಿಕೊಳ್ಳಬೇಕು ಹಾಗೆ ಗೊತ್ತುಮಾಡುವುದಕ್ಕೆ ಮೊದಲೇ ನಾವು ಅರಿಯಬೇಕು, ತಿಳಿಯಬೇಕು ಸೋಷಿಯಲಿಸಂ ಎಂದುಕೊಂಡು ಮನಸ್ಸು ಸೋತು ಆ ಎಂದು ಬಾಯಿಬಿಟ್ಟರೆ ಆಗುವುದಿಲ್ಲ ಇರುವ ಸ್ಥಿತಿಗತಿಗಳನ್ನೂ ಪಕ್ಷ ಪ್ರತಿಪಕ್ಷದವರ ವಾದವಿವಾದಗಳನ್ನೂ ನೋಡಿ ಕೇಳಿ, ನಮ್ಮ ಬುದ್ಧಿಯಿಂದ ಅದನ್ನು ಒರೆಹಚ್ಚಿ, ಚೆನ್ನಾಗಿ ಮನಃಪೂರ್ವಕವಾಗಿ ಪರೀಕ್ಷಿಸಿ ನೋಡಿದ ಮೇಲೆ ಅದನ್ನು ನಾವು ಅಂಗೀಕರಿಸಬೇಕು ಪಾಶ್ಚಿಮಾತ್ಯರಲ್ಲಿ ಈ ಜಾತಿಯ ಸಾಹಿತ್ಯವು ಬೇಕಾದಷ್ಟಿದೆ, ಆದರೆ ಹಿಂದೂಸ್ಥಾನದಲ್ಲಿ ಇಲ್ಲವೇ ಇಲ್ಲ ಎನ್ನಬಹುದು, ಈ ವಿಷಯವಾದ ಉತ್ತಮ ಗ್ರಂಥಗಳು ಹಿಂದೂಸ್ಥಾನಕ್ಕೆ ಬರುವಂತಿಲ್ಲ ಇತರ ದೇಶಗಳಿಂದ ಬರುವ ಪುಸ್ತಕಗಳನ್ನು ಓದಿದರೆ ಮಾತ್ರ ಸಾಲದು ಹಿಂದೂಸ್ಥಾನದಲ್ಲಿ ಸೋಷಿಯಲಿಸಂ ಅಭಿವೃದ್ಧಿಯಾಗಬೇಕಾದರೆ, ಅದು ಹಿಂದೂಸ್ಥಾನದಲ್ಲಿರುವ ಪರಿಸ್ಥಿತಿಗಳಿಗನುಗುಣವಾಗಿ ಬೆಳೆದುದು ಆಗಬೇಕು ಇದಕ್ಕೆ ಮುಂಚೆ ಇಲ್ಲಿರುವ ಪರಿಸ್ಥಿತಿಯೆಂತಹುದು ಎಂಬುದನ್ನು ಚೆನ್ನಾಗಿ ಪರೀಕ್ಷಿಸಬೇಕು ಈ ಸ್ಥಿತಿಗತಿಗಳನ್ನು ಚೆನ್ನಾಗಿ ಅರಿತು, ಇವುಗಳ ಪ್ರತಿಕ್ರಿಯೆಯೇನು ಎಂಬುದನ್ನು ಚೆನ್ನಾಗಿ ಚರ್ಚಿಸಬಲ್ಲ ವಿದ್ವಾಂಸರು ಬೇಕು ಆದರೆ, ಅಂತಹ ಸಮರ್ಥರೆಲ್ಲ ಸರಕಾರದ ನೌಕರಿಗಳಲ್ಲಿಯೋ ಅಥವಾ ಸರಕಾರದ ಕೈಕೆಳಗಿರುವ ವಿಶ್ವವಿದ್ಯಾನಿಲಯಗಳಲ್ಲಿಯೋ ಸೇರಿಹೋಗಿ ನಮಗೆ ಅಲಭ್ಯರಾಗಿರುವದು ನಮ್ಮ ದುರದೃಷ್ಟ ಅವರಿಂದ ಈ ಕೆಲಸವಾಗುವುದಿಲ್ಲ

ಸೋಷಿಯಲಿಸಂ ಬರಬೇಕಾದರೆ, ಬುದ್ಧಿಯು ಮಾತ್ರ ಸಿದ್ಧವಾದರೆ ಸಾಲದು ಅದಕ್ಕೆ ಇನ್ನೂ ಏನೇನೋ ಕಾರಣಗಳು ಬೇಕು. ಆದರೆ ಬುದ್ಧಿಯು ಸಿದ್ಧವಾಗದೆ ಹೋದರೆ ಆ ವಿಷಯವನ್ನು ತಿಳಿಯುವುದಾದರೂ ಎಂತು ? ಒಂದು ಪ್ರಬಲವಾದ ಚಳವಳಿಯನ್ನು ಹೂಡುವುದಾದರೂ ಎಂತು ? ಈ ಸದ್ಯದಲ್ಲಿ ಹಿಂದೂಸ್ಥಾನದಲ್ಲಿ ರೈತರ ಸಮಸ್ಯೆಯೇ ಸಮಸ್ಯೆ. ಇನ್ನೂ ಕೆಲವು ಕಾಲ ಇದು ಹೀಗೆಯೇ ಉಳಿಯುವುದರಲ್ಲಿ ಸಂದೇಹವೂ ಇಲ್ಲ ಈಗ ಔದ್ಯೋಗಿಕ ಸಮಸ್ಯೆಯು ರೈತರ ಸಮಸ್ಯೆಯಷ್ಟು ಭಾರಿಯಲ್ಲದಿದ್ದರೂ ಅದು ಬರುಬರುತ್ತ ಬೆಳೆಯುತ್ತದೆ ಮುಂದೆ ನಮ್ಮ ದೇಶವು ಎಂತಹ ದೇಶವಾಗಬೇಕು ರೈತರ ದೇಶವಾಗಬೇಕೆ ? ಔದ್ಯೋಗಿಕ ದೇಶವಾಗಬೇಕೆ ? ನಮ್ಮ ದೇಶದ ಸ್ಥಿತಿಯಲ್ಲಿ ನಮ್ಮ ದೇಶವು ಬಹಳ ಮಟ್ಟಿಗೆ ರೈತರ ದೇಶವಾಗಿಯೇ ಉಳಿಯಬೇಕು ಎಂಬುವರಲ್ಲಿ ಸಂದೇಹವಿಲ್ಲ ಆದರೂ ಉದ್ಯೋಗಗಳನ್ನೂ ಬೆಳೆಸಬಹುದು, ಬೆಳೆಸಬೇಕು, ನಮ್ಮಲ್ಲಿ ಉದ್ಯೋಗ ಶೂರರಾದವರು ಯಾರಿಗೂ ಮುಂದುವರಿದ ಭಾವನೆಗಳೇ ಇಲ್ಲದಿರುವುದು ಒಂದು ಆಶ್ಚರ್ಯ ಅದೂ ಇರಲಿ ಅವರು ಈಗ ಏನು ನಡೆಯುತ್ತಿದೆ ಎಂಬುದನ್ನೂ ಕಾಣದವರು ಪ್ರಜಾವರ್ಗವು ತೀರ ಬಡವರಾದ್ದರಿಂದ ಇವರು ಅವರನ್ನು ತಮ್ಮ ಭಾವೀ ಗಿರಾಕಿಗಳೆಂದೂ ಭಾವಿಸುವುದಿಲ್ಲ. ಕೂಲಿಯನ್ನು ಕೊಂಚ ಹೆಚ್ಚಿಸಿ, ಕೆಲಸದ ಕಾಲವನ್ನು ಕೊಂಚ ಕಡಿಮೆಮಾಡಿ ಎಂದರೆ, ಕಡಿದಾಗಿ ಕಾದಾಡುತ್ತಾರೆ ಈಚೆಗೆ ಹತ್ತಿಯ ಗಿರಣಿಗಳಲ್ಲಿ ಕೆಲಸದ ಕಾಲವನ್ನು ಹತ್ತರಿಂದ ಒಂಭತ್ತು ಗಂಟೆಗಳಿಗೆ ಇಳಿಸಿದ್ದಾರೆ ಇದರ ಫಲವಾಗಿ ಅಹಮದಾಬಾದಿನ ಗಿರಣಿ ಸ್ವಾಮಿಗಳು ಪೀಸ್‌ವರ್ಕ್ ಕೂಲಿಯನ್ನೂ ಕೂಲಿಯ ದರವನ್ನೂ ಕಡಿಮೆಮಾಡಿದ್ದಾರೆ ಹೀಗೆ, ಕೂಲಿಯ ಕಾಲವು ಕಡಿಮೆಯಾಗುವುದರ ಜೊತೆಗೆ ಅವರ ಉತ್ಪತ್ತಿಯೂ ಕಡಿಮೆಯಾಗಿ ಆ ಬಡ ಕೂಲಿಯವನ ಜೀವನದ ಅಂತಸ್ತೂ ಕಡಿಮೆಯಾಗಿದೆ ಕೂಲಿಯವನ ಮೇಲಿನ ಭಾರವನ್ನೂ ಅವನ ಆಯಾಸವನ್ನೂ ಹೆಚ್ಚಿಸಿದರೂ ಅದಕ್ಕೆ ತಕ್ಕಂತೆ ಅವನಿಗೆ ಕೂಲಿಯನ್ನೂ ಹೆಚ್ಚುಕೊಡದೆ ರ್‍ಯಾಷನಲೈಸೇಷನ್ ಮಾತ್ರ ಮುಂದುಮುಂದಕ್ಕೆ ಹೋಗುತ್ತಿದೆ ಉದ್ಯೋಗಗಳಲ್ಲಿರುವವರ ಮನೋಭಾವವೆಲ್ಲ ಒಂದು ಶತಮಾನದ ಹಿಂದೆ ಹೇಗಿತ್ತೋ ಇನ್ನೂ ಹಾಗೇ ಇದೆ ಅನುಕೂಲವಾದಾಗ ಅವರು ಅಪಾರವಾದ ಲಾಭವನ್ನು ಸಂಪಾದಿಸುತ್ತಾರೆ, ಕೂಲಿಗಾರರು ಮಾತ್ರ ಎಂದಿನಂತೆಯೇ ಇರುತ್ತಾರೆ ಮಾಲೀಕರಿಗೆ ಬರುವ ಲಾಭವು ಕೊಂಚ ಕಡಿಮೆಯಾಯಿತೆಂದರೆ ಕೂಡಲೇ, ಕೂಲಿಯ ದರವನ್ನು ಕಡಿಮೆಮಾಡಿದ್ದಲ್ಲದೆ ಮುಂದೆ ನಡೆಸುವುದು ತಮಗೆ ಸಾಧ್ಯವಿಲ್ಲವೆನ್ನುತ್ತಾರೆ ಈ ಮಾಲೀಕರಿಗೆ ಸರಕಾರದ ಸಹಾಯವಿರುವುದು ಮಾತ್ರವೇ ಅಲ್ಲ, ಮಧ್ಯವರ್ಗದ ರಾಜಕೀಯ ಮುಖಂಡರೂ ಅತ್ತಕಡೆಯೇ ಇರುತ್ತಾರೆ ಇಷ್ಟಾದರೂ ಅಹಮದಾಬಾದಿನ ಹತ್ತಿಯ ಕೂಲಿಯ ಬಾಳು ಬೊಂಬಾಯಿ ಮತ್ತು ಇತರ ಕಡೆಗಳಲ್ಲಿರುವ ಹತ್ತಿಯ ಕೂಲಿಗಳಿಗಿಂತ ಎಷ್ಟೋ ವಾಸಿ ಬಂಗಾಳದ ಗೋಣೀ ಕೂಲಿಗಳಿಗಿಂತ, ಗಣಿಯ ಕೂಲಿಗಳಿಗಿಂತ, ಹತ್ತಿಯ ಕೂಲಿಗಳೇ ಎಷ್ಟೋ

ವಾಸಿ ಈ ಔದ್ಯೋಗಿಕ ಪಂಕ್ತಿಯಲ್ಲಿ, ಅವ್ಯವಸ್ಥಿತವಾದ ಸಣ್ಣಪುಟ್ಟ ಉದ್ಯೋಗ ಗಳಲ್ಲಿರುವ ಕೂಲಿಗಳ ಸ್ಥಿತಿಯು ಬಹಳ ನೀಚವಾದುದು ಗೋಣೀ ಮಿಲ್ಲುಗಳ ಮತ್ತು ಹತ್ತಿಯ ಮಿಲ್ಲುಗಳ ಮಾಲೀಕರು ವಾಸಿಸುವ ವೈಭವದ ಅರಮನೆಗಳನ್ನು ಅವರ ಠೀವಿ ಅಟ್ಟಹಾಸಗಳನ್ನು ಅವರಲ್ಲಿ ಕೆಲಸಕ್ಕಿರುವ ಅತಿಬೆತ್ತಲೆಯುವರು ವಾಸವಾಗಿರುವ ಆ ಕೆಟ್ಟ ಗುಡಿಸಲುಗಳನ್ನು ಹೋಲಿಸಿ ನೋಡಿದರೆ, ಆಗ ಎಲ್ಲವೂ ಮನಸ್ಸಿಗೆ ಹಿಡಿ ದೀತು ಆದರೆ ಈ ತಾರತಮ್ಯವನ್ನು ಕಂಡಾಗ ನಾವು, ಲೋಕವೇ ಹೀಗೆ, ಯಾರೇನು ಮಾಡುವುದಕ್ಕೆ ಸಾಧ್ಯ ಎಂದುಕೊಂಡು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳದೆ ಮುಂದೆ ನಡೆಯುತ್ತೇವೆ

ಉದ್ಯೋಗಗಳಲ್ಲಿರುವ ಕೂಲಿಗಾರರ ಬಾಳು ಇಷ್ಟು ಕನಿಷ್ಟವಾಗಿದ್ದರೂ ರೈತರ ಬಾಳಿಗಿಂತ ಆದಾಯದ ದೃಷ್ಟಿಯಲ್ಲಿ ಎಷ್ಟೋ ವಾಸಿ ರೈತನು ಬಯಲಿನಲ್ಲಿದ್ದು ಕೆಟ್ಟ ಮನೆಗಳಲ್ಲಿರುವ ಕೂಲಿಕಾರನಂತೆ ಸೋತಿರುವುದಿಲ್ಲ ನಿಜ ಆದರೆ, ರೈತನು ಸೋತು ಸೋತು ತನ್ನ ಬಯಲಿನ ಹಳ್ಳಿಯನ್ನೂ ಗಾಂಧಿಜಿಯು ಹೇಳುವಂತೆ ಗೊಬ್ಬರದ ಗುಂಡಿ ಮಾಡಿಕೊಂಡಿರುತ್ತಾನೆ ಅವನಲ್ಲಿ ಸಹಕಾರಭಾವವೇ ಇರುವುದಿಲ್ಲ ಊರಿ ಗಷ್ಟು ಉಪಕಾರ ಮಾಡಲು ಮುಂದೆ ಬಂದು ಎಲ್ಲರ ಜೊತೆಯಲ್ಲಿ ಅಷ್ಟು ದುಡಿ ಯುವ ಎಂಬ ಭಾವವೇ ಇರುವುದಿಲ್ಲ ಅವನನ್ನು ಇದಕ್ಕಾಗಿ ನಾವು ದೂಷಿಸುವುದು ಸುಲಭ. ಆದರೆ ಬೆಳಗಿನಿಂದ ಸಂಜೆಯವರೆಗೆ ಬಿಡುವಿಲ್ಲದೆ ದುಡಿಯುತ್ತಿದ್ದರೂ ನೀನೇ ಎನ್ನುವರಿಲ್ಲದೆ ಗೋಳಾಡಬೇಕಾಗಿರುವ ಆ ಬಡಪಾಯಿಯು ಏನು ಮಾಡ ಬೇಕು ? ಅವನು ಬದುಕಿರುವದೇ ಆಶ್ಚರ್ಯ ! ಅದ್ಭುತ ಆಶ್ಚರ್ಯ ! ಪಂಜಾಬಿ ನಲ್ಲಿರುವ ಜಾತಿಯ ರೈತನ ದಿನದ ಆದಾಯ, ತಲೆಗೆ ಸುಮಾರು ಒಂಭತ್ತು ಆಣೆ ಇದು ೧೯೨೮ ರಲ್ಲಿ ೧೯೩೦—೩೧ ರಲ್ಲಿ ಇದು ತಲೆಗೆ ಒಂಭತ್ತು ಕಾಸಾಯಿತು ಸ. ಪ್ರಾ , ಬಿಹಾರ್, ಬಂಗಾಲಗಳಲ್ಲಿರುವ ರೈತರಿಗಿಂತ ಪಂಜಾಬಿನ ರೈತನು ಎಷ್ಟೋ ಉತ್ತಮವೆಂದು ಭಾವನೆ ಸ. ಪ್ರಾ ದ ಪೂರ್ವದಿಕ್ಕಿನ ಜಿಲ್ಲೆಗಳಲ್ಲಿ ಮುಗ್ಗಟ್ಟಿನ ಮುಂಚಿನ ತುಷ್ಟಿಯ ದಿನಗಳಲ್ಲಿ ದಿನ ಕೂಲಿಯು ಎರಡು ಆಣೆ ಬಾಯಿ ತುಂಬ ಜೀವಕಾರುಣ್ಯದ ಮಾತನಾಡಿ ಅಲ್ಲಲ್ಲಿ ಏನೋ ಕಣ್ಣೊರೆಸುವಂತಹ ಸಣ್ಣಪುಟ್ಟ ಕೆಲಸ ಗಳನ್ನು ಮಾಡಿ ಈ ಭಯಂಕರ ಸ್ಥಿತಿಗಳನ್ನು ಉತ್ತಮಪಡಿಸುವೆವೆಂದರೆ ಅದು ರೈತನನ್ನೂ ಅವನ ಗೋಳನ್ನೂ ಕಂಡು ಅಪಹಾಸ್ಯ ಮಾಡಿದ ಹಾಗೆ !

ಈ ಕಳ್ಳ ಉಸುಬಿನಿಂದ ಈಚೆಗೆ ಬರುವುದು ಹೇಗೆ ? ಇಷ್ಟು ಮುಳುಗಿಹೋಗಿ ರುವ ಪ್ರಜಾ ವರ್ಗವನ್ನು ಉದ್ಧರಿಸುವದು ಕಷ್ಟವಾದರೂ ಉಪಾಯಗಳನ್ನು ಹುಡುಕ ಬಹುದು ಆದರೆ ಬದಲಾವಣೆಗಳು ಕೂಡದು ಎಂದು ಹೇಳುವ ಸ್ವಾರ್ಥಪರರಿಂದ ಇದಕ್ಕೆ ಅಡ್ಡಿ ಬರುವುದು ಮತ್ತು ಸಾಮ್ರಾಜ್ಯವಾದಿಗಳ ಕೈಕೆಳಗಿರುವವರೆಗೂ ಈ ಬದ ಲಾವಣೆಗಳನ್ನು ಕುರಿತು ಯೋಚಿಸಲೂ ಬೇಕಾಗಿಲ್ಲ. ಈ ಮುಂದಿನ ವರ್ಷಗಳಲ್ಲಿ

ಹಿಂದೂಸ್ಥಾನವು ಎತ್ತ ತಿರುಗುವುದು ? ಕಮ್ಯೂನಿಸಂ, ಫೇಸಿಸಂ ಇವೆರಡೇ ಈಗಿನ ಕಾಲಕ್ಕೆ ಸರಿ ಎಂದು ತೋರುತ್ತದೆ ಇವೆರಡಕ್ಕೂ ನಡುವಿನ ಇತರ ಇಸಂಗಳೂ ಗುಂಪುಗಳೂ ಬರುಬರುತ್ತ ಅಂತರ್ಧಾನವಾಗುತ್ತಿವೆ ಸರ್ ಮಾಲ್ಕಂ ಹೇಲಿ ಯವರು ಹಿಂದೂಸ್ಥಾನದಲ್ಲಿ ನೇಷನಲ್ ಸೋಷಿಯಲಿಸಂ ಬರುವುದೆಂದು ಹೇಳಿದ್ದಾರೆ. ಅದೂ ಒಂದು ಜಾತಿಯ ಫೇಸಿಸವಷ್ಟೇ ಬಹುಶಃ ಈ ಸದ್ಯದ ಭವಿಷ್ಯದಲ್ಲಿ ಅವರು ಹೇಳಿದಂತೆಯೇ ಆಗಬಹುದು. ಮುಖ್ಯವಾಗಿ ಬಂಗಾಳದಲ್ಲಿ ಇತರ ಪ್ರಾಂತಗಳಲ್ಲಿ ಅಲ್ಪ ಸ್ವಲ್ಪವಾಗಿ ಅಂತೂ ಸ್ಪಷ್ಟವಾಗಿ ಹಿಂದೂಸ್ಥಾನದ ತರುಣರ ಮನಸ್ಸಿನಲ್ಲಿ ಫೇಸಿಸಮ್ಮಿನ ಲಕ್ಷಣಗಳು ಕಾಣಬರುತ್ತಿವೆ ಆ ಲಕ್ಷಣಗಳು ಕಾಂಗ್ರೆಸ್ಸಿನಲ್ಲಿಯೂ ಕಂಡು ಬರುತ್ತಿವೆ. ಫೇಸಿಸಂ ಎಂದ ಕೂಡಲೇ ಹಿಂಸೆಯ ಪರಮಾವಧಿ ರೂಪವು ಎದುರಿಗೆ ಬಂದು ನಿಲ್ಲುವುದರಿಂದ ಅಹಿಂಸೆಯನ್ನು ವ್ರತವೆಂದು ಅಂಗೀಕರಿಸುವ ಕಾಂಗ್ರೆಸ್ಸಿನ ಹಿರಿಯರು ಅದನ್ನು ಕಂಡು ಅಂಜುತ್ತಿದ್ದಾರೆ ಆದರೆ– ಒಂದು ಸರಕಾರ ಸ್ವಂತ ಆಸ್ತಿಯುಂಟು ಆಸ್ತಿವಂತರನ್ನು ಓಡಿಸದೆ ಮಿತಿಮೀರದಂತೆ ಹದ್ದಿನಲ್ಲಿಟ್ಟಿರುವುದು–ಎಂಬ ಫೇಸಿಸಮ್ಮಿನ ತತ್ವಗಳು ಬಹುಶಃ ಅವರಿಗೆ ಹಿಡಿಯಬಹುದು ಹಿಂದಿನ ಪದ್ಧತಿಯನ್ನಿಟ್ಟುಕೊಂಡು ಹೊಸ ಪದ್ಧತಿಯನ್ನು ಬರಮಾಡಿಕೊಳ್ಳಲು ಅಪೂರ್ವ ಸುಯೋಗವಿದು ಎನ್ನಿಸಬಹುದು ಅವರಿಗೆ ಆದರೆ, ನಾಟೋಬೇಕು ಗಂಟೋಬೇಕು ಎಂದರೆ ಕಷ್ಟ ಎನ್ನುವುದೂ ಒಂದು ಪ್ರಶ್ನೆಯಿದೆ

ಮಧ್ಯಮ ವರ್ಗದ ತರುಣರು ಈ ಫೇಸಿಸಂ ಬೇಕೆನ್ನುವವರು ಈಗಲೂ ಕ್ರಾಂತಿಯ ಪಕ್ಷಪಾತಿಗಳಾಗಿರುವರು ಮಧ್ಯಮ ವರ್ಗದವರೇ ! ಕೂಲಿಗಾರರಾಗಲೀ ರೈತರಾಗಲೀ ಇನ್ನೂ ಕ್ರಾಂತಿಯ ಕಡೆಗೆ ತಿರುಗಿಲ್ಲ ಕೂಲಿಗಾರರು ಎಂದಿದ್ದರೂ ಇತ್ತ ಕಡೆ ತಿರುಗುವರು ದೇಶಾಭಿಮಾನಿಗಳಾದ ಈ ಮಧ್ಯಮ ವರ್ಗದವರು ಫೇಸಿಸ್ಟ್ ಭಾವನೆಗಳು ಹರಡುವುದಕ್ಕೆ ಯೋಗ್ಯವಾದ ಕ್ಷೇತ್ರ ಆದರ ಸರಕಾರವು ಪರದೇಶದವರ ಕೈಯಲ್ಲಿರುವವರೆಗೂ ಇಲ್ಲಿ ಫೇಸಿಸಂ ಹರಡಲಾರದು ಹಿಂದೂಸ್ಥಾನದ ಫೇಸಿಸಂ ಏನಿದ್ದರೂ ಹಿಂದೂಸ್ಥಾನದ ಸ್ವಾತಂತ್ರ್ಯವನ್ನು ಅಪೇಕ್ಷಿಸುವುದೇ ಹೊರತು ಬ್ರಿಟಿಷ್ ಸಾಮ್ರಾಜ್ಯವಾದಿಗಳ ಗೆಳೆಯನಾಗುವುದಿಲ್ಲ ಅದು ಪ್ರಜಾವರ್ಗದ ಕಡೆಯಿಂದ ತನ್ನ ಶಕ್ತಿಯನ್ನು ಪಡೆಯಬೇಕಾಗುವುದು ಬ್ರಿಟಿಷರ ಅಂಕೆಯು ಪೂರ್ಣವಾಗಿ ತಪ್ಪಿದರೆ, ಆಗ ಫೇಸಿಸಂ ಜಾಗ್ರತೆಯಾಗಿ ಬೆಳೆದರೂ ಬೆಳೆಯಬಹುದು ಮಧ್ಯಮವರ್ಗದ ಉತ್ತಮರೂ (ಉತ್ತಮ ಮಧ್ಯಮ ವರ್ಗ) ಆಸ್ತಿವಂತರೂ ತಪ್ಪದೆ ಆದಕ್ಕೆ ಸಹಾಯವಾಗಿ ನಿಲ್ಲುವರು

ಆದರೆ ಬ್ರಿಟಿಷರ ಪ್ರಭುತ್ವವು ಬೇಗ ತಪ್ಪುವ ಸಂಭವವಿಲ್ಲ ಸಾಲದೆ, ಸೋಷಿಯಲಿಸ್ಟ್ ಮತ್ತು ಕಮ್ಯೂನಿಸ್ಟ್ ಭಾವನೆಗಳೂ ಬ್ರಿಟಿಷ್ ಸರಕಾರವು ತುಳಿಯುತ್ತಿದ್ದರೂ ಹರಡುತ್ತಿವೆ, ಕಮ್ಯೂನಿಸ್ಟ್ ಪಾರ್ಟಿಯು ಹಿಂದೂಸ್ಥಾನದಲ್ಲಿ

ನ್ಯಾಯಬಾಹಿರವೆಂದಾಗಿದೆ. ಈ ಪದವನ್ನು ಬಹಳ ಸಾಧಾರಣವಾಗಿ ಉಪಯೋಗಿಸು ತ್ತಿದ್ದಾರೆ ಅದರಲ್ಲಿ ವಿಶ್ವಾಸವುಳ್ಳವರೂ ಮತ್ತು ಕೊಂಚ ಮುಂದುವರಿದ ಕೂಲಿ ಗಾರರ ಸಂಘಗಳು ಎಲ್ಲವನ್ನೂ ಕಮ್ಯೂನಿಸ್ಟ್ ಎಂದೇ ಕರೆಯುತ್ತಿದ್ದಾರೆ.

ಫೇಸಿಸಂ ಕಮ್ಯೂನಿಸಂ, ಇವೆರಡರಲ್ಲಿ ನನಗೆ ಕಮ್ಯೂನಿಸಂ ಮೇಲೆಯೇ ಹೆಚ್ಚು ವಿಶ್ವಾಸ ಇದುವರೆಗೆ ಬರೆದಿರುವುದರಲ್ಲಿ ಕಂಡಂತೆ, ನಾನೂ ಹೆಚ್ಚು ಕಡಿಮೆ ಒಬ್ಬ ಕಮ್ಯೂನಿಸ್ಟ್ ಬಹುಶಃ ನನ್ನ ಮನಸ್ಸು ಇನ್ನೂ ಕಳೆದ ಶತಮಾನದ ಕಡೆಗೇ ವಾಲಿರಬಹುದು ಮತ್ತು ಪ್ರಜಾವರ್ಗಕ್ಕೆ ಅದರಿಂದ ಬಹಳ ಉಪಕಾರವಾಗಿದೆ ಯೆಂಬುದರಿಂದ ನನ್ನ ಮನಸ್ಸು ಅತ್ತಕಡೆಗೆ ಒಲಿದು, ನನಗೆ ಅದರ ಮೇಲಿನ ಮಮತೆ ಯನ್ನು ಸಂಪೂರ್ಣವಾಗಿ ಬಿಡುವುದು ಅಸಾಧ್ಯವಾಗಿರಬಹುದು ಈ ನಾಗರಿಕ ಭಾವವು ನನ್ನಲ್ಲಿ ಸ್ಪಷ್ಟವಾಗಿದ್ದು ಇತರ ಕಮ್ಯೂನಿಸ್ಟರಿಗೆ ನನ್ನನ್ನು ಕಂಡಾಗ ಕೊಂಚ ರೇಗಬಹುದು ನನಗೆ ಪ್ರಭುಸಮ್ಮತಿಯ ಸಿದ್ಧಾಂತಗಳು ಸರಿಬೀಳುವುದಿಲ್ಲ ಕಾರ್ಲ್ ಮಾರ್ಕ್ಸ್‌ನ ಬರೆವಣಿಗೆಯ ರೀತಿಯು ಒಪ್ಪುವುದಿಲ್ಲ ಯಾವ ಪುಸ್ತಕವನ್ನೇ ಆಗಲಿ, ಕಣ್ಮುಚ್ಚಿಕೊಂಡು ಈಶ್ವರವಾಕ್ಯವೆಂದು ಅಂಗೀಕರಿಸುವುದು ಸಾಧ್ಯವಿಲ್ಲ ಹಾಗೆಯೇ ಗುಂಪುಗುಂಪು ಮಾಡುವುದು ಮತ್ತು ನಂಬದಿದ್ದವರನ್ನು ಗಲ್ಲಿಗೆ ಹಾಕುವುದು ಮುಂತಾದ ನವೀನ ಕಮ್ಯೂನಿಸಂ ಲಕ್ಷಣಗಳೂ ಸರಿಬೀಳುವುದಿಲ್ಲ ಹಾಗೆಯೇ ರಷ್ಯಾದಲ್ಲಿ ಆಗಿರುವುದೆಷ್ಟೋ ನನಗೆ ಸಮ್ಮತವಾಗಿಲ್ಲ ಅದರೊಳಗೂ ಸಮಾಧಾನ ಕಾಲದಲ್ಲಿಯೂ ಹಿಂಸೆಯನ್ನು ಅಷ್ಟು ಅತಿಯಾಗಿ ಉಪಯೋಗಿಸುವುದಂತೂ ನನಗೆ ಎಳ್ಳಷ್ಟೂ ಸರಿತೋರುವುದಿಲ್ಲ ಇಷ್ಟಾದರೂ ನನಗೆ ಆ ಕಮ್ಯೂನಿಸ್ಟ್ ಶತೃಗಳ ಕಡೆಗೇ ಮನಸ್ಸು ಎಳೆಯುತ್ತದೆ

ಕಾರ್ಲ್‌ಮಾರ್ಕ್ಸ್‌ನು ಹೇಳಿರುವುದರಲ್ಲಿ ತಪ್ಪಿರಬಹುದು ಅವನ ಪುರುಷಾರ್ಥ ಸಿದ್ಧಾಂತವೇ ಸರಿಯಿಲ್ಲದಿರಬಹುದು. ಅದನ್ನು ಒಳ್ಳೆಯದು ಕೆಟ್ಟದು ಎಂದು ಹೇಳಲು ನನಗೆ ಅಧಿಕಾರ ಸಾಲದು ಆದರ ಅವನಿಗೆ ಸಾಮಾಜಿಕ ಸ್ಥಿತಿಯ ರಹಸ್ಯವನ್ನು ಭೇದಿಸಬಲ್ಲ ಅತಿಶಯ ಸಾಮರ್ಥ್ಯವಿತ್ತು ಅವನು ಅವಲಂಬಿಸಿದ ಶಾಸ್ತ್ರೀಯ ಪದ್ಧತಿಯಿಂದ ಅವನಿಗೆ ಆ ಸಾಮರ್ಥ್ಯವು ಬಂತು ಅವನ ಪದ್ಧತಿಯನ್ನು ಹಿಂದಿನ ಚರಿತ್ರೆಗ ಗಲೀ ಇಂದಿನ ಪರಿಸ್ಥಿತಿಗಾಗಲೀ ಜೋಡಿಸಿ ನೋಡಿದರೆ, ಇತರ ಪದ್ಧತಿ ಗಳಿಗಿಂತ ಚೆನ್ನಾಗಿ ಅರ್ಥ ಮಾಡಿಕೊಡುತ್ತದೆ ಇಂದಿನ ಜಗತ್ತಿನಲ್ಲಿ ಆಗುತ್ತಿರುವ ಬದಲಾವಣೆಗಳ ವಿಚಾರವಾಗಿ ಇಂದಿಗೂ ಬಹು ಚೆನ್ನಾಗಿ ಬರೆಯಬಲ್ಲವರು ಮಾರ್ಕ್ಸ್‌ನ ಅನುಯಾಯಿಗಳೇ ಆಗಿರುವುದಕ್ಕೆ ಇದೂ ಒಂದು ಕಾರಣ. ಆಮೇಲೆ ಕಾಣಿಸಿ ಕೊಂಡು ಈಗ ತಾನೇತಾನಾಗಿರುವ ಮಧ್ಯಮವರ್ಗದ ಕ್ರಾಂತಿ ಬೀಜದಂತಹ ಕೆಲವು ಬೀಜಶಕ್ತಿಗಳನ್ನು ಮಾರ್ಕ್ಸ್‌ನು ನೋಡಲಿಲ್ಲ ನೋಡಿದರೂ ಅವುಗಳಿಗೆ ತಕ್ಕಷ್ಟು ಗಮನ ಕೊಡಲಿಲ್ಲ ಎಂದು ಹೇಳಬಹುದು ಆದರೆ ಮಾರ್ಕ್ಸ್‌ನ ಸಿದ್ಧಾಂತಗಳಲ್ಲಿ

ಇರುವ ಸ್ವಾರಸ್ಯವಿಷ್ಟು, ಅದರಲ್ಲಿ ಪ್ರಭುಸಮ್ಮತಿಯ ಸಿದ್ಧಾಂತಗಳಿಲ್ಲ, ಯಾವುದೋ ಒಂದು ನಿರ್ದಿಷ್ಟ ದೃಷ್ಟಿಯನ್ನಿಟ್ಟುಕೊಂಡು ವಿಷಯಗಳನ್ನು ನೋಡುವುದು, ಕೆಲಸ ಮಾಡುವುದರಲ್ಲಿ ವಿಶ್ವಾಸ ಇವು. ಆ ಮನೋಭಾವದಿಂದ ಹೊರಟರೆ ನಮ್ಮ ಸುತ್ತ ಮುತ್ತಿನ ಸಾಮಾಜಿಕ ಪರಿಸ್ಥಿತಿಯನ್ನು ತಿಳಿದುಕೊಳ್ಳಲು, ಇದರಿಂದ ತಪ್ಪಿಸಿಕೊಳ್ಳಲು ಏನು ಮಾಡಬೇಕು ಎಂಬುದನ್ನು ಅರಿತುಕೊಳ್ಳಲು ಸಾಧ್ಯವಾಗುತ್ತದೆ.

ಆ ಕಾರ್ಯಕ್ರಮವೂ ಬದಲಾಯಿಸುವದಕ್ಕಾಗದಂತಹ ವಜ್ರಖಚಿತವಾದ ಮಾರ್ಗವಲ್ಲ, ಪರಿಸ್ಥಿತಿಗನುಗುಣವಾಗಿ ಅದನ್ನು ಮಾರ್ಪಡಿಸಿಕೊಳ್ಳಬಹುದು ಇತರರ ಮಾತಿರಲಿ, ಲೆನಿನ್ನನಂತೂ ಹಾಗೇ ಅರ್ಥ ಮಾಡಿದನು, ಅಷ್ಟೇ ಅಲ್ಲ, ತಾನು ಸರಿಯೆಂಬುದನ್ನು, ಪರಿವರ್ತನವಾಗುತ್ತಿರುವ ಪರಿಸ್ಥಿತಿಗನುಸಾರವಾಗಿ ಕಾರ್ಯ ಕ್ರಮವನ್ನೂ ಪರಿವರ್ತಿಸಿ ಅದ್ಭುತ ಫಲಗಳನ್ನು ಪಡೆದು ತೋರಿಸಿಯೂ ತೋರಿಸಿದನು. ಲೆನಿನ್ನನು ಹೇಳುವುದೂ ಇಷ್ಟೇ "ಒಂದು ನಿರ್ದಿಷ್ಟ ಕಾಲದಲ್ಲಿರುವ ಯಾವುದೋ ಒಂದು ಘಟ್ಟದ ಸಂಪೂರ್ಣ ವಿವರಗಳನ್ನು ಅರಿಯದೇ ಹೀಗೆ ಮಾಡುವುದು ಸರಿ, ಹೀಗೆ ಮಾಡುವುದು ತಪ್ಪು ಎಂದು ಹೇಳಲು ಯತ್ನಿಸುವುದು ಎಂದರೆ ಮಾರ್ಕ್ಸ್‌ನ ಸಿದ್ಧಾಂತವನ್ನು ಗಾಳಿಗೆ ತೂರಿದ ಹಾಗೆ" ಮತ್ತೆಯೂ "ಯಾವುದೂ ಕೊನೆಯಲ್ಲ, ಆಯಾ ಪರಿಸ್ಥಿತಿಗಳಿಂದಲೇ ನಾವು ಕಲಿತುಕೊಳ್ಳಬೇಕು" ಎಂದೂ ಹೇಳಿದ್ದಾನೆ

ಈ ವಿಶಾಲವಾದ ಮತ್ತು ಸರ್ವಗ್ರಾಹಿಯಾದ ದೃಷ್ಟಿಯಿರುವುದರಿಂದಲೇ ನಿಜವಾಗಿಯೂ ಅರಿವುಳ್ಳ ಕಮ್ಯೂನಿಸ್ಟನಿಗೆ ಸಾಮಾಜಿಕ ಜೀವನವೆಲ್ಲ ಒಂದು ದೇಹದಂತೆ ಎಂಬ ತಿಳಿವಳಿಕೆಯು ಬರುತ್ತದೆ. ರಾಜಕೀಯ ವ್ಯವಹಾರವೆಂದರೆ ಅಂಥವರಿಗೆ ಗಾಳಿ ಬಂದಾಗ ತೂರಿಕೊಳ್ಳುವ ಅನುಕೂಲ ಸಿಂಧುವೂ ಅಲ್ಲ, ಕತ್ತಲಿನಲ್ಲಿ ತಡೆವರಿಸುವ ಕಣ್ಣುಮುಚ್ಚಾಲೆಯೂ ಅಲ್ಲ ಮಾನವ ಕುಲದ ಗುರಿಯನ್ನು ಮುಟ್ಟಲು ಹೊರಟಿರುವ ಭಾರಿಯ ಸೈನ್ಯದಲ್ಲಿ ತಾನೂ ಒಬ್ಬ, ಮಾನವ ಕುಲದ ಇತಿಹಾಸವು ಮುಂದೆ ಮುಂದೆ ಅಡಿಯಿಟ್ಟಂತೆಲ್ಲ ತಾನು ಒಂದೊಂದು ಅಡಿಯಿಟ್ಟು ಮುಂದೆ ಸಾಗುತ್ತಿದ್ದೇನೆ ಎಂದು ಅವನಿಗೆ ಎನ್ನಿಸುತ್ತದೆ.

ಬಹುಶಃ ಅನೇಕಾನೇಕ ಕಮ್ಯೂನಿಸ್ಟರಿಗೆ ಹೀಗಿರಲಾರದು. ಬಹುಶಃ ಲೆನಿನ್ ಒಬ್ಬನಿಗೆ ಮಾತ್ರ ಈ ಸಮಷ್ಟಿ ಭಾವನೆಯು ಅದರ ಸಂಪೂರ್ಣತೆಯಲ್ಲಿ - ಗೋಚ ರಿಸಿತ್ತು ಎಂದು ತೋರುತ್ತದೆ ಅದರಿಂದಲೇ ಅವನ ಕಾರ್ಯಗಳು ಅಷ್ಟು ಪರಿ ಣಾಮಕಾರಿಯಾದುದು ಆದರೆ ಪ್ರತಿಯೊಬ್ಬ ಕಮ್ಯೂನಿಸ್ಟನೂ ತಾನೇಕೆ ಹೀಗೆ ಮಾಡುತ್ತಿದ್ದೇನೆಂಬುದನ್ನು ಕೊಂಚವಾದರೂ ಅರಿತಿದ್ದರೆ, ಅವನಿಗೂ ಈ ಭಾವ ನೆಯು ಅಲ್ಪಸ್ವಲ್ಪವಾಗಿಯಾದರೂ ಇರುತ್ತದೆ

ಅನೇಕ ಕಮ್ಯೂನಿಸ್ಟರನ್ನು ನೋಡಿ ಸುಮ್ಮನಿರಲು ಆಗುವುದಿಲ್ಲ. ಅವರಲ್ಲಿ ಇತರರನ್ನು ರೇಗಿಸುವ ವಿಚಿತ್ರ ಸ್ವಭಾವವು ಬೆಳೆದಿರುತ್ತದೆ ಪಾಪ! ಅವರು ಬಹಳ ನೊಂದವರು. ಸೋವಿಯಟ್ ಯೂನಿಯನ್ ಒಂದುಬಿಟ್ಟು ಮಿಕ್ಕೆಲ್ಲೆಲ್ಲಿಯೂ ಅವರು ಬಹಳ ಭಾರಿಯ ಕಷ್ಟಗಳನ್ನು ಅನುಭವಿಸಬೇಕಾಗಿದೆ ಅವರ ಅದ್ಭುತವಾದ ಧೈರ್ಯ ಮತ್ತು ಬೇಕಾದ್ದನ್ನು ಬಲಿಗೊಡುವ ಸಾಮರ್ಥ್ಯ ಇವುಗಳನ್ನು ಕಂಡು ನನಗೆ ಬಹಳ ಮೆಚ್ಚಿಕೆಯಾಗಿದೆ ಅವರು ಅಪಾರ ಕಷ್ಟಗಳನ್ನು ಅನುಭವಿಸು ತ್ತಾರೆ ಲಕ್ಷಾಂತರ ಜನರು ಇತರ ವಿಧಗಳಲ್ಲಿ ಅನುಭವಿಸುವಷ್ಟೇ ಅಸೌಖ್ಯದಿಂದಲೇ ಅನುಭವಿಸಿದರೂ, ವಕ್ರವಾಗಿರುವ ಸರ್ವಸಮರ್ಥವಾದ ವಿಧಿಯನ್ನು ನಂಬಿ ಕುರು ಡರಂತೆ ಅವರು ಕೈಕಟ್ಟಿಕೊಂಡು ಕುಳಿತಿರುವುದಿಲ್ಲ ಅವರು ಕಷ್ಟವನ್ನು ಮಾನ ವರಂತೆ ಅನುಭವಿಸುತ್ತಾರೆ ಅವರ ಕಷ್ಟಾನುಭವದಲ್ಲಿ ಒಂದು ಗೌರವವಿದೆ ಅದನ್ನು ಕಂಡವರಿಗೆ ಅಯ್ಯೋ ಎನ್ನಿಸುವಂತಹ ದೊಡ್ಡತನವಿದೆ

ರಷಿಯಾದಲ್ಲಿ ನಡೆಯುತ್ತಿರುವ ಸಾಮಾಜಿಕ ಪರೀಕ್ಷೆಗಳೂ ಪ್ರಯೋಜನಗಳೂ ಫಲವೋ ವಿಫಲವೋ ಆಗುವುದರಿಂದ ಮಾರ್ಕ್ಸ್‌ನ ಸಿದ್ಧಾಂತಗಳು ಸರಿ ತಪ್ಪು ಎಂದು ಸಿದ್ಧಾಂತವಾಗುವುದಿಲ್ಲ ಹಾಗಾಗುವುದು ಅಸಂಭವವಾದರೂ ಏನೋ ವಿಷಮ ಪರಿಸ್ಥಿತಿಯೊದಗಿ, ಬೇರೆ ಬೇರೆ ಕಾರಣಗಳು ಹುಟ್ಟಿಕೊಂಡು ಈ ಪ್ರಯೋಗ ಗಳೆಲ್ಲ ವಿಫಲವಾಗಬಹುದು ಹಾಗಾದರೂ ಆ ಸಾಮಾಜಿಕ ಕ್ರಾಂತಿಗಳ, ಅದ್ಭುತ ಆಂದೋಳನಗಳ ಫಲವೆಲ್ಲಿಯೂ ಹೋಗುವುದಿಲ್ಲ ಆ ರಷಿಯಾದಲ್ಲಿ ನಡೆದಿರುವು ದರಲ್ಲಿ ಎಷ್ಟೋ ನನ್ನ ಸ್ವಭಾವಕ್ಕೆ ಒಗ್ಗದವು ಆದರೂ ಜಗತ್ತಿನ ಆಶೆಯೆಲ್ಲ ಬಹುಮಟ್ಟಿಗೆ ಅಲ್ಲಿಯೆ ಇದೆ ಎನ್ನಿಸುತ್ತದೆ ನಾನು ಅಲ್ಲಿನ ವಿಷಯಗಳನ್ನು ಸಾಕಾ ದಷ್ಟು ಅರಿಯೆ. ಅವರು ಮಾಡಿರುವುದು ಸರಿಯೋ ತಪ್ಪೋ ಹೇಳಲಾರೆ ಆದರೆ ಅನಂ ತವಾದ ಹಿಂಸೆ ತುಳಿತಗಳು ಅಲ್ಲಿ ಹೆಚ್ಚಾಗಿವೆ ಅವುಗಳ ಫಲವಾಗಿ ಮತ್ತೊಂದು ದುಷ್ಪರಿಣಾಮವಾಗುವುದು ಅದನ್ನು ನಿವಾರಿಸುವುದೇ ಅಸಾಧ್ಯವಾಗಬಹುದು ಎಂದು ನನ್ನ ಮನಸ್ಸು ಅಂಜುತ್ತದೆ ಇಷ್ಟಾದರೂ ರಷಿಯಾದ ಅದೃಷ್ಟಸೂತ್ರ ಗಳನ್ನು ಈಗ ಹಿಡಿದಿರುವವರಲ್ಲಿ ಒಂದು ಭಾರಿಯ ಗುಣವಿದೆ ಅವರೆಲ್ಲ ತಾವು ಮಾಡಿದ ತಪ್ಪುಗಳಿಂದ ಕಲಿಯಲು ಸಿದ್ಧರಾಗಿದ್ದಾರೆ. ಅವರು ಮಾಡಿರುವುದನ್ನೆಲ್ಲ ಬಿಟ್ಟು ಮತ್ತೆ ಹೊಸದಾಗಿ ಆರಂಭಿಸಬಲ್ಲರು ಅವರು ತಮ್ಮ ಆದರ್ಶವನ್ನು ಎಂದಿಗೂ ಮರೆಯುವುದಿಲ್ಲ ಅವರು ಕಮ್ಯೂನಿಸ್ಟ್ ಇಂಟರ್‌ನೇಷನಲ್ ಮುಖಾಂತರವಾಗಿ ಇತರ ದೇಶಗಳಲ್ಲಿ ನಡೆಸಿರುವ ಪ್ರಯತ್ನಗಳೆಲ್ಲ ವಿಫಲವಾಗಿವೆ ಮತ್ತು ಅವು ಈಚೆಗೆ ಬಹು ಸ್ವಲ್ಪವೂ ಆಗಿವೆ

ಮತ್ತೆ ಹಿಂದೂಸ್ಥಾನಕ್ಕೆ ಬರೋಣ ಇಲ್ಲಿ ಕಮ್ಯೂನಿಸಂ, ಫೇಸಿಸಂ ಎಂಬವು ಎಲ್ಲಿಯೋ ದೂರದ ಕೂಗು ಅಷ್ಟೇ. ಹೊರಗಿನ ಕಾರಣಗಳಿಂದ ಅವು ಬೆಳೆದರೆ ಆ

ಮಾತು ಬೇರೆ ಇಲ್ಲಿ ನಾವು ಪರಿಗಣಿಸಬೇಕಾಗಿರುವುದು ಕಮ್ಯೂನಿಸಂ ಅಲ್ಲ. ಇನ್ನೂ ಒಂದು ಅಕ್ಷರ ಹೆಚ್ಚಾಗಿರುವ ಕಮ್ಯೂನಲಿಸಂ ಕೋಮುವಾರು ಭಾವನೆಯನ್ನು ನೋಡಿ ದರೆ ಹಿಂದೂಸ್ಥಾನವಿನ್ನೂ ಪುರಾತನ ಕಾಲದಲ್ಲಿದೆ. ಕಾರ್ಯಶಾಲಿಗಳೆಲ್ಲ ಸಣ್ಣ ಪುಟ್ಟ ವಿಷಯಗಳಿಗೆಲ್ಲ ತಲೆಚಚ್ಚಿಕೊಂಡು ಮಸಲತ್ತುಗಳು ಮಾಡಿ, ಏನಾದರೂ ಮಾಡಿ ಪ್ರತಿಪಕ್ಷದವರ ತಲೆಯ ಮೇಲೆ ಇರಬೇಕು ಎಂದು ಒದ್ದಾಡುವುದರಲ್ಲಿ ಪರ್ಯವಸಾನವಾಗಿದೆ ಈ ಜಗತ್ತನ್ನು ಕೊಂಚವಾದರೂ ಉತ್ತಮಗೊಳಿಸೋಣ ಇನ್ನಷ್ಟು ಇದನ್ನು ಬೆಳಗೋಣ ಎಂಬ ಭಾವನೆಯುಳ್ಳವರು ಬಹಳ ಸ್ವಲ್ಪಮಂದಿ ಬಹುಶಃ ಈ ಸ್ಥಿತಿಯು ಆಗಂತುಕವಾಗಿರಬಹುದು, ಕಳೆದುಹೋಗುವುದು ಎಂದು ಕೊಳ್ಳೋಣ

ಕಾಂಗ್ರೆಸ್ ಬಹುಮಟ್ಟಿಗೆ ಈ ಕೋಮುವಾರು ಕತ್ತಲೆಗಿಳಿದಿಲ್ಲವಾದರೂ ಅದಿನ್ನೂ ನಾಗರಿಕ ಮನೋಭಾವವನ್ನು ಬದಲಾಯಿಸಿಕೊಂಡಿಲ್ಲ ಆದರಿಂದಲೇ ಅದು ನಾಗರಿಕರಂತೆ ಎಲ್ಲ ಸಮಸ್ಯೆಗಳಿಗೂ ಪರಿಹಾರವನ್ನು ಯೋಚಿಸುತ್ತಿದೆ. ಕಾಂಗ್ರೆಸ್ ಈ ಮಾರ್ಗದಲ್ಲಿ ಗೆಲ್ಲಲಾರದು ಇಂದಿನ ಕಾಂಗ್ರೆಸ್ಸು ನೀಚ–ಮಾಧ್ಯಮ ವರ್ಗದವರದು ಅದೇ ಇಂದು ಬಹಳಮಟ್ಟಿಗೆ ಕೂಗುತ್ತಿರುವುದು ಮತ್ತು ಕ್ರಾಂತಿಪರವಾಗಿರುವುದು ಆದರೂ ಅದಕ್ಕೆ ಇರುವ ಶಕ್ತಿಯು ಸಾಲದು ಶಕ್ತಿಯಿರುವಂತೆ ತೋರಿದರೂ ಶಕ್ತಿ ಯಿಲ್ಲ ಆ ನೀಚಮಧ್ಯಮ ವರ್ಗವನ್ನು ಅತ್ತಿತ್ತ ಎರಡು ಶಕ್ತಿಗಳು ಹಿಡಿದು ಅದುಮಿ ಕೊಂಡಿವೆ ಒಂದು ರೂಢಮೂಲವಾಗಿದೆ. ಇನ್ನೊಂದು, ಈಗ ದುರ್ಬಲವಾಗಿದ್ದರೂ ಜಾಗ್ರತೆಯಾಗಿ ಬಲಿಯುತ್ತಿದೆ ಅದಕ್ಕೆ ಈಗ ಒಂದು ವಿಷಮ ಕಾಲವು ಪ್ರಾಪ್ತ ವಾಗಿದೆ ಅದು ಈಗ ತಾನು ಕೈಕೊಂಡಿರುವ ದೇಶಸ್ವಾತಂತ್ರ್ಯವನ್ನು ಸಂಪಾದಿಸುವು ದೆಂಬ ಚರಿತ್ರಾರ್ಹವಾದ ಕಾರ್ಯವು ನೆರವೇರುವವರೆಗೂ ರೂಢಮೂಲವಾದ ಶಕ್ತಿಯು ಕಡೆಗೆ ತಿರುಗುವಂತಿಲ್ಲ ಆದರೆ, ಆ ಕಾರ್ಯವನ್ನು ಸಾಧಿಸುವುದರೊಳಗಾಗಿ ಬೇರೆ ಬೇರೆ ಶಕ್ತಿಗಳು ತಲೆದೋರಿ ಬೆಳೆದು ಬಲಸಂಪನ್ನವಾಗಿ ಅದನ್ನು ತಮ್ಮ ಕಡೆಗೆ ಎಳೆದು ಕೊಳ್ಳಬಹುದು ಅಥವಾ ಅದರ ಸ್ಥಳವನ್ನು ತಾವು ಆಕ್ರಮಿಸಬಹುದು ಬಹುಶಃ ದೇಶ ಸ್ವಾತಂತ್ರ್ಯದ ಅಧಿಕಾಂಶವು ಬರುವವರೆಗಾದರೂ ಕಾಂಗ್ರೆಸ್ಸು ಮುಖ್ಯ ಪಾತ್ರ ವನ್ನು ವಹಿಸಿರಬೇಕಾಗುತ್ತದೆ ಎಂದು ತೋರುತ್ತದೆ

ಹಿಂಸಾಮುಖ್ಯವಾದ ಕಾರ್ಯಕ್ರಮವನ್ನು ಅವಲಂಬಿಸುವ ಯೋಚನೆಯೂ ಸಾಧ್ಯವಿಲ್ಲ ಈಗ ಅದರಿಂದ ಬಹಳ ಹಾನಿ ಮತ್ತು ಆ ಪ್ರಯತ್ನವೂ ಸಫಲವಾಗುವು ದಿಲ್ಲ ಇದನ್ನು ಹಿಂದೂಸ್ಥಾನವೆಲ್ಲ ಬಲ್ಲುದು ಎಂದು ನನ್ನ ಭಾವನೆ ಅಲ್ಲಿ ಆಗಾಗ ನಿಷ್ಫಲವಾದ ಘಾತುಕಕೃತ್ಯಗಳು ನಡೆದರೂ ಅವೆಲ್ಲ ಅಪವಾದಗಳು ಆ ಮಾರ್ಗವಾಗಿ ಹೋದರೆ, ಹಿಂಸೆ ಪ್ರತಿಹಿಂಸೆ, ಹಿಂಸೆ ಪ್ರತಿಹಿಂಸೆ, ಹೀಗಾಗಿ ಅಭಿಮನ್ಯುವು ಚಕ್ರ ದುರ್ಗದ ಕೋಟೆಯನ್ನು ಹೊಕ್ಕಂತಾಗುವುದು

ನಾವೆಲ್ಲರೂ ಒಟ್ಟುಗೂಡಬೇಕು ಎಲ್ಲರೂ ಒಂದಾಗಿ ಕಲೆತು, ಏಕಮುಖವಾಗಿ ಹಿಂದೂಸ್ಥಾನದ ಪರವಾಗಿ ಮಾತನಾಡಬೇಕು ಎಂದು ಪದೇಪದೇ ಹೇಳುತ್ತಾರೆ ಶ್ರೀಮತಿ ಸರೋಜಿನಿ ದೇವಿಯುವರು ತಮ್ಮ ಕಾವ್ಯವಾಣಿಯಲ್ಲಿ ಆ ಐಕ್ಯಭಾವಕ್ಕಾಗಿ ಅಮೋಘವಾಗಿ ವಾದಿಸುತ್ತಾರೆ ಆಕೆಯು ಕವಿ ಐಕ್ಯತೆ, ಸಮರಸತೆ ಇವುಗಳ ಸೊಗಸನ್ನು ಕುರಿತು ಮಾತನಾಡಲು ಆಕೆಗೆ ಅಧಿಕಾರವುಂಟು. ಹಾಗೆ ಐಕ್ಯತೆಯಾದರೆ, ಅದು ಏಕಮುಖವಾದರೆ ಅದು ಬಹಳ ಒಳ್ಳೆಯದು. ಆದರೆ ಆ ಐಕ್ಯತೆಯೆಂದರೇನು, ಏಕಮುಖತೆಯೆಂದರೇನು ಎಂಬುದನ್ನು ಕುರಿತು ಅಷ್ಟು ವಿಚಾರಿಸಿ ನೋಡಿದರೆ ಅಲ್ಲಿ, ಪ್ರಮುಖರಾಗಿರುವ ವ್ಯಕ್ತಿಗಳೆಲ್ಲ ಮಾಡಿಕೊಂಡಿರುವ ರಾಜಿಯೆಂಬುದು ತಿಳಿಯುವುದು ಅಂತಹ ರಾಜಿಯಲ್ಲಿ ಬಹಳ ಜಾಗ್ರತರೂ ಮಂದಪಕ್ಷದವರೂ ಆದವರೇ ಮುಂದೆ ಬಂದು ಉದ್ದೇಶವನ್ನೂ ಕಾರ್ಯಕ್ರಮವನ್ನೂ ನಿರ್ಧರಿಸಿರುವರು ಎಂದೇ ಅರ್ಥವಾಗಬೇಕು ಅಂಥವರಲ್ಲಿ ಅನೇಕರಿಗೆ ಯಾವ ಚಳವಳಿಯೂ ಬೇಡದಿರುವಾಗ, ಅದರ ಪರಿಣಾಮವು ನಿಂತಲ್ಲಿಯೇ ನಿಲ್ಲುವುದಾಗುವುದು ಏಕಮುಖವಾಗಿರುವ ಬದಲು ಎಲ್ಲರೂ ಸೇರಿ ಬೆನ್ನು ತೋರಿಸಿಕೊಂಡು ನಿಂತಂತಾಗುವುದು

ಹಾಗೆಯೇ, ನಾವು ಇತರರೊಡನೆ ಸಹಕರಿಸುವುದಿಲ್ಲ, ರಾಜಿಗೆ ಬರುವುದಿಲ್ಲ ಎಂದರೂ ಅವಿವೇಕವಾಗುವುದು ಬಾಳಿನಲ್ಲಿಯೂ ರಾಜಕೀಯದಲ್ಲಿಯೂ ನೆಟ್ಟಗೊಂದು ಗೆರೆ ಎಳೆದಂತೆ ಬಾಳುವೆವೆಂಬುದು ಅಸಾಧ್ಯವಾದ ಮಾತು "ರಾಜಿಯಿಲ್ಲದೆ ಮುಂದುವರಿಯುವೆವೆಂಬುದು, ಹಾದಿಯಿಂದ ಅತ್ತ ಇತ್ತ ತಿರುಗದೆ ಮುಂದುವರಿಯುವೆವೆಂಬುದು, ಬುದ್ಧಿಯಲ್ಲಿ ಮಕ್ಕಳಾಗಿರುವವರ ಮಾತು ಅದು ಕ್ರಾಂತಿಕಾರ ವರ್ಗದ ಭದ್ರತಂತ್ರಗಳಲ್ಲ" ಎಂದು ಲೆನಿನ್ನನೂ ಕೂಡ ಹೇಳಿದ್ದಾನೆ ಲೆನಿನ್ನನು ಸುಲಭಕ್ಕೆ ಒಪ್ಪುವನಲ್ಲ ರಾಜಿಗಳು ಇದ್ದೇ ಇರಬೇಕು ಆ ವಿಚಾರವಾಗಿ ನಾವಷ್ಟಾಗಿ ಚಿಂತಿಸಬಾರದು ಆದರೆ ರಾಜಿಗೆ ನಾವು ಒಪ್ಪಲಿ ಬಿಡಲಿ, ನಾವು ಗಮನಿಸಬೇಕಾದುದು ಇಷ್ಟೇ ಪ್ರಧಾನವಾದ ಅಂಶಗಳು ಕೆಲವಿವೆ ಗೌಣವಾಗಿ ಅಪ್ರಧಾನವಾದ ಅಂಶಗಳು ಕೆಲವಿವೆ ಪ್ರಧಾನವಾದವು ಪ್ರಧಾನವಾಗಿಯೇ ಇರಬೇಕು ಗೌಣವಾದವು ಗೌಣವಾಗಿಯೇ ಇರಬೇಕು ಅದಿಲ್ಲದೆ ಇದು ಅದು ಅದು ಇದು ಮಾತ್ರ ಆಗಬಾರದು ನಾವು ಅನೇಕ ವೇಳೆ ಆ ಪ್ರಧಾನಾಂಶಗಳನ್ನೂ ಉದ್ದೇಶಗಳನ್ನೂ ನಮ್ಮ ಅಶಕ್ತ ಸೋದರರಿಗೋಸ್ಕರ ಕೊಂಚ ಅತ್ತ ತಳ್ಳುತ್ತೇವೆ ಅಲ್ಲಿ ಅಪಾಯವಿರುವುದು. ಇತರರಿಗೆ ಕೋಪ ಬಂದರೂ ಚಿಂತೆಯಿಲ್ಲ ತಪ್ಪುದಾರಿ ಹಿಡಿಸಬಾರದು.

ನಾನು, ಈಗ ನಡೆಯುತ್ತಿರುವ ವಿಚಾರವಾಗಿ ದೂರದಲ್ಲಿ ಕುಳಿತಿರುವವನಂತೆ ಏನೋ ಬರೆಯುತ್ತ, ಸಂಬಂಧವಿಲ್ಲದವನಂತೆ ಮಾತನಾಡಲು ಯತ್ನಿಸಿದ್ದೇನೆ. ಕಾರ್ಯವಾರಂಭವಾದಾಗ ನೋಡುತ್ತ ಕುಳಿತಿರುವ ಚೇತನವು ನನ್ನದಲ್ಲವೆಂದು ಎಲ್ಲರ

ಭಾವನೆ ಅದಕ್ಕೆ ಬದಲಾಗಿ, ಕಾರಣವಿಲ್ಲದೆಯೇ ಮೇಲೆ ಬೀಳುವ ಸ್ವಭಾವವು ನನ್ನದು ಎಂದು ನನಗೆ ಪದೇಪದೇ ಹೇಳುತ್ತಿರುತ್ತಾರೆ. ಈಗ ನಾನೇನು ಮಾಡುತ್ತಿದ್ದೆ? ನನ್ನ ದೇಶಬಾಂಧವರಿಗೆ ಏನು ಮಾಡಬೇಕೆಂದು ಹೇಳುತ್ತಿದ್ದೆ? ಮಹಾಜನ ಕಾರ್ಯ ದಲ್ಲಿ ತೊಡಗಿರುವವನಿಗೆ ಸಹಜವಾದ ಎಚ್ಚರಿಕೆಯು ತಲೆದೋರಿ, ಈಗಲೇ, ಕಾಲವು ಬರುವುದಕ್ಕಿಂತಲೇ ಮಾತನಾಡಲು ಅಡ್ಡಿಯಾಗಬಹುದು ಆದರೆ, ದಿಟವನ್ನೇ ಆಡುವೆನಾದರೆ, ನಿಜವಾಗಿಯೂ ನಾನರಿಯೆ ಮತ್ತು ಏನು ಮಾಡಬೇಕೆಂಬುದನ್ನು ಕಂಡುಹಿಡಿಯಲೂ ನಾನು ಯತ್ನಿಸುವುದಿಲ್ಲ ನಾನು ಕಾರ್ಯರಂಗದಲ್ಲಿಳಿಯಲು ಸಾಧ್ಯವಿಲ್ಲದಿರುವಾಗ ನಾನೇಕೆ ಒದ್ದಾಡಲಿ? ನನಗೆ ಒದ್ದಾಟವು ತಪ್ಪಿದ್ದಲ್ಲ ನಿಜ ಆದರೆ ಅದಕ್ಕೆ ನಾನು ಹೊಣೆಯಲ್ಲ. ಕೊನೆಗೆ, ನಾನು ಜೈಲಿನಲ್ಲಿರುವವರೆಗಾದರೂ, ಸದ್ಯ ಮಾಡಬೇಕಾದ ಕಾರ್ಯವಾವುದು ಎಂಬುದನ್ನು ಚಿಂತಿಸದಿರಲು ಯತ್ನಿಸುವೆನು

ಜೈಲಿನಲ್ಲಿರುವಾಗ ಎಲ್ಲ ಪ್ರಯತ್ನಗಳೂ ಎಲ್ಲಿಯೋ ದೂರದಲ್ಲಿರುವುವು ಎನ್ನಿಸುತ್ತದೆ ಅಲ್ಲಿರುವವನು ನಡೆದ ಕಾರ್ಯಗಳಿಗೆ ಗುರಿಯಾಗಿರುವನೇ ಹೊರತು ನಡೆವ ಕಾರ್ಯಗಳ ಕರ್ತೃವಾಗಿರುವುದಿಲ್ಲ ಏನಾದರೂ ಆದೀತು, ಎಂದು ಕಾದು ಕುಳಿತಿರುತ್ತಾನೆ ನಾನು ಹಿಂದೂಸ್ಥಾನದ ಮತ್ತು ವಿಶ್ವದ ಸಾಮಾಜಿಕ ರಾಜಕೀಯ ಸಮಸ್ಯೆಗಳನ್ನು ಕುರಿತು ಬರೆಯುತ್ತಿದ್ದೇನೆ ಆದರೆ ನನಗೆ ದೀರ್ಘಕಾಲದಿಂದ ಆವಾಸಸ್ಥಾನವಾಗಿರುವ ಈ ಪುಟ್ಟ ಜೈಲಿಗೂ ಅವಕ್ಕೂ ಏನು ಸಂಬಂಧ? ಜೈಲಿನಲ್ಲಿರುವ ಬಂದಿಗಳಿಗೆ ಬೇಕಾದುದೆಲ್ಲ ಒಂದೇ ಒಂದು ಅದು ಅವರನ್ನು ಜೈಲಿನಿಂದ ಬಿಡುವ ದಿನ

ನೈನಿ ಜೈಲಿನಲ್ಲಿಯೂ ಇಲ್ಲಿ ಆಲ್ಮೋರಾದಲ್ಲಿಯೂ ಅನೇಕ ಬಂದಿಗಳು ಜುಗ್ಲಿಯ ವಿಚಾರವಾಗಿ ನನ್ನನ್ನು ಕೇಳಲು ಬಂದಿದ್ದರು ಮೊದಲು ಜುಗ್ಲಿ ಎಂಬುದು ಏನು ಎಂದು ತಿಳಿಯಲಿಲ್ಲ. ಆಮೇಲೆ ಅದು ಜ್ಯೂಬಿಲಿಯ ಅಪರೂಪವೆಂದು ತಿಳಿಯಿತು ಕಿಂಗ್ ಜಾರ್ಜರ ರಜತಮಹೋತ್ಸವ ಸಂಬಂಧದ ಸುದ್ದಿಗಳನ್ನು ಕುರಿತು ಅವರು ಮಾತನಾಡುತ್ತಿದ್ದುದು. ಆದರೆ ಅವರಿಗೆ ಜ್ಯೂಬಿಲಿಯ ವಿಷಯವೇ ತಿಳಿಯದು ಹಿಂದಿನ ಅನುಭವದಿಂದ ಕೆಲವರನ್ನು ಜೈಲಿನಿಂದ ಬಿಡುವರು, ಕೆಲವರಿಗೆ ಶಿಕ್ಷೆಯು ಕಡಿಮೆಯಾಗುವುದು ಎಂದು ಮಾತ್ರ ಅವರಿಗೆ ಗೊತ್ತಾಗಿತ್ತು ಅದರಿಂದ ಪ್ರತಿಯೊಬ್ಬ ಬಂದಿಯೂ ಅದರೊಳಗೂ ದೀರ್ಘಕಾಲದ ಶಿಕ್ಷೆಯವರಂತೂ, ಜುಗ್ಲಿಯು ಬಂದೀತೇ ಎಂದು ಕಾದಿದ್ದಾರೆ ಅವರಿಗೆ ರಾಜಕೀಯ ಸುಧಾರಣೆಗಳಿಗಿಂತ, ಪಾರ್ಲಿಮೆಂಟಿನ ಕಾಯದೆಗಳಿಗಿಂತ, ಸೋಷಿಯಲಿಸಂ ಕಮ್ಯೂನಿಸಂಗಳಿಗಿಂತ ಜುಗ್ಲಿಯೇ ಎಷ್ಟೋ ಮುಖ್ಯವಾದುದು

೬೮

# ಭರತವಾಕ್ಯ

ದುಡಿಯಬೇಕೆಂದು ನಮಗೆ ಅಪ್ಪಣೆಯಾಗಿದೆ,
ದುಡಿತವನ್ನು ಮುಗಿಸುವುದು ಮಾತ್ರ ನಮ್ಮ ಹಣೆಯಲ್ಲಿ ಬರೆದಿಲ್ಲ
ಟಾಲ್‌ಮುದ್

ಕಥೆಯ ಕೊನೆಗೆ ಬಂದಿದ್ದೇನೆ ಈ ನನ್ನ ಜೀವಮಾನದ ಸಾಹಸಗಳನ್ನೆಲ್ಲ ಹೇಳುವ ಈ ಅಹಂಕಾರ ಪೂರ್ಣವಾದ ಕಥೆಯು ಅಲ್ಮೋರಾದ ಡಿಸ್ಟ್ರಿಕ್ಟ್ ಜೈಲಿನಲ್ಲಿ ಫೆಬ್ರುವರಿ ೧೪, ೧೯೩೫ಕ್ಕೆ ಬರುವವರೆಗೂ ಬರೆದಿದ್ದೇನೆ ಮೂರು ತಿಂಗಳ ಹಿಂದೆ ಈ ಜೈಲಿನಲ್ಲಿ ನನ್ನ ನಲವತ್ತೈದನೆಯ ವರ್ಧಂತಿಯನ್ನೂ ಮಾಡಿಕೊಂಡೆ ಬಹುಶಃ ನಾನಿನ್ನೂ ಎಷ್ಟೋ ವರ್ಷಗಳು ಬದುಕಿರುವೆನೆಂದು ನನಗೆ ತೋರುತ್ತಿದೆ ಆಗಾಗ ವಯಸ್ಸಾಯಿತು ಎನ್ನಿಸಿ, ದಣಿವು ತಲೆದೋರುತ್ತದೆ ಇನ್ನು ಕೆಲವುವೇಳೆ ಸಾಮರ್ಥ್ಯ ದೇಹಶಕ್ತಿಗಳಿಂದ ತುಂಬಿ ಕುಣಿಯುವಂತಾಗುತ್ತದೆ ಸಾಮಾನ್ಯವಾಗಿ ನನ್ನದು ಗಟ್ಟಿಯ ದೇಹ. ನನ್ನ ಮನಸ್ಸೂ ಅಪಘಾತಗಳಿಂದ ಚೇತರಿಸಕೊಳ್ಳಬಲ್ಲುದು. ಆದರಿಂದ ಏನೂ ಆಕಸ್ಮಿಕವಾಗಿ ಸಂಭವಿಸದಿದ್ದರೆ ದೀರ್ಘಕಾಲ ಬದುಕಿರುವೆನೆಂದುಕೊಳ್ಳುತ್ತೇನೆ ಆದರೆ, ಆ ಭವಿಷ್ಯವು ನಿಜವಾದರಲ್ಲವೆ, ಅದರ ವಿಚಾರವಾಗಿ ಬರೆಯುವುದು ?

ನನ್ನ ಬಾಳಿನ ವಿದ್ಯಮಾನಗಳಲ್ಲಿ ಅಷ್ಟು ಸ್ವಾರಸ್ಯವಾಗಿಲ್ಲದೆ ಇರಬಹುದು ಜೈಲಿನಲ್ಲಿ ಕಳೆದ ದೀರ್ಘವರ್ಷಗಳಲ್ಲಿ ಏನು ತಾನೇ ಸಾಹಸವಿದ್ದೀತು ? ಅವುಗಳಲ್ಲಿ ಅಂತಹ ಅಪರೂಪತೆಯೂ ಇಲ್ಲ ನನ್ನ ದೇಶಬಾಂಧವರನೇಕರು ಗಂಡಸರು ಹೆಂಗಸರಂತೆ ನಾನೂ ಈ ಆಯುಷ್ಯದಲ್ಲಿ ಏರಿಳಿತಗಳನ್ನು ಅನುಭವಿಸಿದ್ದೇನೆ ಈ ಹೆಚ್ಚು ಕಡಿಮೆಗಳಾಗುವ, ಏರಿಳಿಯುವ ಮನಸ್ಸಿನ, ಪಟ್ಟಾಗಿ ಹಿಡಿದು ಬಿಡದೆಮಾಡಿದ ಕಾರ್ಯಗಳ ಬಲವಂತದಿಂದ ಹಿಡಿದು ಹೊರಿಸಿದ ಏಕಾಂತವಾಸದ, ಈ ಕಥೆಯು ಸಾಮಾನ್ಯವಾಗಿ ಎಲ್ಲರದೂ ಇದ್ದಂತೆಯೇ ಇದೆ ನಾನು ಗುಂಪಿನಲ್ಲಿ ಒಬ್ಬ ಅದರೊಡನೆ ನಾನೂ ಹೋಗುತ್ತಿದ್ದೇನೆ ಒಮ್ಮೊಮ್ಮೆ ಅದನ್ನು ಆಳುತ್ತಿದ್ದೇನೆ ಅದು ನನ್ನನ್ನೂ ಆಳುತ್ತಿದೆ ಇಷ್ಟಾದರೂ ಗುಂಪಿನಲ್ಲಿರುವವರಂತೆ ನಾನೂ ಒಬ್ಬ ಎಲ್ಲರಿಂದ ಬೇರೆಯಾಗಿ ಗುಂಪಿನ ಮಧ್ಯದಲ್ಲಿ ನನ್ನದೇ ಆಗಿ ಪ್ರತ್ಯೇಕವಾದ ಜೀವನವನ್ನು ನಿರ್ವಹಿಸುತ್ತಿದ್ದೇನೆ ಆಗಾಗ ಆಟಗಳನ್ನು ಕಟ್ಟಿ ನಟಿಸಿರುವುದೂ ಉಂಟು ಆದರೆ ಆ ನಟನೆಯಲ್ಲಿ ನಿಜವಾದ ಅಂಶವಿತ್ತು ನಾವು ಮಾಡಿದುದರಲ್ಲಿ ನಮ್ಮ ಹೃದಯವೂ ಬಹಳ ಮಟ್ಟಿಗೆ ಬೆರೆತಿತ್ತು ಆದರಿಂದ ಅದು ನಮ್ಮ ಸಣ್ಣ ಬಾಳನ್ನೂ ದೊಡ್ಡದುಮಾಡಿ,

ನಮಗಷ್ಟು ಸಾಮರ್ಥ್ಯವಿತ್ತು ಇತರ ವಿಧದಿಂದ ಸಾಧ್ಯವಿಲ್ಲದ ಸ್ವಾರಸ್ಯವನ್ನು ನಮಗೆ ತಂದುಕೊಟ್ಟಿತು ಆಗಾಗ, ಆದರ್ಶಗಳನ್ನು ಮನೋರಾಜ್ಯದಿಂದ ಕಾರ್ಯಕ್ಷೇತ್ರಕ್ಕಿಳಿಸುವ ಭಾಗ್ಯವೊದಗಿ, ಜೀವನದ ಪರಿಪೂರ್ಣತೆಯನ್ನು ಅನುಭವಿಸುವ ಪುಣ್ಯವಂತರಾಗಿದ್ದೇವೆ ಈ ಆದರ್ಶಗಳನ್ನು ಬಿಟ್ಟು, ನಮಗಿಂತ ಅಧಿಕವಾದ ಶಕ್ತಿಯ ಮುಂದೆ ಕುರಿಯಂತೆ ತಲೆಬಾಗಿ ನಿಂತಿದ್ದರೆ, ಆ ಜೀವನವು ಶುದ್ಧವಾಗಿ ವ್ಯರ್ಥವಾಗುತ್ತಿತ್ತು. ಅಸಮಾಧಾನಕಾರಕವಾಗುತ್ತಿತ್ತು ಒಳಗುದಿಗೆ ಕಾರಣವಾಗುತ್ತಿತ್ತು ಎಂದು ಮನಗಂಡಿದ್ದೇವೆ

ಈ ವರ್ಷಗಳಲ್ಲಿ ಇತರರಿಗೆ ದೊರೆತಂತೆ ನನಗೂ ಒಂದು ಅಮೋಘವಾದ ವರವು ದೊರೆತಿದೆ ಜೀವನವು ಸ್ವಾರಸ್ಯವಾದ ಒಂದು ಸಾಹಸ ಇಲ್ಲಿ ಕಲಿಯಬೇಕಾದುದು ಬೇಕಾದಷ್ಟಿದೆ ಮಾಡುವುದಕ್ಕೆ ಬೇಕಾದಷ್ಟಿದೆ ಎಂದು ನೋಡುವುದನ್ನು ಕಲಿಯುತ್ತಿದ್ದೇನೆ ನನಗೆ ಯಾವಾಗಲೂ ಬೆಳೆಯುತ್ತಿದ್ದೇನೆ ಎನ್ನಿಸುತ್ತಿದೆ ಇನ್ನು ನನಗೆ ಹಾಗೆಯೇ ಇದೆ ನಾನು ಇತರ ಕೆಲಸಗಳನ್ನು ಮಾಡುವಾಗ ಪುಸ್ತಕಗಳನ್ನು ಓದುವಾಗ, ಈ ಭಾವವು ನನಗೆ ಬಹಳ ಸಹಕಾರಿಯಾಗಿದೆ ಅದು ನನಗೆ ಬಾಳಿನಲ್ಲಿ ಆಸೆಯನ್ನು ತೋರಿಸಿದೆ

ಈ ಕಥೆಯನ್ನು ಬರೆಯುವಾಗ, ಆಯಾ ಘಟನೆಗಳು ನಡೆದ ಸಂದರ್ಭದಲ್ಲಿ ನನ್ನ ಮನಸ್ಸಿಗೆ ಏನು ತೋರಿತು? ನನಗೇನು ಹೊಳೆಯಿತು ಎಂಬುದನ್ನು ಆ ಸಮಯದಲ್ಲಿ ನನಗೆ ಹೇಗಾಯಿತು ಎಂಬುದನ್ನು ತೋರಿಸುವ ಯತ್ನ ಮಾಡಿದ್ದೇನೆ ಕಳೆದುಹೋದ ಮನೋಭಾವವನ್ನು ಮತ್ತೆ ಹಿಡಿತರುವುದೆಂತು ? ಹಾಗೆಯೇ, ಈಚೆಗೆ ನಡೆದಿರುವುದನ್ನೆಲ್ಲ ಮರೆಯುವುದು ತಾನೆ ಎಂತು ? ಆದರಿಂದ ಈಚಿನ ಭಾವನೆಗಳಿಂದ ಹಿಂದೆ ನಡೆದುದೆಲ್ಲಕ್ಕೂ ಬೇರೊಂದು ಬಣ್ಣ ಬಂದಿರಬಹುದು ಆದರೆ ನಾನು ನನ್ನ ಈ ಮನಸ್ಸಿನ ಬೆಳವಣಿಗೆಯನ್ನು ಗುರ್ತಿಸಿಕೊಂಡುದು ಮುಖ್ಯವಾಗಿ ನನ್ನ ಪ್ರಯೋಜನಕ್ಕೆ ಬಹುಶಃ ನಾನು ಬರೆದಿರುವುದರಲ್ಲಿ ಬಹು ಭಾಗವು ನಾನು ಹೇಗಿದ್ದೇನೆ ಎಂಬುದಲ್ಲದೆ ಇರಬಹುದು ನಾನು ಏನಾಗಬೇಕೆಂದಿದ್ದೆನೋ? ನಾನು ಏನಾಗಿದ್ದೇನೆ ಎಂದುಕೊಂಡಿದ್ದೇನೊ ಅದೇ ಚಿತ್ರವೂ ಇರಬಹುದು

ಕೆಲವು ತಿಂಗಳುಗಳ ಹಿಂದೆ ಸರ್ ಸಿ ಪಿ. ರಾಮಸ್ವಾಮಯ್ಯರ್ ಅವರು ಪಬ್ಲಿಕ್ ಭಾಷಣದಲ್ಲಿ "ನಾನು ಪ್ರಜಾವರ್ಗದ ಮನಸ್ಸಿನಲ್ಲಿರುವುದನ್ನು ಪ್ರತಿಬಿಂಬಿಸಿಲ್ಲ ಆದರೂ ನಾನು ಮಾಡಿರುವ ತ್ಯಾಗ, ನನಗೆ ಇರುವ ಆದರ್ಶಪ್ರಿಯತೆ, ನನಗೆ ಆಗಿರುವ ಶಿಕ್ಷೆಗಳ ಘೋರತೆ (ಇವೆಲ್ಲವೂ ಒಂದು ಜಾತಿಯ ಭ್ರಾಂತಿ) ಇವುಗಳಿಲ್ಲದರಿಂದ ನಾನು ಬಹಳ ಅನರ್ಥಕಾರಿ" ಎಂದು ಹೇಳಿದ್ದಾರೆ. ಆತ್ಮ ಭ್ರಾಂತನಾದವನು ತನ್ನನ್ನು ತಾನು ಪರೀಕ್ಷಿಸಿಕೊಳ್ಳುವುದು ಕಷ್ಟ ಅದೇನೇ ಇರಲಿ,

ಈ ಆತ್ಮ ವಿಷಯವಾಗಿ ನಾನು ಸಿ ಪಿ ಯವರೊಡನೆ ವಾದಕ್ಕೆ ನಿಲ್ಲುವುದಿಲ್ಲ ನಾವು ಬಹಳ ವರ್ಷಗಳಿಂದ ಒಬ್ಬರನ್ನೊಬ್ಬರು ನೋಡಿಲ್ಲ ಅದಕ್ಕ ಹಿಂದೆ, ಬಹಳ ವರ್ಷಗಳ ಮುಂಚೆ, ನಾವಿಬ್ಬರೂ ಹೋಂ ರೂಲ್ ಲೀಗಿಗೆ ಜಾಯಿಂಟ್ ಸೆಕ್ರೆಟರಿಗಳಾಗಿದ್ದೆವು ಅಲ್ಲಿಂದೀಚೆಗೆ ಬೇಕಾದಷ್ಟು ಆಗಿಹೋಗಿದೆ ಸಿ ಪಿ ಯವರು ಮೆಟ್ಟಿಲು ಮೆಟ್ಟಿಲಾಗಿ ಹತ್ತಿ ಬಗ್ಗಿ ನೋಡಿದರೆ ತಲೆ ತಿರುಗುವಂತಹ ಎತ್ತರಗಳಿಗೆ ಏರಿದ್ದಾರೆ ನಾನು ಇನ್ನೂ ಮಣ್ಣಿನಂತೆ ಮಣ್ಣಿನ ಮೇಲೆ ನಿಂತಿದ್ದೇನೆ ನಾವಿಬ್ಬರೂ ಒಂದೇ ದೇಶದವರು ಎಂಬುವುದಷ್ಟು ಬಿಟ್ಟು ನಮ್ಮಿಬ್ಬರಿಗೂ ಇನ್ನಾವ ಬಾಂಧವ್ಯವೂ ಈಗ ಇಲ್ಲ ಅವರು ಇಂದು ಹಿಂದೂಸ್ಥಾನದಲ್ಲಿ ಬ್ರಿಟಿಷ್ ರಾಜಸತ್ತೆಯು ಇರಲೇಬೇಕೆಂದು ವಾದಿಸುವವರಲ್ಲಿ ಅಗ್ರಗಣ್ಯರು ಈ ಕೆಲವು ವರ್ಷಗಳಿಂದೀಚೆಗೆ ಇದು ಇನ್ನೂ ಹೆಚ್ಚಾಗಿದೆ ಹಿಂದೂಸ್ಥಾನದಲ್ಲಿಯೂ ಇತರ ಕಡೆಗಳಲ್ಲಿಯೂ ನಿರಂಕುಶ ಪ್ರಭುತ್ವವಿರಬೇಕು ಎನ್ನುವವರು ಸ್ವತಃ ತಾವೇ ಒಂದು ದೇಶೀಯ ರಾಜ್ಯದ ನಿರಂಕುಶ ಪ್ರಭುತ್ವದ ಅಮೌಲ್ಯ ಭೂಷಣವಾಗಿರುವವರು ನ ವು ನಾವು ಅನೇಕ ವಿಷಯವಾಗಿ ಭಿನ್ನಾಭಿಪ್ರಾಯವುಳ್ಳವರಾದರೂ, ಒಂದು ಸಣ್ಣ ವಿಷಯದಲ್ಲಿ ಮಾತ್ರ ನಮ್ಮಿಬ್ಬರಿಗೂ ಏಕಾಭಿಪ್ರಾಯವಿದೆ ನಾನು ಪ್ರಜಾವರ್ಗದ ಹೃದಯಲ್ಲಿರುವ ಭಾವನೆಗಳ ಪ್ರತಿಬಿಂಬವಲ್ಲವೆಂದು ಅವರು ಹೇಳುವುದು ಸರ್ವಥಾ ನಿಜ ನನಗೆ ಎಳ್ಳಷ್ಟೂ ಆ ವಿಷಯದಲ್ಲಿ ಅನುಮಾನವಿಲ್ಲ.

ಅನೇಕವೇಳೆ, ಹೋಗಲಿ, ನಾನು ಯಾರಿಗಾದರೂ ಪ್ರತಿನಿಧಿಯೇ ಎಂದು ಯೋಚನೆ ಬಂದಾಗ, ಬೇಕಾದಷ್ಟು ಜನರು ನನ್ನನ್ನು ವಿಶ್ವಾಸದಿಂದ ಪ್ರೀತಿಯಿಂದ ಕಾಣುತ್ತಿದ್ದರೂ ನಾನು ಯಾರಿಗೂ ಪ್ರತಿನಿಧಿಯಲ್ಲ ಎಂಬುದು ನನ್ನ ಮನಸ್ಸಿಗೇ ಹೊಳೆದಿದ ಅಲ್ಲೂ ಇಲ್ಲ, ಇಲ್ಲೂ ಇಲ್ಲ, ಎಲ್ಲೂ ಇಲ್ಲ ಎಂಬ ಜಾತಿಯ ಪೌರ್ವಾತ್ಯ ಪಾಶ್ಚಿಮಾತ್ಯ ನಾಗರಿಕತೆಗಳ ಬೆರಕೆಯ ಜಂತುವಾಗಿದ್ದೇನೆ ನಾನು ಬಹುಶಃ ನನ್ನ ಭಾವನೆಗಳು, ಜೀವನದ ಕ್ರಮ ಇವುಗಳಲ್ಲೆಲ್ಲ ನಾನು ಪೌರ್ವಾತ್ಯ ಎನ್ನುವುದಕ್ಕಿಂತಲೂ ಪಾಶ್ಚಾತ್ಯ ಎನ್ನುವುದರಲ್ಲಿಯೇ ಹೆಚ್ಚು ನಿಜವಿರಬಹುದು ಆದರೂ ಹಿಂದೂಸ್ಥಾನವು ನನ್ನನ್ನು ಬಿಟ್ಟಿಲ್ಲ , ಆಕೆಯು ತನ್ನ ಎಲ್ಲ ಮಕ್ಕಳನ್ನು ಹಿಡಿದಿರುವಂತೆ ನನ್ನನ್ನೂ ಹಿಡಿದುಕೊಂಡಿದ್ದಾಳೆ ಅನೇಕ ವಿಧವಾಗಿ ಹಿಡಿದುಕೊಂಡಿದ್ದಾಳೆ ನನ್ನ ಹಿಂದೆ ಹೃದಯದ ಒಂದು ಅಜ್ಞಾತ ಮೂಲೆಯಲ್ಲಿ ನಮ್ಮವರು ಬ್ರಾಹ್ಮಣರಾಗಿ ಬಾಳಿದ ನೂರಾರು ತಲೆಗಳ ಅನುಭವವು ಕುಳಿತಿದೆ ನಾನು ಆ ಹಿಂದಿನ ಕಾಲದಿಂದ ಬಂದಿರುವ ಪಿತ್ರಾರ್ಜಿತವನ್ನು ಬಿಡಲಾರೆ, ಈಗ ನಾನು ಸಂಪಾದಿಸಿರುವುದನ್ನೂ ಬಿಡಲಾರೆ ಅವೆರಡೂ ನನ್ನ ದೇಹದ ಎರಡು ಭಾಗಗಳು ಅವು ಇಲ್ಲಿ ಪೂರ್ವ ದೇಶಗಳಲ್ಲ ಅಲ್ಲಿ ಪಶ್ಚಿಮ ದೇಶಗಳಲ್ಲ. ಎರಡು ಕಡೆಯೂ ನನಗೆ ಸಹಾಯವಾಗಿದ್ದರೂ ಅವು ನನ್ನ ಮನಸ್ಸಿನಲ್ಲಿ ಒಂದು ಏಕಾಂಗಿ ಭಾವವನ್ನು ಹುಟ್ಟಿಸಿವೆ ಅದು ಕೇವಲ ದೇಶದ ಕಾರ್ಯಗಳಲ್ಲಿ ಮಾತ್ರವಲ್ಲ , ಜೀವನದಲ್ಲಿಯೇ ನಾನೊಬ್ಬ ಏಕಾಕಿ ನಾನು

ಪಶ್ಚಿಮ ದೇಶದಲ್ಲಿ ಹೊಸಬ ವಿದೇಶಿ ನನಗೆ ಅಲ್ಲಿ ಒಗ್ಗುವುದಿಲ್ಲ. ನಾನು ಅಲ್ಲಿ ಬೆರತುಹೋಗಲಾರ ಹೋಗಲಿ, ನನ್ನ ದೇಶದಲ್ಲಿಯೋ ಎಂದರೆ, ಇಲ್ಲಿಯೂ ನನಗೆ ಆಗಾಗ, ಆ ವಿದೇಶಿ ಎಂಬ ಭಾವವು ಬಿಡದೆ ಬರುತ್ತದೆ

ದೂರದ ಪರ್ವತಗಳನ್ನು ಕಂಡಾಗ ಹತ್ತುವುದು ಸುಲಭ ಎನ್ನಿಸಿ, ಶಿಖರಗಳು ಕರೆದಂತಾಗುತ್ತದೆ ಆದರೆ ಹತ್ತಿರ ಹೋದಾಗ, ಕಷ್ಟಗಳು ಹೆಚ್ಚುತ್ತವೆ ಎತ್ತರಕ್ಕೆ ಏರಿ ಏರಿದಂತೆಲ್ಲ ಪ್ರಯಾಣದ ಆಯಾಸವು ಹೆಚ್ಚಿ, ಶಿಖರವು ಮೇಘಮಾಲೆಯಲ್ಲಿ ಮರೆಯಾಗುತ್ತದೆ ಇಷ್ಟಾದರೂ ಹತ್ತಬೇಕು ಹತ್ತುವುದು ಒಳ್ಳೆಯದು. ಆದರಲ್ಲಿ ಒಂದು ಸುಖವಿದೆ, ಒಂದು ತೃಪ್ತಿಯಿದೆ ಬಹುಶಃ ನಮ್ಮ ಜೀವನಕ್ಕೆ ಒಂದು ಬಲವು ಬರುವುದು ನಮ್ಮ ಹೆಣಗಾಟದಿಂದಲೇ ಹೊರತು ನಾವು ಕೊಟ್ಟಕೊನೆಯಲ್ಲಿ ಏನು ಸಾಧಿಸಿದೆವು ಎಂಬುದರಿಂದ ಅಲ್ಲ ಎನ್ನಿಸುತ್ತದ ಅನೇಕ ವೇಳೆಗಳಲ್ಲಿ ಯಾವುದು ಸರಿಯಾದ ಹಾದಿ ಎಂಬುದು ತಿಳಿಯುವುದಿಲ್ಲ. ಇನ್ನೂ ಕೆಲವುವೇಳೆ ಯಾವುದು ಸರಿಯಾದ ದಾರಿಯಲ್ಲ ಎಂಬುದು ಮಾತ್ರ ತಿಳಿಯುತ್ತದೆ ಆಗ ಅದನ್ನು ಬಿಡು ವುದೂ ಕೂಡ ಒಂದು ಸಿದ್ಧಿಯೇ ಈ ಸಂದರ್ಭದಲ್ಲಿ ಸಾಕ್ರಟೀಸನು ತನ್ನ ಕೊನೆಯ ಕಾಲದಲ್ಲಿ ಆಡಿದ ಎರಡು ಮಾತುಗಳನ್ನು, ಬಹು ದೀನನಾಗಿ ನೆನೆಸಿಕೊ ಳ್ಳುತ್ತೇನೆ. "ಮರಣವೆಂದರೇನೋ ನಾನರಿಯೆ—ಅದೂ ಒಳ್ಳೆಯದೇ ಇರಬಹುದು. ಅದನ್ನು ಕಂಡರೆ ನನಗೆ ಹೆದರಿಕೆಯಿಲ್ಲ ಆದರೆ, ನಾನು ಈವರೆಗೂ ಅನುಭವಿಸಿರು ವುದನ್ನೆಲ್ಲ ಬಿಟ್ಟು ಓಡಿಹೋಗುವುದು ಕೆಟ್ಟದು ಎಂಬುದನ್ನೂ ಬಲ್ಲೆ ಆದರಿಂದ, ಕೆಟ್ಟದೆಂದು ನಾನು ತಿಳಿದಿರುವುದನ್ನು ಬಿಟ್ಟು ಒಳ್ಳೆಯದಾಗಿರಬಹುದಾದುದನ್ನು ಅಂಗೀಕರಿಸುತ್ತೇನೆ"

ನಾನು ಜೈಲಿನಲ್ಲಿ ಕಳೆದಿರುವ ವರ್ಷಗಳು! ಒಬ್ಬನೇ ಕುಳಿತು, ನನ್ನ ಯೋಚನೆಗಳ ದುಪ್ಪಟಿಯನ್ನು ಹೊದೆದುಕೊಂಡು, ಒಂದರ ಹಿಂದೊಂದು ಒಂದು ಕಾಲನ ಕಾಳಗರ್ಭದಲ್ಲಿ ಮರೆಯಾಗಿ ಹೋಗಿರುವ ಅದೆಷ್ಟು ಋತುಗಳನ್ನು ನೋಡಿದೆ ! ಎಷ್ಟುಮಂದಿ ಚಂದ್ರರು ಹುಟ್ಟಿ ಬೆಳೆದು ಅಳಿದರು! ನಕ್ಷತ್ರಗಳು ಅದೆಷ್ಟು ಕಟ್ಟು ನಿಟ್ಟಾಗಿ ಗಂಭೀರವಾಗಿ ಬಂದು ಹೋಗುತ್ತಿವೆ ನನ್ನ ತಾರುಣ್ಯದ, 'ನಿನ್ನೆ' ಗಳೆಷ್ಟು ಇಲ್ಲಿ ಸಮಾಧಿಸ್ಥವಾಗಿವೆ? ಕೆಲವು ವೇಳೆ, ಈ ಕಳೆದ ನಿನ್ನೆಗಳ ಪ್ರೇತಗಳೆದ್ದು ಅಂದಿನಂದಿನ ತೀವ್ರವೇದನೆಗಳನ್ನು ಮತ್ತೆ ಹೃದಯದಲ್ಲಿ ಮಿಡಿಸಿ, "ಇಷ್ಟು ಯಾರಿಗೆ ಪ್ರೀತಿ ?" ಎಂದು ಕಿವಿಯಲ್ಲಿ ಕೇಳುತ್ತವೆ. ಈಗಿರುವ ನನ್ನ ಜ್ಞಾನ, ಅನುಭವಗಳಿದ್ದು ಮತ್ತೊಮ್ಮೆ ನನ್ನ ಬಾಳನ್ನು ಬಾಳಬಲ್ಲೆನಾದರೆ, ನನ್ನ ಸ್ವಂತ ಜೀವನದಲ್ಲಿ ಎಷ್ಟೋ ಬದಲಾವಣೆಗಳನ್ನು ಮಾಡುವೆನು. ನಾನು ಹಿಂದೆ ಮಾಡಿರುವ ಎಷ್ಟೋ ಕಾರ್ಯಗಳನ್ನು ಸುಧಾರಿಸುವೆನು ಆದರೆ, ದೇಶಕಾರ್ಯಗಳಲ್ಲಿ ನಾನು ಮಾಡಿಕೊಂಡಿರುವ ಪ್ರಧಾನ ಸಿದ್ಧಾಂತಗಳನ್ನು ಮಾತ್ರ ಮುಟ್ಟುವುದೂ ಇಲ್ಲ.

ಅವು ಇದ್ದಂತೆಯೇ ಇರುವುವು ನಿಜವಾಗಿಯೂ, ನಾನು ಅವುಗಳನ್ನು ಬದಲಾಯಿಸ ಲಾರೆ ಅವು ನನಗಿಂತ ಬಲವಾಗಿವೆ ನನಗಿಂತಲೂ ಅಧಿಕವಾಗಿ ನನ್ನಾಚೆಯಿರುವ ಯಾವುದೋ ಶಕ್ತಿಯು ನನ್ನನ್ನು ಅವುಗಳ ಬಳಿಗೆ ಎಳೆದುಕೊಂಡು ಹೋಗಿದೆ.

ನನಗೆ ಶಿಕ್ಷೆಯಾಗಿ ಇಂದಿಗೆ ವರ್ಷವಾಯಿತು ನನಗಾಗಿದ್ದ ಎರಡು ವರ್ಷದ ಶಿಕ್ಷೆಯಲ್ಲಿ ಒಂದು ವರ್ಷವು ಕಳೆದುಹೋಯಿತು ಇನ್ನೂ ಒಂದು ಪೂರ್ತಿ ವರ್ಷವಿದೆ ನನಗೆ ಈ ಸಲ ಕೊಟ್ಟಿರುವುದು ಸಾದಾ ಸಜಾ. ಸಾದಾ ಸಜೆಯಲ್ಲಿ ಕಡಿಮೆಯಾಗು ವುದು ಎನ್ನುವುದಿಲ್ಲ ಅದರಿಂದ ಈ ಸಲ ಕಡಿಮೆಯಾಗುವುದಿಲ್ಲ ಆಗಸ್ಟು ತಿಂಗಳ ನಲ್ಲಿ ನಾನು ಹೊರಗೆ ಹೋಗಿದ್ದ ಹನ್ನೊಂದು ದಿನಗಳನ್ನು ನನ್ನ ಶಿಕ್ಷೆಗೆ ಸೇರಿಸಿದ್ದಾರೆ ಆದರೇನು ? ಈ ವರ್ಷವೂ ಕಳೆದುಹೋಗುತ್ತದೆ ನಾನೂ ಹೊರಕ್ಕೆ ಬರುತ್ತೇನೆ ಆಮೇಲೆ ?—ನಾನರಿಯೆ. ನನಗೇನೋ ನನ್ನ ಜೀವಮಾನದ ಚರಿತ್ರೆಯ ಒಂದು ಅಧ್ಯಾ ಯವು ಕಳೆಯಿತು, ಇನ್ನೊಂದು ಅಧ್ಯಾಯದ ಆರಂಭವಾಗುತ್ತದೆ ಎನ್ನಿಸುತ್ತದೆ ಆ ಅಧ್ಯಾಯದಲ್ಲಿ ಏನೇನಿರುವುದೋ ನಾನು ಚೆನ್ನಾಗಿ ಊಹಿಸಲಾರೆ ನನ್ನ ಜೀವನದ ಪುಸ್ತಕವು ಮುಗಿಯಿತು

# ಹಿನ್ನುಡಿ

ಬೇಡೆನ್‌ವೀಲರ್, ಶ್ವಾರ್ಜ್‌ವಾಲ್ಡ್,
ಅಕ್ಟೋಬರ್ ೨೫, ೧೯೩೫

ಕಳೆದ ಮೇ ತಿಂಗಳಿನಲ್ಲಿ ನನ್ನ ಹೆಂಡತಿಯು ಚಿಕಿತ್ಸೆಗಾಗಿ ಭೋವಾಲಿಯನ್ನು ಬಿಟ್ಟು ಯೂರೋಪಿಗೆ ಹೋದಳು ಆಕೆಯು ಭೋವಾಲಿಯನ್ನು ಬಿಟ್ಟ ಮೇಲೆ ನಾನು ಅಲ್ಲಿಗೆ ಹೋಗಲಿಲ್ಲ ಹದಿನೈದು ದಿನಕ್ಕೊಮ್ಮೆ ಪರ್ವತದ ದಾರಿಗಳಲ್ಲಿ ಹೋಗಿಬರುವ ಮೋಟಾರಿನ ಪ್ರಯಾಣವು ನಿಂತು ಹೋಯಿತು ಅವು ತಪ್ಪಿ ನನ್ನ ಮನಸ್ಸಿಗೆ ಬಹಳ ಬೇಸರವಾಗಿ, ಆಲ್ಮೋರಾ ಜೈಲು ಬಹಳ ಬೇಸರವಾಯಿತು.

ಕ್ವೆಟ್ಟಾದಲ್ಲಿ ಭೂಕಂಪವಾಯಿತೆಂದು ಸುದ್ದಿ ಬಂದು, ಕೊಂಚ ದಿನ ಇನ್ನು ಬೇರೆ ಸುದ್ದಿಯೇ ಮನಸ್ಸಿಗೆ ಬೇಡವಾಯಿತು ಆದರೆ ಆ ಸ್ಥಿತಿಯು ಬಹಳಕಾಲ ಇರಲಿಲ್ಲ ಹಿಂದೂಸ್ಥಾನದ ಸರಕಾರವು ತನ್ನನ್ನೂ ತನ್ನ ವಿಚಿತ್ರ ಮಾರ್ಗಗಳನ್ನೂ ಮರೆಯಗೊಡಿಸುವುದಿಲ್ಲ ಕಾಂಗ್ರೆಸ್ ಪ್ರೆಸಿಡೆಂಟರೂ ಹಿಂದೂಸ್ಥಾನದಲ್ಲಿ ಭೂಕಂಪ ಪರಿಹಾರ ವಿಚಾರವಾಗಿ ಇತರರಿಗಿಂತ ಹೆಚ್ಚಾಗಿ ತಿಳಿದವರೂ ಆದ ಬಾಬುರಾಜೇಂದ್ರ ಪ್ರಸಾದರನ್ನು ಸರಕಾರವು ಕ್ವೆಟ್ಟಾಗೆ ಹೋಗಿ ಪರಿಹಾರಕಾರ್ಯಗಳನ್ನು ಮಾಡುವು ದಕ್ಕೆ ಅಪ್ಪಣೆ ಕೊಡಲಿಲ್ಲವೆಂಬುದೂ ನಮಗೆ ಬೇಗನೆ ತಿಳಿಯಿತು ಗಾಂಧಿಜಿ ಯನ್ನಾಗಲಿ ಇನ್ನಿತರ ಪ್ರಸಿದ್ಧ ದೇಶಭಕ್ತರು ಯಾರನ್ನೇ ಆಗಲಿ ಬಿಡುವುದಿಲ್ಲವೆಂದೂ ತಿಳಿಯಿತು ಹಿಂದೂಸ್ಥಾನದ ವರ್ತಮಾನ ಪತ್ರಿಕೆಗಳು ಹಲವು ಕ್ವೆಟ್ಟಾ ಸಂಬಂಧವಾಗಿ ಲೇಖನಗಳನ್ನು ಬರೆದುದಕ್ಕಾಗಿ, ಅವು ಇಟ್ಟಿದ್ದ ಠೇವಣಾತಿಯನ್ನು ಕಳೆದುಕೊಂಡುವು.

ಎಲ್ಲೆಲ್ಲಿಯೂ ಸೈನ್ಯಶಿಬಿರದ ಮನೋಭಾವ, ಪೋಲೀಸ್ ದೃಷ್ಟಿ. ಅಸೆಂಬ್ಲಿ ಯಲ್ಲಿ, ಸಿವಿಲ್ ಸರಕಾರದಲ್ಲಿ, ಕೊನೆಗೆ ಗಡಿನಾಡುಗಳಲ್ಲಿ ಬಾಂಬೆಸೆಯುವುದರಲ್ಲಿ ಬ್ರಿಟಿಷ್ ಸರಕಾರವು ಹಿಂದೂಸ್ಥಾನದ ಪ್ರಜಾವರ್ಗದ ಬಹು ಭಾಗದಮೇಲೆ ಯಾವಾ ಗಲೂ ಯುದ್ಧ ಮಾಡುತ್ತಲೇ ಇರುವರೇನೋ ಎನ್ನಿಸುತ್ತಿತ್ತು

ಪೋಲೀಸರಿಂದ ಆಗಬೇಕಾದುದು ಎಷ್ಟೋ ಇದೆ ಅವರು ಇದ್ದೇ ಇರಬೇಕು ನಿಜ ಆದರೆ ಹಾಗೆಂದು ಜಗತ್ತಿನ ತುಂಬಾ ಪೋಲೀಸರೂ ಪೋಲೀಸರ ಲಟ್ಠಾಗಳೇ ಆಗಿಹೋದರೆ, ಆ ಜಗತ್ತಿನಲ್ಲಿ ಬದುಕುವುದೆಂತು ? ಶಕ್ತಿಯನ್ನು ಯಶಸ್ವಿಯಾಗಿ ಉಪಯೋಗಿಸುತ್ತ ಬಂದರೆ, ಅದು ಉಪಯೋಗಿಸುವವನನ್ನೂ, ಆ ಶಕ್ತಿಯ ಉಪ ಯೋಗಕ್ಕೆ ಗುರಿಯಾದವನನ್ನೂ ಇಬ್ಬರನ್ನೂ ಕೀಳುಗೈವುದೆಂದು, ಪದೇ ಪದೇ

ಹೇಳುತ್ತಾರೆ ಹಿಂದೂಸ್ತಾನದಲ್ಲಿರುವ ಮೇಲಿನ ವರ್ಗದ ಅಧಿಕಾರಿಗಳಲ್ಲಿ, ಅದರಲ್ಲೂ ಇಂಡಿಯನ್ ಸಿವಿಲ್ ಸರ್ವಿಸ್ಸಿನಲ್ಲಿ ಕಾಣಬರುವ ಬೌದ್ಧಿಕ ನೈತಿಕ ಅಧಃಪತನವು—ಅದು ಒಂದೇ ಸಮನಾಗಿ ಹೆಚ್ಚುತ್ತಿದೆ—ಅದ್ಭುತವಾದುದು ಇಂತಹ ಅದ್ಭುತವು ಇನ್ನು ಇಲ್ಲವೇ ಇಲ್ಲವೆಂದರೂ ಒಪ್ಪುವುದು ಉತ್ತಮಾಧಿಕಾರಿಗಳಲ್ಲಿ ಇದು ಬಹಳ ಸ್ಪಷ್ಟವಾಗಿ ಕಾಣುವುದು ಇತರರಲ್ಲೆಲ್ಲರಲ್ಲೂ ಸೂಕ್ಷ್ಮವಾಗಿ ದಾರದಂತೆ ಇದ್ದೇ ಇರುವುದು ಉತ್ತಮಾಧಿಕಾರಿಯಾಗಿ ಯಾರನ್ನಾದರೂ ನೇಮಕ ಮಾಡುವ ಸಂದರ್ಭ ಬಂದರೆ ಆಗ ತಪ್ಪದೆ ಈ ಹೊಸಜಾತಿಯ ಭಾವವಿರುವವರನ್ನೇ ಚುನಾಯಿಸುವರು

ನನ್ನ ಹೆಂಡತಿಯ ಸ್ಥಿತಿಯು ಮತ್ತೆ ಕಳವಳಕ್ಕೀಡಾಗುವಂತಿದೆಯೆಂದು ಸುದ್ದಿ ಬಂದುದರಿಂದ, ನನಗೆ ಸೆಪ್ಟಂಬರ್ ನಾಲ್ಕನೆಯ ತಾರೀಖಿನ ದಿನ ಆಲ್ಮೋರಾ ಜೈಲಿನಿಂದ ಆಕಸ್ಮಿಕವಾಗಿ ಬಿಡುಗಡೆಯಾಯಿತು. ಜರ್ಮನಿಯಲ್ಲಿ ಷ್ವಾರ್ಜ್‌ವಾಲ್ಡ್‌ನ ಬೇಡೆನ್ ವೀಲರ್‌ನಲ್ಲಿ ಆಕೆಯು ಚಿಕಿತ್ಸೆಯನ್ನು ಪಡೆಯುತ್ತಿದ್ದಳು ನನಗೆ ಆಗಿದ್ದ ಶಿಕ್ಷೆಯು ಸದ್ಯಕ್ಕೆ ತಪ್ಪಿದೆ ಎಂದು ನನಗೆ ತಿಳಿಸಿ, ನಾನು ಜೈಲಿನಿಂದ ಹೊರಗೆ ಬರಬೇಕಾದುದ ಕ್ಕಿಂತ ಐದೂವರೆ ತಿಂಗಳು ಮುಂಚಿತವಾಗಿ ನನ್ನನ್ನು ಬಿಟ್ಟುಬಿಟ್ಟರು. ನಾನು ಯೂರೋಪಿಗೆ ವಿಮಾನದಲ್ಲಿ ಓಡಿದೆ

ಯೂರೋಪಿನಲ್ಲಿ ಅಶಾಂತಿ, ಯುದ್ಧದ ಭೀತಿ, ಹೋರಾಟಗಳು, ಯಾವಾಗ ಮತ್ತೊಂದು ಆರ್ಥಿಕ ವಿಪರೀತವು ತಲೆದೋರುವುದೋ ಎಂಬ ಕಳವಳ, ಅಬ್ಸೀನಿಯಾವನ್ನು ಗೆದ್ದು ಅಲ್ಲಿನವರನ್ನೆಲ್ಲ ಬಾಂಬಿಗೆ ಗುರಿಮಾಡಿದ್ದಾರೆ. ಬೇರೆಬೇರೆ ಚಕ್ರಾಧಿಪತ್ಯಗಳು ಮಸೆಯುತ್ತಾ ಒಂದನ್ನೊಂದು ಅಂಜಿಸುತ್ತಿವೆ ಚಕ್ರಾಧಿಪತ್ಯಗಳಲ್ಲೆಲ್ಲ ಭಾರಿಯದಾದ ಇಂಗ್ಲೆಂಡ್ ತನ್ನ ಕೈಕೆಳಗೆ ಸಿಕ್ಕಿರುವವರನ್ನು ಮಾತ್ರ ಬಾಂಬಿನಿಂದ ಹೊಡೆದು ನಿಷ್ಕರುಣೆಯಿಂದ ತುಳಿಯುತ್ತಿದ್ದರೂ ಶಾಂತಿಗಾಗಿ ಹಂಬಲಿಸುತ್ತಾ ಲೀಗ್ ಕೊವೆನೆಂಟನ್ನು ನಂಬಿ ಕುಳಿತಿದೆ. ಇಷ್ಟಾದರೂ ಇಲ್ಲಿ ಈ ಬ್ಲ್ಯಾಕ್‌ಫಾರೆಸ್ಟಿನಲ್ಲಿ ಎಲ್ಲವೂ ಸುಖವಾಗಿದೆ, ಶಾಂತವಾಗಿದೆ, ಇಲ್ಲಿ 'ಸ್ವಸ್ತಿಕ'ವೂ ಅಷ್ಟಾಗಿ ಕಣ್ಣಿಗೆ ಬೀಳುವುದಿಲ್ಲ. ಕಿಬ್ಬರಿಯಿಂದ ಎದ್ದುಬರುವ ಮಂಜು ದೂರದಲ್ಲಿ ಕಣ್ಣಿಗೆಬಿಳುವ ಫ್ರಾನ್ಸಿನ ಮೇರೆಯನ್ನು ಮುಚ್ಚಿ ಎಲ್ಲವನ್ನೂ ಮರೆಮಾಡುವುದನ್ನು ನೋಡುತ್ತಾ ಆ ಮಂಜಿನ ಮೋಡಗಳ ಹಿಂದೆ ಏನಿದೆಯೋ ಎಂದು ಆಶ್ಚರ್ಯಪಡುತ್ತಿದ್ದೇನೆ.

# ಪರಿಶಿಷ್ಟ ಅ

## ಸ್ವಾತಂತ್ರ್ಯದ ದಿನಾಚರಣೆಯ ದಿನ ಮಾಡಿದ ಶಪಥ

ಜನವರಿ ೨೬, ೧೯೩೦

ಸ್ವಾತಂತ್ರ್ಯವನ್ನು ಪಡೆಯುವುದು ತಾವು ಪಟ್ಟ ಶ್ರಮದ ಫಲಗಳನ್ನು ತಾವು ಅನುಭವಿಸುವುದು, ಜೀವನಕ್ಕೆ ಆವಶ್ಯಕವಾದುದನ್ನೆಲ್ಲ ಪಡೆಯುವುದು, ಅಭಿವೃದ್ಧಿಯ ಸಂಪೂರ್ಣ ಅವಕಾಶಗಳನ್ನೆಲ್ಲ ಪಡೆಯುವುದು, ಇವು ಇತರ ಜನಾಂಗಗಳಿಗಿರುವಂತೆ ಹಿಂದೂಸ್ಥಾನದವರಿಗೂ ಇರುವ ಹಕ್ಕು, ಇದನ್ನು ಯಾರೂ ಬದಲಾಯಿಸುವಂತಿಲ್ಲ ಎಂದು ನಾವು ನಂಬಿದ್ದೇವೆ ಯಾವುದಾದರೂ ಸರಕಾರವು, ಪ್ರಜೆಗಳ ಈ ಹಕ್ಕುಗಳನ್ನು ಅಪಹರಿಸಿ ಅವರನ್ನು ಗೋಳುಗುಟ್ಟಿಸಿದರೆ, ಪ್ರಜೆಗಳಿಗೆ ಆ ಸರಕಾರವನ್ನು ಬದಲಾಯಿಸುವುದಕ್ಕೂ ಮತ್ತು ಅದನ್ನು ತೆಗೆದುಹಾಕುವುದಕ್ಕೂ ಸಹ ಅಧಿಕಾರವುಂಟೆಂದೂ ನಂಬುತ್ತೇವೆ ಹಿಂದೂಸ್ಥಾನದಲ್ಲಿರುವ ಬ್ರಿಟಿಷ್ ಸರಕಾರವು ಹಿಂದೂಸ್ಥಾನದ ಪ್ರಜೆಗಳ ಸ್ವಾತಂತ್ರ್ಯವನ್ನು ಅಪಹರಿಸಿರುವುದು ಮಾತ್ರವಲ್ಲದೆ, ಪ್ರಜಾವರ್ಗದ ಕೊಳ್ಳೆಯೆಂಬ ತಳಹದಿಯ ಮೇಲೆ ತಾನು ನಿಂತಿದೆ ಮತ್ತು ಹಿಂದೂಸ್ಥಾನವನ್ನು ಆರ್ಥಿಕವಾಗಿ ರಾಜಕೀಯವಾಗಿ ಸಾಂಸ್ಕೃತಿಕವಾಗಿ ಮಾನಸಿಕವಾಗಿ ಹಾಳುಮಾಡಿದೆ ಆದರಿಂದ ಹಿಂದೂಸ್ಥಾನವು ಬ್ರಿಟಿಷ್ ಸಂಬಂಧವನ್ನು ತೊರೆದು ಪೂರ್ಣ ಸ್ವರಾಜ್ಯ ಅಥವಾ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆಯಬೇಕೆಂದು ನಾವು ನಂಬಿದ್ದೇವೆ.

ಆರ್ಥಿಕವಾಗಿ ಹಿಂದೂಸ್ಥಾನವು ಸಂಪೂರ್ಣವಾಗಿ ಹಾಳಾಗಿದೆ ನಮ್ಮ ಜನರಿಂದ ತೆಗೆದುಕೊಳ್ಳುವ ಕಂದಾಯವು ನಮ್ಮ ಆದಾಯಕ್ಕೆ ಸರಿಯಾಗಿಲ್ಲ ನಮ್ಮ ಸರಾಸರಿ ಆದಾಯವು ದಿನಕ್ಕೆ ಏಳು ಮೂರು ಕಾಸುಗಳು ನಾವು ಕೊಡುವ ಭಾರಿಯ ಕಂದಾಯಗಳಲ್ಲಿ ಶೇ|| ೨೦ ರಷ್ಟು ರೈತರಿಂದ ಭೂಮಿಯ ಕಂದಾಯವಾಗಿಯೂ ಶೇ|| ೩ ರಷ್ಟು ಉಪ್ಪಿನ ಕಂದಾಯದ ರೂಪವಾಗಿಯೂ ಬರುತ್ತದೆ ಈ ಉಪ್ಪಿನ ಕಂದಾಯದ ಭಾರವು ಬಡವರಿಗೆ ಬಹು ಭಾರ

ಕೈರಾಟಿಯೇ ಮೊದಲಾದ ಗ್ರಾಮ ಕೈಗಾರಿಕೆಗಳು ನಾಶವಾಗಿವೆ, ಇದರಿಂದ ವರ್ಷಕ್ಕೆ ನಾಲ್ಕು ತಿಂಗಳು ರೈತರು ಸೋಮಾರಿಗಳಾಗಿರಬೇಕಾಗಿದೆ ಅಷ್ಟೇ ಅಲ್ಲ ಅವರಿಗೆ ಕೈಗಾರಿಕೆಗಳಿಲ್ಲದೆ ಅವರೆಲ್ಲ ಪೆಚ್ಚು ಹಿಡಿದು ಹೋಗಿದ್ದಾರೆ ಇಷ್ಟಾದರೂ, ಇತರ ದೇಶಗಳಲ್ಲಿ ಮಾಡಿರುವಂತೆ, ನಾಶವಾಗಿರುವ ಕೈಗಾರಿಕೆಗಳಿಗೆ ಬದಲಾಗಿ ಮತ್ಯಾವ ಕೈಗಾರಿಕೆಗಳನ್ನೂ ಕಲಿಸಿಲ್ಲ.

ಸುಂಕ, ನಾಣ್ಯ, ಇವೆರಡನ್ನೂ ರೈತರ ಮೇಲೆ ಇನ್ನೂ ಭಾರವನ್ನು ಹೇರುವ ದೃಷ್ಟಿಯಿಂದಲೇ ಹೆಚ್ಚುಕಡಿಮೆ ಮಾಡುತ್ತಿರುವುದಾಗಿದೆ ನಮಗೆ ಹೊರದೇಶದಿಂದ ಬರುವ ವ್ಯಾಪಾರದಲ್ಲಿ ಬಹು ಭಾಗವು ಬ್ರಿಟಿಷರು ತಯಾರಿಸಿದ ಪದಾರ್ಥಗಳು. ಸುಂಕದ ತೆರಿಗೆಗಳ ರೀತಿಯಿಂದಲೇ ಬ್ರಿಟಿಷ್ ತಯಾರಿಕಾರರಿಗೆ ಎಷ್ಟು ಪಕ್ಷಪಾತವಿದೆ ಯೆಂದು ವ್ಯಕ್ತವಾಗುತ್ತದೆ ಮತ್ತು ಈ ಸುಂಕದಿಂದ ಬರುವ ಆದಾಯವನ್ನು ಪ್ರಜಾ ವರ್ಗಕ್ಕೋಸ್ಕರ ಖರ್ಚು ಮಾಡದೆ ಸರಕಾರವು ತನ್ನ ಆಡಳಿತದ ಅಪರಿಮಿತವಾದ ದುಂದುಖರ್ಚಿಗೆ ಉಪಯೋಗಿಸುತ್ತಿದೆ ನಾಣ್ಯ ಪರಿವರ್ತನದ ಪ್ರಮಾಣವನ್ನು ಕೂಡ ಹೀಗೆಯೇ ಮನಸ್ವಿಯಾಗಿ ಮಾಡಿರುವುದರ ಪರಿಣಾಮವಾಗಿ ನಮ್ಮ ದೇಶದಿಂದ ಕೋಟ್ಯಂತರ ದ್ರವ್ಯವು ಸೂರೆಯಾಗಿ ಹೋಗಿದೆ

ರಾಜಕೀಯವಾಗಿ, ಹಿಂದೂಸ್ಥಾನದ ಗೌರವವು ಬ್ರಿಟಿಷರ ಆಳ್ವಿಕೆಯಲ್ಲಿ ಬಹು ವಾಗಿ ಇಳಿದು ಹೋಗಿದೆ ಈಗ ಇಳಿದಿರುವಷ್ಟು ಇನ್ನಾವಾಗಲೂ ಇಳಿದಿರಲಿಲ್ಲ ಯಾವ ಸುಧಾರಣೆಗಳಿಂದಲೂ ಪ್ರಜೆಗಳಿಗೆ ನಿಜವಾಗಿ ರಾಜಕೀಯ ಅಧಿಕಾರವು ಬಂದಿಲ್ಲ ನಮ್ಮಲ್ಲಿ ಅತ್ಯುತ್ತಮರಾದವರೂ ಕೂಡ ಪರಕೀಯರ ಅಧಿಕಾರಕ್ಕೆ ತಲೆಬಗ್ಗಿಸಬೇಕಾಗಿದೆ ಅಭಿಪ್ರಾಯ ಪ್ರಕಟನ ಸ್ವಾತಂತ್ರ್ಯ, ಸಂಘ ಸ್ವಾತಂತ್ರ್ಯಗಳು ನಮಗಿಲ್ಲ ನಮ್ಮ ದೇಶಬಾಂಧವರನೇಕರು ಸ್ವದೇಶ ಬಹಿಷ್ಕೃತರಾಗಿ ಪರದೇಶಗಳಲ್ಲಿರ ಬೇಕಾಗಿದೆ ಅವರು ಸ್ವದೇಶಕ್ಕೆ ಬರುವಂತೆಯೇ ಇಲ್ಲ ನಮ್ಮಲ್ಲಿದ್ದ ಪ್ರಭುಶಕ್ತಿ ಯನ್ನೆಲ್ಲ ಕೊಂದಿದ್ದಾರೆ ಪ್ರಜಾವರ್ಗಕ್ಕೆ ಗ್ರಾಮಗಳ ಅಧಿಕಾರಗಳು, ಗುಮಾಸ್ತೆಗಿರಿ ಗಳು ಇದಿಷ್ಟರಲ್ಲಿ ತೃಪ್ತಿಯಾಗಬೇಕಾಗಿದೆ

ಸಾಂಸ್ಕೃತಿಕವಾಗಿ, ಈಗಿನ ವಿದ್ಯಾಭ್ಯಾಸ ಪದ್ಧತಿಯು ನಮ್ಮನ್ನು ಹಾದಿ ತಪ್ಪಿಸಿ ಅಡ್ಡಹಾದಿಗೆಳೆದಿದೆ ಈ ವಿದ್ಯಾಭ್ಯಾಸವು ನಮ್ಮನ್ನು ಬಿಗಿದಿರುವ ಸಂಕಲೆಗಳನ್ನೇ ವಿಶ್ವಾಸದಿಂದ ತಬ್ಬಿಕೊಳ್ಳುವ ದುರ್ಭಾವನೆಯನ್ನು ನಮ್ಮ ಹೃದಯದಲ್ಲಿ ಹುಟ್ಟಿಸಿದೆ

ಮಾನಸಿಕವಾಗಿಯೂ, ಕಾಯಿದೆ ಬದ್ಧವಾಗಿ ನಮ್ಮನ್ನು ನಿಶ್ಶಸ್ತ್ರರನ್ನಾಗಿ ಮಾಡಿ ರುವುದರಿಂದ ನಾವು ನಿರ್ವೀರ್ಯರಾಗಿ ಹೋಗಿದ್ದೇವೆ ವಿದೇಶೀಯ ಸೈನ್ಯವನ್ನು ತಂದು ನಮ್ಮ ದೇಶದಲ್ಲಿ ಇಟ್ಟಿರುವುದರಿಂದ, ನಮ್ಮಲ್ಲಿದ್ದ ಪ್ರತಿರೋಧ ಸಾಮರ್ಥ್ಯ ವನ್ನೆಲ್ಲ ಧ್ವಂಸಮಾಡುವುದಕ್ಕೆ ಆ ಸೈನ್ಯವನ್ನು ಉಪಯೋಗಿಸುವುದರಿಂದ, ನಮ್ಮನ್ನು ನಾವು ಕಾಪಾಡಿಕೊಳ್ಳಲಾರೆವು ಪರದೇಶದವರು ಬಂದು ಮೇಲೆ ಬಿದ್ದರೆ ನಮ್ಮನ್ನು ನಾವು ಸಂರಕ್ಷಿಸಿಕೊಳ್ಳಲಾರೆವು, ಕಳ್ಳರು, ದರೋಡೆಗಾರರು, ತುಂಟರು ಬಂದು ಮೇಲೆ ಬಿದ್ದರೆ, ನಮ್ಮ ಮನೆಮಠಗಳನ್ನೂ ಕುಟುಂಬಗಳನ್ನೂ ರಕ್ಷಿಸಿಕೊಳ್ಳಲಾರೆವು ಎನ್ನುವ ಮಟ್ಟಿಗಾಗಿದೆ.

ನಮ್ಮ ದೇಶಕ್ಕೆ ಹೀಗೆ ನಾಲ್ಕು ವಿಧವಾಗಿ ದ್ರೋಹಮಾಡಿರುವ ಸರಕಾರಕ್ಕೆ ತಲೆಬಾಗಿ ನಡೆಯುವುದು ಮನುಷ್ಯದ್ರೋಹ (ಆತ್ಮದ್ರೋಹ) ದೈವದ್ರೋಹ ಎಂದು ನಂಬಿದ್ದೇವೆ ಇಷ್ಟಾದರೂ, ನಮ್ಮ ಸ್ವಾತಂತ್ರ್ಯವನ್ನು ಸಾಧಿಸುವ ಸರಿಯಾದ ಮಾರ್ಗವು ಹಿಂಸೆಯಲ್ಲ ಎಂದೂ ಅರಿತಿದ್ದೇವೆ ಆದರಿಂದ, ನಾವು ನಮ್ಮ ಕೈಲಾದಮಟ್ಟಿಗೂ ಬ್ರಿಟಿಷ್ ಸರಕಾರದೊಡನೆ ಮನಃಪೂರ್ವಕವಾಗಿ ಸಹಕರಿಸುವುದನ್ನು, ಬಿಟ್ಟು ನಾವು ಸಿದ್ಧರಾಗೋಣ ಕಾಯಿದೆಭಂಗಪೂರ್ವಕವಾಗಿ ಬ್ರಿಟಿಷ್ ಸರಕಾರದೊಡನೆ ಅಸಹಕಾರ ಮಾಡಲು ಸಿದ್ಧರಾಗೋಣ. ನಾವು ನಮ್ಮ ಸಹಾಯವನ್ನು ಕೊಡದೆ ನಮ್ಮ ಪಾಡಿಗೆ ನಾವು ಕುಳಿತರೆ, ನಮ್ಮನ್ನು ರೇಗಿಸಿದರೂ ನಾವು ರೇಗದೆ, ಹಿಂಸೆಯನ್ನು ಅವಲಂಬಿಸದೆ, ನಾವು ಕಂದಾಯಕೊಡುವುದನ್ನು ತಿರಸ್ಕರಿಸಿದರೆ, ಈ ರಾಕ್ಷಸ ಸರಕಾರವು ಕೊನೆಗಾಣುವುದೆಂದು ಮನಗಂಡಿದ್ದೇವೆ ಆದರಿಂದ, ಕಾಂಗ್ರೆಸ್ ಆಗಾಗ ಪೂರ್ಣಸ್ವರಾಜ್ಯ ಸ್ಥಾಪನೆಯ ಉದ್ದೇಶದಿಂದ ಹೊರಡಿಸುವ ನಿಯಮಗಳನ್ನು ಪಾಲಿಸುವೆವೆಂದು ತ್ರಿಕರಣ ಶುದ್ಧವಾಗಿ ಶಪಥ ಮಾಡಿಕೊಂಡಿದ್ದೇವೆ

# ಪರಿಶಿಷ್ಟ ಆ

**ಕಾಂಗ್ರೆಸ್ ಮುಖಂಡರು ಯರವಾಡ ಜೈಲಿನಿಂದ ಆಗಸ್ಟ್ ೧೫, ೧೯೩೦ ರಲ್ಲಿ ಸರ್ ತೇಜ್ ಬಹದ್ದೂರ್ ಸಪ್ರು ಮತ್ತು ಶ್ರೀಯುತ ಜಯಕರ್, ಇವರುಗಳಿಗೆ ಕಳುಹಿಸಿದ ಸಮಾಧಾನ ನಿಯಮಗಳನ್ನೊಳಗೊಂಡ ಪತ್ರ**

ಯರವಾಡಾ ಸೆಂಟ್ರಲ್ ಜೈಲ್
೧೫ ಆಗಸ್ಟು, ೧೯೩೦

ಪ್ರಿಯ ಮಿತ್ರರೇ,

ಬ್ರಿಟಿಷ್ ಸರಕಾರಕ್ಕೂ ಕಾಂಗ್ರೆಸ್ಸಿಗೂ ಸಮಾಧಾನಕರವಾದ ರಾಜಿಯನ್ನು ಮಾಡಿಸುವ ಕರ್ತವ್ಯವನ್ನು ತಾವು ವಹಿಸಿದುದಕ್ಕಾಗಿ ನಾವು ತಮಗೆ ಅತ್ಯಂತ ಕೃತಜ್ಞರಾಗಿದ್ದೇವೆ ತಮಗೂ ವೈಸ್‌ರಾಯ್ ಅವರಿಗೂ ನಡೆದಿರುವ ಪತ್ರವ್ಯವಹಾರವನ್ನು ನೋಡಿ, ತಮ್ಮೊಡನೆ ಮುಖತಃ ಮಾತನಾಡಿ ಅದರ ಉಪಕಾರವನ್ನು ಪಡೆದುಕೊಂಡು ನಮ್ಮ ನಮ್ಮಲ್ಲಿ ವಿಚಾರ ವಿನಿಮಯಗಳನ್ನೂ ಮಾಡಿಕೊಂಡು, ನಮ್ಮ ದೇಶದ ಗೌರವಕ್ಕೆ ತಕ್ಕಂಥ ಇತ್ಯರ್ಥವನ್ನು ಮಾಡಿಕೊಳ್ಳುವ ಕಾಲವಿನ್ನೂ ಬರಲಿಲ್ಲವೆಂಬ ಸಿದ್ಧಾಂತಕ್ಕೆ ನಾವು ಬಂಧಿದ್ದೇವೆ ಈ ಕಳೆದ ಐದು ತಿಂಗಳುಗಳಲ್ಲಿ ಪ್ರಜಾವರ್ಗದಲ್ಲಿ ಆಗಿರುವ ಜಾಗೃತಿಯು ಅದ್ಭುತವಾದುದು ನಾನಾ ವಿಧವಾದ ಅಭಿಪ್ರಾಯಗಳನ್ನುಳ್ಳ ಅನೇಕಾನೇಕ ಜನರು ಜಾತಿ ಕುಲಭೇದಗಳಿಲ್ಲದೆ ಬೇಕಾದಷ್ಟು ಕಷ್ಟಾನುಭವ ಮಾಡಿದ್ದಾರೆ ಇಷ್ಟಾದರೂ ಈ ಕೂಡಲೇ ಸಿದ್ಧಿಯಾಗಬೇಕಾದರೆ ಪ್ರಜಾವರ್ಗವು ಪಟ್ಟಿರುವ ಕಷ್ಟವು ನಿರಂತರವೂ ಆಗಿಲ್ಲ ಸಾಲಲೂ ಸಾಲದು ಎಂದು ನಮಗೆ ಎನ್ನಿಸುತ್ತಿದೆ ತಮ್ಮಂತೆಯಾಗಲೀ ವೈಸ್ರಾಯರಂತಾಗಲೀ ನಾವು ಕಾಯಿದೆ ಭಂಗ ಚಳವಳಿಯಿಂದ ದೇಶಕ್ಕೆ ಹಾನಿಯಾಗಿದೆಯೆಂದಾಗಲೀ, ಆ ಚಳವಳಿಗೆ ಇದು ಸಕಾಲವಾಗಿರಲಿಲ್ಲವೆಂದಾಗಲೀ, ಅದು ಶಾಸನ ಬದ್ಧ ಚಳವಳಿಯಲ್ಲವೆಂದಾಗಲೀ ಅಭಿಪ್ರಾಯ ಪಡುವುದಿಲ್ಲ ಇಂಗ್ಲೀಷರ ಚರಿತ್ರೆಯಲ್ಲಿ ರಕ್ತವನ್ನು ಕೋಡಿಹರಿಸಿರುವ ಕ್ರಾಂತಿಗಳ ಉಲ್ಲೇಖಗಳು ಬೇಕಾದಷ್ಟವೆ ಇಂಗ್ಲೀಷ್ ಜನರು ಅವನ್ನು ಬೇಕಾದ ಹಾಗೆ, ಮುಕ್ತಕಂಠವಾಗಿ ಹೊಗಳಿದ್ದಾರೆ ನಮಗೂ ಹಾಗೆ ಮಾಡಿದ್ದರೆಂದು ಮೇಲ್ಪಂಕ್ತಿ ಹಾಕಿ ಕೊಟ್ಟಿದ್ದಾರೆ. ಅದರಿಂದ ವೈಸ್‌ರಾಯರೇ ಆಗಲಿ, ಅಥವಾ ಮತ್ತಾವ ಇಂಗ್ಲೀಷ್ ಅವರೇ ಆಗಲಿ, ಉದ್ದೇಶದಲ್ಲಿಯೂ ಕಾರ್ಯರಂಗದಲ್ಲಿಯೂ ಶಾಂತವಾಗಿರುವ ಈ ಚಳುವಳಿಯನ್ನು ನಿಂದಿಸುವುದು ಅಷ್ಟು ಚನ್ನಾಗಿರುವುದಿಲ್ಲ. ಆದರೂ ನಾವೂ ಈ ಕರನಿರಾಕರಣ ಚಳವಳಿಯನ್ನು ನಿಂದಿಸುವವರು ಅಧಿಕಾರಿಗಳೇ ಆಗಲಿ ಖಾಸಗಿಯವರಾಗಲೀ ಅವರೊಡನೆ ಇಂದು ಜಗಳವಾಡುವ ಅಭಿಪ್ರಾಯವುಳ್ಳವರಾಗಿಲ್ಲ ಈ ಚಳವಳಿಯಲ್ಲಿ ಭಾಗ ತೆಗೆದುಕೊಳ್ಳಲು

ಮುಂದೆ ಬಂದಿರುವ ಪ್ರಜಾವರ್ಗವೇ ಈ ಚಳವಳಿಯು ಸರಿಯೆನ್ನುವುದಕ್ಕೆ ಬೇಕಾದ ಸಾಕ್ಷಿಯೆಂದು ನಾವೆಂದುಕೊಂಡಿದ್ದೇವೆ ಈ ಸದ್ಯದಲ್ಲಿ ಹೇಳಬೇಕಾಗಿರುವುದು ಎಂದರೆ, ಸಾಧ್ಯವಾದರೆ ಈ ಕಾಯಿದೆ ಭಂಗ ಚಳವಳಿಯನ್ನು ನಿಲ್ಲಿಸೋಣ ಅಥವಾ ಸದ್ಯಕ್ಕೆ ತಡೆಯೋಣ ಎಂಬ ಆಶೆಯಲ್ಲಿ ನಾವೂ ನಿಮ್ಮೊಡನೆ ಸಹಭಾಗಿಗಳಾಗಲು ಸಿದ್ಧವಾಗಿದ್ದೇವೆ ಅನಾವಶ್ಯಕವಾಗಿ ನಮ್ಮ ದೇಶದ ಗಂಡುಸರು, ಹೆಂಗಸರ ಮಕ್ಕಳನ್ನು, ಜೈಲು, ಲಾಠೀ ಛಾರ್ಜು, ಇನ್ನೂ ಹೀನಕರವಾದ ಹಿಂಸೆಗಳಿಗೆ ಗುರಿಮಾಡು ವುದರಲ್ಲಿ ನಮಗೆ ಎಳ್ಳಷ್ಟೂ ಸಂತೋಷವಿಲ್ಲ ಅದರಿಂದ ನಾವು ಗೌರವಯುತವಾದ ಶಾಂತಿಯ ಲಾಭಕ್ಕೋಸ್ಕರ ನಾವು ಏನು ಪ್ರಯತ್ನ ಮಾಡುವುದಕ್ಕೂ ಸಿದ್ಧವಾಗಿ ದ್ದೇವೆ, ಎಂದು ತಮಗೂ ತಮ್ಮ ಮೂಲಕವಾಗಿ ವೈಸ್‌ರಾಯರಿಗೂ ನಾವು ಭರವಸೆ ಕೊಡುವುದನ್ನು ತಾವೂ ನಂಬುವುದು ಆದರ ಆ ಶಾಂತಿ ದೊರೆಯುವ ಶುಭ ಸೂಚನೆಗಳು ಇನ್ನೂ ತೋರಿಲ್ಲವೆಂದು ನಾವು ಧಾರಾಳವಾಗಿ ಒಪ್ಪಿಕೊಳ್ಳು ತ್ತೇವೆ ಹಿಂದೂಸ್ಥಾನದ ಹಿತವು ಯಾವುದು ಎಂಬುದನ್ನು ಗೊತ್ತುಮಾಡುವವರು ಹಿಂದೂಸ್ಥಾನದ ಸ್ತ್ರೀ ಪುರುಷರು ಎಂಬ ಅಭಿಪ್ರಾಯದ ಕಡೆಗ ಇಂಗ್ಲಿಷ್ ಅಧಿಕಾರಿ ಮಂಡಲವು ತಿರುಗಿರುವ ಗುರುತುಗಳು ಯಾವುವೂ ನಮಗೆ ಕಂಡಿಲ್ಲ ಅಧಿಕಾರಿಗಳು ಅನೇಕ ವೇಳೆ ದಿಟವಾಗಿಯೂ ಇರಬಹುದು. ಅಂತೂ ತಮಗಿರುವ ಸದುದ್ದೇಶಗಳನ್ನು ಉದ್ಘೋಷಿಸಿ ಅನೇಕ ವೇಳೆ ಮಾತನಾಡುತ್ತಿದ್ದರೂ ನಾವು ಅದನ್ನು ನಂಬುವುದಿಲ್ಲ. ಈ ಪುರಾತನ ಭೂಮಿಯ ಜನರನ್ನು ಇಂಗ್ಲಿಷರು ಬಹುಕಾಲದಿಂದ ಸುಲಿಸುಲಿದು, ಅಭ್ಯಾಸವಾಗಿಹೋಗಿ, ಅವರ ಸುಲಿಗೆಯಿಂದ ನಮ್ಮ ದೇಶವು ಹೇಗೆ ನೈತಿಕ, ಆರ್ಥಿಕ, ರಾಜಕೀಯ ದುರ್ದೆಶೆಗೆ ಇಳಿದು ಹಾಳಾಗಿಹೋಗಿದೆಯೆಂಬುದನ್ನೂ ಅವರು ನೋಡ ಲಾರದವರಾಗಿದ್ದಾರೆ ಅವರು ಈಗ ನಮ್ಮ ಮೇಲೆ ಹತ್ತಿಕೊಂಡು ಮಾಡುತ್ತಿರುವ ಸವಾರಿಯನ್ನು ಬಿಟ್ಟು ಇಳಿದು, ಈ ಒಂದು ಶತಮಾನದ ಬ್ರಿಟಿಷರ ಆಳ್ವಿಕೆಯ ಫಲ ವಾಗಿ ನಾವು ಹೀನರಾಗಿಹೋಗಿರುವ ಈ ದುಷ್ಫಲವನ್ನು ಕಳೆದು ಮತ್ತೆ ಮನುಷ್ಯ ರಾಗುವಂತೆ ಮಾಡಲು ಸಹಾಯಮಾಡುವುದಷ್ಟೇ ಅವರು ಮಾಡಬೇಕಾಗಿರುವುದು ಎಂಬುದನ್ನು ನೋಡಲೂ ಅವರು ಸಿದ್ಧರಾಗಿಲ್ಲ

ಆದರೆ, ತಾವೂ ಇನ್ನು ಕೆಲವರು ನಮ್ಮ ದೇಶಬಾಂಧವರೂ ಬೇರೆ ವಿಧವಾಗಿ ಯೋಚಿಸುತ್ತಿರುವಿರಿ ಎಂಬುದೂ ನಮಗೆ ಗೊತ್ತಿದೆ ತಾವು ಅವರಲ್ಲಿ ಬದಲಾವಣೆ ಯಾಗಿದೆ ಅಥವಾ ಈಗ ನಡೆಯಲಿರುವ ಕಾನ್ಫರೆನ್ಸಿನಲ್ಲಿ ಭಾಗವಹಿಸುವುದಕ್ಕೆ ತಕ್ಕಷ್ಟಾದರೂ ಬದಲಾವಣೆಯಾಗಿದೆ ಎಂದು ನಂಬಿದ್ದೀರಿ ಅದರಿಂದ, ನಮಗೆ ತಮ್ಮಷ್ಟು ನಂಬಿಕೆಯಿಲ್ಲದಿದ್ದರೂ, ನಮ್ಮ ಕೈಲಾದ ಮಟ್ಟಿಗೂ ತಮ್ಮೊಡನೆ ಸಹಕರಿಸಲು ನಾವು ಸಿದ್ಧರಾಗಿದ್ದೇವೆ

ತಮ್ಮ ವಿಶ್ವಾಸಪೂರ್ವಕವಾದ ಸಲಹೆಗೆ ಉತ್ತರವೀಯುವುದು ಈಗ ನಾವಿರುವ ಪರಿಸ್ಥಿತಿಯಲ್ಲಿ, ಕೆಳಗೆ ಕಂಡಮಟ್ಟಿಗೆ ಸಾಧ್ಯ

೧ ಈಗ ನಡೆಯಬೇಕೆಂದಿರುವ ಸಮ್ಮೇಳನದ ವಿಚಾರವಾಗಿ ತಮ್ಮ ಪತ್ರಕ್ಕೆ ವೈಸ್‌ರಾಯರು ಕೊಟ್ಟಿರುವ ಉತ್ತರದಲ್ಲಿರುವ ಭಾಷೆಯು ಸ್ಪಷ್ಟವಾಗಿಲ್ಲ ಆದರಿಂದ ಕಳೆದ ವರ್ಷ ಲಾಹೋರಿನಲ್ಲಿ ಆದ ತೀರ್ಮಾನದಂತೆ ನ್ಯಾಷನಲ್ ಡಿಮ್ಯಾಂಡ್ ಸಂಬಂಧವಾಗಿ ಈ ಸಮ್ಮೇಳನದಿಂದ ಆಗುವ ಲಾಭವನ್ನು ನಿರ್ಣಯಿಸಲು ಸಾಧ್ಯವಿಲ್ಲ ಕಾಂಗ್ರೆಸ್ಸಿನ ವರ್ಕಿಂಗ್ ಕಮಿಟಿಯನ್ನೋ, ಅವಶ್ಯಕವಾದರೆ ಆಲ್ ಇಂಡಿಯಾ ಕಾಂಗ್ರೆಸ್ ಕಮಿಟಿಯನ್ನೋ ಸರಿಯಾದ ರೀತಿಯಲ್ಲಿ ಕೂಡಿಸಿ ಕೇಳುವವರೆಗೂ ನಾವು ಅಧಿಕಾರಯುತವಾಗಿ ಏನೂ ಹೇಳುವಂತಿಲ್ಲ ಆದರೆ, ನಮ್ಮ ನಮ್ಮ ಸ್ವಂತ ಜವಾಬ್ದಾರಿಯಿಂದ ಈ ಕೆಳಗೆ ಕಂಡಷ್ಟು ಆಗುವವರಗೂ ಏನೂ ಸಾಧ್ಯವಿಲ್ಲವೆಂಬುದನ್ನು ಮಾತ್ರ ಹೇಳುತ್ತೇವೆ —

(ಅ) ಈ ಸಮ್ಮೇಳನವು ಹಿಂದೂಸ್ಥಾನವು, ತನಗೆ ತೋರಿದಾಗ ಬ್ರಿಟಿಷ್ ಚಕ್ರಾಧಿಪತ್ಯವನ್ನು ಬಿಟ್ಟು ಬಿಡಬಲ್ಲ ಹಕ್ಕನ್ನು ಪಡೆದಿರತಕ್ಕದು ಎಂಬುದನ್ನು ಸ್ಪಷ್ಟ ಭಾಷೆಯಲ್ಲಿ ಅಂಗೀಕರಿಸಬೇಕು

(ಆ) ಗಾಂಧಿಜಿಯವರು ವೈಸ್‌ರಾಯರಿಗೆ ಬರೆದಿರುವ ಪತ್ರದಲ್ಲಿ ಕಾಣಿಸಿರುವ ಹನ್ನೊಂದು ವಿಷಯಗಳನ್ನೂ ಒಪ್ಪಿಕೊಂಡು, ರಕ್ಷಣೆಯ ಸೈನ್ಯದ ಮೇಲಿನ ಅಧಿಕಾರ, ಆರ್ಥಿಕ ಸ್ವಾತಂತ್ರ್ಯಗಳಿಂದ ಕೂಡಿ ಸರ್ವ ವಿಧದಲ್ಲಿಯೂ ಹಿಂದೂಸ್ಥಾನದ ಪ್ರಜೆಗಳಿಗೆ ಬದ್ಧವಾಗಿ ಆಳುವ ಸಂಪೂರ್ಣ ದೇಶೀಯ ಸರಕಾರವನ್ನು ಹಿಂದೂಸ್ಥಾನಕ್ಕೆ ಈ ಸಮ್ಮೇಳನವು ಕೊಡಬೇಕು

(ಇ) ಹಿಂದೂಸ್ಥಾನದ ದೇಶೀಯ ಸರಕಾರದ ದೃಷ್ಟಿಯಲ್ಲಿ ಅನ್ಯಾಯ ಅಥವಾ ಪ್ರಜಾಹಿತಕ್ಕಾಗಿ ಆದುದಲ್ಲ ಎಂದು ನಿರ್ಣಯವಾಗುವ ಹಿಂದೂಸ್ಥಾನದ ಸರಕಾರದ ಸಾಲ ರಿಯಾಯಿತಿಗಳು, ಬ್ರಿಟಿಷ್ ಹಕ್ಕುಗಳು, ಮೊದಲಾದವನ್ನು, ಅವಶ್ಯವಾದರೆ ಸ್ವತಂತ್ರ ಪಂಚಾಯಿತದಾರರಿಗೆ ಒಪ್ಪಿಸುವ ಹಕ್ಕು ಹಿಂದೂಸ್ಥಾನಕ್ಕೆ ಇರತಕ್ಕದು

ಗುರುತು —ಅಧಿಕಾರವನ್ನು ಹಿಂದೂಸ್ಥಾನಕ್ಕೆ ವರ್ಗಾಯಿಸಿ ಕೊಡುವಾಗ ಹಿಂದೂಸ್ಥಾನದ ಹಿತಕ್ಕಾಗಿ ಆಗಬೇಕಾದ ವರ್ಗಾವರ್ಗಿಗಳನ್ನೂ ಹಿಂದೂಸ್ಥಾನದ ಚುನಾಯಿತ ಪ್ರತಿನಿಧಿಗಳೇ ಮಾಡತಕ್ಕದು

(೨) ಈ ಮೇಲೆ ಹೇಳಿರುವುದೆಲ್ಲ ಬ್ರಿಟಿಷ್ ಸರಕಾರಕ್ಕೆ ಸರಿತೋರಿದರೆ, ಆ ಸಂಬಂಧವಾಗಿ ಸಮರ್ಪಕವಾದ ಪ್ರಕಟಣೆಯು ಆದರೆ, ನಾವು ವರ್ಕಿಂಗ್ ಕಮಿಟಿಯ ಮುಂದೆ ಕಾಯಿದೆ ಭಂಗ ಚಳವಳಿಯನ್ನು ಇಡುವೆವು ಕಾಯಿದೆ ಭಂಗವೆಂದರೆ ಕೆಲವು ಕಾಯಿದೆಗಳನ್ನು ಮಾರಲೇ ಬೇಕೆಂಬ ಉದ್ದೇಶದಿಂದ ಮುರಿಯುವುದು ಆದರೆ ವಿದೇಶೀ ಬಟ್ಟೆ ಮತ್ತು ಸೇಂದಿಯ ಪಿಕೆಟಿಂಗ್ ಮಾತ್ರ, ಸರಕಾರದವರೇ ಸೇಂದೀ ಮತ್ತು ವಿದೇಶೀ ಬಟ್ಟೆಗಳ ನಿರೋಧವನ್ನು ಜಾರಿಗೆ ತರುವವರೆಗೂ ಶಾಂತಿಯುತವಾಗಿ ನಡೆಯುವುದು. ಜನರು ಉಪ್ಪು ಮಾಡುವುದು ನಡೆದೇ ನಡೆಯುವುದು ಮತ್ತು ಆ

ಸಂಬಂಧವಾಗಿ ಉಪ್ಪಿನ ಕಾಯಿದೆಯನ್ನು ಜಾರಿಗೆ ತರಬಾರದು ಇನ್ನು ಮುಂದೆ ಸರಕಾರದ ಮತ್ತು ಖಾಸಗಿ ಉಪ್ಪಿನ ಕೋರಿಗಳ ಮೇಲೆ ದಾಳಿಯಿಡುವುದಿಲ್ಲ

(೩) ನಾವು ಕಾಯಿದೆ ಭಂಗ ಚಳವಳಿಯನ್ನು ನಿಲ್ಲಿಸುತ್ತಿದ್ದ ಹಾಗೆಯೇ—

(ಕ) ಹಿಂಸೆಯನ್ನು ಆಚರಿಸಿದರು ಅಥವಾ ಹಿಂಸೆಮಾಡಿದರೆಂದು, ಚುನಾವಣೆ ಮಾಡಿದರೆಂದು ತಪ್ಪು ರುಜುವಾತಾಗದಿರುವ, ಸತ್ಯಾಗ್ರಹಿಗಳನ್ನೂ ಇತರ ರಾಜಕೀಯ ಬಂದಿಗಳನ್ನೂ, ಅವರಿಗೆ ಶಿಕ್ಷೆಯಾಗಿರಲಿ ಅಥವಾ ವಿಚಾರಣೆಯಲ್ಲಿರಲಿ ಬಿಟ್ಟು ಬಿಡುವಂತೆ ಅಪ್ಪಣೆಯಾಗತಕ್ಕುದು

(ಚ) ಉಪ್ಪಿನಕಾಯಿದೆ, ವರ್ತಮಾನ ಪತ್ರಿಕೆಗಳ ಕಾಯಿದೆ, ಕಂದಾಯದ ಕಾಯಿದೆ (ರೆವಿನ್ಯೂ ಆಕ್ಟ್) ಮೊದಲಾದ ಕಾಯಿದೆಗಳ ಪ್ರಕಾರ ಮುಟ್ಟುಗೋಲು ಹಾಕಿ ತೆಗೆದುಕೊಂಡಿರುವ ಆಸ್ತಿಗಳನ್ನೆಲ್ಲ ಹಿಂದಕ್ಕೆ ಕೊಡತಕ್ಕುದು

(ಟ) ಶಿಕ್ಷೆಗೆ ಗುರಿಯಾಗಿರುವ ಸತ್ಯಾಗ್ರಹಿಗಳಿಂದಲೂ ವರ್ತಮಾನಪತ್ರಿಕೆಗಳ ಕಾಯಿದೆ ಪ್ರಕಾರವಾಗಿಯೂ ಸರಕಾರವು ತೆಗೆದುಕೊಂಡಿರುವ ಜುಲ್ಮಾನೆಗಳನ್ನೂ ಠೇವಣಾತಿಗಳನ್ನೂ ಹಿಂದಕ್ಕೆ ಕೊಡತಕ್ಕುದು

(ತ) ಕಾಯಿದೆ ಭಂಗ ಚಳವಳಿಯಲ್ಲಿ ರಾಜೀನಾಮೆ ಕೊಟ್ಟಿರುವ, ಅಥವಾ ಸರಕಾರದವರೇ ತೆಗೆದುಹಾಕಿರುವ ಅಧಿಕಾರಿಗಳಿಗೆಲ್ಲ—ಗ್ರಾಮಾಧಿಕಾರಿಗಳೂ ಸಹ—ಮತ್ತೆ ಕೆಲಸಕ್ಕೆ ಬರಬೇಕೆಂದು ಅಪೇಕ್ಷೆಪಟ್ಟರೆ, ಅಂಥವರಿಗೆ ಅವರವರ ಮೊದಲಿನ ಅಧಿಕಾರವನ್ನು ಕೊಡತಕ್ಕುದು

ಗುರುತು.— ಈ ಮೇಲಿನ ಉಪನಿಯಮಗಳು ಅಸಹಕಾರ ಚಳವಳಿಯ ಕಾಲಕ್ಕೂ ಅನ್ವಯಿಸತಕ್ಕದು

(ಪ) ವೈಸ್‌ರಾಯರು ಹೊರಡಿಸಿರುವ ಆರ್ಡಿನೆನ್ಸ್‌ಗಳನ್ನೆಲ್ಲ ರದ್ದುಪಡಿಸತಕ್ಕುದು

(೪) ಈ ಮೇಲಿನ ವಿಷಯಗಳನ್ನೆಲ್ಲ ಇತ್ಯರ್ಥಮಾಡಿದ ಮೇಲೆಯೇ ಮುಂದೆ ನಡೆಯಬೇಕಾಗಿರುವ ಸಮ್ಮೇಳನಕ್ಕೆ ಯಾರು ಯಾರು ಬರುವುದು, ಅದರಲ್ಲಿ ಕಾಂಗ್ರೆಸ್ ಭಾಗವಹಿಸಬೇಕೇ ಬೇಡವೇ ಎಂಬ ಅಂಶಗಳೆಲ್ಲ ಇತ್ಯರ್ಥವಾಗುವುವು

ಇತಿ, ನಿಮ್ಮ ವಿಶ್ವಾಸಿಗಳು,

ಮೋತೀಲಾಲ್ ನೆಹ್ರೂ<br>
ಎಂ ಕೆ ಗಾಂಧಿ<br>
ಸರೋಜಿನಿ ನಾಯುಡು<br>
ವಲ್ಲಭಭಾಯಿ ಪಟೇಲ್<br>
ಜೈರಾಂದಾಸ್ ದೌಲತ್‌ರಾಂ<br>
ಸಯದ್ ಮಹಮದ್<br>
ಜವಹರಲಾಲ್ ನೆಹ್ರೂ

# ಪರಿಶಿಷ್ಟ ಇ

## ಸ್ಮಾರಕದ ಠರಾವು

### ಜನವರಿ, 26, 1931

ಸ್ವಾತಂತ್ರ್ಯ ಮಹಾ ಸಂಗ್ರಾಮದಲ್ಲಿ ಭಾಗಿಗಳಾಗಿ ಮಾತೃಭೂಮಿಯು ಸ್ವತಂತ್ರವಾಗಲೆಂದು ಕಷ್ಟ ನಷ್ಟಗಳನ್ನು ಅನುಭವಿಸಿದ ಭಾರತೀಯ ವೀರಪುತ್ರ ವೀರಪುತ್ರಿಯರು, ಘನವಾದ ಉದ್ದೇಶ ಮತ್ತು ಭಾರಿಯ ಪ್ರಯತ್ನಗಳ ಹಾದಿಯನ್ನು ನಿರಂತರವಾಗಿ ತೋರಿಸುತ್ತ, ನಮಗೆ ಸಂತತವಾದ ಪ್ರೇರಣೆಯ ಮೂಲಸ್ಥಾನವಾಗಿರುವ ನಮ್ಮ ಗೌರವ ಪ್ರೇಮಗಳ ಮೂರ್ತಿಯಾದ ಮಹಾ ಮುಖಂಡ ಮಹಾತ್ಮಾ ಗಾಂಧಿಯವರು, ಸ್ವಾತಂತ್ರ್ಯ ಬಲಿಪೀಠದ ಮೇಲೆ ಆತ್ಮಾರ್ಪಣ ಮಾಡಿರುವ ಲಕ್ಷಾಂತರ ಧೀರ ತರುಣರು, ಪೆಷಾವರ್, ಗಡಿನಾಡು, ಷೋಲಾಪುರ, ಮಿಡ್ನಾಪುರ ಜಿಲ್ಲೆ, ಬೊಂಬಾಯಿಗಳಲ್ಲಿ ಬಲಿಯಾದ ವೀರರು, ಶತ್ರು ಸೈನ್ಯಗಳ ರಾಕ್ಷಸ ಲಾಠೀ ಆಕ್ರಮಣಗಳನ್ನೂ ಹೆದರದೆ ಹಿಮ್ಮೆಟ್ಟದೆ ಎದುರಿಸಿದ ಲಕ್ಷಾಂತರ ಪ್ರಜೆಗಳು, ಘರ್‌ವಾಲಿ ರಿಜಿಮೆಂಟಿನವರು ಮತ್ತು ಸರಕಾರದ ಮಿಲಿಟರಿ ಮತ್ತು ಪೋಲೀಸಿನಲ್ಲಿದ್ದವರೂ, ತಮ್ಮ ತಮ್ಮ ಪ್ರಾಣವು ಹೋದರೂ ಹೋಗಲಿ ತಮ್ಮ ದೇಶಭಾಂಧವರ ಮೇಲೆ ಗುಂಡು ಹಾರಿಸುವುದೇ ಮುಂತಾದ ಏನೂ ಕಾರ್ಯ ಮಾಡುವುದಿಲ್ಲವೆಂದು ತಿರಸ್ಕರಿಸಿದ ಭಾರತೀಯರೆಲ್ಲರು, ಹೃದಯವನ್ನು ನಡುಗಿಸುವಂತಹ ಹೆದರಿಕೆಯನ್ನು ಹುಟ್ಟಿಸಬೇಕೆಂದೇ ಮಾಡಿದ ಎಲ್ಲಾ ಭಯಂಕರ ಕೃತ್ಯಗಳನ್ನೂ ಮರುಮಾತಾಡದೆ, ಹಿಂದೆಗೆಯದೆ ಸಹಿಸಿದ ಗುಜರಾತಿನ ಸೋಲುಗಾಣದ ಧೀರ ರೈತರು, ಧೈರ್ಯವಾಗಿ ಬಹುಕಾಲ ಕಷ್ಟಾನುಭವ ಮಾಡಿ, ತುಳಿಯಬೇಕೆಂದು ಮಾಡಿದ ಸರ್ವ ಹಿಂಸೆಗಳನ್ನೂ ಸಹಿಸಿಕೊಂಡೂ ಸಂಗ್ರಾಮದಲ್ಲಿ ಪೂರ್ಣ ಭಾಗ ವಹಿಸಿರುವ, ಭರತಖಂಡದ ಇತರ ಭಾಗಗಳ ರೈತರು, ತಮ್ಮ ಭಾರಿಯ ನಷ್ಟಗಳನ್ನೂ ಗಣಿಸದೆ, ವಿದೇಶೀ ಬಟ್ಟೆಗಳನ್ನೂ ಬ್ರಿಟಿಷ್ ವಸ್ತುಗಳನ್ನೂ ಬಹಿಷ್ಕಾರ ಮಾಡಿದ ವರ್ತಕರು ವರ್ತಕ ಮಂಡಲಿಯವರು; ಜೈಲಿಗೆ ಹೋಗಿ, ಎಲ್ಲ ವಿಧವಾದ ಹಿಂಸೆಗಳನ್ನೂ ಅನುಭವಿಸಿ, ಜೈಲಿನಲ್ಲಿಯೂ ಹೊಡೆತ ಬಡಿತಗಳನ್ನು ತಿಂದಿರುವ ಶತ ಸಹಸ್ರ ವೀರ ಸ್ತ್ರೀಪುರುಷರು, ಮುಖ್ಯವಾಗಿ ಭಾರತದ ನಿಜ ಸೈನಿಕನಾಗಿ, ಯಶೋಲಾಭಗಳ ಯೋಚನೆಯೇ ಇಲ್ಲದೆ, ತಾನು ಇಟ್ಟುಕೊಂಡಿರುವ ಘನೋದ್ದೇಶವನ್ನು ಮಾತ್ರ ಗಮನಿಸುತ್ತ, ನಿರಂತರವಾಗಿ, ಶಾಂತವಾಗಿ, ಶ್ರಮವನ್ನನುಭವಿಸಿ, ಕಷ್ಟಪಟ್ಟು ದುಡಿಯುತ್ತಿರುವ ಸಾಧಾರಣ ಸ್ವಯಂಸೇವಕ ಇವರೆಲ್ಲರ ಸೇವೆಯನ್ನು ಹೆಮ್ಮೆಯಿಂದಲೂ ಕೃತಜ್ಞತೆಯಿಂದಲೂ ನಾಗರಿಕರಾದ ನಾವು ಒಪ್ಪಿಕೊಂಡು ಬರೆದಿಡುತ್ತಿದ್ದೇವೆ.

ಭರತಖಂಡದ ಸ್ತ್ರೀಯರು, ಮಾತೃಭೂಮಿಗೆ ಒದಗಿದ ದುಸ್ಥಿತಿಯಲ್ಲಿ ಮನೆ ಮಠಗಳನ್ನೆಲ್ಲ ತೊರೆದರು, ಅಲುಗಿ ಅಲ್ಲಾಡದ ಧೈರ್ಯದಿಂದ ಸಹನೆಯಿಂದ ಭರತಖಂಡದ ರಾಷ್ಟ್ರೀಯ ಸೈನ್ಯದ ಪುರುಷರೊಡನೆ ಸಮಸಮವಾಗಿ ಭುಜಕ್ಕೆ ಭುಜ ಕೊಟ್ಟು ನಿಂತರು, ಸಂಗ್ರಾಮದ ಭಯಂಕರ ನಷ್ಟವನ್ನೂ ವಿಜಯವನ್ನೂ ಸರಿ ಸರಿಯಾಗಿ ಅನುಭವಿಸಿದರು ಇವರೆಲ್ಲರಿಗೂ ನಮ್ಮ ಗೌರವದ ಮತ್ತು ಅತಿಶಯವಾದ ಮೆಚ್ಚುಗಾರಿಕೆಯ ಕಾಣಿಕೆಯನ್ನು ಒಪ್ಪಿಸುತ್ತೇವೆ ದೇಶದ ಯುವಕರು ತಮ್ಮ ಎಳೆಯ ವಯಸ್ಸಿನಲ್ಲಿಯೂ ಹಿಂದೆ ನಿಲ್ಲದೆ ಬಂದು ಸಂಗ್ರಾಮದಲ್ಲಿ ಭಾಗಿಗಳಾಗಿ ಬಲಿದಾನ ಮಾಡಿದ ವಾನರ ಸೇನೆಯವರು ಇವರು ನಮ್ಮ ದೇಶದ ಭಾಗ್ಯ ಇವರೆಲ್ಲರಿಗೂ ನಮ್ಮ ಹೆಮ್ಮೆಯ ಕಾಣಿಕೆಯನ್ನಿತ್ತು ಇವರನ್ನು ಸ್ಮರಿಸುತ್ತೇವೆ

ಮತ್ತು ಹಿಂದೂಸ್ಥಾನದ ದೊಡ್ಡ ಪುಟ್ಟ ಕೋಮಿನವರೆಲ್ಲರೂ ಈ ಭಾರಿಯ ಸಂಗ್ರಾಮದಲ್ಲಿ ಭಾಗಿಗಳಾಗಿ ತಮ್ಮ ಉತ್ತಮೋತ್ತಮ ಸೇವೆಯನ್ನು ಸಲ್ಲಿಸಿದರು ಅದರಲ್ಲಿಯೂ ಪುಟ್ಟ ಕೋಮಿನವರಲ್ಲಿ ಮುಸ್ಲಿಮರು, ಸಿಕ್ಕರು, ಪಾರ್ಸಿಗಳು, ಕ್ರಿಶ್ಚಿಯರ್ನರು, ಇತರರು ತಮ್ಮ ಪರಾಕ್ರಮ, ಮಾತೃಭೂಮಿಯಲ್ಲಿ ದೃಢಭಕ್ತಿ, ಇವುಗಳಿಂದ ಏಕ ಕಾಂಡವಾಗಿ ಭದ್ರವಾದ ಜನಾಂಗವನ್ನು ನಿರ್ಮಿಸಿ, ನಮಗೆ ವಿಜಯವು ಗಟ್ಟಿಯೆನಿಸಿದರು ಮಾತೃಭೂಮಿಯ ಸ್ವಾತಂತ್ರ್ಯವನ್ನು ಸಂಪಾದಿಸಿ ಕಾಪಾಡಿಕೊಳ್ಳುವುದೇ ಸರಿಯೆಂದು ಶಪಥಮಾಡಿದರು ಹೊಸದಾಗಿ ಸಂಪಾದಿಸಿದ ಈ ಸ್ವಾತಂತ್ರ್ಯವನ್ನು ಭರತಖಂಡದಲ್ಲಿರುವ ನಾನಾ ಜಾತಿಗೋತ್ರಗಳನ್ನು ಉದ್ಧರಿಸಿ, ಅವರಿಗೆ ಇರುವ ತೊಂದರೆಗಳನ್ನು ತೊಡೆದುಹಾಕಿ, ಅವರಿಗೆ ಇರುವ ನ್ಯೂನತೆಗಳನ್ನೆಲ್ಲ ಅಳಿಸಿ, ಹೀಗೂ ವಿಶಾಲ ಮಾನವ ಪ್ರಪಂಚದ ಸೇವೆ ಮಾಡುವುದಕ್ಕೆ ಉಪಯೋಗಿ ಸುವೆವೆಂದು ಪ್ರಮಾಣ ಮಾಡಿದರು ಭರತಖಂಡದ ಸೇವೆಗಾಗಿ ನಡೆದ ಘನತರವಾದ ಅದ್ಭುತವಾದ ಈ ಬಲಿದಾನ ಕಷ್ಟಾನುಭವಗಳ ಘನೋದಾಹರಣೆಯನ್ನು ಎದುರಿಗಿಟ್ಟುಕೊಂಡು ಸ್ವಾತಂತ್ರ್ಯ ಶಪಥವನ್ನು ಮತ್ತೆ ಉದ್ಘೋಷಿಸುತ್ತೇವೆ. ಮಾತೃಭೂಮಿಗೆ ಸಂಪೂರ್ಣ ಸ್ವಾತಂತ್ರ್ಯವು ಸಿಕ್ಕುವವರಗೂ ಈ ಸಮರವನ್ನು ನಡೆಸುವೆವೆಂದು ಪ್ರತಿಜ್ಞೆ ಮಾಡುತ್ತೇವೆ